# ಕನ್ನಡ ಕಾದಂಬರಿ ಲೋಕದಲ್ಲಿ...
## ...ಹೀಗೆ ಹಲವು...

ಪ್ರಧಾನ ಸಂಪಾದಕ

**ಮೈ. ಶ್ರೀ. ನಟರಾಜ**



ಕನ್ನಡ ಸಾಹಿತ್ಯ ರಂಗ ಅಮೆರಿಕ ಮತ್ತು ಅಭಿನವ

ಕನ್ನಡ ಸಾಹಿತ್ಯ ರಂಗ ಪುಸ್ತಕ ಮಾಲೆ-೪

# ಕನ್ನಡ ಕಾದಂಬರಿ ಲೋಕದಲ್ಲಿ...

## ... ಹೀಗೆ ಹಲವು


**ಪ್ರಧಾನ ಸಂಪಾದಕ:**

ಮೈ. ಶ್ರೀ. ನಟರಾಜ

**ಸಂಪಾದಕ ಮಂಡಲಿ:**

ನಾಗ ಐತಾಳ(ಆಹಿತಾನಲ), ಎಚ್. ವೈ. ರಾಜಗೋಪಾಲ್

ನಳಿನಿಮೈಯ, ಶಶಿಕಲಾ ಚಂದ್ರಶೇಖರ್

ಗುರುಪ್ರಸಾದ್ ಕಾಗಿನೆಲೆ



**ಕನ್ನಡ ಸಾಹಿತ್ಯ ರಂಗ**

ನ್ಯೂ ಜೆರ್ಸಿ, ಯು.ಎಸ್.ಎ.




ಬೆಂಗಳೂರು

**KANNNADA KADAMBARI LOKADALLI... ...HIGE HALAVU.** A collection of commantaries on Kannada novels edited by **M.S. Nataraja, 4th book in the series of Kannada Sahithya Ranga Pustakamale.** Published by **Kannada Sahithya Ranga,** Inc., No 26, Frederick Place, Old Bridge, NJ 08857,USA and **Abhinava** 17/18-2, 1st Main, Marenahalli, Vijayanagara, Bengaluru-560040. India Ph:080-23505825, 9448804905. E-mail:abhinavaravi@gmail.com.

First published in 2009 Pages: 428 Price: Rs. 250/-



ಬೆಲೆ: ಇನ್ನೂರ ಐವತ್ತು ರೂಪಾಯಿಗಳು
ಪ್ರತಿಗಳು: ೧೦೦೦
ಮೊದಲ ಮುದ್ರಣ: ೨೦೦೯
ಬಳಸಿರುವ ಕಾಗದ: ೯೦ ಜಿ. ಎಸ್. ಎಂ. ಎನ್. ಎಸ್. ಮ್ಯಾಪ್ಲಿತೋ
ಆಕಾರ: ೧/೮ ಅಷ್ಟದಳ (ಡೆಮಿ)

**ಪ್ರಸಾರಣೆ:** ಕೃಷ್ಣಾ ಚೆಂಗಡಿ

**ಹೊದಿಕೆ ವಿನ್ಯಾಸ:** ಬಿ. ದೇವರಾಜ್



**ಮುದ್ರಣ:** ಧರಣಿ ಪ್ರಿಂಟರ್ಸ್
ಮಂಜುನಾಥನಗರ, ಬೆಂಗಳೂರು-೧೦
ದೂ: ೦೮೦-೨೩೩೮೧೭೯೧

# ಕೃತಜ್ಞತೆ

'ಕನ್ನಡ ಕಾದಂಬರಿ ಲೋಕದಲ್ಲಿ...
... ...ಹೀಗೆ ಹಲವು'
ಎಂಬ
ನಮ್ಮ ಈ ಪ್ರಕಟಣೆಯನ್ನು ಪ್ರಾಯೋಜಿಸಿದ
**'ಅಕ್ಕ'**
(ಅಮೆರಿಕ ಕನ್ನಡ ಕೂಟಗಳ ಆಗರ)
ಸಂಸ್ಥೆಗೆ
**ಕನ್ನಡ ಸಾಹಿತ್ಯ ರಂಗದ**
ಹೃತ್ಪೂರ್ವಕ ಕೃತಜ್ಞತೆಗಳು.

ನಾಲ್ಕನೆಯ ವಸಂತ ಸಾಹಿತ್ಯೋತ್ಸವ,
ಮೇ ೩೦, ೩೧, ೨೦೦೯
ರಾಕ್‌ವಿಲ್, ಮೇರಿಲ್ಯಾಂಡ್

# ಪರಿವಿಡಿ

## ಅನುಬಂಧಗಳು

# ಪ್ರಸ್ತಾವನೆ

ಕನ್ನಡ ಸಾಹಿತ್ಯ ರಂಗದ ಮೊದಲ ಪ್ರಕಟಣೆಯ ಬಗ್ಗೆ ನಿರ್ಧಾರವನ್ನು ಕೈಗೊಂಡ ವರ್ಷ ಕುವೆಂಪು ಶತಮಾನೋತ್ಸವದ ವರ್ಷವಾಗಿತ್ತು. ಹೀಗಾಗಿ **ಕುವೆಂಪು ಸಾಹಿತ್ಯ ಸಮೀಕ್ಷೆ** (೨೦೦೪) ಎಂಬೊಂದು ಪ್ರಬಂಧ ಸಂಕಲನವನ್ನು ಹೊರತರಬೇಕೆಂಬ ತೀರ್ಮಾನ ಮಾಡುವುದು ಸಹಜವೂ ಸುಲಭವೂ ಎನ್ನಿಸಿತ್ತು. ಅದರ ನಂತರ ನಮ್ಮ ಗಮನ ಅಮೆರಿಕದಲ್ಲಿರುವ ಕನ್ನಡ ಬರಹಗಾರರ ಸೃಜನಶೀಲ ಶಕ್ತಿಯನ್ನು ಪ್ರಚೋದಿಸುವ ಕಡೆಗೆ ಹೋಯಿತು. ಆ ಯತ್ನದ ಫಲವೇ **ಆಚೀಚೆಯ ಕತೆಗಳು** (೨೦೦೫). ಮೂರನೆಯ ಪ್ರಕಟಣೆಯ ಹೊತ್ತಿಗೆ ವಸ್ತುವನ್ನು ಆಯ್ದುಕೊಳ್ಳುವ ಯತ್ನದಲ್ಲಿ ಸ್ವಲ್ಪ ವೈವಿಧ್ಯ ಮೂಡಿಬಂತು. ಹಾಸ್ಯದ ಕಡೆ ನಮ್ಮ ದೃಷ್ಟಿ ಹರಿಯಿತು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಹಾಸ್ಯವನ್ನು ಕುರಿತ ಒಂದು ಪುಸ್ತಕ **ನಗೆಗನ್ನಡಂ ಗೆಲ್ಗೆ!** (೨೦೦೭) ಪ್ರಕಟವಾದದ್ದು ಹೀಗೆ. ನಾಲ್ಕನೆಯ ಪ್ರಕಟಣೆಯ ವಸ್ತು ಏನಿರಬೇಕೆಂಬ ಪ್ರಶ್ನೆ ಎದ್ದದ್ದು ಹಲವು ತಿಂಗಳುಗಳ ಹಿಂದೆ. ನಾಟಕ, ಕಾವ್ಯ, ಪ್ರಬಂಧ, ಕಾದಂಬರಿ ಮುಂತಾದ ಪ್ರಕಾರಗಳ ಬಗ್ಗೆ ಚರ್ಚಿಸಿ, ಕೊನೆಗೆ ಕಾದಂಬರಿಗಳ ಬಗ್ಗೆ ನಮ್ಮ ಯತ್ನವನ್ನು ಕೇಂದ್ರೀಕರಿಸುವ ತೀರ್ಮಾನಕ್ಕೆ ಬಂದೆವು. ಆದರೆ, ಕಾದಂಬರಿಯ ಪ್ರಪಂಚ ಬಲು ವಿಶಾಲವಾದದ್ದು. ಕನ್ನಡ ಕಾದಂಬರಿ ಜಗತ್ತು ಶತಮಾನಕ್ಕೂ ಹೆಚ್ಚು ಅವಧಿಯ ಚರಿತ್ರೆಯನ್ನು ಹೊಂದಿದೆ. ಯಾರಾದರೂ ಒಬ್ಬ ಕಾದಂಬರಿಕಾರನ ಬಗ್ಗೆ ಅಧ್ಯಯನ ಮಾಡಿ ಲೇಖನಗಳನ್ನು ಬರೆಯಬೇಕೇ ಅಥವಾ ಪ್ರಾತಿನಿಧಿಕವಾಗಿ ಹಲವಾರು ಬಗೆಯ ಕಾದಂಬರಿಗಳನ್ನು ಕುರಿತು ಬರೆಯಬೇಕೇ, ಹಾಗೆ ಬರೆಯಬಲ್ಲವರು ಯಾರು – ಹೀಗೇ ಮುಂತಾಗಿ ಚಿಂತಿಸಿದೆವು. ನಮ್ಮ ಆಯ್ಕೆಯ ಕೆಲಸವನ್ನು ಸುಲಭಗೊಳಿಸಲು ಕಾಲದ ಅವಧಿಯನ್ನು ಸುಮಾರು ಮೂರು ದಶಕಗಳಿಂದೀಚೆಗೆ ಪ್ರಕಟವಾದ ಕಾದಂಬರಿಗಳಿಗೆ ಸೀಮಿತಗೊಳಿಸಿಕೊಂಡೆವು.

ಜಾಗತಿಕ ಸ್ಥಿತ್ಯಂತರಕ್ಕೆ ಕನ್ನಡ ಕಾದಂಬರಿ ಲೋಕ ಯಾವತ್ತೂ ಬಹಳ ಕ್ರಿಯಾತ್ಮಕವಾಗಿ ಸ್ಪಂದಿಸಿದೆ. ಕನ್ನಡ ಕಾದಂಬರಿ ಲೋಕ ನವ್ಯದ ಹೊರೆಯನ್ನು ಇಳಿಸಿ

ನವ್ಯೋತ್ತರದ ಪ್ರಚಾರಕ್ಕೆ ತನ್ನನ್ನು ತಾನೇ ತೆರೆದುಕೊಳ್ಳುತ್ತಿದ್ದ ಕಾಲ, ಕಳೆದ ಮೂರು ದಶಕಗಳು. ಅಷ್ಟೇ ಅಲ್ಲದೆ ನಮ್ಮ ಬದುಕನ್ನು ಕಳೆದೆರಡು ದಶಕಗಳಲ್ಲಿ ಪ್ರಭಾವಿಸಿರುವ ಜಾಗತೀಕರಣ, ನಗರೀಕರಣ, ರಾಷ್ಟ್ರೀಯತಾವಾದ ಇಂಥ ಹಲವು ಹತ್ತು ಪ್ರಕ್ರಿಯೆಗಳು ಕಾದಂಬರಿಕಾರರನ್ನು ಹೇಗೆ ಕಾಡಿವೆ ಎನ್ನುವುದೂ ಒಂದು ಆಸಕ್ತಿದಾಯಕ ಚಿಂತನೆ. ಜಾಗತೀಕರಣವೆಂಬ ಸ್ಪಷ್ಟ ಪ್ರಕ್ರಿಯೆ ಇನ್ನೂ ಕನ್ನಡ ಕಾದಂಬರಿ ಲೋಕದಲ್ಲಿ ತನ್ನ ಛಾಪನ್ನು ಅಷ್ಟು ಢಾಳಾಗಿ ಮೂಡಿಸದಿರುವುದು ವಿಶೇಷವೇ. ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ಸಂಪಾದಕ ಮಂಡಲಿಯ ಸದಸ್ಯರೂ ಸೇರಿದಂತೆ ಕನ್ನಡ ಕಾದಂಬರಿ ಲೋಕದ ಆಳವಾದ ಪರಿಚಯವುಳ್ಳವರ ಸಲಹೆಯನ್ನೂ ಪಡೆದು, ಸುಮಾರು ಮೂವ್ವತ್ತು ಕಾದಂಬರಿಗಳ ಪಟ್ಟಿಯೊಂದನ್ನು ತಯಾರಿಸಿಕೊಂಡೆವು. ವಿವಿಧ ಬಗೆಯ, ವಿವಿಧ ತಂತ್ರಗಳ, ವಿವಿಧ ವಸ್ತುಗಳನ್ನೊಳಗೊಂಡ, ಹಿರಿಯ ಕಿರಿಯ ಎಲ್ಲ ಬರಹಗಾರರೂ ನಮ್ಮ ಆಯ್ಕೆಯಲ್ಲಿರಬೇಕೆಂಬ ಆಸೆ ನಮಗಿದ್ದರೂ ಸಂಖ್ಯೆಯ ಮಿತಿಯಿಂದಾಗಿ, ನಮ್ಮ ಪಟ್ಟಿ ಅಪೂರ್ಣವಾಗೇ ಉಳಿಯಬೇಕಾಗಿ ಬಂತು. ಈ ಪಟ್ಟಿಯಿಂದ ಯಾವುದಾದರೂ ಒಂದನ್ನು ಆಯ್ದುಕೊಂಡು, ಆ ಕಾದಂಬರಿಯನ್ನು ಕೂಲಂಕಷವಾಗಿ ಓದಿ ಆ ಓದಿನ ಅನುಭವವನ್ನು ನಮ್ಮೊಂದಿಗೆ ಹಂಚಿಕೊಳ್ಳಬೇಕೆಂದು ನಮಗೆ ತಿಳಿದ ಅಮೆರಿಕದ ಕನ್ನಡ ಬರಹಗಾರರನ್ನು ಆಹ್ವಾನಿಸಿದೆವು.

ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಅಮೆರಿಕದ ಕನ್ನಡಿಗರಲ್ಲಿ ಈ ಪಟ್ಟಿಯಲ್ಲಿರುವ ಎಲ್ಲಾ ಕಾದಂಬರಿಗಳನ್ನೂ ಓದಿದವರು ಒಬ್ಬರೂ ಇಲ್ಲವೆಂದು ನಮಗೆ ತಿಳಿಯಲು ಹೆಚ್ಚು ಕಾಲ ಬೇಕಾಗಲಿಲ್ಲ! ಕಾರಂತ, ಕುವೆಂಪು, ಭೈರಪ್ಪ, ಅನಂತಮೂರ್ತಿ, ತ್ರಿವೇಣಿ ಮುಂತಾದ ಹೆಸರಾಂತ/ಪ್ರಮುಖ/ಜನಪ್ರಿಯ ಕಾದಂಬರಿಕಾರರನ್ನು ಓದಿದವರು ಅನೇಕರು ನಮ್ಮಲ್ಲಿದ್ದಾರೆ, ಆದರೆ, ಕಳೆದ ಒಂದೆರಡು ದಶಕಗಳಲ್ಲಿ ಬರೆದು ಪ್ರಕಟಿಸಿ ಪ್ರಖ್ಯಾತರಾದ ಲೇಖಕ/ಲೇಖಕಿಯರ ಪರಿಚಯ ಅನೇಕರಿಗೆ ಇಲ್ಲ. ಸಮಕಾಲೀನ ಕನ್ನಡ ಸಾಹಿತ್ಯವನ್ನು ಓದುತ್ತ ಬಂದಿರುವ ಕನ್ನಡಿಗರು ಅಮೆರಿಕದಲ್ಲಿ ಹಲವರು ಇದ್ದಾರಾದರೂ, ಓದಿದ ಪುಸ್ತಕಗಳನ್ನು ಕುರಿತು ವಿಮರ್ಶಾತ್ಮಕ ಪ್ರಬಂಧ ಬರೆಯಬಲ್ಲವರ ಸಂಖ್ಯೆ ಎಷ್ಟಿರಬಹುದು ಎಂಬ ಪ್ರಶ್ನೆಯೊಂದಿಗೇ ನಮ್ಮ ಕೆಲಸ ಪ್ರಾರಂಭವಾಯಿತು. ಲೇಖನಗಳಿಗೆ ಆಹ್ವಾನವಿತ್ತ ನಮ್ಮ ಮೊದಲ ಘೋಷಣೆ 'ಅದುವೆಕನ್ನಡ' (ದಟ್ಸ್‌ಕನ್ನಡ.ಕಾಮ್)ದಲ್ಲಿ ಪ್ರಕಟವಾಯಿತು. ಹಿಂದೆ ನಮ್ಮ ಪುಸ್ತಕಗಳಿಗೆ ಲೇಖನಗಳನ್ನು ಬರೆದುಕೊಟ್ಟವರನ್ನೆಲ್ಲಾ ಸಂಪರ್ಕಿಸಿದ್ದಲ್ಲದೇ ಸಾಧ್ಯವಾದಷ್ಟು ಹೊಸ ಉತ್ಸಾಹಿಗಳ ಗಮನವನ್ನೂ ಸೆಳೆಯಲು ಯತ್ನಿಸಿದೆವು. ನಾವು ತಯಾರಿಸಿದ ಪಟ್ಟಿಯಲ್ಲಿದ್ದ ಎಲ್ಲಾ ಕಾದಂಬರಿಗಳನ್ನೂ ಕುರಿತು ಲೇಖನಗಳು ತಯಾರಾಗುವವೋ ಇಲ್ಲವೋ ಎಂಬ ಅನಿಶ್ಚಿತತೆ ಕೊನೆಯವರೆಗೂ ಇತ್ತು. ಮುಕ್ಕಾಲು ಮೂರುಪಾಲು ಜನರ ಬಳಿ ತಾವು ಆಯ್ದುಕೊಂಡ ಕಾದಂಬರಿಯ ಪ್ರತಿಗಳು

ಇರಲಿಲ್ಲವಾಗಿ, ಅವುಗಳನ್ನು ತರಿಸಿ ಹಂಚುವುದು ಅಗತ್ಯವಾಯಿತು. ಒಂದೆರಡು ಪುಸ್ತಕಗಳು ಸಕಾಲಕ್ಕೆ ನಮ್ಮನ್ನು ತಲುಪಲಿಲ್ಲ. ಒಂದೆರಡು ಪುಸ್ತಕಗಳ ಪ್ರತಿಗಳು ದೊರಕದೇ ಹೋದವು.

ಎಲ್ಲಾ ಬರವಣಿಗೆಗಳೂ ಒಂದೇ ರೀತಿ ಇದ್ದರೆ ಓದುವವರಿಗೆ ನಿಸ್ಸಾರವೆನಿಸುತ್ತದೆ ಎಂಬ ಕಾರಣದಿಂದ ಲೇಖನ ಹೀಗೇ ಇರಬೇಕೆಂಬ ನಿಯಮಗಳನ್ನು ಹೇರದೆ ಎಲ್ಲ ಲೇಖಕರಿಗೂ ಸಹಾಯವಾಗುವಂಥ ಸಲಹೆ ಸೂಚನೆಗಳನ್ನು ಸಂಪಾದಕ ಮಂಡಲಿ ತಯಾರು ಮಾಡಿ ಹಂಚಿತು. ನುರಿತ ಬರಹಗಾರರಿಗೆ ಅಂಥಾ ಸೂಚನೆ ಸಲಹೆಗಳು ಅಗತ್ಯವಿಲ್ಲದಿದ್ದರೂ ಕೆಲವು ಲೇಖಕರಿಗಾದರೂ ನಮ್ಮ ಸಲಹೆಗಳು ಉಪಯುಕ್ತವಾಗಿದ್ದಿರಬಹುದೆಂಬ ನಂಬಿಕೆ ನಮಗಿದೆ. ನಮಗೆ ಬಂದ ಲೇಖನಗಳ ಮೊದಲನೆಯ ಆವೃತ್ತಿಯನ್ನು ಸಂಪಾದಕ ಮಂಡಲಿಯ ಸದಸ್ಯರೆಲ್ಲ ಓದಿ ಟೀಕೆ ಟಿಪ್ಪಣಿಗಳನ್ನು ಲೇಖಕರಿಗೆ ತಿಳಿಸಿದೆವು. ಆ ನಂತರ ತಿದ್ದಿದ ಎರಡನೆಯ (ಕೆಲವು ವೇಳೆ ಮೂರನೆಯ, ನಾಲ್ಕನೆಯ) ಆವೃತ್ತಿಗಳನ್ನು ಪಡೆದುಕೊಂಡ ಮೇಲೆಯೇ ಅವುಗಳನ್ನು ಪ್ರಕಟಣೆಗೆ ಯೋಗ್ಯವೆಂದು ಸಮಿತಿ ಪರಿಗಣಿಸಿದ್ದು. ಈ ಕೆಲಸಕ್ಕೆ ಕೈಹಾಕಿದ ನಮ್ಮಲ್ಲಿ ಅನೇಕರು, ವಿಜ್ಞಾನಿಗಳು, ತಂತ್ರಜ್ಞರು, ವೈದ್ಯರು ಮತ್ತು ಸಾಹಿತ್ಯೇತರ ಚಟುವಟಿಕೆಗಳಲ್ಲಿ ಜೀವನ ನಡೆಸುವವರು. ನಮ್ಮಲ್ಲನೇಕರಿಗೆ, ತಾಂತ್ರಿಕ, ವೈಜ್ಞಾನಿಕ ಪ್ರಬಂಧಗಳನ್ನು ಬರೆಯುವುದರಲ್ಲಿ, ಪ್ರಕಟಿಸುವುದರಲ್ಲಿ ಪರಿಣತಿ ಇದೆ ಎಂದ ಮಾತ್ರಕ್ಕೆ ಸಾಹಿತ್ಯದಲ್ಲಿಯೂ ಪರಿಣತಿಯಿದೆ ಎಂದು ನಾವು ಹೇಳಿಕೊಳ್ಳಲಾಗುವುದಿಲ್ಲ ಎಂಬ ಕಟುಸತ್ಯವನ್ನೂ ಬಲ್ಲವರಾಗಿದ್ದೇವೆ. ನಮ್ಮ ಉನ್ನತ ವಿದ್ಯಾಭ್ಯಾಸ ಮತ್ತು ವೃತ್ತಿಯ ಕಾರಣ ನಾವು ಕೈಗೂಡಿಸಿಕೊಂಡಿರುವ ವಿಶ್ಲೇಷಣಾಕ್ರಮವನ್ನು ಉಪಯೋಗಿಸಿಕೊಂಡು ಸಾಹಿತ್ಯವನ್ನೂ ಸಾಕಷ್ಟು ರೂಢಿಸಿಕೊಂಡವರಾಗಿದ್ದೇವೆ. ಇತರರು ಬರೆದ ಪುಸ್ತಕಗಳನ್ನು ನಿಖರವಾಗಿ ಓದಿ, ಅವುಗಳ ವಿಶ್ಲೇಷಣೆ ಮಾಡುವ ಕೆಲಸ ಕಷ್ಟಸಾಧ್ಯವಾದರೂ ನಮಗೆ ಅಸಾಧ್ಯವೇನಲ್ಲ ಎಂಬುದನ್ನು ಸಾಧಿಸಿ ತೋರಿಸಬೇಕೆಂಬ ಆಸೆಯೂ ನಮ್ಮ ಮನದ ಮೂಲೆಯಲ್ಲೆಲ್ಲೋ ಬೀಡುಬಿಟ್ಟಿರಬಹುದೇನೋ!

ನಮ್ಮ ಕೋರಿಕೆಗೆ ಮನ್ನಣೆಯಿತ್ತು ನಮ್ಮ ಪುಸ್ತಕಕ್ಕೆ ವಿದ್ವತ್ಪೂರ್ಣ ಮುನ್ನುಡಿಯನ್ನು ಬರೆದುಕೊಟ್ಟಿರುವ ಡಾ. ಜಿ.ಎಸ್. ಆಮೂರರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳನ್ನು ಅತ್ಯಂತ ನಮ್ರತೆಯಿಂದ ಸಮರ್ಪಿಸುತ್ತೇವೆ. ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಪ್ರಭುತ್ವವನ್ನು ಪಡೆದಿರುವ ಹಾಗೂ ಎರಡೂ ಭಾಷೆಗಳಲ್ಲಿ ಖ್ಯಾತ ಲೇಖಕರೂ ವಿಮರ್ಶಕರೂ ಆದ ಶ್ರೀಯುತ ಆಮೂರರ ಮುನ್ನುಡಿಯಿಂದ ನಮ್ಮ ಪುಸ್ತಕದ ಘನತೆ ಹೆಚ್ಚುವುದರಲ್ಲಿ ಸಂದೇಹವಿಲ್ಲ.

ಅಂತೂ, ನಮ್ಮ ಈ ಪ್ರಯೋಗದ ಫಲಿತಾಂಶ ನಮಗೆ ಸಮಾಧಾನವನ್ನಂತೂ ಕೊಟ್ಟಿದೆ. ಆದರೆ ಅದರ ಬೆಲೆಯನ್ನು ಮಾತ್ರ ಓದುಗರು ಮತ್ತು ವಿಮರ್ಶಕರೇ ಕಟ್ಟಬೇಕು. ಈ ಪುಸ್ತಕದ ಪ್ರಕಟಣೆಗೆ ಸಹಾಯ ನಮಗೆ ಹಲವು ಮೂಲೆಗಳಿಂದ ಬಂದಿದೆ. ಮೊದಲಿಗೆ, ಲೇಖನಗಳನ್ನು ಬರೆದು, ತಾಳ್ಮೆಯಿಂದ ತಿದ್ದಿ ಹಲವಾರು ಕರಡುಗಳನ್ನು ಪ್ರೀತಿಯಿಂದ ತಯಾರಿಸಿಕೊಟ್ಟ ಅಮೆರಿಕದ ಕನ್ನಡ ಬರಹಗಾರ/ಗಾರ್ತಿಯರಿಗೆ, ಅಂದವಾದ ರಕ್ಷಾಕವಚವನ್ನು ತಯಾರಿಸಿಕೊಟ್ಟ ಬಿ. ದೇವರಾಜ್, ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಧರಣಿ ಪ್ರಿಂಟರ್ಸ್‌ನ ಹೂವಪ್ಪ ಅವರಿಗೆ, ಪ್ರಕಟಣೆಯ ಭಾರವನ್ನು ಹೊತ್ತು ಸಮರ್ಪಕವಾಗಿ ಕಾರ್ಯವನ್ನು ನಿರ್ವಹಿಸಿ ಸಮಯಕ್ಕೆ ಸರಿಯಾಗಿ ಮುಗಿಸಿಕೊಟ್ಟ 'ಅಭಿನವ'ದ ಗೆಳೆಯರಿಗೆ, ಗಣಕೀಕರಣದಲ್ಲಿ ನೆರವು ನೀಡಿದ ಗೆಳೆಯ ಶ್ರೀವತ್ಸ ಜೋಶಿಯವರಿಗೆ, ಕಾಗುಣಿತ ಇತ್ಯಾದಿಗಳನ್ನು ತಿದ್ದುವುದರಲ್ಲಿ ಸಹಾಯಹಸ್ತ ನೀಡಿದ ಜ್ಯೋತಿ ಮಹಾದೇವ್, ಶ್ರೀಮತಿ ಪಿ. ಚಂದ್ರಿಕಾ, ಶ್ರೀಮತಿ ಲೋಕಪಾವನ ಅವರಿಗೆ, ಅಕ್ಷರ ವಿನ್ಯಾಸ ಮಾಡಿದ ವಿ. ಗೀತಾ ಅವರಿಗೆ ಕನ್ನಡ ಸಾಹಿತ್ಯ ರಂಗದ ಪರವಾಗಿ ಅನಂತ ಧನ್ಯವಾದಗಳು.

*

ಈ ಪುಸ್ತಕದ ಸಂಪಾದನೆಯ ಭಾರವನ್ನು ನನ್ನ ಹೆಗಲ ಮೇಲಿಟ್ಟು ನನಗೆ ಈ ಅಪೂರ್ವ ಅವಕಾಶವನ್ನು ಕಲ್ಪಿಸಿಕೊಟ್ಟ ಕನ್ನಡ ಸಾಹಿತ್ಯ ರಂಗದ ಅಧ್ಯಕ್ಷರಾದ ರಾಜಗೋಪಾಲ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ನನ್ನೊಂದಿಗೆ ಸಮಾನವಾಗಿ ದುಡಿದು ಪ್ರತಿ ಹೆಜ್ಜೆಯಲ್ಲಿಯೂ ಸಹಕಾರ, ಸಹಾಯ ಮತ್ತು ಸಹಯೋಗವನ್ನು ನೀಡಿದ ಸಂಪಾದಕ ಮಂಡಲಿಯ ಸದಸ್ಯರಾದ ನಾಗ ಐತಾಳ, ನಳಿನಿ ಮೈಯ, ರಾಜಗೋಪಾಲ್, ಶಶಿಕಲಾ ಚಂದ್ರಶೇಖರ್ ಮತ್ತು ಗುರುಪ್ರಸಾದ್ ಕಾಗಿನೆಲೆ ಇವರುಗಳನ್ನು ಮನಸಾ ವಂದಿಸುತ್ತೇನೆ. ಈ ಕೆಲಸಕ್ಕೆ ಬೇಕಾದ ಸಮಯ ಮಾಡಿಕೊಟ್ಟು ತಾಳ್ಮೆಯಿಂದ ಸಹಿಸಿಕೊಂಡ ಸಂಪಾದಕ ಮಂಡಲಿಯ ಮನೆಮಂದಿಯ ತ್ಯಾಗ ಅಲ್ಪಸ್ವಲ್ಪದ್ದಲ್ಲ. ಅದಕ್ಕಾಗಿ ಅವರೆಲ್ಲರಿಗೂ ನನ್ನ ನಲ್ಮೆಯ ಧನ್ಯವಾದಗಳು.

ಕೊನೆಯದಾಗಿ, ಓದುಗರು ದಯವಿಟ್ಟು ಗಮನಿಸಬೇಕು: ಇಲ್ಲಿನ ವಿವಿಧ ಲೇಖನಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಆಯಾ ಲೇಖಕರಿಗೆ ಸೇರಿದ್ದೇ ವಿನಃ ಸಂಪಾದಕರದ್ದಲ್ಲ. ಕನ್ನಡ ಸಾಹಿತ್ಯ ರಂಗವಾಗಲೀ ಸಂಪಾದಕ ಮಂಡಲಿಯಾಗಲೀ ಈ ಪುಸ್ತಕದಲ್ಲಿ ವ್ಯಕ್ತವಾದ ಹೇಳಿಕೆಗಳಿಗೆ ಯಾವ ರೀತಿಯಲ್ಲೂ ಜವಾಬ್ದಾರರಲ್ಲ. ಕನ್ನಡ ಸಾಹಿತ್ಯ ರಂಗದ ಧೋರಣೆಯನ್ನು ಅನುಸರಿಸಿ ಪ್ರತಿಯೊಬ್ಬ ಲೇಖಕ/ಲೇಖಕಿಗೂ ಸಂಪೂರ್ಣ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕೊಟ್ಟಿದ್ದಷ್ಟೇ ಅಲ್ಲದೆ ತಮ್ಮ

ಅನಿಸಿಕೆಗಳನ್ನು ಬಿಚ್ಚು ಮನಸ್ಸಿನಿಂದ ಬರೆಯಲು ಉತ್ತೇಜನವನ್ನೂ ಕೊಟ್ಟೆವು. ಆದರೆ, ಸಂಪಾದಕತ್ವದ ಹೊಣೆಯನ್ನು ಅರಿತು ಪ್ರತಿಯೊಬ್ಬರೂ ಜವಾಬ್ದಾರಿಯುತವಾದ ಬರವಣಿಗೆಗೆ ಅನುಸರಿಸಬೇಕಾದ ನೀತಿ–ನಿಯಮಗಳನ್ನು ನಿರ್ದಾಕ್ಷಿಣ್ಯವಾಗಿ ಪಾಲಿಸಿದೆ.

ನಮ್ಮ ಈ ಪ್ರಯೋಗಕ್ಕೆ ನಮ್ಮ ಸಾಹಿತ್ಯಾಸಕ್ತಿಯೊಂದೇ ಕಾರಣ. ಕನ್ನಡಪ್ರೇಮವೇ ನಮ್ಮ ಸ್ಫೂರ್ತಿಯ ನೆಲೆ. ಅತ್ಯಂತ ಶ್ರದ್ಧೆಯಿಂದ ಕೈಗೊಂಡ ಈ ಕನ್ನಡದ ಕೈಂಕರ್ಯವನ್ನು ಮಾನ್ಯ ಓದುಗರು ಪ್ರೀತಿಯಿಂದ ಸ್ವೀಕರಿಸಿ, ಇಲ್ಲಿರಬಹುದಾದ ತಪ್ಪು–ಒಪ್ಪುಗಳನ್ನು ಹಂಸಕ್ಷೀರನ್ಯಾಯವನ್ನನುಸರಿಸಿ, ಒಳ್ಳೆಯದನ್ನು ಮಾತ್ರ ಸ್ವೀಕರಿಸಬೇಕೆಂದು ಕನ್ನಡ ಸಾಹಿತ್ಯ ರಂಗ ಮತ್ತು ಸಂಪಾದಕ ಮಂಡಲಿಯ ಪರವಾಗಿ ಕೋರುತ್ತೇನೆ. ಓದಿದ ಮೇಲೆ ತಾವು ತೋರುವ ಪ್ರತಿಕ್ರಿಯೆ ಮತ್ತು ವ್ಯಕ್ತಪಡಿಸುವ ಅಭಿಪ್ರಾಯಗಳನ್ನು ಸ್ವಾಗತಿಸುತ್ತೇನೆ, ಅಷ್ಟೇ ಅಲ್ಲ, ಅತ್ಯಂತ ಹೆಚ್ಚು ಗೌರವಿಸುತ್ತೇನೆ.

– ಮೈ. ಶ್ರೀ. ನಟರಾಜ
ಪ್ರಧಾನ ಸಂಪಾದಕ

# ಮುನ್ನುಡಿ

ಕನ್ನಡ ಸಾಹಿತ್ಯ ರಂಗ ತನ್ನ ನಾಲ್ಕನೆಯ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಇತ್ತೀಚಿನ ಕನ್ನಡ ಕಾದಂಬರಿಗಳನ್ನು ಕುರಿತು ಅಮೆರಿಕೆಯಲ್ಲಿ ವಾಸವಾಗಿರುವ ಲೇಖಕರೇ ಬರೆದ ಬರಹಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುತ್ತಿರುವುದು ಸಂತೋಷದ ಸಂಗತಿ. ಸಾಹಿತ್ಯರಂಗ ಈಗಾಗಲೇ **ಕುವೆಂಪು ಸಾಹಿತ್ಯ ಸಮೀಕ್ಷೆ** (೨೦೦೪), **ಆಚೀಚೆಯ ಕತೆಗಳು** (೨೦೦೫) ಹಾಗೂ **ನಗೆಗನ್ನಡಂ ಗೆಲ್ಗೆ** (೨೦೦೭) ಎಂಬ ಮೂರು ಒಳ್ಳೆಯ ಪುಸ್ತಕಗಳನ್ನು ಹೊರ ತಂದಿದೆ. ಈ ಪ್ರಕಟಣೆಗಳಿಗೆ ಕನ್ನಡ ಓದುಗರಿಂದ ಪ್ರೋತ್ಸಾಹವೂ ದೊರೆತಿದೆ. ಅಮೆರಿಕೆಯಲ್ಲಿ ನೆಲೆಸಿರುವ ಕನ್ನಡಿಗರಲ್ಲಿ ಸಾಹಿತ್ಯಾಸಕ್ತಿಯನ್ನು ಹುಟ್ಟಿಸಿ, ಅವರ ಅಭಿವ್ಯಕ್ತಿಗಾಗಿ ವೇದಿಕೆಯನ್ನು ಒದಗಿಸುತ್ತಿರುವ ಸಾಹಿತ್ಯರಂಗದ ಪರಿಶ್ರಮ ಮೆಚ್ಚುವಂಥದ್ದು. ಈ ಸಂಘದ ಪ್ರಮುಖ ಕಾರ್ಯಕರ್ತರಲ್ಲೊಬ್ಬರಾದ ಎಚ್.ವೈ. ರಾಜಗೋಪಾಲರೊಡನೆ ನನ್ನ ಸ್ನೇಹ ೧೯೭೩ರಷ್ಟು ಹಳೆಯದು. ಹೋದಸಲ ನಾನು ಅಮೆರಿಕೆಯಲ್ಲಿದ್ದಾಗ ಶಶಿಕಲಾ ಚಂದ್ರಶೇಖರ ಹಾಗೂ ಮೈ. ಶ್ರೀ. ನಟರಾಜರ ಪರಿಚಯವಾಯಿತು. ಈ ಪುಸ್ತಕದ ಯೋಜನೆಯ ಹಂತದಲ್ಲಿ ನಾನು ಪಾಲ್ಗೊಂಡಿದ್ದರಿಂದ ಮುನ್ನುಡಿಯ ರೂಪದಲ್ಲಿ ಎರಡು ಮಾತುಗಳನ್ನು ಹೇಳಲು ಸಂತೋಷದಿಂದಲೇ ಒಪ್ಪಿಕೊಂಡಿದ್ದೇನೆ.

ಈ ಪುಸ್ತಕದಲ್ಲಿ ಎದ್ದು ಕಾಣುವ ಒಂದು ವೈಶಿಷ್ಟ್ಯವೆಂದರೆ ಇಲ್ಲಿ ಓದಿಗಾಗಿ ಆಯ್ದುಕೊಂಡ ಎಲ್ಲ ಕಾದಂಬರಿಗಳು, ರಾಮಾನುಜನ್‌ರ **ಮತ್ತೊಬ್ಬನ ಆತ್ಮಚರಿತ್ರೆ** (೧೯೭೮) ಯಂಥ ಒಂದೆರಡು ಅಪವಾದಗಳನ್ನು ಬಿಟ್ಟರೆ, ಕಳೆದ ಮೂರು ದಶಕಗಳಲ್ಲಿ ಪ್ರಕಟವಾದವುಗಳು. ಇವುಗಳಲ್ಲಿ ಬಹಳಷ್ಟು ಕೃತಿಗಳ ಬಗ್ಗೆ ವಿಶೇಷ ಚರ್ಚೆ ನಡೆದಿಲ್ಲ. ಅಷ್ಟೇ ಮಹತ್ವದ ಇನ್ನೊಂದು ವೈಶಿಷ್ಟ್ಯವೆಂದರೆ, ಈ ಪುಸ್ತಕಕ್ಕೆ ಸೇರಿದ ಲೇಖನಗಳನ್ನು ಬರೆದವರಲ್ಲಿ ಹೆಚ್ಚಿನವರು ಸಾಹಿತ್ಯಕ್ಷೇತ್ರಕ್ಕೆ ಹೊರಗಿನವರು. ಗುರುಪ್ರಸಾದ ಕಾಗಿನೆಲೆ, ಮೈ.ಶ್ರೀ. ನಟರಾಜ, ಆಹಿತಾನಲ, ಟಿ.ಎನ್. ಕೃಷ್ಣರಾಜು ಇಂಥ ಕೆಲವರನ್ನು ಬಿಟ್ಟರೆ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿದವರು, ಕನ್ನಡ ಓದುಗರಿಗೆ ಹೊಸಬರು.

ಆದರೆ ಚೆನ್ನಾಗಿ ಬರೆಯಬಲ್ಲವರು. ಇವರನ್ನು ಒಳಗೊಳ್ಳುವ ಮೂಲಕ ಪುಸ್ತಕಕ್ಕೆ ತಾಜಾತನ ಹಾಗೂ ವೈವಿಧ್ಯ ಬಂದಿದೆ. ಕನ್ನಡದಲ್ಲಿ ವಿಮರ್ಶೆ ಬರೆಯುವವರಲ್ಲಿ ಹೆಚ್ಚಿನವರು ಸಾಹಿತಿಗಳೇ ಆಗಿರುವುದರಿಂದ ಅದಕ್ಕೆ ಎಷ್ಟೋ ಸಲ ಅಕೆಡೆಮಿಕ್ ಸ್ವರೂಪ ಬಂದುಬಿಡುತ್ತದೆ. ಗಮನಿಸಬೇಕಾದ ಒಂದು ಸಂಗತಿಯೆಂದರೆ ಈ ಸಂಗ್ರಹದ ಹಲವಾರು ಲೇಖಕರಿಗೆ ವಿಮರ್ಶೆಯಲ್ಲಿ ಆಸಕ್ತಿ ಇಲ್ಲದೇ ಇರುವುದು. 'ಯಾವುದಾದರೂ ಕಲಾಕೃತಿಯನ್ನು ವಿಮರ್ಶೆಗೆ ಒಳಪಡಿಸಬಹುದು ಎನ್ನುವುದರ ಬಗ್ಗೆ ನನಗೆ ನಂಬಿಕೆ ಹೊರಟುಹೋಗಿದೆ' ಎಂಬ ಮಾತಿನಿಂದಲೇ ಎಂ.ಆರ್. ದತ್ತಾತ್ರಿಯವರು **ಎನ್ನ ಭವದ ಕೇಡು** ಕಾದಂಬರಿಯ ಬಗೆಗಿನ ತಮ್ಮ ಲೇಖನವನ್ನು ಪ್ರಾರಂಭಿಸುತ್ತಾರೆ. 'ವಿಮರ್ಶೆಯ ಅಗತ್ಯ ಒಂದು ಕೃತಿಗಾಗಲಿ, ಅದರ ಓದುಗರಿಗಾಗಲಿ ಇಲ್ಲ' ಎಂಬ ನಂಬುಗೆಯನ್ನು ಹೇಳಿಕೊಳ್ಳುವುದು **ಪುರುಷೋತ್ತಮ**ದ ಬಗ್ಗೆ ಬರೆದ ಮೀರಾ ಪಿ. ಆರ್ ಅವರಿಗೆ ಅವಶ್ಯವೆನಿಸಿದೆ. ಹಾಗೆಯೇ, **ಹಳ್ಳ ಬಂತು ಹಳ್ಳ** ಕಾದಂಬರಿಯ ಬಗ್ಗೆ ಬರೆಯುತ್ತ 'ವಿಮರ್ಶೆ ಸಾಧ್ಯವೇ ಇಲ್ಲ. ಇದು ನನ್ನ ಅನಿಸಿಕೆಗಳು' ಎಂದು ವಲ್ಲೀಶ ಶಾಸ್ತ್ರಿ ಸ್ಪಷ್ಟಗೊಳಿಸುತ್ತಾರೆ. ಬಹುಶಃ 'ವಿಮರ್ಶೆ' ಎಂಬ ಪದದ ಅರ್ಥವ್ಯಾಪ್ತಿಯ ಬಗ್ಗೆ ಸರಿಯಾದ ಕಲ್ಪನೆಯ ಅಭಾವದಲ್ಲಿ ಇಂಥ ಮಾತುಗಳು ಬಂದಿರಬೇಕು. ಸಾಹಿತ್ಯದ ಪ್ರಾಮಾಣಿಕ ಅನುಭವದ ಯಾವ ಅಭಿವ್ಯಕ್ತಿಯೇ ಇರಲಿ ಅದು ವಿಮರ್ಶೆಯೇ.

ಈ ಪುಸ್ತಕದ ಲೇಖನಗಳಲ್ಲಿ ಹೆಚ್ಚಿನವು ಪರಿಚಯಾತ್ಮಕ ಬರಹಗಳು. ಇಲ್ಲಿ ಚರ್ಚಿಸಲಾದ ಹಲವಾರು ಕಾದಂಬರಿಗಳು ತೀರ ಇತ್ತೀಚಿನವಾದುದರಿಂದ, ಎಂದರೆ ಹೊಸ ಶತಮಾನದ ಮೊದಲ ದಶಕದಲ್ಲಿ ರಚಿತವಾದವುಗಳಾದುದರಿಂದ ಇದು ಅನಿವಾರ್ಯವಷ್ಟೇ ಅಲ್ಲ, ಉಪಯುಕ್ತವೂ ಆಗಿದೆ. ಒಂದು ಕಾದಂಬರಿಯನ್ನು ಸಮರ್ಪಕವಾಗಿ ಪರಿಚಯಿಸುವುದು ಸುಲಭದ ಕೆಲಸವೇನಲ್ಲ. ಒಂದು ಕೃತಿಯನ್ನು ಸರಿಯಾಗಿ ತಿಳಿದುಕೊಳ್ಳದೆಯೇ ಅದನ್ನು ಪರಿಚಯಿಸಲಾಗದು. ಕೃತಿ ಹೊಸದಿದ್ದರಂತೂ ಈ ಸಮಸ್ಯೆ ಇನ್ನಷ್ಟು ಕಠಿಣವಾಗುತ್ತದೆ. ಆದರೆ ಈ ಸಂಗ್ರಹದ ಲೇಖಕರು ಈ ಕಾರ್ಯವನ್ನು ಸಮರ್ಥವಾಗಿ ನೆರವೇರಿಸಿದ್ದಾರೆ. ಮಧು ಕೃಷ್ಣಮೂರ್ತಿಯವರ, ಕುಂ.ವೀ. ಅವರ **ಅರಮನೆ** ಅನುಭವ ಮತ್ತು ಪ್ರತಿಕ್ರಿಯೆ', ಶ್ರೀಕಾಂತ ಬಾಬು ಅವರ **'ಅವಧೇಶ್ವರಿ'**, ತ್ರಿವೇಣಿ ಶ್ರೀನಿವಾಸರಾವ್ ಅವರ ನಾ ಕಂಡ **'ಅಶ್ವಮೇಧ'**, ವಿಶ್ವನಾಥ ಹುಲಿಕಲ್ ಅವರ ವಿವೇಕ ಶಾನಭಾಗರ **'ಒಂದು ಬದಿಯ ಕಡಲು'**, ಟಿ.ಎನ್. ರಾಜಶೇಖರರು ಬರೆದ ಶಾಂತಿನಾಥ ದೇಸಾಯಿಯವರ ಮೇರುಕೃತಿ **'ಓಂ ಣಮೋ'**, ಅಲಮೇಲು ಅಯ್ಯಂಗಾರ್‌ರವರ ದೇವನೂರ ಮಹಾದೇವರ **'ಕುಸುಮಬಾಲೆ'**, ಯಶವಂತ ಚಿತ್ತಾಲರ **'ಕೇಂದ್ರ ವೃತ್ತಾಂತ'** ಮತ್ತು ಅನಂತಮೂರ್ತಿಯವರ **'ದಿವ್ಯ'**ಗಳನ್ನು ಕುರಿತ ಆಹಿತಾನಲರ ಲೇಖನಗಳು, ಮೀರಾ ಪಿ. ಆರ್. ಅವರ **'ಪುರುಷೋತ್ತಮ'**, ಮಾಲಾ

ರಾವ್ ಅವರ ಪ್ರಸನ್ನರ **'ಬಾಲಗೋಪಾಲ'** ಒಂದು ಇಣುಕು ನೋಟ, ಜ್ಯೋತಿ ಮಹದೇವ ಅವರ **'ತೇರು'** ನನ್ನ ನೋಟದಲ್ಲಿ, ಪ್ರತಿಭಾ ಭಾಗವತರ **'ತೊಟ್ಟಿಲು'** ಒಂದು ಅವಲೋಕನ, ಶಾಂತಲಾ ಭಂಡಿಯವರ ಜೋಗಿಯವರ **'ಯಾಮಿನಿ'**ಯೊಂದಿಗೆ ಮುಖಾಮುಖಿ', ನಳಿನಿ ಮೈಯ ಅವರ **'ಶಿಖರಸೂರ್ಯ'** ಹಾಗೂ ವಲ್ಲೀಶ ಶಾಸ್ತ್ರಿಯವರ **'ಹಳ್ಳ ಬಂತು ಹಳ್ಳ'** ಇಂಥ ಲೇಖನಗಳು ವಿಮರ್ಶೆಯ ಪ್ರಾಥಮಿಕ ಕರ್ತವ್ಯವನ್ನು ಸಮರ್ಥವಾಗಿ ಹಾಗೂ ಅಚ್ಚುಕಟ್ಟಿನಿಂದ ನೆರವೇರಿಸುತ್ತವೆ.

ಆದರೆ ಕೃತಿಗಳೊಡನೆ ಇನ್ನೂ ಹೆಚ್ಚು ಗಂಭೀರವಾದ ತೊಡಗಿಕೊಳ್ಳುವಿಕೆಯನ್ನು ತೋರುವ ಹಲವಾರು ಲೇಖನಗಳೂ ಈ ಪುಸ್ತಕದಲ್ಲಿವೆಯೆನ್ನುವುದು ಮಹತ್ವದ್ದಾಗಿದೆ. ಗುಂಡೂ ಶಂಕರ ಮತ್ತು ಶೈಲಜಾ ಶಂಕರರ 'ಸಾಹಿತ್ಯ, ಧರ್ಮ ಮತ್ತು ರಾಜಕೀಯ ಸಮಕಾಲೀನ ಸಾಹಿತ್ಯದಲ್ಲಿ ಭೈರಪ್ಪನವರ **ಆವರಣದ** ಸ್ಥಾನ', ಎಂ.ಆರ್. ದತ್ತಾತ್ರಿಯವರ **'ಎನ್ನ ಭವದ ಕೇಡು'** ವಿರುದ್ಧ ಧ್ರುವಗಳ ಜಟಾಪಟಿಯ ವ್ಯಥೆ', ಎಚ್.ವೈ. ರಾಜಗೋಪಾಲರ ಗಾಂಧಿಯುಗಕ್ಕೆ ಕನ್ನಡಿ – ನಾಗವೇಣಿಯವರ **'ಗಾಂಧಿ ಬಂದ'** ಮತ್ತು ವ್ಯಾಸರಾಯ ಬಲ್ಲಾಳರ **'ಹೆಜ್ಜೆ'**, ಗುರುಪ್ರಸಾದ ಕಾಗಿನೆಲೆಯವರ ಲಂಕೇಶರ **'ಅಕ್ಕ'**, ಎಚ್.ವಿ. ರಂಗಾಚಾರ್ ಅವರ **'ಮಂದ್ರ'**ದಲ್ಲಿ ಕಲೆ ಮತ್ತು ಕಾಮ, ಟಿ.ಎನ್. ಕೃಷ್ಣರಾಜು ಅವರ ನೆನಪುಗಳ ದರ್ಪಣ ಲೋಕ **'ಮತ್ತೊಬ್ಬನ ಆತ್ಮಚರಿತ್ರೆ'**, ವಿಮಲಾ ರಾಜಗೋಪಾಲರ ಮಾನವೀಯ **'ಮಾಯಾಲೋಕ'** ಅಸಮಾನ **'ಬದುಕು'** ಹಾಗೂ ಶಶಿಕಲಾ ಚಂದ್ರಶೇಖರ್ ಅವರ ನೇಮಿಚಂದ್ರರ **'ಯಾದ್ ವಶೇಮ್'** ಇಂಥ ಲೇಖನಗಳಲ್ಲಿ ಗ್ರಹಿಕೆಯ ಸೂಕ್ಷ್ಮತೆ, ತಾತ್ವಿಕ ತಿಳಿವು ಮತ್ತು ಸಮಕಾಲೀನ ಸಂವೇದನೆಗಳು ಒಟ್ಟುಗೂಡಿದಾಗ ಉತ್ಪನ್ನವಾಗುವ ವಿಮರ್ಶೆಯ ಪ್ರಬುದ್ಧತೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಗುಂಡೂ ಶಂಕರ ಹಾಗೂ ಶೈಲಜಾ ಶಂಕರ ಅವರ **ಆವರಣದ** ವಿಶ್ಲೇಷಣೆ ಭೈರಪ್ಪನವರ ಈ ಕಾದಂಬರಿಯನ್ನು ಕುರಿತು ಬಂದ ಅತ್ಯುತ್ತಮ ಲೇಖನಗಳಲ್ಲೊಂದಾಗಿದೆ. ಭೈರಪ್ಪನವರ **ಆವರಣ** ಹಾಗೂ ಟರ್ಕಿಯ ಕಾದಂಬರಿಕಾರ ಅರ್ಹಸ್ ಪಮುಕ್‌ರ **My Name is Red** ಕಾದಂಬರಿಗಳನ್ನು ಕೇಂದ್ರದಲ್ಲಿಟ್ಟುಕೊಂಡು ಸಮಕಾಲೀನ ಜಗತ್ತಿನ ಅತ್ಯಂತ ಮಹತ್ವದ ಸಮಸ್ಯೆಯಾದ ಧಾರ್ಮಿಕ ಘರ್ಷಣೆಯ ಸಾಹಿತ್ಯಕ ಮತ್ತು ರಾಜಕೀಯ ಆಯಾಮಗಳನ್ನು ಶಂಕರ್ ದಂಪತಿ ಸಮರ್ಥವಾಗಿ ವಿಶ್ಲೇಷಿಸಿದ್ದಾರೆ. ಧಾರ್ಮಿಕ ಘರ್ಷಣೆಯ ಸ್ವರೂಪ ಈ ಎರಡೂ ಕಾದಂಬರಿಗಳಲ್ಲಿ ಬೇರೆ ಬೇರೆಯಾಗಿದ್ದರೂ ಕಲೆ ಹಾಗೂ ಚರಿತ್ರೆಗಳನ್ನು ಮುಖಾಮುಖಿಯಾಗಿಸುವ ಅವುಗಳ ತಂತ್ರದ ಮೂಲಕ ಹೋಲಿಕೆ ಸಾಧ್ಯವಾಗುತ್ತದೆ. 'ಪಮುಕ್‌ನ **Red**ಗೆ ಹೋಲಿಸಿದಲ್ಲಿ **ಆವರಣದಲ್ಲಿ** ಬರುವ ಪಾತ್ರಗಳು ತೀರ ಏಕದೃಷ್ಟಿಯಿಂದ ಕೂಡಿ ಪೇಲವವಾಗಿ ಕಾಣುತ್ತವೆ. ಪ್ರೊ. ಶಾಸ್ತ್ರಿಯ ಪಾತ್ರವಂತೂ ಭಾರತದ ಪ್ರಗತಿಪರ

ಪ್ರಾಜ್ಞನೊಬ್ಬನ ವಿಕಟ ಚರಿತ್ರೆ (cartoon)ಯಂತೆ ಕಾಣುತ್ತದೆ. ಲಕ್ಷ್ಮಿಯ ಬಾಹ್ಯಪ್ರಪಂಚ ತೀರ ಭಾವರೂಪಕವಾಗಿದೆ. ಅವಳ ಪಾತ್ರ ಯಾವ ರೀತಿಯಲ್ಲಿಯೂ ವಾಸ್ತವ ಪ್ರಜ್ಞೆಯನ್ನು ಬಿಂಬಿಸುವುದಿಲ್ಲ' ಎಂಬ ಒಳನೋಟ ಶಂಕರರಿಗೆ ಸಾಧ್ಯವಾಗುವುದು ಈ ಹೋಲಿಕೆಯ ಮೂಲಕವೇ. ಸಾಹಿತ್ಯಕ ದೃಷ್ಟಿಯಿಂದ ಈ ಎರಡು ಕಾದಂಬರಿಗಳನ್ನು ಹೋಲಿಸಿದಂತೆ ಅವುಗಳ ರಾಜಕೀಯ ಆಯಾಮಗಳನ್ನೂ ಶಂಕರ ಪರೀಕ್ಷಿಸುತ್ತಾರೆ. ಇಲ್ಲಿ ಅವರಿಗೆ ಸ್ಯಾಮ್ಯುಅಲ್ ಹಂಟಿಂಗ್‌ಟನ್‌ರ 'ನಾಗರಿಕತೆಗಳ ಸಂಘರ್ಷ'ದ ತತ್ವ ಹಾಗೂ ಅದನ್ನು ವಿರೋಧಿಸಿದ ಎಡ್ವರ್ಡ್ ಸೈದ್ ಹಾಗೂ ಅಮರ್ತ್ಯಸೇನ್‌ರ ವಿಚಾರಗಳು ಉಪಯುಕ್ತವಾಗುತ್ತವೆ. 'ಭೈರಪ್ಪನವರ ಪಾತ್ರಗಳು ಮೂಲತಃ ರೂಪಿತವಾಗಿರುವುದು ಲೇಖಕರ ಧಾರ್ಮಿಕ ಅನನ್ಯತೆಯ ಮತ್ತು ಅವರ ಅಸ್ಮಿತೆ ನಂಬಿಕೆಯ ಮೇಲೆ, ಹಂಟಿಂಗ್‌ಟನ್ ಅವರ ಆಲೋಚನಾ ಧಾಟಿಯಲ್ಲಿ, ಇದಕ್ಕೆ ತೀವ್ರ ವಿರೋಧವಾಗಿ, ಪಮುಕ್‌ರ ಪಾತ್ರಗಳು ರೂಪಿತವಾಗಿರುವುದು ಕೇವಲ ಧಾರ್ಮಿಕ ಅನನ್ಯತೆಯ ಹಿನ್ನೆಲೆಯಲ್ಲಲ್ಲ. ಅದಕ್ಕೂ ಹೆಚ್ಚಾಗಿ ಇವರ ಕಲಾತ್ಮಕ, ಲೌಕಿಕ, ಲೈಂಗಿಕ ಮುಂತಾದ ಆಯಾಮಗಳ ಹಿನ್ನೆಲೆಯಲ್ಲಿ. ಪಮುಕ್‌ರ ಪಾತ್ರಗಳಲ್ಲಿ ಸೇನ್ ಮತ್ತು ಸೈದ್ ಅವರ ಆಲೋಚನಾ ಧಾಟಿಯನ್ನು ಕಾಣಬಹುದು' ನವ್ಯೋತ್ತರ ಚಿಂತನೆಯ ಬೆಳಕಿನಲ್ಲಿ ಹಾಗೂ ತೌಲನಿಕ ಪರಿಪ್ರೇಕ್ಷ್ಯದಲ್ಲಿ **ಆವರಣ**ವನ್ನು ಓದುವ ಮೂಲಕ ಶಂಕರ್ ಅವರಿಗೆ ಹೊಸ ಒಳನೋಟಗಳು ಲಭ್ಯವಾಗಿವೆ.

ಎ.ಕೆ. ರಾಮಾನುಜನ್‌ರ **ಮತ್ತೊಬ್ಬನ ಆತ್ಮಚರಿತ್ರೆ** ಅಪರೂಪದ ಕೃತಿಯಾದರೂ ವಿಮರ್ಶಕರ ಗಮನವನ್ನು ಸೆಳೆಯುವಲ್ಲಿ ಅದು ಅಷ್ಟೊಂದು ಯಶಸ್ವಿಯಾದಂತಿಲ್ಲ. ಟಿ. ಎನ್. ಕೃಷ್ಣರಾಜು ಅವರು ಈಗ ಅದಕ್ಕೆ ನ್ಯಾಯ ಒದಗಿಸಿದ್ದಾರೆ. ಕನ್ನಡ ಕಥನ ಸಾಹಿತ್ಯದಲ್ಲಿ ತೀರ ಹೊಸದಾಗಿದ್ದ ಈ ಕೃತಿ ಕತೆ, ಆತ್ಮಕತೆಗಳ ಅಂತರವನ್ನೇ ಅಳಿಸಿ ಹಾಕಿ ಹೊಸ ರೂಪವನ್ನು ಸೃಷ್ಟಿ ಮಾಡಿತು. 'ಎಲ್ಲರಿಗೂ ಇರೋ ಕತೆ ಅದೊಂದೇ ಕೆಲವರು ಅದನ್ನು ಕತೆ ಅಂತ ಬರೀತಾರೆ, ಕೆಲವರು ಆತ್ಮಕತೆ ಅಂತಾರೆ ಅಷ್ಟೇ' ಎನ್ನುವ ಕೆ.ಕೆ. ರಾರ ಮಾತಿನಲ್ಲಿ ಸತ್ಯವಿದೆಯಾದರೂ ಕಾದಂಬರಿ, ಆತ್ಮಕತೆಗಳನ್ನು ಬೇರೆ ಬೇರೆಯಾಗಿಯೇ ನೋಡುವುದು ಸಂಪ್ರದಾಯ. ಆದರೆ, ರಾಮಾನುಜನ್ ಇವೆರಡರ ನಡುವೆ ಕ್ರಿಯಾತ್ಮಕ ಸಂಬಂಧವನ್ನೇರ್ಪಡಿಸಿ ಹೊಸ ರೀತಿಯ ಅಭಿವ್ಯಕ್ತಿಯನ್ನು ಸಾಧಿಸಿದ್ದಾರೆ. ಇದು ಕೇವಲ ಸಾಹಿತ್ಯಕ ಪ್ರಶ್ನೆಯಷ್ಟೇ ಅಲ್ಲ, 'self' ಮತ್ತು 'other'ಗಳ ಸಂಬಂಧ ಜಟಿಲವಾದುದು. ಲಕನ್‌ನಂಥ ಮನೋವಿಜ್ಞಾನಿಗಳು 'ಅನ್ಯ'ದ ಮೂಲಕವೇ 'ಆತ್ಮ'ದ ಅರಿವು ಸಾಧ್ಯ ಎಂದು ಪ್ರತಿಪಾದಿಸಿದ್ದಾರೆ. 'ನಾನು ಎಂದರೆ ಯಾರು?' 'ಮತ್ತೊಬ್ಬನಲ್ಲಿಯೂ, ನಾನಿದ್ದರೆ, ನನ್ನಲ್ಲಿಯೂ ಮತ್ತೊಬ್ಬನಿಲ್ಲವೇ?...' ಹೀಗೆ ಸ್ವಂತ ಮತ್ತು ಸ್ವಂತದ ಅವಳಿ ಜವಳಿಯಾದ ಮತ್ತೊಂದು ಐಡೆಂಟಿಟಿಗಳ ಘರ್ಷಣೆ, ದ್ವಂದ್ವ

ಜಿಜ್ಞಾಸೆ ಕಾದಂಬರಿಯ ಜೀವಬಿಂದು' ಎಂದು ಕೃಷ್ಣರಾಜು ಸರಿಯಾಗಿಯೇ ಹೇಳಿದ್ದಾರೆ. ಈ ಸಮಸ್ಯೆ ರಾಮಾನುಜನ್‌ರಿಗೆ ಮಾತ್ರ ಸೀಮಿತವಾದುದಲ್ಲ. ಚಂದ್ರಶೇಖರರ ಕಂಬಾರರ **ಸಿರಿಸಂಪಿಗೆ**ಯಂಥ ನಾಟಕಗಳಲ್ಲಿಯೂ ಅದರ ಸೀಮಿತ ಆವಿಷ್ಕಾರವಿದೆ. ತಾತ್ವಿಕತೆ ರಾಮಾನುಜನ್‌ರ ಕೃತಿಯ ಜೀವಾಳವಾದರೂ ಅದ್ಭುತ ವಿವರಗಳ ಸೃಷ್ಟಿಯ ಮೂಲಕ ಅದು ಅನನ್ಯ ಸಾಹಿತ್ಯ ಗುಣವನ್ನು ಗಳಿಸಿಕೊಳ್ಳುತ್ತದೆ. ಈ ಸತ್ಯವನ್ನು ಕೃಷ್ಣರಾಜು ಅವರು ಸರಿಯಾಗಿಯೇ ಗುರುತಿಸಿದ್ದಾರೆ.

ಕುಸುಮಾಕರ ದೇವರಗೆಣ್ಣೂರರ **ಬಯಲು ಬಸಿರು** ಕಾದಂಬರಿಯ ನಾಯಕ ಅಮೆರಿಕಾ ಮೂಲದವನಾದುದರಿಂದ ಹಾಗೂ ಅವನ ಅಮೆರಿಕನ್ ಅನುಭವವೇ ಅವನನ್ನು ನೆಮ್ಮದಿ ಹುಡುಕಿಕೊಂಡು ಭಾರತಕ್ಕೆ ಬರಲು ಪ್ರೇರೇಪಿಸಿದುದರಿಂದ ಈ ಕಾದಂಬರಿಯನ್ನು ಅಮೆರಿಕೆಯಲ್ಲಿ ವಾಸವಾಗಿರುವ ಕನ್ನಡ ಓದುಗರು ಹೇಗೆ ಓದಿದ್ದಾರೆ ಎನ್ನುವುದನ್ನು ತಿಳಿಯಲು ನನ್ನಲ್ಲಿ ಕುತೂಹಲವಿತ್ತು. ಆದುದರಿಂದ ಮೈ. ಶ್ರೀ. ನಟರಾಜರ ಲೇಖನವನ್ನು ನಾನು ಆಸಕ್ತಿಯಿಂದಲೇ ಓದಿದೆ. 'ಕಥಾನಾಯಕ ನಾರ್ಮನ್ ಅಮೆರಿಕನ್ ಆಗಿರುವುದರ ಔಚಿತ್ಯವೇನು' ಎಂಬ ಮೂಲಭೂತ ಪ್ರಶ್ನೆಯನ್ನೇ ನಟರಾಜ್ ಎತ್ತುತ್ತಾರೆ. ನಾರ್ಮನ್ ಬದಲು ನಾರಾಯಣ ಎಂಬುವವ ಭಾರತದಿಂದ ಅಮೆರಿಕೆಗೆ ಹೋಗಿ ನಾರ್ಮನ್ ಪಡೆದ ಅನುಭವಗಳನ್ನೇ ಪಡೆಯಲು ಸಾಧ್ಯವಿತ್ತು ಎಂದು ನಟರಾಜರಿಗೆ ಅನಿಸಿದೆ. ಇದೂ ಅಲ್ಲದೆ, ಅಮೆರಿಕದ ಸರಾಸರೀ ಸಂಸಾರಗಳ ಬಗ್ಗೆ ಮತ್ತು ಸರಾಸರೀ ಅಮೆರಿಕನ್‌ರ ಬಗೆಗಿನ ಕಲ್ಪನೆಗಳಲ್ಲಿ ಸರಳೀಕರಣವಿದೆ ಎಂದೂ ಅವರು ಹೇಳುತ್ತಾರೆ. ಈ ಕಾದಂಬರಿಯ 'ತಾತ್ವಿಕತೆ' ಹಾಗೂ 'ದರ್ಶನ'ಗಳೂ ಸಹಜವಾಗಿ ಮೂಡಿಬಂದಿಲ್ಲ. ಅತಿಯಾಗಿವೆ ಎನ್ನುವ ಅಭಿಪ್ರಾಯವನ್ನೂ ಅವರು ಪ್ರಕಟಿಸಿದ್ದಾರೆ. ನಾರ್ಮನ್ 'ಊಹಾ ಪ್ರಪಂಚದ ಪ್ರಾತಿನಿಧಿಕ ಅಂತಾರಾಷ್ಟ್ರೀಯ 'ವ್ಯಕ್ತಿ' ಯಾಗಿಯೇ ಓದುಗರ ಮನಸ್ಸಿನಲ್ಲಿ ಉಳಿಯುತ್ತಾನೆ' ಎಂಬ ನಿರ್ಣಯಕ್ಕೆ ಅವರು ಬಂದಿದ್ದಾರೆ. **ಬಯಲು ಬಸಿರಿ**ನ ಬಗ್ಗೆ ಕನ್ನಡ ವಿಮರ್ಶಕರ ಅನಿಸಿಕೆಗಳನ್ನು ಗಮನಿಸಿಯೇ ನಟರಾಜ್ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ ಎನ್ನುವುದು ಮಹತ್ವದ್ದಾಗಿದೆ. ಕನ್ನಡ ವಿಮರ್ಶೆ ಈ ಅಭಿಪ್ರಾಯಗಳನ್ನು ಗಂಭೀರವಾಗಿ ಪರಿಗಣಿಸುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

ಕತೆಗಾರರಾಗಿ ನೇಮಿಚಂದ್ರ ತುಂಬ ಒಳ್ಳೆಯ ಹೆಸರು ಗಳಿಸಿದ್ದಾರೆ. ಆದರೆ, ಅವರ ಕಾದಂಬರಿ **ಯಾದ್ ವಶೇಮ್** ಅಷ್ಟೊಂದು ಪರಿಚಿತವಲ್ಲ. ಶಶಿಕಲಾ ಚಂದ್ರಶೇಖರ ಅವರ ಲೇಖನವನ್ನು ಓದುವತನಕ ನಾನೂ ಅದನ್ನು ಗಮನಿಸಿರಲಿಲ್ಲ. ಶಶಿಕಲಾ ಅವರೇ ಹೇಳುವಂತೆ ಈ ಕಾದಂಬರಿಯ ವಸ್ತು ಈಗಾಗಲೇ ಸಾಕಷ್ಟು ಪರಿಚಿತವಾಗಿದ್ದರೂ ಅದರ ಭಾರತೀಯ ಆಯಾಮ ಹೊಸತು. 'ಪರದೇಶಿ' ಹ್ಯಾನಾಳನ್ನು 'ಸ್ವದೇಶಿ' ಯನ್ನಾಗಿಸಿ ಓದುಗರೊಟ್ಟಿಗೆ ಒಂದು ಆತ್ಮೀಯ ಬುನಾದಿಯನ್ನು ಸೃಷ್ಟಿಸಿರುವುದು

'ನೇಮಿಚಂದ್ರರ ಸಾಧನೆಯಾಗಿದೆ'. ಕೃತಿಯ ಸ್ವರೂಪದ ಬಗ್ಗೆ ಶಶಿಕಲಾ ಅವರಲ್ಲಿ ಸಂಶಯಗಳಿದ್ದರೂ ಈ ಕಾರಣಕ್ಕಾಗಿ ಅದನ್ನು ಮೆಚ್ಚಿಕೊಂಡಿದ್ದಾರೆ. ಇಂಥ ಒಂದು ಮಹತ್ವದ ಕೃತಿಯತ್ತ ನಮ್ಮ ಗಮನ ಸೆಳೆದ ಅವರಿಗೆ ಕೃತಜ್ಞತೆಗಳು ಸಲ್ಲಬೇಕು. ಈ ಸಂಗ್ರಹದಲ್ಲಿ ಶಶಿಕಲಾ ಅವರಲ್ಲದೇ, ತ್ರಿವೇಣಿ ಎಸ್.ರಾವ್, ಅಲಮೇಲು ಅಯ್ಯಂಗಾರ್, ಜ್ಯೋತಿ ಮಹಾದೇವ್, ಪ್ರತಿಭಾ ಭಾಗವತ, ಮೀರಾ ಪಿ. ಆರ್. ಮಾಲಾ ರಾವ್, ವಿಮಲಾ ರಾಜಗೋಪಾಲ್, ಶಾಂತಲಾ ಭಂಡಿ, ನಳಿನಿ ಮೈಯರಂಥ ಹಲವಾರು ಮಹಿಳೆಯರ ಲೇಖನಗಳಿರುವುದು ಈ ಸಂಕಲನದ ಒಂದು ಗಮನಾರ್ಹ ವೈಶಿಷ್ಟ್ಯವಾಗಿದೆ. ಕನ್ನಡದ ಬೇರೆ ಯಾವ ಪ್ರಾತಿನಿಧಿಕ ವಿಮರ್ಶಾ ಸಂಕಲನದಲ್ಲಿಯೂ ಈ ಪ್ರಮಾಣದಲ್ಲಿ ಲೇಖಕಿಯರು ದೊರೆಯಲಾರರು.

ಭೈರಪ್ಪನವರ ಬಹುಚರ್ಚಿತ ಕೃತಿ **ಮಂದ್ರ**ವನ್ನು ಕುರಿತ ತಮ್ಮ ಲೇಖನದ ಪ್ರಾರಂಭದಲ್ಲಿ 'ಈ ಲೇಖನ **ಮಂದ್ರ**ದ ವಿಮರ್ಶೆಯಲ್ಲ, ಪ್ರಬಂಧ ಶೈಲಿಯಲ್ಲಿ ಬರೆಯುತ್ತಿದ್ದೇನೆ' ಎಂದು ರಂಗಾಚಾರ್ ಹೇಳಿದ್ದಾರಾದರೂ ಅವರು ಈ ಬಹುಚರ್ಚಿತ ಕಾದಂಬರಿಯ ಬಗ್ಗೆ ಸಮತೂಕದ ವಿಮರ್ಶೆಯನ್ನೇ ಕೊಟ್ಟಿದ್ದಾರೆ. ವಿಮರ್ಶೆ ಪ್ರಬಂಧ ಶೈಲಿಯಲ್ಲಿ ಇರಬಾರದು ಎಂದೇನೂ ಇಲ್ಲ. ಕೀರ್ತಿನಾಥ ಕುರ್ತಕೋಟಿಯವರು ತಮ್ಮ ವಿಮರ್ಶಾ ಲೇಖನಗಳ ರೂಪವನ್ನು ಪ್ರಬಂಧವೆಂದೇ ಗುರುತಿಸಿದುದನ್ನು ಇಲ್ಲಿ ನೆನಯಬಹುದು. ಕಲೆ ಹಾಗೂ ಧಾರ್ಮಿಕತೆಗಳ ಸಂಬಂಧದ ಬಗ್ಗೆ ರಂಗಾಚಾರ್ ಅವರಿಗೆ ತಮ್ಮದೇ ಆದ ವಿಚಾರಗಳಿವೆ:

'ನಮ್ಮ ದೇಶದಲ್ಲಿ ಕಲೆಗಳನ್ನು ಧಾರ್ಮಿಕತೆ ಹರಡುವ ಒಂದು ಉಪಕರಣ ಮಾಡಿಕೊಂಡುಬಿಟ್ಟಿರುವುದು ನಿಜವಾಗಿಯೂ ವಿಷಾದದ ಸಂಗತಿ ಇದರಿಂದ ಉತ್ತಮ ಮಟ್ಟದ ಕಲಾಸೃಷ್ಟಿಗೆ ಬೇಕಾದ ಸ್ವಾತಂತ್ರ್ಯ ಕುಂದಿಹೋಗಿದೆ'. ಆದರೆ, **ಮಂದ್ರ**ದಲ್ಲಿ ನಿಜವಾದ ಸಮಸ್ಯೆ ಇರುವುದು ಕಲಾವಿದನ ನೈತಿಕತೆಯ ಸಮಸ್ಯೆ, ಕಲೆಯ ಹೆಸರಿನಲ್ಲಿ ಮೋಹನಲಾಲನ ಅನೈತಿಕ ವ್ಯವಹಾರಗಳನ್ನು ಸಮರ್ಥಿಸಲಾಗುತ್ತದೆಯೊ? ಬಹುಶಃ ಈ ಪ್ರಶ್ನೆಗೆ ರಂಗಾಚಾರ್‌ರ ಉತ್ತರ 'ಅಹುದು' ಎಂದೇ ಇರುವಂತೆ ತೋರುತ್ತದೆ.

ಸ್ವತಃ ಒಳ್ಳೆಯ ಕಾದಂಬರಿಕಾರರಾದ ಗುರುಪ್ರಸಾದ ಕಾಗಿನೆಲೆಯವರು ಲಂಕೇಶರ ಕಾದಂಬರಿ **ಅಕ್ಕ**ದ ಬಗ್ಗೆ ಮಾರ್ಮಿಕವಾಗಿ ಬರೆದಿದ್ದಾರೆ. ಅವರು ಸಮರ್ಪಕವಾಗಿ ಗುರುತಿಸಿದಂತೆ ಇಂಥ ಕಾದಂಬರಿಗಳಲ್ಲಿ ಕಾದಂಬರಿಕಾರರ ದೃಷ್ಟಿಕೋನ ಹಾಗೂ ಅವನು ಆಯ್ದುಕೊಳ್ಳುವ ನಿರೂಪಣ ಶೈಲಿ ಮಹತ್ವದ್ದಾಗುತ್ತದೆ. ಕಥೆಯನ್ನು ಹೆಚ್ಚಾಗಿ ಕ್ಯಾತನ ಪಾತ್ರದ ಮೂಲಕವೇ ಹೇಳುವುದರಿಂದ ಹಾಗೂ 'ಸ್ಲಮ್ ಡಾಗ್ ಮಿಲಿಯನೇರ್' ದಂಥ ಕೃತಿಗಳಲ್ಲಿ ನುಸುಳಿಕೊಳ್ಳುವ ರೊಮಾಂಟಿಸಿಸಂನ್ನು ತಡೆಯುವ ಮೂಲಕ

ಲಂಕೇಶರರು ತಮ್ಮ ಕೃತಿಯಲ್ಲಿ ವಾಸ್ತವತೆಯನ್ನು ಕಾಯ್ದುಕೊಳ್ಳಲು ಶಕ್ತರಾಗಿದ್ದಾರೆ ಎಂದು ಕಾಗಿನೆಲೆ ಸರಿಯಾಗಿಯೇ ಹೇಳಿದ್ದಾರೆ. ಈ ಕೃತಿ ಪುಸ್ತಕ ರೂಪದಲ್ಲಿ ಪ್ರಕಟವಾದಾಗ ಲಂಕೇಶ್ ಅದರ ಪ್ರತಿಯೊಂದನ್ನು ಕಳಿಸಿ ನನ್ನ ಅಭಿಪ್ರಾಯ ಕೋರಿದ್ದರು. ನನ್ನ ಮೆಚ್ಚುಗೆಯನ್ನು ತಿಳಿಸುವುದರ ಜೊತೆಗೆಯೇ ಚೇಲಾನ 'The Family of Pascuoul Duarte' ಕಾದಂಬರಿಯ ಜೊತೆಗೆ **ಅಕ್ಕ** ಹೊಂದಿದ ಹೋಲಿಕೆಯನ್ನು ಪ್ರಸ್ತಾಪಿಸಿದ್ದೆ. ಅಕ್ಕ ಬರೆಯುವ ಮೊದಲು ತಾವು ಚೇಲಾನ ಕಾದಂಬರಿಯನ್ನು ಓದಿರಲಿಲ್ಲ ಎಂಬ ವಿವರಣೆಯನ್ನು ಲಂಕೇಶರು ಕೊಟ್ಟಂತೆ ನೆನಪು.

ತುಲನೆ (comparision) ವಿಮರ್ಶೆಯ ಮುಖ್ಯ ಸಾಧನಗಳಲ್ಲೊಂದು ಎಂದು ಟಿ.ಎಸ್. ಎಲಿಯಟ್ ಬಹಳ ಹಿಂದೆಯೇ ಗುರುತಿಸಿದ್ದುಂಟು. ತುಲನೆ ಒಂದೇ ಪರಂಪರೆಯಲ್ಲಿಯ ಕೃತಿಗಳೊಡನೆ ನಡೆದಾಗ ಪರಂಪರೆ ಹೊಸ ಅರ್ಥ ಪಡೆದುಕೊಳ್ಳುತ್ತದೆ ಎಂಬುದಕ್ಕೆ ಈ ಸಂಗ್ರಹದ ಎರಡು ಲೇಖನಗಳು – ಎಚ್.ವೈ. ರಾಜಗೋಪಾಲರ ಗಾಂಧಿಯುಗಕ್ಕೆ ಕನ್ನಡಿ – ನಾಗವೇಣಿಯವರ **ಗಾಂಧಿ ಬಂದ** ಮತ್ತು ವ್ಯಾಸರಾಯ ಬಲ್ಲಾಳರ **ಹೆಜ್ಜೆ**, ಕಾದಂಬರಿಗಳ ಸಮೀಕ್ಷೆ ಹಾಗೂ ವಿಮಲಾ ರಾಜಗೋಪಾಲರ ಮಾನವೀಯ **ಮಾಯಾಲೋಕ** ಅಸಮಾನ **ಬದುಕು** ಸಾಕ್ಷಿಯಾಗಿವೆ. ನಾಗವೇಣಿಯವರ **ಗಾಂಧಿ ಬಂದ** ಹಾಗೂ ಬಲ್ಲಾಳರ **ಹೆಜ್ಜೆ**ಗಳ ಪ್ರಾದೇಶಿಕ ಹಿನ್ನೆಲೆ ಒಂದೇ ಆಗಿರುವುದು ಹಾಗೂ ಘಟನೆಗಳ ಕಾರ್ಯಕ್ರಮದಲ್ಲಿ ಸಾತತ್ಯವಿರುವುದು ಈ ಎರಡೂ ಕಾದಂಬರಿಗಳ ತುಲನೆಯ ಸಮರ್ಪಕತೆಯನ್ನು ಸಮರ್ಥಿಸುತ್ತವೆ. ರಾಜಗೋಪಾಲರಿಗೆ ಈ ಕಾದಂಬರಿಗಳ ಸಮಾನತೆಯಂತೆ ಅವುಗಳ ಭಿನ್ನತೆಯೂ ಮಹತ್ತ್ವದ್ದೆನಿಸಿದೆ. ಗಾಂಧಿಯುಗದಲ್ಲಿ ನಡೆದ ಸಾಮಾಜಿಕ ಪಲ್ಲಟ ಎರಡೂ ಕಾದಂಬರಿಗಳ ವಸ್ತುವಾದರೂ ನಾಗವೇಣಿಯವರ ಕಾದಂಬರಿಯಲ್ಲಿ ತುಳುನಾಡಿನ ಸಂಸ್ಕೃತಿಯ ಅನಾವರಣ ಮುಖ್ಯವಾದರೆ, ಬಲ್ಲಾಳರ ಕಾದಂಬರಿಯಲ್ಲಿ ಗಾಂಧಿ ವಿಚಾರಗಳ ಪ್ರಭಾವವೇ ಕೇಂದ್ರದಲ್ಲಿದೆ ಎನ್ನುವುದನ್ನು ರಾಜಗೋಪಾಲ್ ವಿವರಗಳಲ್ಲಿ ಸ್ಥಾಪಿಸುತ್ತಾರೆ.

**ಗಾಂಧಿ ಬಂಧ** ಹಾಗೂ **ಹೆಜ್ಜೆ**ಗಳ ನಡುವಿನ ಹೋಲಿಕೆ ಒಮ್ಮೆಲೆ ಕಂಡು ಬರುವಂಥದು. ಆದರೆ ತೇಜಸ್ವಿಯವರ **ಮಾಯಾಲೋಕ** ಹಾಗೂ ಗೀತಾ ನಾಗಭೂಷಣರ **ಬದುಕು** ಕಾದಂಬರಿಗಳ ವಿಷಯ ಹಾಗಲ್ಲ. ವಿಮಲಾ ರಾಜಗೋಪಾಲರಿಗೆ ಈ ಹೋಲಿಕೆ ಹೊಳೆದದ್ದೇ ಸಾಹಿತ್ಯದ ಪರಂಪರೆಯ ಬಗ್ಗೆ ಅವರಲ್ಲಿರುವ ತಿಳಿವಿನ ದ್ಯೋತಕವಾಗಿದೆ. 'ಅವೆರಡನ್ನೂ ತುಲನಾತ್ಮಕವಾಗಿ ನೋಡಿದಾಗ ಕಾಣುವ ಸಾದೃಶ್ಯ – ವೈದೃಶ್ಯಗಳು ತುಂಬ ಸ್ವಾರಸ್ಯಕರವಾಗಿವೆ'. ಈ ಎರಡೂ ಕಾದಂಬರಿಯಲ್ಲಿ ಕಂಡುಬರುವುದು ಸಮಾಜದ, ಪರಿಸರದ, ವಿವಿಧ ಮುಖಗಳು. **ಮಾಯಾಲೋಕ** ನಿತ್ಯ ಜೀವನದ ವಾಸ್ತವತೆಯ ಮೇಲೆ ಮಾಯೆಯ ಮುಸುಕು ಹೊದಿಸಿದರೆ **ಬದುಕು**

ನಿತ್ಯ ಜೀವನದ ಮೇಲಿನ ಮುಸುಕನ್ನು ಕಿತ್ತೊಗೆದು ಅದನ್ನು ಬತ್ತಲಾಗಿ ತೋರಿಸುತ್ತದೆ ಎಂದು ಹೇಳಿ ಈ ಸಾದೃಶ್ಯ- ವೈದೃಶ್ಯಗಳ ಸ್ವರೂಪದ ಮೇಲೆ ವಿಮಲಾ ಅವರು ಬೆಳಕು ಚೆಲ್ಲಿದ್ದಾರೆ. ಗಾತ್ರದಲ್ಲಿ, ಶೈಲಿಯಲ್ಲಿ ಕಥನದ ರೀತಿಯಲ್ಲಿ ಸಾಕಷ್ಟು ಭಿನ್ನತೆ ಇದ್ದರೂ ಇವೆರಡೂ ಕಾದಂಬರಿಗಳ ತುಲನೆ ಉಪಯುಕ್ತವಾಗಿದೆ ಎಂದೆನಿಸುತ್ತದೆ.

ಈ ಸಂಕಲನದಲ್ಲಿ ಪ್ರಸಿದ್ಧ ಕಾದಂಬರಿಕಾರರ ಕೃತಿಗಳ ಸಮೀಕ್ಷೆಯೊಡನೆ ಹಲವಾರು ಹೊಸ ಲೇಖಕರ ಕೃತಿಗಳೂ ಪರಾಮರ್ಶೆಗೆ ಒಳಗಾದುದು ಸಂತೋಷದ ವಿಷಯವಾಗಿದೆ. **ಎನ್ನ ಭವದ ಕೇಡು** ಸುರೇಂದ್ರನಾಥರ ಪ್ರಥಮ ಕಾದಂಬರಿ. ಆದರೆ ಎಂ. ಆರ್. ದತ್ತಾತ್ರಿಯವರು ಅದನ್ನು ತುಂಬ ಗಂಭೀರವಾಗಿಯೇ ಓದಿದ್ದಾರೆ. ಮುಖ್ಯವಾಹಿನಿಯ ಹೊರಗಿನ ಓದುಗರನ್ನು ಬಯಸುವ ಕಾದಂಬರಿಗಳು ಕನ್ನಡಕ್ಕೆ ಹೊಸತೇನಲ್ಲ ಎನ್ನುವುದನ್ನು **ಸಂಸ್ಕಾರ**ದಂಥ ಕೃತಿಗಳು ಈಗಾಗಲೇ ಸಾಬೀತುಪಡಿಸಿವೆ. ಈ ಕಾದಂಬರಿಯಲ್ಲಿ ನಡೆಯುವ ಜೀವನ ವಿಮುಖಿ ಮಾಮಿ ಹಾಗೂ ಪ್ರತಿಹಿಂಸೆಯ ಭಾವನೆಯ ಜೋರಿನಲ್ಲಿ ಬದುಕನ್ನು ನಿರಾಕರಿಸುವ ಸರಸ್ವತಿ ಇವರ ಮುಖಾಮುಖಿಯಲ್ಲಿ ಕತೆಯ ಕೇಂದ್ರವನ್ನು ದತ್ತಾತ್ರಿ ಸರಿಯಾಗಿಯೇ ಗುರುತಿಸಿದ್ದಾರೆ. ಇದಕ್ಕೂ ಹೆಚ್ಚಾಗಿ ಕಾಮದಂಥ ವಸ್ತುವನ್ನು ನಿರ್ವಹಿಸುವಲ್ಲಿ ಸುರೇಂದ್ರನಾಥ ಪರಿಚಿತ ಮಾದರಿಗಳನ್ನು ಬಿಟ್ಟುಕೊಟ್ಟು. ಹೆಚ್ಚಿನ ರಹಸ್ಯಶೋಧದ ಸಾಹಸಕ್ಕೆ ಕೈಹಾಕಿರುವುದರ ಮಹತ್ತ್ವವನ್ನು ಅವರು ಎತ್ತಿ ತೋರಿಸಿದ್ದಾರೆ.

'ಮಾನವೀಯ ಕಲೆಗಳು ಸ್ವಾನುಭವಕ್ಕಷ್ಟೇ ದಕ್ಕುವಂತಹದ್ದಾಗಿ ವಿಮರ್ಶೆಯ ಮಾತುಗಳಿಂದ ಮುನ್ನೂರು ಅಡಿ ಮೇಲಿರುತ್ತವೆ' ಎನ್ನುವ ದತ್ತಾತ್ರಿಯವರ ಮಾತು ನೂರಕ್ಕೆ ನೂರರಷ್ಟು ಸತ್ಯವಾದರೂ, ಕಲೆಗಳ ಅನುಭವವನ್ನು ಭಾಷೆಯ ನೆಲೆಯಲ್ಲಾದರೂ ಹಂಚಿಕೊಳ್ಳುವುದು ಸಾಧ್ಯವಿದೆಯೆನ್ನುವುದೂ ನಿಜ. ವಿಮರ್ಶೆಯೆಂದರೆ ಈ ಹಂಚಿಕೊಳ್ಳುವಿಕೆಯೇ. ನಾರ್ತ್ರಪ್ ಫ್ರಾಯ್ ಹೇಳಿದಂತೆ 'it is impossible to teach or learn literature, what one teaches and learns is criticism'. ಆದ್ದರಿಂದ ವಿಮರ್ಶೆಯ ಮಹತ್ವವನ್ನು ಕಡೆಗಣಿಸುವಂತಿಲ್ಲ.

ಧಾರವಾಡ
ಏಪ್ರಿಲ್ ೨೭, ೨೦೦೯

**ಡಾ. ಜಿ.ಎಸ್.ಆಮೂರ**

# ಲಂಕೇಶರ 'ಅಕ್ಕ'

-ಗುರುಪ್ರಸಾದ್ ಕಾಗಿನೆಲೆ, ರಾಚೆಸ್ಟರ್, ಮಿನಿಸೋಟ

ಒಂದು ಪೀಳಿಗೆಗೆ ಸಂವೇದನೆ ಮತ್ತು ತನ್ಮೂಲಕ ಒಂದು ಸಂಸ್ಕೃತಿಯನ್ನು ಕಟ್ಟಿಕೊಡುವುದರಲ್ಲಿ ಲಂಕೇಶರದು ಮಹತ್ತರವಾದ ಪಾತ್ರ. ಕತೆ, ಕಾದಂಬರಿ, ಕವಿತೆ, ನಾಟಕ, ಅಂಕಣ, ಸಿನೆಮಾ, ಪತ್ರಿಕೋದ್ಯಮ, ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೈಯಾಡಿಸಿ ತಮ್ಮ ಒಳನೋಟಗಳನ್ನು ಸಮಷ್ಟಿಗೆ ಸಮರ್ಪಿಸಿದ್ದರು ಹಾಗೂ ಈ ಮೂಲಕ ಸಮಷ್ಟಿಯೊಂದಿಗೆ ತಮ್ಮನ್ನು ಸಮೀಕರಿಸಿಕೊಂಡಿದ್ದರು, ಲಂಕೇಶ್. ತಮ್ಮ ಕಾಳಜಿಯನ್ನು ಇಡೀ ಸಮುದಾಯದ ಕಾಳಜಿಯನ್ನಾಗಿಸಿ, ತಮ್ಮ ಸಿಟ್ಟನ್ನೂ ಮತ್ತು ಪ್ರೀತಿಯನ್ನೂ ಏಕಕಾಲದಲ್ಲಿ ತಮ್ಮ ಜತೆಗಿದ್ದ ಪಥಿಕರೂ ಸುತ್ತಲೂ ಇದ್ದ ಅಭಿಮಾನಿಗಳೂ ಅನುಭವಿಸುವಂತೆ ಮಾಡಬಲ್ಲ ನೈಪುಣ್ಯ ಲಂಕೇಶರದಾಗಿತ್ತು. ತಮ್ಮ ವಿಶಿಷ್ಟ ಶೈಲಿ, ವಿಲಕ್ಷಣ ವ್ಯಕ್ತಿತ್ವ, ದೈತ್ಯ ಪ್ರತಿಭೆ ಮತ್ತು ಭಾಷೆಯಿಂದ (ಇವರ ಭಾಷೆಯನ್ನು ಪಾರದರ್ಶಕವಾದರೂ ಅನೇಕ ಪದರುಗಳುಳ್ಳ ಸ್ಫಟಿಕದ ಶಲಾಕ ಎಂದು ವರ್ಣಿಸುತ್ತಾರೆ, ರಾಘವೇಂದ್ರ ಪಾಟೀಲರು) ಏನೇ ಬರೆದರೂ ಯಾವುದೇ ವಸ್ತುವಿನ ಬಗ್ಗೆ ಬರೆದರೂ ತಮ್ಮ ಛಾಪನ್ನು ಉಳಿಸಿಕೊಂಡವರು ಲಂಕೇಶ್. ಪತ್ರಿಕೆಯ ಜತೆಗೆ ಒಂದು ಜನಾಂಗವನ್ನು ಲಂಕೇಶರು ಹೇಗೆ ಬೆಳೆಸಿದರೆಂದರೆ, ಅವರು ಬರೆದದ್ದನ್ನು ಒಂದು ಪೀಳಿಗೆ ಪ್ರಶ್ನಿಸದೇ ಒಪ್ಪುವ ಪರಿಸ್ಥಿತಿ ಒಂದು ಕಾಲದಲ್ಲಿ ಇತ್ತು. ಹೆಮಿಂಗ್ವೇಯ ಬೇಟೆಯ ಕಥೆಗಳ ಬಗ್ಗೆ ಲಂಕೇಶರು ಬರೆಯಲಿ, ಯೇಟ್ಸನ ಕಾವ್ಯವನ್ನು ಅನುವಾದಿಸಲಿ, ಈಡಿಪಸ್ ನಾಟಕವಾಗಲಿ, ಅವನ್ನು ಕನ್ನಡವಾಗಿಸುವ ಶಕ್ತಿ ಲಂಕೇಶರ ಗದ್ಯಕ್ಕಿತ್ತು. ಹೆಮಿಂಗ್ವೇ ಒಬ್ಬ ಇಂಗ್ಲಿಷ್ ಲೇಖಕ ಅನ್ನುವ ವಿಷಯ ಓದುಗರಿಗೆ ಮುಖ್ಯವಾಗುತ್ತಲೇ ಇರಲಿಲ್ಲ. ಇದು ಬರೀ ಭಾಷೆಯ ಬಗ್ಗೆ ಲಂಕೇಶರಿಗಿದ್ದ ಹಿಡಿತ ಅಥವಾ ಅನುವಾದ ಕ್ರಿಯೆಯ ಪರಿಣತಿ ಮಾತ್ರ ಅಲ್ಲ, ಯಾವುದೇ ವಿಷಯವನ್ನು ಅಥವಾ ಯಾವುದೇ ಲೇಖಕನನ್ನು ಕನ್ನಡದಲ್ಲಿ ಓದಿಕೊಳ್ಳಬಹುದು ಅನ್ನುವ ನಂಬಿಕೆ ಅವರಲ್ಲಿತ್ತು. ಅವರೇ

ಗಳಿಸಿಕೊಂಡ ಅವರ ಗದ್ಯದಿಂದ ಲಂಕೇಶರು ಯಾರ ಬಗ್ಗೆ ಏನೇ ಬರೆದರೂ ಅದು ಎಷ್ಟು ಅಥೆಂಟಿಕ್ ಆಗಿರುತ್ತಿತ್ತು ಎಂದರೆ, ಬೋದಿಲೇರನನ್ನು ಬೇರೆ ಯಾವ ಭಾಷೆಯಲ್ಲಿ ಓದದೇ ಇದ್ದರೂ ಬರೀ 'ಪಾಪದ ಹೂವುಗಳು' ಓದಿಯೇ ಬೋದಿಲೇರನ ಬಗ್ಗೆ ಅಧಿಕೃತವಾಗಿ ಮಾತಾಡಬಲ್ಲ ಮತ್ತು ಆದೇ ಶೈಲಿಯಲ್ಲಿ ಕಾವ್ಯಗಳನ್ನು ಕಟ್ಟಿಕೊಡುವ ಧೈರ್ಯವನ್ನು ಕನ್ನಡಕ್ಕೆ ಕೊಟ್ಟ ಪ್ರತಿಭೆ ಲಂಕೇಶರದು.

ಲಂಕೇಶರು ಬರೆದದ್ದು ಮೂರು ಕಾದಂಬರಿಗಳನ್ನು. 'ಬಿರುಕು' 'ಮುಸ್ಸಂಜೆಯ ಕಥಾ ಪ್ರಸಂಗ' ಮತ್ತು 'ಅಕ್ಕ'. ಬಿರುಕು ಕಾದಂಬರಿ ನವ್ಯವು ಉತ್ತುಂಗ ಸ್ಥಿತಿಯಲ್ಲಿದ್ದಾಗ ಬಂದ ಕಾದಂಬರಿ. ಹಳ್ಳಿಯಿಂದ ಪಟ್ಟಣಕ್ಕೆ ಬಂದು ನಗರದ ಜೀವನದ- ಅದರಲ್ಲೂ ಮುಖ್ಯವಾಗಿ ವಿಶ್ವವಿದ್ಯಾನಿಲಯದ ಹಾಗೂ ಸಾಹಿತ್ಯಿಕ ಬಳಗದ ಬೂಟಾಟಿಕೆಯನ್ನು ಒಪ್ಪಿಕೊಳ್ಳಬೇಕೋ ಬಿಡಬೇಕೋ ಅರಿಯದೆ ತೊಳಲಾಡುವ ಯುವಕ ಬಸವರಾಜು ಮತ್ತು ಅವನ ಪರಿಸರವನ್ನು ಅಸ್ತಿತ್ವವಾದೀ ನೆಲೆಯಲ್ಲಿ ಹೇಳಿರುವ ಕತೆ. 'ಮುಸ್ಸಂಜೆಯ ಕಥಾ ಪ್ರಸಂಗ' ಒಂದು ಹಳ್ಳಿಯ ಸ್ಥಿತಿಯನ್ನು ಮುಖ್ಯವಾಗಿ ಅದರ ಅಧಃಪತನವನ್ನು ವಿಸ್ತೃತವಾಗಿ, ವೈನೋದಿಕವಾಗಿ ಹೇಳಿಕೊಳ್ಳುತ್ತಾ ಹೋಗುತ್ತದೆ. ಹಾಗೆ ಹೇಳುವಾಗ ಆ ಹಳ್ಳಿಯ ಜನಗಳ ಪ್ರೀತಿ, ದ್ವೇಷಗಳು, ಜಗಳ, ವೈಮನಸ್ಯ, ಮದುವೆ ಮುಂಜಿಗಳ ಸಡಗರಗಳನ್ನು, ಸಾವು ತಿಥಿಗಳ ವಿಷಾದವನ್ನು ಆದ್ಯಂತಿಕವಾಗಿ ಹೇಳುತ್ತದೆ.

'ಅಕ್ಕ' ೧೯೯೧ರಲ್ಲಿ ಪುಸ್ತಕರೂಪದಲ್ಲಿ ಬಿಡುಗಡೆಯಾದ ಕಾದಂಬರಿ. ಅದನ್ನು ಲಂಕೇಶರು ಬರೆದದ್ದು ೧೯೮೨-೧೯೮೩ರಲ್ಲಿ. ಇದರ ಕಥನ ಲಂಕೇಶರಲ್ಲಿ ಮೂಡಿಬಂದ ಪರಿಯನ್ನು ಅವರೇ ಒಂದು ಕಡೆ ಹೇಳುತ್ತಾರೆ-

'೧೯೮೨ರ ನವೆಂಬರ್‌ನಲ್ಲಿ ಕರ್ನಾಟಕದ ಶಾಸನಸಭೆಗೆ ಚುನಾವಣೆಯ ತಯಾರಿ ನಡೆದಿತ್ತು. ಆಗ ನಾನು ವರದಿಗಾರನಾಗಿ ಲಾಲ್‌ಬಾಗ್ ರಸ್ತೆಯ ಕೊಳೆಗೇರಿಯೊಂದಕ್ಕೆ ಹೋಗಿದ್ದಾಗ ಅಲ್ಲೊಬ್ಬ ಪುಟ್ಟ ಹುಡುಗ ಗಾಢ ದುಗುಡದಲ್ಲಿ ಕೂತಿದ್ದ. ಕುತೂಹಲಕ್ಕೆ ವಿಚಾರಿಸಹೋದಾಗ 'ಅಕ್ಕ ನಾಕ್ ದಿನದಿಂದ ಮನೆಗೆ ಬಂದಿಲ್ಲ, ಅವಳವ್‌ನ!' ಅಂದು ಮುಖ ಮುಚ್ಚಿಕೊಂಡು ಅಳತೊಡಗಿದ. ೧೯೮೨ರ ನವೆಂಬರ್‌ನಿಂದ ೧೯೮೩ರ ಮಾರ್ಚ್‌ವರೆಗೆ (ಚುನಾವಣೆಯ ಅಬ್ಬರದ ಎರಡು ವಾರ ಬಿಟ್ಟು) ಅವನ ಕತೆ 'ಪತ್ರಿಕೆ'ಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು...'

ಇದು ಕ್ಯಾತ ಅಥವಾ ಕೃಷ್ಣ ಎನ್ನುವ ಕೊಳೆಗೇರಿಯ ಹುಡುಗ ಮುಂದೊಂದು ದಿನ ಹೇಳಿಕೊಳ್ಳುವ ತನ್ನದೇ ಕತೆ. ಇದರ ನಿರೂಪಕ ಕ್ಯಾತ. ಕ್ಯಾತ, ಉಸಾ, ನೀಳಾದೇವಿ, ನರಸಿಂಹಯ್ಯ, ವೆಂಕಟ್ರಾಮ್ ಇಂತಹ ಜನಪ್ರಿಯ ಕಾದಂಬರಿಕಾರರ ಕಾದಂಬರಿಗಳನ್ನು ಓದಿಕೊಂಡು ತನ್ನ ಸಂವೇದನೆಗಳನ್ನು ರೂಪಿಸಿಕೊಂಡಿದ್ದಾನೆ. ಆದ್ದರಿಂದ ಅವನ

ನಿರೂಪಣೆಯಲ್ಲಿನ ಗುಣದೋಷಗಳು ಕ್ಯಾತನದೇ ಆಗಿವೆ ಮತ್ತು ಅದರ ಕಾರಣ ಅವನ ಸಂವೇದನೆಯನ್ನು ರೂಪಿಸುವ ಇತರೇ ಕನ್ನಡದ ಜನಪ್ರಿಯ ಲೇಖಕರೇ ಆಗಿದ್ದಾರೆ.

'ಈ ಕುರ್ಚಿ, ಮೇಜಲ್ಲಿ ಕುಂತ್ ಕೂಡಲೇ ಒಣಾ ಎಗ್ಗು ಬಂದು ನಾನಾಗಲೇ ಉಸಾ, ನರಸಿಂಹಯ್ಯ, ನೀಳಾದೇವಿ ಆಗಿಬಿಟ್ಟೆ ಅನ್ನೋ ಅಹಂಕಾರ ಬಂದುಬಿಡುತ್ತೇ. ಅವರೆಲ್ಲಿ, ಈ ಕ್ಯಾತ ಎಲ್ಲಿ. ಸಾರ್. ಬೀದಿಬದೀಲಿ ಸೆಕೆಂಡ್ ಹ್ಯಾಂಡ್ ಅಂಗಡೀಲಿ ಅವರ ಪುಸ್ತಕಗಳನ್ನು ಓದಿ ಯೋಚ್ನೆ ಮಾಡಿ ಬೆಳೆದೋನು ನಾನು. ಅದಕ್ಕೇ ತುಂಬಾ ಹುಸಾರಾಗಿ, ಸಾಹಿತಿ ಅನ್ನೋ ದವಲತ್ತು ಬೆಳೆಸಿಕೊಳ್ಳದೆ, ಕಲ್ಪನೆಗೆ ಅವಕಾಸ ಕೊಡದೆ ನನಗೆ ಅನ್ನಿಸಿದ್ದನ್ನ ಹಾಗೇ ಬರೀತಿದ್ದೇನೆ' ಅಂತಲೇ ಕಾದಂಬರಿಯನ್ನು ಆರಂಭಿಸುತ್ತಾನೆ, ಕ್ಯಾತ ಎನ್ನುವ ನಿರೂಪಕ. ಇದೊಂದು ರೀತಿ, ಲಂಕೇಶರು ಕಾದಂಬರಿಯ ಶೈಲಿಗೆ, ಕಥನಕ್ಕೆ, ಭಾಷೆಗೆ ಕಾದಂಬರಿಯ ಆರಂಭದಲ್ಲಿಯೇ ಓದುಗರನ್ನು ಸಿದ್ಧಮಾಡುವ ಮತ್ತು ಹಾಗೆಯೇ ಪಡಕೊಳ್ಳುವ ಒಂದು ರೀತಿಯ ನಿರೀಕ್ಷಣಾ ಜಾಮೀನೆಂದೂ ಏಕಕಾಲದಲ್ಲಿ ಅನಿಸುತ್ತದೆ.

ಅಷ್ಟೇ ಅಲ್ಲ. ಕ್ಯಾತ ತನ್ನ ಕಥೆಯನ್ನು ಹೇಳುವುದು ಅವನಿಗೆ ಹದಿನೈದೋ, ಹದಿನೆಂಟೋ ವಯಸ್ಸಾಗಿದ್ದಾಗ ಮತ್ತು ಆತ ಅನಾಥಾಶ್ರಮದಲ್ಲಿ ಲೆಕ್ಕ ಬರೆಯುವ ಕೆಲಸ ಮಾಡಲು ಸೇರಿಕೊಂಡಾಗ ಆತ ಒಂದು ಎಕ್ಸರ್‌ಸೈಜ಼್ ಪುಸ್ತಕದಷ್ಟು ಜಾಗದಲ್ಲಿ ಮಾತ್ರ ತನ್ನ ಕತೆಯನ್ನು ನಮಗೆ ಹೇಳಲಿಕ್ಕೆ ಹೋಗುತ್ತಾ 'ಇಪರ್ಯಾಸ' ಆಗಿ ಹೋಗಿ ದೊಡ್ಡ ಕತೆಯಾಗಿಬಿಡುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿರುವ ವಿಷಯವೆಂದರೆ, ನಿರೂಪಕ ಕೊಳೆಗೇರಿಯ ಹುಡುಗ. ಆತ ಹಿಂದೆಂದೋ ಆಗಿರುವ ತನ್ನ ಕತೆಯನ್ನು, ಕೇವಲ ನೆನಪಿನಿಂದ ಮಾತ್ರ ಹೇಳುತ್ತಿದ್ದಾನೆ, ಅಲ್ಲ ಬರೆಯುತ್ತಿದ್ದಾನೆ. ಯಾಕೆ ಬರೆಯುತ್ತಿದ್ದಾನೆ, ಹೇಗೆ ಬರೆಯುತ್ತಿದ್ದಾನೆ ಎನ್ನುವುದಕ್ಕೆ ಸಮಜಾಯಿಷಿಗಳನ್ನು ಕತೆಯ ಆರಂಭದಲ್ಲಿಯೇ ಕೊಡುತ್ತಾನೆ ಆತ– 'ನಂದು ಕೆಟ್ಟ ತಲೆ ಸಾರ್. ಅದರ ತುಂಬಾ ಒಂದಕ್ಕೊಂದು ತಗುಲಿಕೊಂಡು ಕಿತ್ತಾಡೋ ಐಟಂಗಳೇ. ನಾನು ನಾಲ್ಕು ಸಾಲು ಬರೆದರ ಒಂದು ಬೈಗುಳ ಬರುತ್ತೆ. ಅದಕ್ಕೇ ನಾನು ಬರೆದುಬಿಟ್ರೆ ಕನ್ನಡಮ್ಮನಿಗೆ ನೋವಾದೀತು ಅಂತ ಸುಮ್ಮನೇ ಇದ್ದೆ. ಆದ್ರೆ ಜೀವ ತಡೀಲಿಲ್ಲ ಸಾರ್... ನನ್ನ ಮಾತೂ ಹಂಗೇಯ. ಯೋಚಿಸಿ ನೋಡಿದ್ರೆ ಅದು ಮಾತೇ ಅಲ್ಲ. ನರಸಿಂಹ ಮೇಸ್ತ್ರಿ, ಖಡವಾ ಇಂತವ್ರನೆಲ್ಲಾ ಬಯ್ದರೆ ಅದು ಬಯ್ಗಳ. ನಮ್ಮ ಪದ್ದಿ, ಮಾದೇವಿ, ಸಂಪೂರ್ಣಮ್ಮನ್ನ ಬೈದರೆ ಅದು ಬೈಗುಳ ಅಲ್ಲ. ಇದು ದಯವಿಟ್ಟು ತಮ್ಮ ಗಮನದಲ್ಲಿರಲಿ. ನಾನು ಬೈದದ್ದು ಬೈದಂಗಲ್ಲ ಎನ್ನಿಸಿದರೆ ಕತೆಯ ಮಜಾ ಕೆಡುತ್ತಲ್ವಾ ಸಾರ್... ನಾನು ತುಂಬಾ ಅವಸರದೋನು. ಒಂದು ಹೇಳೋಕೆ ಹೋಗಿ ಎರಡು

ಹೇಳೋದೂ ಈ ಅವಸರದಲ್ಲೇ. ಅದು ಅಪಾಯವಿಲ್ಲ. ಎರಡು ಹೇಳಬೇಕಾದಾಗ ಒಂದೇ ಹೇಳಿ ಕಂಬಿ ಕಿತ್ತೋದು ನನ್ನ ಚಾಳಿ. ಆವಾಗ ನೀವು ಕಲ್ಪಿಸಿಕೊಳ್ಳಬೇಕಾಗುತ್ತೆ. ಸಾಹಿತ್ಯ ಅಂದ್ರೆ ಅದೇ ಅಂತ ಮೈಸೂರು ಕಡೆ ಸಾಹಿತಿಗಳು ಈಚೆಗೆ ಹೇಳ್ತಿದ್ದಾರಂತೆ. ಒಂದು ಸೀನ್ ಕೊಟ್ರೆ ಎರಡು ಸೀನ್ ನಿಮ್ಮ ತಲೇಲಿ ಬಂದ್ರೆ ನಂಗೂ ಒಳ್ಳೇದು, ನಿಮಗೂ ಮಜಾ.'

ಓದುಗನಿಗೆ ಇಂಥಾ ಒಂದು ಕಾದಂಬರಿಯಿಂದ ಏನನ್ನು ನಿರೀಕ್ಷಿಸಬಹುದು ಎನ್ನುವುದನ್ನು ತಮ್ಮ ಪೀಠಿಕೆಯಂತಿರುವ ಮೊದಲ ಅಧ್ಯಾಯದಲ್ಲಿಯೇ ಹೇಳುತ್ತಾರೆ, ಲಂಕೇಶ್. ಇದರಲ್ಲಿ ಕ್ಯಾತ ತಾನು ಕೊಳೆಗೇರಿಯಲ್ಲಿದ್ದಾಗಿನ ಬದುಕನ್ನು ಕೇವಲ ನೆನಪಿನಿಂದ ಮಾತ್ರ ಹೇಳುತ್ತಿರುವಾಗ ಘಟನೆಗಳ ತುಣುಕಷ್ಟೇ ನಮ್ಮ ಮುಂದೆ ಇಡಬಹುದು. ಅದನ್ನು ಜೋಡಿಸಿಕೊಂಡು, ಖಾಲಿ ಇದ್ದಲ್ಲಿ ತುಂಬಿಸಿಕೊಂಡು ಮಧ್ಯೆ ಊಹಿಸಿಕೊಂಡು ನಮಗೆ ಬೇಕಾದ ಕಥೆ ಕಟ್ಟಿಕೊಳ್ಳುವ ಜವಾಬ್ದಾರಿ ಓದುಗರದ್ದು ಕೂಡ. ಇಲ್ಲಿ ಲಂಕೇಶರು ತಮ್ಮ ಅರಿವಿಗೆ ಬಂದ ಕೊಳೆಗೇರಿಯ ಬದುಕನ್ನು ಮಾತ್ರ ಅನಾವರಣ ಮಾಡಲಿಕ್ಕೆ ಈ ಉತ್ತಮ ಪುರುಷ ನಿರೂಪಣೆ ಮತ್ತು ನೆನಪಿನಾಳದಿಂದ ಕತೆಯನ್ನು ಹೆಕ್ಕಿಕೊಳ್ಳುವ ತಂತ್ರವನ್ನು ಬಹಳ ಜಾಣತನದಿಂದ ಉಪಯೋಗಿಸಿ-ಕೊಂಡಿದ್ದಾರೆ. ಲೇಖಕರ ಅರಿವಿಗೆ ಬರದ ಕೊಳೆಗೇರಿಯ ಇನ್ನೊಂದು ರೂಪ ಕ್ಯಾತನಿಗೂ ಬಂದಿಲ್ಲ ಅಥವಾ ಅದನ್ನು ಆತ ಹೇಳಲು ಮರೆತಿದ್ದಾನೆ. ಉತ್ತಮ ಪುರುಷದ ಮತ್ತು ಭೂತಕಾಲದ ಘಟನೆಯೊಂದರ ನಿರೂಪಣೆಯ ಅತಿ ಜಾಣತನದ ಉಪಯೋಗ ಇದು.

ಕೊಳೆಗೇರಿಯ ವಿಶೇಷತೆಯಿರುವುದು ಅದು ನಗರವೂ ಅಲ್ಲ, ಹಳ್ಳಿಯೂ ಅಲ್ಲ. ನಗರದ ಒಂದು ಮಗ್ಗುಲಿಗೇ ಇದ್ದರೂ ನಗರದ ಜನರ ಸವಲತ್ತುಗಳಿಂದ ವಂಚಿತರಾಗಿದ್ದಾರೆ, ಇವರು. ಇಲ್ಲಿನ ಜನ ವಾಸಿಸುವುದು ಮಾತ್ರ ಒಂದು ಸಣ್ಣ ಹಳ್ಳಿಯಲ್ಲಿದ್ದಂತೆ. ಪರಸ್ಪರರ ಕಷ್ಟ, ಸುಖಗಳಲ್ಲಿ ಒಂದಾಗುವ, ಹಬ್ಬ ಹರಿದಿನಗಳನ್ನು ಒಟ್ಟಿಗೇ ಆಚರಿಸುವ ಹಾಗೆಯೇ ಅಲ್ಲಿನ ಹೊಡೆದಾಟಗಳು, ಈ ಜನಗಳ ಬಡತನದಿಂದಾಗುವ . ಅಸಹಾಯಕತೆಯ ಉಪಯೋಗವನ್ನು ಪಡಕೊಳ್ಳುವ ರಾಜಕಾರಣಿಗಳು ಮತ್ತು ಅಲ್ಲಿಯೇ ಇರುವ ಇನ್ನಿತರ ಬಲಿಷ್ಠರು-ದುರ್ಬಲರು ಎಲ್ಲಾ ಇದೆ. ಅಷ್ಟೇ ಆಗಿದ್ದರೆ ಅದು ವಿಶೇಷವಲ್ಲ. ಆದರೆ ಈ ಎಲ್ಲ ಕ್ರಿಯೆಗಳ ನೇರ ಅನುಭವ ಅಲ್ಲಿ ಇರುವ ಎಲ್ಲರಿಗೂ ಆಗುವುದು ಮಾತ್ರ ಒಂದು ದೊಡ್ಡ ಹಳ್ಳಿಯಲ್ಲಿದ್ದಂತೆ- ಇವೆಲ್ಲಾ ಹಳ್ಳಿಯ ಗುಣಗಳು. ಆದರೆ, ಇಲ್ಲಿ ವಾಸವಾಗಿರುವ ಜನಗಳ ಕಾರ್ಯಕಾರಣ ಸಂಬಂಧವಿರುವುದು ನಗರದ ಜತೆಗೆ. ಅವರ ಕೆಲಸಗಳೇನಿದ್ದರೂ ನಗರದ ಸಿನೆಮಾ ಟಾಕೀಸುಗಳಲ್ಲಿ, ರೇಸ್‌ಕೋರ್ಸ್‌ನಲ್ಲಿ. ಅವರ ಆಸೆ, ಆಕಾಂಕ್ಷೆಗಳೇನಿದ್ದರೂ ನಗರದ ಪರಿಸರದ ಸುತ್ತಲೇ ಸುತ್ತುತ್ತವೆ.

ಇಂಥ ಲೋಕವನ್ನು ಒಬ್ಬ ಸಂವೇದನಾಶೀಲ ಕತೆಗಾರ ಅನಾವರಣ ಮಾಡುವಾಗ ಅಥವಾ ಇದರ ಬಗ್ಗೆ ಸಿನೆಮಾ ಮಾಡುವಾಗ ಮೊದಲು ಎದುರಾಗುವ ಸಮಸ್ಯೆ ಕೊಳೆಗೇರಿಯ ಬಗ್ಗೆ ರೊಮ್ಯಾಂಟಿಕ್ ಆದ ಅತೀ ಅನುಕಂಪ ಅಥವಾ ಬಡತನದ ವೈಭವೀಕರಣ– ಇಂಥ ನಿರಪೇಕ್ಷವಲ್ಲದ ತೀರ್ಮಾನಗಳನ್ನು ತೆಗೆದುಕೊಳ್ಳುವುದು. ಏಕೆಂದರೆ ಕೊಳೆಗೇರಿಯಲ್ಲಿಯೇ ಇದ್ದವರು ಯಾರೂ ತಮ್ಮ ಕತೆಯನ್ನು ಶಿಷ್ಟ ಸಮುದಾಯಕ್ಕೆ (ಓದು ಬಲ್ಲ ಜನಕ್ಕೆ) ಹೇಳುವ ಸಾಧ್ಯತೆಗಳು ಕಡಿಮೆ. ಹೇಳಿದರೂ ಅದನ್ನೊಂದು ಸಾಹಿತ್ಯಿಕ ಕೃತಿಯಾಗಿ ಮಾಡುವ ಉದ್ದೇಶ ಯಾರಿಗೂ ಇರುವುದಿಲ್ಲ. ಆದ್ದರಿಂದ ಈ ಬದುಕನ್ನು ಹೊರಗಿನಿಂದ ನೋಡಿಯೇ ಬರೆಯಲು ಸಾಧ್ಯ. ಹೀಗೆ ಹೊರಗಿನಿಂದ ಈ ಬದುಕನ್ನು ನೋಡಿದಾಗ ಯಾರಿಗೂ ಸಹಜವಾಗಿಯೇ ಅನುಕಂಪ ಬರುವುದು ಅಥವಾ ಅಸಹ್ಯವೆನಿಸುವುದೂ ಅನಿವಾರ್ಯ ಕೂಡ. ಅದನ್ನು ಲಂಕೇಶರು ಬಹಳ ಚೆನ್ನಾಗಿ ಅರಿತುಕೊಂಡಿದ್ದಾರೆ. ನನ್ನ ಸೀಮಿತ ಓದಿನ ಪಟ್ಟಿಯಲ್ಲಿ, ಮುಂಬಯಿಯ ಕೊಳೆಗೇರಿಯಲ್ಲಿಯೇ ಕೆಲವರ್ಷ ಬದುಕಿದ್ದ ಆಸ್ಟ್ರೇಲಿಯಾದ ಗ್ರೆಗರಿ ಡೇವಿಡ್ ರಾಬರ್ಟ್ಸ್‌ನ 'ಶಾಂತಾರಾಂ' ಬಿಟ್ಟರೆ, ಕೊಳೆಗೇರಿಗಳನ್ನು ಚಿತ್ರಿಸಲು ಪ್ರಯತ್ನಪಟ್ಟಿರುವ ಇನ್ನೂ ಅನೇಕ ಪುಸ್ತಕಗಳಲ್ಲಿ ಅಥವಾ ಸಿನೆಮಾಗಳಲ್ಲಿ ನಮಗೆ ಇಂಥದೇ ರೊಮ್ಯಾಂಟಿಸಿಸಮ್ ಎದ್ದು ಕಾಣುತ್ತದೆ. ಇತ್ತೀಚೆಗಷ್ಟೇ ಬಹು ಚರ್ಚಿತವಾಗುತ್ತಿರುವ 'ಸ್ಲಮ್‌ಡಾಗ್ ಮಿಲಿಯನೇರ್' ಕೂಡ ತನ್ನ ಅತ್ಯುತ್ತಮ ಹೊರಗಿನ ಗ್ರಹೀತದ ನಡುವೆಯೂ ಇಂಥ ಅಂಶಗಳಿಂದ ಮುಕ್ತವಾಗಿಲ್ಲ.

ಸಿ. ಎನ್. ರಾಮಚಂದ್ರನ್ ತಮ್ಮ 'ಬಯಲು–ರೂಪ' ಕೃತಿಯಲ್ಲಿ ಲಂಕೇಶರ ಕಾದಂಬರಿಗಳ ಬಗ್ಗೆ ಬರೆಯುತ್ತಾ 'ಉತ್ತಮ ಪುರುಷದ ನಿರೂಪಣೆಯಲ್ಲಿ ನಿರೂಪಕನಿಗೂ ಮತ್ತು ಕೃತಿಯ ಸೂಚಿತ ಲೇಖಕನಿಗೂ ನಡುವೆ ಒಂದು ಅಂತರವಿದ್ದು ಈ ಅಂತರ ಓದುಗನಿಗೆ ಸ್ಪಷ್ಟವಾಗಬೇಕು' ಎಂದು ಹೇಳುತ್ತಾರೆ. ಹಾಗೆ ನೋಡಿದರೆ, ಲಂಕೇಶರ 'ಮುಸ್ಸಂಜೆಯ ಕಥಾ ಪ್ರಸಂಗ' ಲಂಕೇಶರಿಗೆ ತೀರ ಪರಿಚಯವಿರುವ ಲೋಕ. ಅವರು ಹುಟ್ಟಿ ಬೆಳೆದ ಕೊನಗವಳ್ಳಿಯನ್ನೇ ಹೋಲುವ ಕಂಬಳ್ಳಿಯಂಥ ಊರಿನ ಬಗ್ಗೆ ಬರೆಯಬೇಕಾದರೆ ಉತ್ತಮ ಪುರುಷದ ನಿರೂಪಣೆಯನ್ನು ಮಾಡಿದ್ದರೆ, ನಿರೂಪಣೆಗೆ ಒಂದು ಆಪ್ತತೆ ಸಿಕ್ಕುತ್ತಿತ್ತಾ ಎನ್ನುವುದು ಒಂದು ಪ್ರಶ್ನೆ ('ಕರ್ವಾಲೋ' ಅಥವಾ 'ಮಾಯಾಲೋಕ'ದಲ್ಲಿ ತೇಜಸ್ವಿಯವರಿಗೆ ಈ ಆಪ್ತತೆ ದೊರಕಿದೆ). ಆದರೆ ಲಂಕೇಶರಿಗೆ ಈ ಬಗೆಯ ನಿರೂಪಣೆಯ ಬಗ್ಗೆ ಸಂಶಯವಿದೆ. ತಮ್ಮ ಪರಿಚಿತ ಲೋಕವನ್ನು ಉತ್ತಮ ಪುರುಷದಲ್ಲಿ ಹೇಳಿದಾಗ ಈ ನಿರೂಪಕ ಮತ್ತು ನಾಯಕನ ನಡುವಿನ ಬಿರುಕನ್ನು ನಿಭಾಯಿಸುವುದು ತೀರ ದುಸ್ಸಾಧ್ಯವೆಂದು ಅವರಿಗೆ ಅರಿವಿದೆ. ಆದ್ದರಿಂದಲೇ ಇಲ್ಲಿ 'ಕ್ಯಾತ'ನ ಲೋಕದಲ್ಲಿ ಪರಕಾಯ ಪ್ರವೇಶ ಮಾಡಲು

ಪ್ರಯುಕ್ತಿಸಿದ್ದಾರೆ. ಅಲ್ಲಲ್ಲಿ ಕ್ಯಾತನ ಬದಲಾಗಿ ಲಂಕೇಶ್ ಬರಹಗಾರನಾಗಿ ಇಣುಕಿದರೂ ಬಹುಮಟ್ಟಿಗೆ ಈ ರೀತಿಯ ನಿರೂಪಣೆ ಲಂಕೇಶರ ಸಹಾಯಕ್ಕೆ ಬರುತ್ತದೆ.

ಹಾಗೆಂದು ಇಡೀ ಕಾದಂಬರಿ ಕೇವಲ ಉತ್ತಮ ಪುರುಷದಲ್ಲಿ ನಿರೂಪಿತವಾಗಿಲ್ಲ. ಕ್ಯಾತ ತನ್ನ ಕಥೆಯನ್ನು ಹೇಳುತ್ತಿರುವಾಗ ಅಲ್ಲಲ್ಲಿ ಅವನನ್ನು 'ನಾನು' ಎಂದು ಹೇಳಿಕೊಳ್ಳದೇ ಕ್ಯಾತ ಎಂದೇ ಕರೆದುಕೊಳ್ಳುತ್ತಾನೆ. ಈ ಕೆಳಗಿನ ಸಾಲುಗಳನ್ನು ನೋಡಿದರೆ ಇದು ಇನ್ನೂ ಸ್ಪಷ್ಟವಾಗಬಹುದು.

'ಬಲು ಜೋರಾಗಿದ್ದಾಳಲ್ಲ ಪದ್ದಿ ಅಂತ ಮನಸ್ಸಿನಲ್ಲೇ ಮೆಚ್ಚಾ ಕಾರಿನ ಮೂಲೇಲಿ ಕೂತ ಕ್ಯಾತ.'

'ಯೋಚ್ನೆ ಮಾಡ್ತಾ ಮಾಡ್ತಾ ಕ್ಯಾತನಿಗೆ ಒಂತರಾ ಆಯಿತು'

ಕತೆಯನ್ನು ನಮಗೆ ಹೇಳುತ್ತಿರುವ ಕ್ಯಾತ ಮತ್ತು ಕತೆಯಲ್ಲಿರುವ ಕ್ಯಾತನಿಗೂ ನಡುವೆ ಒಂದು ಬಿರುಕಿದೆ ಎನ್ನುವುದನ್ನು ನಮಗೆ ಸೂಚಿತವಾಗಿಸುತ್ತಾರೆ. ಈ ಪ್ರಥಮ-ಉತ್ತಮ ಪುರುಷದ ನಡುವಿನ ಜಿಗಿತ ಎಷ್ಟು ಸಲೀಸಾಗಿ ನಡೆಯುತ್ತದೆಯೆಂದರೆ ಅದು ಕಥೆಯ ಓಟಕ್ಕೆ ಎಲ್ಲೂ ಭಂಗವನ್ನು ತರುವುದೇ ಇಲ್ಲ. ಮತ್ತೆ 'ನನ್ನಂತವನ ಕತೆ ಕೇಳೋಕೆ ನೀವೇನು ನನ್ನಂಗೆ ಕ್ಯಾತನಾ ಸರ್' ಎಂದು ಮತ್ತೆ ಮತ್ತೆ ಕೇಳುವ ನಿರೂಪಕ ಕ್ಯಾತ ಬಹಳ ಬಾರಿ ತನ್ನ ಮತ್ತು ತನ್ನ ವಾಚಕವರ್ಗಕ್ಕಿರುವ ಬಿರುಕನ್ನು ಹೇಳುತ್ತಲೇ ಇರುತ್ತಾನೆ.

'ಅಕ್ಕ' ಕಾದಂಬರಿಯಲ್ಲಿ ಕಥೆಯ ಸ್ವರೂಪ ಹೀಗೇ ಎಂದು ಗೆರೆ ಕುಯ್ದು ಹಾಗೆ ಹೇಳಿಬಿಡಲಾಗುವುದಿಲ್ಲ. ಮೇಲುನೋಟಕ್ಕೆ ಇದು ಕೊಳೆಗೇರಿಯ ಹುಡುಗ ಕ್ಯಾತ ಮತ್ತು ಅವನ ಅಕ್ಕನ ಬದುಕಿನ ತುಣುಕುಗಳನ್ನು ಹೇಳುತ್ತದೆ ಎಂದನಿಸುತ್ತದೆ. ಆದರೆ ಇದು ಅಷ್ಟು ಸುಲಭಕ್ಕೆ ಸಿಗುವ ಲೀನಿಯರ್ ನಿರೂಪಣೆಯಲ್ಲ. ಇಲ್ಲಿ ಆ ಕೊಳೆಗೇರಿಯೊಂದಿಗೇ ತಳುಕು ಹಾಕಿಕೊಂಡಿರುವ ಖಡವಾ, ನಗ್ರಾಗಳಂತಹ ಸಣ್ಣ ಬಾಡಿಗೆ ರೌಡಿಗಳ ಜೀವನವಿದೆ. ಆ ಬದುಕನ್ನು ನಿಯಂತ್ರಿಸುವ ನರಸಿಂಹ ಮೇಸ್ತ್ರಿ, ರಾಮಪ್ಪನಂತಹ ರಾಜಕಾರಣಿಗಳು, ಪದ್ದಿಯಂತಹ ಮುಗ್ಧೆಯರ ಸಿನೆಮಾ ಹಂಬಲಗಳು ಮತ್ತು ಶಂಕರನಾರಾಯಣನಂತಹ ಸಿನೆಮಾ ನಿರ್ದೇಶಕರುಗಳ ಬೂಟಾಟಿಕೆ ಮತ್ತು ಅಮೂರ್ತವಾಗಿ ಸೂಚಿತವಾಗಿರುವ ಲೈಂಗಿಕ ಶೋಷಣೆ- ಹೀಗೆ ಎಲ್ಲವೂ ಕ್ಲುಪ್ತವಾಗಿ ವ್ಯಕ್ತವಾಗುತ್ತವೆ. ಕ್ಯಾತನಿಗೆ ಈ ಜಗತ್ತು ತಾನು ವಾಸಿಸುವ ಜಗತ್ತಾದುದರಿಂದ ಇಲ್ಲಿನ ಕೊಳಕು, ಗಬ್ಬುನಾತ ಅಥವಾ ದುರ್ಭರ ಜೀವನದ ಬಗ್ಗೆ ಬೆರಗಾಗಲೀ ಅನುಕಂಪವಾಗಲೀ ಇಲ್ಲ. ಹಾಗಾಗಿ ಅದನ್ನು ಒಂದು ರೀತಿಯ ಉಡಾಫೆಯಿಂದಲೇ ಹೇಳಿದರೂ ಅವನಿಗೆ ತನ್ನ ಈ ಜಗತ್ತನ್ನು ನಿಯಂತ್ರಿಸುವ ಹಲವು ಹತ್ತು

ಬಗೆಯ ಮತ್ತು ಅವನಂದುಕೊಳ್ಳುವ, ಅದಕ್ಕೆ ಸಂಬಂಧಪಟ್ಟ ಶಿಷ್ಟ ಸಮಾಜದ ಬಗ್ಗೆ ಆಸಕ್ತಿಯಿದೆ. ಹಾಗೆಯೇ ಲಂಕೇಶರಿಗೂ ಈ ಕ್ಷುದ್ರ ಜಗತ್ತಿನ ಬಗ್ಗೆ ಬರೀ ಇಣುಕು ನೋಟ ಹಾಕಿ ಬರುವ ಇರಾದೆಯಷ್ಟೇ ಇಲ್ಲ. ಹಾಗಾಗಿ ಕೊಳೆಗೇರಿಯ ಹಲವು ಮುಖಗಳನ್ನು ತನ್ನದೇ ಆದ ಕೋನದಿಂದ, ತನ್ನದೇ ತರ್ಕದಿಂದ ವಿಶ್ಲೇಷಿಸುತ್ತಾನೆ, ಕ್ಯಾತ.

ಅಕ್ಕ-ತಮ್ಮರ ಸಂಬಂಧದ ಎಳೆ ಲಂಕೇಶರ ಸಾಹಿತ್ಯದ ಒಂದು ಮುಖ್ಯವಾದ ಥೀಮ್. 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'ಯಲ್ಲಾಗಲೀ, 'ಅಕ್ಕ-ತಮ್ಮ' ಕವಿತೆಯಲ್ಲಾಗಲೀ, ಅಥವಾ 'ಅಕ್ಕ' ಕಾದಂಬರಿಯಲ್ಲಾಗಲೀ, ಈ ಆಶಯ ಮತ್ತೆಮತ್ತೆ ವ್ಯಕ್ತವಾಗಿದೆ. ಇಲ್ಲಿ ನಾವು ಗಮನಿಸಬಹುದಾದ ಇನ್ನೊಂದು ಅಂಶವೆಂದರೆ, ಈ ನೆಲೆ ಪ್ರೀತಿಯನ್ನು ಅರಸುತ್ತದೆ, ಆದರೆ ಪರಿಪೂರ್ಣವಾದ ಪ್ರೀತಿ (ಅಕ್ಕ-ತಮ್ಮರ) ಅಥವಾ ಈ ಸಂಬಂಧದ ನೆಲೆಯ ಮೂಲ ಪ್ರೀತಿ ಮಾತ್ರವೇ ಎನ್ನುವುದರ ಬಗ್ಗೆ ಲಂಕೇಶರಿಗೆ ಅನುಮಾನವಿದೆ. ಅದನ್ನೇ ಅವರು ಮತ್ತೆ ಮತ್ತೆ ಹುಡುಕುತ್ತಾರೆ. ನಗರಾಭಿಮುಖವಾಗಿ ಹೊರಟಿರುವ ಉಮಾಪತಿಯಲ್ಲಿ, ಹಳ್ಳಿಯಲ್ಲಿರುವ ಮುಗ್ಧ ಬಾಲಕನಲ್ಲಿ ಮತ್ತು ಈಗ ಈ ಕೊಳೆಗೇರಿಯಲ್ಲಿ ಈ ಸಂಬಂಧದ ವಿವಿಧ ಆಯಾಮಗಳನ್ನು ಅರ್ಥಮಾಡಿಕೊಳ್ಳಲು ಅವರು ಪ್ರಯತ್ನಪಡುತ್ತಾರೆ.

ಲಂಕೇಶರಿಗೆ ಮನುಷ್ಯನ ಅಪರಿಪೂರ್ಣತೆಯ ಬಗ್ಗೆ ಯಾವತ್ತೂ ನಂಬಿಕೆಯಿತ್ತು. ಯಾವುದೇ ಮನುಷ್ಯ ಪರಿಪೂರ್ಣನಲ್ಲ. ಹಾಗೆ ಪರಿಪೂರ್ಣ ಅಂತ ಅವನು ಭಾವಿಸಿಬಿಟ್ಟರೆ ನಂತರ ಏನನ್ನೂ ಬರೆಯಲಾರ ಎನ್ನುವ ನಂಬಿಕೆ ಅವರದ್ದು. ಅವರೇ ಹೇಳುವಂತೆ, 'ಹುಡುಗನೊಬ್ಬನಿಗೆ ಲೈಂಗಿಕ ಆಸಕ್ತಿ ಎಷ್ಟು ಚಿಕ್ಕಂದಿನಿಂದ ಆರಂಭವಾಗುತ್ತದೆ ಎಂದು ನೆನೆಸಿಕೊಂಡರೆ ನನಗೆ ಆಶ್ಚರ್ಯವಾಗುತ್ತದೆ. ಹುಡುಗಿಯೊಬ್ಬಳು ನನಗೆ ಹುಚ್ಚುಹಿಡಿಸಿದ್ದು ಸುಮಾರು ಏಳು ವರ್ಷಕ್ಕೆ ಮುಂಚೆಯೇ. ಈ ಹುಚ್ಚಿನ ಸ್ಫೋಟ ಮುಷ್ಟಿಮೈಥುನದಲ್ಲಿ, ನೋವಿನ ಬೆಳವಣಿಗೆಯಲ್ಲಿ, ಅಸ್ವಸ್ಥತೆ ಎಂಬಷ್ಟು ಮಟ್ಟಿನ ಅಂತರ್ಮುಖತೆಯಲ್ಲಿ ವ್ಯಕ್ತವಾಯಿತು. ಮಹಾ ಕುಡುಮಿಯಾಗಿದ್ದು, ಜನರಿಂದ ಪ್ರತ್ಯೇಕವಾದದ್ದು ಆಗಲೇ. ಈ ಎಲ್ಲದರ ಹಿಂದಿನ ಅಸಹಾಯಕತೆ, ಎಲ್ಲವನ್ನೂ ಒಡೆದುಹೋಗುವ ಶಕ್ತಿ ಇಲ್ಲದಿದ್ದರೂ ಹಾಗೆ ಸೀಳಿಕೊಂಡು ಮುನ್ನುಗ್ಗುವ ಆಸೆ- ಇದರ ಪರಿಣಾಮವೆಂದರೆ ಬರವಣಿಗೆ. ಮಾಡಲಾಗದವನು ಬರೆಯುತ್ತಾನೆ ಎಂದು ನಿಮಗೆ ಅನಿಸಿದರೂ ಚಿಂತೆಯಿಲ್ಲ. ಒಂದು ಬಗೆಯ ಅಪೂರ್ಣತೆ ನನ್ನನ್ನು ಬರವಣಿಗೆಗೆ ಹಚ್ಚಿತು. ಬದುಕಿನಲ್ಲಿ ದೊರೆತ ಎಲ್ಲ ನೋವು ಅವಮಾನಗಳನ್ನು ಮೀರಿ ಅದನ್ನು ನನ್ನಿಂದ ಮತ್ತು ಜನರಿಂದ ಮರೆಸಲು ನಾನು ಬರೆಯಲೇ ಬೇಕಿತ್ತು' (ಕಂಡದ್ದು ಕಂಡ ಹಾಗೆ).

ಈ ಮೇಲಿನ ವಾಕ್ಯಗಳನ್ನು ಓದಿದಾಗ 'ಅಕ್ಕ' ಕಾದಂಬರಿಯ ನಿರೂಪಕ ಕ್ಯಾತನ ಮತ್ತು ಲೇಖಕ ಲಂಕೇಶರ ಆಶಯಗಳೆಲ್ಲವೂ ಒಂದೇ ಎನಿಸುತ್ತದೆ.

ಭಾಷೆಯಲ್ಲಾಗಲೀ, ವಸ್ತುವಲ್ಲಾಗಲೀ ಏನನ್ನಾದರೂ ಶೋಧಿಸುತ್ತಾ ಹೊಸತಾದ ಕಾಣ್ಕೆಯನ್ನು ತೋರಿಸುವ ಕೆಲಸವನ್ನು ಲಂಕೇಶರು ಯಾವಾಗಲೂ ಮಾಡಿಯೇ ಇದ್ದಾರೆ. ಹಾಗಾಗಿಯೇ ಅವರಿಗೆ ಕಥನದ ವಸ್ತುವಿನಷ್ಟೇ ಕಥನದ ಶೈಲಿಯೂ ಮುಖ್ಯ. ಮಾಸ್ತಿಯವರ ಕಥೆಗಳ ಬಗ್ಗೆ ಒಮ್ಮೆ ಬರೆಯುತ್ತಾ 'ಯಾವ ಬುಟ್ಟಿಯಲ್ಲಿ ಬೇಕಾದರೂ ಇಡಬಹುದಾದ ಸೌತೇಕಾಯಿಗಳು' ಎಂದಿದ್ದರು ಲಂಕೇಶ್. ಕಥನಕ್ರಮ ಮತ್ತು ತಂತ್ರದ ಬಗ್ಗೆ ಆಸಕ್ತಿಯಿಲ್ಲದಿರುವುದಕ್ಕೆ ಕಾರಂತರ ಮೇಲೆಯೂ ಲಂಕೇಶರಿಗೆ ಅಸಮಾಧಾನವಿತ್ತು. ಇದನ್ನು ಅವರು ಕೇವಲ ಟೀಕೆ ಮಾಡದೆ ಭಿನ್ನ ಕಥನಕ್ಕೆ ಭಿನ್ನ ತಂತ್ರ ಮತ್ತು ಭಿನ್ನ ಭಾಷೆ ಮುಖ್ಯ ಎನ್ನುವ ಅವರ ಅಭಿಮತವನ್ನು ಮತ್ತೆಮತ್ತೆ ಎತ್ತಿ ತೋರಿಸುವಂತೆ ಈ ಕಾದಂಬರಿಗಳಲ್ಲಿ ಅವನ್ನು ದುಡಿಸಿಕೊಂಡಿದ್ದಾರೆ.

ತಾನೇನೇ ಮಾಡಿದರೂ ಕ್ಯಾತ ಶಾಲೆಗೆ ಹೋಗಬೇಕೆಂದು ಅದಕ್ಕೆ ಒದ್ದಾಡುವ ದೇವೀರಿ ಒಂದು ಕಡೆ ಇದ್ದರೆ, ಅವಳು ಕೊಡುವ ಸ್ಕೂಲಿನ ದುಡ್ಡನ್ನು ಮಜಾ ಉಡಾಯಿಸಬೇಕೆಂದುಕೊಳ್ಳುವ ಹುಡುಗ ಕ್ಯಾತ. ಒಮ್ಮೆ ಕನ್ನಡ ಚಳುವಳಿಗಾರರ ಕೈಯಲ್ಲಿ ಸಿಕ್ಕಿಬಿದ್ದು ಕನ್ನಡಕ್ಕೋಸ್ಕರ ಐವತ್ತು ರೂಪಾಯಿ ಕೊಟ್ಟ ಖ್ಯಾತ ಕನ್ನಡಿಗ ಎನ್ನಿಸಿಕೊಳ್ಳುತ್ತಾನೆ. ಅವನಿಗೆ ಅಲ್ಲಿಂದ ಬಿಡಿಸಿಕೊಂಡು ಬಂದರೆ ಸಾಕಾಗಿರುತ್ತದೆ. ಆಗ ಅಲ್ಲಿ ಹೋಟೇಲೊಂದರಲ್ಲಿ ದೇವೀರಿಯ ರೀತಿಯೇ ಕಾಣುವ ಯಾರೋ ಹುಡುಗಿ, ನರಸಿಂಹ ಮೇಸ್ತ್ರಿ ತರದವನೊಬ್ಬ– ಅವನೇ ಇರಬೇಕು– ಅವಳ ಜತೇಲಿ ಹೋಟೇಲೊಳಗೆ ಹೋಗುತ್ತಾನೆ. ಅಲ್ಲಿ ದೇವೀರಿಯ ಇನ್ನೊಂದು ರೂಪದ ದರ್ಶನವನ್ನು ಅಮೂರ್ತವಾಗಿಯಾದರೂ ನಮಗೆ ಮಾಡಿಸುತ್ತಾರೆ. ಇಲ್ಲಿ ಅಕ್ಕ ದೇವೀರಿ 'ಅವ್ಯವಹಾರ'ವನ್ನು ಮಾಡುತ್ತಿದ್ದಾಳೇನೋ ಅಂತನ್ನಿಸಿದರೂ ಮತ್ತು ಅವಳ ಈ ಅವ್ಯವಹಾರಗಳು ತಾನಂದುಕೊಂಡಿರುವ 'ಕೆಟ್ಟೋನು' ನರಸಿಂಹ ಮೇಸ್ತ್ರಿಯ ಜತೆಗೇ ಆಗುತ್ತಿದೆಯೆನ್ನುವುದು ಅವನಿಗೆ ಒಂದು ಲಹರಿಯಂತೆ ಅನುಭವಕ್ಕೆ ಬರುತ್ತದೆ. ತಕ್ಷಣ ಆತ ಕಣ್ಣುಮುಚ್ಚಿಕೊಳ್ಳುತ್ತಾನೆ. ಕೊಳೆಗೇರಿಯ ಹುಡುಗರ ಅಸಹಾಯಕತೆ ತನ್ನ ಸ್ವಂತ ಅಕ್ಕನ 'ಅವ್ಯವಹಾರವನ್ನು' ನೋಡಿ ಕಣ್ಣುಮುಚ್ಚಿಕೊಳ್ಳುವಲ್ಲಿ ಮುಕ್ತಾಯವಾಗುತ್ತದೆ. ನಂತರದ ಸನ್ನಿವೇಶದಲ್ಲಿ ಮುಖಾಮುಖಿಯಾದಾಗ ಈ ಹಿಂದಿನ ಪ್ರಸಂಗವನ್ನು ನಿರಾಕರಿಸುವುದರ ಮೂಲಕ ಒಂದು forced denialನಲ್ಲಿ ಬದುಕುತ್ತಾರೆ. ಒಂದಿಷ್ಟಾದರೂ ನೆಮ್ಮದಿಯಿಂದ ಬದುಕಲು ಈ ರೀತಿಯ ನಿರಾಕರಣದ ಅವಶ್ಯಕತೆ ಎಷ್ಟಿದೆ ಎನ್ನುವುದು ಈ ಕಾದಂಬರಿಯ ಪಾತ್ರಗಳು ನಮಗೆ ಮನದಟ್ಟುಮಾಡುತ್ತವೆ.

ಇಡೀ ಕಾದಂಬರಿಯಲ್ಲಿ ಕ್ಯಾತನನ್ನು ಗೌರವಭಾವದಿಂದ ಕಾಣುವ ಒಂದೇ ಪಾತ್ರವೆಂದರೆ ಸಂಪೂರ್ಣಮ್ಮ ಮತ್ತು ಅಲ್ಲಲ್ಲಿ ಎನ್ನಬಹುದಾದಷ್ಟು ರಾಮಪ್ಪ. ಸಂಪೂರ್ಣಮ್ಮನದು ನಿಷ್ಕಾರಣ ಪ್ರೀತಿಯಾದರೆ ರಾಮಪ್ಪನಿಗೆ ಈ ಕೊಳೆಗೇರಿಯನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಅವನದೇ ಅಜೆಂಡಾ ಇದೆ. ಆತ ಮೂಲತಃ ರಾಜಕಾರಣಿ. ಅವನಿಗೆ ಕ್ಯಾತ, ದೇವೀರಿಯರಿಗೆ ಸಹಾಯ ಮಾಡಿದರೂ ಅವರನ್ನು ತನಗೆ ಬೇಕಾದ ಹಾಗೆ ಉಪಯೋಗಿಸಿಕೊಳ್ಳುವ ಹಕ್ಕಿದೆ. ಹಾಗೆಯೇ ನರಸಿಂಹ ಮೇಸ್ತ್ರಿ ಕೂಡ.

ಕ್ಯಾತನಿಗೆ ತನ್ನ ಬದುಕನ್ನೆಲ್ಲಾ ಹೇಳಿಕೊಳ್ಳಬೇಕೆಂಬ ಆಸೆಯಿದೆ. ಅವನಿಗೆ ಒಳ್ಳೆಯದು ಕೆಟ್ಟದರ ಬಗ್ಗೆ ವಿವೇಚನೆಯಿಲ್ಲ. ಹತ್ತೋ ಹದಿನೈದೋ ವರ್ಷದ ಅವನ ಮುಂದೆ ಪದ್ದಿ ತನ್ನ ಮೊಲೆಗಳನ್ನು ಉಜಾಯಿಸಿಕೊಂಡು ಹಲ್ಲಿನ ಸಂದಿಯಲ್ಲಿ ಹೇರ್ಪಿನ್ನನ್ನು ಇಟ್ಟುಕೊಂಡು ತಲೆ ಬಾಚಿಕೊಳ್ಳುವಾಗ ಆಗುವ ಸಿಡಿಲು ಗುಡುಗಿನಿಂದ ಹಿಡಿದು ತನ್ನಕ್ಕ ದೇವೀರಿ ಕ್ಯಾತನ ಮುಂದೆಯೇ ಬಟ್ಟೆ ಬದಲಾಯಿಸಿಕೊಳ್ಳುವ ವಿಷಯಗಳನ್ನೂ ಆತ ಸಲೀಸಾಗಿ ಹೇಳಿಬಿಡುತ್ತಾನೆ. ಇಂಥ ವಿಷಯಗಳನ್ನು ಹೇಳುತ್ತಾ ನಮ್ಮ ಸಂಸ್ಕೃತಿಯಲ್ಲಿ ನಮಗರಿವಿಲ್ಲದೇ ನಮ್ಮ ಭಾಗವಾಗಿರುವ incest ಮತ್ತು ಈಡಿಪಿಯಲ್ ಸಂಕೀರ್ಣಗಳನ್ನು ಹೇಳಿಯೂ ಹೇಳದಂತೆ ಲಂಕೇಶರು ಬಹಳ ಕಡೆ ಹೇಳಿದ್ದಾರೆ. ವಿವಾಹೇತರ ಸಂಬಂಧಗಳು ಅಥವಾ ಇನ್ನೂ ಸರಿಯಾಗಿ ಹೇಳಬೇಕೆಂದರೆ ಸಮಾಜರೂಢಿಯಲ್ಲದ ಅನೇಕ ಸಂಬಂಧಗಳ ಬಗ್ಗೆ ಲಂಕೇಶರಿಗೆ ಬಹಳ ಆಸಕ್ತಿ. ಅಕ್ಕ ತಮ್ಮರು ಒಟ್ಟಿಗೆ ಮಲಗಿದಾಗ ಅಕ್ಕನ ಅಪ್ಪುಗೆಯಲ್ಲಿ ತಾಯನ್ನು ಕಾಣುವ ಕ್ಯಾತ ಅಕ್ಕ ಬಟ್ಟೆ ಬದಲಾಯಿಸುವುದು ಕಣ್ಣಿಗೆ ಬಿದ್ದಾಗ ಕಣ್ಣು ಮುಚ್ಚಿಕೊಳ್ಳುವ, ಕೆಲವೊಮ್ಮೆ ಕಣ್ಣು ಮುಚ್ಚಿಕೊಳ್ಳದ ಹಪಾಪಿ ಅಥವಾ ಕೊಳಕು ಹುಡುಗ. ಇವನ ನೈತಿಕತೆಯನ್ನು ನಿರ್ಧರಿಸುವುದು ಅವನ ನಂಬಿಕೆಗಳಲ್ಲ, ಅವನಿರುವ ಸಮಾಜ. ಮುಖ್ಯವಾಗಿ ಅವನಲ್ಲಿ ಅಂಥ ಉನ್ನತ ಎನ್ನಿಸುವ ಮೌಲ್ಯಗಳಾಗಲೀ ನಂಬಿಕೆಗಳಾಗಲೀ ಇಲ್ಲ.

ದೇವೀರಿ ಕೊನೆಗೆ ಕ್ಯಾತನನ್ನು ಬಿಟ್ಟುಹೋಗುವ ಘಟನೆ ಕೊಂಚ ಸಿನಿಮೀಯ ಎನ್ನಿಸಿದರೂ ಅವಳಿಗೆ ಆಯ್ಕೆಗಳಿಲ್ಲ. ಕೊಳೆಗೇರಿಯಿಂದ ಹೊರಗಿನ ಬದುಕನ್ನು ಆಕೆ ಕಂಡುಕೊಳ್ಳುವುದು ಬಹುಶಃ ವೇಶ್ಯಾವಾಟಿಕೆಯಲ್ಲಿ. ಅದಕ್ಕೆ ಮುಂಚೆ ಕ್ಯಾತನಿಗೆ ಒಂದು ದಾರಿ ಕಾಣಿಸಬೇಕಾಗಿದೆ. ಕ್ಯಾತನನ್ನು ಸ್ಕೂಲಿಗೆ ಕಳುಹಿಸಬೇಕೆಂದು ಒದ್ದಾಡಿದ ದೇವೀರಿಗೆ ಕೊನೆಗೆ ಆತ ಎಂಥದಾದರೂ ಒಂದು ಕೆಲಸ ಮಾಡಿದರೆ ಸಾಕೆನ್ನಿಸಿ ಸಿಂಗಾರ ಶೆಟ್ರ ಹತ್ತಿರ ಕೆಲಸಕ್ಕೆ ಸೇರುವಂತೆ ಶಿಫಾರಸು ಮಾಡಿಸಿ, ಆತನಿಗೆ ತಿಂಡಿ ವಗೈರೆ ಕೊಡಿಸಿ ಬಿಟ್ಟು ಹೋಗುತ್ತಾಳೆ. ಕೊಳೆಗೇರಿಯವರ ಬಗ್ಗೆ ಅವರ ಮತ್ತು ಅವರ ಮಹತ್ವಾಕಾಂಕ್ಷೆಗಳ ಬಗ್ಗೆ ಲಂಕೇಶರಿಗೆ ನಂಬಿಕೆಯಿದೆ, ಆದರೆ ವಸ್ತುಸ್ಥಿತಿಯ ಬಗ್ಗೆ ಮತ್ತು ವಾಸ್ತವದ ಅರಿವಿದೆ. ಆದ್ದರಿಂದಲೇ ಇಲ್ಲಿ ಕ್ಯಾತ ಕೋಟ್ಯಾಧಿಪತಿಯಾಗುವುದಿಲ್ಲ.

ಈ ಹೊತ್ತಿನಲ್ಲಿ ನಾನು ನೋಡಿದ ಕೊಳೆಗೇರಿಯ ಇನ್ನೊಂದು ಚಿತ್ರಣ ಕನ್ನಡದ 'ಸ್ಲಮ್ ಬಾಲ' ಅನ್ನುವ ಚಿತ್ರ ನೆನಪಾಗುತ್ತದೆ. ಅಗ್ನಿ ಶ್ರೀಧರರ 'ದಾದಾಗಿರಿಯ ದಿನಗಳು' ಪುಸ್ತಕದ ಕೆಲವು ಭಾಗಗಳನ್ನು ಆಧರಿಸಿ ತೆಗೆದಿರುವ ಈ ಚಿತ್ರ ೨೦೦೮ರ ಬೆಂಗಳೂರಿನ ಕೊಳೆಗೇರಿಗಳ ಭೂಗತ ಜೀವನದ ಬಗ್ಗೆ ಬೆಳಕು ಚೆಲ್ಲುತ್ತದೆ. ಕೊಳೆಗೇರಿಯಲ್ಲಿರುವ ರೌಡಿಗಳ ಬಗ್ಗೆ ಮತ್ತು ಅಲ್ಲಿಂದ ಹೊರಗೆ ಬರುವುದು ಎಷ್ಟು ದುಸ್ಸಾಧ್ಯ ಎನ್ನುವ ಬಗ್ಗೆ ಅಥವಾ ಅಲ್ಲಿನ ಕೂಪ ಎಷ್ಟು ಬಲವಾಗಿದೆ ಎಂತಲೇ ಹೇಳುತ್ತಾ ಇಂದಿನ ಕೊಳೆಗೇರಿಗಳೂ ಸಹ ಹೇಗೆ ಚದರಡಿಗೆ ಬೆಲೆ ಕೇಳುತ್ತಾ ಬೆಳೆದಿವೆ ಎನ್ನುವ ವಾಸ್ತವ ಚಿತ್ರಣ ಕೊಡುತ್ತದೆ. ಹಾಗೆಯೇ ಈಗ ಎಂಟು ಆಸ್ಕರ್ ಪ್ರಶಸ್ತಿಗಳನ್ನು ಪಡೆದುಕೊಂಡಿರುವ 'ಸ್ಲಮ್‌ಡಾಗ್ ಮಿಲಿಯನೇರ್' ಚಿತ್ರ. ಈ 'ಸ್ಲಮ್ ಡಾಗ್ ಮಿಲಿಯನೇರ್' ಚಿತ್ರ ಇಡೀ ಭಾರತದ ಚಿತ್ರ ನೋಡುಗರನ್ನು ಎಡ, ಬಲವೆಂದು ವರ್ಗೀಕರಿಸಿಬಿಟ್ಟಿದೆ. ಭಾರತವನ್ನು ಅತಿ ಕೆಟ್ಟದಾಗಿ ಚಿತ್ರಿಸಿದೆ, ಈ ಚಿತ್ರವನ್ನು ಒಪ್ಪಿಕೊಂಡರೆ ನಮ್ಮ ರಾಷ್ಟ್ರೀಯತೆಗೇ ಕುಂದು ಎಂದು ವಾದಮಾಡುವ ಗುಂಪು ಒಂದಾದರೆ, ಇದು ಒಂದು ಉತ್ತಮವಾದ ಚಿತ್ರ. ಇಲ್ಲಿರುವುದು ಕಲೆಯಷ್ಟೇ. ಇಲ್ಲಿ ಹೇಳಿರುವುದು ಯಾವುದೂ ಸುಳ್ಳಲ್ಲ ಎನ್ನುವುದು ಇನ್ನೊಂದು ವಾದ. ಈ ಚಿತ್ರದ ಕಲಾವಂತಿಕೆಯ ಬಗ್ಗೆ ಯಾವ ಸಂದೇಹ ಇಲ್ಲದಿದ್ದರೂ ಇದು ಮುಂದಿಡುವ ಒಬ್ಬ ಕೊಳೆಗೇರಿಯ ಹುಡುಗ ತನ್ನ ಬದುಕಿನಿಂದಲೇ ಈ ಸ್ಪರ್ಧೆಯನ್ನು ಗೆಲ್ಲುವ ಪ್ರಶ್ನೆಗಳಿಗೆ ಉತ್ತರ ಹೇಳುವಷ್ಟು ವಿವೇಕವನ್ನು ಪಡೆದಿರುವುದು ಒಂದು ಧನಾತ್ಮಕ ರೂಪಕವಾಗಬಹುದೇ ಹೊರತು ವಾಸ್ತವದಲ್ಲಿ ಅಲ್ಲ. ಇಂಥಾ ರೂಪಕಗಳ ಬಗ್ಗೆ ನಂಬಿಕೆ ಲಂಕೇಶರಿಗಾಗಲೀ ಅಗ್ನಿ ಶ್ರೀಧರ್‌ರಿಗಾಗಲೀ ಇಲ್ಲ. ಹಾಗಾಗಿ ಈ ಜನಗಳ ನೈತಿಕ ಸಾಮಾಜಿಕ ಅಥವಾ ದೈನಿಕದ ಉದ್ಧಾರದ ಕೆಲಸವನ್ನು ತಮ್ಮ ಕೃತಿಗಳು ಮಾಡುತ್ತವೆ ಎನ್ನುವ ನಂಬಿಕೆಯೂ ಅವರಿಗಿಲ್ಲ.

ಅನುಭವಜನ್ಯವಾಗಿ ಬರಲಿ ಅಥವಾ ಅದೊಂದು ಕಲ್ಪಿತ ಕಥೆಯಾಗಲೀ, ವಾಸ್ತವವಾದೀ ಲೇಖಕರುಗಳ ಈ ಕ್ರಿಟಿಕಲ್ ಇನ್‌ಸೈಡರ್ ಗುಣ ಇಂಥ ಒಂದು ಸಾಧ್ಯತೆಯನ್ನೇ ಅನುಮಾನದಿಂದ ನೋಡುತ್ತದೆ. ಇಲ್ಲಿ ಯಾವ ರೀತಿಯ ಸಿನೆಮ್ಯಾಟಿಕ್ ಜಸ್ಟೀಸ್‌ಗೆ ಜಾಗವಿಲ್ಲ. ಇಲ್ಲಿ ಕ್ಯಾತ ಅನಾಥಾಶ್ರಮದ ಲೆಕ್ಕದ ಪುಸ್ತಕ ಮಾತ್ರ ಬರೆಯುತ್ತಾನೆ, ದೇವೀರಿ ಸೂಳೆಯಾಗುತ್ತಾಳೆ. ಪದ್ದಿ ಮೇಕಪ್ ಮಾಡಿಕೊಂಡು ಹೊಸ ಸಿನೆಮಾದ ಅವಕಾಶಕ್ಕಾಗಿ ಕಾಯುತ್ತಿದ್ದಾಳೆ. 'ಸ್ಲಮ್‌ಬಾಲ' ತಾನು ನಂಬಿದ ಪೊಲೀಸ್ ಅಧಿಕಾರಿಯಿಂದಲೇ ಹತನಾಗುತ್ತಾನೆ. 'ಅಕ್ಕ' ನಿಷ್ಠುರ ವಾಸ್ತವವಾದಿ. ಇಲ್ಲಿ ಕ್ಯಾತ, ದೇವೀರಿಯರಿಗೆ ಕಾಮನೆಗಳು, ಆಕಾಂಕ್ಷೆಗಳು ಇವೆಯೇ ಹೊರತು ಅವುಗಳನ್ನು ಕಾರ್ಯರೂಪಕ್ಕೆ ತರಲು ಯಾವುದೇ ಮಾರ್ಗವಿಲ್ಲ. ಪ್ರಾಯಶಃ ಅದು ವಾಸ್ತವ

ಕೂಡ, ಏನೋ. ಈಗ ನಾವು 'ಸ್ಲಂಡಾಗ್ ಮಿಲಿಯನೇರ್' ಅನ್ನು ಕೊಂಡಾಡುತ್ತಿರುವುದೂ ಕೂಡ ಇಂಥದೇ ಒಂದು willing suspension of disbeliefನಲ್ಲಿಯೇ ಅಲ್ಲವಾ?

ಲಂಕೇಶರು ಬರೆದದ್ದು ಮೂರೇ ಕಾದಂಬರಿಯಾದರೂ ಮೂರೂ ಭಾಷೆ, ತಂತ್ರ ಮತ್ತು ವಸ್ತುವಿನಲ್ಲಿ ಒಂದರಂತೆ ಒಂದಿಲ್ಲ. ವಸ್ತು ಮತ್ತು ಸೃಜನಶೀಲ ಸಾಧ್ಯತೆಯಲ್ಲಿ ಪ್ರಾಯಶಃ 'ಮುಸ್ಸಂಜೆಯ ಕಥಾ ಪ್ರಸಂಗ' ಲಂಕೇಶರ ಅತ್ಯುತ್ತಮ ಕಾದಂಬರಿ. ವಸ್ತುವಿನಷ್ಟೇ ತಂತ್ರ ಕೂಡ ಮುಖ್ಯ ಎನ್ನುವುದಕ್ಕೆ ಮತ್ತು ಕತೆಗೆ ರೆಟರಿಕ್ಕುಗಳು ಯಾಕೆ ಮುಖ್ಯ ಎನ್ನುವುದಕ್ಕೆ 'ಅಕ್ಕ' ಕಾದಂಬರಿ ಉತ್ತಮ ನಿದರ್ಶನವಾಗಿ ನಿಲ್ಲುತ್ತದೆ.

**ಕೃತಿ ವಿವರ:** ಅಕ್ಕ, ಪಿ. ಲಂಕೇಶ್, ಲಂಕೇಶ್ ಪ್ರಕಾಶನ, ಬೆಂಗಳೂರು. ೧೯೯೧ (೩ನೆಯ ಮುದ್ರಣ ೨೦೦೭), ಪು. ೧೧೫

## ಕುಂ.ವೀ. ಅವರ 'ಅರಮನೆ'- ಅನುಭವ ಮತ್ತು ಪ್ರತಿಕ್ರಿಯೆ

-ಮಧು ಕೃಷ್ಣಮೂರ್ತಿ, ಸ್ಯಾನ್ ಹೋಸೆ, ಕ್ಯಾಲಿಪೋರ್ನಿಯಾ

ಚರಿತ್ರೆಯಂತಹ ಗಂಭೀರ ವಸ್ತುವುಳ್ಳ ಒಂದು ಕಾದಂಬರಿಯಲ್ಲಿ ಆಳವಾಗಿ ಸಂಶೋಧಿಸಲ್ಪಟ್ಟ ಇತಿಹಾಸದ ಮಾಹಿತಿಯ ಜೊತೆಗೆ ಕುತೂಹಲ ಹುಟ್ಟಿಸುವಂತಹ ಸನ್ನಿವೇಶಗಳು ಹಾಗು ಪಾತ್ರಗಳು ಇದ್ದು, ವಿನೋದಮಯ ರೀತಿಯಲ್ಲಿ ರಂಜಿಸಿದರೆ, ಆ ಕಾದಂಬರಿಯನ್ನು ಓದುವುದೇ ಒಂದು ಅದ್ಭುತವಾದ ಅನುಭವ. ಈ ರಸಾಸ್ವಾದನೆಯ ಜೊತೆಗೆ ಓದುಗನಲ್ಲಿ ಸಾಮಾಜಿಕ ಕಳಕಳಿಯನ್ನು ಹೆಚ್ಚಿಸಿ ಓದುಗನ ಮಾನವೀಯ ಗುಣಗಳನ್ನು ಪಕ್ವಗೊಳಿಸಿದ್ದೆ ಆದಲ್ಲಿ ಅಂತಹ ಕಾದಂಬರಿಯು ಒಂದು ಶ್ರೇಷ್ಠ ಕೃತಿಯಾಗುತ್ತದೆ. ಈ ಎಲ್ಲ ಅಂಶಗಳಲ್ಲಿ ಯಶಸ್ವಿಯಾಗಿರುವ ಕಾದಂಬರಿ ಶ್ರೀ ಕುಂ. ವೀರಭದ್ರಪ್ಪ (ಕುಂ.ವೀ.) ರಚಿಸಿರುವ 'ಅರಮನೆ'. ಈಗಾಗಲೆ ಈ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ೨೦೦೭ರ ಪ್ರಶಸ್ತಿಯು ದೊರಕಿದೆ. ಈ ಕಾದಂಬರಿಯಲ್ಲಿ ಕುಂವೀ ಅವರು ಹದಿನೆಂಟನೆ ಮತ್ತು ಹತ್ತೊಂಬತ್ತನೆ ಶತಮಾನದಲ್ಲಿನ ಭಾರತದ ಸಮಾಜ, ಅದರಲ್ಲಿ ಇದ್ದಂತಹ ಅನ್ಯಾಯ ಮತ್ತು ದೌರ್ಜನ್ಯಗಳನ್ನು ಎಳೆ ಎಳೆಯಾಗಿ ವಿಶ್ಲೇಷಿಸುತ್ತ, ಆಗಿನ ಕಾಲದ ವಿದ್ಯಮಾನಗಳ ಸಮಗ್ರ ಚಿತ್ರಣ ನೀಡಿದ್ದಾರೆ. ಮನರಂಜನೆ ನೀಡಬಲ್ಲ ಹಾಸ್ಯವನ್ನು ಲೀಲಾಜಾಲವಾಗಿ ಆಡುಮಾತಿನಲ್ಲೆ ಹೊಮ್ಮಿಸುವ, ಬಳ್ಳಾರಿ ಪ್ರಾಂತ್ಯದ ಆಪ್ಯಾಯಮಾನವೆನಿಸುವಂತಹ ದೇಸೀ ಸೊಗಡುಳ್ಳ ಕನ್ನಡ ಭಾಷೆಯನ್ನು ಈ ಕಾದಂಬರಿಯಲ್ಲಿ ಕುಂವೀ ಬಳಸಿದ್ದಾರೆ. ಮೂಢನಂಬಿಕೆ ಮತ್ತು ಮಿಥ್ಯಗಳನ್ನು ಬಳಸಿಯೂ ಅವುಗಳನ್ನು ಹೇಗೆ ನೈಜ ಜಗತ್ತಿನಲ್ಲಿ ಅರ್ಥೈಸಬೇಕೆಂದು ತೋರಿಸುತ್ತ, ಸದರಿ ಸಮಾಜದ ಅಡ್ಡಗಲಗಳ ವಿಹಂಗಮ ನೋಟ ತೋರುವ ಕಾದಂಬರಿಯನ್ನು ರಚಿಸುವಲ್ಲಿ ಸಫಲರಾಗಿದ್ದಾರೆ.

### ಹಿನ್ನೆಲೆ

ಈ ಕಾದಂಬರಿ ನನಗೆ ಚರಿತ್ರೆಯ ವಿಷಯದಲ್ಲಿ ಶಿಕ್ಷಣ ನೀಡಿದೆ ಎಂದರೆ ಖಂಡಿತ ತಪ್ಪಾಗಲಾರದು. ಶಾಲಾದಿನಗಳಲ್ಲಿ ನನಗೊ ಚರಿತ್ರೆಯ ಬಗ್ಗೆ ಬಹಳ

ಉಪೇಕ್ಷೆ ಇದ್ದಿತ್ತು. ಇಂಜಿನಿಯರ್ ಆಗಬೇಕೆಂದಿದ್ದ ನನಗೆ ಚರಿತ್ರೆಯಿಂದ ಕಲಿಯುವುದೇನಿದೆ? ರಕ್ಕಸತಂಗಡಿಯ ಯುದ್ಧ ಯಾರ್ಯಾರ ನಡುವೆ ನಡೆಯಿತು, ಅಥವಾ ಬ್ಯಾಟಲ್ ಒಫ್ ಪ್ಲಾಸಿಯಲ್ಲಿ ಯಾರು ಯಾರನ್ನು ಮಣಿಸಿದರು ಎಂಬುದನ್ನು ತಿಳಿದುಕೊಂಡು ಜೀವನದಲ್ಲಿ ಮುಂದೆ ಬರಲು ಸಾಧ್ಯವೆ? ಪಿ.ಯು.ಸಿ.ಯಲ್ಲಿ ಪಿ.ಸಿ.ಎಂ.ಬಿ. ತೆಗೆದುಕೊಂಡಾಗ 'ಸಧ್ಯ, ಇನ್ನು ಸೋಷಿಯಲ್ ಸ್ಟಡೀಸ್ ಓದಬೇಕಾಗಿ-ಲ್ಲವಲ್ಲ!' ಎನ್ನುವುದೇ ಒಂದು ಸಮಾಧಾನ. ಆದರೆ ಇಪ್ಪತ್ತೈದು ವರುಷಗಳ ನಂತರ ಚರಿತ್ರೆಯ ಕಡೆಗೆ ನನ್ನ ಮನಸ್ಸು ಹೆಚ್ಚು ಹೆಚ್ಚು ಆಕರ್ಷಿತವಾಗತೊಡಗಿದ್ದು ಸೋಜಿಗದ ಸಂಗತಿ. ಇದಕ್ಕೆ ಒಂದು ಮುಖ್ಯ ಕಾರಣ follow your passion ('ನಿನ್ನ ಹೃದಯದಾಳದ ಆಶಯದಲ್ಲಿ ಭರವಸೆ ಇಟ್ಟು ಮುನ್ನಡೆ') ಎಂಬ ಮಂತ್ರ ನುಡಿಯುವ ಅಮೆರಿಕಕ್ಕೆ ನಾನು ಬಂದಿದ್ದು ಎನ್ನುವುದು ನನ್ನ ಮಟ್ಟಿಗೆ ನಿರ್ವಿವಾದ. ಅಮೇರಿಕದಲ್ಲಿ ನನಗೆ ಪ್ರತಿದಿನ ಕಾರು ನಡೆಸುವಾಗ ಎನ್.ಪಿ.ಆರ್. (ನ್ಯಾಷನಲ್ ಪಬ್ಲಿಕ್ ರೇಡಿಯೊ)ದಲ್ಲಿ ಸಂದರ್ಶನಗಳನ್ನು ಕೇಳುವುದು ರೂಢಿಯಾಗಿಹೋಗಿದೆ. ಈ ಮೂಲಕ ಸುಪ್ರಸಿದ್ಧ ಸಾಹಿತಿಗಳ, ಕಲಾವಿದರ, ಚರಿತ್ರಕಾರರ ಹಾಗೂ ಅವರ ಚಿಂತನೆಗಳ ಪರಿಚಯವಾಯಿತು. ಇದರಿಂದ ನನಗೆ ನನ್ನ ತಂತ್ರಜ್ಞಾನ ವೃತ್ತಿ-ಜೀವನಕ್ಕೆ ಹೊರತಾದ ಚರಿತ್ರೆ, ಸಾಹಿತ್ಯ ಮತ್ತು ಕಲೆ ಮುಂತಾದ ಮಾನವಿಕ (Humanitie) ವಿಷಯಗಳಿಗೆ ನೀಡಬೇಕಾದ ಪ್ರಾಮುಖ್ಯತೆಯ ಅರಿವಾಗಿ ಅವುಗಳಲ್ಲಿರುವ ಉಪಯುಕ್ತತೆಯನ್ನು ಕಾಣುವಂತಾಯಿತು. ನಮ್ಮ ದೈನಂದಿನ ಜೀವನದಲ್ಲೂ ಬೌದ್ಧಿಕ ಚರ್ಚೆಯಲ್ಲಿ ಮುಳುಗೇಳುತ್ತ ನನ್ನ ಪ್ಯಾಶನ್ ಏನಿರಬಹುದು ಎಂಬುದರ ಅರಿವು ಮೂಡುತ್ತ ಬಂತು. ಇದರೊಟ್ಟಿಗೆ ಉತ್ತರ ಕ್ಯಾಲಿಫೋರ್ನಿಯಾದಲ್ಲಿನ ಕನ್ನಡ ಸಾಹಿತ್ಯ ಗೋಷ್ಠಿ, ಕನ್ನಡ ಕೂಟ ಮುಂತಾದ ಸಂಘಟನೆಗಳು ಕನ್ನಡದ ವಾತಾವರಣವನ್ನು ಸೃಷ್ಟಿಸಿ ನನಗೆ ನಮ್ಮ ಕನ್ನಡ ಸಾಹಿತ್ಯದ ಶ್ರೀಮಂತಿಕೆ ಮತ್ತು ಘನತೆಯ ಅರಿವು ಮೂಡಿಸಿದವು. ಈ ಸಂಘಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿರುವ ನನಗೆ ಕನ್ನಡ ಸಾಹಿತಿಗಳ ಹಾಗೂ ಚಿಂತಕರ ಕೃತಿಗಳಲ್ಲಿ ಆಸಕ್ತಿ ಬೆಳೆಯುವಂತಾಯಿತು. ಹೀಗೆ ಬಹು ದಿನಗಳಿಂದ ನಾನು ಅಲಕ್ಷಿಸಿದ್ದ ಚರಿತ್ರೆ ಮತ್ತು ಕನ್ನಡ ಸಾಹಿತ್ಯದಲ್ಲಿ ಕುತೂಹಲ, ಒಲವು ಮತ್ತು ಪ್ರೀತಿ ಬೆಳೆಯಿತು. ಹೀಗಿರುವಾಗ ಅಮೆರಿಕದ ಕನ್ನಡ ಸಾಹಿತ್ಯ ರಂಗದ ಸಂಪಾದಕ ಸಮಿತಿಯ ಪ್ರೇರಣೆಯ ಫಲವಾಗಿ ನಮ್ಮ ಕನ್ನಡದಲ್ಲೇ ಚಾರಿತ್ರಿಕ ವಸ್ತುವುಳ್ಳ ಕುಂವೀ ರಚಿಸಿದ ಅರಮನೆ ಎಂಬ ಸಾಹಿತ್ಯ ಕೃತಿಯನ್ನು ಓದುವ ಅವಕಾಶ ಒದಗಿದ್ದು ಒಂದು ಸುದೈವ.

**ಚರಿತ್ರೆಯ ಪ್ರಾಮುಖ್ಯ**

ಚರಿತ್ರೆಯ ಬಗ್ಗೆ ನನಗೆ ಕುತೂಹಲ ಹೆಚ್ಚಾಗಲು ಇನ್ನೊಂದು ಕಾರಣ – ನನ್ನ ಮನಸ್ಸಿನಲ್ಲಿ ಆಗುತ್ತಿದ್ದ ಅನೇಕ ಜಿಜ್ಞಾಸೆಗಳು. ಅಮೆರಿಕ ದೇಶವು ೧೭೭೬ರಲ್ಲಿ ಸ್ವಾತಂತ್ರ್ಯ

ಪಡೆಯಿತು. ಅಂದು ಅಮೆರಿಕದ ನಾಯಕರು ರಚಿಸಿದ ಸಂವಿಧಾನವು ಇಂದಿಗೂ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡಿದೆ. ಆಗಿನ ಕಾಲದಲ್ಲೇ ಅಂತಹ ಸಂವಿಧಾನವನ್ನು ರಚಿಸಿರುವ ಸಂಗತಿ ಆಗಿನ ಸಮಾಜದ ಬಗ್ಗೆ ಅಭಿಮಾನ ಮೂಡಿಸುತ್ತದೆ. ಇದೇ ರೀತಿ ಶತಶತಮಾನಗಳ ಇತಿಹಾಸ ಉಳ್ಳ ಭಾರತದಲ್ಲಿ ಹೇಗಿದ್ದಿರಬಹುದು ಎಂಬ ಕುತೂಹಲ ಉಂಟಾಗುತ್ತಿತ್ತು. ಈಗ ಕೆಲ ದಿನಗಳ ಹಿಂದೆಯಷ್ಟೆ ಅಮೆರಿಕದ ಪಿ.ಬಿ.ಎಸ್. (ಪಬ್ಲಿಕ್ ಬ್ರಾಡ್‌ಕ್ಯಾಸ್ಟಿಂಗ್ ಸರ್ವಿಸ್) ಟಿ.ವಿ. ಚಾನಲ್‌ನಲ್ಲಿ ಪ್ರಸಾರವಾದ 'ದಿ ಸ್ಟೋರಿ ಆಫ್ ಇಂಡಿಯ' ಎಂಬ ಸಾಕ್ಷ್ಯಚಿತ್ರ ನೋಡುವಾಗ ಭಾರತದ ಬಗ್ಗೆ ಅಚ್ಚರಿ ತರಿಸುವಂತಹ ಅನೇಕ ವಿಷಯಗಳು ನನ್ನ ಅರಿವಿಗೆ ಬಂದವು. ಆಗಿನ ಕಾಲದ ಬಗ್ಗೆ ಹೆಚ್ಚು ತಿಳಿದುಕೊಳ್ಳಬೇಕೆಂಬ ಕುತೂಹಲ ಉಂಟಾಯಿತು. ಅಂದಿನ ಜೀವನ ಶೈಲಿ ಹೇಗಿದ್ದಿರಬಹುದು? ಸಮಾಜದ ರಚನೆ ಯಾವ ರೀತಿ ಇದ್ದಿರಬಹುದು?- ಎಂಬೆಲ್ಲ ಪ್ರಶ್ನೆಗಳು ನನ್ನ ಮನಸಿನಲ್ಲಿ ಏಳತೊಡಗಿದವು. ಭಾರತದಲ್ಲಿ ನಾವೆಲ್ಲ ಹೆಚ್ಚಾಗಿ ನಮ್ಮ ಚರಿತ್ರೆ ಮತ್ತು ಪುರಾಣಗಳ ಕಲ್ಪನೆಯನ್ನು ಕಟ್ಟಿಕೊಂಡಿರುವುದು ಚಂದಮಾಮ ಮತ್ತು ಅಮರ ಚಿತ್ರ ಕಥೆಗಳಲ್ಲಿರುವ ಚಿತ್ರಣಗಳಿಂದ. ಈಗೀಗ ಆ ಕಲ್ಪನೆಯ ಬಗ್ಗೆ ನನಗೆ ಸಂಶಯ ಉಂಟಾಗತೊಡಗಿದೆ. ಅದರಲ್ಲಿ ಕಂಡುಬರುವ ಭವ್ಯ ಅರಮನೆ ಮತ್ತು ವೈಭವೋಪೇತ ಜೀವನದ ಚಿತ್ರಣ ಎಷ್ಟು ನಿಜ? ಆಧಾರಗಳೇನು? ಕಣ್ಣಾರೆ ಕಂಡವರಾರು?

ಈ ಹಿನ್ನೆಲೆಯಲ್ಲಿ ಎಸ್. ಎಲ್. ಭೈರಪ್ಪನವರ 'ಪರ್ವ' ಓದಿದಾಗ ನನ್ನ ಮನಸ್ಸಿಗೆ ಭೈರಪ್ಪನವರು ಮಹಾಭಾರತದ ಕಥೆಯನ್ನು ಅರ್ಥೈಸಿದ ವಿಧಾನ ಬಹಳ ವಿಶಿಷ್ಟವಾಗಿ ಕಂಡಿತು. ಪುರಾಣದ ದೈವಲೀಲೆ ಮತ್ತು ನಂಬಲಾಗದ ಮಾಯೆಗಳಿಂದ ಬಿಡಿಸಿ ನಮ್ಮ ಪ್ರಪಂಚದಲ್ಲಿ ಹೀಗೇ ನಡೆದಿತ್ತೇನೋ ಎಂದು ನಂಬಿಕೆ ಉಂಟಾಗುವಂತೆ ಮಹಾಭಾರತವನ್ನು ವಾಸ್ತವೀಕರಿಸಿರುವುದು ನನಗೆ ಮೆಚ್ಚುಗೆಯಾಯಿತು. ಇತ್ತೀಚೆಗೆ ಬಹಳ ಚರ್ಚೆಗೆ ಗುರಿಯಾದ ಭೈರಪ್ಪನವರ ಇನ್ನೊಂದು ಕಾದಂಬರಿ 'ಆವರಣ' ಓದಿದ ಮೇಲಂತೂ 'ಚರಿತ್ರೆಯ ವಿಷಯದಲ್ಲಿ ಯಾರನ್ನು ನಂಬುವುದು ಯಾರನ್ನು ಬಿಡುವುದು?' ಎಂಬ ಸಂಶಯ ಉಂಟಾಯಿತು. ಚರಿತ್ರೆಯ ಬಗ್ಗೆ ನಮಗೆ ತಿಳಿದಿರುವುದರಲ್ಲಿ, ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ ಕಾಲ ದೇಶಗಳನ್ನು ದಾಟಿ ಬಂದು ನಮ್ಮ ಕಿವಿ ಸೇರಿದ ವಿಷಯಗಳೇ ಹೆಚ್ಚು. ವಿಜಯನಗರ ಸಾಮ್ರಾಜ್ಯದಲ್ಲಿ ಮುತ್ತು-ರತ್ನಗಳನ್ನು ಬೀದಿಯಲ್ಲಿ ಸೇರು-ಪಾವಿನಲ್ಲಿ ಅಳೆದು ಮಾರುತ್ತಿದ್ದರಂತೆ ಎಂದು ಕಂಡವರಾರು? ಬಹುಶಃ ಈ ಕತೆಗಳು, ಮೊಘಲರು ಮತ್ತು ಬ್ರಿಟಿಷರಿಂದ ಉಂಟಾದ ಸೋಲನ್ನು ಮರೆಯಲು ಮತ್ತು ಅದರಿಂದ ಕುಸಿದ ಆತ್ಮಸ್ಥೈರ್ಯವನ್ನು ಸ್ಥಿರಗೊಳಿಸಲು ಹುಟ್ಟಿಕೊಂಡಿರಬಹುದೇನೊ ಎಂಬುದು ನನ್ನ ಸಂದೇಹ.

ಅಂತಹ ವೈಭವದಿಂದ ಮೆರೆದರು ಎನ್ನಲಾದ ರಾಜರು ಹಾಗೂ ಅವರ ವಂಶಸ್ಥರು ಬ್ರಿಟಿಷರಿಗೆ ಶರಣಾಗಬೇಕಾಯಿತು. ಕಾಲಾಂತರದಲ್ಲಿ ತಮ್ಮ ಸಂಪತ್ತು, ವೈಭವ, ದರ್ಪ,

ಅಧಿಕಾರ ಮತ್ತು ಐಷಾರಾಮೀ ಜೀವನ ಎಲ್ಲವನ್ನು ಕಳೆದುಕೊಂಡು ಬೀದಿ ಪಾಲಾಗಬೇಕಾಯಿತು. ತಮ್ಮ ಅರಮನೆಗಳಿಂದ ಹೊರಬರಬೇಕಾಯಿತು. ಈ ರಾಜರುಗಳ ಬೆಂಬಲದಿಂದ ದೀನ-ದಲಿತರ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದ ಪಾಳೆಯಗಾರರು ಮತ್ತು ಜಮೀನುದಾರರು ಅಕ್ರಮ-ಅನ್ಯಾಯದಿಂದ ಕಸಿದುಕೊಂಡಿದ್ದ ಆಸ್ತಿಯನ್ನು ತಮ್ಮ ವಳಿತದ ಜೀತದಾಳುಗಳಿಗೆ ಹಂಚಿ ಸಾಮಾನ್ಯರಂತೆ ಬದುಕಬೇಕಾಯಿತು. ಇದು ಹೇಗಾಯಿತು? ಅಂದಿನ ಸಾಮಾಜಿಕ ನೆಲೆಗಟ್ಟು ಎಂತಿದ್ದಿತು? ಸಮಾಜದ ಉದ್ದಗಲಗಳನ್ನು ಹೆಣೆದುಕೊಂಡಿದ್ದ ಎಳೆಗಳು ಯಾವುವು? ಸದರಿ ದಬ್ಬಾಳಿಕೆಗೆ ಒಳಗಾಗಿದ್ದ ವರ್ಗದವರು ಹೇಗೆ ಅದರಿಂದ ಹೊರಬಂದರು? ಈ ನಿಟ್ಟಿನಲ್ಲಿ ಬ್ರಿಟಿಷರ ಕೊಡುಗೆ ಏನು? ಈಗ ಉಳಿದುಕೊಂಡಿರುವ ರಾಜವಂಶಸ್ಥರು ತಮ್ಮ ಕಥೆಗಳನ್ನು ಹೇಳಿದ ನಂತರ, ಚೂರು ಪಾರು ದುಡ್ಡಿಗೆ ಕೈ ಒಡ್ಡುವಂತಹ ಹೀನಾಯ ಸ್ಥಿತಿ ಹೇಗೆ ಉಂಟಾಯಿತು? (ಇದು ಕುಂವೀ ಅವರ ಅನುಭವ). ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಹುಡುಕುವುದರಲ್ಲಿ ಅರಮನೆ ಯಶಸ್ವಿಯಾಗಿದೆ. ಅರಮನೆ ಓದಿದಾಗ ಸಿಕ್ಕ ಮಾಹಿತಿ ಹಾಗೂ ಅನುಭವ ನನ್ನನ್ನು ಕಾಡುತ್ತಿದ್ದ ಸಂಶಯಗಳನ್ನು ನಿವಾರಿಕೊಳ್ಳುವುದಕ್ಕೆ ಸಹಕಾರಿಯಾಗಿದೆ ಎಂದರೆ ತಪ್ಪಾಗಲಾರದು.

### ಅರಮನೆಯ ಸಾಹಿತ್ಯ ಪ್ರಕಾರ

ಈ ಕಾದಂಬರಿಯನ್ನು ಸ್ಥೂಲವಾಗಿ ಮ್ಯಾಜಿಕ್ ರಿಯಲಿಸಮ್ ಎಂಬ ಸಾಹಿತ್ಯದ ಪ್ರಕಾರಕ್ಕೆ ಸೇರಿಸಬಹುದು. ಈ ಪ್ರಭೇದದಲ್ಲಿ ಮಿಥ್ಯೆ, ಮಾಯೆ ಮತ್ತು ಅಲೌಕಿಕ ಸಂಗತಿಗಳ ಬಳಕೆಯ ನಡುವೆ ಒಂದು ಪರಿಣಾಮಕಾರಿ ವಾಸ್ತವಿಕ ಕಥನವನ್ನು ಕಾಣಬಹುದು. ಮುನ್ನುಡಿಯಲ್ಲಿ ಪ್ರಸ್ತಾಪಿಸಿರುವಂತೆ ಇಂತಹ ಕಥನ ಶೈಲಿಯನ್ನು ಮಲೆಮಾದೇಶ್ವರ, ಮಂಟೇಸ್ವಾಮಿ ಮಹಾತ್ಮೆ, ಮುಂತಾದ ಕನ್ನಡ ಜನಪದ ಸಾಹಿತ್ಯದಲ್ಲಿ ಅನಾದಿ ಕಾಲದಿಂದಲೂ ಬಳಸಲಾಗುತ್ತಿದೆ. ಅರಮನೆಯಲ್ಲಿ ಕಂಡುಬರುವ ಇನ್ನೊಂದು ಪರಿಣಾಮಕಾರಿ ತಂತ್ರ ಸಾಂಕೇತಿಕತೆ ಅಥವಾ ಸಿಂಬಾಲಿಸಮ್. ಮೇಲ್ನೋಟಕ್ಕೆ ಒಂದು ಜಾನಪದ ಶೈಲಿಯ ಕಥೆಯಂತಿದ್ದರೂ ಇದರಲ್ಲಿ ಬಳಸಿರುವ ಸಿಂಬಾಲಿಸಮ್‌ನ್ನು ಗ್ರಹಿಸುವುದು ಕಷ್ಟವಾಗುವುದಿಲ್ಲ. ಕಥೆಯಲ್ಲಿ ಬರುವ ವೃತ್ತಾಂತಗಳು ಮತ್ತು ಪಾತ್ರಗಳು ಹಂತ ಹಂತವಾಗಿ ತೆರೆದುಕೊಳ್ಳುವಂತೆ ಬರೆದಿರುವ ಶೈಲಿ ಓದುಗನಿಗೆ ಕೌತುಕಮಯ ಅನುಭವವನ್ನು ನೀಡುತ್ತದೆ. ಪದರ ಪದರವಾಗಿ ಕಥೆಯನ್ನು ಜಾಣ್ಮೆಯಿಂದ ಬೆಳೆಸುತ್ತ ಒಂದು ಸಂಕೀರ್ಣ ಕಥೆಯನ್ನು ನೀಡುವುದರಲ್ಲಿ ಕುಂವೀ ಯಶಸ್ವಿಯಾಗಿದ್ದಾರೆ. ಕಾದಂಬರಿ ಓದುತ್ತಿದ್ದರೆ ಯಾವುದೋ ಜಾನಪದ ಶೈಲಿಯ ಕಥೆಗಾರನ ಧ್ವನಿಯಲ್ಲಿ ನಾವೇ ಕಿವಿಯಾರೆ ಕೇಳಿದ ಅನುಭವವಾಗುತ್ತದೆ. ಕುಂವೀ ಆಡುಮಾತಿನ ಧಾಟಿಯನ್ನು ಬಹಳ ಪರಿಣಾಮಕಾರಿಯಾಗಿ ಬರವಣಿಗೆಯಲ್ಲಿ ಸೆರೆಹಿಡಿದಿದ್ದಾರೆ. ಪದಗಳಿಗೆ ಬಳಸುವ

ಅಕ್ಷರಗಳು ಸಾಂಪ್ರದಾಯಿಕ ಬಳಕೆಗಿಂತ ಭಿನ್ನವಾಗಿದ್ದು ಕೆಲವೊಮ್ಮೆ ತೊಡರುವಂತೆ ಆಗುತ್ತದೆ. ಉದಾಹರಣೆಗೆ ಕಥೆಯಲ್ಲಿ ಜಗಲೂರವ್ವ ಹೇಳುವ ಮಾತು ಈ ರೀತಿ ಇದೆ– 'ಯಿದೇ ವಡಲ ಸವ್ರುಭಾಗ್ಯ ಯಂದಂದುಕೊಂಡು ಸಾಕೋತೀನಿ'.[೧] ಕಥೆಯ ಪ್ರಾರಂಭದಲ್ಲಿ ಭಾಷೆ ಸ್ವಲ್ಪ ಕಷ್ಟವೆನಿಸಿತು. ಆದರೆ ಕುಂವೀ ಅವರು ಕಾದಂಬರಿಯ ಪ್ರಾರಂಭದಲ್ಲಿ ಸೂಚಿಸಿರುವಂತೆ ಆರಂಭಿಕ ಪುಟಗಳನ್ನು ದಾಟಿದ ಮೇಲೆ ಕೊನೆಯ ಪುಟ ತಲುಪುವುದು ಕಷ್ಟವಾಗಲಿಲ್ಲ. ಇನ್ನು ಅವರು ಬಳಸಿರುವ ಬಳ್ಳಾರಿ ಪ್ರಾಂತ್ಯದ ಭಾಷೆಯ ನುಡಿಗಟ್ಟುಗಳು, ಪದಬಳಕೆ, ಧಾಟಿ ಮತ್ತು ಉದ್ಗಾರಗಳು ಬಹಳವೇ ಇಷ್ಟವಾಯಿತು. ಈ ಲೇಖನದಲ್ಲಿ ಅಂತಹ ಕೆಲವು ಭಾಷಾ ಪ್ರಯೋಗಗಳನ್ನು ಮಿತವಾಗಿ ಬಳಸಿಕೊಳ್ಳಲಾಗಿದೆ.

**ಕುಂವೀ ಪರಿಚಯ**

ಇಂದಿನ ಕನ್ನಡ ಸಾಹಿತ್ಯ ಲೋಕದ ಪ್ರಮುಖ ಬರಹಗಾರರಲ್ಲಿ ಕುಂಬಾರ ವೀರಭದ್ರಪ್ಪ ಒಬ್ಬರು. ಕುಂ.ವೀ. ಎಂದೇ ಪ್ರಸಿದ್ಧರಾಗಿರುವ ಇವರು ಕನ್ನಡದಲ್ಲಿ ಎಂ. ಎ. ಪದವೀಧರರು. ತಮ್ಮ ವಿನೋದಮಯ ಶೈಲಿಗೆ, ತಾವು ಆರಿಸಿಕೊಳ್ಳುವ ವಿಷಯಗಳಿಗೆ ಕುಂವೀ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ಇವರು ರಚಿಸಿರುವ 'ಯಾಪಿಲ್ಲು', 'ಶಾಮಣ್ಣ', 'ಬೇಲಿ ಮತ್ತು ಹೊಲ' ಮುಂತಾದ ಕೃತಿಗಳು ಓದುಗರ–ವಿಮರ್ಶಕರ ಮೆಚ್ಚುಗೆ ಗಳಿಸಿವೆ. ಇವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕಾದಂಬರಿ 'ಕೊಟ್ರೇಶಿ ಕನಸು' ಎಂಬ ಹೆಸರಿನಲ್ಲಿ ಚಲನಚಿತ್ರವಾಗಿ ೧೯೯೫ರ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂಬ ರಾಷ್ಟ್ರಪ್ರಶಸ್ತಿಯನ್ನು ಗಳಿಸಿದೆ. 'ಬೇಲಿ ಮತ್ತು ಹೊಲ' ನಾಟಕರೂಪವಾಗಿ ಅನೇಕ ಪ್ರದರ್ಶನಗಳನ್ನು ಕಂಡಿದೆ, ಚಲನಚಿತ್ರವಾಗಿಯೂ ಹೊರಬಂದಿದೆ. ಪ್ರಸ್ತುತ ಕುಂ.ವೀ. ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಗೂಳ್ಯಂ ಗ್ರಾಮದಲ್ಲಿ ಶಾಲಾಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**ಅರಮನೆಗೆ ಪ್ರವೇಶ**

ಅರಮನೆ ಕಾದಂಬರಿಯ ಭಂಡಾರದಲ್ಲಿ ನಾವು ಕಾಣುವ ವಿಚಾರಗಳು ಒಂದಲ್ಲ ಎರಡಲ್ಲ. ಈ ಕಾದಂಬರಿಯಲ್ಲಿ, 'ಯೇನಿದೆ ಅಂದ್ರೆ ಯೇನೆಲ್ಲ ಯಿದೆ! ಯೇನಿಲ್ಲ ಅಂದ್ರೆ ಯೇನೇನೂ ಯಿಲ್ಲ!'[೨] ಜಾತಿಪದ್ಧತಿಯ ಮೇಲೆ ಟೀಕೆ, ಸಾಮಾಜಿಕ ಹಾಗೂ ಧಾರ್ಮಿಕ ಸೆಣಸಾಟ, ಮೂಢನಂಬಿಕೆ, ಹಿಂಸೆಯ ತಾಂಡವ, ಹತಾಶ ಮನೋಭಾವ, ಧರ್ಮದ ಹೆಸರಿನಲ್ಲಿ ದಬ್ಬಾಳಿಕೆ, ದೀನ–ದಲಿತರ ಶೋಷಣೆ, ರಾಬಿನ್‌ಹುಡ್‌ನಂತೆ ಬಡವರ ಬಂಧುವಾಗಿದ್ದ ನಾಗೀರೆಡ್ಡಿಯ ಕಥೆ, ದೈವದ ಹೆಸರಿನಲ್ಲಿ ಮೋಸ ಮಾಡುವ ಸಾಧು–ಸಂತರು, ಅಧಿಕಾರ ಲಾಲಸೆ, ಕಾರ್ಯಕ್ಷಮತೆಗೆ ಮತ್ತು ದೂರದೃಷ್ಟಿಗೆ ಹೆಸರಾಗಿದ್ದ

ಬ್ರಿಟಿಷ್ ಅಧಿಕಾರಿಗಳು - ಯಿವೆಲ್ಲ ಯಿವೆ. ಬ್ರಿಟಿಷರ ದೃಷ್ಟಿಯಲ್ಲಿ ಕಂಡುಬಂದ ಭಾರತದ ಪರಿಚಯವನ್ನೂ ಕಾದಂಬರಿಯಲ್ಲಿ ಕಾಣಬಹುದು. ಕಥೆಯಲ್ಲಿ ಬಳ್ಳಾರಿ ಪ್ರಾಂತ್ಯದ ಕಲೆಕ್ಟರ್ ಆದಂತಹ ಥಾಮಸು ಮನ್ರೊ ಹೇಳುವಂತೆ, ಭಾರತೀಯರು ಭೂತಕಾಲದಲ್ಲೆ ಉಳಿಯಲೆತ್ನಿಸುವ ಜನ. ವರ್ತಮಾನದಲ್ಲಿ ಅಥವಾ ಭವಿಷ್ಯತ್ತಿನಲ್ಲಿ ಅಲ್ಲ. ಅರಮನೆಯಲ್ಲಿ ಈ ವಿಷಯದ ಸುತ್ತೂ ಅನೇಕ ಕಥಾ ಎಳೆಗಳನ್ನು ಕಾಣಬಹುದು. ಈ ಎಳೆಗಳನ್ನು ಬಳಸಿ ಕುಂವೀ ಒಂದು ಅದ್ಭುತವಾದ ಚೌಕವನ್ನು ಹೆಣೆದಿದ್ದಾರೆ. ಅಂದಿನ ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಈ ಚೌಕದಲ್ಲಿ ನಾವು ಕಾಣಬಹುದು.

**ಕಥೆಯ ಕಾಲ ಮತ್ತು ಪರಿಸರ**

ಕಥೆಯ ಕಾಲ ಹದಿನೆಂಟನೆಯ ಶತಮಾನದ ಅಂತಿಮದ ಮತ್ತು ಹತ್ತೊಂಬತ್ತನೆ ಶತಮಾನದ ಪ್ರಾರಂಭದ ಎರಡು ಮೂರು ದಶಕಗಳು. ಈ ಕಥೆಯು ನಡೆಯುವ ಸ್ಥಳ ಬಳ್ಳಾರಿ, ಗುಂಟೂರು, ಕಡಪಾ ಪ್ರದೇಶದಲ್ಲಿ ಅಡಕವಾಗಿರುವ ಕುಂತಳ ಸೀಮೆಯ ಕುದುರೆಡವು ಎಂಬ ಗ್ರಾಮ. ಅಲ್ಲಿ ಪುವ್ವಲ ರಾಜವಂಶದ ಸ್ಥಾನಮಾನದ ಸಂಕೇತವಾಗಿ ಒಂದು ಅರಮನೆ ಉಂಟು. ಅರಮನೆಯಲ್ಲಿ ವಯಸ್ಸಾದ ರಾಜಮಾತೆ ಭಯ್ರಮಾಂಬೆ, ರಾಜಕುಮಾರ ಕಾಟಯ್ಯ ನಾಯಕ, ಮತ್ತು ಆತನ ಐವರು ಹೆಂಡಿರು ವಾಸಮಾಡುತಲಿದ್ದಾರೆ. ಅರಮನೆಗೆ ಇರುವ ಆದಾಯ ಪ್ರಜೆಗಳ ಮೇಲೆ ಹೇರಲ್ಪಡುತ್ತಿರುವ ಅನೇಕ ತೆರಿಗೆಗಳು.

**ಅರಮನೆಯ ಕಥೆ, ಪಾತ್ರಗಳು ಮತ್ತು ಸನ್ನಿವೇಶಗಳು**

ಕಥೆ ಪ್ರಾರಂಭವಾಗುವುದೇ ದೇಶ ಕಾಲಗಳ ಒಂದು ಸ್ನ್ಯಾಪ್-ಶಾಟ್‌ನಿಂದ. ಕುಂತಳ ಸೀಮೆಯ ಸುತ್ತ ಮುತ್ತಲಿನ ಪ್ರದೇಶಗಳ ಜನಜೀವನ ಮತ್ತು ವಿದ್ಯಮಾನಗಳ ಪಟ್ಟಿಯಂತಿರುವ ಪ್ರಾರಂಭದ ಭಾಗಗಳು ಕಥೆಯ ತಳಹದಿಯನ್ನು ಸೃಷ್ಟಿಸುವಲ್ಲಿ ಫಲಕಾರಿಯಾಗಿವೆ. ಹತ್ತಾರು ಕಥೆಗಳ ಎಳೆಗಳು ಸಮಾನಾಂತರವಾಗಿ ಹರಿದಿರುವುದನ್ನು ಮೊದಲ ಪುಟದ ಈ ವಾಕ್ಯವೃಂದದಲ್ಲೇ ಕಾಣುತ್ತೇವೆ. 'ವಾರದ ಹಿಂದೆಯಷ್ಟೆ ಬೆಳಗುಪ್ಪದ ಜಮೀಂದಾರ್ರು ಚಿನ್ನೋಬಳ ರೆಡ್ಡಿಯನ್ನೂ, ಮುಷ್ಠೂರು ಮಾದಿರೆಡ್ಡಿಯನ್ನೂ ಯೇಕಕಾಲಕ್ಕೆ ಮಣಿಸಿ ಕಡುಪಾದ ವಸ್ತಿವಳಗ.... ಕಲೆಟ್ರು ಥಾಮಸು ಮನ್ರೊ ಸಾಹೇಬನು ತನ್ನ ಪ್ರತಿಬಿಂಬವನ್ನು ತಾನು ಮೋಹಿಸಿಕೊಳ್ಳುತ್ತಿರುವಾಗ್ಗೆ.... ತಮ್ಮ ರಾಜ ನೆಟಕಲ್ಲಪ್ಪ ನಾಯಕನ ವುಪಟಳಕ್ಕೆ ರೋಸಿ ನೂರಾರು ಮಂದಿ ಪ್ರಜೆಗಳು.... ಗುಳೆ ಹೊರಟಿರುವಾಗ್ಗೆ.... ಯಿತ್ತ ಕುದುರೆಡವು ಪಟ್ಟಣದ ಅರಮನೇಲಿ ರಾಜಮಾತೆ ಭಯ್ರಮಾಂಬೆಯು ತನ್ನ ಸವತಿ ಮಗ ಕಾಟಯ್ಯ ನಾಯಕನೊಂದಿಗೆ ವಂದು ಕಾಸಿನ ಸರದ ಯಿಷಯದಲ್ಲಿ ಜಗಳವಾಡುತಲಿದ್ದಳು.... ಕಸ ಗುಡಿಸೋರು ಕಸ ಗುಡಿಸುತಲಿದ್ದರು.... ಹಲ್ಲಿದ್ದೋರು

ಹುರುಗಡ್ಲಿ ಜಮಡುತಲಿದ್ದರು.... ಹಲ್ಲಿಲ್ಲದೋರು ಜಮ್ಮಕಡ್ಡಿ ನಮಲುತಲಿದ್ದರು....'
ಇತ್ಯಾದಿ ಇತ್ಯಾದಿ.

**ವಸ್ತಿಯಲ್ಲಿ ಆದಿಸಗುತಿಯ ಆವಾಹನೆ**

ಈ ಕಥೆಯ ನಾಯಕ, ಮೂಳೆ ವೋಬಯ್ಯ ಎಂಬ ಅರವತ್ತು ಮೀರಿದ ಮನುಷ್ಯ. ವೋಬಯ್ಯನಾದರೂ ಸಮಾಜದ ಕಣ್ಣಿನಲ್ಲಿ ಕೆಳವರ್ಗದವನು. ಅವನ ಕೆಲಸ ಅರಮನೆಯಲ್ಲಿ ರಾಜಮಾತೆ ಭಯ್ರಮಾಂಬೆಯ ಪಾದದಡಿ ಕೂತು, ಆಕೆಯು ತನ್ನ ಬಾಯಲ್ಲಿ ನಮಲುತಲಿದ್ದ ತಾಂಬೂಲವನ್ನು ಆಗಾಗ ಉಗಿಯಲು ಪಿಕದಾನಿ (ಒಂದು ಪಾತ್ರೆ) ಹಿಡಿಯುವುದು. ಇಂತಹ ವೋಬಯ್ಯ ಒಂದು ಮಧ್ಯಾಹ್ನ ತನ್ನ ಮನೆಯ ಮುಂದೆ 'ಯಡಗಯ್ಯನ್ನು ತಲೆಗಾನಿಸಿಕೊಂಡು ಬೀದಿಯ ತುದಿಯಲ್ಲಿ.... ಬಿಸಿಲಗುದುರೆಯತ್ತ ದ್ರುಸ್ಟಿ ಅಂಟಿಸಿ ವಡಲೊಳಗಿನ ನೀರು ಅಳ್ಳಾಡದಂತೆ ಕೂಕಂಡಿರುವಾಗ' ಒಂದು ಕನಸು ಕಾಣುತ್ತಾನೆ. ಕನಸಿನಲ್ಲಿ ತನ್ನ ದೇಹವು ತನ್ನಿಂದ ಬೇರೆಯಾಗಿರುವಂತೆ ಮತ್ತು ಒಂದು ದೊಡ್ಡ ಆಕೃತಿಯು ತನ್ನ ದೇಹವನ್ನು ಪ್ರವೇಶ ಮಾಡಿದಂತೆ ಭಾಸವಾಗುತ್ತದೆ. ಈ ಆಕೃತಿ ಯಾರೆಂದರೆ ಮಹಾ ಶಕ್ತಿಯಾದ ಸಾಂಬವಿ. ವೋಬಯ್ಯನಿಗೆ ನಂಬಲಾಗುವುದಿಲ್ಲ. ಸಾವಿರಾರು ಹಕ್ಕಿಗಳ ಕಣ್ಣುಗಳಿಂದ ಪ್ರಪಂಚ ನೋಡುವ, ಗುಡುಗು ಸಿಡಿಲುಗಳನ್ನೆ ವಟಗುಟ್ಟಲು ಬಳಸುವ ಈ ಮಹಾಶಕ್ತಿ, ಯಃಕಸ್ಚಿತ್ ಪಿಕದಾನಿ ವೋಬಯ್ಯನ ದೇಹವನ್ನು ವಸ್ತಿ ಮಾಡಿಕೊಳ್ಳುವುದು ಎಂದರೇನು ಸಿವನೇ....?

ಇಲ್ಲಿನ ಸಿಂಬಾಲಿಸಮ್ ಗಮನಿಸಿ. ತ್ರಾಣವಿಲ್ಲದ ವೋಬಯ್ಯನನ್ನು ಅವನ ದೇಹದಿಂದ ಓಡಿಸಿ ಆ ಜಾಗವನ್ನು ಸಾಂಬವಿ ಎಂಬ ಅದಮ್ಯ ಶಕ್ತಿಯು ಆಕ್ರಮಿಸಿಕೊಳ್ಳುತ್ತಿದೆ. ಮೇಲ್ನೋಟಕ್ಕೆ ಮೂಢನಂಬಿಕೆಯಿಂದ ಕೂಡಿದ ಒಂದು ಘಟನೆಯಂತಿದ್ದರೂ ಇಲ್ಲಿ ನಾನು ಕಂಡದ್ದು ಒಂದು ಸಾಮಾಜಿಕ ಕ್ರಾಂತಿಯ ಸಂಕೇತವನ್ನು. ವೋಬಯ್ಯನಲ್ಲಿ ಅಷ್ಟು ದಿವಸ ಸುಪ್ತವಾಗಿದ್ದ ಶಕ್ತಿಯೊಂದು ಜಾಗೃತಗೊಂಡಿದೆ. ಆದರೆ ವೋಬಯ್ಯನಿಗೆ ಇದನ್ನು ನಂಬಲಾಗುತ್ತಿಲ್ಲ. ಸಾಂಬವಿಯು ತನ್ನಂಥ ನಿಕೃಷ್ಟನ ದೇಹದಲ್ಲಿ ಮನೆ ಮಾಡುವುದು ಹೇಗೆ ಸಾಧ್ಯ ಎಂದು ತನ್ನ ಶಕ್ತಿಯನ್ನೇ ಸಂದೇಹಿಸುತ್ತಾನೆ. ಕೈಗೆ ಬಂದ ಬಲವನ್ನು ತನ್ನದಾಗಿಸಿಕೊಳ್ಳಲು ಆತ್ಮಸ್ಥೈರ್ಯ ಬೇಕು. ಶತಮಾನಗಳಿಂದ ನಮ್ಮ ಸಮಾಜದ ಕಣ್ಣಲ್ಲಿ ಕೀಳೆನಿಸಿಕೊಂಡಂಥ ವೋಬಯ್ಯನಂಥವರು ತಮ್ಮ ಆತ್ಮಶಕ್ತಿಯನ್ನೇ ಕಳೆದುಕೊಂಡು ಹತಾಶರಾಗಿರುವುದು ಇಲ್ಲಿ ಕಾಣುತ್ತೇವೆ. ತನ್ನ ದೇಹವನ್ನು ಆಕ್ರಮಿಸಿಕೊಳ್ಳುವ ಹಕ್ಕನ್ನು ಕೊಟ್ಟವರಾರೆಂದು ಕೊಳ್ಳುತ್ತ ಸಾಂಬವಿಯನ್ನು ತಡೆಯಲು ನೋಡುತ್ತಾನೆ. ಆದರೆ ಸಾಂಬವಿಯು ಇವನ ದೇಹವನ್ನು ಸೇರಿಕೊಂಡೇಬಿಡುತ್ತಾಳೆ. ಆ ಕ್ಷಣದಲ್ಲಿ ಅವನ ದೇಹವು ಪುಳಕಿತಗೊಂಡು ಒಂದು ಅಲೌಕಿಕವಾದ ಅನುಭವವಾಗುತ್ತದೆ.

ವೋಬಯ್ಯನಲ್ಲಿ ಮನೆ ಮಾಡಿರುವ ಈ ಶಕ್ತಿಯ ಪ್ರಭಾವದಿಂದ ಇಡೀ ಪಟ್ಟಣವೆ ಪುಳಕವನ್ನು ಅನುಭವಿಸುತ್ತದೆ. 'ಯಲ್ಲಾರೊಳಗೂ ಯಂಥದೋ ವಂದು ಅಗೋಚರ ಆನಂದವು, ಅನಿರ್ವಚನೀಯ ಭಾವನೆಯು... ಮೂಗರಿಗೆ ಮಾತಾಡತೀವೆಂಬ ಭಾವನೆ ಬಂತು. ಕಿವುಡ ಕೆಪ್ಪರ ಕಿವಿಗಳನು ಸಬುದಗಳು ತುಂಬಿದವು... ನವಿಲು ಕೆಂಬೂತಗಳು ತಮ್ಮ ತಮ್ಮ ತಾರತಮ್ಯ ಮರೆತವು' ಎಂದು ಕುಂವೀ ಸಮಾಜದಲ್ಲಿ ಒಂದು ಹೊಸ ಶಕ್ತಿ ಸಂಚರಿಸಿ ತಾರತಮ್ಯಗಳನ್ನು ಬಡಿದೋಡಿಸುವ ಸಾಧ್ಯತೆಗೆ ಆಶಿಸುತ್ತಾರೆ. ಈ ದಿವ್ಯ ಕನಸಿನಲ್ಲಿ ದಲಿತನಾದ ವೋಬಯ್ಯನಿಗೆ ತನ್ನ ಸುಪ್ತ ಶಕ್ತಿಯು ಜಾಗೃತಗೊಂಡಂತೆನಿಸುತ್ತದೆ. ತನ್ನಂಥ ದಲಿತರು ಏಳಿಗೆಯನ್ನು ಹೊಂದಿದಂತೆ ಭಾಸವಾಗುತ್ತದೆ. ವೋಬಯ್ಯನ ಮನಸ್ಸಿಗೆ ತನ್ನ ಶಕ್ತಿ ಏನು ಎಂದು ಅರಿವಾಗಿ ಅವನ ಆತ್ಮವಿಶ್ವಾಸ ಹೆಚ್ಚಾಗಿದೆ ಎಂಬ ಸಂಕೇತವನ್ನು ಈ ಘಟನೆಯಲ್ಲಿ ಕಾಣಬಹುದು. ಕಣ್ಣು ಬಿಟ್ಟು ಎಚ್ಚರಗೊಂಡಾಗ ತನ್ನಲ್ಲೇನೊ ಬದಲಾವಣೆ ಉಂಟಾಗಿದೆ ಎನಿಸುತ್ತದೆ. ತನ್ನ ಪ್ರತಿಬಿಂಬವನ್ನು ನೋಡಬೇಕೆನಿಸುತ್ತದೆ. ಆದರೆ ಅವನ ಬಳಿ ಕನ್ನಡಿ ಇಲ್ಲ. ಇಡೀ ಕೇರಿಯ ಮಂದಿ ತಮ್ಮನ್ನು ತಾವು ಕಂಡುಕೊಳ್ಳುವುದು ಕೇರಿಯ ಇತರರ ಕಣ್ಣುಗಳಲ್ಲಿ. ಅಂದರೆ ಅವರೆಲ್ಲರಿಗೂ ತಮ್ಮ ವ್ಯಕ್ತಿತ್ವವನ್ನು, ಸಾಮರ್ಥ್ಯವನ್ನು ತಮ್ಮ ವರ್ಗದ ಹೊರಗೆ ತೋರಿಸಲು ಅವಕಾಶವೇ ಇಲ್ಲವಾಗಿದೆ ಎಂಬುದು ಇಲ್ಲಿ ಮನದಟ್ಟಾಗುತ್ತದೆ. ಅಂತಹವರನ್ನು ಬಡಿದೆಬ್ಬಿಸಲು, ತಮ್ಮ ಸಂಕೋಲೆಗಳನ್ನು ಕಳಚಿ ಮೇಲೇಳಲು ಸಾಂಬವಿಯಂಥ ಒಂದು ಶಕ್ತಿ ಸಹಾಯಕವಾಗುತ್ತದೆ.

ವೋಬಯ್ಯನಿಗೆ ತನ್ನ ಬಗ್ಗೆ ಇರುವ ಕಲ್ಪನೆ ರಾಜಮಾತೆ ಉಗಿಯುವ ಪಿಕದಾನಿಯಲ್ಲಿ ಕಾಣಿಸುತ್ತಿದ್ದ ಪ್ರತಿಬಿಂಬದಿಂದ. ಅದೂ ಅಲ್ಪಸ್ವಲ್ಪ ಭಾಗ ಮಾತ್ರ. ಇದು ಬಹಳ ಪ್ರಬಲವಾದ ಸಂಕೇತ. ಸಮಾಜದಲ್ಲಿನ ಪಟ್ಟಭದ್ರ ಶಕ್ತಿಗಳು ವೋಬಯ್ಯನಂಥವರಿಗೆ ತಮ್ಮ ಸಂಪೂರ್ಣ ಯೋಗ್ಯತೆಯ ಅರಿವು ಮೂಡದಂತೆ ಕಡಿವಾಣ ಹಾಕಿ ಬಿಟ್ಟಿದ್ದಾರೆ. ಈ ಸಂಕೋಲೆಗಳಿಂದ ಮುಕ್ತಗೊಳ್ಳಲು ವೋಬಯ್ಯನಂಥವರು ತಮ್ಮ ಶಕ್ತಿಯನ್ನು ಜಾಗೃತಗೊಳಿಸಬೇಕಾಗಿದೆ. ಈ ಸಾಮಾಜಿಕ ಕ್ರಾಂತಿ ವೋಬಯ್ಯನಲ್ಲಿ ಆಂತರಿಕವಾಗಿ ಹುಟ್ಟಿರುವಂತಹುದು ಎಂಬುದನ್ನು ಇಲ್ಲಿ ಗಮನಿಸಬಹುದು. ಸಾಂಬವಿಯ ಆಗಮನ ಆತನ ಶಕ್ತಿಯ ಸಂಕೇತವು ಮಾತ್ರ. ಯೊಹಾನ್ ವುಲ್ಫ್‌ಗ್ಯಾಂಗ್ ಫಾನ್ ಗೇಯ್ತ (Goethe) ಹೇಳಿದಂತೆ `At the moment of commitment the entire world conspires to help you' ('ಒಂದು ಘನ ಕಾರ್ಯ ಮಾಡಲು ಸಂಕಲ್ಪ ಮಾಡಿದಾಗ ಇಡೀ ವಿಶ್ವವು ನಿಮಗೆ ಸಹಾಯ ಮಾಡಲು ಹೊಂಚು ಹಾಕತೊಡಗುತ್ತದೆ'). ಹಾಗೆ ಆ ಕ್ಷಣದಲ್ಲಿ ದೂರದಲ್ಲೆಲ್ಲೊ ಆರ್ಭಟಿಸುತ್ತಿದ್ದ ಬಿರುಗಾಳಿಯು ವೋಬಯ್ಯನೆಡೆಗೆ ತಂಗಾಳಿಯನ್ನು ಕಳುಹಿಸಿತಂತೆ ಎಂಬಲ್ಲಿಗೆ ಸಿವಸಂಕರ ಮಾದೇವಾ....

ಇದಾದ ನಂತರ ಒಂದು ವಿಚಿತ್ರ ಸ್ಥಿತಿಯಲ್ಲಿದ್ದು ವೋಬಯ್ಯನು ಮಾತಾಡದೆ ಸುಮ್ಮನೆ ಕೂತಿರುತ್ತಾನೆ. ಉತ್ತಮ ಸ್ವಭಾವುಳ್ಳವಳೂ ಮತ್ತು ಗಟ್ಟಿಗಿತ್ತಿಯೂ ಆದ ಅವನ ಹೆಂಡತಿ ಜಗಲೂರವ್ವನು ಅವನನ್ನು ಎಚ್ಚರಿಸಲು ಪ್ರಯತ್ನಿಸಿ ವಿಫಲಳಾದಾಗ ಹಳ್ಳಿಯವರನ್ನು ಕರೆಯುತ್ತಾಳೆ. ಮೌನಿಯಾಗಿದ್ದ ವೋಬಯ್ಯ ಕೊನೆಗೆ ಬಾಯ್ತೆರೆದು ತಾನು ಸಾಂಬವಿ ಎಂದೂ, ಇನ್ನು ಮುಂದೆ ಎಲ್ಲರು ತನ್ನನ್ನು ಪೂಜಿಸಬೇಕೆಂದೂ ಹೇಳುತ್ತಾನೆ. ಆದರೆ ಕೆಲ ಸಮಯದ ನಂತರ ವೋಬಯ್ಯ ಇದ್ದಕ್ಕಿದ್ದಂತೆ ಮಾಯವಾಗಿಬಿಡುತ್ತಾನೆ. ಹಳ್ಳಿಯವರೆಲ್ಲ ಹುಡುಕಲು ಪ್ರಾರಂಭಿಸುತ್ತಾರೆ. ಕೊನೆಗೆ ವೋಬಯ್ಯ ಹಳ್ಳಿಯ ಹೊರಗಿನ ಒಂದು ಕಲ್ಲುಮಂಟಪದಲ್ಲಿ ಕಂಡುಬರುತ್ತಾನೆ. ಅವನನ್ನು ಅಲ್ಲಿಂದ ಹಳ್ಳಿಗೆ ಕರೆದೊಯ್ಯಲು ಒಂದು ಪಲ್ಲಕ್ಕಿಯಲ್ಲಿ ಕೂರಿಸುತ್ತಾರೆ. ಆದರೆ ಆ ಪಲ್ಲಕ್ಕಿಯನ್ನು ಎತ್ತಲು ಯಾರಿಗೂ ಸಾಧ್ಯವಾಗುವುದಿಲ್ಲ. ಆಗ ಇಬ್ಬರು 'ಹೊಲೆಯರ' ಹುಡುಗರು ಪಲ್ಲಕ್ಕಿಯನ್ನು ಸಲೀಸಾಗಿ ಎತ್ತಿ ನೆರೆದಿದ್ದ ಜನರು ಮೂಗಿನ ಮೇಲೆ ಬೆಟ್ಟಿಡುವಂತೆ ಮಾಡುತ್ತಾರೆ. ನೆರೆದ ಮಂದಿಗೆ ಪಲ್ಲಕ್ಕಿಯನ್ನು ಆ ಹುಡುಗರು ಎತ್ತಿದ್ದಕ್ಕೆ ಸಂತಸಪಡುವುದರ ಬದಲಾಗಿ 'ಹೊಲೆಯರು' ತಾಯಿಯನ್ನು ಮುಟ್ಟಿದ್ದು ಏನು ಅಪಾಯ ತರುತ್ತದೋ ಎಂದು ಹೆದರುವುದು ಅಂದಿನ ಸಮಾಜದಲ್ಲಿದ್ದ ತಾರತಮ್ಯಗಳ ಮೇಲೆ ಬೀರಿದ ಬೆಳಕಾಗಿ ದಲಿತರ ಸ್ಥಿತಿಗೆ ದೃಷ್ಟಾಂತವಾಗಿದೆ.

**ಜಾಗೃತಗೊಂಡ ಶಕ್ತಿ – ಮುಂದೆ ಆಗಬೇಕಾದ ಕಾರ್ಯವುಗಳು**

ಹಳ್ಳಿಯವರು ಸಾಂಬವಿಯ ಪೂಜೆ ಪುನಸ್ಕಾರಗಳಲ್ಲಿ ಮತ್ತು ಅವಳ ಮಹಿಮೆಯನ್ನು ಕೊಂಡಾಡುವುದರಲ್ಲಿ ಮುಳುಗಿಹೋಗುತ್ತಾರೆ. ತಿಳಿದಂತಹವರಾದ ಹಳ್ಳಿಯ ಮುದೇತರು (ಹಿರಿಯರು) ಸಾಂಬವಿಯನ್ನು ಯಾವ ರೀತಿ ನೋಡಿಕೊಳ್ಳಬೇಕು, ಏನೇನು ಕಾರ್ಯವುಗಳು ನಡೆಯಬೇಕು ಇತ್ಯಾದಿ ನಿರ್ಧರಿಸುತ್ತಾರೆ. ಸಾಂಬವಿಯು ಪಿಕದಾನಿ ವೊಬಯ್ಯನನ್ನು ವಸ್ತಿ ಮಾಡಿಕೊಂಡಿರುವ ಸುದ್ದಿಯು ಕುದುರೆಡವು ಅಷ್ಟೇ ಅಲ್ಲದೆ ಸುತ್ತಮುತ್ತಲಿನ ಊರಿನಲ್ಲೆಲ್ಲ ಹರಡಿಬಿಡುತ್ತದೆ. ಸಾಂಬವಿಯನ್ನು ಹೊಳೆಗೆ ಕರೆದುಕೊಂಡು ಹೋಗಿ ಮಂಗಳ ಸ್ನಾನ ಇತ್ಯಾದಿ ಶಾಸ್ತ್ರಗಳನ್ನು ಮಾಡುವ ಕಾರ್ಯ ಮೊದಲು ಆಗಬೇಕು. ಹಾಗಾಗದಿದ್ದಲ್ಲಿ ಅನಾಹುತಗಳು ನಡೆದುಹೋಗುತ್ತವೆ. ಆದರೆ ಸಾಂಬವಿ ತಾನು ಹೊರಡುವುದಿಲ್ಲ ಎಂದು ಪಟ್ಟು ಹಿಡಿದಿದ್ದಾಳೆ. ಏಕೆ ಎಂದು ಯಾರಿಗೂ ತಿಳಿಯುತ್ತಿಲ್ಲ. ಏಕೆಂದರೆ ಸಾಂಬವಿಯು ಮೌನವಾಗಿಬಿಟ್ಟಿದ್ದಾಳೆ. ಅಷ್ಟಾಗಿ ವೋಬಯ್ಯನ (ಸಾಂಬವಿಯ) ಬಾಯಲ್ಲಿ ಬರುವ ಅರ್ಥವಾಗದ ಶಬ್ದಗಳನ್ನು ಅರ್ಥೈಸಿ ಜನಸಾಮಾನ್ಯರಿಗೆ ಹೇಳುತ್ತಿದ್ದವರು ಹಂಪಜ್ಜ ಹಾಗೂ ಹಳ್ಳಿಯ ಇತರ ಮುದೇತರು. ಹೆದರಿ ಕಂಗಾಲಾಗಿರುವ ಭಕ್ತಾದಿಗಳಿಗೆ ಸಾಂಬವಿ ಏನು ಬಯಸುತ್ತಿರುವಳು ಎಂಬುದು

ಮುದೇತರ ಮೂಲಕ ತಿಳಿಯುತ್ತದೆ. 'ಹೊಳೆಗೆ ಹೋಗುವ ಪಲ್ಲಕ್ಕಿ ಮೆರವಣಿಗೆಗೆ ಅರಮನೆಯ ಸಿಂಹಾಸನ ಬೇಕಂತೆ ಸಿವನೇ!' ಕಥೆಯಲ್ಲಿ ಇದು ಒಂದು ಪ್ರಮುಖ ಘಟ್ಟ. ಸಮಾಜ ಪರಿವರ್ತನೆಯ ಮೊದಲ ಮೈಲಿಗಲ್ಲು.

ಹಳ್ಳಿಯವರೆಲ್ಲ ಅರಮನೆಗೆ ಹೋಗಿ ರಾಜಮಾತೆಯನ್ನು ಭೇಟಿ ಮಾಡಿ ಸಿಂಹಾಸನವನ್ನು ಕೊಡುವಂತೆ ಕೇಳುತ್ತಾರೆ. ರಾಜಮಾತೆಗೆ ರೋಷ ಉಂಟಾಗುತ್ತದೆ. 'ತನ್ನ ಉಗುಳನ್ನು ಹಿಡಿಯುತ್ತಿದ್ದ ಈ ಪಿಕದಾನಿ ವೋಬಯ್ಯ ಈಗ ತನ್ನ ಸಿಂಹಾಸನವನ್ನು ಬಯಸುತ್ತಿರುವನೆ? ಎಲಾ ಕುತಂತ್ರಿ' ಎಂದು ಎಂದುಕೊಳ್ಳುತ್ತಾಳೆ. ಆದರೆ ಜನ ಮರುಳೊ ಜಾತ್ರೆ ಮರುಳೊ ಎಂಬಂತೆ ಹಳ್ಳಿಯವರೆಲ್ಲ ಈ ರೀತಿ ಸಾಂಬವಿಯ ವಕಾಲತ್ತು ವಹಿಸಿ ಅರಮನೆಯ ಹೊರಗೆ ಛಲದಿಂದ ನಿಂತಿರುವಾಗ ಅವಳ ರೋಷವನ್ನು ಕೇಳುವವರಾರು? ಅವಳ ಸೊಸೆಯೇ ರೇಗುತ್ತಾಳೆ 'ಛೇ ಯತ್ತೇ, ಅದರ ಮ್ಯಾಲ ಹತ್ತೋರಿಲ್ಲ, ಯಿಳಿಯೋರಿಲ್ಲ.... ಪ್ರಜೆಗಳೇ ಕೇಳಲಕ ಹತ್ತ್ಯಾರಂದ ಮ್ಯಾಕ ಕೊಟ್ಟು ಕಳುವು' ಎಂದಾಗ ಬೇರೆ ಗತಿ ಇಲ್ಲದೆ ಕೊಡುತ್ತಾಳೆ. ಇಲ್ಲಿ ಸಾಂಕೇತಿಕತೆ ಅಡಗಿರುವುದನ್ನು ನಾವು ಗ್ರಹಿಸಬಹುದಾಗಿದೆ. ಒಂದು ಅಲೌಕಿಕ ಅನುಭವದಿಂದ ವೋಬಯ್ಯನು ತನ್ನ ಶಕ್ತಿಯನ್ನು ಕಂಡುಕೊಂಡಿದ್ದಾನೆ. ತನ್ನಂಥ ದಲಿತರನ್ನು ಹಿಡಿದು ಮೇಲೆತ್ತಲು, ಜಮೀನುದಾರರ ಜೀತದಿಂದ ಬಿಡುಗಡೆಗೊಳಿಸಲು ಮತ್ತು ಪಾಳೆಯಗಾರರ ದೌರ್ಜನ್ಯ ದಬ್ಬಾಳಿಕೆಯಿಂದ ಮುಕ್ತಗೊಳಿಸಲು ಬೇಕಾಗಿರುವ ಶಕ್ತಿ ಅವನಲ್ಲಿ ಆವಾಹನೆಯಾಗಿದೆ. ಅವನನ್ನು ಮುಂದಿಟ್ಟುಕೊಂಡು ಬಹಳ ಚಾಕಚಕ್ಯತೆಯಿಂದ ಅವನ ವರ್ಗದವರು ತಮಗೆ ಬರಬೇಕಾದ ಸ್ಥಾನಮಾನಗಳನ್ನು ಪಡೆಯುವುದಕ್ಕೆ ಹೊರಟಿದ್ದಾರೆ. ತುಳಿಯಲ್ಪಟ್ಟ ವರ್ಗದವರು ಹೇಗೆ ಹಂತ ಹಂತವಾಗಿ ಅಧಿಕಾರವನ್ನು ತಮ್ಮದಾಗಿಸಿಕೊಳ್ಳುತ್ತಾರೆ ಎಂಬುದನ್ನು ಲೇಖಕರು ಚೆನ್ನಾಗಿ ನಿರೂಪಿಸಿದ್ದಾರೆ. ಸಾಂಬವಿಯ ಪರಿಚಾರಕರಾದ ಹಂಪಜ್ಜ ಮತ್ತು ಜಡೆತಾತನ ಕಾರ್ಯಾಚರಣೆ ಗಮನಿಸಿದರೆ ಅವರು ಯಾವ ರಾಜಕೀಯ ತಂತ್ರಗಾರರಿಗೂ ಕಡಿಮೆ ಅಲ್ಲ ಎಂಬುದು ಅರಿವಾಗುತ್ತದೆ.

**ಸಿಂಬಲಿಸಮ್ ಅಥವಾ ಸಾಂಕೇತಿಕತೆ**

ಇದೇ ರೀತಿ ಕಾದಂಬರಿಯಲ್ಲಿ ಬೇರೆ ಬೇರೆ ಪಾತ್ರಗಳು ಅನೇಕ ವಿಚಾರಗಳಿಗೆ ಸಂಕೇತವಾಗಿ ನಿಂತಿವೆ. ಈ ಕಥೆಯಲ್ಲಿ ಜಾತಿ ಮತ್ತು ವರ್ಗಗಳ ಸೆಣಸಾಟವನ್ನು ಕೂಡ ಸಾಂಕೇತಿಕವಾಗಿ ನಿರೂಪಿಸಲಾಗಿದೆ. ಕ್ಷುದ್ರ ದೇವತೆಗಳಾದ ಮಾರಿ, ಹೆಮ್ಮಾರಿಗಳ ಕೀರ್ತಿ ಹೆಚ್ಚಾಗತೊಡಗಿದಾಗ ಶಿಷ್ಟ ವರ್ಗದ ಆರಾಧ್ಯದೈವವಾದ ಆಂಜನೇಯ ಸ್ವಾಮಿಗೆ ಆಗುವ ಅಸಹನೆ ಒಂದು ಉದಾಹರಣೆ. ಆ ಸಮಯಕ್ಕೆ ಸರಿಯಾಗಿ ಆ ಊರಿನ ಆಕಳುಗಳು

ಕ್ರಿಮಿಬಾಧಿ ವ್ಯಾಧಿಯಿಂದ ಸಾಯತೊಡಗುತ್ತವೆ. ಈ ವ್ಯಾಧಿಯನ್ನು ನಿವಾರಿಸಲಾಗದೆ, ಆ ಸಮುಸ್ಥಾನದ ರಾಜನು ಇದು ಆಂಜನೇಯನ ಕೋಪದ ಪರಿಣಾಮವೆಂತಲೂ, ಮಾಲಿಯ ಭಕ್ತರು ಆಂಜನೇಯನಿಗೆ ಶರಣಾಗಬೇಕೆಂದು ಹೇಳುವ ಸನ್ನಿವೇಶ ಕೆಳವರ್ಗದವರ ಏಳಿಗೆಯನ್ನು ಮೇಲ್ವರ್ಗಗಳು ಹೇಗೆ ದೇವತೆಗಳ ಮಟ್ಟದಲ್ಲೂ ತಡೆಯಬಲ್ಲವು ಎಂಬುದಕ್ಕೆ ಪರಿಣಾಮಕಾರಿಯೂ ವಿನೋದಮಯವೂ ಆದ ಸಿಂಬಲ್ ಆಗಿದೆ.

ವೋಬಯ್ಯನ ಹೆಂಡತಿ ಜಗಲೂರೆವ್ವ ತನಗೆ ಮಕ್ಕಳಿಲ್ಲದ ಕಾರಣ ಸೂರ ಎಂಬ ಒಂದು ಹೋರಿಕರುವನ್ನು ಸಾಕಿರುತ್ತಾಳೆ. ಅದನ್ನು ತನ್ನ ಮಗನಂತೆಯೇ ನೋಡಿಕೊಳ್ಳುತ್ತಿರುತ್ತಾಳೆ. ನಿಜವಾದ ಮಕ್ಕಳೊಂದಿಗೆ ಮಾತಾಡುವಂತೆ ಅದರೊಡನೆಯೂ ಮಾತನಾಡುತ್ತಿರುತ್ತಾಳೆ. ಮಾನವ ಮತ್ತು ಪ್ರಾಣಿಪ್ರಪಂಚದ ನಡುವೆ ಇರಬೇಕಾದ ಆರೋಗ್ಯಕರವಾದ ಸಂಬಂಧಕ್ಕೆ ಇದು ಒಂದು ಉದಾಹರಣೆಯಾಗುತ್ತದೆ. ಹೀಗಿರಲು ಸಾಂಬವಿಯು ಈ ಕೋಣವನ್ನೇ ಬಲಿ ತೆಗೆದುಕೊಳ್ಳಬೇಕೆಂದು ಪಟ್ಟು ಹಿಡಿಯುವುದು ಮಾರ್ಮಿಕವೆನಿಸುತ್ತದೆ. ಸೂರನನ್ನು ಜಗಲೂರೆವ್ವನಿಂದ ಬೇರೆ ಮಾಡಲು ಇದು ವೋಬಯ್ಯನ ತಂತ್ರವಿರಬಹುದೆ? ಈ ಹೋರಿಯ ಕಾರ್ಯಚಟುವಟಿಕೆಗಳ ವರ್ಣನೆಯು ಹಾಸ್ಯಮಯವಾಗಿದೆ. ಹಾಳೂರಿಗೆ ಹನುಮಪ್ಪ ಚೆಂದ ಎನ್ನುವಂತೆ ಆ ಊರಿಗೆಲ್ಲ ಸೂರನೊಂದೇ ಬೇಡಿಕೆಯಲ್ಲಿರುವ ಹೋರಿ. ಇದರ ಸಂಗ ಬಯಸಿ ಅನೇಕ ಮಹಿಷಿಗಳು ಬರುತ್ತಿದ್ದವಂತೆ! ಆ ಊರಿನಲ್ಲಿ ಸೂರನ ಹೊರತು ವೀರ್ಯವಂತವಾದ ಒಂದೂ ಹೋರಿ ಇಲ್ಲವೆನ್ನುವುದು ಆ ಊರಿನ ಪೌರುಷದ ಮೇಲೆ ಟೀಕೆಯಾಗಿದೆ. ನಮ್ಮ ಸಾಮಂತ ರಾಜರುಗಳು ಬ್ರಿಟಿಷರಿಗೆ ಶರಣಾಗಿ ಅವರ ದಾಸರಾಗಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆ ಪ್ರಾಂತ್ಯದಲ್ಲಿದ್ದ ರಾಜಕೀಯ ಅರಾಜಕತೆ ನೋಡಿದರೆ ಅದು ಹೇಗೆ ಇಲ್ಲಿಯ ಜನ ಸಂಘಟಿತವಾದ ಸಮಾಜ ರಚಿಸಿಕೊಂಡಿದ್ದಾರೆ ಎನ್ನುವುದೇ ಅಚ್ಚರಿ ತರುವ ವಿಷಯ.

**ಬ್ರಿಟಿಷ್ ಅಧಿಕಾರಿಗಳು**

ಕಥೆಯಲ್ಲಿ ಅನೇಕ ಕೌತುಕಮಯ ಸನ್ನಿವೇಶಗಳು, ಪಾತ್ರಗಳು ಇವೆ. ಅನೇಕ ಬ್ರಿಟಿಷ್ ಅಧಿಕಾರಿಗಳ ಮಾನವೀಯ ಗುಣಗಳನ್ನು ಹೊರತರಲಾಗಿದೆ. ಮನ್ರೊನ ಪಾತ್ರ ಕಣ್ಣಿಗೆ ಕಟ್ಟುವಂತೆ ಬೆಳೆದಿದೆ. ಒಮ್ಮೆ ಮನ್ರೊ ಬಡವರ ಬಂಧು ಎಂದು ಪ್ರಸಿದ್ಧನಾಗಿದ್ದ ಬೊಬ್ಬಿಲಿ ನಾಗಿರೆಡ್ಡಿಯನ್ನು ಹೋಗಿ ಭೇಟಿ ಮಾಡುತ್ತಾನೆ. ಆ ಸಂದರ್ಭದಲ್ಲಿ ಅವರಿಬ್ಬರೂ ಒಟ್ಟಿಗೆ ಊಟ ಮಾಡಿ ತಮ್ಮ ವಸ್ತ್ರಗಳನ್ನು ಅದಲು ಬದಲು ಮಾಡಿಕೊಳ್ಳುತ್ತಾರೆ. ಆಗ ಒಬ್ಬರಂತೆ ಇನ್ನೊಬ್ಬರು ಕಾಣುವುದು ಅವರಿಬ್ಬರ

ಅಂತಿಮ ಗುರಿಯೂ ಒಂದೆ ಆಗಿದ್ದು ಅವರಲ್ಲಿದ್ದ ಸಾಮ್ಯವನ್ನು ತೋರಿಸುತ್ತದೆ. ಮನ್ರೊನ ಬಗ್ಗೆ ಕಥೆಗಾರರು ಹೇಳಿರುವ ಈ ಮಾತು ಆತನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ– 'ಯೀ ಪ್ರಕಾರವಾಗಿ ಮನ್ರೊ ಕೊಡಲಿಯಿಂದಾಗುವ ಕೆಲಸವನ್ನು ಉಗುರಿನಿಂದಲೂ, ಉಗುರಿನಿಂದಾಗುವ ಕೆಲಸವನ್ನು ಕಣ್ಸನ್ನೆಯಿಂದಲೂ.... ಮಾಡುತ ಯೆಲ್ಲರಿಂದಲೂ ಸೈ ಎನಿಸಿಕೊಳ್ಳುತ, ಜಾತಿ ಜಾತಿ ನಡುವೆ, ಕೋಮು ಕೋಮುವಿನ ನಡುವೆ ಸವುಹಾರ್ದ ವಾತಾವರಣವನ್ನುಂಟು ಮಾಡುತ....'

## ಬ್ರಿಟಿಷರ ಆಗಮನ – ಮೇಲ್ವರ್ಗದ ದ್ವಂದ್ವ

ಮೇಲ್ಜಾತಿಯವರಾದ ಬ್ರಾಹ್ಮಣರಲ್ಲಿ ಬ್ರಿಟಿಷರ ಆಗಮನ ತಂದಿಟ್ಟ ಸಂದಿಗ್ಧತೆಯನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಸಂಪ್ರದಾಯಸ್ಥರು ಬ್ರಿಟಿಷರ ಧರ್ಮ ಮತ್ತು ಅವರ ಭಾಷೆಯು ಹಿಂದೂಧರ್ಮವನ್ನು ಮಲಿನಗೊಳಿಸುತ್ತಿದೆ ಎಂದು ಅದನ್ನು ಅಸಹ್ಯದಿಂದ ಕಂಡರೆ ಇನ್ನೊಂದು ಗುಂಪು ಬ್ರಿಟಿಷರ ಆಧುನಿಕ ನಡೆನುಡಿಗಳು, ಲೋಕಜ್ಞಾನ ಮತ್ತು ಬ್ರಿಟಿಷರಲ್ಲಿ ಸಿಗಬಹುದಾದ ಕೆಲಸಗಳ ಆಕರ್ಷಣೆಯಿಂದ ಇಂಗ್ಲಿಷ್ ಕಲಿಕೆಯನ್ನು ಅಂಗೀಕರಿಸುತ್ತದೆ. ಬ್ರಾಹ್ಮಣರಲ್ಲಿ ಉಂಟಾದ ದ್ವಂದ್ವವನ್ನು ಹೇಗೆ ನಿವಾರಿಸಿಕೊಂಡರು ಎಂಬುದನ್ನು ಕಥೆಯಲ್ಲಿ ಕಾಣಬಹುದು. ಹಿಂದೂ ಧರ್ಮದವರನ್ನು ಅಶುದ್ಧಗೊಳಿಸುವ ಬ್ರಿಟಿಷರ ಪ್ರಭಾವವನ್ನು ತಡೆಯಲಾರದೆ ಸಂಪ್ರದಾಯಸ್ಥ ಬ್ರಾಹ್ಮಣರಿಗೆ ಸಾಯುವುದೇ ವಾಸಿ ಎನಿಸಿದರೂ ಸಾಯುವುದು ಒಂದು ಪಾಪವೆಂದು ಯೋಚಿಸಿ ತಮ್ಮ ಸಂಸ್ಕೃತಿಯ ರಕ್ಷಣೆಯನ್ನು ತಾವೇ ಕೈಗೆ ತೆಗೆದುಕೊಳ್ಳುತ್ತಾರೆ. ಇಂಗ್ಲಿಷ್ ಮಾತನಾಡಿದರೆ ಮತ್ತು ಒಬ್ಬ ಆಂಗ್ಲನ ನೆರಳು ಸೋಕಿದರೆ ಕೂಡ ಪ್ರಾಯಶ್ಚಿತ್ತ ಪಡೆಯಬೇಕು ಎಂದು ಎಲ್ಲ ಅಗ್ರಹಾರಗಳಿಗೆ ಆದೇಶಿಸುತ್ತಾರೆ. ಈ ವಿಪ್ರಸಮೂಹದ ಸ್ವಯಂಸೇವಕರು ಅಗ್ರಹಾರಗಳಲ್ಲಿ ಮನೆಮನೆಗೆ ಹೋಗಿ ಈ ಕಟ್ಟಳೆಗಳನ್ನು ಅನುಷ್ಠಾನಗೊಳಿಸಲು ತೊಡಗುತ್ತಾರೆ. ತಮ್ಮ ಈ ಸಮೂಹಕ್ಕೆ ಒಂದು ನಿಶಾನೆಯನ್ನೂ ಕಲಾವಿದರಾದ ರಜತಾಚಾರ್ಯರ ಮೂಲಕ ಸಿದ್ಧಪಡಿಸಿಕೊಳ್ಳುತ್ತಾರೆ. ಅದಾವುದೆಂದರೆ ಗದೆ ಮತ್ತು ಸಂಜೀವಿನಿ ಪರ್ವತವನ್ನು ಹೊತ್ತು ಆಕಾಶದಲ್ಲಿ ಹಾರುತ್ತಿರುವ ಹನುಮಂತ! ಅದಕ್ಕೆ 'ಜೈ ಭಜರಂಗಬಲಿ' ಎಂದು ಹೆಸರನ್ನೂ ನೀಡಿ ತಮ್ಮ ಪರಿಸರವನ್ನು ಕೇಸರಿಮಯ ಮಾಡಿದರು ಎನ್ನುತ್ತ ಕಥೆಗಾರ ಕುಂವೀ ಇಂದಿನ ಸಮಯದಲ್ಲಿ ಭಾರತದಲ್ಲಾಗುತ್ತಿರುವ ಕೇಸರೀಕರಣದ ಮೂಲವನ್ನು ಸೂಚಿಸಿದ್ದಾರೆ ಎನ್ನುವುದು ಸ್ಪಷ್ಟವಾಗಿ ತಿಳಿಯುತ್ತದೆ.

## ವೈಚಾರಿಕತೆಯ ಪ್ರತಿಕ್ರಿಯೆ

ಮೊದಲು ಸಾಂಬವಿಯ ವಸ್ತಿ ಆಗಿರುವ ವೋಬಯ್ಯನು ಸಿಂಹಾಸನವನ್ನು ಅರಮನೆಯಿಂದ ತರಿಸಿಕೊಂಡನಷ್ಟೆ. ತನ್ನ ಪ್ರಭಾವವನ್ನು ಹೆಚ್ಚಿಸುತ್ತ ಭಕುತಾದಿಗಳ

ಮೂಲಕ ಕ್ರಾಂತಿಯನ್ನು ವಿಕಸನಗೊಳಿಸತೊಡಗುತ್ತಾಳೆ ಸಾಂಬವಿ. ಇದೊಂದು ಮೋಸವೆಂದು ಯಾರೂ ಶಂಕೆ ಪಡಲಿಲ್ಲವೇ ಎಂಬ ಪ್ರಶ್ನೆಯನ್ನೂ ಸಹ ಕಾದಂಬರಿಕಾರರು ಎದುರಿಸಿದ್ದಾರೆ. ಕಥೆಯಲ್ಲಿ ಸಮಸ್ಯೆಯ ಎರಡೂ ಬದಿಗಳನ್ನು ವಿಶ್ಲೇಷಿಸಿದ್ದಾರೆ ಕುಂವೀ. ಅಲ್ಬರ್ಟ್ ಎಂಬ ಬ್ರಿಟಿಷ್ ಅಧಿಕಾರಿ ಸಾಂಬವಿಯ ಮೋಸವನ್ನು ಬಹಿರಂಗಗೊಳಿಸುವೆನೆಂದು ಸೈನಿಕರೊಂದಿಗೆ ಹೋಗುತ್ತಾನೆ. ಆದರೆ ತಾನೆ ಸಾಂಬವಿಯ ಮಹಿಮೆಗೆ ಒಳಗಾಗಿ 'ಮದರ್ ಇಂಡಿಯಳ' ವಿರುದ್ಧ ಹೋರಾಡಲಾಗದೆ ಬರಿ ಕೈಯಲ್ಲಿ ಹಿಂದಿರುಗುತ್ತಾನೆ. ಹೀಗೆಲ್ಲ ನಡೆಯುವಾಗ ವಿಚಾರವಂತರು ಏನು ಮಾಡುತ್ತಿದ್ದರು ಎಂದರೆ ಅದೇ ಮಾಡುತ್ತಿದ್ದರು. ಈ ವರ್ಗದ ಪ್ರತಿನಿಧಿಯಾಗಿ ಅಯ್ಯಾಳಿ ಎಂಬ ಕವಿಯ ಪಾತ್ರವಿದೆ. ಸಾಂಬವಿಯು ಈತನ ಕನಸಲ್ಲಿ ಬಂದು ವೋಬಯ್ಯನಿಂದ ತನಗೆ ಕೆಟ್ಟ ಹೆಸರು ಬರಬಹುದೆಂದು ತನ್ನ ಬಗ್ಗೆ ಒಳ್ಳೆಯ ಅಭಿಪ್ರಾಯ ಬರುವಂತೆ ಒಂದು ಕಾವ್ಯ ಬರೆಯಬೇಕೆಂದು ಆದೇಶ ನೀಡುತ್ತಾಳೆ. ಕಾಳಿದಾಸನ ನಂತರ ಮಾತೆಯ ಕೃಪೆಗೆ ಪಾತ್ರನಾದವನು ತಾನೆ ಎಂದು ಸಾಂಬವಿಯಿಂದ ತಿಳಿದ ಕವಿಯು ಮಾರುಹೋಗಿ ಕಾವ್ಯ ಬರೆಯಲು ಒಪ್ಪುತ್ತಾನೆ. ಕವಿ ಅಯ್ಯಾಳಿಯು ವೋಬಯ್ಯನನ್ನು ನೋಡಲು ಹೋದಾಗ ವೋಬಯ್ಯನು ಹೆದರಿ ಚೀರಿಕೊಳ್ಳುತ್ತಾನೆ. ವೋಬಯ್ಯನ ಪರಿಚಾರಕರು ಇವನಿಂದ ತೊಂದರೆ ಎಂದರಿತು ವೋಬಯ್ಯನಿಗೆ ವಿರುದ್ಧವಾದುದು ಏನೂ ಬರೆಯಬಾರದೆಂದು ಕವಿಯನ್ನು ಹೆದರಿಸಿ ಒಪ್ಪಿಸುತ್ತಾರೆ. ಮೊದಲು ಅವರನ್ನು ವಿರೋಧಿಸುವ ಧೈರ್ಯ ತೋರಿದ ಕವಿಯು ಅಂತಿಮವಾಗಿ ಅಂಜುಕುಳಿಯಂತೆ ಅವರ ಬೆದರಿಕೆಗೆ ಮಣಿದು ಒಪ್ಪಿಕೊಳ್ಳುತ್ತಾನೆ. ಪಟ್ಟಭದ್ರ ಹಿತಾಸಕ್ತಿಗಳು ವಿಚಾರವಂತಿಕೆಗೆ ಹಾಗೂ ಮುಕ್ತ ಚಿಂತನೆಗೆ ನಿರ್ಬಂಧ ಹಾಕುವ ಪರಿಯನ್ನು ಇಲ್ಲಿ ಕಾಣಬಹುದಾಗಿದೆ. ಕವಿಯೂ ತನ್ನ ಧ್ಯೇಯಗಳನ್ನು ಬಿಟ್ಟುಬಿಡುವಾಗ ನೀಡುವ ಸಮರ್ಥನೆ ಇಂದಿನ ಕೆಲ ಬುದ್ಧಿಜೀವಿಗಳ ವ್ಯವಹಾರಕ್ಕೆ ಹಿಡಿದ ಕನ್ನಡಿಯಾಗಿದೆ.

**ಕುಂವೀ ಕಥನ ಶೈಲಿ – ಮ್ಯಾಜಿಕ್ ರಿಯಲಿಸಮ್, ಹಾಸ್ಯ ಇತ್ಯಾದಿ**

ಕಟ್ಟು ಕಥೆಗಳು, ಅಂತೆ ಕಂತೆ ಪುರಾಣಗಳನ್ನು ಕುಂವೀ ಅವರು ಚೆನ್ನಾಗಿ ಬಳಸಿಕೊಂಡಿದ್ದಾರೆ. ಹರಿಕಥೆಯ ಸಮಯದಲ್ಲಿ ನಾಗಿರೆಡ್ಡಿಯ ಕೊಲೆಯ ಸಂಚು ನಡೆದಿದೆ ಎಂದು ತಿಳಿದ ಸಚ್ಚಿದಾನಂದ ಶಾಸ್ತ್ರಿ ಎಂಬ ಮೃತನು ಸ್ವರ್ಗದಿಂದ ಇಳಿದು ಬಂದು ಹರಿಕಥೆದಾಸರ ದೇಹದಲ್ಲಿ ಸೇರಿ ಸಂಚಿನ ಬಗ್ಗೆಯೇ ಹರಿಕಥೆ ಮಾಡಿ ನಾಗಿರೆಡ್ಡಿಯನ್ನು ಎಚ್ಚರಿಸುವುದು ಅವರು ಆರಿಸಿಕೊಂಡಿರುವ ತಂತ್ರಕ್ಕೆ ಉದಾಹರಣೆ. ಇಲ್ಲಿ ಇದು ಕಟ್ಟುಕಥೆ ಎಂದು ಅನಿಸಿದರೂ ನಾಗಿರೆಡ್ಡಿಗೆ ಹೇಗೋ ಸಂಚಿನ ಸುದ್ದಿ ಮುಟ್ಟಿತು ಎನ್ನುವುದು ಮುಖ್ಯ. ಈ ರೀತಿಯ ದಂತ ಕಥೆಗಳನ್ನು ಕಾದಂಬರಿಯಲ್ಲಿ ಓದುವಾಗ ನೈಜತೆಗೆ ಕುಂದು ಬರದಂತೆ ಕಥೆಗಾರರು ಎಚ್ಚರ ವಹಿಸಿದ್ದಾರೆ ಎಂಬುದು

ತಿಳಿಯುತ್ತದೆ. ಇವೆಲ್ಲ ಮ್ಯಾಜಿಕ್ ರಿಯಲಿಸಮ್ ಪ್ರಭೇದದಲ್ಲಿ ಕಂಡುಬರುವ ಅಂಶಗಳೇ ಆಗಿವೆ.

ಕುಂವೀ ಅವರ ಅನನ್ಯ ವಿನೋದದ ವೈಖರಿಯು ಓದುಗರನ್ನು ರಂಜಿಸುತ್ತಲೇ ಇರುತ್ತದೆ. ಬ್ರಿಟಿಷರ ಮನರಂಜನೆಗೆ ಗಿಟಾರ್ ನುಡಿಸುವ ವಿದ್ವಾನ್ ರಾಜ ಅಯ್ಯಂಗಾರರು, ಸಾಂಬವಿಯ ಜನಪ್ರಿಯತೆಯನ್ನು ಕಂಡು ಕರುಬಿ ಸಾಂಬವಿಯ ಮೇಲೆ ಇತರೆ ಕ್ಷುದ್ರದೇವತೆಗಳನ್ನು ಎತ್ತಿಕಟ್ಟುವುದು ವಿನೋದವೆನಿಸುತ್ತದೆ. ಸಾಮಂತ ರಾಜರು ದಿವಾಳಿ ಎದ್ದು ಮಾರು ವೇಷದಲ್ಲಿ ಕಳ್ಳತನ ನಡೆಸುತ್ತಿರಲು ವೃತ್ತಿಪರ ಕಳ್ಳರಿಗೆ ಇದರಿಂದ ಉಂಟಾಗುವ ವೃತ್ತಿವೈಷಮ್ಯ- ಇವೆಲ್ಲ ಕುಂವೀ ಅವರು ಬೆಳೆಸಿಕೊಂಡಿರುವ ತಮ್ಮದೇ ಶೈಲಿಯ ವೈನೋದಿಕ ಕಲ್ಪನೆಗಳಿಗೆ ಕೆಲವು ಉದಾಹರಣೆಗಳು.

ಅರಮನೆಯಂತಹ ಒಂದು ಬೃಹತ್ ಕೃತಿಯಲ್ಲಿ ಕೊರತೆಗಳು ಇಲ್ಲವೆಂದೇನಿಲ್ಲ. ಕಾದಂಬರಿಯಲ್ಲಿ ಅನೇಕ ಮುದ್ರಣ ದೋಷಗಳು ಉಳಿದಿವೆ. ಕೆಲವೆಡೆ ಹಾಸ್ಯಕ್ಕೆಂದೇ ಸೃಷ್ಟಿಸಿದ ಸನ್ನಿವೇಶಗಳಿದ್ದು ಕಾದಂಬರಿಯಲ್ಲಿರುವ ಗುರುತರವಾದ ವಿಚಾರಗಳಿಗೆ ಪರ್ಯಾಯವಾಗಿ ನಡೆಯುವ ಒಂದು ಮನರಂಜನೆ ಎಂದು ಅನಿಸದೇ ಇರದು; ಮತ್ತು ಲೇಖಕರು ಅನೇಕ ಕಡೆ ನೀಡಿರುವ ವಿವರಗಳು ಅಗತ್ಯವಿತ್ತೇ? ಎಂದೆನಿಸದೇ ಇರುವುದಿಲ್ಲ. ಆದರೆ ಈ ದೋಷಗಳು ಕಾದಂಬರಿಯ ಮೂಲ ಉದ್ದೇಶಕ್ಕೆ ಧಕ್ಕೆ ತರುವುದಿಲ್ಲ ಎಂದು ನಿಸ್ಸಂದೇಹವಾಗಿ ಹೇಳ!ಬಹುದು.

**ನಾಟಕ ಮತ್ತು ಚಲನಚಿತ್ರದ ಸಾಧ್ಯತೆಗಳು**

ಜಾನಪದ ಕಲೆಗಳ ವಿವರಗಳು ಕುಂವೀ ಅವರ ಭಾಷೆಯಲ್ಲಿ ಪುಟಿದೆದ್ದು ಬರುವಂತೆ ಇವೆ. 'ರುಮ್ಮಿಯ ರುಮು ರುಮು, ದೊಳ್ಳುಗಳು ಮಾಡುವ ದೊಳ್ ದೊಳ್, ತಮಟೆಗಳು ಮಾಡುವ ಡೆಡ್ಡೆಣೆಕ ಣಕ ಣಕ' ಎಂಬ ಶಬ್ದಗಳ ವಿವರಣೆಗಳು ದೃಶ್ಯವನ್ನು ಕಣ್ಮುಂದೆ ತರಿಸುತ್ತವೆ. ಇವುಗಳನ್ನು ಓದುವಾಗ ನನಗೆ ಅರಮನೆಯನ್ನು ನಾಟಕವಾಗಿ ಅಥವಾ ಚಲನಚಿತ್ರವಾಗಿ ಹೊರತರುವ ಸ್ಫೂರ್ತಿ ಬಾರದೇ ಇರಲಿಲ್ಲ. ಪ್ರಬುದ್ಧ ರೀತಿಯಲ್ಲಿ ಕಥೆ ಹೆಣೆದು ಸಾಧ್ಯವಾದಷ್ಟು ಸತ್ಯಕ್ಕೆ ಸಮೀಪವಿದ್ದುಕೊಂಡೇ ಉತ್ತಮ ಮನರಂಜನೆಯನ್ನೂ ನೀಡುವ ಆಂಗ್ಲ ಚಲನಚಿತ್ರಗಳನ್ನು ನೋಡುವಾಗ ನನಗೆ ಇಂತಹ ಪ್ರಯತ್ನ ಕನ್ನಡದಲ್ಲಿ ನಾವು ಕಾಣುವುದಿಲ್ಲವಲ್ಲ ಎಂದು ಬಹಳ ಖೇದವಾಗುತ್ತಿತ್ತು. ನಮ್ಮ ಕನ್ನಡ ಚಿತ್ರರಂಗ ಚಾರಿತ್ರಿಕ ಚಿತ್ರಗಳನ್ನು ಮಾಡುವುದಿಲ್ಲ ಎಂದೇನಲ್ಲ. ಪ್ರಾರಂಭದಲ್ಲಿ ಇದ್ದಿದ್ದೇ ಪೌರಾಣಿಕ ಮತ್ತು ಚಾರಿತ್ರಿಕ ಚಿತ್ರಗಳು. ಆದರೆ ಅವೆಲ್ಲ ಅಡಗೂಲಜ್ಜಿಯ ಕಥೆಗಳಂತೆ ಪುರಾವೆ ದಾಖಲೆಗಳಿಲ್ಲದೆ ಚರಿತ್ರೆಯ

ವೈಭವೀಕರಣದಿಂದ ಪೊಳ್ಳೆನಿಸಿ. ಅತೃಪ್ತಿ ಉಂಟಾಗುತ್ತಿತ್ತು. ಅದೇ ಪರಿಸ್ಥಿತಿ ಈಗಲೂ ಇದೆ. ಚಿತ್ರರಂಗದವರಂತೂ ಜನ ಬಯಸುವುದನ್ನೇ ನಾವು ಮಾಡುತ್ತೇವೆ ಎಂಬ ಪಲಾಯನವಾದ ಬಳಸಿ ತಪ್ಪಿಸಿಕೊಳ್ಳುತ್ತಿದ್ದಾರೆ. 'ಕನ್ನಡದಲ್ಲಿ ಒಳ್ಳೆಯ ಕತೆ ಇಲ್ಲ! ಜೀವನ ಜಂಜಡದಲ್ಲಿ ಬೆಂದಿರುವ ಇಂದಿನ ಜನ ನೈಜತೆ ಮತ್ತು ವಾಸ್ತವಿಕತೆಯ ಬದಲು ತಮ್ಮ ಕಷ್ಟಗಳನ್ನು ಮರೆಸುವ ಮಾಯಾಲೋಕಕ್ಕೆ ಹೋಗಲು ಇಚ್ಛಿಸುತ್ತಾರೆ' ಎನ್ನುವುದು ಅವರು ನೀಡುವ ಸಮರ್ಥನೆ. ಇಂತಹವರು ಅರಮನೆಯನ್ನು ಆಧಾರವಾಗಿಟ್ಟುಕೊಂಡು ಒಂದು ಉತ್ತಮ ಚಲನಚಿತ್ರ ಮಾಡಬಹುದು.

ಅರಮನೆಯನ್ನು ಓದಿದಾಗ ನಾಟಕಕ್ಕೆ ಬೇಕಾದ ಅನೇಕ ಲಕ್ಷಣಗಳು ನನ್ನ ಗಮನ ಸೆಳೆದವು. ಮುಖ್ಯವಾಗಿ ಕಥೆಯಲ್ಲಿರುವ ಸಂಭಾಷಣೆ. ಈ ಸಂಭಾಷಣೆಗಳಲ್ಲಿರುವ ತೀವ್ರತೆ ಮತ್ತು ಪದಗಳ ಕುಣಿತ ನಾಟಕದಲ್ಲಿ ನೇರವಾಗಿ ಬಳಸಬಹುದು. ವೇಷ-ಭೂಷಣಗಳು, ಬ್ರಿಟಿಷ್ ಅಧಿಕಾರಿಗಳು, ವೋಬಯ್ಯನ ಸನ್ನಿವೇಶಗಳು ರಂಗಪ್ರಯೋಗಕ್ಕೆ ಕಳೆಕಟ್ಟುತ್ತವೆ ಎನ್ನುವುದು ನನ್ನ ಅನಿಸಿಕೆ. ಈ ಎಲ್ಲ ಸ್ಫೂರ್ತಿಯ ಫಲವಾಗಿ 'ಅರಮನೆ ಕಾದಂಬರಿಯ ನಾಟಕೀಯ ಕಥಾನಿರೂಪಣೆ' ಎಂಬ ಹೊಸ ಪ್ರಯೋಗವು ಮೂಡುವಂತಾಯಿತು. ಉತ್ತರ ಕ್ಯಾಲಿಫೋರ್ನಿಯದ ಕನ್ನಡ ಸಾಹಿತ್ಯ ಗೋಷ್ಠಿಯ ಸಭೆಯಲ್ಲಿ, ೨೦೦೯ ಮಾರ್ಚ್ ಎಂಟರಂದು ನನ್ನ ಸಹಕಲಾವಿದರುಗಳಾದ ಮಾನಸ ವೆಂಕಟಸುಬ್ಬಯ್ಯ ಮತ್ತು ಶ್ರೀವತ್ಸ ದುಗ್ಗಾಪುರ ಇವರುಗಳೊಂದಿಗೆ ಮಂಡಿಸಲ್ಪಟ್ಟ ಈ ತೊಂಬತ್ತು ನಿಮಿಷದ ಕಾರ್ಯಕ್ರಮವು ಸಭಿಕರ ಪ್ರಶಂಸೆಗೆ ಪಾತ್ರವಾಯಿತು. ಕಾದಂಬರಿಕಾರರ ವಾಕ್ಯಗಳನ್ನೆ ಬಳಸಿ, ನೆರೆದಿದ್ದ ಸಾಹಿತ್ಯಾಸಕ್ತರಿಗೆ ಕಾದಂಬರಿಯ ಪಾತ್ರಗಳ ಮೂಲಕ ಕಥೆಯ ಸ್ಥೂಲ ಪರಿಚಯ ಮಾಡಿಸಲಾಯಿತು. ನಂತರ ಸುಮಾರು ಒಂದು ಘಂಟೆಯ ಕಾಲ ಈ ಕಾದಂಬರಿಯ ಬಗ್ಗೆ ಸಭಿಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದೇ ಅಲ್ಲದೆ ಆರೋಗ್ಯಕರ ಚರ್ಚೆಯಲ್ಲೂ ತಮ್ಮನ್ನು ತೊಡಗಿಸಿಕೊಂಡರು. ಅರಮನೆ ಕಾದಂಬರಿಯನ್ನು ಸ್ವತಃ ಓದುವ ಇಚ್ಛೆಯನ್ನೂ ವ್ಯಕ್ತಪಡಿಸಿದರು.

### ಮುಕ್ತಾಯ

ಹೀಗೆ ಭಾರತದ ನಾಡಲ್ಲಿ ಕುಂತಳ ಪ್ರಾಂತದಲ್ಲಿ ಕುದುರೆಡವು ಪಟ್ಟಣದಲ್ಲಿ ವೋಬಯ್ಯನೆಂಬೊ ಅಶಕ್ತನನ್ನು ವಸ್ತಿಮಾಡಿಕೊಂಡು, ತಮ್ಮ ಪ್ರಜೆಗಳ ಹಿತದ ಬಗ್ಗೆ ಒಂಚೂರು ಲಕ್ಷ್ಯಗೊಡದೆ, ಬಡವರು-ನಿರ್ಗತಿಕರನ್ನು ತಿರಸ್ಕಾರದಿಂದ ನೋಡುತ್ತ, ದೀನರನ್ನು ದಲಿತರನ್ನು ಕಸಕ್ಕಿಂತ ಕೀಳಾಗಿ ಕಾಣುತ್ತ, ದಬ್ಬಾಳಿಕೆ ನಡೆಸುತ್ತ, ಕಾಲಡಿ ತುಳಿಯುತ್ತ ಇದ್ದಂತಹ ಪಾಳೆಯಗಾರರ ವಿರುದ್ಧ ಹೋರಾಡಲು ಶಕ್ತಿ ತುಂಬಿದ ಸಾಂಬವಿ ಎಂಬ ಸಗುತಿಯು ಅಲ್ಲಿಗೆ ಸುಮ್ಮನಾಗಲಿಲ್ಲವಂತೆ. ಮಾರೆಮ್ಮ-ಅಣ್ಣೆಮ್ಮ ಇತ್ಯಾದಿ ಅಕ್ಕ ತಂಗಿಯರೊಂದಿಗೆ ಇಸ್ವದ ಮೂಲೆ ಮೂಲೆಯಲ್ಲೂ ತನ್ನ ಈ

ಯೋಜನೆಯನ್ನು ಅನುಷ್ಠಾನಗೊಳಿಸುತ್ತ ಸಂಚರಿಸುತ್ತಿರುವಾಗ್ಗೆ, ಒಂದು ದೂರ ದೇಸದಲ್ಲಿ ವಾಸಮಾಡುತ್ತಿದ್ದಂಥ ಒಬ್ಬ ಅಶಕ್ತ ವರ್ಗದವನ ಕಣಸಲ್ಲಿ ಕಾಣಿಸಿಕೊಂಡಳಂತೆ. ಆಗ ಆ ವಯ್ಯನು 'ಯಾರಮ್ಮ ನೀನು, ನಿನ್ನನು ಈ ಹಿಂದೆ ನಾನೆಂದೂ ನೋಡಿಲ್ಲವಲ್ಲ, ನನ್ನಿಂದೇನಾಗಬೇಕು' ಎಂದೆಲ್ಲ ಕಣಸಲ್ಲೆ ಹತ್ತಾರು ಪ್ರಸ್ನೆಗಳನ್ನು ಕೇಳಿದನಂತೆ. ಇನ್ನೊಂದಿಪ್ಪತ್ತು ಪ್ರಸ್ನೆಗಳನ್ನು ಕೇಳಬೇಕೆಂದುಕೊಂಡಿದ್ದ ಆವಯ್ಯನನ್ನು ತಡೆದು ಸಾಂಬವಿಯು ತಾನ್ಯಾರು, ತನ್ನ ಕೆಲಸ ಬದುಕು ಎಂತಹುದು ಇತ್ಯಾದಿ ಯಿಸಯಗಳನ್ನು ಒಂದೂ ಬಿಡದೆ ಇದ್ದದ್ದ ಇದ್ದಂಗೆ ಹೇಳಿದಳಂತೆ. ಅದಕ್ಕಿದ್ದು ಆ ವಯ್ಯನು 'ಅದೆಲ್ಲ ಸರ್ರೆ ಸರಿ, ಈಗ ನಾನೇನ ಮಾಡಬೇಕು ಹೇಳು ಮಾತಾಯಿ' ಅಂದನಕಂತ ಭಕ್ತಿಯಿಂದ ಕೈಮುಗಿದನಂತೆ. ಆದಿ ಸಗುತಿಯು 'ನೋಡಪ್ಪ ಮುಂದೆ ನಿನಗೆ ಗಂಡು ಮಗುವೊಂದು ಜನಿಸಲಿದೆ. ಅದಕ್ಕೆ ವೋಬಯ್ಯ ಅಂತ ಹೆಸರಿಡು. ಅದು ಆಟಪಾಟ ಆಡುತ್ತ ಸಕಲ ಯಿದ್ಯಾ ಪಾರಂಗತನಾಗಿ ಬೇಗಲೆ ದೇಶದ ನಾಯಕನಾಗುತ್ತಾನೆ' ಅಂದಂಗಾಯಿತಂತೆ. ಶತಶತಮಾನದಿಂದ ತುಳಿತಕ್ಕೆ ಒಳಗಾದಂತಹ ಆ ಜಾತಿಯವನು ಇದೆಂತ ಕಣಸೆಪ್ಪ ಎಂದನಕಂತಾನೇ ಮಾರುದ್ದದ ಒಂದು ನಿಟ್ಟುಸಿರು ಬಿಡುತ್ತ ಒಂದು ಗಂಡು ಮಗುವಿನ ತಂದೆಯಾಗಿಬಿಟ್ಟನಂತೆ. ಆಗ ಸಾಂಬವಿಯ ಮಹಿಮೆಯನ್ನು ಕಂಡು ಸಂತೋಸಪಟ್ಟಂತ ಅವನಿಗೆ ಸಾಂಬವಿಯು ಅದೇನೊ ಹೆಸರು ನಾಮಕರಣ ಮಾಡು ಎಂದಿದ್ದಳಲ್ಲ ಎಂಬ ಇಸಯ ನೆಪ್ಪಾಯಿತಂತೆ. ಅದೇನೊ 'ವೋಬ' ಅಂತಲೊ 'ವೊಬೇ' ಅಂತಲೊ ಹೇಳಿದಂಗಿತ್ತಲ್ಲ, ಸರಿಯಾಗಿ ನೆಪ್ಪಿಗೆ ಬತ್ತಾ ಇಲವಲ್ಲ, 'ಓ ಮಾಯ್ ಗಾಡ್' ಎಂದನಕಂತ ತನ್ನ ಹೆಂಡತಿಯ ಮೇಲೆ ರೇಗಾಡಿದನಂತೆ. ಕೊನೆಗಿದ್ದು ಆತನ ಹೆಂಡತಿಯು 'ಹೋಗಲಿ ಬಿಡು, ಗಾಡ್ ಈಸ್ ಮೋಸ್ಟ್ ಫರ್ಗಿವಿಂಗ್, ಡೋಂಟ್ ವರಿ' ಎನ್ನುತ್ತ ಆ ಶಿಶುಯಿನ ತಾಯಿಯು ತನ್ನ ಕಂದನಿಗೆ ಓಬಾಮ ಎಂದು ನಾಮಕರಣ ಮಾಡಿದಳು ಎಂಬಲ್ಲಿಗೆ....

ಸಿವಸಂಕರ ಮಾದೇವ.... ಚಾಂಗುಬಲ ಚಾಂಗುಬಲ.... ಶಿವನ್ನಾಮಪಾ ರೋತಿಪತಯೆ ಹರ ಹರ ಮಹದೇವ....

ಅಡಿ ಟಿಪ್ಪಣಿ:

೧ ಇಲ್ಲಿ ಮತ್ತು ಇನ್ನೂ ಅನೇಕ ಕಡೆಗಳಲ್ಲಿ ಪುಸ್ತಕದ ಭಾಷೆಯನ್ನು ಯಥಾವತ್ತಾಗಿ ಬಳಸಲಾಗಿದೆ.

೨. ಕುಂ ವೀ ಅವರ ಈ ರೀತಿಯ ಪದ ಪ್ರಯೋಗವನ್ನು ಈ ಲೇಖನದಲ್ಲಿ ಕೆಲವೆಡೆ ಬಳಸಿದೆ

**ಕೃತಿ ವಿವರ:** ಅರಮನೆ, ಕುಂ. ವೀರಭದ್ರಪ್ಪ, ಸಪ್ನ ಬುಕ್ ಹೌಸ್, ಬೆಂಗಳೂರು.೨೦೦೫, ಪು. ೪೪೫

**ಆಧಾರ:** ಅರಮನೆಗೆ ಪ್ರವೇಶಿಸುವ ಮುನ್ನ – ಡಾ.ಸಿ.ಎನ್. ರಾಮಚಂದ್ರನ್ (ಅರಮನೆ ಕಾದಂಬರಿಯ ಮುನ್ನುಡಿ)

# ‘ಅವಧೇಶ್ವರಿ’ – ಶಂಕರ ಮೊಕಾಶಿ ಪುಣೇಕರ

ಶ್ರೀಕಾಂತ ಬಾಬು, ಎಡಿಸನ್, ನ್ಯೂಜೆರ್ಸಿ

ಸುಮಾರು ೩೦,೦೦೦ ವರ್ಷಗಳಾಗಿರುವ ನಾಗರಿಕ ಮಾನವನಿಗೆ ಸ್ವಭಾವತಃ ಎಲ್ಲದರಲ್ಲೂ ಅದರಲ್ಲೂ ಮತ್ತೂಹೆಚ್ಚಾಗಿ ಇತಿಹಾಸದ ವಿಷಯದಲ್ಲಿ ಬಹಳ ಕುತೂಹಲ. ಇತಿಹಾಸದ ಘಟನೆಗಳನ್ನು ಪುಸ್ತಕ ರೂಪದಲ್ಲಿ, ಟಿ.ವಿ., ಸಿನೇಮಾ, ನಾಟಕಗಳ ಮಾಧ್ಯಮದಲ್ಲಾಗಲೀ ಪುನರಾವರ್ತಿಸಿ ಮತ್ತೆ ಮತ್ತೆ ಓದಿ, ನೋಡಿ ಆನಂದಿಸುತ್ತೇವೆ. ಘಟನೆಗಳು ಯುದ್ಧಗಳಾಗಿರಬಹುದು, ದುಃಖಮಯವಾಗಿರಬಹುದು, ಹಾಸ್ಯಮಯವಾಗಿರಬಹುದು, ದೌರ್ಜನ್ಯಯುಕ್ತವೂ, ಭಯಂಕರವೂ ಆಗಿರಬಹುದು. ಆದರೆ ತಿಳಿದಷ್ಟೂ ಅವು ನಮ್ಮ ಕುತೂಹಲವನ್ನು ಇನ್ನೂ ಹೆಚ್ಚಿಸುತ್ತಾ ಹೋಗುತ್ತವೆ.

ಈ ಇತಿಹಾಸದ ವಿಷಯದಲ್ಲಿ ಒಂದು ದೊಡ್ಡ ತೊಡಕಿದೆ. ೨೦೦೦ ವರ್ಷಗಳಿಂದೀಚೆಗೆ (ಕ್ರಿ.ಶ.ದಿಂದ) ನಿಖರವಾಗಿ ಅಲ್ಲದಿದ್ದರೂ ಅನುಮಾನಿಸುವಷ್ಟು ಪುರಾವೆಗಳು ಸಿಕ್ಕಿವೆ. ಆದರೆ, ಕ್ರಿಸ್ತಪೂರ್ವ ಇತಿಹಾಸದ ಬಗ್ಗೆ ಅನೇಕ ರೀತಿಯ ಜಿಜ್ಞಾಸೆಗಳು ಇಂದಿಗೂ ನಡೆಯುತ್ತಲೇ ಇವೆ. ಇದಮಿತ್ಥಂ ಎಂದು ಯಾರೂ ಹೇಳುವವರಿಲ್ಲ. ಮುಂದೆ ಅದು ಲಭ್ಯವಾಗುವ ಸಂಭವಗಳೂ ಕಡಿಮೆ.

ನಮ್ಮ ಭಾರತೀಯರಿಗೆ ಕುತೂಹಲ ಇರುವುದು ಇಲ್ಲೇ. ಏಕೆಂದರೆ, ನಮ್ಮ ವೇದ, ಉಪನಿಷತ್, ಪುರಾಣಗಳು ಪುರಾತನವಾದವು ನಿಜ. ಆದರೆ ಎಷ್ಟು ಹಳೆಯದು? ಶಿಲಾಯುಗ, ಲೋಹಯುಗಗಳಲ್ಲಿ ಇದು ನಡೆಯಿತೆ? ಆಗಿನ ಜನ ಜೀವನ ಹೇಗಿದ್ದಿರಬಹುದು? ಭಾಷೆ, ಉಡುಪು, ಸಂಸ್ಕೃತಿಗಳು ಹೇಗಿದ್ದಿರಬಹುದು? ನಾಗರಿಕತೆ, ಮನರಂಜನೆಗಳು ಯಾವ ರೀತಿ ಇದ್ದವು? ಮನುಷ್ಯರ ಪ್ರಾಮಾಣಿಕತೆಯ ಮಟ್ಟ ಎಷ್ಟಿತ್ತು?– ಇತ್ಯಾದಿ. ಆಧುನಿಕ ಯುಗದಲ್ಲಿ ಮುಂದುವರಿದ ರಾಷ್ಟ್ರವಾದ ಅಮೆರಿಕಾಗೆ ನಾವೆಲ್ಲರೂ ವಲಸೆ ಬಂದಂತೆ ಭಾರತದ ಸುವರ್ಣಯುಗದಲ್ಲಿ ಹೊರಗಿನಿಂದ ಜನ ಬಂದರೆ? ಬಂದರೆ, ಎಲ್ಲೆಲ್ಲಿಂದ, ಯಾವ್ಯಾವಾಗ, ಯಾವ ಕಾರಣಕ್ಕಾಗಿ,

ಬಂದಿರಬಹುದು? ಬರುವಾಗ ಅವರ ಭಾಷೆ, ಸಂಸ್ಕೃತಿ, ಸಾಕುಪ್ರಾಣಿಗಳು, ನಂಬಿಕೆಗಳು (ದೇವರೇ ಮೊದಲಾಗಿ) ಇತ್ಯಾದಿಗಳನ್ನೂ ತಂದರೆ? ಇವುಗಳ ಪರಿಣಾಮ ಅಲ್ಲಿದ್ದ ಜನಾಂಗದ ಮೇಲೆ ಯಾವ ರೀತಿ ಆಯಿತು? ಅವರನ್ನು ಸ್ನೇಹದಿಂದ ಸೇರಿಸಿಕೊಂಡರೆ? ಬಲಾತ್ಕಾರಗಳಾಯಿತೆ? ಹೀಗೇ ಪ್ರಶ್ನೆಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಈ ಪ್ರಶ್ನೆಗಳಿಗೆ ಸುಲಭ ಉತ್ತರಗಳಿಲ್ಲ. ಆದರೆ ಇವು ಉತ್ತಮ ಕಾದಂಬರಿಯ ಕಥಾವಸ್ತು ಆಗಬಹುದು. ಆದರೆ ಕಾದಂಬರಿಕಾರನು ಕೇವಲ ಕಥೆಗಾರನಾದರೆ ಸಾಲದು. ಅವನು ಇತಿಹಾಸಜ್ಞನೂ, ವಿಚಾರವಾದಿಯೂ, ಮುಕ್ತ ಮನಸ್ಸಿನ ಚಿಂತಕನೂ ಮತ್ತು ಕವಿಯೂ ಆಗಿರಬೇಕು. ಅಂಥ ಕಥೆಗಾರರು ಎಲ್ಲ ಭಾಷೆಗಳಲ್ಲೂ, ಎಲ್ಲ ಕಾಲಕ್ಕೂ ಸಿಗುವುದು ಅಪರೂಪ.

ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ಹಾಗೂ ಪೌರಾಣಿಕ ಕಥೆಗಳನ್ನು ಆಧರಿಸಿ ಬರೆದ ಅನೇಕ ಕಾದಂಬರಿಗಳು ಈಗ ಲಭ್ಯವಿವೆ. ಉಲ್ಲೇಖನೀಯ ಸಾಹಿತಿಗಳು ಇದರಲ್ಲಿ ಕೃಷಿ ಮಾಡಿದ್ದಾರೆ. ಉದಾಹರಣೆಗೆ– ಎಸ್. ಎಲ್. ಭೈರಪ್ಪನವರ 'ಸಾರ್ಥ', 'ಪರ್ವ', ಎ. ಆರ್. ಕೃಷ್ಣಶಾಸ್ತ್ರಿಯವರ 'ವಚನಭಾರತ', ಮಾಸ್ತಿಯವರ 'ಚಿಕ್ಕವೀರರಾಜೇಂದ್ರ', ವೀರಕೇಸರಿ ಸೀತಾರಾಮಶಾಸ್ತ್ರಿಯವರ 'ದೌಲತ್', ಕುವೆಂಪುರವರ 'ರಾಮಾಯಣ ದರ್ಶನಂ', ದೇವುಡು ಅವರ 'ಮಹಾಬ್ರಾಹ್ಮಣ', 'ಮಹಾಕ್ಷತ್ರಿಯ', 'ಮಹಾದರ್ಶನ' ಇತ್ಯಾದಿ, ಕೆ. ಎಸ್. ನಾರಾಯಣಾಚಾರ್ಯರ 'ಆ ಹದಿನೆಂಟು ದಿನಗಳು', 'ಅಗಸ್ತ್ಯ', 'ಚಾಣಕ್ಯ' ಇತ್ಯಾದಿ. ತ.ರಾ.ಸು. ಅವರಂತೂ ಚಿತ್ರದುರ್ಗದ ಇತಿಹಾಸವನ್ನು ಕುರಿತು ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ. ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಆದರೆ ಯಾವ ಕಥಾವಸ್ತುವೂ ಕೂಡ ವೇದಕಾಲದಷ್ಟು ಹಿಂದೆ ಹೋಗುವುದಿಲ್ಲ. ಇಷ್ಟು ಹಳೆಯ ಕಥಾವಸ್ತು ಪ್ರಪಂಚದ ಬೇರೆ ಯಾವ ಭಾಷೆಯಲ್ಲಾಗಲೀ ಇರಬಹುದಾದ ಸಾಧ್ಯತೆಗಳು ಬಹಳ ಕಡಿಮೆ.

'ಅವಧೇಶ್ವರಿ' ಕಾದಂಬರಿಯ ಮೊದಲ ಹೆಗ್ಗಳಿಕೆ ಅದೇ – ವೇದಕಾಲದ ಕಥೆ. ಋಗ್ವೇದದ ಕೆಲವೇ ಮಂತ್ರಗಳಲ್ಲಿ ಮತ್ತು ಹರಪ್ಪಾ–ಮೊಹೆಂಜೊದಾರೋನ ಕೆಲವೇ ಮುದ್ರಿಕೆಗಳಲ್ಲಿ ದೊರೆಯುವ ಆಧಾರದ ಮೇಲೆ ಶಂಕರ ಮೊಕಾಶಿ ಪುಣೇಕರ ಅವರು ತಮ್ಮ ಪ್ರಸಿದ್ಧ ಕಾದಂಬರಿ 'ಅವಧೇಶ್ವರಿ'ಯನ್ನು ಬರೆದಿದ್ದಾರೆ. ಮುನ್ನುಡಿಯಲ್ಲಿ ಅವರೇ ಹೇಳಿಕೊಂಡಂತೆ ಅವರಿಗೆ ಕಥೆಯ ಇನ್ನೊಂದು ಎಳೆ ಕವಿವರ ದ.ರಾ. ಬೇಂದ್ರೆಯವರಿಂದ ಸಿಕ್ಕಿದೆ. ಅದೇನೆಂದರೆ, ಗೀತೆಯಲ್ಲಿ ನಮೂದಿಸಿದ ವಿವಸ್ವತ್, ಮನು, ಇಕ್ಷ್ವಾಕು ರಾಜರ್ಷಿಗಳು (priest-kings) ಈಜಿಪ್ಟ್ ದೇಶದವರೆಂದು ಬೇಂದ್ರೆಯವರು ತಿಳಿಸಿದರೆಂದು ಹೇಳಿದ್ದಾರೆ. 'ಅವಧೇಶ್ವರಿ' ಕೃತಿಗೆ ೧೯೮೮ರ

ಪ್ರತಿಷ್ಠಿತ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿಯು ಲಭಿಸಿದೆ. ಈ ಪುಸ್ತಕವನ್ನು ಶ್ರೀ ಶಂಕರ ಮೊಕಾಶಿ ಪುಣೇಕರ ಅವರು ಭಕ್ತಿಯಿಂದ ದ.ರಾ. ಬೇಂದ್ರೆಯವರಿಗೆ ಸಮರ್ಪಿಸಿದ್ದಾರೆ.

ಶ್ರೀ ಶಂಕರ ಮೊಕಾಶಿ ಪುಣೇಕರ ಅವರು ಕನ್ನಡದ ಅತ್ಯಂತ ಸ್ವೋಪಜ್ಞ ಕವಿ–ಕಾದಂಬರಿಕಾರ–ವಿಮರ್ಶಕ. ೧೯೨೮ರಲ್ಲಿ ಧಾರವಾಡದಲ್ಲಿ ಹುಟ್ಟಿ ಅಲ್ಲಿಯೇ ತಮ್ಮ ಶಿಕ್ಷಣವನ್ನೆಲ್ಲ ಮುಗಿಸಿದರು. ಕರ್ನಾಟಕ ವಿ.ವಿ.ಯಿಂದ ಎಂ.ಎ. ಹಾಗೂ ಪಿ.ಎಚ್.ಡಿ. ಪದವಿಗಳನ್ನು ಗಳಿಸಿದರು. ಅವರು ಯೇಟ್ಸ್ ಕವಿಯನ್ನು ಕುರಿತು ಬರೆದ ಪ್ರಬಂಧವನ್ನು ವಿದ್ವಾಂಸರು ಒಂದು ಅಪರೂಪದ್ದೆಂದು ಕೊಂಡಾಡಿದರು. ಕರ್ನಾಟಕದ ಹಲವಾರು ವಿದ್ಯಾಸಂಸ್ಥೆಗಳಲ್ಲಿ ಕೆಲಸ ಮಾಡಿ ೧೯೮೮ರಲ್ಲಿ ನಿವೃತ್ತರಾದರು. ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ೩೫ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿದ್ದಾರೆ. 'ಬೇಂದ್ರೆಯವರ ಕಾವ್ಯಮೀಮಾಂಸೆ', 'ಗಂಗವ್ವ ಗಂಗಾಮಾಯಿ', 'ಮಾಯಿಯ ಮೂರು ಮುಖಗಳು', 'ನಟನಾರಾಯಣಿ', 'ಸಾಹಿತ್ಯ ಮತ್ತು ಅಭಿರುಚಿ' ಹಾಗೂ 'ಡೇರಿಕ್ ಡಿಸೋಜಾ ಮತ್ತು ಇತರ ಕಥೆಗಳು'– ಇವು ಅವರ ಕೆಲವು ಮಹತ್ವದ ಕೃತಿಗಳು. ಕಾಳಿದಾಸನ 'ಋತುಸಂಹಾರ'ವನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ.

'ಅವಧೇಶ್ವರಿ' ಒಂದು ವೇದಕಾಲೀನ ರಾಜಕೀಯ ಕಾದಂಬರಿ. ಮುಖ್ಯ ಪಾತ್ರಗಳಾದ ಪುರುಕುತ್ಸ, ತ್ರಸದಸ್ಯು, ವೃಶಜಾನ, ಪುರುಕುತ್ಸಾನಿ, ಶಂಬರಾಸುರ ಇವರುಗಳು ಋಗ್ವೇದದಲ್ಲಿ ನಮೂದಿಸಲ್ಪಟ್ಟಿದ್ದಾರೆ. ಪುರುಕುತ್ಸ, ತ್ರಸದಸ್ಯು, ವೃಶಜಾನ ಅವರುಗಳ ಸೂಕ್ತಗಳು ಋಗ್ವೇದದಲ್ಲಿ ಕಾಣಬರುತ್ತವೆ.

'ಅವಧೇಶ್ವರಿ'ಯಲ್ಲಿ ಎದ್ದು ಕಾಣುವುದು ಲೇಖಕರ ಅಪಾರ ಸಂಶೋಧನಾ ಶ್ರಮ. ಲಭ್ಯವಿರುವ ಐತಿಹಾಸಿಕ ಮಾಹಿತಿಗಳಿಂದ, ವೇದಮಂತ್ರಗಳಿಂದ, ಹರಪ್ಪಾ–ಮಹೆಂಜೊದಾರೋನ ಮುದ್ರಿಕೆಗಳಿಂದ, ಗೊತ್ತಿರುವ ರಾಜವಂಶಾವಳಿಗಳಿಂದ, ಭೌಗೋಳಿಕ ಮಾಹಿತಿಗಳಾದ ನದಿ, ಬೆಟ್ಟ, ಪರ್ವತಗಳು, ಭಾಷೆ, ಸಂಸ್ಕೃತಿ, ಕುಲಧರ್ಮಗಳೇ ಮೊದಲಾದ ವಿಷಯಗಳ ಮೇಲೆ ಅಪಾರ ಸಂಶೋಧನೆ ನಡೆಸಿ ವಿಷಯ ಸಂಗ್ರಹ ಮಾಡಿ ಬರೆದಿರುವ ಕಾದಂಬರಿ 'ಅವಧೇಶ್ವರಿ'. ಇಷ್ಟಾದರೂ ಮೊಕಾಶಿಯವರು ಸವಿನಯದಿಂದ ಮುನ್ನುಡಿಯಲ್ಲಿ ಓದುಗರನ್ನು ಹೀಗೆ ಕೇಳಿಕೊಳ್ಳುತ್ತಾರೆ–

'ನಮ್ಮ ಸಂಸ್ಕೃತಿಯ ಆಳ–ಸ್ತರಗಳನ್ನೂ, ಘಟ್ಟಗಳನ್ನೂ ಕನ್ನಡದ ಮಹನೀಯರು– ಬೇಂದ್ರೆ, ಗೋವಿಂದ ಪೈ, ಬಿ.ಎಂ.ಶ್ರೀ., ವೀರಕೇಸರಿ, ದೇವುಡು, ಕುವೆಂಪು, ಪು.ತಿ.ನ., ಪುಟ್ಟಸ್ವಾಮಯ್ಯ, ಮಾಸ್ತಿ, ವಿನಾಯಕರಂಥ ಎತ್ತರದ ಮಹನೀಯರು– ಗುರುತಿಸಿದ್ದಾರೆ.

ಈ ಗ್ರಂಥ ಆ ಪಾತಳಿಯದ್ದಲ್ಲ, ನಿಜ. ಆದರೂ ಉದ್ದಿಶ್ಯ ಅದೇ. ಅವರನ್ನು ನೆನೆಯುವುದು ಇಲ್ಲಿ ಕ್ರಮಪ್ರಾಪ್ತ; ಕನ್ನಡ ಕೇಂದ್ರ ಪರಂಪರೆಗೆ ದನಿ ಕೂಡಿಸುವ ಈ ಯತ್ನವನ್ನು ಕಾದಂಬರಿಯಾಗೇ ಓದಬೇಕು, ಸಂಶೋಧನೆಯೆಂದಲ್ಲ-ಎಂದು ಬೇಡುತ್ತೇನೆ'.

ಶಂಕರ ಮೊಕಾಶಿಯವರಿಗೆ ಹಿಂದೂಧರ್ಮದ ಮೂಲ ಪ್ರತೀಕಗಳಾದ ವೇದ, ಉಪನಿಷತ್‌ಗಳಲ್ಲಿ ಅಪಾರ ಗೌರವ ಹಾಗೂ ವಿಶ್ವಾಸ. ಆದರೆ ಅವುಗಳನ್ನು ಸರಿಯಾಗಿ ತುಲನೆ ಮಾಡಿ ಮೌಲ್ಯ ಸಿದ್ಧಿಯಾದ ಮೇಲೆ ಸ್ವೀಕರಿಸಬೇಕೆಂದು ಅವರ ಮತ. ದೇವರ ನುಡಿ ವೇದಗಳು, ಹಾಗೂ ಅದರಲ್ಲಿ ಹೇಳಿರುವುದೆಲ್ಲಾ ಯಜ್ಞಕ್ಕಾಗಿ ಎನ್ನುವ ಕೆಲ ಪಂಡಿತರ ಮೊಂಡುವಾದವನ್ನು ಅವರು ಒಪ್ಪುವುದಿಲ್ಲ. ಪುಸ್ತಕದ ಮುನ್ನುಡಿಯಲ್ಲಿ ಅವರ ಅಸಮಾಧಾನವನ್ನು ಹೀಗೆ ವ್ಯಕ್ತಪಡಿಸುತ್ತಾರೆ-

'ನಮಗೆ ಯಾವುದೂ ಹೊಸತಲ್ಲ, ಹೊರತಲ್ಲ. ಸಹಿಷ್ಣುತೆ, ಸಹಬಾಳ್ವೆ, ನಮ್ಮ ಇತಿಹಾಸ-ಭೂಗೋಲಗಳಿಂದಲೇ ಪ್ರಾಪ್ತ. ವಿಷ್ಣುವಿನ ವಿಕ್ರಮ, ತತ್ಪರಿಣಾಮವಾಗಿ ಅನೇಕ ಸಂಸ್ಕೃತಿ-ಜಾತಿ-ಜನಾಂಗ-ಭಾಷೆಗಳ ತಳಸ್ಪರ್ಶಿ ಸಂಗಮದಿಂದ ಲಬ್ಧ. ವೇದದಲ್ಲಿ ವಿಷ್ಣುಸೂಕ್ತಗಳ ವಿಷಯ ಇದೇ ತಾನೆ?

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ। ಸಮೂಳ್ಹಮಸ್ಯ ಪಾಂಸುರೇ.

ಋಗ್ವೇದದ ಒಂದನೇ ಮಂಡಲದ ೧೫೪ ಸೂಕ್ತವಂತೂ ಹಲವು ದ್ವೀಪಗಳ ಬೆಸುಗೆಯ ಜೊತೆ ಎತ್ತರ ಶೃಂಗಗಳ ವಾಸ್ತುಶಿಲ್ಪವಾಗಿ ಹಿಮಾಲಯ ಎದ್ದುಬಂದ ವರ್ಣನೆ-

ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।ಯೋ ಅಸ್ಕಭಾಯದುತ್ತರಂ ಸದಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ.

**ಪ್ರ ತದ್ವಿಷ್ಣುಃ ಸ್ತವತೆ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ...**
**ಪ್ರ ವಿಷ್ಣವೇ ಶೂಷಮೇತು ಮನ್ಮ ಗಿರಿಕ್ಷಿತ ಉರುಗಾಯಾಯ ವೃಷ್ಣೇ ।**
**ಯ ಇದಂ ದೀರ್ಘಂ ಪ್ರಯತಂ ಸದಸ್ಥಮೇಕೋ ವಿಮಯೆ ತ್ರಿಭಿರಿತ್ಪದೇಭಿಃ.**
**ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೇ ಯತ್ರ ಗಾವೋ ಭೂರಿಶೃಂಗಾ ಆಯಾಸಃ।**
**ಅತ್ರಾಹ ತದರುಗಾಯಸ್ಯ ವೃಷ್ಣಃ ಪರಮಂ ಪದಮವ ಭಾತಿ ಭೂರಿ.**

ಎಲ್ಲ ವೇದದ ಋಚೆಗಳೂ ಯಾಜ್ಞಿಕ-ಅರ್ಥದಲ್ಲೇ ಮಾಡಬೇಕೆಂಬ ಹಠವನ್ನು ಬಿಡುವುದಾದರೆ ಈ ಋಚೆಯಲ್ಲಿ ಕಣ್ಣೆದುರೇ ದೊಡ್ಡ ವಾಸ್ತುಶಿಲ್ಪವಾಗಿ, ಅನೇಕ ಉಚ್ಚ ಶೃಂಗಗಳಿದ್ದ ಆಕಳುಗಳಂತೆ ಹಿಮಾಲಯ ಪರ್ವತಶ್ರೇಣಿಗಳೆದ್ದುದನ್ನು ಪ್ರತ್ಯಕ್ಷ ನೋಡಿದ ದಾಖಲೆ ಇದೆ. ಮನುವಿನ ಕಾಲದಲ್ಲಿ ನಡೆದ ಘಟನೆ ಇದು. ವೇದಕಾಲದ ನಂತರ ಬಂದ ವಾದಪ್ರವೀಣರು ಇದು ಭೌಗೋಲಿಕ ಘಟನೆಯೆಂದು ಅರಿಯದೆ,

ಶಬ್ದಗಳನ್ನು ಎಳೆದಾಡಿ ಯಜ್ಞಾರ್ಥಕ್ಕೆ ತಿರುಚಿದ್ದಾರೆ. ಕನಿಷ್ಠ ಕಾಳಿದಾಸನ ಕವಿಹೃದಯ ಈ ಪಂಡಿತರಿಗಿದ್ದಿದ್ದರೆ, ಆ ವಿಸ್ಮಯಕರ ಘಟನೆಯನ್ನು ಚಿತ್ರಿಸಿಕೊಳ್ಳಬಹುದಾಗಿತ್ತು. 'ಪೂರ್ವಾಪರೋ ತೋಯನಿಧೀ ವಗಾಹ್ಯ ಸ್ಥಿತಃ' – 'ಪೂರ್ವಪಶ್ಚಿಮ ಸಾಗರಗಳನ್ನು ದಟ್ಟಿ ಎದ್ದು ನಿಂತ ಹಿಮಾಲಯ'. ಎಂಥ ಚಿತ್ರಕರಮ್ಯ ದರ್ಶನ! 'ವೇದವಾಕ್ಯಗಳು ದೇವವಾಕ್ಯಗಳ ಸ್ಥಾನ ಪಡೆದು ಯಜ್ಞಕ್ಕಾಗಿ ಬಳಸಲ್ಪಟ್ಟವು' ಎಂಬ ಮಾತಿಗೂ 'ಎಲ್ಲ ವೇದಗಳು ಯಜ್ಞಕ್ಕಾಗಿಯೇ ರಚಿಸಲ್ಪಟ್ಟವು' ಎಂಬ ಮಾತಿಗೂ ಅಜಗಜಾಂತರ. ವೃಶಜಾನನ ನಿಂದೆ ಋಗ್ವೇದದಲ್ಲೇ ಬಂದರೂ ಯಾವ ಯಜ್ಞಕ್ಕೆ ಉಪಯುಕ್ತ? ವೇದಗಳು ಅಪೌರುಷೇಯ ಎಂದು ನಂಬಿದವರು ಕೂಡ ತಮ್ಮ ಯಜ್ಞದ ಸಫಲತೆಗಾಗಿ ಯೋಗ್ಯ ಸೂಕ್ತಗಳನ್ನು ಆಯ್ಕೆ ಮಾಡಬೇಕಾಗುತ್ತದೆ. ಅಂಥ ಉದಾತ್ತ ಸೂಕ್ತಗಳೂ ಇವೆ. ಆದರೆ ಎಲ್ಲವೂ ಯಜ್ಞಕ್ಕಾಗಿಯೇ ಎನ್ನುವವರು ಕಿರಿಯಾಳ ಬುದ್ಧಿಯವರು'.

**ಕಾದಂಬರಿಯ ಹಿನ್ನೆಲೆ:**

ಇಕ್ಷ್ವಾಕು ಕುಲತಿಲಕನಾದ ಶ್ರೀರಾಮಚಂದ್ರನಿಗೂ ೪೨ ತಲೆಮಾರುಗಳ ಹಿಂದೆ ಅಯೋಧ್ಯೆಯು ಕೇವಲ ೩೦–೪೦ ಗ್ರಾಮಗಳ ರಾಜ್ಯವಾಗಿತ್ತು. ಈಜಿಪ್ಷಿಯನ್ ರಾಜಮನೆತನದ ಮಾಂಧಾತನೆನ್ನುವವನು ಅದರ ರಾಜನಾಗಿದ್ದನು. ತಮ್ಮ ಪದ್ಧತಿಯಂತೆ ಚಿಕ್ಕವಯಸ್ಸಿನಲ್ಲೇ ತನ್ನ ಮಗನಾದ ಪುರುಕುತ್ಸನ ವಿವಾಹವನ್ನು ಮಗಳು ಪುರುಕುತ್ಸಾನಿಯೊಂದಿಗೆ ನಡೆಸುತ್ತಾನೆ. ಪುರುಕುತ್ಸ ಮಹಾರಾಜನು ಪುರುಕುತ್ಸಾನಿ ತನ್ನ ತಂಗಿಯೆಂಬುದನ್ನು ಕೊನೆಯವರೆಗೂ ಮರೆಯಲು ಸಾದ್ಯವಾಗಲಿಲ್ಲ. ಅವರಿಗೆ ಮಕ್ಕಳೂ ಆಗಲಿಲ್ಲ. ರಾಜಮನೆತನದ ಸಮಾನ ಅಧಿಕಾರಿಣಿಯಾಗಿದ್ದ ಪುರುಕುತ್ಸಾನಿ ತನ್ನ ವರ್ಚಸ್ಸಿನಿಂದ ಅಣ್ಣ–ಗಂಡನ ರಾಜ್ಯಸೂತ್ರಗಳನ್ನು ಭದ್ರವಾಗಿ ಕೈಯಲ್ಲಿ ಇರಿಸಿಕೊಂಡು ನಿಜವಾದ ರಾಜ್ಞಿಯಂತೆ ಆಳುತ್ತಿದ್ದಳು. ಆದರೆ ಸಂಸಾರಸುಖವೊಂದು ಅವಳಿಗೆ ನಿಲುಕದ ವಿಷಯವಾಗಿತ್ತು. ರಾಜಮನೆತನದ ಈ ವಿಶಿಷ್ಟ ವಿವಾಹಪದ್ಧತಿ ಹೇಗೆ ಮಾಯವಾಯಿತೆಂಬುದೇ ಈ ಕಾದಂಬರಿಯ ವಿಷಯ.

**ಭಾಗ–೧ ಪುರುಕುತ್ಸ**

ಪುರುಕುತ್ಸ ಮಹಾರಾಜನಿಗೆ ಮದಿರೆ ಹಾಗೂ ಮಾನಿನಿಯರ ಹುಚ್ಚು. ಅವನಿಗೆ ಅವನ ಹೆಂಡತಿ (ತಂಗಿ)ಯಲ್ಲಿ ಪ್ರೇಮವಿಲ್ಲ ಹಾಗೂ ಯಾವುದೇ ಸಂಪರ್ಕವಿಲ್ಲ. ಅವನು ತನ್ನ ಪಾಡಿಗೆ ಆಮ್ರವನದ ಒಂದು ಭವ್ಯ ಗುಡಿಸಲಿನಲ್ಲಿ ಕಾಲಕಳೆಯುತ್ತಿರುತ್ತಾನೆ. ಅವನಿಗೆ ತಾರ್ಕ್ಷ್ಯನೆಂಬ ನಾಗಕ್ಷತ್ರಿಯ ಬಂಟ ಗಣಿಕೆಯರನ್ನು ಕರೆತಂದು ಅವನ ಚಪಲಗಳನ್ನು ಪೂರೈಸುತ್ತಿರುತ್ತಾನೆ. ಮಹಾರಾಜನ ದುರ್ಬಲತೆಯನ್ನು ಅರಿತ ಮಹಾರಾಣಿ ಪುರುಕುತ್ಸಾನಿ ರಾಜ್ಯಭಾರವನ್ನು ನಡೆಸುತ್ತಿರುತ್ತಾಳೆ. ಪ್ರಜಾವತ್ಸಲೆಯೆಂದು

ಕೀರ್ತಿ ಪಡೆದು ಅಧಿಕಾರದ ನ್ಯಾಯಿಕ ಸ್ಥಾನಮಾನವನ್ನೂ ಪಡೆದಳು, ಅವಳೇ ಸಾಮ್ರಾಜ್ಞಿಯಾದಂತೆ. ಆದರೆ ಅವಳ ಹೆಣ್ಣು ಹೃದಯದ ನೋವನ್ನೂ ಬಯಕೆಯನ್ನೂ ಅರಿತವರಾರು?

ಮಹಾರಾಣಿಗೆ ತಮ್ಮ ಕುಲಗುರುಗಳಾದ ದೇವದೇಮ ಮಹರ್ಷಿಗಳಲ್ಲಿ ಅಪಾರ ವಿಶ್ವಾಸ ಹಾಗೂ ಗೌರವ. ಅವರು ಅವಳಿಗೆ ಪರಚಕ್ರದ ಬಗ್ಗೆ ಎಚ್ಚರದಿಂದಿರಲು ಹೇಳಿ, ಪುತ್ರವತಿಯಾಗುವ ಆಶೀರ್ವಚನ ನೀಡುತ್ತಾರೆ. ಪರಚಕ್ರದ ವಿಷಯಕ್ಕೆ ಹಗಲಿರುಳು ಚಿಂತಿಸುತ್ತಿದ್ದ ಪುರುಕುತ್ಸಾನಿ ತನ್ನದೇ ಆದ ಒಂದು ವಿಧಾನವನ್ನು ಸ್ವರೂಪಿಸಿದಳು. ಸಣ್ಣ ರಾಜ್ಯವಾದ ಅಯೋಧ್ಯೆ ತನ್ನ ಸುತ್ತಮುತ್ತಲಿನ ರಾಜ್ಯಗಳಾದ ಶ್ರಾವಸ್ತಿ, ಗಯಾ, ಕಾಶಿ, ಕಾಮಾಖ್ಯ, ನೇಪಾಲ ಇವುಗಳ ಜೊತೆಗೆ ಸ್ನೇಹವೇ ಇದರ ತಿರುಳು. ಮುಂದೆ ಸಾವಿರಾರು ವರ್ಷಗಳ ಮೇಲೆ ಬಂದ ಕೌಟಿಲೀಯ ಅರ್ಥಶಾಸ್ತ್ರದ ಪೂರ್ತಿ ವಿರುದ್ಧ ವಿಧಾನ ಅದು. ತಾರ್ಕ್ಷ್ಯನ ಮುಂದಾಳತ್ವದಲ್ಲಿ ಅಯೋಧ್ಯೆಯ ಗುಪ್ತಚರರು ಸುತ್ತಲೂ ಎಲ್ಲಾ ರಾಜ್ಯಗಳ ಮೇಲೂ ಕಣ್ಣಿಟ್ಟು ಸಂಚಾರ ಮಾಡಿ ಅಯೋಧ್ಯೆಯ ಭದ್ರತೆಯನ್ನೂ, ಶಾಂತಿಯನ್ನೂ ಕಾಪಾಡಿಕೊಂಡಿರುತ್ತಾರೆ.

**ಭಾಗ – ೨ ಭದ್ರಾಯು**

ದಶಾರ್ಣದ ಅರಸ ವಜ್ರಬಾಹುವಿಗೆ ಇಬ್ಬರು ಹೆಂಡಂದಿರು. ಕಿರಿಯ ರಾಣಿ ಗರ್ಭ ಧರಿಸಿದಾಗ ಅಸೂಯೆಯಿಂದ ಮಕ್ಕಳಿಲ್ಲದ ಹಿರಿಯ ರಾಣಿ ಅವಳಿಗೆ ಗರ್ಭಪಾತವಾಗಿಸಲು ವಿಷಪ್ರಾಶನ ಮಾಡಿಸುತ್ತಾಳೆ. ಋಷಭದೇವನೆಂಬ ಮಹಾಮುನಿಗಳು ಗುಪ್ತವಾಗಿ ಅವಳನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡುಹೋಗಿ ಆರೈಕೆ ಮಾಡಿ ಗರ್ಭವನ್ನು ಉಳಿಸುತ್ತಾರೆ. ಆದರೆ ಕೆಲವು ಅಂಗಾಂಗಗಳು ಬೆಳೆಯದೆ ಮಗು ಊನವಾಗುತ್ತದೆ. ಬಳಿಕ ರಾಣಿ ಗಂಡು ಮಗುವನ್ನು ಹೆರುತ್ತಾಳೆ. ಮಗುವಿಗೆ ಕೈಗಳೂ ಇಲ್ಲ, ಪಾದಗಳೂ ಇಲ್ಲ. ಕೈ ಇರುವ ಜಾಗದಲ್ಲಿ ಒಂದೇ ಗಣಲಿನ ಭುಜಗಳು. ಅವುಗಳಿಗೆ ಪುಟ್ಟ ಹಸ್ತಗಳು. ಕಾಲುಗಳೂ ಒಂದೇ ಗಣಿಲು; ಪಾದಗಳಿಗೆ ಮೀನದಂತೆ ಅಖಂಡ ಒಂದೇ ಬೆಟ್ಟು ಐದು ಬೆಟ್ಟುಗಳ ಸ್ಥಾನವನ್ನೂ ಆಕ್ರಮಿಸಿತ್ತು. ಮುಖ ಮಾತ್ರ ತಿದ್ದಿತೀಡಿದಂತಿತ್ತು. ಕುತ್ತಿಗೆಯೂ ಇರಲಿಲ್ಲ. ಭುಜಕ್ಕೆ ನೇರವಾಗಿ ರುಂಡ ಹತ್ತಿಕೊಂಡಿತ್ತು. ಮಗುವಿಗೆ ರಾಣಿಯು 'ಭದ್ರಾಯು'ವೆಂದೂ ಮುನಿಗಳು 'ಶಕ್ರ'ನೆಂದೂ ಹೆಸರನ್ನಿಟ್ಟರು. ಆಶ್ರಮದ ಸುತ್ತ ನೆಲೆಸಿದ ನಾಗ-ಶಬರ ಹೆಣ್ಣುಮಕ್ಕಳಿಗೆ ಇಂಥ ವಿಚಿತ್ರ ಹೆಸರನ್ನು ಉಚ್ಚರಿಸಲು ಕಷ್ಟವಾಗಿ ಪ್ರಾಕೃತೀಕರಿಸಿ ಅವನನ್ನು 'ಸಗರ'ನೆಂದು ಕರೆಯುತ್ತಾರೆ. ಇವನೇ ಮುಂದೆ ಪ್ರಸಿದ್ಧ ಸಗರ ಚಕ್ರವರ್ತಿಯಾಗುತ್ತಾನೆ.

ವಜ್ರಬಾಹು ರಾಜನು ಮುಂದೆ ಪಾರ್ಶ್ವವಾಯುವಿನಿಂದ ಹಾಸಿಗೆ ಹಿಡಿಯಲು, ಹಿರಿಯ ರಾಣಿಯ ತಮ್ಮ ಸಿಂಹಾಸನವನ್ನೇರುತ್ತಾನೆ. ಕುಳ್ಳ ಸಗರನು ಅವನನ್ನು

ರಾಜನು ಲಗಾಮನ್ನು ಅವನಿಗೆ ನೀಡುತ್ತಾನೆ. ಅಭ್ಯಾಸವಿಲ್ಲದ ವೃಶನನಿಗೆ ರಥದ ನಿಯಂತ್ರಣ ಸಿಗುವುದಿಲ್ಲ. ಅಷ್ಟರಲ್ಲಿ ಎಂಟು ವರ್ಷದ ಒಂದು ಮಗು ರಥದ ಗಾಲಿಗೆ ಸಿಕ್ಕಿಕೊಳ್ಳುತ್ತದೆ. ರಾಜನು ತಕ್ಷಣ ಲಗಾಮನ್ನು ವೃಶನನಿಂದ ತೆಗೆದುಕೊಂಡು ರಥವನ್ನು ನಿಯಂತ್ರಿಸುತ್ತಾನೆ. ಮಗುವಿಗೆ ತೀವ್ರವಾಗಿ ಪೆಟ್ಟಾಗಿ ರಕ್ತಸ್ರಾವವಾಗುತ್ತದೆ. ಮಗುವನ್ನೂ, ಅದರ ತಂದೆ ತಾಯಿಯನ್ನೂ ರಥದಲ್ಲಿ ಕೂರಿಸಿಕೊಂಡು ರಾಜವೈದ್ಯರ ಮನೆಯತ್ತ ಓಡಿಸಿ ಆರೈಕೆ ಮಾಡಿಸುತ್ತಾನೆ. ಕೆಲ ದಿನಗಳ ಬಳಿಕ ಮಗು ಗುಣಹೊಂದುತ್ತದೆ. ಆದರೆ ರಾಜನಿಗೆ ವೃಶನನ ಮೇಲೆ ಅಸಾಧ್ಯ ಕೋಪ ಬರುತ್ತದೆ. ಮಗುವಿನ ತಂದೆ ತಾಯಿಯರ ಮೂಲಕ ನ್ಯಾಯಾಲಯದಲ್ಲಿ ವೃಶನನ ಮೇಲೆ ದೂರು ಕೊಡಿಸುತ್ತಾನೆ. ಆದರೆ ೧೫ ದಿನಗಳಲ್ಲಿ ವೃಶಜಾನಭಟ್ಟನು ಪ್ರತಿಯಾಗಿ ರಾಜನ ಮೇಲೇ ಆರೋಪ ಬರುವಂತೆ ಪ್ರತಿವಾದ ಬರೆದು ಅಯೋಧ್ಯೆಯ ನ್ಯಾಯಾಲಯದಲ್ಲಿ ತನಗೆ ನ್ಯಾಯ ಸಿಗಲಾರದೆಂದು ಹೇಳುತ್ತ ದೂರಿನ ವಿಚಾರಣೆ ಅಯೋಧ್ಯೆಯ ಹೊರಗಿನ ನ್ಯಾಯಾಧೀಶರಿಂದ ನಡೆಸಬೇಕೆಂದು ಕೋರುತ್ತಾನೆ.

ರಾಜನೇ ಸಾಕ್ಷಿ ಹೇಳಬೇಕಾದ ಸನ್ನಿವೇಶ ಬರುವುದರಿಂದ ಹಾಗೂ ಪ್ರಜೆಗಳಿಗೆ ನ್ಯಾಯಾಸ್ಥಾನದಲ್ಲಿ ಗೌರವ ಹಾಗೂ ವಿಶ್ವಾಸಗಳನ್ನು ಮೂಡಿಸುವ ಸಲುವಾಗಿ ನ್ಯಾಯಾಧೀಶರನ್ನು ಹೊರಗಿನಿಂದ ಕರೆಸುವ ಏರ್ಪಾಡು ಮಾಡುತ್ತಾರೆ. ಈ ದೂರಿನ ವಿಚಾರಣೆಗೆ ನ್ಯಾಯಾಧೀಶರನ್ನಾಗಿ ಕಾಶೀರಾಜ ಕೇತುಮಂತರನ್ನು ಕರೆತರುತ್ತಾರೆ. ಕಾಶೀಪತಿ ಕೇತುಮಂತರು ವಿಚಾರಣೆಯನ್ನು ನಡೆಸಿ, ವೃಶಜಾನಭಟ್ಟನನ್ನು ತಪ್ಪುಗಾರನೆಂದು ನಿರ್ಣಯಿಸಿ ದಂಡ ವಿಧಿಸುತ್ತಾರೆ. ಕಾಶೀರಾಜ ತನ್ನ ದೇಶಕ್ಕೆ ಮರಳಲು, ಅವನ ತಮ್ಮನಾದ ದಿವೋದಾಸನು ರಾಜ್ಯದಾಸೆಗೆ ಅಣ್ಣನನ್ನು ಬಂಧಿಸಿ ಸೆರೆಯಲ್ಲಿಟ್ಟು ತಾನೇ ರಾಜನಾಗುತ್ತಾನೆ.

ಈ ನಡುವೆ, ವೃಶಜಾನಭಟ್ಟನ ಅಪ್ಪನಾದ ಭೀಮಭಟ್ಟನು ತ್ರಸದಸ್ಯುವಿನ ಜನ್ಮರಹಸ್ಯದ ಬಗ್ಗೆ ಅಪಪ್ರಚಾರ ನಡೆಸುತ್ತಾನೆ. ಇದೆಲ್ಲದರಿಂದ ತುಂಬಾ ಖತಿಗೊಂಡ ರಾಜನು ತನ್ನ ಜನನ ವೃತ್ತಾಂತವನ್ನು ತಿಳಿಯಲು ದೇವದೇಮರ ಬಳಿಗೆ ಓಡುತ್ತಾನೆ. ದೇವದೇಮ ಮಹರ್ಷಿಗಳು ಅವನು ಪುರುಕುತ್ಸ ಮಹಾರಾಜನ ಮಗನೆಂದೇ ಹೇಳುತ್ತಾರೆ.

ತ್ರಸದಸ್ಯು ಮಹಾರಾಜನಿಗೆ ಗಂಡು ಸಂತಾನವಾಗುತ್ತದೆ. ತನ್ನ ಗುರುವಿನ ನೆನಪಿನಲ್ಲಿ 'ತೃಕ್ಷ'ನೆಂದು ನಾಮಕರಣ ಮಾಡುತ್ತಾನೆ.

ಅಯೋಧ್ಯೆಯ ಗಡಿಯಲ್ಲಿ ಕಾಶೀರಾಜ್ಯದ ರಾಜ ದಿವೋದಾಸನಿಗೂ ಹೈಹಯ ರಾಜರಿಗೂ ತೀವ್ರವಾದ ಯುದ್ಧವು ಆರಂಭವಾಗುತ್ತದೆ. ತ್ರಸದಸ್ಯು ಮಹಾರಾಜನು ಬಂಧಿತ ರಾಜರಾದ ಕೇತುಮಂತರನ್ನು ಬಿಡಿಸುವುದು ತನ್ನ ಕರ್ತವ್ಯವೆಂದು ತಿಳಿದು

ತಾರ್ಕ್ಷ್ಯನೊಂದಿಗೆ ಕಾಶಿಗೆ ೫೦೦ ಜನ ಸೈನಿಕರೊಂದಿಗೆ ಹೋಗುತ್ತಾನೆ. ಕೇತುಮಂತ ಮಹಾರಾಜರನ್ನು ಸೆರೆಯಿಂದ ಬಿಡಿಸಲು ಹೋದಾಗ ತ್ರಸದಸ್ಯು ಅಚಾತುರ್ಯದಿಂದ ತಾನೇ ಸೆರೆಯಾಗುತ್ತಾನೆ. ಸ್ನೇಹಿತ ತ್ರಸದಸ್ಯುವನ್ನು ಬಿಡಿಸಲು ಹೋಗಿ ಶಂಬರಾಸುರನ ಆತ್ಮಬಲಿದಾನವಾಗುತ್ತದೆ.

ಶಂಬರಾಸುರನ ಹನ್ನೆರಡನೆಯ ದಿವಸವು ಶ್ರಾದ್ಧವಲ್ಲದೆ, ಯಜ್ಞವೂ ಆಯಿತು. ಕುಶಲ ಲಿಪಿಕಾರರನ್ನು ತಂದು ತನ್ನ ಆ ರಾತ್ರಿಯ ಚಿತ್ರವನ್ನು ವರ್ಣಿಸಿ, ಅದಕ್ಕನುಸಾರವಾಗಿ ಲಿಖಿತವನ್ನು ತಯಾರಿಸಿ ಆ ಪ್ರಸಂಗದ ನೆನಪನ್ನು ಅಮರಗೊಳಿಸಿದನು, ತ್ರಸದಸ್ಯು. ಅವನಲ್ಲಿ ಪ್ರವೇಶಿಸಿ ಮೈತ್ರಾವರುಣಿಯ ದರ್ಶನವು ಅವನ ಚೇತನವನ್ನು ಅಪಾರವಾದ ಶ್ರದ್ಧೆಯಿಂದ ತುಂಬಿಟ್ಟಿತು. ತಾನು ಅರ್ಧದೇವನೆಂದು ಸಿದ್ಧಗೊಳಿಸುವುದರಲ್ಲೇ ಅನೇಕ ಯಜ್ಞಯಾಗಾದಿಗಳನ್ನು ಮಾಡಿದನು.

ಆರು ವರ್ಷಗಳ ಮೇಲೆ ಪುರುಕುತ್ಸಾನಿ ಆಮ್ರವನದಲ್ಲಿ ಸರ್ಪದಂಶದಿಂದ ಮೃತಳಾದಳು. ತಾರ್ಕ್ಷ್ಯ ಮುಂದೆ ೧೦ ವರ್ಷ ಬದುಕಿದ್ದನು. ತ್ರಸದಸ್ಯುವಿಗೆ ತಂದೆ–ತಾಯಿ–ಗುರು–ಮಂತ್ರಿ–ಸೇನಾನಿಯಾಗಿ ಅಯೋಧ್ಯೆಯನ್ನು ಒಂದು ಸ್ಥಿಮಿತಕ್ಕೆ ತಂದನು. ಅಯೋಧ್ಯೆಯ ಇತಿಹಾಸದಲ್ಲಿ ಅವನ ಹೆಸರು ಎಲ್ಲೂ ಕಾಣಸಿಗುವುದಿಲ್ಲ. ಇತಿಹಾಸದಲ್ಲಿ ಹೀಗೆ ಬೆಳಕಿಗೆ ಬಾರದ ನಿಜಧೀರರು ಅನೇಕ. ಕೊನೆಯವರೆಗೆ ಅವರು ಸೇವಕರಾಗಿಯೇ ಉಳಿಯುತ್ತಾರೆ. ಎಲೆಮರೆಯ ಕಾಯಿಯಂತೆ ಉದುರುತ್ತಾರೆ. ತ್ರಸದಸ್ಯು ಪುತ್ರ ತೃಕ್ಷನ ಹೆಸರೊಂದೇ ಅವನ ದಾಖಲೆ.

ಅರ್ಧದೇವ ತ್ರಸದಸ್ಯು ಶಂಬರಾಸುರನ ಆತ್ಮಬಲಿದಾನದ ಕತೆಯನ್ನು ಒಂದು ಫಲಕದಲ್ಲಿ ಅಮರಗೊಳಿಸಿದ್ದಾನೆ. ಅದು ಇನ್ನೂ ಇದೆ. ಈ ಫಲಕ ಒಂದು ಕಡೆ ಕತ್ತಲಿನಲ್ಲಿ ಪಂಜು ಸಮೇತ ತ್ರಸದಸ್ಯು ತನ್ನ ಸಂಗಡಿಗರೊಡನೆ ಶಂಬರಾಸುರನ ಶವದೊಂದಿಗೆ ಅಯೋಧ್ಯೆಯತ್ತ ಕಾಲ್ನಡಿಗೆಯಿಂದ ಬರುತ್ತಿರುವುದನ್ನು ಚಿತ್ರಕವಾಗಿ ತೋರಿಸುತ್ತದೆ.

ಇನ್ನೊಂದು ಫಲಕವು ತ್ರಸದಸ್ಯು ಮಹಾರಾಜನು ವೃಶಜಾನನ ನಿಂದೆಯನ್ನು ಸಹಿಸಿಕೊಂಡ ಘಟನೆಯನ್ನು ಮೌನಸಂಕೇತದಲ್ಲಿ ಹಿಡಿದಿಡುತ್ತದೆ. ಮೊಹೆಂಜೊದಾರೊ–ಹರಪ್ಪ ಫಲಕಗಳಲ್ಲೇ ಇಷ್ಟು ದೀಪಕ, ಉಗ್ರ, ಸಹನಶೀಲ ಫಲಕ ಸಿಕ್ಕುವುದು ಅಪರೂಪ. ವಿಸ್ತಾರವಾದ ಬಯಲಲ್ಲಿ ಕತ್ತಲೆ. ಅದರ ನಡುವೆ ಬೀಸುಹೆಜ್ಜೆಗಳನ್ನಿಕ್ಕುತ್ತ ಮಿಕವೊಂದು ನಡೆಯುತ್ತಿದೆ. ಅದರ ದೃಷ್ಟಿ ಆಕಾಶದಲ್ಲಿ ಮೂಡಿದ ಎರಡು ನಕ್ಷತ್ರಗಳ ಮೇಲೆಯೇ ನೆಟ್ಟಿದೆ. ಅದರ ಹಿಂದೆ ತುಸು ಅಂತರದಲ್ಲಿ ಎರಡು ಚೇಳು ಆನೆಯ ಜೊತೆಗೆ ಹೆಜ್ಜೆಹಾಕಿ ಕಚ್ಚುವ ಹವಣಿಕೆಯಲ್ಲಿ ಇವೆ. ಅವುಗಳ ಮಧ್ಯೆ ಅಂತರ ಹೆಚ್ಚುತ್ತಲೇ ಇದೆ.

ಮಿಕ ತ್ರಸದಸ್ಯು- ಅವನ ಕಣ್ಣೆಲ್ಲ ಆಕಾಶದ ಅವಳಿ-ಜವಳಿ ತಾರೆಗಳ (ಮಿಥುನ, ಆಗಿನ ಕಾಲಕ್ಕೆ ಮಿತ್ರಾವರುಣ) ಮೇಲೆಯೇ ಇದೆ. ಅವುಗಳ ಪ್ರಕಾಶವೇ ಮಿಕದ ಜೀವನೋತ್ಸಾಹಕ್ಕೆ ಕಾರಣ. ಅದರ ಹಿಂದಿನ ಚೇಳು- ಅಂದರೆ ವೃಶ್ಚಿಕ- ವೃಶಜಾನನ ಹೆಸರಿನ ಮೇಲೆ ತ್ರಸದಸ್ಯು ರಚಿಸಿದ ಶ್ಲೇಷೆ. ಈ ಕಾವ್ಯಮಯ ವ್ಯಂಗ್ಯಕ್ಕೆ ಮೂಲಪ್ರೇರಣೆ ವೃಶಜಾನ ರಚಿಸಿದ ಕಹಿಯ ಋಚೆ. ಕ್ಷುದ್ರ ಮನಸ್ಸಿನ ಕಾವ್ಯವೂ ಕ್ಷುದ್ರ. ಕ್ಷುದ್ರ ಮನಸ್ಸು ಸೂಕ್ತದಲ್ಲೂ ಕ್ಷುದ್ರವೇ.

**ವೃಶಜಾನನ ಸೂಕ್ತಗಳು:**

ವೃಶಜಾನನು ಪುರುಕುತ್ಸಾನಿ, ತ್ರಸದಸ್ಯು, ಸಿಂಹಭಟ್ಟ, ತಾರ್ಕ್ಷ್ಯ ಅವರನ್ನು ಟೀಕಿಸಿ ಬರೆದ ಋಚೆಗಳನ್ನು ಋಗ್ವೇದದಲ್ಲಿ ಕಾಣಬಹುದು.

ಕುಮಾರಂ ಮಾತಾ ಯುವತಿಃ ಸಮುಧ್ಧಂ ಗುಹಾ ಭರ್ತಿ ನ ದದಾತಿ ಪಿತ್ರೇ।
ಅನೀಕಮಸ್ಯ ನ ಮಿನಜ್ಜನಾಸಃ ಪುರಃ ಪಶ್ಯಂತಿ ನಿಹತಮರತೌ .

..............................................

..............................................

ಕೇ ಮೆ ಮರ್ಯಕಂ ವಿ ಯವಂತ ಗೋಭಿರ್ನ ಯೇಷಾಂ ಗೋಪಾ ಅರಣಶ್ಚಿದಾಸ ।
ಯ ಈಂ ಜಗೃಭುರವ ತೇ ಸೃಜಂತ್ವಾಜಾರ್ತಿ ಪಶ್ವ ಉಪ ನಶ್ಚಿಕಿತ್ವಾನ್ . (ಋಗ್ವೇದ ೫.೨)

**ಪುರುಕುತ್ಸನ ಸೂಕ್ತಗಳು:**

ಪುರುಕುತ್ಸ ಮಹಾರಾಜ ಮಗ ತ್ರಸದಸ್ಯುವನ್ನು ಕಾಣಲು ಬಯಸಿದ್ದನು. ಪತ್ನಿಯ ಸಮಾಗಮಕ್ಕಾಗಿ ಹಾತೊರೆದನು. ತಾನು ಇಲ್ಲದಾಗ ಪತ್ನಿ ಗರ್ಭಧರಿಸಿ ಪುತ್ರನನ್ನು ಪಡೆದದ್ದಕ್ಕಾಗಿ ಅವನಲ್ಲಿ ಕ್ರೋಧ ಉಕ್ಕೇರಿತು. ಜೊತೆಗೆ ಪ್ರೀತಿಯೂ ಉಕ್ಕೇರಿತು. ಪುರುಕುತ್ಸ ಮಹಾರಾಜನ ಸೂಕ್ತ- ಋಗ್ವೇದದ ಪ್ರಥಮ ಮಂಡಲದ ೧೦೫ನೇ ಸೂಕ್ತದಲ್ಲಿ ಅವನ ಈ ದ್ವಿಧಾಭಾವವು ಹೊರಹೊಮ್ಮಿದೆ.

ಚಂದ್ರಮಾ ಅಪ್ಸ್ವಂತರಾ ಸುಪರ್ಣೋ ಧಾವತೇ ದಿವಿ । ನ ವೋ ಹಿರಣ್ಯನೇಮಯಃ
**ಪದಂ ವಿಂದಂತಿ ವಿದ್ಯುತೋ । ವಿತ್ತಂ ಮೇ ಅಸ್ಯ ರೋದಸೀ .**

ಮುಗಿಲಿನ ಅಂತರಿಕ್ಷ ಪ್ರವಾಹದಲ್ಲಿ ಚಂದ್ರ ಸಂಚರಿಸುತ್ತಿದ್ದಾನೆ. ಅವನ ಬಂಗಾರದ ಅಂಚಿನ ಮಿಂಚುವ ಕಿರಣಗಳೇ! ನನಗೆ ನಿಮ್ಮ ಆನಂದದ ನೆಲೆ ತಿಳಿಯದಾಗಿದೆ. ದ್ಯಾವಾಪೃಥಿವಿಗಳೇ! ನನ್ನ ಗೋಳನ್ನು ಅರಿಯಿರಿ.

**ಅರ್ಥಮಿದ್ವಾ ಉ ಅರ್ಥಿನ ಆ ಜಾಯಾ ಯುವತೇ ಪತಿಂ । ತುಂಜಾತೇ ವೃಷ್ಣ್ಯಂ ಪಯಃ ಪರಿದಾಯ ರಸಂ ದುಹೇ । ವಿಶ್ವಂ ಮೇ ಅಸ್ಯ ರೋದಸೀ .**

ಹಣ ಬೇಕಾದವನು ಹಣ ಪಡೆಯುತ್ತಾನೆ. ಹರೆಯದ ಹೆಂಡತಿ ಗಂಡನನ್ನು ಸೇರಿ ಅವನ ವೀರ್ಯಧಾರಣ ಮಾಡಿ ಸುಖ ಪಡೆಯುತ್ತಾಳೆ. ದ್ಯಾವಾಪೃಥಿವಿಗಳೇ! ನನ್ನ ಗೋಳನ್ನು ಅರಿಯಿರಿ.

**ನವ್ಯಂ ತದುಕ್ಥ್ಯಂ ಹಿತಂ ದೇವಾ ಸಃ ಸುಪ್ರವಾಚನಂ ।**

**ಋತಮರ್ಷಂತಿ ಸಿಂಧವಃ ಸತ್ಯಂ ತಾತಾನ ಸೂರ್ಯೋ। ವಿತ್ತಂ ಮೇ ಅಸ್ಯ ರೋದಸೀ.**

ಈ ಹೊಚ್ಚಹೊಸ ಕವನವು ದೇವತೆಗಳಿಗೆ ಹಿತವೂ, ಪಠಿಸಲಿಕ್ಕೆ ಯೋಗ್ಯವೂ ಆಗಿದೆ. ನದಿಗಳು ಋತವನ್ನೇ ಸಾರುತ್ತಿವೆ. ಸೂರ್ಯನು ಸತ್ಯವನ್ನೇ ಸಾರಿದ್ದಾನೆ. ದ್ಯಾವಾಪೃಥಿವಿಗಳೇ! ನನ್ನ ಗೋಳನ್ನು ಅರಿಯಿರಿ.

ನಿರಾಶೆ–ಆಶೆ, ಸಂತೋಷ–ವ್ಯಥೆ, ಇಂಥ ದ್ವಂದ್ವದಿಂದ ಮೇಲೆದ್ದ ಪುರುಕುತ್ಸನು ಕೊನೆಗೆ ದೇವತೆಗಳ ನ್ಯಾಯಬುದ್ಧಿಯನ್ನೇ ಸ್ತುತಿಸಿದ್ದಾನೆ (ಇನ್ನೂ ೯ ಋಚೆಗಳಿವೆ. ಎಲ್ಲಾ ಸಾಂತ್ವನ ಪರ).

ಹರಪ್ಪಾ ಸೀಲುಗಳು ವೇದಗಳ ಅರ್ಥಾನ್ವಯದ ಮೇಲೆ ಹೊಸ ಬೆಳಕು ಚೆಲ್ಲುತ್ತವೆ ಎನ್ನುವುದು ಸ್ಪಷ್ಟ.

ಉದಾಹರಣೆಗಾಗಿ ಕೊಟ್ಟ ಈ ಋಚೆಗಳು, ವೇದದಲ್ಲಿ ಇರುವುದೆಲ್ಲಾ ಯಜ್ಞಕ್ಕೆ ಸಂಬಂಧಿಸಿದುದು ಹಾಗೂ ಉತ್ತಮವಾದುವು ಎನ್ನುವ ತರ್ಕವನ್ನು ಸುಳ್ಳುಮಾಡುತ್ತವೆ. ಹಲವಾರು ಋಚೆಗಳು ಸಾಧಾರಣ ಕವಿಗಳಿಂದ ಬರೆಯಲ್ಪಟ್ಟಿವೆ ಮತ್ತು ಕ್ಷುದ್ರ ವಿಚಾರಗಳಾದ ದ್ವೇಷ, ವ್ಯಂಗ್ಯ, ದುಃಖವೇ ಮೊದಲಾದ ಭಾವನೆಗಳಿಂದ ತುಂಬಿವೆ.

ಸಾವಿರ ವರ್ಷಗಳ ನಂತರ ವೇದವ್ಯಾಸರ ಹನ್ನೊಂದು. ಶಿಷ್ಯರು ಊರೂರು ಅಲೆದಾಡಿ ಪ್ರಾಚೀನ ಋಚೆ–ಗಾಥೆ–ಸೂಕ್ತಗಳನ್ನೂ ಸಂಗ್ರಹಿಸಿದರು. ಬಾಷ್ಕಲಿ ಎಂಬ ಅವರ ಕರ್ಮಠ ಶಿಷ್ಯನಿಗೆ ವೃಶಜಾನನ ವಂಶಜರು ಅವನ ಸೂಕ್ತದ ತಾಡವಾಲೆ ಅರ್ಪಿಸಿದರು. 'ಹಳೆಯದೆಲ್ಲ ಸಾಧು' ಎಂದು ನಂಬಿದ ಬಾಷ್ಕಲಿ ವೃಶನ ಸೂಕ್ತವನ್ನು ಋಗ್ವೇದದಲ್ಲಿ ಸೇರಿಸಿದನು. ಉದಾರಮತಿಗಳಾದ ವೇದವ್ಯಾಸರು ನೊಂದರು.... ಹಳೆಯ ದಾಖಲೆ, ಎಂದು ಸಮ್ಮತಿಸಿದರು. ಮುಂದಿನವರು ವೃಶನೂ ಋಷಿಯೇ ಎಂದು ನಂಬಿ ಸೂಕ್ತದಲ್ಲಿ ಯಾಜ್ಞಿಕ ಅರ್ಥ ಕಲ್ಪಿಸತೊಡಗಿದರು. ವೃಶನ ಬಗ್ಗೆ ಸಾಕಷ್ಟು ಕಟ್ಟುಕತೆ–ಪವಾಡಗಳನ್ನು ರಚಿಸಿದರು. ಇದು ಇತಿಹಾಸದ ವಿಪರ್ಯಾಸ. ಅಪ್ಪನಷ್ಟು ವೃಶ ದುಷ್ಟನಲ್ಲ, ಋಷಿಯೂ ಅಲ್ಲ; ಕ್ಷುದ್ರಕವಿ.

ನಮ್ಮ ಯುಗದ ಸ್ತ್ರೀಶಕ್ತಿ ಪುರುಕುತ್ಸಾನಿಯಲ್ಲಿ ಆವಿಷ್ಕಾರಗೊಂಡ ಮೂರ್ತಿ. ಪುರುಕುತ್ಸ ದುರ್ಬಲನಾಗಬೇಕಾದುದು ಸಹಜ. ವೇದದಲ್ಲಿ ಅವನು ವೈಭವೀಕರಿಸಲ್ಪಟ್ಟಿದ್ದಾನೆ. ಅದನ್ನು ಕಾದಂಬರಿ ಸ್ವೀಕರಿಸಿಲ್ಲ.

ನನ್ನ ಅನಿಸಿಕೆಗಳು

ಈ ಕೃತಿಯ ವಿಷಯ ವಿಸ್ತಾರವನ್ನು ಕೂಲಂಕಷವಾಗಿ ವಿಮರ್ಶಿಸುವ ಸಾಮರ್ಥ್ಯವು ನನಗಿಲ್ಲದಿದ್ದರೂ ಇದರ ವೈವಿಧ್ಯವನ್ನು ಅನುಭವಿಸಿದ ನನ್ನ ಅನುಭವವನ್ನು ಈ ರೀತಿಯಾಗಿ ವಿಶ್ಲೇಷಿಸುತ್ತೇನೆ.

ಐತಿಹಾಸಿಕ ಕಥಾವಸ್ತು, ರಾಜನೀತಿ, ನ್ಯಾಯಶಾಸ್ತ್ರ, ರಾಜಧರ್ಮ, ವರ್ಣಧರ್ಮ, ವೈದಿಕ ರೀತಿ-ನೀತಿ, ಪ್ರಜಾಪರಿಪಾಲನೆ, ರಣನೀತಿ, ಯುದ್ಧವ್ಯೂಹ, ಹೆಣ್ಣಿನ ಬಯಕೆಗಳು, ಭಾಷೆ-ಸಂಸ್ಕೃತಿಗಳು, ಹಾಸ್ಯ ಮತ್ತು ವ್ಯಂಗ್ಯ, ವಿವಿಧ ಜನಾಂಗಗಳ ಪರಿಚಯ, ಋಷಿಗಳ ಮತ್ತು ಮುನಿಗಳ ಚಿಂತನೆ, ದೂರದರ್ಶಿತ್ವ ಹಾಗೂ ಲೋಕಸ್ನೇಹ, ಸಾವಿರಾರು ವರ್ಷಗಳ ಹಳೆಯದಾದ ಕಥೆಯಾದರೂ, ಮಾನವೀಯ ಮೌಲ್ಯಗಳನ್ನು ಗೌರವಿಸುವ ರೀತಿ, ಸದ್ಗುಣ, ಸಚ್ಚಾರಿತ್ರ್ಯಗಳ ವಿಜಯ, ಮನಸ್ಸಿಗೆ ಬೆಳಕನ್ನು ನೀಡುವ ವಿಚಾರ ವಿನಿಮಯ, ಇತ್ಯಾದಿಗಳು ಈ ಪುಸ್ತಕದಲ್ಲಿ ಸಾಕಷ್ಟಿವೆ. ಒಟ್ಟಿನಲ್ಲಿ ಮನಸ್ಸನ್ನು ಉಲ್ಲಾಸಗೊಳಿಸುವ ಎಲ್ಲ ಸಾಮಗ್ರಿಗಳೂ ಇಲ್ಲಿವೆ.

ಉದಾಹರಣೆಗಾಗಿ ನನ್ನ ಮನ ಸೆಳೆದ ಕೆಲವು ಆಯ್ದ ತುಣುಕುಗಳನ್ನು ಇಲ್ಲಿ ಕೊಟ್ಟಿದ್ದೇನೆ. ನೀವೇ ಓದಿ ನೋಡಿ.

೧. ಭಾರತದ ಪ್ರಾಚೀನ ವೇದೋಪನಿಷತ್ತುಗಳು ಮಾನಸಶಾಸ್ತ್ರದ ತಳಹದಿಯ ಮೇಲೆಯೇ ನಿಂತಿವೆ. ಕರ್ಮಕಾಂಡ ಬಂದಾಗಲೂ 'ಪಾಪ-ಪುಣ್ಯ' ಕಲ್ಪನೆಯ ಆಧಾರವೂ ಮಾನಸಶಾಸ್ತ್ರವೇ. ಮುಂದೆ ವಿಶದೀಕರಣದ ಯತ್ನದಲ್ಲಿ ಬಂದ ತರ್ಕ-ನ್ಯಾಯ-ಮೀಮಾಂಸಾ ಶಾಸ್ತ್ರಗಳು ಮೂಲಭೂತ ಮಾನಸಶಾಸ್ತ್ರೀಯ ವಿಶ್ಲೇಷಣೆಯ ಮಹತ್ವವನ್ನು ಕಡಿಮೆಮಾಡಿ, ನಿರ್ದಿಷ್ಟ ಸತ್ಯವನ್ನು ಭಾಷಾಶಾಸ್ತ್ರದ ಆಧಾರದ ಮೇಲೆ ರಚಿಸಲು ಯತ್ನಿಸಿದಾಗ ಮನೋವಿಶ್ಲೇಷಣೆ ಹಿಂದೆ ಬಿತ್ತು, ಶಾಬ್ದಿಕ ವಾದ ಶುರುವಾಯಿತು. ಶಬ್ದಾರ್ಥ ವ್ಯುತ್ಪತ್ತಿ ವ್ಯಾಕರಣಗಳು ಮನಶ್ಶಾಸ್ತ್ರದ ಮೂಲ ಕಲ್ಪನೆಗೆ ಹಿಮ್ಮೇಡು ತಂದವು. ಜಗದ್ಗುರು ಶಂಕರಾಚಾರ್ಯರ ಮಹತ್ವದ ಕೊಡುಗೆ ಏನೆಂದರೆ, ಮನಃಸ್ವಾಸ್ಥ್ಯ ಮೂಲಾಧಾರವಾದ ಆತ್ಮಕಲ್ಪನೆಯತ್ತ ಮತ್ತೆ ಲಕ್ಷ್ಯ ವೇಧಿಸಿದುದು.

**೨. ಯಾದವೀ ದೇವಿ – ಋಷಭಮುನಿಗಳ ಸಂವಾದ:**

ಯಾದವೀ ದೇವಿ: 'ಯಾವ ಅಪರಾಧಕ್ಕಾಗಿ ನನಗೆ ಈ ಶಿಕ್ಷೆ?'

ಋಷಭಮುನಿ: 'ನೀನು ಕೇಳಿದ ಪ್ರಶ್ನೆಗಳು ಬದುಕಿನ ಮೂಲಪ್ರಶ್ನೆಗಳು. ಕ್ಷಣಕ್ಷಣಕ್ಕೆ ಮನುಷ್ಯನಿಗೆ ಎದುರಾಗುತ್ತವೆ. ಅವುಗಳಿಗೆ ಉತ್ತರವಿಲ್ಲ. ಆದರೆ ಉತ್ತರ ಕೊಡದಿದ್ದರೆ ಮನಸ್ಸಿಗೆ ಸಮಾಧಾನವಾಗದು. ಅದಕ್ಕಾಗಿ ನನ್ನಂಥ ಕೀರ್ತನಕಾರರು ಏನಾದರೊಂದು

ಉತ್ತರ ಹುಡುಕಿ ಇಟ್ಟಿದ್ದೇವೆ. ಪ್ರಾರಬ್ಧ, ಸಂಚಿತ, ಪೂರ್ವ ಜನ್ಮದ ಪಾಪ- ಹೀಗೆ ಕತೆಗಳನ್ನು ಹುಟ್ಟಿಸುತ್ತೇವೆ. ಇವು ಕತೆಗಳಲ್ಲ; ಸತ್ಯಗಳೂ ಅಲ್ಲ; ನಿನ್ನ ಪಾಲಿಗೆ ಈ ಜೀವನ ಬಂದಿದೆ; ಅದನ್ನು ಎಷ್ಟು ಚೆನ್ನಾಗಿ ಬಳಸುತ್ತೀ, ಅದರ ಮೇಲೆ ನಿನ್ನ ಕಲ್ಯಾಣ ನಿಂತಿದೆ; ನೀನು ಜ್ಞಾನಿಯಾಗಿದ್ದರೆ ಅದರ ಉದ್ದೇಶ ತಿಳಿದು ಸನ್ಮಾರ್ಗದಿಂದ ನಿನ್ನ ವರ್ತಮಾನವನ್ನು ರೂಪಿಸಿಕೊಳ್ಳುತ್ತೀ; ನೀನು ಜ್ಞಾನಿಯಲ್ಲದಿದ್ದರೂ ಇಂಥ ಕಾಲ್ಪನಿಕ ಭೀತಿಗಳ ಜಾಲ ಒಡ್ಡಿ ಧರ್ಮವು ನಿನ್ನನ್ನು ಸನ್ಮಾರ್ಗಕ್ಕೆ ಎಳೆಯುತ್ತದೆ'

೩. ಕಾಶಿಯಲ್ಲಿ ತ್ರಸದಸ್ಯು ಸೆರೆಯಾಗಿ ಸಿಕ್ಕ ವಾರ್ತೆಯನ್ನು ಕೇಳಿದ ಮಹಾರಾಣಿ ದೇವರ ಎದುರಿಗೆ ಕುಳಿತು, ನೀಲಾಂಜನ ಬೆಳಗಿ ಒಂದು ನಾಣ್ಯವನ್ನು ಮುಡುಪಾಗಿ ತೆಗೆದಿಟ್ಟಳು. 'ದೇವರೇ, ಪಶುಪತಿನಾಥ! ನನ್ನ ಮಗನನ್ನು ಸಂರಕ್ಷಿಸು. ಮುಂದಿನ ಕಾರ್ತೀಕ ಏಕಾದಶಿಗೆ ಪಶುಪತಿನಾಥನಿಗೆ ಸಹಸ್ರ ದೀಪ ಬೆಳಗಿ ಸಹಸ್ರ ಬ್ರಾಹ್ಮಣಭೋಜನ ಮಾಡಿಸುತ್ತೇನೆ, ಕರುಣಿಸು'.

ಎಲ್ಲಿಯವರೆಗೆ ಪರಿಸ್ಥಿತಿ ವಿಚಾರದ ಸಾಧ್ಯಾಸಾಧ್ಯತೆಯ ಅಂಕೆಯಲ್ಲಿ ಇರುತ್ತದೆಯೊ, ಅಲ್ಲಿಯವರೆಗೆ ವೈಚಾರಿಕತೆ ಕೆಲಸ ಮಾಡಬಲ್ಲದು. ಎಲ್ಲಿ ವಿಚಾರದ ಅಂಕೆಗೆ ಸಿಕ್ಕದ ತೊಡಕು ಉಂಟಾಗುತ್ತದೆ, ಅಲ್ಲಿ.... ಬುದ್ಧಿವಂತ ಕಂಗೆಡುತ್ತಾನೆ. ಶ್ರದ್ಧಾವಂತ ದೇವರಿಗೆ ಮೊರೆ ಹೋಗುತ್ತಾನೆ. ದೇವರನ್ನು ನಂಬದವನಿಗೆ ದೇವರೇ ಗತಿ. ಒಳಗೆಯೇ ಕನಲಿ ಬೆಂಡಾಗುತ್ತಾನೆ.

**ಕೊನೆಯ ಮಾತು**

ನಾನು ಈ ಕಾದಂಬರಿಯನ್ನು ಆಯ್ದ ಉದ್ದೇಶ, ನನಗೆ ತಿಳಿದಂತೆ ಈ ಪುಸ್ತಕವನ್ನು ಓದಿದ ಜನ ಬಹಳ ಕಡಿಮೆ. ನಾನು ಸುಮಾರು ೧೦-೧೨ ವರ್ಷಗಳ ಹಿಂದೆ ಇದನ್ನು ಮೊದಲ ಬಾರಿ ಓದಿದಾಗ ತುಂಬಾ ರೋಮಾಂಚನಗೊಂಡಿದ್ದೆ. ಅದೇ ಅನುಭವ ಮತ್ತೆರಡು ಬಾರಿ ಓದಿದಾಗಲೂ ಆಯಿತು. ಈ ಬಾರಿ ಓದಿದಾಗಲಂತೂ ಮೊಕಾಶಿಯವರ ಜ್ಞಾನವಿಸ್ತಾರದಿಂದ ದಂಗಾಗಿದ್ದೇನೆ. ನನ್ನ ಈ ಅನುಭವ ನಿಮಗೆಲ್ಲರಿಗೂ ಆಗಲಿ ಎಂದು ನನ್ನಾಸೆ. ಹಾಗೂ ನನ್ನ ಮಟ್ಟಿಗೆ ಕನ್ನಡ ಸಾಹಿತ್ಯದ ಕಾದಂಬರಿ ಕ್ಷೇತ್ರದಲ್ಲಿ ಇದೊಂದು ಅಗ್ರಪಂಕ್ತಿಯಲ್ಲಿ ನಿಲ್ಲಬಹುದಾದ ಕೃತಿ. ದಯವಿಟ್ಟು ಎಲ್ಲ ಕನ್ನಡಿಗರೂ ಖಂಡಿತಾ ಈ ಪುಸ್ತಕವನ್ನು ಕೊಂಡು ಓದಿ.

**ಕೃತಿ ವಿವರ:** ಅವಧೇಶ್ವರಿ, ಶಂಕರ ಮೊಕಾಶಿ ಪುಣೇಕರ, ಗೀತಾ ಬುಕ್ ಹೌಸ್, ಮೈಸೂರು, ೧೯೮೭ (೩ನೆಯ ಮುದ್ರಣ ೯೯೫), ಪು. ೩೬೭

# ನಾ ಕಂಡ 'ಅಶ್ವಮೇಧ'

ತ್ರಿವೇಣಿ ಶ್ರೀನಿವಾಸರಾವ್, ಹ್ಯಾನೋವರ್ ಪಾರ್ಕ್, ಇಲಿನಾಯ್

'ಸಾಹಿತ್ಯ ವಿಮರ್ಶೆ ಎನ್ನುವುದು ಸಾಮಾನ್ಯವಾಗಿ ಪಕ್ಷಪಾತದ ಅಭಿಪ್ರಾಯ ಆಗಿರುತ್ತದೆ. ಜಡ್ಡುಗಟ್ಟಿ ಅರ್ಥಹೀನವಾಗಿ, ನಿರ್ಜೀವವಾಗಿರುತ್ತದೆ; ಅಥವಾ ಇಂದು ಈ ಅಭಿಪ್ರಾಯವನ್ನು ಗೆಲ್ಲಿಸುವ, ನಾಳೆ ಮತ್ತೊಂದು ಅಭಿಪ್ರಾಯವನ್ನು ಗೆಲ್ಲಿಸುವ ಜಾಣತನದ ಪದಕ್ರೀಡೆಯಾಗಿರುತ್ತದೆ. ನಿಜವಾದ ಕಲಾಕೃತಿಯು ಅನಂತವಾದ ಏಕಾಂತ. ಅದನ್ನು ಪಡೆಯುವುದಕ್ಕೆ ಸಾಹಿತ್ಯ ವಿಮರ್ಶೆಯ ದಾರಿ ಹಿಡಿದು ಹೋದರೆ ಉಪಯೋಗವಿಲ್ಲ.'– ರೇನರ್ ಮಾರಿಯಾ ರಿಲ್ಕ್ (ಅನುವಾದ: ಓ. ಎಲ್. ನಾಗಭೂಷಣ ಸ್ವಾಮಿ). ರಿಲ್ಕ್‌ನ ಈ ಮಾತುಗಳು ನನಗೂ ಸಮ್ಮತವೇ. ಹಾಗಾಗಿ ನನ್ನ ಈ ಲೇಖನ ವನ್ನು ವಿಮರ್ಶೆ ಎಂದಲ್ಲದೆ, ಕೇವಲ ಅನಿಸಿಕೆಗಳೆಂದು ಮಾತ್ರ ಕರೆಯಬಯಸುತ್ತೇನೆ. ಅಶೋಕ ಹೆಗಡೆಯವರ ಕಾದಂಬರಿಯ ಓದು ನನಗೆ ಸಂತೋಷ ನೀಡಿದೆ. ಹಾಗೆ ಓದುತ್ತಿರುವಾಗ ನನಗನ್ನಿಸಿದ್ದನ್ನು, ಪದಗಳ ಆಡಂಬರಕ್ಕೆ ಮೊರೆಹೋಗದೆ ಪ್ರಾಮಾಣಿಕವಾಗಿ ಬರೆಯಲು ಪ್ರಯತ್ನಿಸಿದ್ದೇನೆ. ಇಂದಿನ ಈ ಅಭಿಪ್ರಾಯಗಳು ನಾಳೆಯೂ ಹೀಗೇ ಇರುತ್ತವೆ ಎಂದಿಲ್ಲ. ಹಾಗಾಗಿ ಕೃತಿಯೊಂದೇ ಸತ್ಯ; ಕೊನೆಗೂ ಉಳಿಯುವುದು ಅದೇ.

ಪ್ರಸ್ತುತ ಕಾದಂಬರಿ 'ಅಶ್ವಮೇಧ', ಹಿಂದೂ ಧರ್ಮದ ರಕ್ತದೊಂದಿಗೇ ಬೆರೆತುಹೋಗಿದೆಯೇನೋ ಎನ್ನಿಸುವ ಜಾತಿಗಳ ನಡುವಿನ ಸಂಘರ್ಷದ ಮೇಲೆ ಬೆಳಕು ಚೆಲ್ಲುವ ಕಥಾವಸ್ತುವನ್ನು ಹೊಂದಿರುವ ಕಾದಂಬರಿ. ಅಶೋಕ ಹೆಗಡೆಯವರ ಸುಲಲಿತ ನಿರೂಪಣೆಯಲ್ಲಿ ಮೂಡಿ ಬಂದಿರುವ ಈ ಕಾದಂಬರಿ, ಖ್ಯಾತ ವಿಮರ್ಶಕರಾದ ಜಿ. ಎಸ್. ಆಮೂರರ ಮುನ್ನುಡಿಯನ್ನು ಹೊಂದಿದೆ. ಇನ್ನೂರಾ ಎಂಟು ಪುಟಗಳಿರುವ ಇದನ್ನು ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು, ಇವರು ಅಂದವಾಗಿ ಮುದ್ರಿಸಿದ್ದಾರೆ. ೨೦೦೬ರಲ್ಲಿ, ಹೆಗ್ಗೋಡಿನ 'ಅಕ್ಷರ ಪ್ರಕಾಶನ'ದಿಂದ ಕಾದಂಬರಿ ಬೆಳಕು ಕಂಡಿದೆ.

### ಕೃತಿ ಮತ್ತು ಕರ್ತೃ:

ಕಾದಂಬರಿಯ ಹೆಸರು 'ಅಶ್ವಮೇಧ' ಎಂದೊಡನೆ ಇತಿಹಾಸ ಪ್ರಿಯರಾದ ಓದುಗರ ಮನಸ್ಸಿನಲ್ಲಿ ರಾಜ-ಮಹಾರಾಜರ ವೈಭವೋಪೇತ ಒಡ್ಡೋಲಗ, ರಾಜರ್ಷಿಗಳ ಸಮ್ಮುಖದಲ್ಲಿ ವಿಪ್ರರ ವೇದಘೋಷಗಳೊಡನೆ ನಡೆಯುತ್ತಿರುವ ಅಶ್ವಮೇಧ ಯಾಗದ ಪರಿಕಲ್ಪನೆ ಬರಬಹುದು. ಆದರೆ ಇದು ಐತಿಹಾಸಿಕ ಕಾದಂಬರಿಯಲ್ಲ. ಇಲ್ಲಿ ಅಶ್ವಮೇಧ ಯಾಗ ತುಳಿತಕ್ಕೊಳಗಾದ ಜನಸಮುದಾಯದ ವಿಜಯದ ಪ್ರತಿಮೆಯಾಗಿ ಮೂಡಿಬಂದಿದೆ. ಈ ಕಾದಂಬರಿಯ ಕಥಾವಸ್ತು 'ವಲ್ಲಿಗದ್ದೆ' ಎಂಬ ಸಣ್ಣ ಹಳ್ಳಿಯಲ್ಲಿ ನಡೆಯುವ ಸಾಮಾಜಿಕ ಸ್ಥಿತ್ಯಂತರಗಳದು. 'ವಲ್ಲಿಗದ್ದೆ' ಎಂಬ ಹೆಸರೂ ಕೂಡ ಇಲ್ಲಿ ಸಾಂಕೇತಿಕವಷ್ಟೆ. ಈ ಕಥೆ ನಿರಂತರ ವರ್ಗ ಸಂಘರ್ಷ, ವರ್ಣ ಭೇದ, ಜಾತಿಗಳ ನಡುವೆ ತಿಕ್ಕಾಟವಿರುವ ಭಾರತದ ಯಾವುದೇ ಹಳ್ಳಿಯಲ್ಲಿ ನಡೆಯಬಹುದಾದ, ನಡೆದಿರಬಹುದಾದ ಕಥೆ.

ಮುನ್ನುಡಿಯಲ್ಲಿ ಜಿ. ಎಸ್. ಆಮೂರರು, ಅಶ್ವಮೇಧವನ್ನು ಓದುವಾಗ ಯು. ಆರ್. ಅನಂತಮೂರ್ತಿಯವರ 'ಭಾರತೀಪುರ' ಮತ್ತು ಶಾಂತಿನಾಥ ದೇಸಾಯಿಯವರ 'ಬೀಜ' ಕಾದಂಬರಿಗಳ ನೆನಪಾಯಿತೆನ್ನುತ್ತಾರೆ. 'ಭಾರತೀಪುರದ ನಾಯಕ ಜಗನ್ನಾಥ ಹಾಗೂ 'ಬೀಜ' ಕಾದಂಬರಿಯ ಶ್ರೇಯಾಂಸರ ಬೌದ್ಧಿಕ ಆಸಕ್ತಿಗಳು ಅಶ್ವಮೇಧದ ನಾಯಕ ರಾಜೀವನಲ್ಲಿ ಇಲ್ಲ. ಅವರಿಬ್ಬರ ಕ್ರಾಂತಿ ಉದ್ದೇಶಪೂರ್ವಕವಾಗಿದ್ದರೆ, ರಾಜೀವ ಒಮ್ಮೆ ತೊಡಗಿಕೊಂಡ ನಂತರವಷ್ಟೇ ಕ್ರಿಯಾಶೀಲನಾಗುತ್ತಾನೆ. ಅಶ್ವಮೇಧದ ಸಮಾಜವೂ ಆ ಎರಡು ಕಾದಂಬರಿಗಳ ಸಮಾಜಕ್ಕಿಂತ ಭಿನ್ನವಾದುದು. ಅಶ್ವಮೇಧದಲ್ಲಿ ರಾಷ್ಟ್ರೀಯ ಅಂತರರಾಷ್ಟ್ರೀಯ ಘಟನೆಗಳಿಗೆ ಆಸ್ಪದವಿಲ್ಲ.' ಎಂದು ಅಭಿಪ್ರಾಯಪಡುವ ಆಮೂರರು ಕಾದಂಬರಿಯಲ್ಲಿ ಎದ್ದು ಕಾಣುವ ವಸ್ತುನಿಷ್ಠತೆಯನ್ನು ಗುರುತಿಸಿದ್ದಾರೆ.

ಲೇಖಕ ಅಶೋಕ ಹೆಗಡೆಯವರು ಉತ್ತರ ಕನ್ನಡ ಜಿಲ್ಲೆಯ ಗುಂಜಗೋಡಿ-ನವರು. ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿ.ಎಚ್.ಡಿ.ಯನ್ನು, ಬಂಡವಾಳ ಹೂಡಿಕೆ ಮತ್ತು ಫೈನಾನ್ಸ್ ವಿಷಯದಲ್ಲಿ ಎಂ.ಬಿ.ಎ. ಪದವಿಯನ್ನು ಗಳಿಸಿದ್ದಾರೆ. ಪ್ರಸಕ್ತ ಮಾಹಿತಿ ತಂತ್ರಜ್ಞಾನ ಸಂಸ್ಥೆಯೊಂದರಲ್ಲಿ ಹಣಕಾಸಿಗೆ ಸಂಬಂಧಪಟ್ಟ ವಿಭಾಗದ ಮುಖ್ಯಸ್ಥರಾಗಿ ಕೆಲಸ ಮಾಡುತ್ತಿದ್ದಾರೆ. ಅಶೋಕ ಹೆಗಡೆಯವರು ಈವರೆಗೆ, 'ಒಂದು ತಗಡಿನ ಚೂರು' (೧೯೯೬) ಮತ್ತು 'ಒಳ್ಳೆಯವನು' (೨೦೦೪) ಎಂಬ ಎರಡು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಅಶ್ವಮೇಧ' (೨೦೦೬) ಅವರ ಮೊಟ್ಟ ಮೊದಲನೆಯ ಕಾದಂಬರಿ.

**ಕಥಾ ಸಾರಾಂಶ – ನನ್ನ ನೋಟದಲ್ಲಿ:**

ಅಘನಾಶಿನಿ ತಪ್ಪಲಿನಲ್ಲಿರುವ ಸಣ್ಣ ಹಳ್ಳಿ ವಲ್ಲಿಗದ್ದೆ. ಅಲ್ಲಿ ಫಲವತ್ತಾದ ಭೂಮಿಯ ಒಡೆತನ ಹೊಂದಿರುವ ಬಲಿಷ್ಠ ಬ್ರಾಹ್ಮಣ ವರ್ಗವಿದೆ. ಉಳ್ಳವರ ಸೇವೆಯಲ್ಲಿ ಜೀವನ ಕಳೆಯುತ್ತಾ, ಶೋಷಣೆಗೆ ನಿರಂತರ ಪಕ್ಕಾಗುತ್ತಾ ಬಂದಿರುವ ಕೆಳವರ್ಗವೂ ಇದೆ. ಮೇಲ್ವರ್ಗದವರ ಮನೆ–ತೋಟಗಳ ಕೆಲಸಕ್ಕೆ ಹೋಗುವ, ಅವರ ಬೈಗಳು, ಹೊಡೆತ ಸಹಿಸಿಕೊಂಡು, ಕೋಪ ಉಕ್ಕಿದರೂ ಹಲ್ಲುಕಚ್ಚಿಕೊಂಡಿರುವ ಹೀನಾಯದ ಬದುಕು ಪರಿಜನ ಕೇರಿಯಲ್ಲಿ ಬದುಕುತ್ತಿರುವವರದು. ಪರಿಜನ ಕೇರಿ ಮತ್ತು ಬ್ರಾಹ್ಮಣರ ಕೇರಿಗಳ ನಡುವೆ ಹತ್ತಿರವಿದ್ದೂ, ದೂರವೇ ಉಳಿದುಹೋಗಿರುವ ಶತಮಾನಗಳ ಅಂತರ. ಹರಿಜನ ಕೇರಿಯ ಅಳುವ ಮಕ್ಕಳನ್ನು ಸುಮ್ಮನಿರಿಸಲು, 'ಹಾಗೆ ಅತ್ತರೆ ನೋಡಿ, ಹೆಗಡೇರ ಮನೆಯಲ್ಲಿ ಬಿಟ್ಟುಬಿಡ್ತೆ' ಎಂಬ ತಾಯಂದಿರ ಬೆದರಿಕೆ ಈ ಎರಡು ಕೇರಿಗಳ ನಡುವಿನ ದೂರವನ್ನು ಸಮರ್ಥವಾಗಿ ಹಿಡಿದಿಡುತ್ತದೆ.

ಬ್ರಾಹ್ಮಣ–ಹರಿಜನರ ಜೊತೆಗೆ ವಲ್ಲಿಗದ್ದೆಯಲ್ಲಿ ಇನ್ನೊಂದು ಪ್ರಮುಖ ವರ್ಗವೂ ಇದೆ. ಅದು ಈಡಿಗರದು. ಅವರಲ್ಲಿ ಬಹುಪಾಲು ಜನರಿಗೆ ಭೂಮಿಯ ಒಡೆತನವಿದೆ. ವ್ಯವಸಾಯದ ಹೊರತಾಗಿಯೂ ಜೀವನೋಪಾಯಕ್ಕೆ ಬೇರೆ ಉದ್ಯೋಗಗಳಿವೆ. ಹರಿಜನರಂತೆ ಈಡಿಗರು ಬ್ರಾಹ್ಮಣರನ್ನು ಅವಲಂಬಿಸಿದವರಲ್ಲ. ಈ ಕೇರಿಯಲ್ಲಿ ಬ್ರಾಹ್ಮಣರ ತುಳಿತವನ್ನು ಮೌನವಾಗಿ ಸಹಿಸುತ್ತಿರುವವರ ಜೊತೆಗೇ, ಅವರ ದಬ್ಬಾಳಿಕೆಗೆ ಪ್ರತೀಕಾರ ಬಯಸುವ ರಾಮಾನಾಯ್ಕನಂತಹ ವ್ಯಕ್ತಿಯೂ ಇದ್ದಾನೆ. 'ಮರ ಕಡಿದಿದ್ದಕ್ಕೆ ಕೇಸು, ನೀರು ಬಿಟ್ಟಿದ್ದಕ್ಕೆ ಕೇಸು, ನೆರೆಮನೆಯ ಗೋಡೆಗೆ ತಾಕಿಸಿ ಉಚ್ಚೆ ಹೊಯ್ಯುತ್ತಾನೆಂದು ಕೇಸು, ನೆಂಟರು ಅವಮಾನ ಮಾಡಿದರೆಂದು ಕೇಸು, ಕೇಸಿನ ಮೇಲೊಂದು ಕೇಸು' ನಡೆಸಿ 'ಕೋರ್ಟ್ ತಿಮ್ಮಪ್ಪ' ಎಂದೇ ಹೆಸರಾದ ತಿಮ್ಮಪ್ಪನಿದ್ದಾನೆ (ಪುಟ–೨೮). ಆದರೆ ಊರಿನಲ್ಲಿ ಚಲನಶೀಲತೆ ಎಂಬುದೇ ಇಲ್ಲ. ಮುಂಬರಲಿರುವ ಕ್ರಾಂತಿಯ ಬಿರುಗಾಳಿಯೊಂದರ ನಿರೀಕ್ಷೆಯಲ್ಲಿರುವಂತೆ ಊರು ನಿಶ್ಚಲವಾಗಿದೆ. ಊರಿನ ಜಡತ್ವವನ್ನು ಕಂಡು ತಳಮಳ ಅನುಭವಿಸುತ್ತಾ ದೂರದ ದೆಹಲಿಯ ಕನಸು ಕಾಣುವ ಕಾಲೇಜು ವಿದ್ಯಾರ್ಥಿ ಶ್ರೀಧರನೂ ಇಲ್ಲಿದ್ದಾನೆ.

ಈಡಿಗರ ಕೇರಿಯ ಶಿವರಾಮಜ್ಜನ ಮಗ ತನಗೆ ಪಿತ್ರಾರ್ಜಿತವಾಗಿ ಬಂದಿರುವ ಆಸ್ತಿಯನ್ನು ರಾಜೀವ ಗಾಯತೊಂಡೆ ಎಂಬ ಹೊರಗಿನ ವ್ಯಕ್ತಿಗೆ ಮಾರುವುದರೊಂದಿಗೆ ಕಥೆ ತೆರೆದುಕೊಳ್ಳಲಾರಂಭಿಸುತ್ತದೆ. ಆದರೆ ಇಲ್ಲೊಂದು ಗೊಂದಲ ಓದುಗರನ್ನು ಕಾಡುತ್ತದೆ– ರಾಜೀವ ಗಾಯತೊಂಡೆಗೆ ಆಸ್ತಿ ಮಾರುವವನು ಶಿವರಾಮಜ್ಜನ ಮಗನೋ, ಮೊಮ್ಮಗನೋ? ಯಾಕೆಂದರೆ, 'ಶಿವರಾಮಜ್ಜ ಆ ಊರಿನಲ್ಲಿ ಎಲ್ಲರಂತೆ ತಣ್ಣಗೆ

ಕಾಲ ಹಾಕಿದರೂ, ಯಾಕೆ ತಮಗಿರ್ರೋ ಒಬ್ಬನೇ ಮಗನನ್ನು ಘಟ್ಟದ ಕೆಳಗಿನ ತಮ್ಮ ಸಂಬಂಧಿಯೊಬ್ಬರ ಮನೆಯಲ್ಲಿ ಬಿಟ್ಟು ಓದಿಸಿದರು ಎಂದು ಊರು ವಿವರವಾಗಿ ತಾಳಮದ್ದಲೆ ನಡೆಸಿದ್ದು, ಶಿವರಾಮಜ್ಜನ ಸಾವಿನ ನಂತರವೇ... ತನ್ನ ಸಮುದಾಯದಿಂದ ಬೇರಗೊಂಡ, ಸಮುದಾಯದ ಯಾವ ವ್ಯಾಮೋಹವಿರದ ಅಜ್ಜನ ಒಬ್ಬನೇ ಮಗ, ಮಠದ ಕಮಿಟಿಯ ಯಾವ ಸದಸ್ಯರ ಮಾತಿಗೂ ಸೊಪ್ಪು ಹಾಕದೇ...' (ಪುಟ-೨೨), 'ಊರಿನ ತೋಟ ಮಾರುವಾಗ, ಸ್ವಾಮಿಗಳ ಒಂದು ಮಾತು ಕೇಳು ಎಂದು ತಾವೇನೋ ಶಿವರಾಮಜ್ಜನ ಮೊಮ್ಮಗನಿಗೆ ಹೇಳಿದ್ದು ನಿಜ, ಆದರೆ...' (ಸುಬ್ರಾಯ ಹೆಗಡೆಯ ಸ್ವಗತ, ಪುಟ-೧೩೪). ಒಂದೆಡೆ ಮಗ, ಇನ್ನೊಂದೆಡೆ ಮೊಮ್ಮಗ ಎಂದಿರುವ ಈ ಎರಡು ಸನ್ನಿವೇಶಗಳು ಗೊಂದಲಕ್ಕೆ ಎಡೆಮಾಡಿವೆ.

ಶಿವರಾಮಜ್ಜನ ವಾರಸುದಾರನಿಂದ ಆಸ್ತಿಯನ್ನು ಹರಾಜಿನಲ್ಲಿ ಕೊಳ್ಳುವ ಮೂಲಕ ರಾಜೀವ ಗಾಯತೊಂಡೆ ವಲ್ಲಿಗದ್ದೆಗೆ ಬಂದು ಸೇರಿಕೊಳ್ಳುತ್ತಾನೆ. 'ತೋಟವನ್ನು ವ್ಯವಹಾರದ ದೃಷ್ಟಿಕೋನದಿಂದ ನೋಡುವುದು, ಮಾರುವುದರ ಮುಖಾಂತರವೇ ಬರುವ ಲಾಭ-ನಷ್ಟಗಳನ್ನು ತೂಗುವುದು ಎಲ್ಲವೂ ಮನೆಯ ಹೆಂಡತಿಯನ್ನು ಮಾರಿದ ಹಾಗೆ' (ಪುಟ-೨೨) ಎನ್ನುವ ಭಾವನೆಯಿರುವ ಹಳ್ಳಿಯಲ್ಲಿ ಅದನ್ನು ಹರಾಜು ಹಾಕುವ ಕಲ್ಪನೆಯೇ ಹೊಸದು. ಜಾತ್ರೆಯ ದಿನ ಬಳಸಿ ಉಳಿದಿರುವ ಕಾಯಿ, ಅಕ್ಕಿ, ಬೆಲ್ಲ, ಎಣ್ಣೆ, ಸಕ್ಕರೆಯನ್ನೆಲ್ಲಾ ಹರಾಜು ಹಾಕುವ ಪದ್ಧತಿಯಿತ್ತೇ ಹೊರತು ತೋಟ, ಮನೆ, ಗದ್ದೆಗಳನ್ನು ಅಲ್ಲಿ ಹರಾಜಿಗೆ ಇಟ್ಟಿದ್ದಿಲ್ಲ. ತೋಟವನ್ನು ಕೊಳ್ಳಲು ತಯಾರಿದ್ದ ಸ್ಥಳೀಕರಿಗೆ, 'ಮಾರುವುದಾದರೆ ಮಾರಲಿ, ಮಠ ನಿರ್ಧರಿಸುವ ಬೆಲೆಗೆ ಮಠಕ್ಕೆ ಕೊಟ್ಟುಬಿಡಲಿ' ಎಂದು ಪಟ್ಟು ಹಿಡಿದ ಕಮಿಟಿ ಸದಸ್ಯರ ಮಾತಿಗೂ ಬೆಲೆಕೊಡದೆ, ನಾಡಿನ ದೈನಿಕವೊಂದರಲ್ಲಿ ಜಾಹೀರಾತು ಕೊಡುವ ಮೂಲಕ, ಶಿವರಾಮಜ್ಜನ ಮಗ (ಮೊಮ್ಮಗ?) ತನ್ನ ತೋಟ, ಮನೆಯನ್ನು ಮಾರಾಟ ಮಾಡುವ ವಿಷಯ ಊರಿನ ಪಾಲಿಗೆ ಆಘಾತಕಾರಿ ಸುದ್ದಿಯಾಗಿ ಪರಿಣಮಿಸುತ್ತದೆ. ಹೊಸ ಮಾಲೀಕ ರಾಜೀವನ ಆಗಮನವಾಗುವುದರೊಂದಿಗೆ ತನ್ನಷ್ಟಕ್ಕೆ ತಾನೆಂಬಂತೆ ತಣ್ಣಗೆ ಮಲಗಿದ್ದ ಊರಿನಲ್ಲಿ ಸಂಚಲನ ಉಂಟಾಗುತ್ತದೆ.

ಶಿವರಾಮಜ್ಜನ ಮಗ ತನ್ನ ಆಸ್ತಿಯನ್ನು ರಾಜೀವ ಗಾಯತೊಂಡೆಗೆ ಮಾರುವಾಗ ಊರಿನ ಕೆಲವರು ಅದಕ್ಕೆ ಆಕ್ಷೇಪಿಸುತ್ತಾರೆ. ತೋಟವನ್ನು ಪರಕೀಯನೊಬ್ಬನ ಪಾಲುಮಾಡದೆ, ಸ್ಥಳೀಕರಿಗೆ ಅದನ್ನು ಮಾರಬೇಕೆಂಬ ಒತ್ತಾಯ ಅವರದು. ಈ ಸಂದರ್ಭದಲ್ಲಿ ಆತ ಊರಿನ ಬಗೆಗೆ ಯಾವುದೇ ಭಾವಾವೇಶವಿಲ್ಲದವನಂತೆ ಸುಬ್ರಾಯ ಹೆಗಡೆಯವರಿಗೆ ಹೇಳುವ ಮಾತೊಂದಿದೆ- 'ಈ ಊರಿನ ವ್ಯವಹಾರವಾದರೂ ಎಷ್ಟು ದಿನ ಉಳಿದೀತು ಹೇಳು, ಈ ವ್ಯವಹಾರ ಒಂದು ಮುಗಿದುಹೋದರೆ

ಮುಂದೆ ಮತ್ತೆ ಊರಿಗೆ ನಾನು ಯಾವತ್ತು ಕಾಲಿಟ್ಟೇನೋ. ಎಲ್ಲಿಯೋ ನಿಮ್ಮ ಮಕ್ಕಳ ಮದುವೆಯಲ್ಲಿ ಕಾಣೆ. ಈಗ ನೀನೆ ನೋಡು, ನಿನ್ನೆ ನಾನು ಹಾದಿ ಹಾದು ಬರುವಾಗ, ಕೆಳಗಿನ ಮನೆಯ ನಿನ್ನೆ ಮೊನ್ನೆ ಹುಟ್ಟಿದ ಪೋರ, 'ನಿನಗೆ ಯಾವ ಊರಾಯಿತೊ' ಅಂದ. ಅವನಿಗೆ 'ಮಾಣಿ, ನೀನು ಹುಟ್ಟುವ ಮೊದಲ ಈ ಊರು, ಕೇರಿ, ಕಾಡು, ನದಿ ನನ್ನದಾಗಿತ್ತು' ಅಂದರೆ ಅರ್ಥವಾಗುತ್ತ? ನನ್ನ ಮಟ್ಟಿಗೆ ನಾನು ಈ ಊರಿಗೆ ಸೇರಿಕೊಂಡ ಮೂಲಪುರುಷ ಅಂದುಕೊಂಡರೂ, ಆ ಪೋರನಿಗೆ ನಾನು ಹೊರಗಿನವನೆ!' (ಪುಟ-೧೩೪). ಅನಿವಾಸಿ ನೆಲೆಯಲ್ಲಿ ನಿಂತು ಇದನ್ನು ಓದುತ್ತಿರುವ ನನಗೆ 'ಈ ಮಾತುಗಳು ಎಷ್ಟು ನಿಜವಲ್ಲವೇ?' ಅನ್ನಿಸಿಬಿಟ್ಟಿತು. ಆಸ್ತಿ ಮಾರುವ ತನ್ನದೊಂದು ನಿರ್ಧಾರದ ಮೂಲಕ ವಲ್ಲಿಗದ್ದೆಯ ವರ್ತಮಾನವನ್ನೇ ಬದಲಿಸುವ ಈ ಪಾತ್ರಕ್ಕೆ ಲೇಖಕರು ಯಾಕೋ ಒಂದು ಹೆಸರನ್ನೂ ಕೊಟ್ಟಿಲ್ಲದಿರುವುದು ಆತನ ಅತಂತ್ರ ಸ್ಥಿತಿಗೆ ದ್ಯೋತಕವೆನಿಸಿತು.

ಅನಪೇಕ್ಷಿತ ಅತಿಥಿಯಂತೆ ಆಗಮಿಸುವ ರಾಜೀವ ಗಾಯತೊಂಡೆಯನ್ನು ಊರು ಆತ್ಮೀಯವಾಗಿ ಸ್ವಾಗತಿಸುವುದಿಲ್ಲ. ಆದರೂ ಆಗಂತುಕನೆಡೆಗೆ ಊರಿನವರಿಗೆ ಕುತೂಹಲವಿಲ್ಲವೆಂದಲ್ಲ. 'ಗಾಯತೊಂಡೆ' ಎನ್ನುವ ವಿಚಿತ್ರ ಹೆಸರು ಜನರ ಮನಸ್ಸಿನಲ್ಲಿ ಆತನ ಕುರಿತಾಗಿ ವಿವಿಧ ಬಗೆಯ ಪ್ರಶ್ನೆಗಳನ್ನು ಹುಟ್ಟುಹಾಕುತ್ತಾ, ತಮತಮಗೆ ತೋಚಿದ ಉತ್ತರಗಳನ್ನೂ ಸೃಷ್ಟಿಸಿಕೊಳ್ಳುತ್ತದೆ. ಊರಿನ ಎಲ್ಲರಿಗಿಂತ ಭಿನ್ನವಾಗಿದ್ದ ರಾಜೀವ, ಅವರೆಲ್ಲರಿಗೆ ಯಾವುದೋ ಯಕ್ಷಗಾನದಲ್ಲಿ ಕಂಡ ರಾಜಕುಮಾರನಂತೆ ಭಾಸವಾಗುತ್ತಿದ್ದ. ಹೆಂಡತಿ ಇಲ್ಲದ, ಮಕ್ಕಳಿಲ್ಲದ, ಜೊತೆಯಾಗಿ ಯಾರೂ ಇರದ ಅಂತಹ ಒಂದು ಬದುಕಿನ ಅಸ್ತಿತ್ವವೇ ಊರಿನವರ ಪಾಲಿಗೆ ಕಾಲ್ಪನಿಕ ಎನ್ನಿಸುವಂತಹ ನಿಗೂಢ ವ್ಯಕ್ತಿತ್ವ ಅವನದು. ಕೆಲವರು ಆತನನ್ನು ನಕ್ಸಲರ ನಾಯಕನೆಂದು ಭಾವಿಸಿದರೆ, ಮತ್ತೆ ಕೆಲವರ ದೃಷ್ಟಿಯಲ್ಲಿ ರಾಜೀವ ಗಾಯತೊಂಡೆ ಇದ್ದ ಒಬ್ಬನೇ ಮಗನನ್ನು ಕಳೆದುಕೊಂಡು, ಅದನ್ನು ಮರೆಯಲೆಂದು ಈ ಹಳ್ಳಿಗೆ ಬಂದು ನೆಲೆಸಿದವ. ಒಟ್ಟಿನಲ್ಲಿ ಊರಿನಲ್ಲಿ ನಡೆಯುವ ಯಾವುದೇ ಚಾವಡಿ ಬೈಠಕ್ಕಿನಲ್ಲಿ ರಾಜೀವ ಗಾಯತೊಂಡೆ ಉಪಕಥೆಯಾಗಿ ಸೇರಿಕೊಳ್ಳಲೇಬೇಕೆನ್ನುವಮಟ್ಟಿಗೆ ರಾಜೀವನ ಆಗಮನ ಅಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ವಲ್ಲಿಗದ್ದೆಗೆ ಬಂದು ಆಸ್ತಿ ಖರೀದಿಸುವ ರಾಜೀವನ ಮನಸ್ಸಿನಲ್ಲಿ ಯಾವುದೇ ಉದ್ದೇಶವಿರುವಂತೆ ಓದುಗರಿಗೆ ತೋರುವುದಿಲ್ಲ. ಬದುಕಿನಲ್ಲೊಂದು ನೆಲೆ ಕಂಡುಕೊಳ್ಳಲು ಬಂದವನಿರಬಹುದೆಂದೇ ಅನ್ನಿಸುತ್ತದೆ. ಆದರೆ ಆಕಸ್ಮಿಕವೆಂಬಂತೆ ನಡೆದ ಘಟನೆಯೊಂದು ರಾಜೀವನನ್ನು ಊರಿನೊಂದಿಗೆ ಮುಖಾಮುಖಿಯಾಗಿಸುತ್ತದೆ. ಪ್ರಾಯಶಃ ಆ ಘಟನೆಯೊಂದು ನಡೆದಿರದಿದ್ದರೆ, ರಾಜೀವ ಊರಿನ ಪಾಲಿಗೆ

ನಿಗೂಢವಾಗಿಯೇ ಉಳಿದು ಹೋಗುತ್ತಿದ್ದನೇನೋ! ರಾಜೀವನನ್ನು ಊರಿನೊಂದಿಗೆ ಬೆಸೆಯಲು ಕಾರಣವಾಗುವ ಆ ಘಟನೆ ಯಾವುದೆಂದರೆ- ರಾಜೀವನಿಗೆ ಸೇರಿದ ಅರ್ಧ ಎಕರೆ ಜಮೀನನ್ನು ಒತ್ತುವರಿ ಮಾಡಿಕೊಂಡು ಬೇಲಿ ಹಾಕಿಕೊಂಡುಬಿಡುತ್ತಾರೆ, ನೆರೆಯ ಸುಬ್ರಾಯ ಹೆಗಡೆ. ಸುಬ್ರಾಯ ಹೆಗಡೆಯವರನ್ನು ಅವರ ಮನೆಯ ಪಡಸಾಲೆಯಲ್ಲಿಯೇ ಹಿಡಿದು ಹೊಡೆದುಬಿಡುವ ರಾಜೀವ, ಆ ಮೂಲಕ ಊರಿನ ಸಮಸ್ತರನ್ನೂ ದಿಗ್ಭ್ರಮೆಗೊಳಿಸುತ್ತಾನೆ. ಈ ಸಂದರ್ಭದಲ್ಲಿ ಉಳಿದವರಂತೆ ಕೋರ್ಟಿನ ಮೊರೆಹೋಗದೆ ತನ್ನದೇ ಆದ ರೀತಿಯಲ್ಲಿ ಆತ ನ್ಯಾಯ ಕಂಡುಕೊಳ್ಳುವುದು ವಿಶೇಷವೆನಿಸುತ್ತದೆ. ಅವರೆಗೆ ಊರಿನವರ ಪಾಲಿಗೆ ನಿಗೂಢವಾಗಿಯೇ ಉಳಿದಿದ್ದ ರಾಜೀವ, ಇದಾದ ನಂತರ ಊರಿನಲ್ಲಿ ಮುಂದಾಗುವ ಪ್ರಮುಖ ಪರಿವರ್ತನೆಗಳಿಗೂ ಕಾರಣವಾಗುತ್ತಾನೆ.

ವರ್ಷಗಟ್ಟಲೆ ಎಳೆಯುವ ಕೋರ್ಟಿನ ವ್ಯವಹಾರಗಳಲ್ಲಿ ನಂಬಿಕೆ ಇಲ್ಲದ ರಾಜೀವ, ತನ್ನ ಸಮಸ್ಯೆಗೆ ಕಾರಣರಾದ ಸುಬ್ರಾಯ ಹೆಗಡೆಯವರನ್ನು ತಾನೇ ಶಿಕ್ಷಿಸುವ ಮೂಲಕ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಿಕೊಳ್ಳುತ್ತಾನೆ. ಈ ರಾಜೀವ ಎಲ್ಲರಂಥವನಲ್ಲ, ಎಲ್ಲರಿಗಿಂತ ವಿಭಿನ್ನವಾಗಿ ಯೋಚಿಸಬಲ್ಲ ಎಂಬ ಸುಳಿವು ಓದುಗರಿಗೆ ಅಲ್ಲೇ ದೊರಕುತ್ತದೆ. ಇದಕ್ಕೆ ಮತ್ತಷ್ಟು ಇಂಬು ದೊರಕುವುದು ಸುಬ್ರಾಯ ಹೆಗಡೆ- ರಾಜೀವನಿಂದ ತಮಗಾಗಿರುವ ಅಪಮಾನದ ನೋವನ್ನು ಮನಸ್ಸಿನಲ್ಲಿಟ್ಟುಕೊಂಡು- ಸೀತಾರಾಮ ಭಟ್ಟರೊಡನೆ ಅವನಲ್ಲಿಗೆ ಊರಿನ ಜಾತ್ರೆಗೆ ವಂತಿಗೆ ಕೇಳಲು ಹೋದಾಗ. ಪ್ರತಿ ವರುಷ ನಡೆಯುವ ಊರಿನ ದೇವರಾದ ಭುವನೇಶ್ವರಿ ಜಾತ್ರೆ ತಾಲೂಕಿನ ಸಮಸ್ತರನ್ನೂ ಆಕರ್ಷಿಸುತ್ತಿರುತ್ತದೆ. ಈ ಜಾತ್ರೆಗೆ ತಗಲುವ ವೆಚ್ಚವನ್ನು ಗ್ರಾಮದಲ್ಲಿ ಅಡಿಕೆ ತೋಟವಿರುವವರು ಸಮನಾಗಿ ಹಂಚಿಕೊಳ್ಳಬೇಕಾಗಿರುತ್ತದೆ. ಈ ವಿಷಯದಲ್ಲಿ ಮಾತ್ರ ಯಾರೂ ತಪ್ಪುವಂತಿಲ್ಲ. ಜಾತ್ರೆಗೆ ತಿಂಗಳಿರುವಾಗಲೇ ಹಣ ಕೂಡಿಸುವ ಕೆಲಸ ಶುರುವಾಗುತ್ತದೆ. ತಮ್ಮ ಪಾಲಿನ ಅಡಿಕೆ, ಹಣವನ್ನು ನೀಡದವರನ್ನು ಊರಿನಿಂದ ಬಹಿಷ್ಕರಿಸುವ ಭಯವಿದ್ದುದರಿಂದ ಯಾರೊಬ್ಬರೂ ವಂತಿಗೆ ನೀಡಲು ನಿರಾಕರಿಸುತ್ತಿರಲಿಲ್ಲ. ಈ ಬಾರಿ ಊರಿಗೆ ಹೊಸದಾಗಿ ಬಂದ ರಾಜೀವನನ್ನು ಸುಬ್ರಾಯ ಹೆಗಡೆಯವರು ವಂತಿಗೆ ಕೇಳಿದಾಗ ಆತ, ಊರಿನ ಚರಿತ್ರೆಯಲ್ಲೇ ಮೊದಲ ಬಾರಿಗೆ ಹಣ ಕೊಡಲು ನಿರಾಕರಿಸುತ್ತಾನೆ.

ತನ್ನ ನಿರಾಕರಣೆಗೆ ಆತ ನೀಡುವ ಕಾರಣ ರಾಜೀವನ ವ್ಯಕ್ತಿತ್ವವನ್ನು ಮತ್ತಷ್ಟು ಧೀಮಂತಗೊಳಿಸುತ್ತದೆ. ಒಂದೆರಡು ದಿನದ ಗದ್ದಲದಲ್ಲಿ ಕಳೆದುಹೋಗುವ ಜಾತ್ರೆಯ ಸಲುವಾಗಿ ಸಾವಿರಾರು ರೂಪಾಯಿಗಳನ್ನು ವ್ಯರ್ಥ ಮಾಡುವ ಬದಲಿಗೆ, ಊರಿನ ಮಕ್ಕಳಿಗೆ ಉಪಯುಕ್ತವಾಗಬಹುದಾದಂತಹ ಶಾಲೆ ಅಥವಾ ಊರಿನ ಪ್ರಗತಿಗೆ

ಕಾರಣವಾಗುವಂತಹ ಯಾವುದಾದರೂ ಉದ್ಯಮ ತೆರೆಯಲು ಆತ ಆಸಕ್ತಿ ತೋರಿಸುತ್ತಾನೆ. 'ಈ ಊರಿನಲ್ಲಿ ಉಮೇದು ಕೊಡುವಂಥದ್ದು ಯಾವುದೂ ಇಲ್ಲ. ಒಂದು ಅಂಗಡಿಯಿಲ್ಲ, ಉದ್ಯೋಗವಿಲ್ಲ, ಶಾಲೆಯನ್ನು ತೆಗೆದುಕೊಳ್ಳಿ... ಇಲ್ಲಿಂದ ಮೂರು ನಾಲ್ಕು ಮೈಲಿಯಾದರೂ ಆಗುತ್ತದೆ. ಇಲ್ಲಿಯ ಮಳೆಯ ರಭಸದಲ್ಲಿ ನಾವೇ ನಡೆಯಲು ತೊಂದರೆಪಡುವಾಗ, ಮಳೆಗಾಲದಲ್ಲಿ ಎಳೆಯ ಮಕ್ಕಳು ಹೇಗೆ ನಡೆದಾವು? ನಡೆಯುವಂತಹ ರಸ್ತೆಯೂ ಈ ಊರಿಗೆ ಇಲ್ಲ. ಈ ಪುಟ್ಟ ಜೀವಗಳು ಹೇಗೆ ನಡೆದಾವು? ಮಳೆಯಲ್ಲಿ ತೋಯ್ದು ಒದ್ದೆಯಾಗಿ ಕಾಲೆಳೆದುಕೊಂಡು ಮನೆ ಸೇರುವ ಮಕ್ಕಳು ಹೇಗೆ ಓದಿಯಾವು? ಪುಸ್ತಕದ ಆಚೆಯೂ ಹಬ್ಬಿಕೊಂಡಿರುವ ಜಗತ್ತನ್ನು ಅವು ಹೇಗೆ ಕಂಡಾವು? ಈ ಊರಿನಲ್ಲಿ ಲಕ್ಷಾಂತರ ಸೇರಿಸಿ ಜಾತ್ರೆ ಮಾಡುವ ಹಿರಿಯರಾದ ನೀವು ಈ ಕುರಿತಂತೆ ಇನ್ನೂ ಯೋಚಿಸಿಲ್ಲವಲ್ಲ ಎಂದು ನನಗೆ ಆಶ್ಚರ್ಯವಾಗುತ್ತಿದೆ... ವ್ಯಥೆಯಾಗುತ್ತಿದೆ' (ಪುಟ–೮೧, ೮೨) ಎನ್ನುವ ರಾಜೀವನ ಮಾತಿನಲ್ಲಿ ಅವನ ಸಾಮಾಜಿಕ ಕಾಳಜಿ ಎದ್ದು ಕಾಣುತ್ತದೆ.

ಹುಟ್ಟಿದಾಗಿನಿಂದ ಅಲ್ಲಿಯೇ ಜೀವಿಸುತ್ತಿರುವ ಯಾರೊಬ್ಬರ ಗಮನಕ್ಕೂ ಬರದ ಪ್ರಮುಖ ಕೊರತೆಯೊಂದು, ಊರು ಪರಕೀಯನೆಂದೇ ಗುರುತಿಸಿ ದೂರವಿಟ್ಟಿದ್ದ ರಾಜೀವನ ಗಮನಕ್ಕೆ ಬಂದು ಆತ ಅದನ್ನು ಪರಿಹರಿಸಬೇಕೆಂದು ಮನಸ್ಸು ಮಾಡುವುದು ಆಶ್ಚರ್ಯ ಮೂಡಿಸಿದರೂ, ಆತನ ಸಮಾಜ ಸುಧಾರಕ ನಿಲುವನ್ನು ತೋರಿಸುತ್ತದೆ. ಈ ಘಟನೆಗೆ ಪೂರಕವೆಂಬಂತೆ, ಕಾದಂಬರಿಯಲ್ಲಿ ರಾಜೀವನ ಗುರು, ಮುಂಬಯಿಯ ಕೊಳೆಗೇರಿಗಳಲ್ಲಿ ಕೆಲಸ ಮಾಡುವ ಸಮಾಜ ಸೇವಕಿ ಕೊಂಕಣ ಸೇನಳ ಪ್ರಸ್ತಾಪವೂ ಬರುತ್ತದೆ. ಮುನ್ನುಡಿಯಲ್ಲಿ ಆಮೂರರು ಗುರುತಿಸಿರುವಂತೆ– 'ರಾಜೀವ ಮುಂಬಯಿ ಯಲ್ಲಿ ಏನು ಮಾಡುತ್ತಿದ್ದ? ಅದನ್ನು ಬಿಟ್ಟು ದೂರದ ಮೂಲೆಯೊಂದರಲ್ಲಿರುವ ಹಳ್ಳಿಗೆ ಹೇಗೆ ಬಂದ? ಶಿವರಾಮಜ್ಜನ ತೋಟವನ್ನು ಕೊಳ್ಳಲು ಅವನಿಗೆ ಹಣ ಎಲ್ಲಿಂದ ಬಂತು? ಮುಂತಾದ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿಯುತ್ತವೆ. ಅವನ ಕೃತಿಗಳಲ್ಲಿಯೇ ಅವನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ.' ರಾಜೀವನ ಹಿನ್ನೆಲೆ ಕೊನೆಗೂ ಅಸ್ಪಷ್ಟವಾಗಿಯೇ ಉಳಿದುಹೋಗುತ್ತದೆ.

ಜಾತ್ರೆಯ ಪೂರ್ವ ಸಿದ್ಧತೆಯ ಕುರಿತಾಗಿ ಕಾದಂಬರಿಯು ಕಟ್ಟಿಕೊಡುವ ಕೆಲವು ವಿವರಗಳು ಆಸಕ್ತಿದಾಯಕವಾಗಿವೆ. ಉದಾಹರಣೆಗೆ, ಈಡಿಗ ಜನಾಂಗದವರು ನಡೆಸುವ ಇಂದ್ರನ ಪೂಜೆ. ಈ ಇಂದ್ರನನ್ನು ಈಡಿಗರೇ ಮಾಡಿ ತರಬೇಕಾದ್ದು ಕ್ರಮ. ದೊಡ್ಡ ಹಲಸಿನಮರದ ತುಂಡನ್ನು ಮನುಷ್ಯಾಕೃತಿಯಲ್ಲಿ ನಿಲ್ಲಿಸಿ, ಅದರ ಮೈತುಂಬಾ ಚಿತ್ರ ಬಿಡಿಸಿ ಇಂದ್ರನ ಮೂರ್ತಿಯನ್ನು ತಯಾರಿಸಲಾಗುತ್ತದೆ. ಇಂದ್ರನಿಗೆ ಸೀರೆ ಉಡಿಸುವ ಸಾಮೂಹಿಕ ಕಾರ್ಯಕ್ರಮ ಊರಿನವರ ಪಾಲಿನ ಸಂಭ್ರಮದ ಘಳಿಗೆಗಳಲ್ಲೊಂದು.

ಮಳೆ ಸಕಾಲಕ್ಕೆ ಬಾರದಿದ್ದ ಸಂದರ್ಭಗಳಲ್ಲಿ, ಬಾಣಂತಿಯ ಸೀರೆಯನ್ನು ಮಗುವಿನ ಮೂತ್ರದಲ್ಲಿ ನೆನೆಸಿ ಅದನ್ನು ಇಂದ್ರನ ಮೂರ್ತಿಗೆ ಉಡಿಸಿದರೆ, ಅದರ ಕಮಟು ವಾಸನೆ ತಾಳಲಾರದೆ ಇಂದ್ರ ಮಳೆ ತರಿಸುತ್ತಾನೆ ಎಂಬ ವಿಚಿತ್ರ ನಂಬಿಕೆಯೂ ಇಲ್ಲಿದೆ (ಪುಟ–೬೭). ಇಂದ್ರನ ಅಲಂಕಾರದಲ್ಲಿ ಈಡಿಗರ ಪಾತ್ರವಿದ್ದರೆ, ಪರ್ಜನ್ಯ ವಿಸರ್ಜನೆಯ ನಂತರ ನಡೆಯುವ ಡೊಳ್ಳು ಕುಣಿತದಲ್ಲಿ ಶೂದ್ರ ಜನಾಂಗ ಪಾಲ್ಗೊಳ್ಳುತ್ತಿರುತ್ತದೆ.

ರಾಜೀವ ತನ್ನ ಪಾಲಿನ ವಂತಿಗೆ ಕೊಡಲು ನಿರಾಕರಿಸುವುದನ್ನೇ ನೆಪವಾಗಿಸಿಕೊಂಡು, ಊರಿನ ಬಹುಪಾಲು ಜನ ಕೂಡ ತಮ್ಮ ಪಾಲಿನ ಖರ್ಚು ಕೊಡಲು ನಿರಾಕರಿಸುತ್ತಾರೆ. ಈ ಸಂದರ್ಭದ ಉಪಯೋಗ ಪಡೆದುಕೊಂಡ ಮಠ ಊರಿನ ದೇವಸ್ಥಾನವನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುತ್ತದೆ. ರಾಜೀವನ ನಿರಾಕರಣೆಯಿಂದ ಉತ್ತೇಜಿತನಾದ ಈಡಿಗರ ಮುಖಂಡ ರಾಮಾನಾಯ್ಕನೂ ಜಾತ್ರೆಯ ಖರ್ಚು ಕೊಡಲು ಒಪ್ಪುವುದಿಲ್ಲ; ಮಾತ್ರವಲ್ಲ, ಇಡೀ ಈಡಿಗ ಜನಾಂಗವೇ ಜಾತ್ರೆಯಲ್ಲಿ ಪಾಲ್ಗೊಳ್ಳದಿರಲು ಮತ್ತು ಸಂಪ್ರದಾಯದಂತೆ ಈಡಿಗರೇ ನಡೆಸಿಕೊಂಡು ಬರುತ್ತಿದ್ದ ಕೆಲವು ನಿರ್ದಿಷ್ಟ ಆಚರಣೆಗಳಲ್ಲಿಯೂ ಭಾಗಿಯಾಗದಿರಲು ನಿರ್ಧರಿಸುತ್ತದೆ. ಡೊಳ್ಳು ಕುಣಿತದಲ್ಲಿ ಭಾಗವಹಿಸುತ್ತಿದ್ದ ಶೂದ್ರ ಜನಾಂಗದವರಿಗೂ ಜಾತ್ರೆಯಲ್ಲಿ ಆಸಕ್ತಿ ಉಳಿಯುವುದಿಲ್ಲ. ಶಾಲೆ ಕಟ್ಟುವ ಕೆಲಸದಲ್ಲಿ ಸಾಕಷ್ಟು ದುಡ್ಡು ಮಾಡಿಕೊಂಡಿದ್ದ ಅವರು ಹುಲಿವೇಷ ಕುಣಿಯುವ ಬದಲು ಚಹದಂಗಡಿ ಇಡಲು ಯೋಚಿಸುವುದು ಅವರ ಮನಃಸ್ಥಿತಿಯಲ್ಲಾದ ಬದಲಾವಣೆಯನ್ನೂ ಸೂಚಿಸುತ್ತದೆ.

ಈ ಬಾರಿ ಜಾತ್ರೆಯೇನೋ ನಡೆಯುತ್ತದೆ. ಆದರೆ, ಹಿಂದಿನ ಸಡಗರ, ಸಂಭ್ರಮಗಳಿಲ್ಲದೆ ಜಾತ್ರೆ ತನ್ನ ಅರ್ಥವಂತಿಕೆಯನ್ನೇ ಕಳೆದುಕೊಂಡಿರುತ್ತದೆ. 'ಈಡಿಗರ ನುರಿತ ರಥ ಕಟ್ಟುವ ಜನ, ಜಾತ್ರೆಗೆ ಬಾರದೇ ರಥದ ಗಾಲಿಗಳು ನೇರವಾಗಿ ಉರುಳುತ್ತಲೇ ಇರಲಿಲ್ಲ. ಯಮಭಾರದಿಂದ ಓಲಾಡುವ ರಥವನ್ನು ಎಳೆಯಲು ಗಟ್ಟಿ ಜನರು ಜಾತ್ರೆಯಲ್ಲಿ ಇರಲಿಲ್ಲ. ಈ ಬಾರಿ ಉಳಿದ ಕೇರಿಯವರು ಊಟ ಮಾಡುವ ಕಡೆ ಚಪ್ಪರವನ್ನು ಕಟ್ಟಿರಲಿಲ್ಲ. ಬಾಳೆ ಇಲ್ಲದೆ, ತೋರಣವಿರದೆ, ರಂಗೋಲಿಯೂ ಇರದೆ, ಜನರೂ ಇರದೆ ಆ ಭಾಗ ಒಂದು ರುದ್ರಭೂಮಿಯಂತೆ ಕಾಣುತ್ತಿತ್ತು' (ಪುಟ–೧೭೨). ಬ್ರಾಹ್ಮಣರು, ಈಡಿಗರು, ಶೂದ್ರರು ಒಟ್ಟಾಗಿ ನಡೆಸುತ್ತಿದ್ದ ಜಾತ್ರೆಯನ್ನು ಈ ಬಾರಿ ಬ್ರಾಹ್ಮಣರು ಮಾತ್ರ ನಡೆಸಬೇಕಾಗುತ್ತದೆ. ಊರಿನ ವಿವಿಧ ಜಾತಿಯವರನ್ನು ಒಂದುಗೂಡಿಸುತ್ತಿದ್ದ ಜಾತ್ರೆಯೇ ಊರಿನ ಒಗ್ಗಟ್ಟು ಕದಡಲು ಕಾರಣವಾಗುವುದೊಂದು ದುರಂತ. ಧರ್ಮ, ಮನುಷ್ಯ ಮನುಷ್ಯರ ನಡುವೆ ಗೋಡೆಗಳನ್ನು ಎಬ್ಬಿಸುತ್ತಿರುವ ಪ್ರಸ್ತುತ ಸಂದರ್ಭದಲ್ಲಿ, ಕಾದಂಬರಿಯಲ್ಲಿ ಬರುವ ಜಾತ್ರೆಯ ಪ್ರಸಂಗ ಹೊಸ ಅರ್ಥಗಳನ್ನು ಹೊಮ್ಮಿಸುವಂತಿದೆ.

'ಅಶ್ವಮೇಧ'ದಲ್ಲಿ ಧಾರ್ಮಿಕ ಪೀಠವಾದ ಮಠ, ಇಡೀ ಊರನ್ನೇ ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಮುಖ್ಯ ಶಕ್ತಿಯಾಗಿ ಚಿತ್ರಿತಗೊಂಡಿದೆ. ಧರ್ಮ, ದೇವರ ಹೆಸರಿನಲ್ಲಿ ಊರನ್ನು ನಿಯಂತ್ರಿಸುವ ಮಠ ಕೆಲವು ಬಾರಿ ಸರ್ವಾಧಿಕಾರಿಯಂತೆ ವರ್ತಿಸುತ್ತದೆ. ಜನರನ್ನು ಸನ್ಮಾರ್ಗದಲ್ಲಿ ನಡೆಸಬೇಕಾದ ಮಠ, ತಾನೇ ತಪ್ಪು ದಾರಿಯಲ್ಲಿ ನಡೆಯುವುದೊಂದು ವಿಪರ್ಯಾಸ. ಸರ್ವಸಂಗ ಪರಿತ್ಯಾಗ ಮಾಡಿ, ವಿರಕ್ತರೆನಿಸ ಬೇಕಾಗಿದ್ದ ಮಠದ ಸ್ವಾಮಿಯೊಬ್ಬರು ಕಾಮಾಸಕ್ತರಾಗಿ, ಅನೈತಿಕ ಸಂಬಂಧದಲ್ಲಿ ತೊಡಗುವ ಪ್ರಸಂಗವೂ ಇಲ್ಲಿದೆ. ಪುಣೆಯ ಶ್ರೀಮಂತ ಭಕ್ತರೊಬ್ಬರ ಮನೆಯ ಅಡುಗೆಯಾಳಾದ ಕಮಲಾಬಾಯಿಯನ್ನು ಮೋಹಿಸಿ ಮದುವೆಯಾಗುವ ಸ್ವಾಮಿಗಳು, ಕೊನೆಗೆ ಕಾಮದ ಪಿತ್ಥ ನೆತ್ತಿಗೇರಿ, ಚಿತ್ತಸ್ಥಿಮಿತ ಕಳೆದುಕೊಂಡು ನೇಣು ಹಾಕಿಕೊಳ್ಳುತ್ತಾರೆ. ಹಿರಿಯ ಸ್ವಾಮಿಗಳ ಕಥೆ ಹಾಗಾದರೆ, ಈಗಿರುವ ಕಿರಿಯ ಸ್ವಾಮಿ ಕುತಂತ್ರಿ, ತಮಗಿರುವ ರಾಜಕೀಯ ಸಂಪರ್ಕಗಳಿಂದ ಮಠದ ಸಂಪತ್ತನ್ನು ಹೆಚ್ಚಿಸುವಲ್ಲಿ ಈ ಸ್ವಾಮಿಗೆ ಹೆಚ್ಚಿನ ಆಸಕ್ತಿ. ಮಠದ ಪ್ರಾಬಲ್ಯವನ್ನು ಬೆಳೆಸಲು ಯಾವುದೇ ದಾರಿ ಹಿಡಿಯಲೂ ಸಿದ್ಧ. ರಾಜೀವ ಗಾಯತೊಂಡೆ ಊರಿನಲ್ಲಿ ಹುಟ್ಟುಹಾಕುತ್ತಿರುವ ಸುಧಾರಣೆಯ ಅಲೆಯನ್ನು ಸಹಿಸಲಾರದೆ ಅವನ ಕೊಲೆಯ ಸಂಚು ರೂಪಿಸುವುದು, ಗಣೇಶ ಹೆಗಡೆಯವರ ಮರಣದ ನಂತರ ಅವರ ತೋಟವನ್ನು ವಶಪಡಿಸಿಕೊಳ್ಳಲು ಹೇಯವಾಗಿ ಪ್ರಯತ್ನಿಸುವುದು ಇತ್ಯಾದಿ ಘಟನೆಗಳು ಯಾವುದೇ ಧಾರ್ಮಿಕ ಪೀಠವೊಂದು ಹಿಡಿಯಬಹುದಾದ ಅಧಃಪತನದ ಪರಮಾವಧಿಯಂತೆ ಕಂಡುಬರುತ್ತವೆ. ಇಲ್ಲಿ ಲೇಖಕರು ಸೃಷ್ಟಿಸಿರುವ ಹಿರಿಯ ಸ್ವಾಮೀಜಿಯ ಹಾದರದ ಪ್ರಸಂಗವಾಗಲೀ, ಕಿರಿಯ ಸ್ವಾಮಿಯ ರಾಜಕೀಯಾಸಕ್ತಿಯಾಗಲೀ ಕೇವಲ ಕಾಲ್ಪನಿಕ ಸಂಗತಿಗಳೆನ್ನಿಸುವುದಿಲ್ಲ. ನಿಜ ಜೀವನದಿಂದಲೇ ಹೆಕ್ಕಿದ ವಿವರಗಳನ್ನು ಲೇಖಕರು ಕಥೆಯಾಗಿಸಿದ್ದಾರೆನ್ನುವ ಅನುಮಾನವೂ ಕಾಡದಿರದು.

ಕಾದಂಬರಿಯಲ್ಲಿ ಬರುವ ಮತ್ತೊಂದು ಪ್ರಮುಖ ಪಾತ್ರ ನಿರ್ಮಲೆಯದು. ಅವಳ ವ್ಯಕ್ತಿತ್ವದಲ್ಲಿಯೇ ಬಂಡಾಯ ಅಡಕವಾಗಿದ್ದರೂ ಎಲ್ಲಿಯೂ ಲೇಖಕರು ಅದನ್ನು ವಿಜೃಂಭಿಸಲು ಹೋಗಿಲ್ಲ. ತನ್ನ ಮದುವೆಯ ದಿನವೇ, ಮನೆಯಾಳು ಕೃಷ್ಣನೊಡನೆ ಓಡಿಹೋಗಿ ಪಟ್ಟಣ ಸೇರುವ ನಿರ್ಮಲ, ಸಮಾಜವನ್ನು ಎದುರು ಹಾಕಿಕೊಂಡು ಬಾಳುವ ಗಿಟ್ಟ ನಿರ್ಧಾರ ತೆಗೆದುಕೊಳ್ಳುತ್ತಾಳೆ. ಆದರೆ ಹರಿಜನ ಜಾತಿಗೆ ಸೇರಿದ ಕೃಷ್ಣನ ಪ್ರಜ್ಞೆಯಲ್ಲಿ ಬೇರು ಬಿಟ್ಟಿರುವ ಕೀಳರಿಮೆಯಿಂದಾಗಿ ನಿರ್ಮಲೆ ತನ್ನ ಪ್ರಯತ್ನದಲ್ಲಿ ಯಶಸ್ವಿಯಾಗುವುದಿಲ್ಲ. ಆಕೆಯೊಡನೆ ಪಟ್ಟಣ ಸೇರಿದ ಕೃಷ್ಣ ಮಂಕಾಗುತ್ತಾನೆ. ಅವನ ಮನಸ್ಸಿನಲ್ಲಿ ಬ್ರಾಹ್ಮಣ ಹೆಣ್ಣಾದ ನಿರ್ಮಲೆಯ ಬಗೆಗಿರುವ ಶ್ರೇಷ್ಠತೆಯ ಭಾವನೆಯನ್ನು ಲೇಖಕರು ಒಂದು ಪ್ರಸಂಗದ ಮೂಲಕ ಸೆರೆಹಿಡಿಯಲು ಪ್ರಯತ್ನಿಸಿದ್ದಾರೆ.

ಕೃಷ್ಣನೊಡನೆ ನಗರ ಸೇರಿ ದಿನಗಳು ಕಳೆದರೂ ನಿರ್ಮಲ-ಕೃಷ್ಣರ ದಾಂಪತ್ಯ ಜೀವನ ಪ್ರಾರಂಭವಾಗುವುದೇ ಇಲ್ಲ. ನಿರ್ಮಲೆಯೊಡನೆ ಬಂದು ತಪ್ಪು ಮಾಡಿದೆ, ಅವಳನ್ನು ಮುಟ್ಟಿ ಮೈಲಿಗೆ ಮಾಡಿದೆ ಎನ್ನುವ ಕೃಷ್ಣನ ಮನಃಸ್ಥಿತಿಯೂ ಸುಧಾರಿಸುವುದಿಲ್ಲ. 'ಎಲ್ಲೋ ತಾಗಿದ ನಿರ್ಮಲಳ ದೇಹದ ಯಾವುದೋ ಭಾಗಕ್ಕೆ ತಾನು ಮೈಲಿಗೆ ಹಚ್ಚಿಬಿಟ್ಟೆನೇ ಎಂದು ತಳಮಳ ಬೇರೆ ಶುರುವಾಗಿಬಿಟ್ಟಿತ್ತು... ನಿರ್ಮಲೆಯೇ ಮುಂದಾಗಿ ಅವನ ಕೈಹಿಡಿದರೆ ಹಾವು ಮುಟ್ಟಿಸಿಕೊಂಡಂತೆ ಆತ ಹಾರಿ ಬೀಳುತ್ತಿದ್ದ...' (ಪುಟ-೪೮). ಬರುವಾಗ ತಂದಿದ್ದ ಹಣವೂ ಕರಗುತ್ತಾ ಬರುತ್ತದೆ. ಹತಾಶೆಯಲ್ಲಿ ಮುಳುಗಿದ ನಿರ್ಮಲ ಒಂದು ರಾತ್ರಿ, ಕೃಷ್ಣನನ್ನು ಉದ್ದೀಪನಗೊಳಿಸುವಂತೆ ಮೈಮೇಲಿನ ಬಟ್ಟೆಗಳನ್ನು ಕಿತ್ತೊಗೆದು ಬೆತ್ತಲಾಗಿ ನಿಂತು- 'ಬಾರೊ ಕೃಷ್ಣ' ಎಂದು ಅವನನ್ನು ಆಹ್ವಾನಿಸುತ್ತಾಳೆ.

ಬೆತ್ತಲೆಯಾಗಿ ತನ್ನ ಮುಂದೆ ನಿಂತಿರುವ ನಿರ್ಮಲೆ, ಕೃಷ್ಣನ ಕಣ್ಣಿಗೆ ಅವ್ವ ಹೇಳುತ್ತಿದ್ದ ಕಥೆಯಲ್ಲಿ ಬರುವ ಪಾರ್ವತಿಯಂತೆ, ರಂಗಸ್ಥಳದ ಮೇಲೆ ಮುಡಿ ಬಿಚ್ಚಿ, 'ಬಾರೊ ಕುರುಕುಲದ ಕುನ್ನಿಯೇ, ಬಾರೋ' ಎಂದು ಕುಣಿವ ದ್ರೌಪದಿಯಂತೆ (ಪುಟ-೪೯) ಕಾಣಿಸುವುದು, ಉಚ್ಚ-ನೀಚ ಭೇದ-ಭಾವಗಳನ್ನು ಮನಸ್ಸಿನಲ್ಲಿ ಭದ್ರವಾಗಿ ಸ್ಥಾಪಿಸಿಕೊಂಡಿರುವ ಕೃಷ್ಣನ ಕೆಳವರ್ಗದ ಮನಃಸ್ಥಿತಿಗೆ ರೂಪಕವಾಗುತ್ತದೆ. 'ಅಮ್ಮಾ, ಅಮ್ಮಾ, ದಯವಿಟ್ಟು ನನ್ನ ಬಿಡಿ. ನಾನು ಹೇಳಬೇಕೆಂದರೆ ನಿಮ್ಮ ಪಾದಧೂಳಿಗೂ ಸರಿ ಆದವನಲ್ಲ. ಯಾವ ಕೆಟ್ಟ ಗಳಿಗೆಯಲ್ಲಿ ಬ್ರಹ್ಮರಾಕ್ಷಸ ಮರ ಇಳಿದು ನನ್ನ ಹೆಗಲುಗಳನ್ನು ಏರಿತೋ, ಯಾಕೆ ನಾನು ನಿಮ್ಮ ಹಿಂದೆ ನಡೆದೆನೋ... ಗೊತ್ತಿಲ್ಲ. ಬೇಕಿದ್ದರೆ ನೀವು ಹೇಳುವ ಯಾವುದೇ ಕೆಲಸವನ್ನು ಮಾಡುತ್ತೇನೆ. ಆದರೆ, ಇದೊಂದು ಮಾತ್ರ ನನ್ನಿಂದ ಸಾಧ್ಯವಿಲ್ಲ....' (ಪುಟ-೪೯) ಎಂದು ಅವನು ನಿರ್ಮಲಳ ಕಾಲಿಗೆ ಬಿದ್ದು ಅಳುತ್ತಾನೆ; ಅವಳಿಂದ ದೂರವಾಗಿ ಹೊರಟುಹೋಗುತ್ತಾನೆ.

ಬೇರೆ ದಾರಿ ಕಾಣದ ನಿರ್ಮಲ ವಲ್ಲಿಗದ್ದೆಗೆ ಹಿಂತಿರುಗುತ್ತಾಳೆ. ಕೃಷ್ಣನ ತಾಯಿ ದೇವಿಯೊಡನೆ ನಿರ್ಮಲ ಹೊಸ ಬದುಕು ಆರಂಭಿಸುತ್ತಾಳೆ. ದೇವಿಯ ಸಣ್ಣ ಗುಡಿಸಲಿನಲ್ಲಿ ಮರುಹುಟ್ಟು ಪಡೆದು ನಿರ್ಮಲೆ 'ಬೆಳ್ಳಿ'ಯಾಗಿ ಪರಿವರ್ತನೆ ಹೊಂದುತ್ತಾಳೆ. ಇತರ ಹರಿಜನ ಹೆಂಗಸರಂತೆ, ಬೆಳ್ಳಿಯೂ ಬ್ರಾಹ್ಮಣರ ಕೇರಿಗೆ ಕೆಲಸಕ್ಕೆ ಹೋಗತೊಡಗುತ್ತಾಳೆ. ಊರಿನ ಜನ ಅವಳನ್ನು 'ನಿರ್ಮಲ' ಎಂದು ಕರೆದಾಗ, ಯಾವ ಉತ್ತರವೂ ಬಾರದೆ ಕೊನೆಗೆ 'ಬೆಳ್ಳಿ' ಎಂದೇ ಅವಳನ್ನು ಒಪ್ಪಿಕೊಂಡುಬಿಡುತ್ತಾರೆ. ನಿರ್ಮಲೆಯೊಂದಿಗೆ ಓಡಿಹೋಗಿದ್ದ ಕೃಷ್ಣ ಎಲ್ಲಿ ಹೋದ? ಅವನ ಕಥೆ ಮುಂದೇನಾಯಿತು ಎಂಬ ಆಸಕ್ತಿ ಓದುಗನಿಗಿದ್ದರೂ, ಆತ ನಿರ್ಮಲ ಮತ್ತು ದೇವಿಯ ಕಣ್ಣು-ಮನಸ್ಸುಗಳಲ್ಲಿ ಮೂಕ ಪ್ರಶ್ನೆಗಳಾಗಿಯೇ ಉಳಿದುಹೋಗುವುದು ಆ ಪಾತ್ರದ ದುರಂತವನ್ನು ಧ್ವನಿಸುತ್ತದೆ.

ತಾಯಿಯನ್ನು ಕಳೆದುಕೊಂಡರೂ ಕೇರಿಯ ಎಲ್ಲಾ ತಾಯಂದಿರ ಕೈತುತ್ತು ಉಂಡು ಬೆಳೆಯುವ ನಿರ್ಮಲಳದು ಅತಿ ಮುದ್ದಿನಿಂದ ಹುಟ್ಟಿರುವ ಹಠಮಾರಿ ಸ್ವಭಾವ. ಬಾಲ್ಯದಲ್ಲಿ ತನ್ನ ಮನೆಯ ಕೆಲಸದಾಳು ದೇವಿಯ ಮಗನಾದ ಕೃಷ್ಣನ ಸಾಹಚರ್ಯಕ್ಕಾಗಿ ಹಠ ಹಿಡಿಯುವುದು, ಅವನೊಂದಿಗೆ ಆಡಲು ಹಾತೊರೆಯುವ ವಿವರಗಳು ಕೃಷ್ಣನೊಡನೆ ನಿರ್ಮಲೆಗಿರುವ ಸ್ನೇಹಭಾವವನ್ನು ಪುಷ್ಟೀಕರಿಸಲು ನೆರವಾಗಿವೆ. ಆದರೆ ನಿರ್ಮಲ ತನ್ನ ಮತ್ತು ಅವನ ಸಹಜ, ಸುಂದರ ಸ್ನೇಹವನ್ನು ಪ್ರೇಮವೆಂದು ತಪ್ಪಾಗಿ ಭಾವಿಸಿ ಎಡವಿದಳೇನೋ ಎನ್ನಿಸಿದರೂ, ನಿರ್ಮಲೆಗೆ ಅವನಲ್ಲಿ ಪ್ರೇಮವಿರುವ ಬಗ್ಗೆ ಯಾವುದೇ ಪುರಾವೆಗಳಿಲ್ಲ. ನಿರ್ಮಲೆ ತನ್ನ ಆದರ್ಶವನ್ನು ಕೈಗೂಡಿಸಿಕೊಳ್ಳಲು ಕೃಷ್ಣನನ್ನು ಕೇವಲ ಒಂದು ಸಾಧನವಾಗಿಸಿಕೊಂಡಳೇ ಎಂಬ ಭಾವನೆಯೂ ಮೂಡುತ್ತದೆ. ಹರಿಜನ ವರ್ಗಕ್ಕೆ ಸೇರಿದ ಕೃಷ್ಣ ಮೇಲ್ವರ್ಗದ ಹೆಣ್ಣಿನಿಂದ ಹೀಗೊಂದು ಹೊಸ ರೀತಿಯ ಶೋಷಣೆಗೂ ಗುರಿಯಾದನೇನೋ ಎಂದು ವಿಷಾದವೂ ಆಗುತ್ತದೆ.

ಮಗಳು ಮದುವೆಯ ದಿನವೇ ಮನೆಯಿಂದ ನಾಪತ್ತೆಯಾದ ಆಘಾತ ತಡೆದುಕೊಳ್ಳಲಾರದೆ, ನಿರ್ಮಲಳ ತಂದೆ ಗಣೇಶ ಹೆಗಡೆಯವರು ಮಾನಸಿಕ ಸ್ಥಿಮಿತ ಕಳೆದುಕೊಂಡಿರುತ್ತಾರೆ. ಮಗಳು ಹಿಂತಿರುಗಿದರೂ, ಅವಳನ್ನು ಗುರುತಿಸಲಾರದ ದೌರ್ಭಾಗ್ಯ ಅವರದು. ನಿರ್ಮಲೆಯ ಕಾರಣದಿಂದಾಗಿಯೇ ಹುಚ್ಚರಾಗಿರುವ ಗಣೇಶ ಹೆಗಡೆಯವರ ಬುದ್ಧಿ ಮಗಳನ್ನು ಗುರುತಿಸಲು ನಿರಾಕರಿಸಿದರೂ, ಅವರ ಹೃದಯದಲ್ಲಿ ಹಾಗೆಯೇ ಉಳಿದಿರುವ ಪಿತೃವಾತ್ಸಲ್ಯದ ಪಸೆಯ ಅರಿವಾಗುವುದು ಅವರ ಸಾವಿನ ನಂತರವೇ. ತಮ್ಮ ಮಗಳು ನಿರ್ಮಲೆಯನ್ನು ದೇವಿಯ ಮಗಳು ಬೆಳ್ಳಿಯೆಂದೇ ಗುರುತಿಸುವ ಅವರಿಗೆ, ನಿರ್ಮಲೆಗೆ ಬೆಣ್ಣೆ ಹೂವೆಂದರೆ ಇಷ್ಟವೆಂಬ ವಿಷಯವೂ ನೆನಪಿರುವುದು ಸೋಜಿಗವೆನಿಸುತ್ತದೆ. ಹಾವಿನ ಕಡಿತಕ್ಕೆ ತುತ್ತಾಗಿ ಶವವಾಗಿರುವ ಅವರ ಮುಷ್ಟಿಯಲ್ಲಿ, ನಿರ್ಮಲೆಗೆ ಕೊಡಲೆಂದೇ ಅಡಗಿಸಿಟ್ಟಿರುವ ಬೆಣ್ಣೆ ಹೂವಿನ ಎಸಳುಗಳು ಓದುಗನ ಹೃದಯವನ್ನೂ ಆರ್ದ್ರವಾಗಿಸುತ್ತವೆ. ಸನಾತನ ಧರ್ಮದ ಭದ್ರ ಕೋಟೆಯನ್ನೂ ಭೇದಿಸಿ, ಒಳ ನುಸುಳಿರುವ ಮಮತೆಯ ಸೆಲೆಗೆ ಬೆಣ್ಣೆ ಹೂವು ಸುಂದರ ಸಂಕೇತವಾಗಿ ಮೂಡಿಬಂದಿದೆ.

ರಾಜೀವ ಹಳ್ಳಿಯಲ್ಲಿ ತೆರೆಯಲು ಉದ್ದೇಶಿಸಿರುವ ಶಾಲೆ ಊರಿನಲ್ಲಿ ಮುಂದಾಗಬಹುದಾದ ಎಲ್ಲಾ ಸುಧಾರಣೆಗಳಿಗೆ ನಾಂದಿಯಾಗುತ್ತದೆ. ರಾಜೀವನ ಉದ್ದೇಶ ನೆರವೇರಿಕೆಗೆ ಈಡಿಗರ ಸಮಾಜವೂ ಜೊತೆಗೂಡುತ್ತದೆ. ಇಂಗ್ಲಿಷ್ ಮಾಧ್ಯಮ ಶಾಲೆಯೊಂದು ಊರಿಗೆ ಬರಬೇಕು, ತಮ್ಮ ಮಕ್ಕಳೂ ಶಾಲೆ ಕಲಿತು ಹೊಸ ಬದುಕಿಗೆ ಅಡಿ ಇಡಬೇಕು, ಈವರೆಗೆ ತಮ್ಮನ್ನು ಅಡಿಯಾಳುಗಳಂತೆ ನಡೆಸಿಕೊಂಡ ಬ್ರಾಹ್ಮಣರ ಮುಖಭಂಗವಾಗಬೇಕು ಎನ್ನುವ ಹಂಬಲ ಈಡಿಗರ ರಾಮಾನಾಯ್ಕನ ಈ ಮಾತುಗಳಲ್ಲಿ

ಉತ್ಕಟವಾಗಿ ಹೊರಹೊಮ್ಮುತ್ತದೆ– 'ಹಗೀರ ಬ್ರಾಂಬರ್ ಬೋಳಿಮಕ್ಕ, ನೀವು ಬೇಕಾದರೆ ಕನ್ನಡ ಶಾಲೆಗೆ ಹೋಗಿ ಹಾಳಾಗಿ ಹೋಗಿ. ನಿಮ್ಮೂರು ಹಾಳಾಗಿ ಹೋಗಲಿ. ನಮ್ಮ ಮಕ್ಕಳು ಮಾತ್ರ ಇಂಗಲೀಸು ಸ್ಕೂಲಿಗೆ ಹೋಗದು. ನೀವು ಅ.ಆ.ಇ.ಈ, ಅ ಅರಸ, ಆ ಆನೆ, ಇ ಇಲಿ ಕಲಿಯಿರಿ, ನಮ್ಮ ಮಕ್ಕಳು ಮಾತ್ರ ಎ.ಬಿ.ಸಿ.ಡಿ ಕಲಿಯುತ್ತಾರೆ. ಆಗ ನೋಡುತ್ತೀನಿ ನಾನು, ನಿಮ್ಮ ಮಕ್ಕಳ ಪೌರುಷಾನ; ಸ, ಶ ವಿಚಾರ ನಮ್ಮ ಮಕ್ಕಳಿಗೆ ಬರುವುದಿಲ್ಲ ಎಂದು ನಗೆಯಾಡುತ್ತಿದ್ದಿರಲ್ಲ ಬೋಳಿಮಕ್ಕ. ಇಷ್ಟು ವರುಷ ನಮ್ಮ ಮಕ್ಳು ನಿಮ್ಮ ಮನೆಯ ಕೊನೆ ಕೊಯ್ಯುತ್ತಾ, ಗದ್ದೆ ನೆಡುತ್ತಾ, ನಿಮ್ಮ ಹೆಂಡಿರ ಮಕ್ಕ ಕಚ್ಚೆ ತೊಳೆಯುತ್ತಾ ಹಾಳಾದದ್ದು ಸಾಕ್ರೊ ಸೂಳೆಮಕ್ಕ, ಈಗ ಅವೂ ದೊಡ್ಡ ಶಹರಕ್ಕೆ ಹೋಗ್ತವೆ, ಇಂಗ್ಲಿಷ್ ಮಾತನಾಡುತ್ತಾವೆ, ನಿಮಗಿಂತಲೂ ಚೆನ್ನಾಗಿ ಭಾಷಣ ಬಿಗಿಯುತ್ತವೆ, ಹೋಗಬಹುದಂತೆ ನೀವು ಅವರ ಮನೆಗೆ ಅಡುಗೆ ಮಾಡಲಿಕ್ಕೆ, ಮುಸುರೆ ತಿಕ್ಕಲಿಕ್ಕೆ, ನಿಮ್ಮವ್ವನ...' (ಪುಟ–೧೪೩). ರಾಮಾನಾಯ್ಕನ ಮಾತುಗಳು ಕುಡಿದ ಅಮಲಿನ ಬಡಬಡಿಕೆಯಂತೆ ತೋರಿದರೂ, ಭಾಷೆಯ ಹೆಸರಿನಲ್ಲಿ, ಧರ್ಮ, ದೇವರ ಹೆಸರಿನಲ್ಲಿ ನಿರಂತರ ತುಳಿತಕ್ಕೊಳಪಟ್ಟ ಸಮುದಾಯವೊಂದರ ಮೂಕಧ್ವನಿಗಳಿಗೆ ಆತ ಮಾತು ನೀಡಿದ್ದಾನೆ.

ರಾಜೀವ ಇಚ್ಛೆಪಟ್ಟಂತೆ ಊರಿನಲ್ಲಿ ಶಾಲೆ ಸ್ಥಾಪನೆಯಾಗುತ್ತದೆ. ಸೈಂಟ್ ಫಿಲೋಮಿನ ಇಂಗ್ಲಿಷ್ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳು ಎ.ಬಿ.ಸಿ.ಡಿ ಕಲಿಯತೊಡಗುತ್ತವೆ. ಇದರೊಂದಿಗೆ ಹಳ್ಳಿಗೆ ಕ್ರೈಸ್ತ ಪಾದ್ರಿಗಳ, ಚರ್ಚುಗಳ ಆಗಮನವಾಗುತ್ತದೆ. ಆವರೆಗೆ ಬ್ರಾಹ್ಮಣರ ಜೀತದಾಳುಗಳಂತೆ ಬದುಕುತ್ತಿದ್ದ ಹರಿಜನರಿಗೆ ಕೈತುಂಬಾ ಕೆಲಸ ಸಿಗುತ್ತದೆ. ದುಡಿಯುವ ವರ್ಗದ ಮುಂದೆ ಉದ್ಯೋಗಾವಕಾಶದ ಹೊಸ ದಿಗಂತವೊಂದು ತೆರೆದುಕೊಳ್ಳುತ್ತದೆ. ಬ್ರಾಹ್ಮಣರು ಆವರೆಗೆ ಕೆಲಸಕ್ಕೆ ಪ್ರತಿಫಲವಾಗಿ ಅಕ್ಕಿಯನ್ನು ಮಾತ್ರ ಕೊಡುವ ಪದ್ಧತಿ ಇರುತ್ತದೆ. ಶಾಲೆ ಕೆಲಸದ ಉಸ್ತುವಾರಿ ಹೊತ್ತ ಮಿಷನರಿಗಳು ಮಜೂರಿಯನ್ನು ಹಣದ ರೂಪದಲ್ಲಿ ಕೊಡುವ ಹೊಸ ಪದ್ಧತಿ ಶ್ರಮಿಕ ವರ್ಗವನ್ನು ಆಕರ್ಷಿಸುತ್ತದೆ. ಈ ಕ್ರಮ ಆವರೆಗೆ ಅಲ್ಲಿದ್ದ ಆರ್ಥಿಕ ವ್ಯವಸ್ಥೆಯನ್ನೇ ಅಲುಗಾಡಿಸುತ್ತದೆ. ಬ್ರಾಹ್ಮಣರ ತೋಟದ ಕೆಲಸಕ್ಕೆ, ಮನೆ ಕೆಲಸಕ್ಕೆ ಜನ ಸಿಗದಂತಾಗುತ್ತಾರೆ. ರಾಮಾನಾಯ್ಕ ಆಶಿಸಿದಂತೆ, ತಾಲೂಕಿನ ಪಂಚಾಯಿತಿಗಳಲ್ಲಿ ಈಡಿಗರಿಗೂ ಅಧಿಕಾರ ದೊರಕುತ್ತದೆ. ಖನಿಜಯುಕ್ತ ನೀರನ್ನು ಬಾಟಲಿಯಲ್ಲಿ ತುಂಬಿ ಮಾರುವ ಹೊಸ ಉದ್ಯಮದ ಬಗ್ಗೆಯೂ ರಾಜೀವ ಮತ್ತು ರಾಮಾನಾಯ್ಕ ಯೋಚಿಸತೊಡಗುತ್ತಾರೆ. ವಲ್ಲಿಗದ್ದೆ ಎಂಬ ಜಡ್ಡುಗಟ್ಟಿದ ಸಣ್ಣ ಹಳ್ಳಿಯೊಂದು ಪರಿವರ್ತನೆಗೆ ಮೈಯೊಡ್ಡಲು ರಾಜೀವ ಗಾಯತೊಂಡೆ ಮೂಲ ಕಾರಣವಾಗುತ್ತಾನೆ. ಸುಬ್ರಾಯ ಹೆಗಡೆಯವರ ಮನೆಗೆ ಗೋಬರ್ ಗ್ಯಾಸ್ ಒಲೆ ಬರುವುದು, ಟೀವಿ ಆಂಟೆನಾ ಅವರ ಮನೆಯ ಮುಂದಿನ ಮರದಲ್ಲಿ

ಪ್ರತಿಷ್ಠಾಪನೆಯಾಗುವುದು ಊರು ಆಧುನಿಕತೆಯತ್ತ ಮುಖ ಮಾಡಿರುವುದರ ಪ್ರತೀಕಗಳೆನಿಸುತ್ತವೆ.

ಇಂತಹ ಪರಿಸ್ಥಿತಿಯಲ್ಲಿ, ಮಠದ ಸ್ವಾಮಿಗಳು ಬ್ರಾಹ್ಮಣರ ಆತ್ಮವಿಶ್ವಾಸವನ್ನು ಬಲಪಡಿಸಲು, ನಶಿಸುತ್ತಿರುವ ಬ್ರಾಹ್ಮಣ ಶಕ್ತಿಯ ಪುನರುತ್ಥಾನಕ್ಕೆಂದು ಅಶ್ವಮೇಧ ಯಾಗವನ್ನು ನಡೆಸಲು ಉದ್ದೇಶಿಸುತ್ತಾರೆ. ಅದಕ್ಕಾಗಿ ಬಿರುಸಿನ ತಯಾರಿಗಳು ನಡೆಯುತ್ತವೆ. ಈ ಭಾಗವನ್ನು ಕಾದಂಬರಿಯಲ್ಲಿ ಬರುವ ಕ್ಲೈಮಾಕ್ಸ್ ಎನ್ನಬಹುದು. ವಲ್ಲಿಗದ್ದೆಯ ಜಾತ್ರೆಯ ವಿಷಯದಲ್ಲಿ ಈಡಿಗರಿಂದ ಆಗಿರುವ ಮುಖಭಂಗ, ಕ್ರೈಸ್ತ ಪಾದ್ರಿಗಳ ಪ್ರವೇಶ, ಬ್ರಾಹ್ಮಣರ ಕೈತಪ್ಪುತ್ತಿರುವ ಅಧಿಕಾರಗಳು– ಸ್ವಾಮಿಗಳು ಈ ಯಾಗವನ್ನು ಕೈಗೊಳ್ಳುವಂತೆ ಪ್ರೇರೇಪಿಸಿರುತ್ತವೆ. ಅಶ್ವಮೇಧದ ಕುದುರೆಗಾಗಿ ಹುಡುಕಾಟ ನಡೆಯುತ್ತದೆ. ರೇಸಿನಲ್ಲಿ ಎಂದೂ ಗೆಲ್ಲದ ಕುದುರೆಯನ್ನು, ಬೆಂಗಳೂರಿನ ಶ್ರೀಮಂತ ಭಕ್ತರೊಬ್ಬರು ಯಾಗಕ್ಕೆಂದು ಬಾಡಿಗೆಗೆ ಪಡೆದುಕೊಂಡು ವಲ್ಲಿಗದ್ದೆಗೆ ಕಳುಹಿಸಿ ಕೊಡುತ್ತಾರೆ. ಆ ಕುದುರೆಯು ಸ್ವಾಮಿಗಳು ಅಂದುಕೊಂಡಿದ್ದಂತೆ ಶ್ವೇತ ವರ್ಣದ್ದಾಗಿ, ಹಣೆಯ ಮಧ್ಯದಲ್ಲಿ ಕಪ್ಪು ಚುಕ್ಕೆ ಹೊಂದಿರುತ್ತದೆ. ಕೊನೆಗೂ ಅಶ್ವಮೇಧದ ಕುದುರೆ ವಲ್ಲಿಗದ್ದೆಯನ್ನು ತಲುಪಿದಾಗ ಊರಿನ ಸಂಭ್ರಮ ಹೇಳತೀರದು. 'ಬೆಂಗಳೂರಿನಿಂದ ಒಂದು ಚಂದದ ಟ್ರಕ್ಕಿಗೆ ಹತ್ತಿದ ಕುದುರೆ, ಒಂದು ಸಂಜೆ ಮಠದ ಮುಂದೆ ನಿಂತಾಗ, ನೆರೆದ ಸಮುದಾಯ ಸಾಕ್ಷಾತ್ ಶ್ರೀ ರಾಮಚಂದ್ರನೇ ಅಯೋಧ್ಯೆಗೆ ಬಂದಂತೆ ಸಡಗರದಲ್ಲಿ ಎದ್ದು ನಿಂತಿತು.' (ಪುಟ–೨೦೩)

ಅಶ್ವಮೇಧವನ್ನು ಸುಸೂತ್ರವಾಗಿ ನಡೆಸಲು ಹಲವಾರು ಮಂಡಳಿಗಳನ್ನು ರಚಿಸುತ್ತಾರೆ. ದೇವಸ್ಥಾನವನ್ನು ಸುಣ್ಣ ಬಣ್ಣಗಳಿಂದ ಸಿಂಗಾರಗೊಳಿಸಲಾಗುತ್ತದೆ. ಸ್ವಾಮಿಗಳ ಮೆರವಣಿಗೆಗೆಂದು ಹೊಸದೊಂದು ರಥವನ್ನೂ ಕೆತ್ತಿಸುವ ಕೆಲಸವೂ ಪ್ರಾರಂಭಗೊಳ್ಳುತ್ತದೆ. ಅಶ್ವಮೇಧದಂತಹ ದೊಡ್ಡ ಯಾಗವೊಂದು ನಿರ್ವಿಘ್ನವಾಗಿ ನಡೆಯಲು ಬೇಕಾದ ಏರ್ಪಾಟುಗಳು ನಡೆಯುತ್ತವೆ. ಶಂಭು ಹೆಗಡೆ ಮತ್ತಿತರರು ಪ್ರತಿ ಊರಿನ ಮುಖಂಡರೊಡನೆಯೂ ಮಾತಾಡಿ, ಕುದುರೆ ಹಾದು ಬರುವ ಹಾದಿಯನ್ನು ಮೊದಲೇ ನಿರ್ಧರಿಸಿಕೊಳ್ಳುತ್ತಾರೆ. ಈಡಿಗರೊಡನೆಯೂ ಚರ್ಚಿಸಿ ಒಂದು ಒಪ್ಪಂದಕ್ಕೆ ಬರಲಾಗುತ್ತದೆ. ಶಂಭು ಹೆಗಡೆಯವರು ರಾಮಾನಾಯ್ಕನನ್ನು ಕಂಡು ಅಶ್ವಮೇಧಕ್ಕೆ ಅವನ ಸಹಕಾರ ಕೋರುತ್ತಾರೆ. ಆದರೆ ರಾಮಾನಾಯ್ಕ ಅಶ್ವಮೇಧಕ್ಕೆ ತನ್ನ ಒಪ್ಪಿಗೆಯನ್ನಾಗಲೀ, ವಿರೋಧವನ್ನಾಗಲೀ ಸೂಚಿಸುವುದಿಲ್ಲ. ಅವನ ಮೌನ ಮಾತ್ರ ಒಡೆಯದ ಒಗಟಿನಂತೆ ನಿಗೂಢವಾಗಿರುತ್ತದೆ. ಇತ್ತ ಅಶ್ವಮೇಧದ ತಯಾರಿ ನಡೆಯುತ್ತಿದ್ದರೆ, ಅತ್ತ ಹಂತಕರಿಗೆ ಹಣ ಕೊಟ್ಟು ರಾಜೀವ ಗಾಯತೊಂಡೆಯನ್ನು ಕೊಲ್ಲಿಸಲು ಸಂಚು ಹೂಡಲಾಗಿರುತ್ತದೆ.

ಊರೆಲ್ಲ ಉತ್ಸಾಹದಿಂದ ಕಾಯುತ್ತಿದ್ದ ಅಶ್ವಮೇಧದ ದಿನವೂ ಬರುತ್ತದೆ. ಯಜ್ಞಾಶ್ವ ಸುತ್ತಮುತ್ತಲಿನ ಊರುಗಳನ್ನು ಸುತ್ತಿಕೊಂಡು ವಲ್ಲಿಗದ್ದೆಯನ್ನು ತಲುಪುವ ದಿನ ಹತ್ತಿರವಾಗುತ್ತದೆ. ಯಾವ ಊರಿನಲ್ಲಾದರೂ ತೊಂದರೆಯುಂಟಾಗುವ ಸಾಧ್ಯತೆ ಎದುರಾದರೆ, ಆ ಊರನ್ನು ಬಿಟ್ಟು ಉಳಿದ ದಾರಿಯಲ್ಲಿ ಮುಂದುವರೆಯಲು ಸ್ವಾಮಿಗಳು ಮೊದಲೇ ಸೂಚನೆ ಕೊಟ್ಟಿರುತ್ತಾರೆ. 'ಯಾರು ಬೇಕಾದರೂ ಕಟ್ಟಿಸಬಹುದು'- ಎಂಬ ಹಣೆಪಟ್ಟಿಯನ್ನು ಹೊತ್ತ ಕುದುರೆ ನಿಗದಿಪಡಿಸಿದ ಪಥದಲ್ಲಿ ಹಾದು ವಲ್ಲಿಗದ್ದೆಯನ್ನು ತಲುಪುವ ಸಮಯ ಸನ್ನಿಹಿತವಾಗುತ್ತದೆ. ಆದರೆ ರಾಮಾನಾಯ್ಕ ಈ ಯಾಗವನ್ನು ತಡೆಯುವ ಮೂಲಕ ತನ್ನ ಜನಾಂಗದ ಆಶೋತ್ತರಗಳಿಗೆ ಮೂರ್ತ ರೂಪವಾಗಲು ನಿರ್ಧರಿಸುವುದು ಕಾದಂಬರಿಯಲ್ಲಿ ಬರುವ ಅನಿರೀಕ್ಷಿತ ತಿರುವು. 'ಯಾರು ಬೇಕಾದರೂ ಕಟ್ಟಿಸಬಹುದು' ಎಂದು ಸಂಸ್ಕೃತದಲ್ಲೂ ಕನ್ನಡದಲ್ಲೂ ಹಣೆಪಟ್ಟಿ ಬರೆಸಿಕೊಂಡ ಈ ಕುದುರೆಯನ್ನು, ಈ ಭಾಗದ ಒಬ್ಬನೇ ಒಬ್ಬ ನೀರಿದ್ದ ಗಂಡಸು ತಡೆಯಲಿಲ್ಲವಲ್ಲ ಎಂದು ಯಾರಾದರೂ ಮುಂದೊಂದು ದಿನ ಹೇಳಿದರೆ ಅದು ತನ್ನ ಗಂಡಸ್ತನವನ್ನು ಪ್ರಶ್ನಿಸಿದಂತಾಗಬಹುದು' (ಪುಟ-೨೦೭) ಎಂದು ರಾಮಾನಾಯ್ಕ ಯೋಚಿಸುವುದು ಕಾದಂಬರಿಗೊಂದು ಕ್ರಾಂತಿಕಾರಕ ಅಂತ್ಯವನ್ನು ಒದಗಿಸಲು ನೆರವಾಗುತ್ತದೆ. 'ಕುದುರೆ ಊರು ಕೇರಿ ದಾಟುವಾಗ, ತನಗಿಂತ ಮೊದಲೆ ಬೇರೆ ಯಾರಾದರೂ ಕಟ್ಟಿಬಿಟ್ಟರೆ' ಎನ್ನುವ ತಳಮಳದಲ್ಲಿ ರಾತ್ರಿಯನ್ನು ನಿದ್ದೆ ಇಲ್ಲದೆ ಕಳೆಯುವ ರಾಮಾನಾಯ್ಕನ ವರ್ತನೆ, ಬ್ರಾಹ್ಮಣರ ದಬ್ಬಾಳಿಕೆಯ ವಿರುದ್ಧ ತನ್ನ ಜನಾಂಗವನ್ನು ಜಾಗೃತಗೊಳಿಸುವ ಸಂಕೇತವಾಗಿಯೂ ಗೋಚರಿಸುತ್ತದೆ.

ಅಶ್ವಮೇಧದ ಕುದುರೆ ಊರೂರುಗಳನ್ನು ದಾಟಿಕೊಂಡು ಬೆಳಗಿನ ಜಾವ ವಲ್ಲಿಗದ್ದೆಯನ್ನು ಪ್ರವೇಶಿಸುತ್ತದೆ. ಶಂಭು ಹೆಗಡೆಯವರು ಎದುರಿಗೆ ಬರುತ್ತಿರುವ ರಾಮಾನಾಯ್ಕ ಮತ್ತು ಅವನ ಸಂಗಡಿಗರನ್ನು ಕಂಡು, ಅವರು ಕುದುರೆಯನ್ನು ಸ್ವಾಗತಿಸಲು ಬಂದವರೆಂದು ಭಾವಿಸುತ್ತಾರೆ. ರಾಮಾನಾಯ್ಕನ ಜೊತೆ ಬಂದವರೆಲ್ಲಾ ಒಂದಲ್ಲಾ ಒಂದು ಸಮಯದಲ್ಲಿ ಬ್ರಾಹ್ಮಣರ ಶೋಷಣೆಗೆ ಗುರಿಯಾದವರೇ. ಕಾಲ ತನ್ನ ಒಂದು ಸುತ್ತನ್ನು ಮುಗಿಸಿ ಈಗ ಶೋಷಿತರಿಗೆ ತಮಗಾದ ಅಪಮಾನಕ್ಕೆ ಪ್ರತೀಕಾರ ತೆಗೆದುಕೊಳ್ಳಲು ಅವಕಾಶವಿತ್ತಿರುವ ಅಪೂರ್ವ ಘಳಿಗೆಯದು! ರಾಮಾನಾಯ್ಕ ತನ್ನ ತಣ್ಣನೆಯ, ಆತ್ಮವಿಶ್ವಾಸ ತುಂಬಿದ ದನಿಯಿಂದ ಆವರೆಗೆ ತನ್ನ ತಲೆಮಾರಿನ ಕಣ್ಣೀರಿಗೆ ಕಾರಣವಾದವರಿಗೆ ದಿಟ್ಟ ಉತ್ತರ ನೀಡುತ್ತಾನೆ- 'ಹೆಗಡೆರೆ, ಕುದುರೆಗೆ ಪೂಜೆ ಮಾಡಿ ಕಪ್ಪ ಕಾಣಿಕೆ ಕೊಡಲು ನಾವು ಬಂದಿಲ್ಲ. ಕುದುರೆ ಕಟ್ಟಿ ಹಾಕಲು ಬಂದಿದ್ದೇವೆ.' ರಾಮಾನಾಯ್ಕನ ಮಾತುಗಳು ಕಾದಂಬರಿಯ ಕೊನೆಯ ಸಾಲುಗಳೂ ಆಗುವುದು ಅತ್ಯಂತ ಸಮರ್ಪಕ ಅಂತ್ಯವೆನ್ನಿಸುತ್ತದೆ.

**ಕಥೆಯು ಮುಗಿದೇ ಹೋದರೂ:**

ಅಶ್ವಮೇಧದ ಕಥಾವಸ್ತು ಜಾತಿಗಳ ನಡುವಿನ ಸಂಘರ್ಷ. ಇಲ್ಲಿ ಕೆಳವರ್ಗದ ಶೋಷಣೆಗೆ ಕಾರಣವಾಗಿರುವುದು ಬ್ರಾಹ್ಮಣ ವರ್ಗ. ಬ್ರಾಹ್ಮಣರು–ಜಾತಿ ಪದ್ಧತಿ, ಅಸ್ಪೃಶ್ಯತೆಗಳು ಆಚರಣೆಗೆ ಬರಲು ಮೂಲಕಾರಣರೆನ್ನುವ ಆರೋಪಗಳು ಹೊಸದಲ್ಲ. ಆದರೆ ಬ್ರಾಹ್ಮಣರು ಆರ್ಥಿಕ, ರಾಜಕೀಯವಾಗಿ ಪ್ರಬಲರಾಗಿದ್ದು, ಕೆಳವರ್ಗವನ್ನು ತುಳಿದಿರುವ ಕಥೆಗಳು ವಿರಳವೆಂದೇ ಹೇಳಬೇಕು. ಹಾಗಾಗಿ ಅಶ್ವಮೇಧ ತನ್ನ ವಿಭಿನ್ನ ಕಥಾವಸ್ತುವಿನಿಂದಾಗಿಯೇ ವಿಶಿಷ್ಟವೆನ್ನಿಸುತ್ತದೆ. ನಿರೂಪಣೆಯು ಸರಳವಾಗಿದ್ದು ಸುಲಭವಾಗಿ ಓದಿಸಿಕೊಂಡು ಹೋಗುವಂತಿದೆ. ಇಲ್ಲಿ ಯಾವೊಂದೂ ಮುಖ್ಯ ಪಾತ್ರಗಳಿಲ್ಲದೆ, ಪ್ರತಿ ಪಾತ್ರಕ್ಕೂ ಸೂಕ್ತ ಪೋಷಣೆ ದೊರೆತಿದೆ. ನಿರೂಪಣೆಯಲ್ಲಿ ಎಲ್ಲಿಯೂ ಲೇಖಕ ಮಧ್ಯೆ ಪ್ರವೇಶಿಸದೆ, ಘಟನೆಗಳಿಗೆ ಸಮರ್ಥನೆ, ಅನುಮೋದನೆ ಒದಗಿಸಲು ಪ್ರಯತ್ನಿಸದೆ, ನಿರ್ಲಿಪ್ತವಾಗಿ ಕಥೆ ಹೇಳುವ ರೀತಿ ಇಷ್ಟವಾಗುತ್ತದೆ. ಶೈಲಿ ವಸ್ತುನಿಷ್ಠವಾಗಿದ್ದು, ಕಥೆ ನಡೆಯುವ ಕಾಲಕ್ಕೂ, ಲೇಖಕ ಬರೆಯುತ್ತಿರುವ ಈ ಕಾಲಕ್ಕೂ ನಡುವೆ ಸಮನ್ವಯ ಸಾಧಿಸಲು ಲೇಖಕರು ಪ್ರಯತ್ನಿಸಿದಂತಿದೆ.

ಆದರೆ, ಈ ಕಥೆ ಇಂದಿನ ಕಾಲಕ್ಕೆ ಎಷ್ಟರಮಟ್ಟಿಗೆ ಪ್ರಸ್ತುತ? ಭೂಸುಧಾರಣಾ ಕಾಯಿದೆ ಜಾರಿಗೆ ಬಂದ ನಂತರ ಸಮಾಜದಲ್ಲಿದ್ದ ಆಳು–ಅರಸರ ನಡುವಿನ ಅಂತರ ಮಾಯವಾಗುತ್ತಾ ನಡೆದಿದೆ. ಸಮಾಜದ ಕೆಳಸ್ತರಗಳ ಜನರು ಕೂಡ ವಿದ್ಯಾಭ್ಯಾಸ, ಉದ್ಯೋಗದಲ್ಲಿ ಮೇಲ್ವರ್ಗದವರೊಂದಿಗೆ ಸರಿಸಮನಾಗಿ ಮುನ್ನಡೆದಿದ್ದಾರೆ. ಹೀಗಿರುವಾಗ, ಇಪ್ಪತ್ತೊಂದನೆಯ ಶತಮಾನದ ಹೊಸ್ತಿಲಲ್ಲಿ ನಿಂತು, ಇನ್ನೂ ಹರಿಜನರು ಹೆಗಡೆರ ಮನೆಯ ಕೂಲಿ ಕೆಲಸಗಳನ್ನು ಮಾಡಿಕೊಂಡು, ಅವರಿಂದ ಬೈಗಳು, ಹೊಡೆತ ತಿನ್ನುವ ವಿವರಗಳನ್ನು ಓದಿದಾಗ– ಅದು ಕಥೆಯೇ ಆಗಿದ್ದರೂ– ನನಗೆ ಕಿರಿಕಿರಿ ಎನ್ನಿಸಿತು. ಈಗಲೂ ನಾಗರಿಕತೆಯಿಂದ ದೂರ ಉಳಿದ, ಯಾವುದೋ ಕಗ್ಗಾಡಿನ ಮೂಲೆಯಲ್ಲಿರುವ ಹಳ್ಳಿಗಳಲ್ಲಿ ಇದೇ ಪರಿಸ್ಥಿತಿ ಇದ್ದಿರಬಹುದಾದರೂ, ಈ ಕಥೆ ವರ್ತಮಾನವನ್ನು ಎಷ್ಟರಮಟ್ಟಿಗೆ ಪ್ರತಿನಿಧಿಸೀತು ಎಂಬ ಪ್ರಶ್ನೆಯೂ ನನ್ನಲ್ಲೆದ್ದಿತು. ಲೇಖಕರು ತಮ್ಮ ಕಾದಂಬರಿಗೆ ನಿಗದಿತ ಕಾಲಮಾನದ ಚೌಕಟ್ಟು ಹಾಕಿಕೊಂಡಿದ್ದಿದ್ದರೆ ಒಳ್ಳೆಯದಿತ್ತೇನೊ. ಕಾದಂಬರಿಯ ಶೀರ್ಷಿಕೆಯಾದ 'ಅಶ್ವಮೇಧ'ದ ಬಗ್ಗೆಯೂ ಒಂದು ಮಾತು: ಪುರಾಣಗಳಲ್ಲಿ ಬರುವ 'ಅಶ್ವಮೇಧ' ಯಾಗಗಳನ್ನು ನಡೆಸಿರುವವರೆಲ್ಲ ಕ್ಷತ್ರಿಯರು. ಬ್ರಾಹ್ಮಣರು ಅಶ್ವಮೇಧದ ಪೌರೋಹಿತ್ಯ ವಹಿಸಿದ್ದರೂ, ಅವರೇ ಹಾಗೊಂದು ಯಾಗ ನಡೆಸಿದ ಬಗ್ಗೆ ತಿಳಿದಿಲ್ಲ. ಅದರಲ್ಲೂ, ಈ ಕಾಲದಲ್ಲಿ ಸ್ವಾಮಿಗಳ ನೇತೃತ್ವದಲ್ಲಿ ಅಶ್ವಮೇಧ ಯಾಗ ನಡೆಸುವುದಂತೂ ಕಲ್ಪನೆಯಲ್ಲಿ ಮಾತ್ರ ಸಾಧ್ಯ. ಕಥೆಗೆ ರೋಚಕವಾದ ತಿರುವು ಒದಗಿಸಲು, ಸಿನಿಮೀಯ ಅಂತ್ಯ ಕಲ್ಪಿಸಲು

ಲೇಖಕರು ಅಶ್ವಮೇಧ ಯಾಗವನ್ನು ಇಲ್ಲಿ ತಂದಿರಬಹುದೇ? ಎಂದೂ ಒಮ್ಮೆ ಅನ್ನಿಸಿಬಿಟ್ಟಿತು.

'ಅಶ್ವಮೇಧ' ಕಾದಂಬರಿಯ ವಸ್ತು ಗಂಭೀರವಾಗಿದ್ದರೂ ಅಲ್ಲಲ್ಲಿ ಹಾಸ್ಯರಸ ಕಂಡೂಕಾಣದಂತೆ ಜಿನುಗಿದೆ. ನಕಲಿ ಡಾಲರ್ ನೋಟುಗಳನ್ನು ಇಟ್ಟುಕೊಂಡು, ಎರಡೆಕರೆ ತೋಟವನ್ನು ಕೊಳ್ಳುವ ಕನಸು ಕಾಣುವ ಖಾಸಿಂ ಸಾಬಿ, ಜಾತ್ರೆಗೆ ಬಂದ ತಮಾಷಾ ಹೆಂಗಸಿನ ಸಂಗದಿಂದಾಗಿ ಗುಪ್ತ ರೋಗ ಹಚ್ಚಿಕೊಂಡು ಯಾರಿಗೂ ಹೇಳಿಕೊಳ್ಳಲಾಗದೆ ಸಂಕಟಪಡುವ ಶಂಭು ಹೆಗಡೆಯ ಪಾತ್ರಗಳನ್ನು ಚಿತ್ರಿಸುವಲ್ಲಿ ನವಿರಾದ ವಿನೋದವಿದೆ. 'ತೆಗೆಯಣ್ಣೊ ನಿಜದ ಡಾಲರ್‌ಗೆ ಬೆಲೆ ಬಿದ್ದು ಹೋಗ್ತಾ ಇದೆ, ಇನ್ನು ಡುಪ್ಲಿಕೇಟಿಗೆ ಬೆಲೆ ಎಲ್ಲಿಂದ ಬರಬೇಕು ಹೇಳು?' (ಪುಟ-೧೩೭) ಎಂದು ಅನ್ನಿಸಿಕೊಂಡು ಎಲ್ಲರ ನಗೆಗೀಡಾಗುವ ಖಾಸಿಂ ಸಾಬಿ, 'ಈ ಡುಪ್ಲಿಕೆಟ್ ಆದರೂ ಅಮೆರಿಕೆಯ ಡಾಲರ್‌ನ ಡುಪ್ಲಿಕೆಟ್ ಅಲ್ಲವಾ, ಈ ಡುಪ್ಲಿಕೆಟಿಗಾದರೂ ಒಂದು ಬೆಲೆ ಇರಬೇಕಲ್ಲ, ಅದನ್ನಾದರೂ ಹೇಳು ಮಾರಾಯ' ಎಂದು ಅಂಗಲಾಚುವ ಮೂಲಕ ಓದುಗರ ಅನುಕಂಪವನ್ನೂ ಗಿಟ್ಟಿಸಿಕೊಳ್ಳುತ್ತಾನೆ. ವಲ್ಲಿಗದ್ದೆಯ ಕೊಳೆತು ನಾರುವ ಜಾತೀಯತೆ, ಮಠದ ರಾಜಕೀಯ ಮುಂತಾದ ರಸಕಸಿಗಳ ಜೊತೆಗೆ, ಶ್ರೀಧರ-ಕುಸುಮಾರ ನವಿರು ಪ್ರೇಮಕ್ಕೂ ಒಂದಿಷ್ಟು ಜಾಗ ದೊರಕಿರುವುದು ಕಾದಂಬರಿಯನ್ನು ಹಸಿಯಾಗಿರಿಸಿದೆ.

ಕಾದಂಬರಿಯಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರ ಬಗೆಗೆ ವಲ್ಲಿಗದ್ದೆಯ ಹರಿಜನರು ಹಾಡಿಕೊಳ್ಳುವ ಕೋಲಾಟದ ಪದವೊಂದರ ಪ್ರಸ್ತಾಪವಿದೆ. ಕಾಲೇಜು ವಿದ್ಯಾರ್ಥಿ ಶ್ರೀಧರ ತಮಾಷೆಗೆಂದು ಹಾಡುವ ಈ ಕೋಲಾಟದ ಪದ ಆಸಕ್ತಿ ಮೂಡಿಸುವಂತಿದೆ:

'ಮೋಕ್ಷಗುಂಡಂ ವಿಶ್ವೇಶ್ವರಯ್ಯ ಕಡುಬು ಮಾಡಿದ್ರಂತೆ
ಯಾರಿಗೂ ಕಾಣಬಾರದಂತ ಕತ್ಲಲ್ಲಿ ತಿಂದಿದ್ದರಂತೆ
ಹರಿವ ನದಿಯ ನೋಡಿ ಅವರು ಹೊಟ್ಟೆ ಉರಿಸಿಕೊಂಡರಂತೆ
ನದಿಯ ಹಿಡಿದು ಡ್ಯಾಮು ಕಟ್ಟಿ ಊರು ಮುಳುಗಿಸಿದ್ರಂತೆ' (ಪುಟ-೬೦)

ಅಣೆಕಟ್ಟುಗಳನ್ನು ಕಟ್ಟುವಾಗ, ಅದರ ಸುತ್ತಮುತ್ತಲಿನ ಅನೇಕ ಗ್ರಾಮಗಳು ಮುಳುಗಡೆಯಾಗಿರುವ ವಿಷಯ ಎಲ್ಲರಿಗೂ ಗೊತ್ತಿರುವಂಥದ್ದು. ಅಣೆಕಟ್ಟುಗಳಿಂದ ಪ್ರಯೋಜನ ಪಡೆದ ಉಳಿದೆಲ್ಲರ ಪಾಲಿಗೆ ವಿಶ್ವೇಶ್ವರಯ್ಯ ನವ ಭಾರತ ಶಿಲ್ಪಿ ಎನ್ನಿಸಿದರೆ, ನಿಂತ ನೆಲೆಯನ್ನೇ ಕಳೆದುಕೊಂಡು ದಿಕ್ಕೆಟ್ಟುಹೋದ ಆ ಪ್ರದೇಶದ ಜನರಲ್ಲಿ ವಿಶ್ವೇಶ್ವರಯ್ಯನವರ ಬಗೆಗಿರುವ ಅಸಮಾಧಾನ ಸೂಚ್ಯವಾಗಿ ಕಥೆಯೊಳಗೆ ಸೇರಿಕೊಂಡಿದೆ.

ಒಟ್ಟಿನಲ್ಲಿ ಹೇಳುವುದಾದರೆ, ಈ ಕಾದಂಬರಿಯ ಓದು ಉತ್ತಮ ಅನುಭವ ನೀಡಿತು. ಮುನ್ನುಡಿಯಲ್ಲಿನ ಜಿ. ಎಸ್. ಆಮೂರರ ಮಾತುಗಳಲ್ಲೇ ಹೇಳುವುದಾದರೆ– 'ಕಾದಂಬರಿಯ ತಂತ್ರದಲ್ಲಿ ಅಶೋಕರು ಹೊಸ ಪ್ರಯೋಗಗಳನ್ನೇನೂ ಮಾಡುವುದಿಲ್ಲ. ಆದರೆ ಅದರ ಆದ್ಯತೆಗಳ ಅರಿವು ಅವರಲ್ಲಿ ಗಟ್ಟಿಯಾಗಿದೆ. ಕಾದಂಬರಿಯ ಯಶಸ್ಸು ಅದು ತನ್ನದೆ ಆದ ವಿಶ್ವಸನೀಯ ಜಗತ್ತನ್ನು ಸೃಷ್ಟಿಸುವುದನ್ನು ಅವಲಂಬಿಸಿರುತ್ತದೆ. ಈ ಕಾಯಕದಲ್ಲಿ ಅವರು ಸಂಪೂರ್ಣ ಯಶಸ್ವಿಯಾಗಿದ್ದಾರೆ. ಕಾದಂಬರಿಯ ಮಾಧ್ಯಮ ಅವರ ಪ್ರತಿಭೆ ಹಾಗೂ ಉದ್ದೇಶಗಳಿಗೆ ಸಂಪೂರ್ಣವಾಗಿ ಒಗ್ಗಿದೆ. ಹೀಗಾಗಿ ಅವರಿಂದ ಇದಕ್ಕೂ ಪರಿಣತಿಯ ಕೃತಿಗಳನ್ನು ಅಪೇಕ್ಷಿಸಬಹುದಾಗಿದೆ... ...ದೊಡ್ಡ ಸಂಸ್ಥೆಯಲ್ಲಿ ಮಹತ್ವದ ಸ್ಥಾನದಲ್ಲಿದ್ದುಕೊಂಡು ಅಶೋಕರು ತಮ್ಮ ಅಭಿವ್ಯಕ್ತಿಗಾಗಿ ಸಾಹಿತ್ಯದತ್ತ ತಿರುಗಿದುದು ಕನ್ನಡದ ದೃಷ್ಟಿಯಿಂದ ಬಹಳ ಒಳ್ಳೆಯ ಲಕ್ಷಣ. ಅವರು ತಮ್ಮ ಸಮಕಾಲೀನ ಅನುಭವಗಳಿಗೂ ಕಾದಂಬರಿಯಲ್ಲಿ ಭಾಷೆ ಮತ್ತು ಆಕಾರಗಳನ್ನು ಕೊಡಲಿ ಎಂದು ಹಾರೈಸುತ್ತೇನೆ.' ಆಮೂರರ ಹಾರೈಕೆಯಂತೆ ಅಶೋಕ ಹೆಗಡೆಯವರ ಲೇಖನಿಯಿಂದ ಮತ್ತಷ್ಟು ಕಾದಂಬರಿಗಳು ನಮಗೆ ಓದಲು ಸಿಗಲಿ ಎಂದು ನಾನೂ ಆಶಿಸುತ್ತೇನೆ.

**ಕೃತಿ ವಿವರ:** ಅಶ್ವಮೇಧ, ಅಶೋಕ ಹೆಗಡೆ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬, ಪು. ೨೦೮

# ಸಾಹಿತ್ಯ, ಧರ್ಮ ಮತ್ತು ರಾಜಕೀಯ – ಸಮಕಾಲೀನ ಸಾಹಿತ್ಯದಲ್ಲಿ ಭೈರಪ್ಪನವರ 'ಆವರಣ'ದ ಸ್ಥಾನ

ಗುಂಡೂ ಶಂಕರ್ ಮತ್ತು ಶೈಲಜಾ ಶಂಕರ್ ;
ಫ್ರೀಹೋಲ್ಡ್, ಪೆನ್ಸಿಲ್ವೇನಿಯಾ

## ಪ್ರಸ್ತಾವನೆ

ಕಳೆದ ಎರಡು ದಶಕಗಳಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಿದ್ಯಮಾನಗಳಲ್ಲಿ ಧರ್ಮದ ಪಾತ್ರ ಗಮನೀಯವಾಗಿ ಪ್ರಬಲವಾಗಿರುವುದು ಎಲ್ಲರಿಗೂ ಗೊತ್ತಿರುವ ವಿಷಯ. ಇಸ್ಲಾಮಿಕ್ ಭಯೋತ್ಪಾದಕರಿಂದ ಭಾರತ ಅನುಭವಿಸುತ್ತಿರುವ ಹಿಂಸೆ ಎಲ್ಲರಿಗೂ ವೇದ್ಯವಾದದ್ದೇ. ಇದರಿಂದ ಭಾರತದ ಜಾತ್ಯತೀತ ನೀತಿಗೇ ದೊಡ್ಡ ವಿಪತ್ತು ಸಂಭವಿಸಿದೆ ಎಂಬ ಆತಂಕ ಮೂಡಿದೆ. ಭಾರತ ದೇಶಕ್ಕೆ ಶಾಂತಿ ಸಿಕ್ಕಬೇಕಾದರೆ ಕಾಶ್ಮೀರಕ್ಕೆ ತನ್ನ ಭವಿಷ್ಯದ ಬಗ್ಗೆ ಸ್ವತಃ ನಿರ್ಧಾರ ಮಾಡಲು ಅವಕಾಶ ಕೊಡಬೇಕು ಎಂಬುದು ಒಂದು ವಾದ. ಮುಂಬೈಯಲ್ಲಿ ಇತ್ತೀಚೆಗೆ ಸಂಭವಿಸಿದ ಘಟನೆಗಳು ವಿರುದ್ಧ ದೃಷ್ಟಿಕೋನಗಳ ನಡುವಿನ ವ್ಯತ್ಯಾಸವನ್ನು ಎತ್ತಿ ತೋರಿಸುತ್ತವೆ.

ಇದು ಭಾರತದ ವಿದ್ಯಮಾನವಾದರೆ ಸೆಪ್ಟೆಂಬರ್ ೧೧ರ ಘಟನೆಗಳು ಜಾಗತಿಕವಾಗಿ ಹಲವಾರು ಸಂಘರ್ಷಗಳನ್ನು ಹುಟ್ಟುಹಾಕಿವೆ. ಇದಕ್ಕೆ ಅಮೆರಿಕಾ ಪ್ರತಿಕ್ರಿಯಿಸಿದ ಫಲವಾಗಿ ಇರಾಕ್ ಮತ್ತು ಅಫ್ಘಾನಿಸ್ತಾನದಲ್ಲಿ ಈಗಲೂ ಎರಡು ದೊಡ್ಡ ಯುದ್ಧಗಳು ನಡೆಯುತ್ತಿವೆ. ಮುಸ್ಲಿಂ ಬಹುಮತದಿಂದ ಕೂಡಿದ ದೇಶಗಳೂ ಕೂಡ ಆಂತರಿಕ ಘರ್ಷಣೆಗಳಿಂದ (internal conflicts) ಹೊರತಾಗಿಲ್ಲ. ಪಾಕಿಸ್ತಾನ ಕೂಡ, ಈ ಆಂತರಿಕ ಘರ್ಷಣೆಗಳ ಕಾರಣದಿಂದಾಗಿ ನಡೆದ ಹಲವಾರು ಉಗ್ರ ಚಟುವಟಿಕೆಗಳಿಂದ ಬಹಳಷ್ಟು ಹಾನಿಯನ್ನು ಕಂಡಿದೆ. ಇನ್ನು ಕೆಲವು ದೇಶಗಳಲ್ಲಿ, ಈ ಘರ್ಷಣೆಗಳು ಅಷ್ಟೊಂದು ಕ್ರೂರವಾಗಿಲ್ಲದಿದ್ದರೂ ಜನರ ದೈನಿಕವನ್ನು ಕಲಕಿರುವುದಂತೂ ನಿಜ.

ಚರಿತ್ರೆಯನ್ನು ಒಮ್ಮೆ ಗಮನಿಸಿದರೆ ಬೇರೆ ಬೇರೆ ಧರ್ಮಗಳು ಬಹಳಷ್ಟು ಶತಮಾನಗಳಿಂದ ಒಂದರ ಮಗ್ಗುಲಿಗೆ ಇನ್ನೊಂದು ಇದ್ದೇ ಇವೆ. ಆದ್ದರಿಂದ ಈ ಧಾರ್ಮಿಕ ಘರ್ಷಣೆಗಳೂ ಹೊಸತೇನಲ್ಲ. ಭಾರತ ದೇಶದ ಚರಿತ್ರೆಯ ಮೇಲೆ ಕ್ರೈಸ್ತರ ಪ್ರಭಾವ ೨೦೦೦ ವರ್ಷಗಳಿಂದ ಹಾಗೂ ಮುಸಲ್ಮಾನರ ಪ್ರಭಾವ ೧೩ ಶತಮಾನಗಳಿಂದ ಇವೆ. ಇಸ್ಲಾಂ ಹುಟ್ಟಿದಾಗಿನಿಂದಲೂ ಯುರೋಪಿನ ಜೊತೆ ವ್ಯಾವಹಾರಿಕ ಸಂಬಂಧವನ್ನು ಹೊಂದೇ ಇತ್ತು. ಕಳೆದ ಶತಮಾನದ ಮಧ್ಯಕಾಲದಿಂದಲೂ ಗಮನಾರ್ಹ ಸಂಖ್ಯೆಯಲ್ಲಿ ಮಧ್ಯಪ್ರಾಚ್ಯದ ದೇಶಗಳಿಂದ ವಲಸೆಗಾರರು ಪಶ್ಚಿಮ ಯುರೋಪಿಗೆ ಹೋಗಿ ನೆಲೆಸಿದ್ದಾರೆ. ಇತ್ತೀಚೆಗೆ, ಕೇವಲ ಕಳೆದ ೨೦ ವರ್ಷಗಳಲ್ಲಿ ಕ್ರೈಸ್ತರಲ್ಲದ ದೇಶಗಳಿಂದ ಜನರು ಅಮೆರಿಕ ದೇಶಕ್ಕೆ ವಲಸೆ ಬಂದಿದ್ದಾರೆ. ಇಂದಿನ ಪ್ರಪಂಚದಲ್ಲಿ ಯಾವ ದೇಶವೂ ಅಥವಾ ಯಾವ ನಾಗರಿಕತೆಯೂ ಕೇವಲ ಒಂದೇ ಮತಕ್ಕೆ ಸೇರಿದ ಜನರಿಂದ ಕೂಡಿಲ್ಲ. ಮಧ್ಯಪ್ರಾಚ್ಯದ ದೇಶಗಳನ್ನು ಬಿಟ್ಟರೆ ನಿಜವಾಗಿ ಪ್ರಪಂಚದ ಅನೇಕ ದೇಶಗಳಲ್ಲಿ ನಾವು ಕಾಣುವುದು ಮಿಶ್ರ ಜನಾಂಗಗಳನ್ನೇ. ಭಾರತ, ಆಫ್ರಿಕದ ಬಹು ಭಾಗ, ಯೂರೋಪು ಹಾಗೂ ಇತ್ತೀಚೆಗೆ ಉತ್ತರ ಅಮೆರಿಕಾಗಳಲ್ಲಿ ಹೆಚ್ಚು ಹೆಚ್ಚಾಗಿ ಸಾಂಸ್ಕೃತಿಕ ಹಾಗೂ ಧಾರ್ಮಿಕ ವೈವಿಧ್ಯತೆ ಕಂಡುಬರುತ್ತದೆ. ಯಾವ ಆಧುನಿಕ ದೇಶವೂ ಒಂದೇ ಸಂಸ್ಕೃತಿ ಅಥವಾ ಒಂದೇ ಧರ್ಮದಿಂದ ಕೂಡಿಲ್ಲ. ಇದರ ಪರಿಣಾಮವೋ ಎಂಬಂತೆ ಬಹಳಷ್ಟು ದೇಶಗಳಲ್ಲಿ ಮುಸ್ಲಿಮರೂ ಕೂಡ ಹೆಚ್ಚು ಸಂಖ್ಯೆಯಲ್ಲಿ ನೆಲೆಸಿರುವುದನ್ನು ನಾವು ನೋಡುತ್ತೇವೆ. ಅವರ ಜನಸಂಖ್ಯೆ ಹೆಚ್ಚುತ್ತಲೂ ಇದೆ. ಪ್ರತಿಯೊಂದು ಆಧುನಿಕ ದೇಶವೂ ಇಂತಹ ವೈವಿಧ್ಯತೆಯಲ್ಲಿ ಬದುಕುವುದನ್ನು ಕಲಿಯುತ್ತಲಿದೆ. ಆದ್ದರಿಂದ ಪರಸ್ಪರ ಸಂಬಂಧಗಳಿಂದ ಕೂಡಿದಂಥ, ಇಂದಿನ ಜಗತ್ತಿನಲ್ಲಿ ಬಾಳುತ್ತಿರುವ ನಮ್ಮ ಜೀವನದಲ್ಲಿ ಈ ಧಾರ್ಮಿಕ ಘರ್ಷಣೆ ಕೂಡ ಒಂದು ಮುಖ್ಯ ಭಾಗವಾಗಿ ಹೋಗಿದೆ.

ಈ ಘರ್ಷಣೆಯ ಸಾಹಿತ್ಯಿಕ ಮತ್ತು ರಾಜಕೀಯ ಆಯಾಮಗಳನ್ನು ಪರೀಕ್ಷಿಸುವುದಕ್ಕೆ ನಾನು ಈ ಪ್ರಬಂಧದಲ್ಲಿ ಪ್ರಯತ್ನಿಸಿದ್ದೇನೆ.

ಒಬ್ಬ ಸಾಹಿತಿ ಚರಿತ್ರೆಯನ್ನು ಹೇಗೆ ಚಿತ್ರಿಸುತ್ತಾನೆ? ತಾನು ಜೀವಿಸಿರದೇ ಇದ್ದ ಕಾಲದ ಘಟನೆಗಳನ್ನು ತನಗೆ ದೊರೆತ ಮಾಹಿತಿಗಳಿಂದ ಮಾತ್ರ ಅರಿತು ಅಂದಿನ ಜನಮಾನಸದ ಮೇಲೆ ಆದ ಪರಿಣಾಮಗಳನ್ನು ವಸ್ತುನಿಷ್ಠವಾಗಿ ಅಕ್ಷರಗಳಲ್ಲಿ ಹಿಡಿದಿಡಬಲ್ಲನೆ? ಹೀಗೆ ಚರಿತ್ರೆಯನ್ನು ಮತ್ತೆ ಕೆದಕುವುದರಿಂದ ಸಮಕಾಲೀನ ಜಗತ್ತಿನ ಮೇಲೆ ಆಗುವ ಪರಿಣಾಮಗಳು ಏನು?

ಭಿನ್ನ ಭೌಗೋಳಿಕ ಹಿನ್ನೆಲೆಯಿರುವ ತತ್ಸಂಬಂಧವಾಗಿ ಭಿನ್ನ ಭಾಷೆಯಲ್ಲಿ ಬರೆದಿರುವ ಎರಡು ಪುಸ್ತಕಗಳನ್ನು ನಾನು ಈ ಪ್ರಬಂಧದ ಸಲುವಾಗಿ ಆರಿಸಿಕೊಂಡಿದ್ದೇನೆ. ನಾನು ಆರಿಸಿರುವ ಪುಸ್ತಕಗಳಲ್ಲಿ ಎಸ್. ಎಲ್. ಭೈರಪ್ಪನವರ 'ಆವರಣ' ಒಂದು; ಈ

ಕಾದಂಬರಿ ಒಂದು ಹಿಂದೂವಿನ ಇಸ್ಲಾಂ ಅನುಭವವನ್ನು ವಿವೇಚಿಸುತ್ತದೆ. ಈ ಪುಸ್ತಕ ಬಹಳಷ್ಟು ಚರ್ಚೆಯನ್ನೂ, ವಾದ ವಿವಾದಗಳನ್ನೂ ಉಂಟುಮಾಡಿದೆ. ಭಾರತ ಮುಸ್ಲಿಂ ಭಯೋತ್ಪಾದಕತೆಯನ್ನು ಹೆಚ್ಚು ಹೆಚ್ಚಾಗಿ ಎದುರಿಸಬೇಕಾಗಿ ಬಂದಿರುವ ವಿಷಮ ಸ್ಥಿತಿಯಲ್ಲಿ ಈ ಕಾದಂಬರಿ ಹೊರಬಂದಿದೆ. ಕೆಲವು ಅತಿ ಮುಖ್ಯವಾದ ಪ್ರಶ್ನೆಗಳನ್ನು ನಮ್ಮ ಮುಂದಿಡುವ ಈ ಪುಸ್ತಕ ನಾನಾ ಕಾರಣಗಳಿಗಾಗಿ ಗಮನಾರ್ಹವಾದದ್ದು. ದೇಶವಿಭಜನೆಯ ರಕ್ತಸಿಕ್ತ ದಿನಗಳಿಂದಲೂ, ಭಾರತ ದೇಶದಲ್ಲಿ ಬಹು ಜನರು ನಿಜವಾದ ಸಮಾನತೆಯಿಂದ ಬದುಕುತ್ತಿರುವುದನ್ನು ನಾವು ಕಂಡಿದ್ದೇವೆ. ಈ ಧರ್ಮಸಹಿಷ್ಣುತೆ ಇಂದು ತೀವ್ರ ಒತ್ತಡಕ್ಕೆ ಒಳಗಾಗಿದೆ.

ಎರಡನೆಯ ಪುಸ್ತಕ ಟರ್ಕಿಯ ಆರ್ಹನ್ ಪಮುಕ್ ಅವರ `My Name is Red' ಎನ್ನುವ ಕಾದಂಬರಿ. ಹೆಚ್ಚಾಗಿ ಮುಸ್ಲಿಮರಿಂದ ಕೂಡಿದ ಟರ್ಕಿ ಇಂದಿಗೂ ಇಸ್ಲಾಂ ಸಾಂಪ್ರದಾಯಿಕತೆ ಮತ್ತು ಪಾಶ್ಚಾತ್ಯ ಆಧುನೀಕತೆಯ ನಡುವಿನ ಚಾರಿತ್ರಿಕ ಘರ್ಷಣೆಯನ್ನು ಎದುರಿಸುತ್ತಲೇ ಇದೆ. ಪಶ್ಚಿಮದಲ್ಲಿ ಅಷ್ಟೇನೂ ಜನಪ್ರಿಯನಲ್ಲದ ಪಮುಕ್ ಈಗ ನೊಬೆಲ್ ಪ್ರಶಸ್ತಿಯನ್ನು ಪಡೆದುಕೊಂಡು ತನ್ನತ್ತ ಎಲ್ಲರ ದೃಷ್ಟಿಯೂ ಹೊರಳುವಂತೆ ಮಾಡಿದ್ದಾನೆ. ಟರ್ಕಿ ದೇಶದ ಜಾತ್ಯತೀಯತೆಗೂ ಮತ್ತು ಇಸ್ಲಾಂ ಮತೀಯ ಬದ್ಧತೆಗೂ ನಡುವಿನ ಆಂತರಿಕ ಘರ್ಷಣೆಗಳನ್ನು ಈ ಕಾದಂಬರಿ ಪ್ರತಿಬಿಂಬಿಸುತ್ತದೆ. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಇಸ್ಲಾಂ ಮತದ ಆಂತರಿಕ ಘರ್ಷಣೆಗಳ ಚಿತ್ರಣವನ್ನು ಈ ಕಾದಂಬರಿ ನೀಡುತ್ತದೆ.

ನನಗೆ ವಿಶಿಷ್ಟವೆನಿಸಿದ್ದು ಈ ಎರಡೂ ಕಾದಂಬರಿಗಳ ಭಿನ್ನ ದೃಷ್ಟಿಕೋನ; ಒಂದು, ಇಸ್ಲಾಂ ತನ್ನನ್ನು ತಾನೇ ಕಾಣುವ ರೀತಿ, ಮತ್ತೊಂದು ಹಿಂದು ಧರ್ಮ ಇಸ್ಲಾಂ ಧರ್ಮವನ್ನು ನೋಡುವ, ಅನುಭವಿಸುವ ರೀತಿ. ಎರಡು ಪುಸ್ತಕಗಳಲ್ಲೂ ಎದ್ದು ಕಾಣುವ ಹಲವಾರು ಸಮಾನ ಅಂಶಗಳಿವೆ. ಸಾಹಿತ್ಯಿಕ ಸೃಜನಶಕ್ತಿ ಮತ್ತು ಜಾಗತಿಕ ಇತಿಹಾಸದ ಅರಿವು ಈ ಇಬ್ಬರು ಲೇಖಕರ ಆಲೋಚನಾಧಾರೆಯನ್ನು ರೂಪಿಸಿರುವುದನ್ನು ಸ್ಪಷ್ಟವಾಗಿ ಕಾಣಬಹುದು.

ಯಾವ ಬರಹಗಾರನೂ ತನ್ನದೇ ಆದ ನೈಜ ಪ್ರಪಂಚದ ಹೊರಗೆ ಬದುಕಲಾರ. ಅವನು ತಾನು ಜೀವಿಸುತ್ತಲಿರುವ ಪ್ರಪಂಚವನ್ನು ತನ್ನ ಬರವಣಿಗೆಯಲ್ಲಿ ಪ್ರತಿಬಿಂಬಿಸುತ್ತಾನೆ. ಆ ಪ್ರಪಂಚದ ಒತ್ತಡಗಳು, ಘರ್ಷಣೆಗಳು ಮತ್ತು ಮುಖ್ಯ ಸಮಸ್ಯೆಗಳು ಅವನ ಕಾಣ್ಕೆಯಲ್ಲಿ ಕಾಣುತ್ತವೆ. ಕಲೆ ಬದುಕನ್ನು ಅನುಕರಿಸಿದಂತೆ – art imitates life.

ಈ ವಿದ್ಯಮಾನಗಳ ರಾಜಕೀಯ ಆಯಾಮಗಳನ್ನು ನಾವು ಸಂಕ್ಷಿಪ್ತವಾಗಿ ಗಮನಿಸುವುದು ಮುಖ್ಯವೆಂದು ನಾನು ಭಾವಿಸಿದ್ದೇನೆ. ಶೀತಲಯುದ್ಧದ ನಂತರದ

ಕಾಲದಲ್ಲಿ ಧಾರ್ಮಿಕ ಘರ್ಷಣೆ ಹೇಗೆ ಹುಟ್ಟಿ ಬೆಳೆಯಿತೆಂಬ ವಿಚಾರದಲ್ಲಿ ರಾಜಶಾಸ್ತ್ರಜ್ಞರು ಹಲವಾರು ಸಿದ್ಧಾಂತಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಇವನ್ನು ಅರ್ಥೈಸಿಕೊಳ್ಳುವುದು ಬಹು ಮುಖ್ಯ. ಏಕೆಂದರೆ ಪ್ರಪಂಚದ ಅನೇಕ ನಾಯಕರ ಹಲವಾರು ಕಾರ್ಯತಂತ್ರಗಳು ಈ ಸಿದ್ಧಾಂತಗಳಿಂದ ಪ್ರೇರಿತವಾಗಿವೆ. ಇವನ್ನು ಇದಮಿತ್ಥಂ ಎಂದು ಹೇಳಲು ಸಾಧ್ಯವಿಲ್ಲದೇ ಇರುವುದರಿಂದ ಈ ಸಿದ್ಧಾಂತಗಳ ಬಗ್ಗೆ ಬಿರುಸಿನ ಚರ್ಚೆಗಳೂ ನಡೆದಿವೆ. ಸಂತೋಷಕರ ವಿಚಾರವೆಂದರೆ, ಈ ಚರ್ಚೆ ಪಶ್ಚಿಮದ್ದಲ್ಲದ ಅನೇಕ ಉತ್ತಮ ವ್ಯಾಖ್ಯೆಗಳನ್ನು ಕಂಡುಕೊಳ್ಳುವುದರಲ್ಲಿ ಸಫಲವಾಗಿದೆ ಕೂಡ.

**ಭಾಗ ೧ – ಸಾಹಿತ್ಯ ಮತ್ತು ಧರ್ಮ**

ಮೊದಲು 'ಆವರಣ' ಭೈರಪ್ಪನವರ ಪುಸ್ತಕವನ್ನು ಗಮನಿಸೋಣ. ಈ ಪುಸ್ತಕ ಬರೆದಿದ್ದು ೨೦೦೭ರಲ್ಲಿ. ಭೈರಪ್ಪನವರು ಕನ್ನಡದ ಪ್ರಮುಖ ಕಾದಂಬರಿಕಾರರಲ್ಲಿ ಒಬ್ಬರು. ಗಮನಿಸಬೇಕಾದ ಅಂಶವೆಂದರೆ ಈ ಕಾದಂಬರಿಯನ್ನು ಭೈರಪ್ಪನವರು ಕೇವಲ ೫ ತಿಂಗಳ ಅವಧಿಯಲ್ಲಿ ಬರೆದಿದ್ದಾರೆ, ಅವರದೇ ಬೇರೆ ಪುಸ್ತಕಗಳಿಗೆ ಹೋಲಿಸಿದರೆ, 'ಆವರಣ' ಪುಟಗಳ ಪ್ರಮಾಣದಲ್ಲಿ ಚಿಕ್ಕದಾದರೂ, ಅದು ಉತ್ಪನ್ನ ಮಾಡಿರುವ ವಾದವಿವಾದ, ಅದರ ಅಳತೆಯನ್ನು ಮೀರಿದ್ದಾಗಿದೆ.

ಭೈರಪ್ಪನವರ ಪ್ರಕಾರ ಈ ಕೃತಿ ಕಲೆ ಮತ್ತು ಚಾರಿತ್ರಿಕ ಸತ್ಯಗಳನ್ನು ಮುಖಾಮುಖಿ ಮಾಡಿಸುತ್ತದೆ. ಆ ನೆವದಲ್ಲಿ ಈ ಕಥೆ ಭಾರತದಲ್ಲಿ ಇಸ್ಲಾಂ ಮತದ ಹುಟ್ಟು, ಬೆಳವಣಿಗೆಯನ್ನು ಪರೀಕ್ಷಿಸುತ್ತದೆ. ಲೇಖಕರು ಔರಂಗಜೇಬನ ಕಾಲದ ಭಾರತದಲ್ಲಿದ್ದ ಇಸ್ಲಾಂ ಮತವನ್ನು ಉಗ್ರವಾಗಿ ಪರೀಕ್ಷಿಸುತ್ತಾರೆ. ನಂತರದ ಬ್ರಿಟಿಷ್ ಆಡಳಿತ ಮತ್ತು ಆಧುನಿಕ ಭಾರತದಲ್ಲಿ ಮತ, ಧರ್ಮಗಳ ಪಾತ್ರವನ್ನೂ ಸ್ವಲ್ಪಮಟ್ಟಿಗೆ ಚರ್ಚಿಸುತ್ತಾರೆ. ವಿಶಿಷ್ಟವೆನಿಸುವ ಅವರ ಪ್ರಸ್ತಾವನೆಯಲ್ಲಿ ಈ ಬಗೆಯ ಸತ್ಯನಿಷ್ಠತೆಯ ಅವಶ್ಯಕತೆಯನ್ನೂ, ಮತ್ತು ಅದಕ್ಕೆ ಅವರು ಒದಗಿಸಿಕೊಳ್ಳುವ ತಾತ್ವಿಕ ಆಧಾರಗಳನ್ನೂ ಚರ್ಚಿಸಿದ್ದಾರೆ. ಅಲ್ಲದೆ, ಲೇಖಕ–ಓದುಗರ ಈ ಸಂಭಾಷಣೆಯಲ್ಲಿ ಓದುಗನ ಪಾತ್ರವೇನು ಎಂಬುದನ್ನು ಕುರಿತೂ ಚರ್ಚಿಸಿದ್ದಾರೆ.

ಕಥಾವಸ್ತು ಹಲವಾರು ಪದರುಗಳಲ್ಲಿ ಬೆಳೆಯುತ್ತದೆ: ಲಕ್ಷ್ಮಿ ಅಥವಾ ರಜಿಯಾ ಎಂಬ ಒಬ್ಬ ಒಕ್ಕಲಿಗ ಜಾತಿಯ ಹಿಂದೂ ಹೆಂಗಸು ಮತ್ತು ಅಮೀರ ಎಂಬ ಅವಳ ಮುಸಲ್ಮಾನ ಗಂಡ – ಇವರಿಬ್ಬರ ನಡುವಿನ ಸಂಬಂಧ ಕಥೆಯ ಮುಖ್ಯ ಎಳೆ. ಎರಡನೆಯ ಎಳೆ – ಔರಂಗಜೇಬನ ಕಾಲದ ಕೆಲವು ನಿರ್ದಿಷ್ಟ ಘಟನಾವಳಿಗಳನ್ನು ಆಧರಿಸಿ ಲಕ್ಷ್ಮಿ ಬರೆಯುವ ಕಾಲ್ಪನಿಕ ಕಥೆ. ಇನ್ನೊಂದು ಮುಖ್ಯ ಮತ್ತು ಮಹತ್ವಾಕಾಂಕ್ಷೀ ಎಳೆ, ಆಧುನಿಕ ಭಾರತದ ಸಂಘಟನೆಯ (ರಾಷ್ಟ್ರೀಯ ಏಕೀಕರಣ) ಅಗತ್ಯ ಮತ್ತು

ಅದರ ಜೊತೆಯಲ್ಲೇ ಸಲ್ಲಬೇಕಾದ ಮತಸ್ವಾತಂತ್ರ್ಯದ ಅಗತ್ಯ – ಹೀಗೆ ಮೂರು ವಿವಿಧ ಪದರುಗಳನ್ನು ಒಂದರ ಮೇಲೊಂದು ಮತ್ತು ಒಂದರ ಪಕ್ಕಕ್ಕೊಂದು ಜೋಡಿಸುತ್ತಾ ಹೋಗುತ್ತಾರೆ, ಭೈರಪ್ಪನವರು.

ಸ್ಥೂಲವಾಗಿ ಕಥೆ ಹೀಗಿದೆ. ಲಕ್ಷ್ಮಿ ಮತ್ತು ಅಮೀರ್ ಪುಣೆಯ ಫಿಲ್ಮ್ ಇನ್ಸ್ಟಿಟ್ಯೂಟ್‌ನಲ್ಲಿ ಭೇಟಿಯಾಗಿ, ಪ್ರೇಮಿಸಿ ಮದುವೆಯಾಗುತ್ತಾರೆ. ಇದೊಂದು ವಿಶಿಷ್ಟ ಮದುವೆ. ಇಬ್ಬರೂ ಕಲೆಯಲ್ಲಿ ಆಸಕ್ತಿಯುಳ್ಳವರು, ಪ್ರಗತಿಪರರು ಮತ್ತು ಜಾತ್ಯತೀತವಾಗಿ ಮದುವೆಯಾಗಿದ್ದಾರೆ, ಹಾಗಾಗಿ ಅವರ ಸಮುದಾಯದಲ್ಲಿ ಇವರಿಬ್ಬರಿಗೂ ಒಂದು ಗೌರವದ ಸ್ಥಾನವಿದೆ. ಸರಕಾರದಿಂದ ಪ್ರಾಯೋಜಿತವಾದ ಹಿಂದೂ–ಮುಸ್ಲಿಮರ ಭಾವೈಕ್ಯವನ್ನು ಬೆಳೆಸಲು ಸಹಾಯ ಮಾಡುವ ಐತಿಹಾಸಿಕ ಸ್ಥಳಗಳ ಆಧಾರಿತ ಸಾಕ್ಷ್ಯಚಿತ್ರಗಳನ್ನು ನಿರ್ಮಿಸುವ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಈ ಚಿತ್ರಗಳು ಮುಸ್ಲಿಂ ದೊರೆಗಳ ಮತಸಹಿಷ್ಣುತೆಯನ್ನೂ ಜಾತ್ಯತೀತ ನಿಲುವನ್ನು ಉದಾರವಾಗಿ ಪ್ರತಿನಿಧಿಸುತ್ತವೆ ಎಂಬುದು ಸರ್ಕಾರದ ಆಶಯ. ಆದರೆ ಲಕ್ಷ್ಮಿಗೆ ಇದರ ಯಥಾರ್ಥತೆಯಲ್ಲಿ ಸಂಪೂರ್ಣ ನಂಬಿಕೆಯಿಲ್ಲ. ಅವಳೇ ಚರಿತ್ರೆಯ ಪುಸ್ತಕಗಳನ್ನು ಓದುವುದರ ಮೂಲಕ ಸತ್ಯಾನ್ವೇಷಣೆಗೆ ತೊಡಗುತ್ತಾಳೆ. ಲಕ್ಷ್ಮಿಯ ತಂದೆಯ ಸಾವಿನ ನಂತರ ಅವರು ವಾಸವಾಗಿದ್ದ ಹಳ್ಳಿಗೇ ಹೋಗಿ, ಭಾರತದ ಇಸ್ಲಾಮಿನ ಸತ್ಯವಾದ ಚರಿತ್ರೆಯನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಾಳೆ. ಅವಳ ಅಪ್ಪ ಈ ಅಂತರ್ಜಾತೀಯ ಮದುವೆಯಿಂದಾಗಿ ತನ್ನಿಂದ ದೂರವಾಗಿದ್ದ ಮಗಳ ಹತ್ತಿರ ಹೋಗಲು ಮತ್ತು ಹಿಂದೂ ಧರ್ಮದಲ್ಲಿ ದೊರೆಯದಿದ್ದಂಥದ್ದೇನು ಕೊಟ್ಟಿದೆ ಈ ಮುಸ್ಲಿಮ್ ಧರ್ಮ ಎಂಬುದನ್ನು ಅರಿತುಕೊಳ್ಳುವ ಸಲುವಾಗಿ ಈ ಮಹಾ ಸಂಶೋಧನೆಯನ್ನು ನಡೆಸಿರುತ್ತಾರೆ. ಅವರ ಈ ಅಪಾರ ಗ್ರಂಥಭಂಡಾರವನ್ನು ಓದಿ ಲಕ್ಷ್ಮಿ ಇಸ್ಲಾಂ ಮತದ ಹೆಚ್ಚು ಸೂಕ್ಷ್ಮಗಳನ್ನು ಅರಿತುಕೊಳ್ಳುತ್ತಾಳೆ.

ಓದುತ್ತಾ ಇದ್ದಂತೆ ಅವಳಿಗೆ ಗೊತ್ತಾಗುತ್ತಾ ಹೋಗುತ್ತದೆ– ಇಸ್ಲಾಂ ಮತಕ್ಕೆ ಬಲಾತ್ಕಾರವಾಗಿ ಹಿಂದೂಗಳನ್ನು ಮತಾಂತರಗೊಳಿಸಲಾಗಿದೆ, ಈ ಪ್ರಕ್ರಿಯೆಯಲ್ಲಿ ಹಲವಾರು ಹಿಂದೂಗಳ ಕೊಲೆಗಳು, ದೇವಸ್ಥಾನಗಳು ನಾಶವಾಗಿವೆ (೩೦,೦೦೦ಕ್ಕೂ ಹೆಚ್ಚು). ಅವಳ ತಂದೆ ಬರೆಯಲು ಪ್ರಾರಂಭಿಸಿದ್ದ ಕಥೆಯೊಂದನ್ನು ತೆಗೆದುಕೊಂಡು ಅದನ್ನು ಮುಂದುವರೆಸುತ್ತಾಳೆ. ಸ್ಥಳೀಯ ಹಿಂದೂಗಳ ಮೇಲೆ ಮುಸ್ಲಿಂ ರಾಜರು ನಡೆಸಿದ್ದ ಕ್ರೌರ್ಯದ ಕಾಲ್ಪನಿಕ ಹಿನ್ನೋಟವನ್ನೊಳಗೊಂಡ ಈ ಕಾದಂಬರಿ ಮುಸ್ಲಿಂ ರಾಜರಲ್ಲೇ ಅತಿಕ್ರೂರಿ ಎನಿಸಿಕೊಂಡ, ಅಕ್ಬರನ ಮೊಮ್ಮಗ, ಔರಂಗಜ಼ೇಬನನ್ನು ಕೇಂದ್ರೀಕರಿಸುತ್ತದೆ. ಭಾರತವನ್ನು ಧರ್ಮಸಹಿಷ್ಣುತೆಯಿಂದ ಆಳಿದ ಬಹು ದೊಡ್ಡ ರಾಜ ಅಕ್ಬರನ ವಿಷಯವೂ ಸಂಕ್ಷಿಪ್ತವಾಗಿ ಬರುತ್ತದೆ.

ಕ್ರಮೇಣ ಭಿನ್ನ ಆಶಯಗಳ, ಭಿನ್ನ ಸೈದ್ಧಾಂತಿಕ ನೆಲೆಯ ತಳಹದಿಯ ಮೇಲೆ ನಿಂತಿದ್ದ ಲಕ್ಷ್ಮಿ ಮತ್ತು ಅಮೀರನ ಮದುವೆಯ ಬಂಧ ಸಡಿಲವಾಗತೊಡಗುತ್ತದೆ. ಇದಕ್ಕೆ ಕಾರಣ ಪ್ರಗತಿಪರ ಮುಸ್ಲಿಮ್ ಎಂದು ತಿಳಿದುಕೊಂಡಿದ್ದ ಲಕ್ಷ್ಮಿಗೆ ಅಮೀರನ ಧರ್ಮನಿಷ್ಠತೆ ನುಂಗಲಾರದ ತುತ್ತಾಗುತ್ತದೆ ಮತ್ತು ತಾನು ಅಪ್ಪನ ಪುಸ್ತಕಗಳನ್ನು ಓದಿ ತಿಳಿದುಕೊಂಡ ಇಸ್ಲಾಮಿನ ಪದ್ಧತಿ ಮತ್ತು ಆಚರಣೆಗಳಿಂದ ಆಕೆ ಹತಾಶಳಾಗುತ್ತಾಳೆ ಕೂಡ. ಅವರಿಬ್ಬರ ಸಂಬಂಧ ಕಡಿದುಬೀಳುತ್ತದೆ. ಇಬ್ಬರೂ ಬೇರೆಯಾಗುತ್ತಾರೆ. ಅಷ್ಟೇನೂ ಓದಿಲ್ಲದ, ಅತಿ ಸನಾತನಿಯಾದ ಮುಸ್ಲಿಮ್ ಹೆಂಗಸೊಬ್ಬಳನ್ನು, ಅಮೀರ್ ಲಕ್ಷ್ಮಿಯನ್ನು ವಿಚ್ಛೇದನೆ ಮಾಡದೆ, ಎರಡನೆಯ ಮದುವೆಯಾಗುತ್ತಾನೆ. ಇದನ್ನು ಇಸ್ಲಾಮ್ ಒಪ್ಪಿಕೊಳ್ಳುತ್ತದೆ. ಆಧುನಿಕ ವಿದ್ಯಾಭ್ಯಾಸವಿಲ್ಲದ, ಯಾವ ಆಸೆ ಆಕಾಂಕ್ಷೆಗಳೂ ಇಲ್ಲದ ಅಮೀರನ ಹೊಸ ಹೆಂಡತಿಯ ಪಾತ್ರ ಲೇಖಕರ ಕಲ್ಪನೆಯ ಇಸ್ಲಾಮಿಕ್ ಮಹಿಳೆಯ ರೆಟ್ರೊ ರೂಪಕವಾಗಿದೆ. ಲಕ್ಷ್ಮಿ ಮತ್ತು ಅಮೀರನ ಮಗ ನಝೀರ್ ಅಮೆರಿಕಾದಲ್ಲಿ ಮಾಸ್ಟರ್ಸ್ ಡಿಗ್ರಿ ಮುಗಿಸಿ, ಸೌದಿ ಅರೇಬಿಯಾದಲ್ಲಿ ಕೆಲಸ ಮಾಡಲು ಹೋಗಿದ್ದಾನೆ. ಇವನು ಕೂಡ ಕಟ್ಟಾ ಸನಾತನಿ– ನಮಾಜು ಮಾಡುತ್ತಾನೆ, ಸಾಂಪ್ರದಾಯಿಕ ಮುಸ್ಲಿಂ ಉಡುಪುಗಳನ್ನು ಧರಿಸುತ್ತಾನೆ, ಗಡ್ಡ ಬಿಟ್ಟಿದ್ದಾನೆ. ಈ ಎರಡೂ ಪಾತ್ರಗಳ ಮೂಲಕ ಲೇಖಕರು ತಮ್ಮ ಅರಿವಿಗೆ ಬಂದಿರುವ ಇಸ್ಲಾಮ್, ಅದರಲ್ಲಿ ಹೆಂಗಸಿನ ಸ್ಥಾನ, ಸಂಪ್ರದಾಯಬದ್ಧತೆ ಮತ್ತು ತನ್ನದೇ ಕಣ್ಣಿನ ಇಸ್ಲಾಮಿನ ಚರಿತ್ರೆಯ ನೋಟ ಎಲ್ಲವನ್ನೂ ಸೆರೆಹಿಡಿಯಲು ನೋಡುತ್ತಾರೆ ('ಒಂದು ಬ್ಯಾರೆಲ್ ಪೆಟ್ರೋಲಿನ ಬೆಲೆಯನ್ನು ಐದು ಡಾಲರ್ ಹೆಚ್ಚಿಸಿದರೆ ಎಲ್ಲ ಸೊಕ್ಕಿನ ದೇಶಗಳೂ ತಲೆಸುತ್ತು ಬಂದು ಕುಕ್ಕರಿಸಿಬಿಡ್ತವೆ. ಆ ಶಕ್ತಿ ಇರೋದು ಮುಸ್ಲಿಂ ದೇಶಗಳಿಗೆ, ಅದರಲ್ಲೂ ಪ್ರವಾದಿಗಳು(ಸ) ಜನ್ಮತಳೆದು ಪುನೀತವಾದ ಸೌದಿಗೆ, ಕರುಣಾಳು ಅಲ್ಲಾಹು ತನ್ನ ಪುಣ್ಯಸ್ಥಾನವನ್ನು ಹರಸದೇ ಇದ್ದಾನೆಯೆ?').

ಈ ಕಾದಂಬರಿಯ ಇನ್ನೊಂದು ಮುಖ್ಯಪಾತ್ರ ಪ್ರೊ. ಶಾಸ್ತ್ರಿ. ಈತ ಆಧುನಿಕ, ಮಾರ್ಕ್ಸ್‌ವಾದಿ. ಪ್ರಪಂಚ ಸುತ್ತುವವ. ಪುರಸ್ಕೃತ ಬುದ್ಧಿಜೀವಿ. ಆದರೆ ಭೈರಪ್ಪನವರ ಪ್ರಕಾರ ಆತ ಒಬ್ಬ ದೊಡ್ಡ ಶೋಮ್ಯಾನ್. ಸ್ವಪ್ರತಿಷ್ಠೆಯ, ಆತ್ಮರತ ವ್ಯಕ್ತಿ. ಹೆಂಗಸನ್ನು ಮುಟ್ಟುವ ನೆವದಲ್ಲಿ ತನ್ನ ತೀಟೆಯನ್ನು ತೀರಿಸಿಕೊಳ್ಳುವ ಕೀಳು ಅಭಿರುಚಿಯನ್ನು ಹೊಂದಿದವ. ಒಬ್ಬ ಬ್ರಿಟಿಷ್ ಕ್ರೈಸ್ತ ಹೆಂಗಸನ್ನು ಮದುವೆಯಾಗಿ, ಆ ಹೆಂಡತಿಯೊಡನೆ ಭಾರತದಲ್ಲಿ ವಾಸಿಸುತ್ತಿದ್ದಾನೆ. ವಿಪರ್ಯಾಸವೆಂದರೆ ಇಂಥ ಪ್ರಗತಿಪರ ಶಾಸ್ತ್ರಿಯ ಹೆಂಡತಿಯ ಪಾತ್ರಚಿತ್ರಣ ಒಬ್ಬ ಸಾಂಪ್ರದಾಯಿಕ ಹೆಂಗಸಿನಂತೆ ಆಗಿದ್ದು ಕಾರ್ಟೂನಿನಂತೆ ಕಾಣುತ್ತದೆ. ಕಥಾನುಕೂಲಕ್ಕಾಗಿ ಪ್ರೊ. ಶಾಸ್ತ್ರಿ ಮತ್ತು ಲಕ್ಷ್ಮಿಯ ಪ್ರಪಂಚಗಳು ಆಗಾಗ್ಗೆ ಪರಸ್ಪರ ಎದುರಾಗುತ್ತಲೇ ಇರುತ್ತವೆ.

ಒಂದು ಘಟ್ಟದಲ್ಲಿ ಪ್ರೊ. ಶಾಸ್ತ್ರಿಯ ತಾಯಿ ಸಾಯುತ್ತಾರೆ. ಈತ ಎಂಥ ಆಷಾಢಭೂತಿ ಅಂದರೆ ಯಾವುದೋ ಸಮ್ಮೇಳನದ ನೆಪದಲ್ಲಿ ವಾರಣಾಸಿಗೆ ಬಂದು ನಂತರ ಅಲ್ಲಿಂದ ಗಯಾಕ್ಕೆ ಹೋಗಿ ಅಮ್ಮನ ಅಂತ್ಯಕ್ರಿಯೆಯನ್ನು ಮಾಡಿ ತಲೆಯನ್ನು ಬೋಳಿಸಿಕೊಂಡು ಅದನ್ನು ಒಂದು ಟೋಪಿಯಿಂದ ಮುಚ್ಚಿಯೂ ಇದ್ದಾರೆ. ಇಲ್ಲಿ ಲಕ್ಷ್ಮಿ ಮತ್ತು ಪ್ರೊ. ಶಾಸ್ತ್ರಿ ಕಾಶಿಯಲ್ಲಿ ಪರಸ್ಪರ ಭೇಟಿಯಾಗುತ್ತಾರೆ. ಇದು ಭೈರಪ್ಪನವರ ಪ್ರಕಾರ ಪ್ರೊ. ಶಾಸ್ತ್ರಿಯವರ ಆಧುನಿಕತೆಗೂ ಸಾಂಪ್ರದಾಯಿಕತೆಗೂ ನಡುವಿನ ಸಂಧಾನಕ್ರಿಯೆ. ಕಾಶಿಗೆ ಬಂದಿರುವ ಲಕ್ಷ್ಮಿಗೆ ಕಾಶಿಯ ವಿಶ್ವನಾಥನ ದೇವಸ್ಥಾನವನ್ನು ಮುಸಲ್ಮಾನರು ಸಂಚಿನಿಂದ ಧ್ವಂಸಮಾಡಿದ್ದೂ, ದೇವರ ವಿಗ್ರಹಗಳನ್ನು ದೇವಸ್ಥಾನದ ಬ್ರಾಹ್ಮಣರು ಕಾಪಾಡಿಕೊಂಡಿದ್ದೂ, ಎಲ್ಲವನ್ನೂ ಪ್ರತ್ಯಕ್ಷ ಕಾಣುವ ಅವಕಾಶ ದೊರಕುತ್ತದೆ. ಎಲ್ಲವನ್ನೂ ಅವಳು ತನ್ನ ಕಲ್ಪಿತ ಕಥೆಯಲ್ಲಿ ಬರೆಯುತ್ತಾಳೆ. ಅಲ್ಲಿನ ಸಾಧುಗಳ ತತ್ವಜ್ಞಾನದ ದೀರ್ಘ ಬೋಧನೆಯಲ್ಲಿ ಹಿಂದೂ ಧರ್ಮದ ನಿಜವಾದ ಸಾರವೇನೆಂಬುದನ್ನು ಲಕ್ಷ್ಮಿ ತಿಳಿದುಕೊಳ್ಳುತ್ತಾಳೆ ಮತ್ತು ಕಥೆಯನ್ನು ಲಕ್ಷ್ಮಿಯೂ ಭೈರಪ್ಪನವರೂ ಬೆಳೆಸಿ ನಮಗೆಲ್ಲಾ ತಿಳಿಸುತ್ತಾರೆ.

ಸಂದರ್ಭಗಳ ಒಂದು ವಿಚಿತ್ರ ಜೋಡಣೆಯಲ್ಲಿ ಲಕ್ಷ್ಮಿ–ಅಮೀರರ ಮಗನಾದ ನಜ್ಜೀರ್ ಪ್ರೊ. ಶಾಸ್ತ್ರಿಯವರ ಮಗಳನ್ನು ಮದುವೆಯಾಗುತ್ತಾನೆ. ಈ ಜಾತ್ಯತೀತ ವೈವಾಹಿಕ ಜೀವನದ ಸಾಧ್ಯಾಸಾಧ್ಯತೆಗಳ ಬಗ್ಗೆ ಭೈರಪ್ಪನವರು ಏನೂ ಹೇಳಹೋಗುವುದಿಲ್ಲ.

ಕೊನೆಯಲ್ಲಿ ಸರ್ವಧರ್ಮ ಸಮನ್ವಯದ ನೆಪದಲ್ಲಿ ಪ್ರೊ. ಶಾಸ್ತ್ರಿಯವರು ನಿಯೋಜಿಸಿರುವ ಒಂದು ದೊಡ್ಡ ರಾಷ್ಟ್ರೀಯ ಸಮ್ಮೇಳನಕ್ಕೆ ಲಕ್ಷ್ಮಿ ಮತ್ತು ಅಮೀರರು ಆಹ್ವಾನಿತರಾಗಿದ್ದಾರೆ. ತನ್ನ ಅಪಾರ ಓದು ಮತ್ತು ಸಂಶೋಧನೆಯಿಂದ ಪಡೆಕೊಂಡಿದ್ದ ಇಸ್ಲಾಮಿನ ನಿಜಸ್ವರೂಪವನ್ನು ಲಕ್ಷ್ಮಿ ಆ ಸಮ್ಮೇಳನದಲ್ಲಿ ಎಲ್ಲರ ಮುಂದೆ ಘಂಟಾಘೋಷವಾಗಿ ಸಾರುತ್ತಾಳೆ. 'ನಿಜವಾದ ಭಾವೈಕ್ಯತೆ ಆರಂಭವಾಗುವುದು ಚರಿತ್ರೆಯೊಂದನ್ನು ನಿಜವಾಗಿ, ಮನಃಪೂರ್ವಕವಾಗಿ ಒಪ್ಪಿಕೊಂಡಾಗಲೇ; ಅದು ಎಷ್ಟೇ ನೋವುಂಟು ಮಾಡಿದರೂ, ಕಷ್ಟವಾದರೂ' – ಎಂಬ ತನ್ನ ವಾದವನ್ನು ಹಲವಾರು ಬಾರಿ ಸಮ್ಮೇಳನಲ್ಲಿ ಪ್ರಚುರಪಡಿಸಿ ಗೊಂದಲವೆಬ್ಬಿಸುತ್ತಾಳೆ. ಹೇಗೆ 'ಪ್ರಗತಿಪರ'ರು ಚರಿತ್ರೆಯನ್ನು ಮುಚ್ಚಿಟ್ಟು, ಸತ್ಯಕ್ಕೆ ಚ್ಯುತಿಮಾಡಿದ್ದಾರೆಂದು ಸೋದಾಹರಣವಾಗಿ ತಿಳಿಸುತ್ತಾಳೆ. ಜರ್ಮನಿ 'ಹಾಲೊಕಾಸ್ಟ್'ನ ಬಗ್ಗೆ ಕ್ಷಮೆ ಯಾಚಿಸಿದ್ದು ಹಾಗೂ ಜಪಾನೀಯರು ತಮ್ಮ ಕ್ರೌರ್ಯಕ್ಕೆ ಕೊರಿಯಾವನ್ನು ಕ್ಷಮೆ ಕೇಳಿದ್ದನ್ನು ಉದಾಹರಿಸುತ್ತಾಳೆ. ಗಾಯ ಮಾಗುವುದು ಚರಿತ್ರೆಯಲ್ಲಿ ನಡೆದಿರುವ ದುರ್ಘಟನೆಗಳನ್ನು ಸಾರ್ವಜನಿಕರೆದುರಿಗೆ ಒಪ್ಪಿಕೊಂಡಾಗಲೇ ಹೊರತು ಸತ್ಯವನ್ನು ಮುಚ್ಚಿಟ್ಟಿದ್ದಾಗಲ್ಲ ಎಂದು ವಾದಿಸುತ್ತಾಳೆ.

ಪೊಲೀಸು ಮತ್ತು ಸರ್ಕಾರ ಲಕ್ಷ್ಮಿಗೆ ಕಿರುಕುಳ (ಪ್ರೊ. ಶಾಸ್ತ್ರಿಯ ಪ್ರೇರಣೆಯೇನೋ ಎಂಬ ಸಂದೇಹ) ಕೊಡಲಾರಂಭಿಸುವ ವೇಳೆಗೆ ಕಾದಂಬರಿಯನ್ನು ಅಂತ್ಯಗೊಳಿಸುತ್ತಾರೆ. ಅವಳೆಲ್ಲ ಪುಸ್ತಕಗಳನ್ನು ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ (ಪೊಲೀಸೊಬ್ಬ ತನ್ನ ಬೂಟನ್ನು ಪುಸ್ತಕದ ಮೇಲೆ ಒತ್ತುವುದರ ರೂಪಕವೂ ಇದೆ). ಅವಳು ಬರೆದ ಪುಸ್ತಕಕ್ಕೆ ಬಹಿಷ್ಕಾರ ಹಾಕಲ್ಪಟ್ಟಿದೆ. ಆದರೆ, ಆಶ್ಚರ್ಯಕರವಾಗಿ ಲಕ್ಷ್ಮಿಯ ವಾದವನ್ನು ಒಪ್ಪಿಕೊಂಡುಬಿಡುವ ಅಮೀರ ಲಕ್ಷ್ಮಿಯನ್ನು ಸದ್ಯಕ್ಕೆ ಪೊಲೀಸರ ಹಿಡಿತದಿಂದ ಪಾರುಮಾಡುತ್ತಾನೆ (ಲಕ್ಷ್ಮಿ ಮತ್ತು ಅಮೀರರ ಸಂಬಂಧವನ್ನು, ಇಂದಿನ ಭಾರತದ ಹಿಂದೂ ಮತ್ತು ಮುಸ್ಲಿಂ ಧರ್ಮದ ನಡುವಿನ ಸಂಬಂಧ ಸೂಚಿಸುವ ರೂಪಕವಾಗಿಯೂ ಕಾಣಬಹುದು).

ಈ ಕಾದಂಬರಿ ರಾಷ್ಟ್ರೀಯ ಸಮಗ್ರತೆಯಲ್ಲಿ ಯಾವ ಭರವಸೆಯನ್ನೂ ಮೂಡಿಸುವುದಿಲ್ಲ. ಹಿಂದೂ ಧರ್ಮದ ಮೇಲೆ ಬುದ್ಧಿಜೀವಿಗಳಿಂದ, ವ್ಯವಸ್ಥಿತ ರಾಜಕೀಯ ಸಂಸ್ಥೆಗಳಿಂದ ಆಕ್ರಮಣ ನಡೆದಿದೆ; ಅದು ತಲೆಮರೆಸಿಕೊಳ್ಳಬೇಕಾಗುವ ಸಂದರ್ಭ ಒದಗಿದೆ ಎಂದು ಪ್ರತಿಪಾದಿಸುತ್ತದೆ.

ಒಂದು ತೆಳುತೆರೆಯ ಮುಸುಕಿನಲ್ಲಿ ಈ ಕಾದಂಬರಿ ಹಿಂದೂ, ಇಸ್ಲಾಂ ಮತ್ತು ಕ್ರೈಸ್ತಧರ್ಮಗಳನ್ನು ಹಲವಾರು ಮಟ್ಟಗಳಲ್ಲಿ ತುಲನೆ ಮಾಡುತ್ತದೆ. ಹಿಂದೂ ಧರ್ಮ ತತ್ವಜ್ಞಾನದಲ್ಲಿ (philosophy) ಸಾಧಿಸಿರುವ ಮುನ್ನಡೆ, ಪರಮತ ಸಹಿಷ್ಣುತೆ, ಸಹಧರ್ಮಗಳ ಬಗ್ಗೆ ಅದು ತೋರುವ ಔದಾರ್ಯಗಳನ್ನು ವಿಜೃಂಭಿಸಿ ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತದೆ. ಹಾಗೆಯೇ ಕಾದಂಬರಿ ಸತ್ಯವನ್ನು ಹುದುಗಿಸಿಬಿಡುವ ನಮ್ಮ ರಾಜಕೀಯ ಪ್ರಣೀತ ಬುದ್ಧಿಜೀವಿಗಳ ಚರ್ಯೆಯನ್ನು ಬಯಲು ಮಾಡುತ್ತದೆ. ಈ ಸತ್ಯ, ಕಾದಂಬರಿಕಾರರಾದ ಭೈರಪ್ಪನವರಿಗೆ ಕಾಣಿಸುವ ಸತ್ಯ.

*

ಇನ್ನು ಮುಂದೆ ಆರ್ಹನ್ ಪಮುಕರ `My Name is Red' ಪುಸ್ತಕವನ್ನು ಗಮನಿಸೋಣ. ಬೇರೆ ಎರಡು ಕೃತಿಗಳ ಬಗ್ಗೆ ಯೋಚಿಸಿದ್ದೆ. ಸಲ್ಮಾನ್ ರಶ್ದಿಯ `Satanic Verses' ಮತ್ತು ಖಾಲಿದ್ ಹುಸೇನಿಯ `Kite Runner'. ಸಲ್ಮಾನ್ ರಶ್ದಿಯ ಪುಸ್ತಕ ಖಂಡಿತವಾಗಿ ಬೇಕಾದಷ್ಟು ವಾದವಿವಾದಗಳನ್ನು ಉಂಟುಮಾಡಿತ್ತು. ಆವರಣದಂತೆಯೇ ರಶ್ದಿ ಕೂಡ ಇಸ್ಲಾಂನ ಒಂದು ಮುಖ್ಯ ದೃಷ್ಟಿಯನ್ನು ಕಾದಂಬರಿಯಲ್ಲಿ ತೋರಬಯಸುತ್ತಾನೆ. ಆತನ ದೃಷ್ಟಿಯೂ ಜಾತ್ಯತೀತವೇ. ಆದರೆ, ಭಾರತೀಯವಲ್ಲದ ಸಮಾಜ ಇಂಥ ವಿಷಯವನ್ನು ಹೇಗೆ ಗ್ರಹಿಸುತ್ತದೆ ಮತ್ತು ಇಂಥ ಪುಸ್ತಕಗಳು ನಮಗೆ ಹೆಚ್ಚು ವಿಶಾಲವಾದ ಸಾಂಸ್ಕೃತಿಕ ಮತ್ತು ಚಾರಿತ್ರಿಕ ದೃಷ್ಟಿಕೋನವನ್ನು ಒದಗಿಸಬಹುದು

ಎಂಬ ಕಾರಣದಿಂದ ಹಾಗೂ ಒಬ್ಬ ಮುಸ್ಲಿಂ ರಾಷ್ಟ್ರದ ಲೇಖಕ ಈ ಬಗ್ಗೆ ಹೆಚ್ಚು ಸಮಗ್ರವಾದ ವಿರೋಧಿ ದೃಷ್ಟಿಕೋನವನ್ನು ಒದಗಿಸಬಲ್ಲ ಎಂಬ ದೃಷ್ಟಿಯಿಂದ ಪಮುಕರನ್ನು ನಾನು ಆಯ್ದುಕೊಂಡೆ.

ನನ್ನ ಆಯ್ಕೆಯ ಪಟ್ಟಿಯಲ್ಲಿದ್ದ ಮತ್ತೊಂದು ಪುಸ್ತಕ ಹುಸೇನಿಯ 'ಕೈಟ್ ರನ್ನರ್'. ಆತನ ಈ ಪುಸ್ತಕವೂ ಆವರಣದಂತೆಯೇ ಜನಪ್ರಿಯವೂ ಬಹುಶ್ರುತವೂ ಆಗಿದೆ. ಆದರೆ ಯಾವುದೇ ದೃಷ್ಟಿಯಿಂದ ನೋಡಿದರೂ ಈ ಪುಸ್ತಕ ಸಾಹಿತ್ಯಿಕವಾಗಿ ಮೌಲಿಕವಾದದ್ದು ಎಂದು ನನಗನಿಸಲಿಲ್ಲ. ಜನಪ್ರಿಯ ಶೈಲಿಯಲ್ಲಿ ನೇರವಾಗಿ ಹೇಳುವ ಕಥಾಶೈಲಿಯನ್ನು ಒಳಗೊಂಡು, ಪುಸ್ತಕದ ಕೆಲವು ಭಾಗಗಳು ತೀರ ಅಸಹಜವಾಗಿವೆ. ಪಮುಕರ ಕಾದಂಬರಿ ಸಾಹಿತ್ಯಿಕವಾಗಿ ಉತ್ಕೃಷ್ಟವಾದ ಮೌಲ್ಯಗಳನ್ನೊಳಗೊಂಡ ಕಾದಂಬರಿ ಎನ್ನಿಸಿದ್ದರಿಂದ ಕಡೆಗೆ ಅದನ್ನೇ ಆಯ್ಕೆ ಮಾಡಿಕೊಂಡೆ.

ಪಮುಕರ ದೇಶ ಟರ್ಕಿ. ಸಾಹಿತ್ಯದ ನೊಬೆಲ್ ಪ್ರಶಸ್ತಿಯನ್ನು ೨೦೦೬ರಲ್ಲಿ ಪಡೆಯುವತನಕ ಈತ ಪಶ್ಚಿಮದಲ್ಲಿ ಅಷ್ಟೇನೂ ಜನಪ್ರಿಯರಾಗಿರಲಿಲ್ಲ. ಟರ್ಕಿಯಲ್ಲಿ ನಡೆದ ಆರ್ಮಿನಿಯನ್ ಹತ್ಯಾಕಾಂಡ ವಿರುದ್ಧವಾಗಿ ಮಾತನಾಡಿದ ಈತ ಟರ್ಕಿಯ ಕೆಂಗಣ್ಣಿಗೆ ಒಳಗಾಗಿದ್ದಾರೆ ಕೂಡ. ಈ ಬರ್ಬರ ಹತ್ಯಾಕಾಂಡ ಟರ್ಕಿಯ ಘೋರ ದುರಂತ. ಅವರ ಕಾದಂಬರಿಗಳಲ್ಲಿ ಪಮುಕರು ತನ್ನ ದೇಶದ ಇತಿಹಾಸ ಮತ್ತು ಇಂದಿನ ಜಾಗತಿಕ ವಿದ್ಯಮಾನಗಳ ಅಗತ್ಯಗಳು ಮತ್ತು ಒತ್ತಡಗಳನ್ನು ಪರಿಶೀಲಿಸುತ್ತಾರೆ.

ಟರ್ಕಿ ಬಹುಮಟ್ಟಿಗೆ ಮುಸ್ಲಿಮರ ದೇಶವಾದರೂ, ಕ್ರಿಸ್ತಶಕದ ಆರಂಭದಿಂದಲೂ ಕ್ರೈಸ್ತಧರ್ಮದ ಪ್ರಭಾವಕ್ಕೆ ಒಳಗಾಗಿಯೇ ಇದೆ. ಇಸ್ಲಾಂ ಆರಂಭದ ಸ್ಥಿತಿಯಲ್ಲಿಯೇ ಟರ್ಕಿಯಲ್ಲಿ ವ್ಯಾಪಕವಾಗಿ ಹರಡಿತ್ತು. ಸ್ಪೈನ್‌ನಿಂದ ಭಾರತದ ಪೂರ್ವತೀರವನ್ನೊಳಗೊಂಡು ಫಿಲಿಪೀನ್ಸ್ ದೇಶದವರೆಗೂ ಹರಡಿದ್ದ ಆಟೊಮನ್ (೧೩೩೦ – ೧೯೧೨) ಸಾಮ್ರಾಜ್ಯದ ಕೇಂದ್ರ. ೧೯೧೨ರಲ್ಲಿ ಕೆಮಲ್ ಅತಾತುರ್ಕ್ ಆಧುನಿಕ ಟರ್ಕಿಯನ್ನು ಸ್ಥಾಪಿಸಿದ. ಆಧುನಿಕ ಟರ್ಕಿ ಇಂದಿನವರೆಗೂ ಜಾತ್ಯತೀತ ರಾಷ್ಟ್ರವಾಗಿಯೇ ಉಳಿಯಲು ಯತ್ನಿಸುತ್ತಿದೆ. ಆಧುನಿಕ ಟರ್ಕಿಯ ಪಿತಾಮಹನಾದ ಅತಾತುರ್ಕ್, ಒಂದು ಕಾಲದಲ್ಲಿ ಪ್ರಬಲವಾಗಿದ್ದ ೬೦೦ ವರ್ಷದ ಆಟೊಮನ್ ಸಾಮ್ರಾಜ್ಯದ ವೈಭವವನ್ನು ಹೇಳ ಹೆಸರಿಲ್ಲದಂತೆ ಅಳಿಸಿಹಾಕಿದ. ಜಾತ್ಯತೀತತೆಯನ್ನು ಹೆಚ್ಚು ಕಡಿಮೆ ಹೇರುವ ಕ್ರಿಯೆಯಲ್ಲಿ ಪಾಶ್ಚಿಮಾತ್ಯ ಪದ್ಧತಿಯನ್ನು ಟರ್ಕಿಯಲ್ಲಿ ಕಡ್ಡಾಯಮಾಡಿದ. ಇಸ್ಲಾಂ ಮತವನ್ನು ಸಂಕುಚಿಸಿದ. ತಲೆಯ ಮೇಲೆ ಧರಿಸುವ ವಸ್ತ್ರವನ್ನು (scarf), ತುರ್ಕಿ ಟೋಪಿ, ಬುರುಖಾಗಳನ್ನು ಬಹಿಷ್ಕರಿಸಿದ. ಇವತ್ತಿಗೂ ಟರ್ಕಿಯಲ್ಲಿ ಈ ಹೋರಾಟ ನಡೆಯುತ್ತಲೇ ಇದೆ. ಸಾರ್ವಜನಿಕ ಸ್ಥಳಗಳಲ್ಲಿ ತಲೆ ವಸ್ತ್ರ

ಧರಿಸಿಕೊಳ್ಳಲು ಅನುಮತಿ ಕೊಡಬೇಕೆಂಬ ವಾದ ಅಲ್ಲಿಯ ಸುಪ್ರೀಮ್ ಕೋರ್ಟ್ ಮತ್ತು ಪಾರ್ಲಿಮೆಂಟಿಗೆ ಹೋಗಿದೆ. ಈ ವಿಚಾರದಲ್ಲಿ ಇಂದು ಅಲ್ಲಿ ನಡೆಯುತ್ತಿರುವ ತೀವ್ರತಮವಾದ ಚರ್ಚೆಗಳು ಅಭಿಪ್ರಾಯ ವೈವಿಧ್ಯಕ್ಕೆ ಒಂದು ಉತ್ತಮ ಉದಾಹರಣೆಯಾಗಿದೆ. ಟರ್ಕಿಯನ್ನು ಕೇವಲ ಮತಬದ್ಧ ಸಮಾಜವೆಂದೇ ಕಾಣುವುದು ತಪ್ಪಾಗಿ ಕಂಡುಬಂದರೂ, ಮೂಲಭೂತ ಇಸ್ಲಾಂ ಧರ್ಮ ಟರ್ಕಿಯನ್ನು ಆಕ್ರಮಿಸಬಹುದೆಂಬ ಭೀತಿ ನೈಜವಾಗಿದೆ.

ಪಮುಕ್ ಸ್ವತಃ ಪಾಶ್ಚಾತ್ಯ ಸಾಹಿತ್ಯದಿಂದ ಪ್ರಭಾವಿತರಾಗಿದ್ದಾರೆ. ಅವರು ಕೆಮಲ್ ಅತಾತುರ್ಕನ ರಾಜಕೀಯ ಉತ್ತರಾಧಿಕಾರಿಗಳ ದಬ್ಬಾಳಿಕೆ ಮತ್ತು ಭ್ರಷ್ಟಾಚಾರವನ್ನು ವಿರೋಧಿಸಿದರು. ಯುರೋಪು ಮತ್ತು ಅಮೆರಿಕದ ಸಾಹಿತ್ಯವನ್ನು ವಿಸ್ತಾರವಾಗಿ ಓದಿ, Iowa Writers Workshopನಲ್ಲಿ ಅಭ್ಯಾಸಮಾಡಿ, ನವ್ಯ ಹಾಗು ನವ್ಯೋತ್ತರ ತಂತ್ರಗಳನ್ನೂ ಒಳಗೊಂಡ ಸಮಕಾಲೀನ ಮಿಶ್ರಶೈಲಿಯನ್ನು ತಮ್ಮ ಬರವಣಿಗೆಯಲ್ಲಿ ಅಳವಡಿಸಿಕೊಂಡಿದ್ದಾರೆ. 'ಆಧುನೀಕರಣ' ಮೊದಲಾಗಿ ಎಂಬತ್ತು ವರ್ಷಗಳ ನಂತರವೂ ಇನ್ನೂ ತನ್ನ ತೀರ ಹಿಂದುಳಿದಿರುವ, ಆಧುನೀಕರಣದ ಸೋಂಕು ಕೂಡ ತಗಲದಿರುವ ಟರ್ಕಿಯ ಭಾಗಗಳ ಬಗ್ಗೆ ಬರೆಯುತ್ತಾರೆ.

ಈ ಪುಸ್ತಕವನ್ನು ಬರೆಯಲು ಪಮುಕರಿಗೆ ೬ ವರ್ಷ ಬೇಕಾಯಿತು. ಅವರ ಮನಸ್ಸಿನಲ್ಲಿದ್ದ ಪೂರ್ವ-ಪಶ್ಚಿಮಗಳ ದೀರ್ಘ ಸಂಘರ್ಷದ ಹಲವಾರು ಕಥೆಗಳಲ್ಲಿ ಇದೂ ಒಂದು. ಈ ಕಾದಂಬರಿಯನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದು ಎರ್ಡಾಗ್ ಗೋಕ್ನರ್.

ಇದರ ಕಾಲ ೧೬ನೆ ಶತಮಾನದ ಉತ್ತರಾರ್ಧ; ಸುಲ್ತಾನ್ Murat III ರಾಜ್ಯವಾಳುತ್ತಿದ್ದ ಕಾಲ. ಪರ್ಶಿಯಾದಿಂದ ಸುಮಾರು ೧೦೦ ವರ್ಷಗಳ ಕಾಲದಲ್ಲಿ ಬಂದ 'ಚಿಕಣಿಚಿತ್ರ ಕಲೆಗಾರ'ರಿಗೆ (ಮಿನಿಯೆಚರಿಸ್ಟ್) ಪೋಷಕ ಆಗಿದ್ದವ. ಆ ಕಾಲವು ಎಂತಹುದೆಂದರೆ ಶಕ್ತಿಯುತ ಪಾಶ್ಚಾತ್ಯ ಸಂಸ್ಕೃತಿಯ ಚೈತನ್ಯದ ಆಕರ್ಷಣೆಗೆ ಒಳಗಾಗಿ ಪ್ರಬಲವಾಗಿದ್ದ ಆಟೊಮನ್ ಸಾಮ್ರಾಜ್ಯವೂ ತನ್ನಲ್ಲಿದ್ದ ದೃಢ ಆತ್ಮವಿಶ್ವಾಸವನ್ನು ಕಳೆದುಕೊಳ್ಳುತ್ತಿದ್ದ ಕಾಲ. ಇಂತಹ ಚಾರಿತ್ರಿಕ ಸನ್ನಿವೇಶ ಇಸ್ಲಾಂ ಮತ್ತು ಅದರೊಳಗೇ ನಡೆಯುತ್ತಿದ್ದ ಘರ್ಷಣೆಗಳನ್ನು ನೋಡಲು ಒಂದು ಉತ್ತಮ ಹಿನ್ನೆಲೆ. ಇಲ್ಲಿಯ ಕಥೆ ೫೦೦ ವರ್ಷಗಳ ಹಿಂದಿನದಾದರೂ, ಅಂದಿನಿಂದಲೇ ನಡೆಯುತ್ತಿದ್ದ ಈ ಆಂತರಿಕ ಘರ್ಷಣೆ ಇಂದಿಗೂ ನಡೆಯುತ್ತಲೇ ಇದೆ, ಇಂಥ ಘರ್ಷಣೆಗಳು ಹೊಸತೇನಲ್ಲ ಎಂಬ ಅಭಿಪ್ರಾಯವನ್ನು ಲೇಖಕರು ಸೂಚಿಸುತ್ತಾರೆ.

ಮುರತ್ ಆಸ್ಥಾನದ ಇಬ್ಬರು ಕಲಾವಿದರ ಕೊಲೆಯ ವಿಚಾರವನ್ನು ಈ ಕಥೆ ಹೇಳುತ್ತದೆ. ಒಬ್ಬ 'ಎಲಿಗೆಂಟ್'; ಇವನು ಕುಶಲಿಯಾದ ಸೂಕ್ಷ್ಮ ಪ್ರತಿರೂಪಿ ಕಲಾವಿದ;

ಮತ್ತೊಬ್ಬ 'ಎನಿಷ್ಟೆ', ಬಹಳ ಕುತಂತ್ರಿಯಾದ ಈತನದು ತೀರ ಸಂಕೀರ್ಣ ವ್ಯಕ್ತಿತ್ವ. ಸುಲ್ತಾನ ತನ್ನ ಆಸ್ಥಾನದಲ್ಲಿ ಅತ್ಯುತ್ತಮವಾದ ನಾಲ್ಕು ಕಲಾವಿದರಿಂದ ಒಂದು ಪುಸ್ತಕವನ್ನು ಪ್ರಕಟಿಸಲು ನಿರ್ಧರಿಸಿದ್ದು ಅದರ ಮೇಲ್ವಿಚಾರಣೆಯನ್ನು ಎನಿಷ್ಟೆಗೆ ಕೊಡುತ್ತಾನೆ. ಈ ನಾಲ್ಕು ಕಲಾವಿದರಲ್ಲಿ ಎಲಿಗೆಂಟನೂ ಒಬ್ಬ. ಈ ಪುಸ್ತಕವನ್ನು ಹೊರತರುವ ಕಾರ್ಯ ಗೋಪ್ಯವಾಗಿದೆ. ಈ ನಾಲ್ಕೂ ಚಿತ್ರಕಾರರ ಗಮ್ಯವೂ ಒಂದೇ. ಆದರೆ ಅದೇನೆಂದು ಅವರಿಗೆ ಸ್ಪಷ್ಟವಾಗಿ ತಿಳಿದಿಲ್ಲ. ಪ್ರತಿಯೊಬ್ಬರೂ ಪುಸ್ತಕದ ಬೇರೆ ಬೇರೆ ಭಾಗಗಳನ್ನು ಬರೆಯುತ್ತಿದ್ದಾರೆ. ಪುಸ್ತಕದ ಸಮಗ್ರ ಚಿತ್ರ ಯಾರಿಗೂ ಇಲ್ಲ. ಆದರೆ ಸ್ವರೂಪದ ಬಗ್ಗೆ ಕೆಲವು ಅಸ್ಪಷ್ಟ ಊಹೆಗಳಿವೆ ಅಷ್ಟೆ. ಎನಿಷ್ಟೆ ತಮಗೆ ವಹಿಸಿರುವ ಕೆಲಸ ಎಷ್ಟು ಅಸಾಂಪ್ರದಾಯಿಕವಾಗಿದೆ ಎಂಬುದನ್ನೂ ಅವರು ಪೂರ್ತಿ ಒಪ್ಪಿಕೊಳ್ಳದ ಮನಃಸ್ಥಿತಿಯಲ್ಲಿದ್ದಾರೆ. ಅನೂಚಾನವಾಗಿ ಬಂದ ಸಾಂಪ್ರದಾಯಿಕ ಮಾರ್ಗವನ್ನು ಬಿಟ್ಟು ಬೇರೆ ಮಾರ್ಗದಲ್ಲಿ ಚಿತ್ರ ಬಿಡಿಸುವ ಈ ಖಾಸಗೀ ಕೆಲಸ ಒಪ್ಪಿಕೊಂಡಿದ್ದರ ಬಗ್ಗೆ ಅವರಿಗೆ ತಮ್ಮ ವಿಚಾರದಲ್ಲಿ ನಾಚಿಕೆಯಾಗಿದೆ. ಅಲ್ಲದೆ ಅವರಲ್ಲಿ ಒಂದು ಭೀತಿಯೂ ಇದೆ – ತಮ್ಮ ಕೆಲಸ ಮತದ ಪುರೋಹಿತವರ್ಗಕ್ಕೆ ತಿಳಿದರೆ ಪವಿತ್ರ ಸಾಂಪ್ರದಾಯಿಕತೆಗೆ ದ್ರೋಹ ಮಾಡಿದುದಕ್ಕಾಗಿ ತಮಗೆ ಶಿಕ್ಷೆಯಾಗಬಹುದು; ತಾವು ಮರಣದಂಡನೆಗೆ ಕೂಡ ಗುರಿಯಾಗಬಹುದು ಎಂದು.

ಅವರ ಕಲೆ ಉತ್ಕೃಷ್ಟ ಸೂಕ್ಷ್ಮರೂಪ ಕಲೆ (classic miniature). ಅವರ ಕಲೆಯಲ್ಲಿ ಆಕಾರಗಳನ್ನು ಬಹು ಸುಂದರವಾಗಿ, ಸಂಸ್ಕಾರಬದ್ಧವಾಗಿ ವಿವಿಧ ರೀತಿಯಲ್ಲಿ ರಚಿಸಲ್ಪಟ್ಟರೂ, ಅವುಗಳಲ್ಲಿ ವೈಯಕ್ತಿಕತೆ ಪ್ರಕಟವಾಗದೆ ಭಾವಶೂನ್ಯವಾಗಿರುತ್ತದೆ. ಚಿತ್ರಗಳನ್ನು ಕೇವಲ ಮೂಲಗ್ರಂಥ ಪಾಠಗಳನ್ನು (Text) ಅಲಂಕರಿಸಲು, ವಿವರಿಸಲು ರಚಿಸುತ್ತಿದ್ದಾರೆಯೇ ಹೊರತು, ಈ ಚಿತ್ರಗಳಿಗೇ ಪ್ರತ್ಯೇಕವಾದ ಸ್ಥಾನವಿಲ್ಲ. ಇಸ್ಲಾಂನಲ್ಲಿ ಚಿತ್ರಕಲೆಗೆ ಸ್ಥಾನವಿಲ್ಲ. ಏಕೆಂದರೆ ಇಸ್ಲಾಂ ಮತ ಮೂರ್ತಿಪೂಜೆಯನ್ನು ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಈ ಚಿತ್ರಗಳಿಗೆ ತಮ್ಮದೇ ಆದ ಪ್ರತ್ಯೇಕ ಸ್ಥಾನವಿರದೆ, ಅವುಗಳನ್ನು ಕೇವಲ ತತ್ವಪಾಠಗಳನ್ನು ಸ್ಪಷ್ಟಪಡಿಸಲು ಮಾತ್ರ ಉಪಯೋಗಿಸುತ್ತಾರೆ. ಈ ಮುಸ್ಲಿಂ ಸೂಕ್ಷ್ಮರೂಪ ಕಲೆಯಲ್ಲಿ ಮಸೀದಿಗಳನ್ನು ದೂರ ಅಥವಾ ದೃಷ್ಟಿಕೋನಕ್ಕೆ (angle of view) ಪ್ರಾಮುಖ್ಯ ಕೊಡದೆ ಚಿತ್ರಗಳನ್ನು ಪ್ರತಿನಿಧಿಸುತ್ತಾರೆ. ಈ ಕಲಾವಿದರಿಗೆ, ಇಟಲಿಯ ರೆನೈಸಾನ್ಸ್ (renaissance) ಕಾಲದ ಶೈಲಿಯನ್ನು ಅಳವಡಿಸಿಕೊಳ್ಳಬೇಕೆಂಬ ಗುಪ್ತ ಆದೇಶವಿದೆ. ನೂರಾರು ಶತಮಾನಗಳ ಪ್ರಾಚೀನ ಪರಂಪರೆಯಾದ ವೆನಿಶಿಯನ್ ಶೈಲಿಯಲ್ಲಿ ಪ್ರತಿಯೊಂದು ಆಕಾರವೂ ತೀರ ವೈಯಕ್ತಿಕವಾದದ್ದು. ಭಾವಚಿತ್ರಗಳೂ ನಿರ್ದಿಷ್ಟ ವ್ಯಕ್ತಿಗಳದ್ದು. ಅಷ್ಟೇ ಅಲ್ಲ, ಮರಗಳೂ, ನಾಯಿಗಳೂ ಕೂಡ ವಿಶಿಷ್ಟವಾದದ್ದು. ಯಥಾದೃಷ್ಟಿಯ (perspective) ರೂಪಣ ಈ ವೆನಿಶಿಯನ್ ಶೈಲಿಯಲ್ಲಿ ಬಹುಮುಖ್ಯ.

ಈ ವೆನಿಶಿಯನ್ ಚಿತ್ರಗಳು ಕೇವಲ ವಿವರಣೆಯ ಸಲುವಾಗಿ ಚಿತ್ರಿಸಿದ್ದಲ್ಲ. ಅವುಗಳಿಗೆ ಕಲಾಲೋಕದಲ್ಲಿ ತಮ್ಮದೇ ಆದ ಪ್ರತ್ಯೇಕ ಸ್ಥಾನವಿದೆ. ವೆನಿಶಿಯನ್ ಕಲೆಯಲ್ಲಿ ನುರಿತ ಕಲಾವಿದರಿಂದ ರಚಿಸಲ್ಪಟ್ಟ ಈ ಭಾವಚಿತ್ರಗಳು ಎಷ್ಟು ನೈಜವಾಗಿದೆಯೆಂದರೆ ಆ ಚಿತ್ರಗಳನ್ನು ನೋಡಿದ ತಕ್ಷಣವೇ, ಆ ಭಾವಚಿತ್ರದಲ್ಲಿರುವ ವ್ಯಕ್ತಿ ಯಾರೆನ್ನುವುದನ್ನು ಗುರುತಿಸಬಹುದು.

ಇದೇಕೆ ಪಾಷಂಡವಾದವಾಗಬೇಕು? ಮೊದಲನೆಯದಾಗಿ ಇಸ್ಲಾಂ ರೂಪ ನಿಷ್ಕರ್ಷೆಯನ್ನು ಒಪ್ಪಿಕೊಳ್ಳುವುದಿಲ್ಲ. ಈ ಸೂಕ್ಷ್ಮ ರೂಪಗಳನ್ನು ಅದು ಒಪ್ಪಿಕೊಂಡಿದ್ದರೆ ಅದು ಒಂದು ಇಡೀ ವರ್ಗಕ್ಕೆ ಸಂಬಂಧಿಸಿದೆ (generic) ಎಂಬ ಕಾರಣದಿಂದ ಮಾತ್ರ. ಅಂದರೆ, ಎಲ್ಲವೂ ಒಂದೇ ತೆರನಾಗಿ ರಚಿಸಲ್ಪಟ್ಟು, ಯಾವುದರಲ್ಲೂ ಪ್ರತ್ಯೇಕ ವೈಶಿಷ್ಟತೆ ಇರಬಾರದು. ಇವು ತತ್ವಪಾಠಗಳಿಗೆ ಅಧೀನವಾಗಿ, ಕೇವಲ ಅಲಂಕಾರಿಕ ಮಾತ್ರವಾಗಿರಬೇಕು. ಹಾಗಲ್ಲದೇ ವ್ಯಕ್ತಿಗಳನ್ನಾಗಲೀ, ವಸ್ತುಗಳನ್ನಾಗಲೀ, ಈ ಟೆಕ್ಸ್ಟ್‌ಗಳ ಹಂಗಿಲ್ಲದೇ ಪ್ರತ್ಯೇಕವಾಗಿಯೇ ಚಿತ್ರಿಸಿದರೆ ಅವಕ್ಕೆ ಮೂರ್ತಿರೂಪದ ಸ್ಥಾನ ಕೊಟ್ಟಂತಾಗುತ್ತದೆ. ಆದರೆ ವೆನಿಶಿಯನ್ ಶೈಲಿಯಲ್ಲಿ ಚಿತ್ರದ ಪರ್ಸ್ಪೆಕ್ಟಿವ್ ಬಹುಮುಖ್ಯ. ಈ ಚಿತ್ರಪ್ರಕಾರದಲ್ಲಿ ದೂರದಲ್ಲಿರುವ ಮಸೀದಿಯು ಎದುರಿಗಿರುವ ಮನುಷ್ಯನಿಗಿಂತಲೂ ಅಥವಾ ಅವನ ನಾಯಿಗಿಂತಲೂ ಚಿಕ್ಕದಾಗಿ ಕಾಣಿಸುತ್ತದೆ. ಇದನ್ನು ಸಂಪ್ರದಾಯಸ್ಥರು ಒಪ್ಪಿಕೊಳ್ಳಲು ಸಾಧ್ಯವೇ ಇಲ್ಲ. ಸಕಲ ಜೀವಜಡಗಳೂ, ಅಲ್ಲಾನ ದೃಷ್ಟಿಗೆ ಹೇಗೆ ಕಾಣಿಸುತ್ತವೆಯೋ ಹಾಗೇ ಚಿತ್ರಸಬೇಕೇ ವಿನಃ ಮಾನವರ ಕಣ್ಣಿಗೆ ಕಾಣುವ ರೀತಿಯಲ್ಲಲ್ಲ ಎಂಬ ಆಕ್ಷೇಪಣೆ ಶುರುವಾಯಿತು.

ಯಾವುದಕ್ಕೂ ಜಗ್ಗದ ಈ ಸಾಂಪ್ರದಾಯಿಕತೆಯನ್ನು ಪಮುಕರು ಯಾವುದೇ ತೀರ್ಪಿಗೆ ಬರದೆ, ಪಕ್ಷಪಾತವಿಲ್ಲದೇ ಕೇವಲ ಅನುಕಂಪದಿಂದ ನೋಡುತ್ತಾರೆ, ಅದರ ಸೂಚ್ಯಾರ್ಥಗಳನ್ನು ತಿಳಿಸುತ್ತಾರೆ. ಸಾಂಪ್ರದಾಯಿಕತೆಗೂ, ಆಧುನಿಕತೆಗೂ ಇರುವ ಘರ್ಷಣೆಯೇ ಈ ಕಾದಂಬರಿಯ ಕೇಂದ್ರ ವಸ್ತು. ಈ ಸೂಕ್ಷ್ಮ ರೂಪ ಕಲಾವಿದರೂ ಕೂಡ ಎಷ್ಟಾದರೂ ಮನುಷ್ಯರೇ. ಇವರಿಗೆ ಈ ಕಲೆಯಲ್ಲಿ ಹಲವಾರು ವರ್ಷಗಳ ಕಠಿಣ ತರಪೇತಿಯಿದೆ. ಅವರ ಕಲೆಯಲ್ಲಿ ಅವರಿಗಿರುವ ಆಳವಾದ, ನಿಸ್ಸಂದೇಹವಾದ ಕಟ್ಟುಪಾಡು ಇದ್ದರೂ, ಹಣ, ಅಧಿಕಾರ, ಪ್ರೇಮ, ಇವುಗಳ ಆಕರ್ಷಣೆಗೆ ಸಿಕ್ಕಿ ಛಿದ್ರವಾಗಿದ್ದಾರೆ. ಕೆಲವು ಸೂಕ್ಷ್ಮ ರೂಪ ಕಲಾವಿದರು, ತಮ್ಮ ದೇಶವಾದ ಟರ್ಕಿಯನ್ನು ಬಿಟ್ಟು, ದೂರದ ಹಿಂದೂಸ್ತಾನದ ಸಾಮ್ರಾಟ್ ಅಕ್ಬರನ ಆಸ್ಥಾನದಲ್ಲಿ ಕೆಲಸಮಾಡಲು ಬಂದಿದ್ದಾರೆ. ಅನುಭವಸ್ಥ ಸೂಕ್ಷ್ಮ ರೂಪ ಕಲಾವಿದರಿಗೆ ಅಕ್ಬರ್ ಅಪಾರವಾಗಿಯೇ ಹಣ ಕೊಡುತ್ತಿದ್ದಾನೆ.

ಮುರತ್ ಸುಲ್ತಾನನ ಉದ್ದೇಶವೇನೆಂದರೆ, ತನ್ನ ಆಸ್ಥಾನದ ಅತ್ಯುತ್ತಮ ಕಲಾವಿದರಿಂದ ರಚಿಸಲ್ಪಟ್ಟ ಪುಸ್ತಕದ ಮೂಲಕ ಆಟೋಮನ್ ಸಾಮ್ರಾಜ್ಯದ ಪ್ರಾಬಲ್ಯವನ್ನು ಎತ್ತಿಹಿಡಿದು, ನಂತರ ಈ ಪುಸ್ತಕವನ್ನು ವೆನಿಶಿಯನ್ನರಿಗೇ, ಆಟೋಮನ್ ರಾಜರ ಅಧಿಕಾರವನ್ನು ಸ್ಥಾಪಿಸಲು ಸರಿಯಾದ ರೀತಿಯಲ್ಲಿ ಕಾಣಿಕೆಯಾಗಿ ನೀಡುವುದು ಎಂದು. ಈ ಉದ್ದೇಶದ ರೀತಿ ರಾಜಕೀಯ ದೃಷ್ಟಿಯನ್ನು ಪ್ರತಿನಿಧಿಸುವಲ್ಲಿ ಉಪಯುಕ್ತ ವಾಗುತ್ತದೆ. ಆದರೆ ಈ ವಿಧಾನ ಸೂಕ್ಷ್ಮರೂಪ ಕಲಾವಿದರ ಸಾಂಪ್ರದಾಯ ಬದ್ಧತೆಗೆ ವಿರೋಧವಾಗಿದೆ.

ಪಮುಕ್ ಕಥೆಯನ್ನು ಹೇಳುವ ರೀತಿ ಮನೋಜ್ಞವಾಗಿದೆ, ತುಂಬ ಪ್ರೀತಿಯಿಂದ ಒಂದು ಸುಂದರ ವಿಗ್ರಹ ಕಡೆದ ಹಾಗೆ ಅಥವಾ ಟರ್ಕಿಯ ಬೆಲೆಬಾಳುವ, ನೇಯ್ದ tapestryಯಂತೆ ದಟ್ಟವಾದ ಬಣ್ಣಗಳಿಂದ ಕೂಡಿದ ಪ್ರತಿಯೊಂದು ಎಳೆಯನ್ನೂ ಒಟ್ಟಿಗೆ ಜೋಡಿಸಿ ಹೆಣೆದಂತಿದೆ.

ಒಂದರೊಳಗೊಂದು ಅಡಕವಾಗಿರುವ ಕಥಾವಸ್ತು chinese box styleನಲ್ಲಿ ಸಾಗುತ್ತದೆ. ಕಥೆಯಲ್ಲಿ ಬರುವ ೧೩ ಪಾತ್ರಗಳೂ ಕಥೆ ಹೇಳುತ್ತವೆ, ಪ್ರತಿಯೊಂದು ಪಾತ್ರವೂ, (ಪ್ರತಿಯೊಂದು ಅಧ್ಯಾಯವೂ) ಹಿಂದಿನ ಪಾತ್ರ ಕಥೆಯನ್ನು ಎಲ್ಲಿಗೆ ಕೊನೆಗೊಳಿಸುತ್ತದೆಯೋ, ಅಲ್ಲಿಂದ ಪ್ರಾರಂಭಿಸಿ ಕಥೆಯನ್ನು ಮುಂದುವರೆಸುತ್ತದೆ. ಕಲಾವಿದರ ಕೊಲೆಗಳನ್ನು ತನಿಖೆ ಮಾಡುವ ಒಂಬತ್ತು ದಿನಗಳ ಕಾಲಾವಧಿಯಲ್ಲಿ ಕಥೆ ಸಾಗುತ್ತದೆ. ಕೊನೆಗೆ ಸುಲ್ತಾನನ ಅಧಿಕಾರಿಗಳನ್ನೂ ಸೇರಿ, ಅರಮನೆಯ ಜಗಲಿಗೇ ಈ ತನಿಖೆ ಬಂದು ನಿಲ್ಲುತ್ತದೆ. ಈ ಕಥೆಯ ಮುಖ್ಯ ಪಾತ್ರಗಳಲ್ಲಿ ಬ್ಲಾಕ್ ಮತ್ತು ಅವನ ಬಹುಕಾಲದ ಪ್ರೇಯಸಿ ಶೆಕೂರ ಇದ್ದಾರೆ. ಸತ್ತಿರುವ ಮತ್ತು ಬದುಕಿರುವ ಮಿನಿಯೇಚರ್ ಚಿತ್ರಕಾರರು, ಮೃತ್ಯು, ನಾಯಿ, ಕುದುರೆ, ಚಿನ್ನದ ನಾಣ್ಯ, ಮಿನಿಯೇಚರ್ ಚಿತ್ರಗಳ ಪ್ರಧಾನವಾದ ಬಣ್ಣ– ಕೆಂಪು (`My Name is Red') –ಎಲ್ಲವೂ ಇಲ್ಲಿ ಕಥೆಯನ್ನು ಹೇಳುತ್ತವೆ. ಕೊಲೆಗಾರನನ್ನು ಬಯಲು ಮಾಡಿ ಕಥೆ ಕೊನೆಗೊಳ್ಳುತ್ತದೆ. ಕೊನೆಗೂ ಇಲ್ಲಿ ಸಾಂಪ್ರದಾಯಿಕತೆಗೂ ಆಧುನಿಕತೆಗೂ ನಡುವಿನ ಸಂಘರ್ಷವಿದೆ ಆದರೆ ಪರಿಹಾರವಿಲ್ಲ. ಅದು ಸರಿಯೂ ಹೌದು ಎಂದು ಅನಿಸುತ್ತದೆ; ಮಿನಿಯೇಚರ್ ಕಲಾವಿದರಿಗೂ ಈ ಘರ್ಷಣೆಯನ್ನು ಪರಿಹರಿಸುವುದು ಸಾಧ್ಯವಿಲ್ಲ. ಈ ಕಲಾವಿದರು ತಮ್ಮ ಕಲಾ ಸಂಪ್ರದಾಯವನ್ನು ಚೆನ್ನಾಗಿ ಮೈಗೂಡಿಸಿಕೊಂಡಿದ್ದಾರೆ. ಆದರೆ ಕಲಾವಿದರಾಗಿ ಅವರಿಗೆ ಆ ಸಂಪ್ರದಾಯವನ್ನೇ ಮುರಿದು ಹೊಸ ದಾರಿಯಲ್ಲಿ ಹೋಗಬೇಕೆಂಬ ಹಂಬಲವೂ ತೀವ್ರವಾಗಿದೆ.

ಈ ಪುಸ್ತಕದ ಮತ್ತೊಂದು ಅಮೂಲ್ಯವಾದ ಅಂಗವೆಂದರೆ, ಕೊಲೆಯಾದ ಎನಿಷ್ಟೆಯ ಸಹಾಯಕ ಅಧಿಕಾರಿ ಬ್ಲಾಕ್, ಎನಿಷ್ಟೆಯ ಮಗಳಾದ ಶೆಕೂರಳನ್ನು

ಮದುವೆಯಾಗುವ ಉದ್ದೇಶದಿಂದ ಅವಳನ್ನು ಬೆಂಬತ್ತುವುದು. ಸುಲಭವಾಗಿ ಒಡಿತಕ್ಕೆ ಸಿಗದೆ, ಚಂಚಲವಾಗಿ, ಒಗಟಾಗಿ ತೋರುವ ಈ ಶೆಕೂರಳ ಪಾತ್ರ ಅಪಾರವಾಗಿ ಮನಸೆಳೆಯುತ್ತದೆ. ಇದು ಒಂದು ಉತ್ತಮ ಭಾವಚಿತ್ರದಂತೆ, ವಾಸ್ತವವಾಗಿ ಒಂದು ಪರ್ಶಿಯನ್ ಮಿನಿಯೇಚರ್ ಚಿತ್ರದಷ್ಟೇ ಸುಂದರವಾಗಿದೆ. ಬ್ಲಾಕ್ ರಕ್ತ ಮಾಂಸ ತುಂಬಿದ ಮನುಷ್ಯ, ಏಳುಬೀಳುವ ಮನಸ್ಸಿನ ತುಮುಲಗಳಿಗೆ ಸಿಕ್ಕಿದವ. ಸಹಜವಾಗಿಯೇ ಕೆಲವು ವೇಳೆ ಮೂರ್ಖನಾಗಿಯೂ ವರ್ತಿಸುತ್ತಾನೆ. ಅವನ – ಶೆಕೂರಳ ಸಂಬಂಧದ ಆಳವನ್ನು ಅಳೆಯುವುದೇ ಕಷ್ಟ, ಅದು ಅಭದ್ರ ಮತ್ತು ಅಸ್ಥಿರ. ಅವರ ಈ ಸಂಬಂಧ–ಸ್ವಂತಿಕೆಯಿಲ್ಲದ ಒಂದು ಮಿನಿಯೇಚರ್ ಮತ್ತು ಎಲ್ಲದರ ನಡುವೆ ಅತಿ ವಿಶೇಷವಾಗಿ ಎದ್ದುಕಾಣುವ ರೆನೈಸಾನ್ಸ್ ವರ್ಣಚಿತ್ರಕ್ಕೂ ಆಗುವ ಸಂಯೋಗದಂತಿದೆ. ಶೈಲೀಕರಿಸಿದ ಪ್ರತಿಮೆ ಮತ್ತು ವೈಯಕ್ತಿಕ ಭಾವಚಿತ್ರ, ಪೌರಸ್ತ್ಯ–ಪಾಶ್ಚಾತ್ಯ ಸಂಪ್ರದಾಯಗಳ ನಡುವಿನ ಮಿಳಿತವಾಗಿದೆ.

ಬ್ಲಾಕ್ ಮತ್ತು ಶೆಕೂರರ ಅಂತರಾಳದಲ್ಲಿ ಕಾಮನೆಗಳಿವೆ, ದುಃಖವಿದೆ. ಶೆಕೂರ ಹಲವು ವೈರುಧ್ಯದ ಆಸೆಗಳನ್ನು ಇಟ್ಟುಕೊಂಡು ಅದನ್ನು ಸಾಧಿಸುವುದಕ್ಕಾಗಿಯೇ ಬದುಕಿದ್ದಾಳೆ. ತನ್ನನ್ನು ಪ್ರೀತಿಸಿ ಪಾಲಿಸುವವನ ಜೊತೆಗೆ ಆಕೆಗೆ ಬೇರೆ ಗಂಡಸರ ಮೆಚ್ಚುಗೆಯೂ ಬೇಕು. ತನ್ನ ಇಬ್ಬರು ಮಕ್ಕಳನ್ನೂ ಒಪ್ಪಿಕೊಂಡು ಅವರನ್ನು ನೋಡಿಕೊಳ್ಳುವಂಥವನು ಬೇಕು. ಬ್ಲಾಕ್, ಸುಮಾರು ೨೦ ವರ್ಷಗಳಿಂದ ಅವಳ ಮೊದಲ ಮದುವೆಯಾದ ದಿನಗಳಿಂದಲೂ, ಅವಳನ್ನು ಬೆಂಬತ್ತಿದ್ದಾನೆ. ಅವನಿಗೆ ಶೆಕೂರಳ ತಂದೆಯ ಸಹಾಯದಿಂದ ತಾನೊಂದು ಅಧಿಕಾರ ಪಡೆಯಬಹುದು ಎಂಬ ಆಸೆಯಿದೆ. ಇಲ್ಲಿ ಗಮನಾರ್ಹವಾದುದೆಂದರೆ ಪ್ರೀತಿ–ಪ್ರೇಮಗಳ ವಿಚಾರದಲ್ಲಿ ಪಮುಕರ ದೃಷ್ಟಿಕೋನ. ಅವರಿಗೆ ಅಲ್ಲಲ್ಲಿ ಇದು ಪವಿತ್ರವೆನ್ನಿಸಿದರೂ, ಬಹುಮಟ್ಟಿಗೆ ವ್ಯಾವಹಾರಿಕ ಸಾಂಸಾರಿಕ ಒತ್ತಡದಿಂದ ಸಂಬಂಧಗಳು ರೂಪುಗೊಂಡಿದೆ.

'Red' ಪುಸ್ತಕದಲ್ಲಿ ಬರುವ ಪಾತ್ರಗಳು ಲವಲವಿಕೆಯಿಂದ ಕೂಡಿವೆ. ತಮ್ಮ ಆಕರ್ಷಕ ಗುಣಗಳಿಂದ ಕೂಡಿದ್ದರೂ ವಿವರಣೆಯ ಪ್ರಕ್ಷುಬ್ಧತೆಯಿಂದ ದೂರವಾಗಿಲ್ಲ. ಈ ಕಾದಂಬರಿಯ ಹರವು ವೆನಿಸ್ (Venice)ನಿಂದ ಹಿಂದೂಸ್ತಾನದವರೆಗೂ ವ್ಯಾಪಿಸಿದೆ. ಮನುಷ್ಯ ಸ್ಥಿತಿ–ಗತಿಗಳ ಹರವಂತೂ ಬಹಳ ವಿಸ್ತಾರವಾದದ್ದು. ಇಲ್ಲಿ ಎಲ್ಲರೂ ಸೋಲುತ್ತಾರೆ, ಕೆಲವೊಮ್ಮೆ ಗೆಲ್ಲುತ್ತಾರೆ ಕೂಡ. ಆ ಸೋಲಿನಲ್ಲಿಯೇ ಪಮುಕರ ಗೆಲುವಿದೆ. ರಹಸ್ಯ, ಸುಳ್ಳು, ಒಳಸಂಚು, ಗೊಂದಲಗಳ ಸಂಕೀರ್ಣ ತಳಹದಿಯ ಮೇಲೇ ನಿಂತಿದ್ದ ಆಟೊಮನ್ ಸಾಮ್ರಾಜ್ಯದ ಕಥೆಯನ್ನು ತೀರ ಸರಳೀಕರಿಸುವುದು ಅಸಾಧು.

ಇಲ್ಲಿ ಬಿಂಬಿತವಾಗಿರುವ ಉದ್ದೇಶಪೂರ್ವಕವಾದ ಅವಾಸ್ತವಿಕತೆಯ ಮಂಜುಕವಿದ ಪ್ರಪಂಚದಲ್ಲಿ ಓದುಗರೂ ಸ್ವಲ್ಪಕಾಲ ಕಳೆದುಹೋಗಿ ಸಂಕಟಪಡುತ್ತಾರೆ. ಆದರೆ ಪಮುಕರ

ಬರವಣಿಗೆಯ ಸೌಂದರ್ಯದಲ್ಲಿ ಗಾಳಿಯಲ್ಲಿ ತೇಲಿಸುವ ಹದವಿದೆ. ವಿರೋಧಾಭಾಸಗಳ ಹಗುರವಿದೆ, ಉಲ್ಲಾಸವಿದೆ. ಇಲ್ಲಿನ ಸುಳ್ಳುಗಳೂ ಮೌನವೂ ನಮಗೆ ಪ್ರಿಯವೇ ಆಗುತ್ತವೆ. ವಿಚಿತ್ರ ಎಂದರೆ ವ್ಯಕ್ತಿಗಳ ಖಾಸಗೀ ಸತ್ಯಗಳನ್ನು ಎತ್ತಿ ಹಿಡಿಯುತ್ತವೆ. ಸಂಪೂರ್ಣ ಸತ್ಯ ಎಲ್ಲೂ ಕಾಣದೆಯೂ ಹೋಗಬಹುದು.

*

ಈ ಎರಡು ಪುಸ್ತಕಗಳಿಂದ ನಾವು ತಿಳಿದಿದ್ದೇನು? ಇಬ್ಬರೂ ಲೇಖಕರ ಕಥಾಶೈಲಿಯನ್ನು ಗಮನಿಸೋಣ.

ಮೊದಲಿಗೆ ಕೇಂದ್ರ ಪಾತ್ರಗಳ ನಡುವಿನ ಸಂಬಂಧ. `Red' ಪುಸ್ತಕದಲ್ಲಿ, ಮುಖ್ಯ ಪಾತ್ರಗಳು ಅಪರಿಪೂರ್ಣವಾದರೂ ತಮ್ಮ ಜೀವನಮಾರ್ಗವನ್ನು ತಾವೇ ಕಂಡುಕೊಳ್ಳುತ್ತವೆ. ಭಿನ್ನ ಅಭಿರುಚಿಗಳಿದ್ದರೂ ಪರಸ್ಪರರು ಒಬ್ಬರನ್ನೊಬ್ಬರು ಮೆಚ್ಚಿ, ಜೊತೆಯಲ್ಲಿ ಬಾಳುವ ನಿರೀಕ್ಷೆಯಲ್ಲಿದ್ದಾರೆ. ಇಬ್ಬರ ಉದ್ದೇಶಗಳೇ ಬೇರೆ. ಒಬ್ಬರಿಗೊಬ್ಬರು ಪ್ರಾಮಾಣಿಕವಾಗಿ ಕೂಡ ಇಲ್ಲ. ಆದರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಾರೆ. ಆದರೆ 'ಆವರಣ'ದ ಲಕ್ಷ್ಮಿಗೆ ಜೀವನದ ಅಪೂರ್ಣತೆಯನ್ನು ಒಪ್ಪಿಕೊಂಡು ಬದುಕಲಾಗಿಲ್ಲ. ಅವಳೊಬ್ಬ ಆದರ್ಶವಾದಿ, ಸತ್ಯವನ್ನು ಹುಡುಕುವ ಯತ್ನದಲ್ಲಿ ತನ್ನೆಲ್ಲ ಸರ್ವಸ್ವವನ್ನೂ ಬಲಿಗೊಟ್ಟಿದ್ದಾಳೆ. ಅವಳ ಪಾತ್ರ ಕೇವಲ ಒಂದೇ ಆಯಾಮದ್ದು (one-dimensional). ಅಮೀರನ ಪಾತ್ರವಂತೂ ತೀರ ಅಸಹಜವಾಗಿದೆ. ಹಾಗೆ ನೋಡಿದರೆ ಮತೀಯ ಆಚಾರಪದ್ಧತಿಗಳನ್ನು ಬಹಿಷ್ಕರಿಸಿ, ಲಕ್ಷ್ಮಿಯನ್ನು ಮದುವೆಯಾದವನು, ಮದುವೆಯಾದ ತಕ್ಷಣವೇ ಮತೀಯಸ್ಥನಾಗುವ, ಕಡ್ಡಾಯವಾಗಿ ಆಚಾರದಲ್ಲಿ ತೊಡಗುವ ಅಮೀರನಂತೆ ಯಾರಾದರೂ ಇರುತ್ತಾರೆ ಎಂದು ನಂಬುವುದೇ ಕಷ್ಟ.

ನಮ್ಮೆಲ್ಲರಂತೆ ಈ ಪಾತ್ರಗಳೂ ಘರ್ಷಣೆಗಳಿಂದ ತುಂಬಿರುವ ಪ್ರಪಂಚದಲ್ಲಿಯೇ ಬದುಕಬೇಕು ಮತ್ತು ಈ ಪ್ರಪಂಚದಲ್ಲಿಯೇ ಸಮಾಧಾನವನ್ನು ಕಾಣಬೇಕು. `Red' ಪುಸ್ತಕದಲ್ಲಿ ಬರುವ ಮಿನಿಯೇಚರ್ ಕಲಾವಿದರೂ ಇದರಿಂದ ಹೊರತಾಗಿಲ್ಲ. ಆದರೂ ಪ್ರತಿಯೊಂದು ಪಾತ್ರವೂ ಅತಿ ಸೂಕ್ಷ್ಮವಾಗಿ ನಿರೂಪಿತವಾಗಿವೆ. ಎಲ್ಲರೂ ರಕ್ತಮಾಂಸ ತುಂಬಿದ ಮನುಷ್ಯರೇ. ಪ್ರೇಮ, ಹಣ, ಕೀರ್ತಿ ಇವೇ ಹಲವಾರು ಒತ್ತಡಗಳು ಅವರ ಮೇಲೆ ಸದಾಕಾಲ ಇದ್ದೇ ಇವೆ. ಪ್ರತಿಯೊಬ್ಬರೂ ತಮಗೆ ಬೇಕಾದ ಹಾಗೆ ತಮ್ಮ ಜೀವನವನ್ನು ರೂಪಿಸಿಕೊಂಡಿದ್ದಾರೆ ಮತ್ತು ತಮ್ಮ ನಿರ್ಧಾರಕ್ಕೆ ಬದ್ಧರಾಗಿದ್ದಾರೆ. ಈ ಸಂಘರ್ಷವನ್ನು ನಿರುದ್ವಿಗ್ನವಾಗಿ ಪಮುಕರು ನಿರೂಪಿಸುತ್ತಾರೆ. ಅವರಿಗೆ ಜೀವನವೆಂಬುದು ಸಡಗರದ ಉತ್ಸವ. ಅದರಲ್ಲಿ ಓದುಗನನ್ನೂ ಕರೆದೊಯ್ಯುತ್ತಾರೆ.

ಪಮುಕರ 'Red'ಗೆ ಹೋಲಿಸಿದಲ್ಲಿ 'ಆವರಣ'ದಲ್ಲಿ ಬರುವ ಪಾತ್ರಗಳು ತೀರ ಏಕದೃಷ್ಟಿಯಿಂದ ಕೂಡಿ, ಪೇಲವವಾಗಿ ಕಾಣುತ್ತವೆ. ಪ್ರೊ. ಶಾಸ್ತ್ರಿಯ ಪಾತ್ರವಂತೂ –

ಭೈರಪ್ಪನವರು ವಿಪರೀತ ಶ್ರಮದಿಂದ ರಚಿಸಿದ ಭಾರತದ ಪ್ರಗತಿಪರ ಪ್ರಾಜ್ಞನೊಬ್ಬನ ವಿಕಟಚಿತ್ರ (caricature)ದಂತೆ ಕಾಣುತ್ತದೆ. ಲಕ್ಷ್ಮಿಯ ಬಾಹ್ಯ ಪ್ರಪಂಚ ತೀರ ಭಾವಶೂನ್ಯವಾಗಿದೆ. ಋಷಿಯಂತೆ 'ಸತ್ಯ'ದ ಕಡೆ ತನ್ನೆಲ್ಲ ಗಮನವನ್ನು ಕೇಂದ್ರೀಕರಿಸುವ ಅವಳ ಪಾತ್ರ ಯಾವ ರೀತಿಯಲ್ಲಿಯೂ ವಾಸ್ತವಪ್ರಜ್ಞೆಯನ್ನು ಬಿಂಬಿಸುವುದಿಲ್ಲ.

ಇನ್ನು, ಎರಡೂ ಕಾದಂಬರಿಗಳ ಮುಖ್ಯ ಅಂಶವೆಂದರೆ ಕಲಾವಿದರು ಮತ್ತು ಅವರ ಸೃಜನಶೀಲತೆಯ ನಡುವೆ ಇರುವ ಸಂಬಂಧ.

`Red' ಪುಸ್ತಕದಲ್ಲಿ ನಾವು ಕಾಣುವುದು ಸೃಜನಶೀಲತೆಯ ಸಂಭ್ರಮ. ಕಲೆಯ ಪರಿಕಲ್ಪನೆ. ಅದಕ್ಕೆ ಒಂದು ರೂಪುಕೊಡುವ ವಿಧಾನ. ಬಹಳಮಟ್ಟಿಗೆ ವೈಯಕ್ತಿಕ ಎನ್ನಿಸುವ ಈ ಕ್ರಿಯೆಯಲ್ಲಿ ಕಲಾವಿದ ಅನುಭವಿಸುವ ಆಂತರಿಕ ಆಂದೋಳನ – ಎಲ್ಲವನ್ನೂ ಸ್ಪಷ್ಟವಾಗಿ, ಭಾವಪೂರ್ಣವಾಗಿ ಪಮುಕರು ವಿವರವಾಗಿ ಬರೆದಿದ್ದಾರೆ. ಈ ಮಿನಿಯೇಚರ್ ಕಲಾವಿದರು ತರಪೇತಿ ಪಡೆಯುವ ರೀತಿ. ಅವರು ಕಲಿತ ಕಲಾಮಾರ್ಗದ ವೈಶಿಷ್ಟ್ಯಗಳನ್ನು ತಮ್ಮ ಚಿತ್ರಗಳಲ್ಲಿ ಪ್ರತಿಬಿಂಬಿಸುವ ರೀತಿ (ಒಂದು ಎಲೆಯನ್ನು ಕೂಡ ಹೇಗೆ ಚಿತ್ರಿಸಬೇಕೆನ್ನುವ ವಿವರದ ವರ್ಣನೆ ಇದೆ!), ಈ ಸಂಪ್ರದಾಯ ಒಂದು ತಲೆಮಾರಿನಿಂದ ಮುಂದಿನ ತಲೆಮಾರಿಗೆ ಹರಿಯುವ ರೀತಿ – ಎಲ್ಲವನ್ನೂ ಪಮುಕರು ಸಂಪೂರ್ಣವಾಗಿ ವಿವರಿಸುತ್ತಾರೆ. ಕಲಾವಿದ ತನ್ನ ಸ್ವಂತ ಬದುಕಿನಲ್ಲಿ ಅಪರಿಪೂರ್ಣನಾದರೂ, ಅವನಿಗಿರುವ ಕಲ್ಪನಾಶಕ್ತಿಯ ಪ್ರಭೆಯಿಂದಲೇ ಅವನು ಮಿಕ್ಕವರು ಏರಲಾರದ ಆತ್ಮಾನುಭವದ, ಆತ್ಮಸಾಕ್ಷಾತ್ಕಾರದ ಸ್ಥಾನಕ್ಕೆ ಏರುತ್ತಾನೆ. ಕಲೆಯ ಸೃಜನಶಕ್ತಿಯ ಅನುಭವವೇ ಪಮುಕರ ಕಾದಂಬರಿಯ ಕೇಂದ್ರ (ಅವರದೇ ಮತ್ತೊಂದು ಕಾದಂಬರಿಯಾದ `Snow'ದಲ್ಲಿಯೂ ನಿಜವಾದ ಕವಿಗೆ ತನ್ನ ಸೃಜನಶಕ್ತಿಯಿಂದ ಉಂಟಾಗುವ ಹರ್ಷವನ್ನು ಇವರು ಚಿತ್ರಿಸುತ್ತಾರೆ).

ಈ ಪುಸ್ತಕದಲ್ಲಿ ಮಿನಿಯೇಚರ್ ಕಲಾವಿದರಲ್ಲಿ ಪ್ರಮುಖನಾದ ಮಾಸ್ಟರ್ ಉಸ್ಮಾನ್ ಕೊಡುವ ಉಪನ್ಯಾಸ ಬಹಳ ಸುಂದರವಾಗಿದೆ. ಇಸ್ಲಾಂ ಪುರಾಣಕಥೆಯಲ್ಲಿ ಹುಸ್ರೆವ್ ಮತ್ತು ಶಿರೀನ್ ಎಂಬ ಪ್ರೇಮಿಗಳ ಕಥೆಯಿದು. ಇವರ ಸೂಕ್ಷ್ಮಾಕಾರ ಪ್ರತಿಮೆಗಳನ್ನು ಪ್ರೀತಿಯಿಂದ ವಿವರಿಸುವ ರೀತಿ ಅತಿ ರಮ್ಯವಾಗಿದೆ, ಕಥೆಯೇ ಎದ್ದುಬರುವ ಹಾಗಿದೆ. 'ಈ ಸೂಕ್ಷ್ಮಚಿತ್ರವನ್ನು ನೋಡಿದರೆ, ಈ ಪ್ರೇಮಿಗಳು ಅದರ ಕಲಾವಿದ ಅಕ್ಕರೆಯಿಂದ ಚಿತ್ರದ ಒಳ, ಹೊರ ಪದರಗಳ ಮೇಲೆ ಲೇಪಿಸಿದ ಬಣ್ಣಗಳ ಕಾಂತಿಯಲ್ಲಿ ಎಂದೆಂದಿಗೂ ನಿಂತಿರುತ್ತಾರೆ ಎನ್ನಿಸುತ್ತದೆ. ಅವರ ಭಂಗಿಗಳನ್ನು ಗಮನಿಸಿ. ಅವರ ಮುಖಗಳು ಸ್ವಲ್ಪ – ಅತಿಸ್ವಲ್ಪ – ಒಬ್ಬರನ್ನೊಬ್ಬರು ನೋಡುತ್ತಿವೆ; ಆದರೆ ಅವರ ದೇಹಗಳು ಅರ್ಧ ನಮ್ಮ ಕಡೆಗೆ ತಿರುಗಿವೆ – ತಾವು ಒಂದು ಚಿತ್ರದಲ್ಲಿದ್ದೇವೆ, ವೀಕ್ಷಕರಿಗೆ ತಾವು

ಕಾಣಬೇಕೆಂದು. ಅದಕ್ಕೇ ಅವರು ನಾವು ನಮ್ಮ ಸುತ್ತಮುತ್ತ ಕಾಣುವಂಥ ವ್ಯಕ್ತಿಗಳ ಹಾಗೆ ಕಾಣುವುದಿಲ್ಲ: ಅದಕ್ಕೆ ಬದಲಾಗಿ, ಅವರು ಅಲ್ಲಾನ ನೆನಪಿನಿಂದ ಇಳಿದು ಬಂದವರ ಹಾಗೆ ಕಾಣುತ್ತಾರೆ...' (`It's as if the lovers are to remain here eternally within the light emanating from the painting's texture, skin and subtle colors which were applied lovingly by the miniaturist. You can see how their faces are turned ever so lightly toward one another while their bodies are half-turned toward us - for they know they're in a painting and thus visible to us. This is why they don't try to resemble exactly those figures which we see around us. Quite to the contrary, they signify that they've emerged from Allah's memory').

ಪೌರಸ್ತ್ಯ ಕಲಾಕಲ್ಪನೆಯ ಬಗ್ಗೆ ಕೆಲವು ಕುತೂಹಲಕಾರಿಯಾದ ವಿವರಣೆಗಳಿವೆ. ಅದರ ಪ್ರಕಾರ ಎಲ್ಲ ಚಿತ್ರಕಲೆಯೂ ನೆನಪಿನಿಂದ ಮೂಡಿಬರುವ ಪೂರ್ವನಿಶ್ಚಿತ ಕಾರ್ಯ. ನಿಷ್ಕಳಂಕ ಕಲೆಯನ್ನು ಕಾರ್ಯರೂಪಕ್ಕೆ ತರಬೇಕಾದರೆ, ಬಾಹ್ಯ ಪ್ರಪಂಚದ ಸೆಳೆತ, ಚಪಲತೆಗೆ ಅವಕಾಶ ಕೊಡದ ಸ್ಥಿತಿ ಅವಶ್ಯಕ. ಅದಕ್ಕೆ ಅಂಧತ್ವವೇ ಆದರ್ಶ ಸ್ಥಿತಿ.

ಭೈರಪ್ಪನವರು ಕಲಾವಿದನನ್ನು ಕಾಣುವ ರೀತಿಯೇ ಬೇರೆ. ಅವರ ವಿಚಾರಧಾರೆ– ನೀತಿ ಮತ್ತು ಸಾಮಾಜಿಕ ಬದ್ಧತೆಯನ್ನು ಕುರಿತದ್ದು. ಕಲಾವಿದ ಮೊಟ್ಟ ಮೊದಲನೆಯದಾಗಿ ಸತ್ಯವನ್ನು ಹುಡುಕಬೇಕು. ಆ ಸತ್ಯ ಎಂಥದೇ ಆಗಿರಲಿ, ಆ ಸತ್ಯಕ್ಕೆ ಬದ್ಧನಾಗಬೇಕು (ಎಷ್ಟೋ ಬಾರಿ ಈ ಸತ್ಯವೆನ್ನುವುದು Rashomon ಚಿತ್ರದಲ್ಲಿ ಕಾಣುವಂತೆ ಸಾಪೇಕ್ಷವಾದದ್ದು). ಅವರ ಕಲಾವಿದ ಒಬ್ಬ ಋಷಿಯಿದ್ದಂತೆ; ಎವೆಯಿಕ್ಕದ, ಸಹಾನುಭೂತಿಯೇ ಇಲ್ಲದ ಕಠಿಣ ಪ್ರೇಕ್ಷಕ ಹಾಗು ವಿಶ್ಲೇಷಕ. ಈ ದೃಷ್ಟಿಯಿಂದ ಪಮುಕರ ಕಲಾವಿದ 'ಕಲೆಗಾಗಿ ಕಲೆ' (art for art's sake) ಸೃಷ್ಟಿಸಿದರೆ, ಭೈರಪ್ಪನವರ ಕಲಾವಿದ ಸಾಮಾಜಿಕ ಜವಾಬ್ದಾರಿ ಹೊತ್ತವ.

ಹೀಗೆ ಎರಡೂ ಲೇಖಕರು ಓದುಗರೆದುರಿಗೆ ತಮ್ಮ ವಿಚಾರಧಾರೆಯನ್ನು ಮಂಡಿಸುತ್ತಾರೆ. ಅವರ ಪಾತ್ರಗಳು ನಮ್ಮೆದುರಿಗೆ ಅರ್ಧಮಾತ್ರ ತಿರುಗಿವೆ. ಅವುಗಳ ಪ್ರಪಂಚದಲ್ಲಿ, ಆಲೋಚನೆಯಲ್ಲಿ ನಮ್ಮನ್ನು ಇಣುಕಲು ಬಿಟ್ಟಿವೆ.

ಅವರಿಬ್ಬರ ಸಾಹಿತ್ಯಿಕ ಶೈಲಿಯಲ್ಲಿ ಹೋಲಿಕೆ ಇದೆ. ಕಥೆ ಒಟ್ಟೊಟ್ಟಿಗೇ ಸಂಭವಿಸುವಂತೆ ಹೆಣೆದಿರುವ ಎಳೆಗಳಲ್ಲಿ ಸಾಮ್ಯವಿದೆ. ಪಮುಕರ ಕಥೆ ೯ ದಿನಗಳ ಅವಧಿಯಲ್ಲಿ ನಡೆಯುತ್ತದೆ. ಕಥಾವಸ್ತುವಿನ ಕಾಲ ೧೬ನೆಯ ಶತಮಾನದ ಉತ್ತರಾರ್ಧ.

ಭೈರಪ್ಪನವರ ಕಾದಂಬರಿಯ ಕಾಲ ವರ್ತಮಾನದ ಪಲವಾರು ದಶಕಗಳನ್ನೂ ಒಳಗೊಂಡು ಹಿಂದೆ ಸರಿಯುತ್ತ ೧೬-೧೭ನೆಯ ಶತಮಾನವನ್ನು ಮುಟ್ಟುತ್ತದೆ, ಕಥೆಯ ಎಳೆಗಳು ಸಮಾನಾಂತರವಾಗಿ ಸಾಗುತ್ತವೆ. ಪಮುಕರು ತಮ್ಮ ಕಥಾವಸ್ತುವಿನ ವಿವಿಧ ಭಾಗಗಳನ್ನು ಜೋಡಿಸುವ ರೀತಿ ಸುಲಭವಾಗಿದೆ, ಭೈರಪ್ಪನವರಲ್ಲಿ ಅದು ಅಷ್ಟಾಗಿ ಕಾಣುವುದಿಲ್ಲ. ಪಮುಕರು ಆಟೊಮನ್ ಸಾಮ್ರಾಜ್ಯದ ಕಾಲಾನುಕ್ರಮ ದಾಖಲೆ ಮತ್ತು ಭೂಪಟವನ್ನು ಕೊಟ್ಟಿದ್ದಾರೆ; ಕಥೆಯನ್ನು ಅರ್ಥಮಾಡಿಕೊಳ್ಳಲು ಇದು ಸಹಾಯಕ. ಭೈರಪ್ಪನವರು ೧೩೬ ಉಲ್ಲೇಖದ ಪಟ್ಟಿ ನೀಡಿದ್ದಾರೆ. ಅದು ಚಾರಿತ್ರಿಕ ಆಧಾರಗಳಿಂದ ತುಂಬಿದೆ. ಎರಡೂ ಲೇಖಕರು ತಮ್ಮ ಕಥೆಗಳಲ್ಲಿ ಬರುವ ಘರ್ಷಣೆಗಳನ್ನು ಅರ್ಥಮಾಡಿಕೊಳ್ಳಲು ಚರಿತ್ರೆಯ ಮೊರೆ ಹೋಗುತ್ತಾರೆ; ವಿಭಿನ್ನ ಅನುಭವಗಳನ್ನು ಪಡೆದು ಹೊರಬರುತ್ತಾರೆ.

ಪಮುಕರ ಅನುಭವ ವೈಭವದಿಂದ ಕೂಡಿದ ಜೀವನ ಸಂಭ್ರಮ. ಅವರು ತಮ್ಮ ಪಾತ್ರಗಳನ್ನು ಅನುಕಂಪಪೂರಿತ ದೃಷ್ಟಿಯಲ್ಲಿ ಕಾಣುತ್ತಾರೆ. ಜೀವನವೆನ್ನುವುದು ಒಂದು ಸಂಭ್ರಮದ ಉತ್ಸವ ಎಂದೇ ಅವರು ಭಾವಿಸುತ್ತಾರೆ. ಈ ಕಾದಂಬರಿ ಕೇವಲ ಚಿಂತನೆಗಳನ್ನಷ್ಟೇ ನಮ್ಮ ಮುಂದಿಡುವುದಿಲ್ಲ. ಮಾನವೀಯತೆ, ಚತುರತೆ, ಬುದ್ಧಿವಂತಿಕೆ, ಕುಟಿಲೋಪಾಯಗಳು ಎಲ್ಲವೂ ಇಲ್ಲಿ ಅಕ್ಷರಗಳ ಬಾಣಬಿರುಸಿನ ಉಜ್ವಲಪ್ರದರ್ಶನದಲ್ಲಿ ಪ್ರದರ್ಶಿತಗೊಂಡಿವೆ. ಪಶ್ಚಿಮದ್ದಾಗಲೀ, ಪೂರ್ವದ್ದಾಗಲೀ, ಒಳ್ಳೆಯದೋ, ಕೆಟ್ಟದ್ದೋ, ಈ ಚಿಂತನೆಗಳು ಬದುಕಿನಾಳಕ್ಕೆ ಇಳಿದಾಗ ಕ್ರೌರ್ಯ ಮತ್ತು ಭಾವೋದ್ರೇಕಗಳೂ ಜೀವತುಂಬಿ ನಿಲ್ಲುತ್ತವೆ. 'Red' ಪುಸ್ತಕ ಮಾನವ ಸ್ಥಿತಿಯ ಕ್ಷುದ್ರತೆ ಮತ್ತು ಭವ್ಯತೆಗಳ ಸಂಪೂರ್ಣ ಚಿತ್ರಣ.

ಭೈರಪ್ಪನವರ ಅನುಭವ ಒಬ್ಬ ಯೋಗಿಯ ನಿಷ್ಠುರ ಸತ್ಯಾನ್ವೇಷಣೆಯದು. ಅಥವಾ ರೋಗದ ಗುಣಲಕ್ಷಣಗಳನ್ನು ಹಿಡಿದು ಖಾಯಿಲೆಯ ಕಾರಣ ಹುಡುಕುತ್ತ ಹೋಗುವ ನಿರ್ಭಾವುಕ ವೈದ್ಯನದ್ದು. ಪಮುಕರ ರಕ್ತ ಮಾಂಸಗಳಿಂದ ತುಂಬಿದ, ಜೀವಂತ ಪಾತ್ರಗಳಿಗೆ ಹೋಲಿಸಿದರೆ, 'ಆವರಣ'ದ ಪಾತ್ರಗಳು ಕೇವಲ ಸಿದ್ಧಾಂತಗಳ ಚಿಹ್ನೆಯಾಗಿ, ಬರಿಯ ಹಂದರವಾಗಿ ಉಳಿದುಬಿಡುತ್ತವೆ.

ಭೈರಪ್ಪನವರು ಇಸ್ಲಾಂ ಮತವನ್ನು ವಾಸ್ತವಿಕ ದೃಷ್ಟಿಕೋನದಿಂದ ಮಾತ್ರ ನೋಡುತ್ತಾರೆ. ಅವರ ಪಾತ್ರಗಳು ಮೂಲತಃ ತಮ್ಮ ಮತದ ಅನನ್ಯತೆಯ ಆಧಾರದಿಂದ ರೂಪುಗೊಂಡಿವೆ. ಇಸ್ಲಾಂ ಮತದ ಮೂಲಭೂತ ತಪ್ಪುಗಳನ್ನು ಎಲ್ಲ ಹಂತಗಳಲ್ಲಿಯೂ ಎತ್ತಿತೋರಿಸಿ, ಅದೇ ಆಧಾರದ ಮೇಲೆ ವ್ಯಕ್ತಿಯೊಬ್ಬನ ಗುಣದೋಷಗಳನ್ನೂ ನಿರ್ಧರಿಸಿಬಿಡುತ್ತದೆ, ಆವರಣ. ಚಾರಿತ್ರಿಕ ಸತ್ಯಕ್ಕೆ ನಿಷ್ಠವಾಗಿರುವಲ್ಲಿ ಆವರಣದ ಶಕ್ತಿ ಇದ್ದರೂ, ಕೇವಲ

ಧರ್ಮದ ಮೇಲೆಯೇ ತನ್ನೆಲ್ಲ ಗಮನವನ್ನು ಕೇಂದ್ರೀಕರಿಸಿ ಇತರ ಪ್ರಭಾವಗಳು ಜನರ ಜೀವನದ ಮೇಲೆ ಬೀರುವ ಪರಿಣಾಮಗಳನ್ನು ಗಮನಿಸದಿರುವುದು ಅದರ ದುರ್ಬಲತೆಯಾಗಿದೆ. ಪಮುಕರು ಅವರ ಪಾತ್ರಗಳನ್ನು ವಿಶಾಲವಾದ ಹರಹಿನಲ್ಲಿ ನೋಡುತ್ತಾರೆ. ಪಾತ್ರಗಳ ಮತದ ಅನನ್ಯತೆಯೇ ಅವುಗಳ ವ್ಯಕ್ತಿತ್ವದ ಅಗತ್ಯವಾದರೂ, ಅದಷ್ಟೇ ಪಾತ್ರಗಳ ಜೀವಾಳವಲ್ಲ.

**ಭಾಗ ೨ – ಧರ್ಮ ಮತ್ತು ರಾಜಕೀಯ:** ಉತ್ತರ ಆಧುನಿಕತಾ ಸಿದ್ಧಾಂತ: (Post-Modern) 'ನಾಗರಿಕತೆಗಳ ಸಂಘರ್ಷ' (A Clash of Civilizations)

ಇನ್ನು ಈ ಧಾರ್ಮಿಕ ಘರ್ಷಣೆಯನ್ನು ರಾಜಕೀಯ ದೃಷ್ಟಿಯಿಂದ ನೋಡಿದರೆ, ಇದರಲ್ಲಿ ಪ್ರಮುಖವಾಗಿ ಎರಡು ಆಯಾಮಗಳನ್ನು ನಾವು ಗುರುತಿಸಬಹುದು. ಮೊದಲನೆಯದು ನಾಗರಿಕತೆಗಳ ಸಂಘರ್ಷ. ಎರಡನೆಯದು ಇಸ್ಲಾಂ ಮತ್ತು ಇತರ ಧರ್ಮಗಳ (ಮುಖ್ಯವಾಗಿ ಕ್ರೈಸ್ತಧರ್ಮ) ನಡುವಿನ ಘರ್ಷಣೆ. ಈ ಎರಡೂ ವಿಚಾರಗಳಲ್ಲಿ ನಡೆಯುತ್ತಲೇ ಇರುವ ಪ್ರಾಜ್ಞರ ವಾದಗಳನ್ನು ಸಂಕ್ಷಿಪ್ತವಾಗಿ ಗಮನಿಸುವುದು ಪ್ರಸ್ತುತ.

ಪ್ರಖ್ಯಾತ ರಾಜಶಾಸ್ತ್ರಜ್ಞ ಫ್ರಾನ್ಸಿಸ್ ಪುಕುಯಾಮ, 'The End of History and the Last Man' (೧೯೯೨) ಎಂಬ ತಮ್ಮ ಪುಸ್ತಕದಲ್ಲಿ, ಚರಿತ್ರೆಯ ಅಂತ್ಯ, ಮತ್ತು ದೇಶಗಳ – ಸಿದ್ಧಾಂತಗಳ ನಡುವಿನ ಸಂಘರ್ಷಣೆಯ ಬಗ್ಗೆ ಚರ್ಚಿಸಿದ್ದಾರೆ. ಬಂಡವಾಳಶಾಹಿ (capitalism) ಮತ್ತು ಸಮತಾವಾದಗಳ (communism) ಮೂಲೋದ್ದೇಶಗಳ ನಡುವಿನ ಹೋರಾಟವೇ ಈ ಆಧುನಿಕ ಚರಿತ್ರೆ. ಸೋವಿಯಟ್ ಸಾಮ್ರಾಜ್ಯ ಕೊನೆಗೊಂಡಾಗ ಈ ಹೋರಾಟವೂ, ಹಠಾತ್ತಾಗಿ ಕೊನೆಗೊಂಡಿತು. ಅವರದೇ ಮಾತಿನಲ್ಲಿ 'ಪಶ್ಚಿಮದ ಉದಾರ ರಾಜ್ಯನೀತಿಗೆ (liberalism) ಇರಬಹುದಾದ ಎಲ್ಲ ಪರ್ಯಾಯಗಳ ಸಾಧ್ಯಾಸಾಧ್ಯತೆಯನ್ನು ಪರಿಶೀಲಿಸಿ, ಅದರ ಆಧಾರದ ಮೇಲೆ ಪಾಶ್ಚಿಮಾತ್ಯ ಕಲ್ಪನೆ, ಭಾವನೆಗಳ ವಿಜಯವನ್ನು ಜಗತ್ತು ಅರ್ಥಮಾಡಿಕೊಂಡಿದೆ ಎಂದು ಧಾರಾಳವಾಗಿ ಹೇಳಬಹುದು...'(That the world has seen the triumph of the West, of the Western idea, is evident first of all in the total exhaustion of viable systematic alternatives to Western liberalism...) ಅವರು ಚರಿತ್ರೆಯನ್ನು ಕಾಣುವುದು ಭೌತಿಕ, ಪ್ರಾಪಂಚಿಕ ಹೋರಾಟದಿಂದಲ್ಲ, ಸಿದ್ಧಾಂತಗಳ ಹೋರಾಟವಾಗಿ (an ideological struggle). ಮಾನವರ ಪ್ರಭುತ್ವದ ಸಿದ್ಧಾಂತಗಳ ವಿಕಸನದ ಅಂತಿಮ ಘಟ್ಟವೆಂದರೆ ವಿಶ್ವವ್ಯಾಪಿಂತ ಪಾಶ್ಚಾತ್ಯ ಉದಾರ ರಾಜನೀತಿಯ ಸ್ಥಾಪನೆಯೇ ಎನ್ನುತ್ತಾರೆ (The end of history as such; that is, the end of point of mankind's ideological evolution and the univer-

salization of Western democracy as the final form of human government.). ಅವರ ಪ್ರಕಾರ, ಪಾಶ್ಚಾತ್ಯ ಭಾವನೆ, ಸಿದ್ಧಾಂತಗಳ ವಿಜಯದ ಪರಿಣಾಮಗಳು ಇನ್ನೂ ಎಲ್ಲ ದೇಶಗಳಲ್ಲಿ ಕಂಡಿಲ್ಲವಾದರೂ, ಆದರ ಸೂಚನೆ ಚೀನಾದಲ್ಲಿನ ಕಲರ್ ಟೆಲಿವಿಶನ್; ಜಪಾನೀ ಉಪಾಹಾರ ಗೃಹಗಳಲ್ಲಿ ಕೇಳಿಬರುವ ಬೀಥೋವನ್; ಪ್ರಾಗ್, ರಂಗೂನ್, ಟೆಹೆರಾನ್‌ಗಳಲ್ಲಿ ಕೇಳುವ ರಾಕ್ ಸಂಗೀತ ಇಂಥವುಗಳಲ್ಲಿ ಕಾಣಬಹುದಾಗಿದೆ (...color televisions in China, Beethoven in Japanese restaurants, rock music enjoyed  in Prague, Rangoon and Teheran alike). ಫುಕುಯಾಮರ ಸಿದ್ಧಾಂತಗಳು ೧೯೮೦ರಲ್ಲಿ ರಾನಲ್ಡ್ ರೇಗನ್ ಆಡಳಿತದ ರಾಜನೀತಿ ಪಂಡಿತರ (policy makers) ಮೇಲೆ ಬಹಳಷ್ಟು ಪ್ರಭಾವ ಬೀರಿದ್ದವು. ಫುಕುಯಾಮ ನವಸಂಪ್ರದಾಯ ಪಕ್ಷದ (neo-conservatism) ಏರುವಿಕೆಯಲ್ಲಿ ಬಹು ಪ್ರಮುಖ ವ್ಯಕ್ತಿ: ರೇಗನ್ ಮತ್ತು ಬುಷ್ ಅಧ್ಯಕ್ಷತೆಗಳಲ್ಲಿ ಪಾಲುಗೊಂಡ ಹಲವಾರು ಮುಖ್ಯ ರಾಜಕೀಯ ವ್ಯಕ್ತಿಗಳು ಈ ಚಳುವಳಿಗೆ ಸೇರಿದವರೇ.

ಅಮೆರಿಕಾದ ರಾಜ್ಯನೀತಿ ಮತ್ತು ಇಸ್ಲಾಂನ ರಾಜಕೀಯ ಚಿಂತನೆಯ ಮೇಲೆ ಸಾಕಷ್ಟು ಪ್ರಭಾವ ಬೀರಿದ ಮತ್ತೊಬ್ಬ ಪರಿಣತ ಬರ್ನಾಡ್ ಲುಯಿಸ್. ಯೆಹೂದ್ಯ ತಂದೆ-ತಾಯಿಯರ ಮಗನಾಗಿ ಲಂಡನ್ನಿನಲ್ಲಿ ಜನಿಸಿದ ಇವರು, ಇಸ್ಲಾಂ ಮತ್ತು ಆಟೊಮನ್ ಸಾಮ್ರಾಜ್ಯದ ವಿಚಾರಗಳನ್ನು ಆತ್ಯಂತಿಕವಾಗಿ ಬಲ್ಲ ಪಶ್ಚಿಮದ ಪಂಡಿತ. ೧೯೯೦ರಲ್ಲಿ ಇವರು 'The Roots of Muslim Rage' ಎಂಬ ಮೂಲ ಪ್ರಬಂಧವನ್ನು 'Atlantic Monthly' ಪತ್ರಿಕೆಯಲ್ಲಿ ಪ್ರಕಟಿಸಿದರು. ಈ ಪ್ರಬಂಧದ ಮೂಲ ಪ್ರತಿಪಾದನೆ– ಮುಸ್ಲಿಮರ ಮೂಲ ಹೋರಾಟವಿರುವುದು 'ವಿಶ್ವಾದ್ಯಂತ ಪ್ರಸರಿಸುತ್ತಿರುವ ನಮ್ಮ ಯೆಹೂದಿ-ಕ್ರೈಸ್ತ ಪರಂಪರೆ, ನಮ್ಮ ಇಂದಿನ ಜಾತ್ಯತೀತ ಮನೋಧರ್ಮ ವಿರುದ್ಧವೇ' (...a rival against our Judeo-Christian heritage, our secular present, and the world-wide expansion of both). ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಇದು ಆಧುನಿಕತೆ ಮತ್ತು ಸರ್ವಧರ್ಮ ಸಮಾನತೆಯ (secularism) ವಿರುದ್ಧ ಇಸ್ಲಾಂ ಮತದ ಹೋರಾಟ, 'ಅದು ನಾಗರಿಕತೆಗಳ ಸಂಘರ್ಷಕ್ಕಿಂತ ಕಡಿಮೆಯಾದದ್ದಲ್ಲ' (...this is no less than a clash of civilizations.).

ಲುಯಿಸರನ್ನು ಎರಡನೆಯ ಮಹಾಯುದ್ಧದ ತರುವಾಯ ಬಂದ ಇಸ್ಲಾಂ ಮತ್ತು ಮಧ್ಯಪ್ರಾಚ್ಯದ ಇತಿಹಾಸಕಾರರಲ್ಲಿ ಅತ್ಯಂತ ಪ್ರಭಾವವುಳ್ಳವರು ಎಂದು ಗುರುತಿಸಿದ್ದಾರೆ. ಕ್ರೈಸ್ತ ಮತ ಮತ್ತು ಇಸ್ಲಾಂ ಮತದ ನಡುವಿನ ಹೋರಾಟ, ಇಸ್ಲಾಂ ಮತದಷ್ಟೇ ಹಳೆಯದೆಂದು ಲುಯಿಸ್ ವಾದಿಸುತ್ತಾರೆ. ಅವರ ಪ್ರಕಾರ ಇಸ್ಲಾಂ ಮತ್ತು ಮಧ್ಯಪ್ರಾಚ್ಯ ಬಹಳ ಹಿಂದುಳಿದಿರುವ, ಅವನತಿ ಹೊಂದುತ್ತಿರುವ

ಧರ್ಮ ಮತ್ತು ನಾಗರಿಕತೆ. ಈ ಅವನತಿಗೆ ಕಾರಣ ಇಸ್ಲಾಮಿನ ಧರ್ಮನಿಷ್ಠತೆ ಮತ್ತು ಮೂಲಭೂತವಾದ ಎಂಬುದು ಅವರ ದೃಷ್ಟಿ. ಆದರೆ ಕುತೂಹಲಕಾರಿಯಾದ ವಿರೋಧಿ ಇಸ್ಲಾಂ ಬೇರೆಯೇ ಹೇಳುತ್ತದೆ. ಅದರ ಪ್ರಕಾರ ಮಧ್ಯಪ್ರಾಚ್ಯ ಪ್ರದೇಶದ (ವಸಾಹತೋತ್ತರ ರಾಷ್ಟ್ರಗಳ) (post-colonial) ಕ್ಷೀಣ ಬೆಳವಣಿಗೆಗೆ ೧೯ನೆಯ ಶತಮಾನದಲ್ಲಿ ಯುರೋಪಿಯನ್ನರ ವಸಾಹತುಶಾಹಿ ಆಕ್ರಮಣವೇ (colonization) ಕಾರಣ.

ಲುಯಿಸ್ ೧೯೯೨ರಿಂದ ಅಮೆರಿಕದಲ್ಲಿ ನೆಲಸಿದ್ದಾರೆ. ಇತ್ತೀಚಿನ ಬುಷ್ ಆಡಳಿತವನ್ನೊಳಗೊಂಡು ಅಮೆರಿಕದ ವಿದೇಶಾಂಗ ನೀತಿ (foreign policy)ಯನ್ನು ರೂಪಿಸುವುದರಲ್ಲಿ ಅತಿ ಪ್ರಮುಖರಾಗಿದ್ದಾರೆ. ಅಮೆರಿಕದ ಉಪಾಧ್ಯಕ್ಷರಾಗಿದ್ದ ಚೇನಿಯವರು ಲುಯಿಸ್ ವಿಚಾರದಲ್ಲಿ '...ಈ ಹೊಸ ಶತಮಾನದಲ್ಲಿ ಅನೇಕ ರಾಜನೀತಿತಜ್ಞರು, ರಾಯಭಾರಿಗಳು, ಸಹ ವಿದ್ವಾಂಸರು, ವಾರ್ತಾಮಾಧ್ಯಮದಲ್ಲಿ ಕೆಲಸಮಾಡುವವರು ದಿನವೂ ಲುಯಿಸ್ ಅವರ ಪ್ರಾಜ್ಞತೆಯ ಉಪಯೋಗವನ್ನು ಪಡೆದುಕೊಳ್ಳುತ್ತಿದ್ದಾರೆ' (...in the new century, his wisdom is sought daily by policymakers, diplomats, fellow academics and the news media) ಎಂದಿದ್ದಾರೆ. ಲುಯಿಸರಿಗೆ ೨೦೦೬ರಲ್ಲಿ ಅಧ್ಯಕ್ಷ ಬುಷ್ 'The National Medal of the Humanities' ಪ್ರಶಸ್ತಿಯನ್ನು ಕೊಟ್ಟರು.

ಮತ್ತೊಬ್ಬ ರಾಜಶಾಸ್ತ್ರಜ್ಞ ಸ್ಯಾಮ್ಯುಎಲ್ ಹಂಟಿಂಗ್‌ಟನ್ (ಈತ ಹಾರ್ವರ್ಡ್‌ನಲ್ಲಿ ಫುಕುಯಾಮ ಸಹಪಾಠಿ). ಫುಕುಯಾಮರ ಪುಸ್ತಕಕ್ಕೆ ಪ್ರತಿಕ್ರಿಯಿಸುತ್ತಾ, ತಮ್ಮದೇ ಸಿದ್ಧಾಂತವನ್ನು ಪ್ರತಿಪಾದಿಸಿದರು. ಇದರ ಪ್ರಕಾರ ಶೀತಲಯುದ್ಧ ಕೊನೆಗೊಂಡ ಮೇಲಿನ ಪ್ರಪಂಚದಲ್ಲಿ ಘರ್ಷಣೆಯ ಮುಖ್ಯ ಕಾರಣವೆಂದರೆ ಜನರ ಸಾಂಸ್ಕೃತಿಕ ಹಾಗೂ ಧಾರ್ಮಿಕ ಅಸ್ಮಿತೆ ಮತ್ತು ಅನನ್ಯತೆ (identity); ಲುಯಿಸರ ಹೊಸ ಚರಿತ್ರೆಯ ಪ್ರತಿಪಾದನೆಯನ್ನು ಇನ್ನೂ ವಿಸ್ತರಿಸಿ 'ನಾಗರಿಕತೆಗಳ ಸಂಘರ್ಷ' (the clash of civilizations) ಎಂದು ಕರೆದರು. ಈ ಸಿದ್ಧಾಂತವನ್ನು ಮೊದಲು ೧೯೯೩ರಲ್ಲಿ ಪ್ರಕಟಿಸಿ, ನಂತರ, ೧೯೯೬ರಲ್ಲಿ 'The Clash of Civilizations: Remaking of the World Order' ಎಂಬ ಪುಸ್ತಕದಲ್ಲಿ ತಮ್ಮ ಸಿದ್ಧಾಂತವನ್ನು ವಿಸ್ತಾರವಾಗಿ ವಿವರಿಸಿದರು.

ಹಂಟಿಂಗ್‌ಟನ್ನರ ಪ್ರಕಾರ ಪ್ರಪಂಚದಲ್ಲಿ ಉದ್ದೇಶ, ಸಿದ್ಧಾಂತಗಳ ಕಾಲ ಕೊನೆಗೊಂಡು, ಸಾಂಸ್ಕೃತಿಕ ಮತ್ತು ಧಾರ್ಮಿಕ ಅನನ್ಯತೆಗಳ ನಡುವಿನ ಘರ್ಷಣೆಯ ಕಾಲ ಆರಂಭವಾಗಿದೆ; 'ಜಗತ್ತಿನ ವಿದ್ಯಮಾನಗಳಲ್ಲಿ ರಾಷ್ಟ್ರಗಳು ಪ್ರಮುಖ ಪಾತ್ರಧಾರಿಗಳಾಗಿರುತ್ತವೆ. ಆದರೆ ಪ್ರಮುಖ ಘರ್ಷಣೆಗಳು ಭಿನ್ನ ನಾಗರಿಕತೆ, ಭಿನ್ನ

ಸಮುದಾಯಗಳಿಗೆ ಸೇರಿದ ರಾಷ್ಟ್ರಗಳ ನಡುವೆ ಆಗುತ್ತವೆ. ನಾಗರಿಕತೆಗಳ ನಡುವಿನ ಬಿರುಕುಗಳೇ ಯುದ್ಧ ಭೂಮಿಯ ಸರಹದ್ದೂ ಆಗಿರುತ್ತವೆ' (Nation-states will remain the most powerful actors in the world affairs, but the principal conflicts of global politics will occur between nations and groups of different civilizations. The clash of civilizations will dominate global politics. The fault lines between civilizations will be the battle lines of the future).

ಪ್ರಪಂಚವನ್ನು ೯ ನಾಗರಿಕತೆಗಳಾಗಿ ಹಂಟಿಂಗ್‌ಟನ್ ವಿಭಾಗಿಸುತ್ತಾರೆ. ಪಾಶ್ಚಾತ್ಯ ನಾಗರಿಕತೆ ಮತ್ತು ಧ್ಯೇಯಗಳ ಎರಡು ಮುಖ್ಯ ಗಂಡಾಂತರಗಳು ಚೀನಾ ಮತ್ತು ಇಸ್ಲಾಮ್‌ನಿಂದ ಎಂದು ಆತ ವಿವರಿಸುತ್ತಾರೆ. ಕುತೂಹಲದ ವಿಷಯವೆಂದರೆ ಈ ಇಬ್ಬರೂ ಪಶ್ಚಿಮದ ವಿರುದ್ಧ ಮಿತ್ರರಾಗುವ ಸಾಮರ್ಥ್ಯವುಳ್ಳವರು. ಒಂದು ಕಡೆ ಮುಖ್ಯವಾಗಿ ಚೀನಾ ಒಂದು ಪ್ರಾದೇಶಿಕ ಶಕ್ತಿಯಾಗಿಬಿಡುತ್ತದೆ. ಮತ್ತೊಂದು ಕಡೆ ಬೆಳೆಯುತ್ತಿರುವ ಇಸ್ಲಾಂ (ಮುಸ್ಲಿಂ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣ ಎಲ್ಲಕ್ಕೂ ಮಿತಿಮೀರಿದ್ದು) ಮತ್ತು ಮೂಲಭೂತವಾದಿಗಳ ಮುನ್ನಡೆಗಳಿಂದಾಗಿ (fundamentalist movements) ಇಸ್ಲಾಮ್ ಅತಿ ಪ್ರಬಲ ಜಾಗತಿಕ ಧಾರ್ಮಿಕ ಶಕ್ತಿಯಾಗಿ ರೂಪುಗೊಳ್ಳುತ್ತಿದೆ. ಪಾಶ್ಚಾತ್ಯ ನಾಗರಿಕತೆಯು ಇಸ್ಲಾಂನಿಂದ ಗಂಡಾಂತರಕ್ಕೊಳಗಾಗಿ, ಅವೆರಡರ ಮಧ್ಯೆ ಘೋರವಾದ ಯುದ್ಧವಾಗುವ ಸಂಭವ ಇದೆ ಎನ್ನುತ್ತಾರೆ. ಹಂಟಿಂಗ್‌ಟನ್ ಅವರ ದೂರದೃಷ್ಟಿ ನಮ್ಮ ಸುತ್ತಮುತ್ತಲ ಪ್ರಪಂಚದಲ್ಲಿ ನಡೆಯುತ್ತಿರುವ ಘಟನೆಗಳಿಂದ ರೂಪಿತಗೊಂಡಿದ್ದರೂ, ಈ ಎಲ್ಲ ಚಿಂತನೆಗಳೂ ಆತನನ್ನು ಒಬ್ಬ ರಾಜಕೀಯ ದಾರ್ಶನಿಕರನ್ನಾಗಿ ಮಾಡಿವೆ. ಅವರ ಸಿದ್ಧಾಂತಕ್ಕೆ ಜೀವಂತ ಸಾಕ್ಷಿಯಾಗಿ ನೀಡುವ ಎರಡು ದೊಡ್ಡ ಉದಾಹರಣೆಗಳೆಂದರೆ ಸೆಪ್ಟೆಂಬರ್ ೧೧, ೨೦೦೧ರ ಘಟನೆ ಮತ್ತು ಆನಂತರದ ಅಫ್ಘಾನಿಸ್ತಾನ್ ಮತ್ತು ಇರಾಕ್ ಯುದ್ಧಗಳು. ಆತ ಹೇಳುವ 'ಎಲ್ಲ ಮುಸ್ಲಿಂ ರಾಷ್ಟ್ರಗಳ ಎಲ್ಲೆಯನ್ನು ರಕ್ತದಲ್ಲಿ ಬರೆದಿದೆ' (All Muslim states have bloody borders) ಎನ್ನುವ ವಾದವನ್ನು ಈ ವಿದ್ಯಮಾನಗಳು ಸಂಪೂರ್ಣವಾಗಿ ಸಮರ್ಥಿಸುವಂತೆ ತೋರುತ್ತದೆ.

ಕಳೆದ ಎಂಟು ವರ್ಷಗಳಿಂದ ಅಮೇರಿಕದಲ್ಲಿ ರಾಜ್ಯಾಡಳಿತ ನಡೆಸುತ್ತಿರುವ ಪ್ರಬಲ ನಾಯಕರು ಈ ಸಿದ್ಧಾಂತವನ್ನು ಅನುಮೋದಿಸುತ್ತಿದ್ದರು. ನವಸಂಪ್ರದಾಯ ಪಕ್ಷದ ಡಿಕ್ ಚೇನಿ ಮತ್ತು ಪಾಲ್ ವುಲ್ಫೊವಿಟ್ಸ್ ಕೂಡ ಹಂಟಿಂಗ್‌ಟನ್ ಸಿದ್ಧಾಂತದಿಂದ ಪ್ರಭಾವಿತರಾಗಿದ್ದಾರೆ. ಬುಷ್‌ನ ರಾಜಕೀಯ ನಂಬಿಕೆಗಳನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳುವುದು ಮುಖ್ಯ. ಸುಮಾರು ೩೦ ಮಿಲಿಯನ್ ಜನರನ್ನೊಳಗೊಂಡ

ಸಾಂಪ್ರದಾಯಸ್ಥ ಕ್ರೈಸ್ತಬೋಧರ ಸಮುದಾಯವೇ ಬುಷ್ ಅವರಿಗೆ, ಎರಡೂ ಅಧ್ಯಕ್ಷ ಚುನಾವಣೆಗಳಲ್ಲೂ ತನ್ನ ಬೆಂಬಲ ನೀಡಿ, ಅವರ ಗೆಲುವಿಗೆ ಮುಖ್ಯ ಕಾರಣವಾಯಿತು. ಈ 'born-again christian' ಅಧ್ಯಕ್ಷ ತನ್ನ ನಲವತ್ತನೇ ವಯಸ್ಸಿನಲ್ಲಿ ಧರ್ಮವನ್ನು ಕಂಡುಕೊಂಡು, ಇತ್ತೀಚಿನವರೆಗೂ, ಪ್ರಪಂಚದ ಅಗ್ರ ಕ್ರೈಸ್ತದೇಶವೊಂದನ್ನು ಆಳಿದ್ದಾನೆ. ಅಮೇರಿಕಾ ಎರಡು ಮುಸ್ಲಿಂ ದೇಶಗಳೊಡನೆ ಯುದ್ಧ ನಡೆಸುತ್ತಿದೆ. ಪ್ಯಾಲೆಸ್ಟೈನ್‌ನಲ್ಲಿ ಪರಿಸ್ಥಿತಿ ಹದಗೆಟ್ಟಿದೆ. ಈ ಘರ್ಷಣೆಗಳನ್ನು ಸರಳವಾಗಿ ನಾಗರಿಕತೆಗಳ ಸಂಘರ್ಷಣೆ ಎಂಬುದಾಗಿ ಹೇಳಬಹುದು. ಅಧ್ಯಕ್ಷರಾದ ಬುಷ್, ಹಲವಾರು ಬಾರಿ clash for civilization ಪ್ರತ್ಯಯವನ್ನು ಉಪಯೋಗಿಸಿ ಈ ವಿಚಾರವನ್ನು 'ಕ್ರೌರ್ಯದ ವಿರುದ್ಧ ಯುದ್ಧ' (war on terror)ದ ಸಂದರ್ಭದಲ್ಲಿ ಉಪಯೋಗಿಸಿದ್ದಾರೆ (ಅದೇ ಒಂದು ವಿಚಿತ್ರ ಸಿದ್ಧಾಂತ!). ಈ ನಂಬಿಕೆಯ ಹುರುಪಿನಲ್ಲಿ ಅವರು, ಇರಾಕ್‌ನಲ್ಲಿ ಯುದ್ಧ ಮುಂದುವರೆಸಿದರು. ಈ ಯುದ್ಧ ಮಧ್ಯಪ್ರಾಚ್ಯ ರಾಜ್ಯದಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿ ಅಲ್ಲಿಂದ ಇತರ ದೇಶಗಳಲ್ಲೂ ಪ್ರಜಾಪ್ರಭುತ್ವವನ್ನು ಹಬ್ಬಿಸುವ ಕೆಲಸದಲ್ಲಿ ಉಪಯುಕ್ತವಾಗುವುದೆಂಬ ನಂಬಿಕೆ ಅವರಿಗಿತ್ತು.

**ಈ ಸಿದ್ಧಾಂತವನ್ನು ವಿರೋಧಿಸುವ ವಾದಗಳು:**

ಹಂಟಿಂಗ್‌ಟನ್ ಸಿದ್ಧಾಂತದ ಮೇಲೆ ಸಾಕಷ್ಟು ಟೀಕೆಗಳಿವೆ. ನಾನು ಎರಡೇ ಉದಾಹರಣೆಗಳನ್ನು ಇಲ್ಲಿ ಬಳಸುತ್ತೇನೆ. ನನ್ನ ದೃಷ್ಟಿಕೋನವನ್ನು ವಿವರಿಸಲು ಇವೆರಡು ಸಾಕು. ನಿಜವಾದ ಸಮಸ್ಯೆಯೇನು ಎಂದು ಯಾರೂ ಇನ್ನೂ ಅರ್ಥವೇ ಮಾಡಿಕೊಂಡಿಲ್ಲ, ಇನ್ನು ಪರಿಹಾರವಾದರೂ ಎಲ್ಲಿಂದ?

ಎಡ್ವರ್ಡ್ ಸಯಿದ್ ಅವರ ಪ್ರತಿವಾದಗಳನ್ನು ನನ್ನ ಮೊದಲ ಉದಾಹರಣೆಯಾಗಿ ಬಳಸುತ್ತೇನೆ. ಇವರು ಪೌರಸ್ತ್ಯವಾದವನ್ನು (orientalism) ನಮ್ಮ ಮುಂದಿಟ್ಟ ಮೊದಲಿಗರು. ಪೌರಸ್ತ್ಯವಾದ ಪಾಶ್ಚಾತ್ಯ ಸಿದ್ಧಾಂತಗಳನ್ನು ಆಳವಾಗಿ ವಿಮರ್ಶಿಸುತ್ತದೆ, ಅದರ ತಾರ್ಕಿಕ ರಚನೆಯ ಬಂಧಗಳನ್ನು ಸಡಿಲಿಸಿ (deconstruction) ಅದರ ಪೊಳ್ಳುತನವನ್ನೂ ಪಕ್ಷಪಾತಗಳನ್ನೂ ಎತ್ತಿತೋರಿಸುತ್ತದೆ. ಈ ಪಾಶ್ಚಾತ್ಯ ತಾರ್ಕಿಕರಿಗೆ ಮಧ್ಯಪ್ರಾಚ್ಯ ವಿಚಾರದಲ್ಲಿಯಾಗಲೀ, ಮತ್ತು ಅಲ್ಲಿನ ಜನರ ವಿಚಾರದಲ್ಲಿಯಾಗಲೀ ಆಳವಾದ ಜ್ಞಾನವಿಲ್ಲದೆ, ಬರಿಯ ಪೂರ್ವಗ್ರಹಗಳಿವೆ ಎಂಬುದು ಸಯಿದರ ಟೀಕೆ. ಹಂಟಿಂಗ್‌ಟನ್ ಸಿದ್ಧಾಂತಕ್ಕೆ ಪ್ರತ್ಯುತ್ತರವಾಗಿ 'ಮೂಢತೆಯ ಸಂಘರ್ಷ' (The Clash of Ignorance(!)) ಎಂಬ ಪ್ರಬಂಧವನ್ನು ಸಯಿದರು ಅಮೆರಿಕದ 'The Nation' ಎಂಬ ಪತ್ರಿಕೆಯಲ್ಲಿ ೨೦೦೧ರಲ್ಲಿ ಬರೆದರು.

ಅವರ ಟೀಕೆ ಎರಡು ತೆರನಾದದ್ದು. ಈ ನಾಗರಿಕತೆಗಳ ಮಧ್ಯವಿರುವ ಪರಸ್ಪರ ಅವಲಂಬನೆಯನ್ನು, 'ಮಾನವತೆಯನ್ನು ಜೀವಂತಗೊಳಿಸುವ ಅಸಂಖ್ಯಾತ ಪ್ರವೃತ್ತಿಗಳು,

ಅವನ್ನು ಎದುರಿಸುವ ಶಕ್ತಿಗಳು'- ಇವನ್ನೆಲ್ಲ ಹಂಟಿಂಗ್‌ಟನ್ ಗಮನಿಸಿಯೇ ಇಲ್ಲ ಎಂಬುದು ಅವರ ಮೊದಲ ಟೀಕೆ (He misses the myriad currents and counter currents that animate human history). ಎರಡನೆಯ ಟೀಕೆ: 'ಒಸಾಮ ಬಿನ್ ಲಾಡಿನ್ ಮತ್ತು ಅಲ್-ಖೈದಾ ಅಮೆರಿಕದ ಜಿಮ್ ಜೋನ್ಸ್ ಅಥವಾ 'Branch Davidians' ರೀತಿಯ ಪಂಥಗಳನ್ನು ಪ್ರತಿನಿಧಿಸುತ್ತಾರೆ, ಆದರೆ ಇಲ್ಲಿನ ಪಂಥಗಳಿಗೆ ಅಷ್ಟು ಅದ್ಭುತವಾಗಿ ಹುತಾತ್ಮರಾಗಲು ಸಾಧ್ಯವಿಲ್ಲ' (Osama bin Laden and al-Qaeda present parallels to cults like Jim Jones or the Branch Davidians, admittedly less spectacular in destructiveness). ಎರಡನೆಯ ಟೀಕೆಯಲ್ಲಿ ಇಸ್ಲಾಂ ಮತ ಕೂಡ ಕ್ರೈಸ್ತ ಮತದಂತೆಯೇ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದೆ; ಸಮಾಜಗಳ ಶಕ್ತಿ ದೌರ್ಬಲ್ಯಗಳು, ಜಾತ್ಯತೀತ ರಾಜಕೀಯ ಎದುರಿಸಬೇಕಾದ ವಿವೇಕ-ಮೌಢ್ಯಗಳು, ಸಾರ್ವತ್ರಿಕ ನ್ಯಾಯ ಅನ್ಯಾಯಗಳು - ಇವುಗಳ ಬೆಳಕಿನಲ್ಲಿ ಈ ಪ್ರಶ್ನೆಗಳನ್ನು ಪರಿಶೀಲಿಸುವುದು ಕೇವಲ ಅನಿರ್ದಿಷ್ಟ ಅಮೂರ್ತ ಭಾವನೆಗಳನ್ನರಸಿ ಎತ್ತೆತ್ತಲೋ ಅಡ್ಡಾಡುವುದಕ್ಕಿಂತ ಹೆಚ್ಚು ಉಪಯುಕ್ತ ಎಂದು ಪ್ರತಿಪಾದಿಸುತ್ತಾರೆ (It is better to think in terms of powerless and powerful communities, the secular politics of reason and ignorance, and universal principles of justice and injustice, than to wander off in search of vast abstractions...). ಸಯಿದರು ತಮ್ಮ ದೃಷ್ಟಿಕೋನವನ್ನು ಶಕ್ತಿಯುತವಾಗಿ ಚರ್ಚಿಸಿದ್ದಾರೆ. ಹಂಟಿಂಗ್‌ಟನ್ ಅವರ ಸರಳೀಕೃತ ಸಿದ್ಧಾಂತದ ಬಗ್ಗೆ ಅವರಿಗಿರುವ ತಿರಸ್ಕಾರವನ್ನು ವ್ಯಕ್ತಪಡಿಸುವುದರಲ್ಲಿ ಯಾವ ರೀತಿಯಲ್ಲಿಯೂ ಹಿಂದೆ ಬೀಳುವುದಿಲ್ಲ.

ಸಯಿದರು ಲುಯಿಸರನ್ನು ಅತ್ಯಂತ ಕಠಿಣವಾಗಿ ಟೀಕಿಸುತ್ತಾರೆ. ಹಲವು ವರ್ಷಗಳ ಕಾಲದಲ್ಲಿ, ಇಬ್ಬರೂ ಈ ವಿಚಾರದಲ್ಲಿ ಪರಸ್ಪರರಿಗಿರುವ ಭಿನ್ನಾಭಿಪ್ರಾಯಗಳನ್ನು ಸಾಕಷ್ಟು ಚರ್ಚಿಸಿದ್ದಾರೆ. ಸಯಿದರ ಅಭಿಪ್ರಾಯದಲ್ಲಿ, ಲುಯಿಸರಿಗೆ ಮಧ್ಯಪ್ರಾಚ್ಯದ ಮೇಲೆ ಎಷ್ಟು ಪೂರ್ವಾಗ್ರಹವಿದೆ ಎಂದರೆ, ಅವರ ಸಿದ್ಧಾಂತವನ್ನು ಯಾರೂ ಗಂಭೀರವಾಗಿ ಗಮನಿಸುವುದು ಸಾಧ್ಯವಿಲ್ಲ. 'ಲುಯಿಸರು ಈ ಕಳೆದ ೪೦ ವರ್ಷಗಳಿಂದ ಮಧ್ಯಪ್ರಾಚ್ಯ, ಅರಬ್ ದೇಶಗಳಲ್ಲಿ ಕಾಲಿರಿಸಿಲ್ಲ. ಅವರಿಗೆ ಟರ್ಕಿಯ ಬಗ್ಗೆ ಒಂದಷ್ಟು ಗೊತ್ತಿದೆಯೆಂದು ಕೇಳಿದ್ದೇನೆ, ಆದರೆ ಅವರಿಗೆ ಅರಬ್ ರಾಷ್ಟ್ರಗಳ ಬಗ್ಗೆ ಏನೇನೂ ತಿಳಿಯದು' ಎನ್ನುತ್ತಾರೆ. (Lewis has not set foot in the Middle East, in the Arab world, for at least forty years. He knows something about Turkey, I am told, but he knows nothing about the

Arab world (!)). ಲುಯಿಸ್ ಇಸ್ಲಾಂ ಧರ್ಮವನ್ನು ಯಾವ ಬಿರುಕುಗಳೂ ಇಲ್ಲದ ಒಂದು ಅಖಂಡ ಸಮಾಜವಾಗಿ ನೋಡುವುದರ ಮೂಲಕ ಅದಕ್ಕಿರುವ ಬಹುಮುಖತ್ವವನ್ನು ಚಾರಿತ್ರಿಕ ಕ್ಲಿಷ್ಟತೆಯನ್ನೂ ಕಂಡೇ ಇಲ್ಲ ಎಂದು ಲುಯಿಸರ ಅಲ್ಪಜ್ಞಾನವನ್ನು ಖಂಡಿಸಿ, ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾರೆ.

ಇದೇ ನಿಟ್ಟಿನಲ್ಲಿ ವಾದಿಸುವ ಇನ್ನೊಬ್ಬಾತ ಅಮರ್ತ್ಯ ಸೇನ್. ೧೯೯೮ರಲ್ಲಿ 'Welfare Ecomomics' ಕೆಲಸಕ್ಕಾಗಿ ಅವರಿಗೆ ನೊಬೆಲ್ ಪ್ರಶಸ್ತಿ ದೊರೆಯಿತು. ಇವರು ಹಂಟಿಂಗ್‌ಟನ್ ಪುಸ್ತಕಕ್ಕೆ ಪ್ರತ್ಯುತ್ತರವಾಗಿ 'Identity and Violence: The illusion of Destiny' ಎಂಬ ಪುಸ್ತಕವನ್ನು, ೨೦೦೫ರಲ್ಲಿ ಬರೆದರು. ಅಮರ್ತ್ಯ ಸೇನರ ವಾದ ಹೀಗಿದೆ: 'ಕ್ರೌರ್ಯದ ಮೂಲ ಕಾರಣ ಜನ ಒಬ್ಬರನ್ನೊಬ್ಬರು ಕೇವಲ ಒಂದೇ ಆಯಾಮದಲ್ಲಿ, ಎಂದರೆ one-dimensional ಆಗಿ, ಉಳಿದೆಲ್ಲ ಸಂಕೀರ್ಣತೆಯನ್ನು ಮರೆತು ಕೇವಲ ಹಿಂದೂ ಅಥವಾ ಮುಸ್ಲಿಂ ಎಂದು ಕಾಣುವುದರಲ್ಲಿದೆ. ಜನರ ವ್ಯಕ್ತಿತ್ವ ಹಲವಾರು ಮೂಲಗಳಿಂದ ರೂಪಿಸಲ್ಪಟ್ಟಿರುತ್ತದೆ. ಇಂತಹ ಮೂಲಗಳು ಒಂದು ಒಟ್ಟು ಜನಾಂಗದ ಸಂಸ್ಕೃತಿಯಾಗುತ್ತದೆ.'

ಹಂಟಿಂಗ್‌ಟನ್ ಸಿದ್ಧಾಂತದ ಬಗ್ಗೆ ಇವರಿಗೆ ಹಲವಾರು ಪ್ರಶ್ನೆಗಳಿವೆ. ಸೇನ್ ಎತ್ತುವ ಮೊದಲ ಪ್ರಶ್ನೆ ಯಾರೊಬ್ಬರ ಅಸ್ಮಿತೆಯನ್ನು ಕೇವಲ ಒಂದೇ ಆಧಾರದ ಮೇಲೆ ನಿರ್ಧರಿಸುವುದರಲ್ಲಿರುವ ದೋಷವನ್ನು ಕುರಿತದ್ದು– 'ಒಬ್ಬನೇ ವ್ಯಕ್ತಿ ಒಂದೇ ಬಾರಿಗೆ ಅಮೆರಿಕದ ಪ್ರಜೆಯಾಗಿರಬಹುದು, ಕೆರಿಬಿಯನ್ ಪ್ರದೇಶದಲ್ಲಿ ಹುಟ್ಟಿದವನಾಗಿರಬಹುದು, ಆಫ್ರಿಕಾದವನಿರಬಹುದು, ಹೆಂಗಸಾಗಿರಬಹುದು, ಶಾಖಾಹಾರಿಯಾಗಿರಬಹುದು, ದೂರ–ಓಟದ ಪಂದ್ಯಗಾರನಾಗಿರಬಹುದು, ಚರಿತ್ರಕಾರನೋ, ಶಾಲಾ ಉಪಾಧ್ಯಾಯನೋ, ಕಾದಂಬರಿಕಾರನೋ, ಸ್ತ್ರೀವಾದಿಯೋ, ಸಲಿಂಗಿಗಳ ಬಗ್ಗೆ ಅನುಕಂಪವುಳ್ಳವನೋ ಆಗಿರಬಹುದು, ಹವ್ಯಾಸಿ ನಾಟಕಕಾರನಾಗಿರಬಹುದು, ಪರಿಸರ ಕಾರ್ಯಕರ್ತನಾಗಿರಬಹುದು, ಟೆನ್ನಿಸ್ ಪ್ರಿಯನೋ, ಜಾಝ್ ಸಂಗೀತಗಾರನೋ ಆಗಿರಬಹುದು ಅಥವಾ ಬಾಹ್ಯಾಕಾಶದ ಜೀವಿಗಳ ಜತೆ ಮಾತಾಡಬೇಕು (ಇಂಗ್ಲಿಷಿನಲ್ಲಿಯಾದರೆ ಇನ್ನೂ ಉತ್ತಮ) ಎನ್ನುವ ಹಂಬಲವನ್ನು ಉಳ್ಳವನಾಗಿದ್ದಿರಬಹುದು. ಒಂದೇ ವ್ಯಕ್ತಿ ಸೇರುವ ಈ ಬೇರೆ ಬೇರೆ ಗುಂಪಿನಿಂದ ಆ ವ್ಯಕ್ತಿಗೂ ಮತ್ತು ಗುಂಪಿಗೂ ಒಂದು ವಿಶೇಷ ಸ್ವರೂಪ, ಅನನ್ಯತೆ ಬರುತ್ತದೆ' (The same person can be, without contradiction, an American citizen, a liberal, a woman, a vegetarian, a long-distance runner, a historian, a schoolteacher, a novelist, a feminist, a tennis fan, a jazz musician, and someone who is deeply committed to

the view that there are intelligent beings in outer space with whom it is extremely urgent to talk (preferably in English). Each of these collectivities to all of which this person belongs, gives her a particular identity).

ಆದ್ದರಿಂದ, ಸೇನ್ ಅವರ ಹೇಳಿಕೆಯ ಪ್ರಕಾರ, ಮನುಷ್ಯನ ಧರ್ಮದ ಹಿನ್ನೆಲೆಯೊಂದರಿಂದಲೇ ಅವನ ಕಾರ್ಯಗಳನ್ನು, ಅವನ ಆಲೋಚನೆಗಳನ್ನು ನಿರ್ಧರಿಸುವುದು ಸರಿಯಲ್ಲ. ಇದು ಎಲ್ಲ ಧರ್ಮಗಳಿಗೂ – ಇಸ್ಲಾಂ ಧರ್ಮಕ್ಕೂ ಅನ್ವಯಿಸುವಂಥದು. ನಮ್ಮ ಕ್ರಿಯೆಗಳನ್ನು ಪ್ರಭಾವಿಸುವ ವಿಷಯಗಳು ಹಲವು. ಅವುಗಳಲ್ಲಿ 'ಧರ್ಮ' ಕೇವಲ ಒಂದು ಕ್ರಿಯೆ ಮಾತ್ರ.

ಹಂಟಿಂಗ್‌ಟನ್ ಅವರ ಸಿದ್ಧಾಂತ ಪ್ರತಿಯೊಂದು ನಾಗರಿಕತೆಯಲ್ಲೂ ಇರುವ ವೈವಿಧ್ಯವನ್ನು ಅವಗಣಿಸುತ್ತದೆ ಎನ್ನುವುದು ಸೇನ್ ಅವರ ಟೀಕೆ. ಭಾರತವನ್ನು ಉದಾಹರಣೆಯಾಗಿ ಬಳಸುವುದರ ಮೂಲಕ ಹೇಗೆ ಭಾರತಲ್ಲಿರುವ ವೈವಿಧ್ಯದ ಕಾರಣದಿಂದಾಗಿ, ಭಾರತವನ್ನು ಏಕರೂಪದ ನಾಗರಿಕತೆ (homogeneous civilization) ಎಂದು ಕಾಣುವುದು ಸರಿಯಲ್ಲ ಎಂಬುದನ್ನು ತೋರಿಸುತ್ತಾರೆ. ಆ ನಾಗರಿಕತೆಯಲ್ಲಿರುವ ವೈವಿಧ್ಯವು, ಅದನ್ನು ಒಂದೇ ವಿಧದಲ್ಲಿ ವರ್ತಿಸಲು ಬಿಡುವುದಿಲ್ಲ. ಹಂಟಿಂಗ್‌ಟನ್ನರ ಸಿದ್ಧಾಂತದಲ್ಲಿರುವ ಮೂಲಭೂತ ತಪ್ಪನ್ನು 'ನಾಗರಿಕತೆಗಳನ್ನು ನಿರ್ಬಂಧಗೊಳಿಸುವಿಕೆ' (Civilizational confinement) ಎಂಬ ಮಾತುಗಳ ಮೂಲಕ ತೋರಿಸುತ್ತಾರೆ. ಪಾಶ್ಚಾತ್ಯ ಮೌಲ್ಯಗಳ ಪ್ರತ್ಯೇಕತೆಯ ವಿಚಾರದಲ್ಲಿ ಸಯಿದರ ವಾದಕ್ಕೆ ದನಿಗೂಡಿಸುತ್ತ ಆ ಮೌಲ್ಯಗಳಾದರೋ ಹಲವಾರು ನಾಗರಿಕತೆಗಳ ಕೊಡುಗೆಗಳಿಂದ ರೂಪುಗೊಂಡವು; ಪಾಶ್ಚಾತ್ಯ ಮೌಲ್ಯಗಳು ವಿಶಿಷ್ಟ ಎಂಬುದು ಕೇವಲ ಒಂದು ಆರೋಪವಷ್ಟೆ ಎನ್ನುತ್ತಾರೆ.

ಇನ್ನೂ ಮುಂದುವರೆಯುತ್ತ ಸೇನ್ ಅವರು–ಆಧುನಿಕ (ಪಾಶ್ಚಾತ್ಯ) ವಿಜ್ಞಾನದ ಮೇಲೆ ಹಲವಾರು ಪಾಶ್ಚಾತ್ಯೇತರ ದೇಶಗಳೂ ಬಹಳಷ್ಟು ಪ್ರಭಾವ ಬೀರಿವೆ (ಭಾರತ, ಇರಾನ್, ಅರಬ್ಬೀ, ಚೈನಾ ಮುಂತಾದವು) ಎಂಬುದನ್ನು ನಿರೂಪಿಸುತ್ತಾರೆ. ಈ ಪ್ರಭಾವಗಳೇ ಯುರೋಪಿನಿನಲ್ಲಿ ೧೪–೧೭ನೆಯ ಶತನಮಾನಗಳಲ್ಲಿ ನಡೆದ 'ಪುನರುಜ್ಜೀವನ' (Rennaissance) ಹಾಗೂ ಅನಂತರ 'ಜ್ಞಾನೋದಯ' (Enlightemment)ಗಳಿಗೆ ಆಧಾರವಾಗಿ ಮುಂದೆ ವಿಜ್ಞಾನ–ತಾಂತ್ರಿಕ ಕ್ಷೇತ್ರಗಳಲ್ಲಿ ಪಶ್ಚಿಮಕ್ಕೆ ಹೆಚ್ಚಿನ ಪ್ರಭುತ್ವಕ್ಕೆ ಎಡೆಮಾಡಿಕೊಟ್ಟವು – ಎನ್ನುತ್ತಾರೆ.

ಹಂಟಿಂಗ್‌ಟನ್ ಅವರ ಮೂಲ ಸಿದ್ಧಾಂತದ ತಳಪಾಯ – ಪಾಶ್ಚಾತ್ಯರ ಪ್ರಜಾಪ್ರಭುತ್ವದ ಕಲ್ಪನೆ (the idea of democracy) 'ಪಾಶ್ಚಾತ್ಯ'ರಿಗೇ ಪ್ರತ್ಯೇಕವಾದದ್ದು ಎನ್ನುವುದೇ ಪೂರ ತಪ್ಪು ಎಂಬುದು ಸೇನ್ ಅವರ ಅಭಿಪ್ರಾಯ. ದೇಶಗಳೂ, ಸಮಾಜಗಳೂ ಬಹಳಷ್ಟು ಶತಮಾನಗಳಿಂದ ಇತರ ದೇಶಗಳ, ಸಮಾಜಗಳ ಮೇಲೆ ಪರಸ್ಪರ ಪ್ರಭಾವ ಬೀರಿವೆ. ಹೀಗಾಗಿ ಯಾವ ದೇಶವೂ ಈ ಪ್ರಭಾವಗಳಿಂದ ಹೊರತಾಗಿ, ತಾನೊಂದೇ ಒಂಟಿಯಾಗಿ ವಿಕಾಸಗೊಂಡಿಲ್ಲ. ಇಲ್ಲಿಯೂ ಸೇನ್ ಅವರ ವಾದ, ಸಯಿದರ ವಾದದ ಜೊತೆ ಸಮೀಕರಿಸುತ್ತದೆ. ಹಂಟಿಂಗ್‌ಟನ್ನರ ಸಿದ್ಧಾಂತ ನಾಗರಿಕತೆಗಳ ನಡುವಿನ 'ನಿಜವಾದ ಅಸಂಖ್ಯಾತ ಪ್ರವಾಹಗಳು, ಭಾವನೆಗಳು, ಪ್ರಭಾವಗಳು....' ಎಲ್ಲವನ್ನೂ ಕಡೆಗಣಿಸುತ್ತದೆ (Huntington misses the true myriad cross-currents, ideas and influences between civilizations...). ಸೇನ್ ಇವನ್ನು ಕುರಿತು 'ಚಾರಿತ್ರಿಕ ಮುಗ್ಧತೆ' ಎನ್ನುತ್ತಾರೆ!

ಇವನ್ನೆಲ್ಲಾ ಇಷ್ಟು ವಿಸ್ತಾರವಾಗಿ ಯಾಕೆ ಹೇಳಬೇಕಾಗಿ ಬಂತೆಂದರೆ ಒಂದು ಗಮನಾರ್ಹವಾದ ಕಾಕತಾಳೀಯ ಸಂಭವ ಎಂಬಂತೆ, ಭೈರಪ್ಪನವರ ಆವರಣದ ಕಡೆಯಲ್ಲಿ, ಪುಸ್ತಕದ ಗ್ರಂಥಋಣದ ಪಟ್ಟಿಯಲ್ಲಿ ಹಂಟಿಂಗ್‌ಟನ್ನರ ಉಲ್ಲೇಖ ಬರುತ್ತದೆ. ಸಯಿದ್ ಅಥವಾ ಸೇನ್ ಅವರ ಉಲ್ಲೇಖ ಈ ಪಟ್ಟಿಯಲ್ಲಿ ಕಾಣದಿರುವುದು ವಿಷಾದಕರ. ನಾವು ಮೊದಲೇ ನೋಡಿದ ಹಾಗೆ, ಭೈರಪ್ಪನವರ ಪಾತ್ರಗಳು ಮೂಲತಃ ರೂಪಿತವಾಗಿರುವುದು ಲೇಖಕರ ಧಾರ್ಮಿಕ ಅನನ್ಯತೆಯ ಮತ್ತು ಅವರ ಅಸ್ಮಿತೆ ನಂಬಿಕೆಯ ಮೇಲೆ – ಹಂಟಿಂಗ್‌ಟನ್ ಅವರ ಆಲೋಚನಾ ಧಾಟಿಯಲ್ಲಿ. ಇದಕ್ಕೆ ತೀವ್ರ ವಿರೋಧವಾಗಿ, ಪಮುಕರ ಪಾತ್ರಗಳು ರೂಪಿತವಾಗಿರುವುದು ಕೇವಲ ಧಾರ್ಮಿಕ ಅನನ್ಯತೆಯ ಹಿನ್ನೆಲೆಯಲ್ಲಲ್ಲ. ಅದಕ್ಕೂ ಹೆಚ್ಚಾಗಿ ಇತರ – ಕಲಾತ್ಮಕ, ಲೌಕಿಕ, ಲೈಂಗಿಕ ಮುಂತಾದ ಆಯಾಮಗಳ ಹಿನ್ನೆಲೆಯಲ್ಲಿ – ಪಮುಕರ ಪಾತ್ರಗಳಲ್ಲಿ ಸೇನ್ ಮತ್ತು ಸಯಿದ್ ಅವರ ಆಲೋಚನಾ ಧಾಟಿಯನ್ನು ಕಾಣಬಹುದು.

ಈ ಎರಡು ಪುಸ್ತಕಗಳ ಮುಖ್ಯಪಾತ್ರಗಳು ಎರಡೂ ಲೇಖಕರ ನಡುವಿನ ಆಲೋಚನೆಯಲ್ಲಿರುವ ವ್ಯತ್ಯಾಸವನ್ನು ವಿವರವಾಗಿ ವಿಶದಗೊಳಿಸುತ್ತವೆ. ಲಕ್ಷ್ಮಿಗೆ ಇಸ್ಲಾಂ ಧರ್ಮವನ್ನು ಅರ್ಥಮಾಡಿಕೊಳ್ಳುವುದಷ್ಟೇ ಮುಖ್ಯ. ಆಕೆಗೆ ವಯಸ್ಸಾಗಿದ್ದರೂ, ಅವಳು ಕೂದಲಿಗೆ ಬಣ್ಣವನ್ನು ಹಚ್ಚಿಕೊಳ್ಳುವುದಿಲ್ಲ. ಅಷ್ಟೇ ಅಲ್ಲ; ತನ್ನನ್ನು ಆಕರ್ಷಕವಾಗಿ ಸುಂದರವಾಗಿ ಇಟ್ಟುಕೊಳ್ಳಲು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಅಮೀರ್, ಅವಳನ್ನು ಸಮ್ಮೇಳನದಲ್ಲಿ ಭೇಟಿಯಾದಾಗ ಚಕಿತನಾಗುತ್ತಾನೆ. ಅವಳು ತನ್ನ ಗಂಡ, ಮಗನಿಂದ ವಿರಕ್ತಳಾಗಿದ್ದಾಳೆ. ಅವಳಿಗೆ ಪ್ರಾಪಂಚಿಕ ವಸ್ತುಗಳ ಅಗತ್ಯವಿರುವಂತೆ

ಕಾಣಿಸುವುದಿಲ್ಲ. ಇಸ್ಲಾಂ ಧರ್ಮದ ಸತ್ಯಾನ್ವೇಷಣೆಯಲ್ಲಿ ಅವಳಿಗಿರುವ ತೀವ್ರ ಆಸಕ್ತಿ, ಅವಳ ವ್ಯಕ್ತಿತ್ವದ ಇತರ ಆಯಾಮಗಳನ್ನು ಮುಚ್ಚಿಬಿಟ್ಟಿದೆ.

ಪಮುಕರ ಶೆಕೂರಳ ರೀತಿಯೇ ಬೇರೆ. ಅವಳು ಇಸ್ಲಾಂ ಸನಾತನಿಯಾಗಿದ್ದರೆ, ತನ್ನ ಗತಿಸಿದ ಗಂಡನ ತಮ್ಮನನ್ನು ಮದುವೆಯಾಗಬೇಕಿತ್ತು (ಆಗ ಕಥೆಯೇ ಇರುತ್ತಿರಲಿಲ್ಲ!). ಆದರೆ, ಅವಳು ಒಂದು ಸಾಮಾನ್ಯ ಮುಸ್ಲಿಂ ಹೆಂಗಸಿಗಿಂತ ಹೆಚ್ಚಿನವಳು. ಹಿಂದೆಯೇ ವಿವರಿಸಿದಂತೆ, ಅವಳಿಗೆ ಬೇರೆ ಬೇರೆ ಸ್ತರಗಳಲ್ಲಿ ಆಸೆಗಳಿವೆ; ಲೌಕಿಕವಾದುದಾಗಲೀ, ಅಥವಾ ತನ್ನ ಭಾವಪ್ರಪಂಚದಲ್ಲಾಗಲೀ ತನಗೆ ಬೇಕಾದುದನ್ನು ಪಡೆಯಲು ನಾನಾ ರೀತಿಯ ಉಪಾಯಗಳನ್ನು ಮಾಡುತ್ತಾಳೆ. ಸೇನ್ ಹೇಳುವ ಅನೇಕ ಆಯಾಮಗಳ (multi-dimensional) ವ್ಯಕ್ತಿ ಅವಳು.

ಈ ಸಂದರ್ಭದಲ್ಲಿ ಎರಡೂ ಲೇಖಕರು ಧರ್ಮ ರಾಜಕೀಯದ ಮೇಲೆ ಬೀರುವ ಪ್ರಭಾವವನ್ನು ಎತ್ತಿತೋರಿಸುತ್ತಾರೆ ಎಂಬುದನ್ನು ಗಮನಿಸುವುದು ಮುಖ್ಯ. ರಾಜಕೀಯ ಎರಡೂ ಪುಸ್ತಕಗಳ ವಸ್ತುವಿನ ಮುಖ್ಯ ಭಾಗವಾಗಿದೆ. ಪಮುಕರ ಪುಸ್ತಕದಲ್ಲಿ ಮಿನಿಯೇಚರಿಸ್ಟರಿಂದ ರಚಿತವಾದ ಪುಸ್ತಕವನ್ನು ರಾಜಕೀಯ ಕಾರಣದ ಸಲುವಾಗಿಯೇ ಬಳಸಲಾಗುತ್ತಿದೆ. ಈ ಪುಸ್ತಕದಲ್ಲಿ ಬಹು ಕಾಲದಿಂದ ಪ್ರಚಲಿತವಾಗಿದ್ದ ಧಾರ್ಮಿಕ ಸಂಪ್ರದಾಯ ಬದ್ಧತೆಯನ್ನು ಬಲಿಕೊಡಲಾಗಿದೆ. ಆವರಣದಲ್ಲಿ ಲಕ್ಷ್ಮಿ ಮತ್ತು ಅಮೀರರಿಂದ ತಯಾರಾದ ಮಾಹಿತಿ ಚಿತ್ರಗಳನ್ನು ಸರಕಾರ ರಾಜಕೀಯ ಕಾರಣಕ್ಕಾಗಿಯೇ ಬಳಸುತ್ತಿದೆ. ಸರಕಾರ ತನ್ನ ರಾಜಕೀಯ ಉದ್ದೇಶಗಳನ್ನು ಸಾಧಿಸಲು ಚಾರಿತ್ರಿಕ ಸತ್ಯವನ್ನೂ ಬಲಿಗೊಡಲು ಸಿದ್ಧವಾಗಿದೆ. ಹೀಗೆ ಇಬ್ಬರೂ ಲೇಖಕರು ತಮ್ಮ ಪ್ರಪಂಚವನ್ನು ಕಾಣುವ ದೃಷ್ಟಿಯಲ್ಲಿ ಸಾಹಿತ್ಯ, ಧರ್ಮ ಮತ್ತು ರಾಜಕೀಯ ಒಟ್ಟಿಗೇ ಮಿಳಿತವಾಗಿರುವುದನ್ನು ನಾವು ಕಾಣಬಹುದು.

ಯೂರೋಪಿನ ೧೧–೧೬ನೆಯ ಶತಮಾನಗಳ ಕ್ರೈಸ್ತ ಮತ್ತು ಇಸ್ಲಾಂ ಧರ್ಮದ ನಡುವಿದ್ದ ಚಾರಿತ್ರಿಕ ಘರ್ಷಣೆಯನ್ನು (ಕ್ರೂಸೇಡ್) ಸೂಚಿಸಲು ಉಪಯೋಗಿಸುತ್ತಿದ್ದ ಭಾಷೆಯನ್ನೇ, ಇಂದಿಗೂ ಪಾಶ್ಚಾತ್ಯ ದೇಶಗಳ ನಡುವಿನ ಸಂಭಾಷಣೆಯಲ್ಲಿ ಬಳಸುವುದನ್ನು ಕಾಣುತ್ತೇವೆ; ಜಾರ್ಜ್ ಬುಷ್ 'ಕ್ರೌರ್ಯದ ಮೇಲಿನ ಯುದ್ಧ' (war on terror)ವನ್ನು ಕ್ರೂಸೇಡ್ ಎಂದು ಕರೆದಿದ್ದಾರೆ. ಅದೇ ಇಸ್ಲಾಮಿಕ್ ಮೂಲಭೂತವಾದಿಗಳು 'ಕಾಫಿರರು' 'ಜಿಹಾದ್' ಇಂಥ ಪದಗಳನ್ನು ಮತ್ತೆಮತ್ತೆ ಉಪಯೋಗಿಸುತ್ತಾರೆ. ಇಂಥ ಭಾವೋದ್ರೇಕಗೊಳಿಸುವ ಪದಗಳಿಂದ ತುಂಬಿದ ಭಾಷೆ ಒಂದು ದೇಶದಲ್ಲಿ, ಸಮಾಜದಲ್ಲಿ ಉತ್ಕರ್ಷವನ್ನುಂಟುಮಾಡಲು ಸಹಜವಾಗಿಯೇ ಸಹಾಯಕವಾಗುತ್ತವೆ.

ಕ್ರಿಸ್ತನ ಸಾವಿನ ತರುವಾಯದ ಕೆಲವೇ ವರ್ಷಗಳಲ್ಲಿ ಭಾರತಕ್ಕೆ ಕ್ರೈಸ್ತಮತ ಬಂತು. ಸುಮಾರು ೬ ಶತಮಾನಗಳ ಬಳಿಕ, (ಮೊಹಮ್ಮದ್ ಸತ್ತ ೪೦ ವರ್ಷಗಳ

ಮೇಲೆ) ಇಸ್ಲಾಂ ಭಾರತದಲ್ಲಿ ತನ್ನ ಕಾಲೂರಿತ್ತು. ಹಾಗಾಗಿ ಈ ಮತಗಳು ಭಾರತಕ್ಕೆ ಬಹಳ ಹಳೆಯವು. ಬಹುತೇಕ ಹಿಂದೂಗಳು, ಈ ಎರಡೂ ಮತಗಳನ್ನೂ ಆಕ್ರಮಣಕಾರರ ಮತಗಳೆಂದೇ ಗುರುತಿಸಿದ್ದಾರೆ. ಇಂದಿಗೂ, ಈ ಸಂಬಂಧ, ಭಾವೋದ್ರೇಕದ ಚರ್ಚೆ ಮತ್ತು ಪ್ರತಿಕ್ರಿಯೆಗಳಿಗೆ ಕಾರಣವಾಗಿದೆ.

ಹೀಗೆ ಪ್ರತಿಯೊಂದು ಧರ್ಮವೂ ತನ್ನದೇ ಆದ ಚರಿತ್ರೆಯನ್ನೂ, ಜ್ಞಾನವನ್ನೂ ಮತ್ತೊಂದು ಧರ್ಮದ ಚರಿತ್ರೆಗೆ ಅಂಟಿಕೊಂಡಂತೆಯೇ ಇರುತ್ತದೆ. ಪ್ರತಿಯೊಂದು ಧರ್ಮದ ಪ್ರತಿಪಾದಕರು, ಇನ್ನೊಂದು ಧರ್ಮದ ಚರಿತ್ರೆಯನ್ನು ರಕ್ತದ ಪುಟಗಳಲ್ಲಷ್ಟೇ ಕಾಣುತ್ತಾರೆ. ಪರಸ್ಪರ ಅವಲಂಬಿಸಿರುವ ದೇಶಗಳು ಕೂಡಿರುವ ಇಂದಿನ ಆಧುನಿಕ ಪ್ರಪಂಚದಲ್ಲಿ, ಈ ತೆರನಾದ ಮತೀಯ ಅನುಭವಗಳನ್ನು ಮೀರಿ, ಮುಂದೆ ನೋಡುವುದು ಕಷ್ಟವಾಗುತ್ತದೆ.

**ಭಾಗ ೩ – ಉಪಸಂಹಾರ: ಧರ್ಮ, ಸಾಹಿತ್ಯ ಮತ್ತು ರಾಜಕೀಯ**

ಇಂದು ಪ್ರಪಂಚದ ಪ್ರತಿಯೊಂದು ದೇಶವೂ ಒಂದು ಗುರುತರ ಧಾರ್ಮಿಕ ಘರ್ಷಣೆಯನ್ನು ಎದುರಿಸಬೇಕಾಗಿದೆ. ಇಷ್ಟು ಶತಮಾನಗಳ ಚರಿತ್ರೆಯನ್ನು ಗಮನಿಸಿದರೆ ಧಾರ್ಮಿಕ ಅನನ್ಯತೆ ಮತ್ತು ಘರ್ಷಣೆಗಳ ಸಮಸ್ಯೆಗೆ ಪರಿಹಾರವೇ ಇಲ್ಲವೇನೋ ಎನ್ನಿಸುತ್ತದೆ.

ಇಂದಿನ ಭಾರತ, ಹಿಂದೂ ಮತದ ಆಂತರಿಕ ಒತ್ತಡಗಳು, ಮುಸ್ಲಿಂ ಭಯೋತ್ಪಾದಕತೆ (terrorism) ಮತ್ತು ಜಾಗತೀಕರಣ – ಈ ಮೂರನ್ನೂ ಎದುರಿಸುವ ತೊಂದರೆಯಲ್ಲಿ ಸಿಕ್ಕಿಕೊಂಡಿದೆ. ಭಾರತದ ಜಾತ್ಯತೀತ ಪದ್ಧತಿ (secularism) ಇಂದು ತೀವ್ರ ಅಪಾಯಕ್ಕೊಳಗಾಗಿದೆ. ಈ ಸಂದರ್ಭದಲ್ಲಿ ಆದ ಮುಂಬೈ ಘಟನೆಗಳಿಗೆ ಭಾರತದ ಪ್ರತಿಕ್ರಿಯೆ ಸಾವಧಾನವಾಗಿ ಯೋಚಿಸಿದ್ದಾಗಿದೆ ಎಂದು ನನಗೆ ಅನಿಸಿಕೆ.

ಕ್ರೈಸ್ತಮತೀಯರನ್ನೇ ಹೆಚ್ಚಾಗಿ ಪ್ರತಿನಿಧಿಸುವ ಅಮೇರಿಕ ದೇಶದಲ್ಲಿ ಇಂದು ಹೊಸ ಅಧ್ಯಕ್ಷರು ಚುನಾಯಿತರಾಗಿದ್ದಾರೆ. ಓಬಾಮ ಅವರ ವ್ಯವಹಾರದ ರೀತಿ, ಬುಷ್ ವ್ಯವಹಾರಕ್ಕಿಂತ ಬಹಳ ಬೇರೆಯಾಗಿದೆ. ಅಮೇರಿಕ ತನ್ನ ನಿಲುವನ್ನು ಕೊಂಚಮಟ್ಟಿಗಾದರೂ ಬದಲಾಯಿಸಲು ಸಿದ್ಧವಾಗಿರುವಂತೆ ಕಾಣುತ್ತದೆ. ಬುಷ್ ಅವರ ಸಂಪ್ರದಾಯಸ್ಥ, ಬಲ–ಪಂಥದ ಹಾದಿಯನ್ನು ಬಿಟ್ಟು ಓಬಾಮಾ ಮನುಷ್ಯನ ಭಿನ್ನತೆಗಳನ್ನು ಗೌರವಿಸುವ, ವಿವೇಕಪೂರ್ಣವಾದ ಹಾಗೂ ಕಾರ್ಯಸಾಧ್ಯವಾದ ಹಾದಿ ತುಳಿಯುವ ಪ್ರಯತ್ನದಲ್ಲಿದ್ದಾರೆ. ದೂರಪ್ರಾಚ್ಯ ರಾಷ್ಟ್ರಗಳನ್ನುದ್ದೇಶಿಸಿ ತಮ್ಮ ಅಧಿಕಾರದ ಮೊದಲ ನೂರು ದಿನಗಳಲ್ಲೇ ಒಂದು ಮುಖ್ಯಭಾಷಣ ಮಾಡುವ ಸಿದ್ಧತೆಯಲ್ಲಿದ್ದಾರೆ. ಈ ಭಾಷಣ ಟರ್ಕಿ ಅಥವಾ ಈಜಿಪ್ಟಿನಲ್ಲಿ ನಡೆಯುವ ನಿರೀಕ್ಷೆ ಇದೆ.

ಟರ್ಕಿ ಇಂದು ಕವಲು ದಾರಿಗಳ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದೆ. ಇಸ್ಲಾಂ ಮತಧರ್ಮದ ಒತ್ತಡಗಳನ್ನು ಅದರ ಜೊತೆಗೇ ಯೂರೋಪಿಯನ್ ಸಂಘಟನೆಯನ್ನು (ಯೂನಿಯನ್) ಸೇರುವ ಒತ್ತಡಗಳನ್ನು ಹೇಗೆ ನಿಭಾಯಿಸಬೇಕೆಂದು ಯೋಚಿಸುತ್ತಿದೆ.

ಆದರೆ ಪರಿಸ್ಥಿತಿ ಅಷ್ಟು ನಿರಾಶಾದಾಯಕವಾಗಿಯೇನಿಲ್ಲ. ಬಹಳ ಹಿಂದೆಯೇ, ಮುಸ್ಲಿಂ ಸಾಮ್ರಾಟನಾದ ಅಕ್ಬರ್, ಎಲ್ಲರಿಗೂ ತಿಳಿದ ಹಾಗೆಯೇ ಧರ್ಮ ಸಮನ್ವಯತೆಯ ರಾಹಿ–ಅಕಲ್ – ವಿವೇಕ ಮಾರ್ಗವನ್ನು ತನ್ನ ರಾಜ್ಯಾಡಳಿತದಲ್ಲಿ ಅನುಸರಿಸಿದ್ದ. ಹಲವಾರು ಪ್ರಾಂತ್ಯಗಳಿಂದ, ಪ್ರದೇಶಗಳಿಂದ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಯೆಹೂದಿ, ಪಾರ್ಸಿ, ಇತ್ಯಾದಿ ಜ್ಞಾನಿಗಳನ್ನೂ, ಮಹಾಪಂಡಿತರನ್ನೂ ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು – ಮುಸ್ಲಿಂ ಮತಾಧಿಪತಿಗಳಿಗೆ ಅದು ಸರಿಕಾಣದಿದ್ದರೂ – ಅವರಿಂದ ಮತದ ವಿಚಾರದಲ್ಲಿ ಉಪನ್ಯಾಸಗಳನ್ನೂ, ಚರ್ಚೆಗಳನ್ನೂ ಏರ್ಪಡಿಸಿದ್ದ. ಪರಸ್ಪರ ಸೇರಿಕೊಂಡಿರುವ, ಇಂದಿನ ಸಂಕೀರ್ಣ ಪ್ರಪಂಚವನ್ನು ನಾವು ಸರಿಯಾಗಿ ಅರಿತುಕೊಳ್ಳಬೇಕಾದರೆ ಇಂತಹ ವಿವೇಕ ಮಾರ್ಗವನ್ನು ಅನುಸರಿಸುವುದು ಅತ್ಯಗತ್ಯ. ಇತರ ಮತ ಮುಖ್ಯಸ್ಥರು, ತನ್ನ ಮತದವರೂ ಸೇರಿದಂತೆ, ಅಕ್ಬರನ ಈ ಕಾರ್ಯವನ್ನು ವಿರೋಧಿಸಿದರೂ, ಅಕ್ಬರ್ ಈ ಮಾರ್ಗವನ್ನು ಅನುಸರಿಸುವ ದೂರದೃಷ್ಟಿಯನ್ನು ಹೊಂದಿದ್ದ. ನಾವು ಕಂಡಿರುವಂತೆ, ಸೇನ್ ಅಮೆರಿಕದ ತಮ್ಮ ಪ್ರಭಾವಶಾಲಿ ಸ್ಥಾನದಿಂದ, ಪಮುಕ್ ಇಸ್ತಾನ್ಬುಲ್‌ನಲ್ಲಿರುವ ತಮ್ಮ ಸ್ಥಾನದಿಂದ, ಮತ್ತು ಭಾರತದಿಂದ ಭೈರಪ್ಪನವರು – ಈ ಮೂವರು ಒಂದೇ ಸಮಯದಲ್ಲಿ ಅಕ್ಬರನ ಸಭಾಸ್ಥಾನಕ್ಕೆ ಬಂದಿದ್ದಾರೆ – ಚರಿತ್ರೆಯಿಂದ ಪಾಠಗಳನ್ನು ಕಲಿಯಲು.

ನಾವು ಈಗಾಗಲೇ ನೋಡಿರುವಂತೆ, ರಾಜಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮತ್ತು ಲೇಖಕರು ನಮ್ಮ ಒಟ್ಟು ಸಾಮೂಹಿಕ ಚರಿತ್ರೆಯನ್ನು ಅಭ್ಯಸಿಸಿ ನಾವು ಈ ಪ್ರಸ್ತುತ ಸ್ಥಿತಿಗೆ ಹೇಗೆ ಬಂದೆವೆಂದು ತಿಳಿಯಲು ಯತ್ನಿಸುತ್ತಾರೆ. ಅದರ ಆಧಾರದ ಮೇಲೆ ನಾವು ಇಲ್ಲಿಂದ ಮುಂದೆ ಎತ್ತ ಸಾಗುತ್ತೇವೆ ಎಂಬುದನ್ನು ಪರಿಭಾವಿಸಲು ಸಹಾಯ ಮಾಡುತ್ತಾರೆ. ಚರಿತ್ರೆಯನ್ನು ಅರ್ಥ ಮಾಡಿಕೊಳ್ಳದವರು, ಆ ಚರಿತ್ರೆಯಲ್ಲಿ ಮಾಡಿದ್ದ ತಪ್ಪುಗಳನ್ನೇ ಮತ್ತೆ ಮಾಡುವುದರಲ್ಲಿ ಸಂದೇಹವಿಲ್ಲ.

ಈ ಪ್ರಬಂಧ, ಸಾಹಿತ್ಯ, ರಾಜಕೀಯ ಮತ್ತು ಚರಿತ್ರೆ – ಈ ಮೂರು ಅಂಗಗಳು ನಮಗೆ ನಮ್ಮ ಮತ್ತು ಇತರರ ಜೀವನವನ್ನು ಅರ್ಥಮಾಡಿಕೊಳ್ಳುವಲ್ಲಿ ವಹಿಸುವ ಮುಖ್ಯ ಪಾತ್ರವನ್ನು ತೋರಿಸಲು ಯತ್ನಿಸಿದೆ. ಲುಯಿಸ್ ಹೇಳಿದಂತೆ 'ಹಳೆಗಾಲದ ಪೂರ್ವಗ್ರಹಗಳು, ಪರಸ್ಪರ ವ್ಯತ್ಯಾಸಗಳನ್ನೇ ಕೆರಳಿಸುವುದು, ಇವುಗಳ ಮೂಲಕ ಸಂಭವಿಸಬಹುದಾದ ಹೊಸ ಧಾರ್ಮಿಕ ಯುದ್ಧಗಳನ್ನು ತಡೆಯಲು ನಾವು ಎಲ್ಲ

ವಿಧದಲ್ಲೂ ಜಾಗರೂಕತೆ ವಹಿಸಬೇಕು. ಈ ಉದ್ದೇಶ ಸಾಧನೆಗಾಗಿ ನಾವು ಇತರ ಜನಾಂಗಗಳ ಧಾರ್ಮಿಕ, ರಾಜಕೀಯ ಸಂಸ್ಕೃತಿಗಳನ್ನು ಅವರ ಇತಿಹಾಸ, ಸಾಹಿತ್ಯ ಮತ್ತು ಸಾಧನೆಗಳನ್ನು ಓದುವುದರ ಮೂಲಕ ಅರಿತುಕೊಳ್ಳುವುದು ಅವಶ್ಯಕ' (we must take care on all sides to avoid the danger of a new era of religious wars, arising from the exacerbation of differences and the revival of ancient prejudices. To this end, we must strive to achieve a better appreciation of other religious and political cultures, through the study of their history, their literature and their achievements.).

ಈ ನಿಟ್ಟಿನಲ್ಲಿ, ನನ್ನ ಅನಿಸಿಕೆಯಲ್ಲಿ ಪಮುಕರು ಟರ್ಕಿಯಲ್ಲಿ ನಡೆಯುತ್ತಿರುವ ಆಂತರಿಕ ಘರ್ಷಣೆಯನ್ನು ನಮಗೆ ತಿಳಿಸುತ್ತಾರೆ (ಪುಸ್ತಕವನ್ನು ಓದಿ ಮುಚ್ಚಿಡುವ ಹೊತ್ತಿಗೆ ಟರ್ಕಿಯ ಘರ್ಷಣೆಯ ವಿಚಾರದಲ್ಲಿ ನಮ್ಮ ತಿಳುವಳಿಕೆ ಹೆಚ್ಚಿ, ಅನುಭೂತಿ ಶಕ್ತಿ ಉಂಟಾಗಿರುತ್ತದೆ). ಪಮುಕರ ದೃಷ್ಟಿಯಲ್ಲಿ ಈ ಸಮಸ್ಯೆಗೆ ಅಂತಿಮ ಪರಿಹಾರವೆಂಬುದಿಲ್ಲ; ಈ ಘರ್ಷಣೆಯೊಂದಿಗೆ ನಾವು ಸತತವಾಗಿ ವ್ಯವಹರಿಸಲೇಬೇಕು. ಇದನ್ನು ಅವರು 'The great unfinishedness of becoming' ಎಂಬ ಮಾರ್ಮಿಕವಾದ ಮಾತುಗಳಲ್ಲಿ ಹೇಳಿದ್ದಾರೆ. ಪಮುಕರಂತಲ್ಲದೆ, ಆವರಣದಲ್ಲಿ ಧಾರ್ಮಿಕ ಘರ್ಷಣೆಗೆ ಅಂತಿಮ ಪರಿಹಾರವನ್ನು ಹುಡುಕುವ ಪ್ರಯತ್ನ ಕಾಣಿಸುತ್ತದೆ. ಆದರೆ ಅದು ಸಾಧ್ಯವೇ?

ಪರಸ್ಪರ ಅವಲಂಬನವುಳ್ಳ ನಮ್ಮ ಈ ಆಧುನಿಕ ಜೀವನದ ಬಗ್ಗೆ ಈಗ ನಡೆಯುತ್ತಿರುವ ಬಿರುಸಿನ ಚರ್ಚೆ – ನಾವೆಲ್ಲ ಪಾಲುಗೊಳ್ಳುವ ಇತಿಹಾಸ ಮತ್ತು ಭವಿಷ್ಯದ ಬಗ್ಗೆ – ಮುಂದುವರೆಯಲೇಬೇಕು. ನಮ್ಮ ನಮ್ಮ ಪ್ರತ್ಯೇಕ ಸಮಾಜಗಳ

ಇತಿಹಾಸಗಳಿಂದ ನಾವು ಮೇಲೇರಿದರೆ ಮಾತ್ರವೇ ಮಾನವ ಕುಲವಾಗಿ ನಮ್ಮ ಉಳಿವು; ಬೆಳವಣಿಗೆ ಸಾಧ್ಯ.

**ಆಧಾರಗಳು**

1. My Name is Red, Orhan Pamuk, Vintage International, 2002
2. Snow , Orhan Pamuk, Faber and Faber, 2004
3. The End of History and The Last Man, Francis Fukuyama, Simon and Schuster, 1992

4. The Roots of Muslim Rage, Bernard Lewis, `The Atlantic Monthly' magazine, September 1990.
5. The Clash of Civilizations and The Remaking of World Order, Samuel Huntington, Simon and Schuster, 1996
6. The Clash of Ignorance, Edward Said, 'The Nation' magazine, October 22, 2001
7. Identity and Violence: The Illusion of Destiny, Amartya Sen, Penguin (Allen Lane), 2006

**ಕೃತಿ ವಿವರ:** ಆವರಣ, ಎಸ್.ಎಲ್. ಭೈರಪ್ಪ, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೭ (೧೩ ನೇ ಮುದ್ರಣ, ೨೦೦೭), ಪು. ೨೭೫

## ‘ಎನ್ನ ಭವದ ಕೇಡು’ ಕಥೆ – ವಿರುದ್ಧ ಧ್ರುವಗಳ ಜಟಾಪಟಿಯ ವ್ಯಥೆ

ಎಂ.ಆರ್. ದತ್ತಾತ್ರಿ, ಅರ್ವೈನ್, ಕ್ಯಾಲಿಫೋರ್ನಿಯಾ

ಪ್ರಾರಂಭದಲ್ಲೇ ಒಂದು ವಿಷಯವನ್ನು ನಾನು ಸ್ಪಷ್ಟಪಡಿಸಿಬಿಡಬೇಕು. ಬೇಕಾದರೆ, ನನ್ನ ಮುಂದಿನ ಬರವಣಿಗೆಯ ನಿರಾಕರಣವೆಂದಾದರೂ ಕರೆಯಿರಿ.

ಯಾವುದಾದರೂ ಕಲಾಕೃತಿಯನ್ನು ವಿಮರ್ಶೆಗೆ ಒಳಪಡಿಸಬಹುದು ಎನ್ನುವುದರ ಬಗ್ಗೆ ನನಗೆ ನಂಬಿಕೆ ಹೊರಟುಹೋಗಿದೆ. ಸಾಹಿತ್ಯವನ್ನು ಒಳಗೊಂಡಂತೆ ಸಕಲ ಮಾನವೀಯ ಕಲೆಗಳು ಸ್ವಾನುಭವಕ್ಕಷ್ಟೇ ದಕ್ಕುವಂತಹದ್ದಾಗಿ ವಿಮರ್ಶಾತ್ಮಕ ಮಾತುಗಳಿಂದ ಮುನ್ನೂರು ಅಡಿ ಮೇಲಿರುತ್ತವೆ ಎಂದು ನಂಬಿರುವವನು ನಾನು. ಕಲಾಕೃತಿಗಳ ವಿಚಾರದಲ್ಲಿ ಜರ್ಮನ್ ಕವಿ ರಿಲ್ಕನ ಮಾತುಗಳು ಯಾವಾಗಲೂ ನನ್ನಲ್ಲಿ ನೆನಪಿನಲ್ಲಿರುತ್ತವೆ– Works of art are of an infinite solitude, and no means of approach is so useless as criticism. ಕಲೆಯ ಸ್ವಾನುಭವ ವ್ಯಕ್ತಿಯಿಂದ ವ್ಯಕ್ತಿಗೆ ಆ ಮನುಷ್ಯನ ಅನುಭವ, ಲೋಕಜ್ಞಾನ ಮತ್ತು ಮನಃಶಾಸ್ತ್ರಗಳ ಚೌಕಟ್ಟಿನಲ್ಲಿ ಬೇರೆಯಾಗುತ್ತಾ ಹೋಗಿ ಹೋಲಿಸಲಾರದ ಸ್ಥಿತಿಯನ್ನು ಮುಟ್ಟುತ್ತದೆ. ರುಚಿ ಎನ್ನುವುದು ಒಬ್ಬರಿಂದ ಒಬ್ಬರಿಗೆ ಬದಲಾದಂತೆ ಕಲೆಯ ಆಸ್ವಾದನೆ ಕೂಡ. ನನಗೆ ಹಾಲು ಸಕ್ಕರೆ ಏನೂ ಹಾಕದ ಬರಿಯ ಕಾಫಿ ಇಷ್ಟ. ನನ್ನ ಹೆಂಡತಿಗೆ ಜಾಸ್ತಿ ಹಾಲು ಮತ್ತು ಕಡಿಮೆ ಸಕ್ಕರೆ ಇರಬೇಕು. ನನ್ನ ತಾಯಿಗೆ ಜಾಸ್ತಿ ಸಕ್ಕರೆ ಕಡಿಮೆ ಹಾಲು ಸಾಕು. ಮಧುಮೇಹ ರೋಗಿಗಳಾದ ನನ್ನ ತಂದೆಯವರಿಗೆ ಸಕ್ಕರೆ ಬೇಡವೇ ಬೇಡ, ಆದರೆ ಗಟ್ಟಿ ಹಾಲು ಹಾಕಿರಬೇಕು. ಹೀಗೆ, ಒಂದು ಮನೆಯಲ್ಲೇ ಕಾಫಿ ಎನ್ನುವ ಸರಳ ಪೇಯಕ್ಕೇ ನಾಲ್ಕು ಜನರಲ್ಲಿ ನಾಲ್ಕು ರುಚಿಗಳು ಉತ್ಪನ್ನವಾಗಬೇಕಿದ್ದರೆ ನಿಮ್ಮ ಕಾಫಿಯ ರುಚಿಯನ್ನು ಕಂಡುಕೊಳ್ಳಬೇಕಾದವರು ನೀವಲ್ಲದೆ ಸಕ್ಕರೆ ಹಾಕಿಕೊಳ್ಳಲೇ ಬೇಡಿ ಎಂದು ಹೇಳಲು ನಾನು ಯಾರು?

ಹಾಗಾಗಿ, ನಾನು ಇಲ್ಲಿ ನನ್ನ ಓದಿನ ಅನುಭವವನ್ನಷ್ಟೇ ದಾಖಲಿಸುತ್ತಿದ್ದೇನೆ. ಎಸ್. ಸುರೇಂದ್ರನಾಥರ 'ಎನ್ನ ಭವದ ಕೇಡು' ಕಾದಂಬರಿ ಓದಿದಾಗ ನನಗನ್ನಿಸಿದ್ದು ಹೀಗೆ ಎಂದಷ್ಟೇ ಬರೆಯಬಲ್ಲೆ. ನನ್ನ ಮನಸ್ಸಿಗೆ ತಟ್ಟಿದ ಅಂಶಗಳಾವುವು ಎನ್ನುವುದನ್ನು ವೈಯಕ್ತಿಕ ಹಂತದಲ್ಲಿ ನಿಮ್ಮೊಡನೆ ಹಂಚಿಕೊಳ್ಳಬಲ್ಲೆ. ನೀವು ಈ ಕಾದಂಬರಿಯನ್ನು ಓದುವಾಗ ನನ್ನ ಅನುಭವಗಳು ನಿಮ್ಮದಾಗದಿದ್ದರೆ ಚಿಂತಿಸುವ ಅವಶ್ಯಕತೆಯಿಲ್ಲ. ನಿಮ್ಮ ಕಾಫ್ಹಿಯ ರುಚಿಯೇ ಬೇರೆ, ನನ್ನದೇ ಬೇರೆ. ಎರಡಕ್ಕೂ ಸಂಧಿಯಾಗಿಸುವ ಸಾಹಸಗಳು ವ್ಯರ್ಥ. ರುಚಿ ವೈಯಕ್ತಿಕ ಎನ್ನುವುದನ್ನು ನೆನಪಿನಲ್ಲಿಟ್ಟರೆ ಸಾಕು.

'ಎನ್ನ ಭವದ ಕೇಡು' ಸುರೇಂದ್ರನಾಥರ ಮೊದಲ ಕಾದಂಬರಿ. ಇಡೀ ಕಾದಂಬರಿಯಲ್ಲಿ ನನಗಾದ ಮುಖ್ಯ ಅನುಭವವೆಂದರೆ, ಡ್ರೈವಿಂಗ್ ಚೆನ್ನಾಗಿ ಬಲ್ಲ ಆದರೆ ಅಪರಿಚಿತ ಊರಿನಲ್ಲಿ (ಉದಾಹರಣೆಗೆ ಮುಂಬಯಿ ಎಂದಿಟ್ಟುಕೊಳ್ಳಿ) ದಾರಿ ತಪ್ಪಿದ ಡ್ರೈವರ್‌ನೊಂದಿಗೆ ಪಯಣಿಸಿದಂತೆ. ನುರಿತ ಕಾದಂಬರಿಕಾರರ ಕೃತಿಗಳನ್ನು ಓದುವಾಗ ಅವರ ಡ್ರೈವಿಂಗ್ ಶೈಲಿಯಲ್ಲೇ ನಿಮಗೆ ತಿಳಿಯುತ್ತದೆ ನಿಮಗಿಂತಲೂ ಮುಂಚೆ ಅವರು ಆ ರಸ್ತೆಯನ್ನು ಸಾವಿರ ಸಲ ಕ್ರಮಿಸಿದ್ದಾರೆಂದು. ಟಾಲ್‌ಸ್ಟಾಯ್ ಆಗಲಿ, ಭೈರಪ್ಪನವರಾಗಲಿ, ಕಾರಂತರಾಗಲಿ, ಬಲ್ಲಾಳರಾಗಲಿ ಅವರು ನಿಮ್ಮ ಓದನ್ನು ಡ್ರೈವ್ ಮಾಡುವಾಗ ದಾರಿಯನ್ನು ಅವರಿಗೆ ಒಪ್ಪಿಸಿ ಸೀಟಿಗೆ ಒರಗಿ ನೀವು ನಿದ್ದೆ ಮಾಡಿಬಿಡಬಹುದು. ಆದರೆ ಸುರೇಂದ್ರನಾಥರ 'ಎನ್ನ ಭವದ ಕೇಡು' ಓದುವಾಗ ಹಾಗೆ ನಿದ್ರೆ ಮಾಡಲಾಗುವುದಿಲ್ಲ. ಡ್ರೈವರ್ ತಾನು ಹಾದಿ ತಪ್ಪಿ ನಿಮ್ಮನ್ನೂ ಹಾದಿ ತಪ್ಪಿಸಿ ಸ್ಟೀರಿಂಗ್ ವ್ಹೀಲ್ ಹಿಡಿದಂತೆಯೇ ಹಿಂತಿರುಗಿ ನಿಮ್ಮೆಡೆಗೆ ನೋಡಿ 'ತೂಕಡಿಸದೆ ಜಾಗೃತವಾಗಿದ್ದು ನನಗೆ ದಾರಿ ಹುಡುಕಲು ನೆರವಾಗಿ' ಎನ್ನುತ್ತಾನೆ ಮಧ್ಯರಾತ್ರಿಯಲ್ಲಿ ಕಳೆದುಹೋದ ಆತಂಕದಲ್ಲಿ. ನಿಮಗೆ ಕಣ್ಣೆಳೆದು ಬರುತ್ತಿದ್ದರೂ ಮಲಗಿಬಿಟ್ಟರೆ ಇನ್ನೆಲ್ಲಿ ಈ ಡ್ರೈವರ್ ಕತ್ತಲೆಯ ರಸ್ತೆಗಳಿಗೆಲ್ಲಾ ನುಗ್ಗಿ ಏನೂ ಕಾಣದಂತಾಗಿ ಅರಬ್ಬೀಸಮುದ್ರಕ್ಕೇ ಬೀಳಿಸಿಬಿಡುತ್ತಾನೋ ಎಂದು ಗಾಬರಿಬಿದ್ದು ಡ್ರೈವರ್‌ನೊಂದಿಗೆ ಮಾತಿಗಿಳಿದು ರಸ್ತೆ ಹುಡುಕುವ ಕಾಯಕಕ್ಕೆ ನೆರವಾಗ ಹೊರಡುತ್ತೀರ. ಓದುಗರು ಓದುಗರಾಗೇ ಇದ್ದು ತಮ್ಮ ಸುಖಾಸನದಲ್ಲಿ ತೂಕಡಿಸುತ್ತ ತಮ್ಮ ನಿಲ್ದಾಣ ಬಂದಾಗ ಇಳಿದುಕೊಳ್ಳಬೇಕೇ ಅಥವಾ ಡ್ರೈವರ್‌ನೊಂದಿಗೆ ರಸ್ತೆ ಹುಡುಕಬೇಕೇ? ಮತ್ತೆ ಕಾಫ್ಹಿಯ ರುಚಿಯ ಮಾತನಾಡುತ್ತಿದ್ದೇವೆ.

ಈ ಲೇಖನದ ಸರಾಗ ಓದಿಗೆ ಮೇಲ್ಮಟ್ಟದಲ್ಲಿಯಾದರೂ ಕಥೆಯನ್ನು ತಿಳಿದುಕೊಳ್ಳುವುದು ಓದುಗರಾಗಿ ನಿಮಗೆ ಅಗತ್ಯವಾಗಬಹುದೆಂದು ನಾನು ಭಾವಿಸುವುದರಿಂದ ಸಂಕ್ಷಿಪ್ತವಾಗಿ ಈ ಕಾದಂಬರಿಯ ಕಥೆಯನ್ನು ತಿಳಿಸುತ್ತಿದ್ದೇನೆ. ವಿಶೇಷವಾಗಿ, ಈ ಲೇಖನ ಅಮೆರಿಕದ ಸಾಹಿತ್ಯರಂಗದ ಸಂಚಿಕೆಯಲ್ಲಿ ಪ್ರಕಟವಾಗುತ್ತಿರುವ

ಕಾರಣ, ಅಮೆರಿಕದ ಕನ್ನಡ ಓದುಗರಿಗೆ ಈಚಿನ ದಿನದಲ್ಲಿ ಕರ್ನಾಟಕದಲ್ಲಿ ಪ್ರಕಟವಾದ ಈ ಕಾದಂಬರಿಯನ್ನು ಓದುವ ಮುಂಚೆ ಈ ಲೇಖನ ಕೈಸೇರುವ ಸಾಧ್ಯತೆ ಜಾಸ್ತಿಯಿರುವುದರಿಂದ ಹೀಗೆ ಕಥೆಯನ್ನು ತಿಳಿಸುವುದು ಸೂಕ್ತ ಎಂದು ಭಾವಿಸಿದ್ದೇನೆ.

ಕಥೆ ನಡೆಯುವುದು ಸುಮಾರು ಐವತ್ತು ವರ್ಷಗಳ ಹಿಂದಿನ ಕಾಲಾವಧಿಯಲ್ಲಿ. ದಾವಣಗೆರೆಯಲ್ಲಿ ಹೊಟೇಲ್ ಉದ್ಯಮವನ್ನು ನಡೆಸುವ ಗೋವರ್ಧನರಾಯರು ಮದುವೆಯಾಗುವುದು ಪುಣೆಯ ಮಾಮಿಯನ್ನು. ಆಕೆಯ ನಿಜವಾದ ಹೆಸರು ಶಶಿಕಲಾ ಎಂದಾದರೂ ಚಿಕ್ಕವಯಸ್ಸಿನಿಂದಲೇ ಆಕೆಯಿಂದ ಪ್ರದರ್ಶಿತವಾಗುತ್ತಿದ್ದ ಅತೀಂದ್ರಿಯ ಶಕ್ತಿಯಿಂದಾಗಿ ಆಕೆ ಎಲ್ಲರಿಗೂ 'ಮಾಮಿ' ಯಾಗುತ್ತಾಳೆ. ಒಳ್ಳೆಯ ಮೈಕಟ್ಟಿನ ಸುಂದರ ಹೆಣ್ಣಾದ ಮಾಮಿ ಆಂತರಿಕವಾಗಿ ಮಾತ್ರ ಬಹಳ ಭಿನ್ನವಾದ ವ್ಯಕ್ತಿ. ಅವಳ ಅತೀಂದ್ರಿಯ ಶಕ್ತಿ ತಳಕು ಹಾಕಿಕೊಂಡಿದ್ದುದು ಬಹಳಮಟ್ಟಿಗೆ ಸಾವಿನೊಂದಿಗೆ. ಸುತ್ತಮುತ್ತಲ ಜನರ ಸಾವನ್ನು ಮುಂಚಿತವಾಗಿಯೇ ಕಾಣುವ ಶಕ್ತಿ ಆಕೆಗಿರುತ್ತದೆ.

ಆದರೆ ಈ ಮಾಮಿ ಗಂಡನೊಂದಿಗೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಹತ್ತಿರದ ಸಂಬಂಧವಿಟ್ಟುಕೊಳ್ಳಲು ಒಪ್ಪದವಳು. ಹಾಗಾಗಿ ಮಾಮಿ ಮತ್ತು ಗೋವರ್ಧನರಾಯರ ಸಂಬಂಧ ಮದುವೆಯಾಗಿ ಹದಿನಾಲ್ಕು ವರ್ಷಗಳು ಕಳೆದರೂ ಒಬ್ಬರಿಂದ ಒಬ್ಬರು ಕಣ್ಮರೆಸಿ ಓಡಾಡುವ, ಒಬ್ಬರಿಗೊಬ್ಬರು ಬೆನ್ನು ತಿರುಗಿಸಿ ಮಲಗುವ ಸ್ಥಿತಿಯಿಂದ ಮೇಲಕ್ಕೆ ಹೋಗುವುದಿಲ್ಲ. ಈ ಸಂದರ್ಭದಲ್ಲಿ ಅನಿರೀಕ್ಷಿತವಾಗಿ ಗೋವರ್ಧನರಾಯರು ರಾಧಾ ಎನ್ನುವ ಹುಡುಗಿಯನ್ನು ತಮ್ಮ ಎರಡನೆಯ ಹೆಂಡತಿಯಾಗಿ ಮದುವೆಯಾಗಿ ಬರುತ್ತಾರೆ. ಗೋವರ್ಧನರಾಯರ ಜೀವನಕ್ಕೆ ಮತ್ತೊಬ್ಬ ಹೆಣ್ಣಿನ ಪ್ರವೇಶ ಮಾಮಿಯನ್ನು ಆ ಸಂಸಾರದಿಂದ ಪೂರ್ತಿಯಾಗಿಯೇ ಬೇರ್ಪಡಿಸಿಬಿಡುತ್ತದೆ.

ಗೋವರ್ಧನರಾಯರು ಸಂಸಾರ ಸುಖವನ್ನು ಕಾಣುವುದು ರಾಧಾಳನ್ನು ಮದುವೆಯಾಗಿ ಬಂದ ಮೇಲೆಯೇ. ರಾಧಾಳಿಂದ ಅವರಿಗೆ ನಾಲ್ಕು ಹೆಣ್ಣು ಮಕ್ಕಳಾಗುತ್ತವೆ. ಗಂಗೆ, ಯಮುನೆ, ಗೋದಾವರಿ ಮತ್ತು ಸರಸ್ವತಿ. ಸರಸ್ವತಿ ಜನಿಸುವುದು ಅಡುಗೆ ಮನೆಯಲ್ಲಿ. ಸರಸ್ವತಿಯ ಹುಟ್ಟು ರಾಧೆಗೆ ಸಾವಾಗುತ್ತದೆ. ತಾಯಿಯನ್ನು ಹುಟ್ಟುತ್ತಲೇ ಕಳೆದುಕೊಂಡು ಅಡುಗೆ ಮನೆಯಲ್ಲಿ ಜನಿಸಿದ ಹುಡುಗಿಗೆ ಅಡುಗೆ ಮನೆಯೇ ಮುಂದಿನ ಜೀವನದ ನೆಲೆಯಾಗುತ್ತದೆ.

ಗೋವರ್ಧನರಾಯರ ಮನೆಯಲ್ಲಿ ಹೆಣ್ಣು ಮಕ್ಕಳು ಬೆಳೆದು ದೊಡ್ಡವರಾಗುತ್ತಲೇ ಮುಂದಿನ ಕತೆಯ ಹೆಚ್ಚು ಭಾಗ ಮಾಮಿ ಮತ್ತು ಸರಸ್ವತಿಯ ಜಟಾಪಟಿಗೆ ಸೇರಿದ್ದು. ಸರಸ್ವತಿ ತನ್ನ ಬೆಳವಣಿಗೆಯ ಒಂದೊಂದು ಹಂತದಲ್ಲೂ ಮಾಮಿಯೊಂದಿಗೆ ಯುದ್ಧ ಮಾಡಬೇಕಾಗುತ್ತದೆ. ಹಿರಿಯಕ್ಕ ಗಂಗೆಯ ಮದುವೆಯ ಸಂದರ್ಭದಲ್ಲಿ ವಾಸುದೇವನೆಂಬ

ಯುವಕ ಸರಸ್ವತಿಯನ್ನು ಮೋಹಿಸುತ್ತಾನೆ. ಮಾಮಿಯ ಶಕ್ತಿಯೆಲ್ಲವೂ ಮುಂದೆ ಸರಸ್ವತಿ ಮತ್ತು ವಾಸುದೇವ ಒಂದಾಗದಂತೆ ತಡೆಯುವುದರಲ್ಲೇ ವಿನಿಯೋಗವಾಗುತ್ತದೆ. ಮಾಮಿ ಆಗ್ರಹದಿಂದ ವಾಸುದೇವನನ್ನು ಸರಸ್ವತಿಯ ಎರಡನೇ ಅಕ್ಕ ಯಮುನೆಗೆ ಮದುವೆ ಮಾಡಿಬಿಡುತ್ತಾಳೆ.

ಗೋವರ್ಧನರಾಯರು ನಡೆಸುವ ಹೊಟೇಲ್ ಉದ್ಯಮದ ವಿವರಣೆ ಕಥೆಯಲ್ಲಿ ಬರುತ್ತದೆ. ಜೊತೆಯಲ್ಲೇ, ದಾವಣಗೆರೆ ಕಾಟನ್‌ಮಿಲ್‌ನ ಯೂನಿಯನ್ ಗಲಾಟೆಗಳು ಹಾಗೂ ಯೂನಿಯನ್ ಲೀಡರ್ ಆದ ಪಂಪಾಪತಿ ಗೋವರ್ಧನರಾಯರಿಗೆ ಹತ್ತಿರವಾಗುವ ಬಗೆ ಮುಂತಾದವು ಕಾದಂಬರಿಯಲ್ಲಿ ಚೆನ್ನಾಗಿ ಚಿತ್ರಿತವಾಗಿವೆ.

ಗೋವರ್ಧನರಾಯರ ಸಾವಿನ ನಂತರ ಮಾಮಿಯೇ ಮನೆಯ ಉಸ್ತುವಾರಿಯನ್ನು ಸಂಪೂರ್ಣವಾಗಿ ವಹಿಸಿಕೊಳ್ಳುತ್ತಾಳೆ. ಗೋವರ್ಧನರಾಯರ ಸಾವಿನ ಆಸುಪಾಸಿನ ಸಂದರ್ಭದಲ್ಲಿ ಮಾಮಿ ತನ್ನ ದೂರ ಉಳಿಯುವ ಸ್ವಭಾವವನ್ನು ಬಿಟ್ಟು ಮನೆಯ ಮೇಲ್ವಿಚಾರಣೆಯನ್ನು ವಹಿಸಿಕೊಳ್ಳುವ ಮೂಲಕ ಬದಲಾಗುತ್ತಿದ್ದಾಳೇನೋ ಎನ್ನುವ ಕಿರು ಆಸೆಯನ್ನು ಮೂಡಿಸುತ್ತಾಳೆ. ಇದು ಯಾವ ಮಟ್ಟದತನಕ ಹೋಗುತ್ತದೆ ಎಂದರೆ ಗೋವರ್ಧನರಾಯರ ಸಾವಿನ ಸಮಯವನ್ನು ತನ್ನ ಅತೀಂದ್ರಿಯ ಶಕ್ತಿಯಿಂದ ಗ್ರಹಿಸಿದ ಮಾಮಿ ಅವರ ಸಾವಿನ ಕೆಲವು ಕ್ಷಣಗಳ ಹಿಂದೆ ತನ್ನನ್ನು ಅವರಿಗೊಪ್ಪಿಸಿ ದೇಹಸುಖವನ್ನೂ ನೀಡುತ್ತಾಳೆ! ಆದರೆ ಮಾಮಿಯ ಈ ಬದಲಾವಣೆಗಳು ತಾತ್ಕಾಲಿಕವಾದದ್ದು.

ತನ್ನ ಸ್ವಭಾವದ ತೀರಾ ವಿರುದ್ಧ ಧ್ರುವದಲ್ಲಿರುವ ಸರಸ್ವತಿಯೊಂದಿಗಿನ ಹೋರಾಟದಲ್ಲಿ ಮಾಮಿ ಎಂತಹ ಮಟ್ಟಕ್ಕಾದರೂ ಇಳಿಯುತ್ತಾಳೆ. ಸರಸ್ವತಿಯನ್ನು ಕೋಣೆಯೊಂದರಲ್ಲಿ ಕೂಡುಹಾಕಿ ಆಕೆಯನ್ನು ಕೊಲ್ಲಲು ಪ್ರಯತ್ನಿಸುವವರೆಗೂ ಮಾಮಿಯ ಕ್ರೋಧ ಮುಂದುವರಿಯುತ್ತದೆ. ಈ ಸಂದರ್ಭದಲ್ಲಿ ಸರಸ್ವತಿಯನ್ನು ಬದುಕಿಸಿದ ಡಾಕ್ಟರನೊಬ್ಬ ಆಕೆಯನ್ನು ನಿಜವಾಗಲೂ ಪ್ರೀತಿಸುತ್ತಾನಾದರೂ, ಸಾವಿರ ಸಂಕೋಲೆಗಳಿಂದ ಬಂಧಿತಳಾದ ಸರಸ್ವತಿಗೇ ಆ ಪ್ರೀತಿಯನ್ನು ಒಪ್ಪಲಾಗುವುದಿಲ್ಲ. ಕೊನೆಗೆ, ಮಾಮಿಯ ಮೇಲಿನ ಸೇಡಿನಿಂದಲೇ, ಮಾಮಿ ದ್ವೇಷಿಸುವ ಗಂಡು ಹೆಣ್ಣಿನ ದೇಹ ಸಂಪರ್ಕದಿಂದಲೇ ಆಕೆಯ ಮೇಲೆ ವಿಜಯ ಸಾಧಿಸುವ ಉದ್ದೇಶದಿಂದ ತನ್ನ ಪ್ರೇಮಿ ಮತ್ತು ಭಾವ ವಾಸುದೇವನೊಂದಿಗೆ ದೇಹಸಂಪರ್ಕವನ್ನು ಹೊಂದುತ್ತಾಳೆ.

ಇದು ಕಥೆಯ ಸಾರಾಂಶ.

'ಎನ್ನ ಭವದ ಕೇಡು' ಶೃಂಗಾರದ ನೆರಳಿನಲ್ಲಿ ಕೆಲವೊಮ್ಮೆ, ಆದರೆ ಬಹುಪಾಲು ಶೃಂಗಾರದ ಹೊರತಾಗಿ ಕಾಮದೊಂದಿಗೆ ಮುಖಾಮುಖಿಯಾಗುವ ಕಾದಂಬರಿ. ಎರಡು ತದ್ವಿರುದ್ಧ ದ್ರುವಗಳು ಒಂದೇ ಮನೆಯಲ್ಲಿ ಬದುಕಿ ಪ್ರತಿಕ್ಷಣವೂ

ಮುಖಾಮುಖಿಯಾಗಿ ಜೀವನವನ್ನು ನರಕವನ್ನಾಗಿಸಿಕೊಳ್ಳುವ ವಸ್ತು. ಮಾಮಿಗೆ ದೇಹಸುಖವೆನ್ನುವುದು ಭವದ ಬಂಧನದ ಸಂಕೇತ. ಅತೀಂದ್ರಿಯ ಜ್ಞಾನವುಳ್ಳ ಆಕೆಗೆ ತಾನು ಗಂಡನೊಂದಿಗೆ ಕೂಡಿ ಗರ್ಭವತಿಯಾದರೆ ತನ್ನ ಸಾವು ನಿಶ್ಚಿತ ಎಂದು ಅರಿತವಳಾದ್ದರಿಂದಲೇ ಗಂಡನನ್ನು ದೂರವಿಡುತ್ತಾಳೆ ಎಂಬುದು ಮೇಲ್ಮಟ್ಟದ ಮಾತಾದರೂ ಒಳಾರ್ಥದಲ್ಲಿ ಆಕೆ ಜೀವವಿರೋಧಿ. ಆಕೆ ಸೃಷ್ಟಿಗಿಂತಲೂ ಹೆಚ್ಚಾಗಿ ಸಾವಿನೊಂದಿಗೆ ಒಲವು ಕಂಡವಳು. ಹಾಗಾಗಿಯೇ ಅನೇಕ ಪಾತ್ರವರ್ಗಗಳ ಸಾವು ಆಕೆಗೆ ಮುಂಚಿತವಾಗಿಯೇ ಗೋಚರವಾಗುತ್ತವೆ. ಆಕೆಗೆ ತಾನಷ್ಟೇ ಅಲ್ಲ ಪ್ರಪಂಚದ ಯಾವ ಗಂಡು ಹೆಣ್ಣುಗಳೂ ಒಂದಾಗುವುದು ಇಷ್ಟವಿಲ್ಲ. ಹುಲಿಗೆ ತನ್ನ ಗಡಿಯೊಳಗೆ ಪ್ರವೇಶಿಸುವ ಶತ್ರುಗಳ ವಾಸನೆ ಮೈಲಿದೂರದಿಂದಲೇ ಹೊಡೆಯುವಂತೆ ಈ ಮಾಮಿಗೆ ತನ್ನ ಪರಿಧಿಯೊಳಗೆ ನಡೆಯುವ ದೇಹಸುಖ ಪ್ರಸಂಗಗಳು ಅತೀಂದ್ರಿಯ ಶಕ್ತಿಯಿಂದ ಗೋಚರಿಸುತ್ತವೆ. ಹಾಗಾಗಿಯೇ ವಾಸುದೇವ ಏಕಾಂತದ ಸಮಯ ಸಾಧಿಸಿ ಸರಸ್ವತಿಯನ್ನು ಮುಟ್ಟಿದಾಗಲೆಲ್ಲಾ, ಅಡುಗೆ ಮನೆಯಾಗಬಹುದು, ಹಿತ್ತಲಾಗಬಹುದು ಅಥವ ಏಕಾಂತದ ಕೋಣೆಯಲ್ಲಾಗಬಹುದು, ಏಳಲಾಗದೇ ಅರೆಜೀವದಿಂದ ಮಲಗಿದ ಸಂದರ್ಭದಲ್ಲೂ ಮಾಮಿ ತನ್ನ ಹಾಸಿಗೆಯಲ್ಲೇ ನರಳುತ್ತಾಳೆ, ರೋದಿಸುತ್ತಾಳೆ, ಹುಚ್ಚಿಯಂತೆ ಕಿರುಚಾಡುತ್ತಾಳೆ.

ಇಡೀ ಕಾದಂಬರಿಗೆ ಮಾಮಿ ಕೇಂದ್ರಬಿಂದುವಾಗುತ್ತಾಳೆ. ಸೂರ್ಯನ ಸುತ್ತ ಗ್ರಹಗಳು ಸುತ್ತುವಂತೆ ಮಾಮಿಯ ಸುತ್ತ ಉಳಿದ ಪಾತ್ರವರ್ಗಗಳು ಸುತ್ತುತ್ತವೆ. ಜೀವನ್ಮುಖ ಪಾತ್ರಗಳು ಸಮಾಜದಲ್ಲಿ ವಿಪುಲವಾದ ಕಾರಣ ಚಿತ್ರಣವೂ ತೀರಾ ಕಾಲ್ಪನಿಕವಾಗಬೇಕಿಲ್ಲ. ಆದರೆ ಜೀವವಿಮುಖ ಪಾತ್ರಗಳು ಸಮಾಜದಲ್ಲಿ ವಿರಳ, ಹಾಗಾಗಿ ಚಿತ್ರಣವೂ ಕಷ್ಟ. ಭೈರಪ್ಪನವರ ಗೃಹಭಂಗ ಕಾದಂಬರಿಯಲ್ಲಿ ಬರುವ ಚೆನ್ನಿಗರಾಯನ ಪಾತ್ರ ಈ ಸಂದರ್ಭದಲ್ಲಿ ನೆನಪಾಗುತ್ತದೆ. ಚೆನ್ನಿಗರಾಯ ಜೀವನ ನಿರ್ಲಕ್ಷ್ಯದ ಪರಮಾವಧಿಯಲ್ಲಿ ಬದುಕುವವನು. ಆತನಿಗೆ ತನ್ನ ಸ್ವಂತ ಸುಖ ಎಷ್ಟು ಬೃಹತ್ತಾಗುತ್ತದೆ ಎಂದರೆ ಮಕ್ಕಳು ಹೆಂಡತಿ ತಾಯಿಯನ್ನೊಳಗೊಂಡ ನಿಜ ಪ್ರಪಂಚವೇ ಆತನಿಗೆ ಬೇಡ. ಸ್ವಾರ್ಥ ಬದುಕಿನ ಪರಮಾವಧಿಯ ಚಿತ್ರಣ ಅದು. ಸಮಾಜದಲ್ಲಿ ಇಲ್ಲವೇ ಇಲ್ಲವೇನೋ ಎನ್ನುವಷ್ಟು ವಿರಳವಾದ ಪಾತ್ರ. ಹಾಗೆಯೇ ಸುರೇಂದ್ರನಾಥರ ಮಾಮಿ ಕೂಡ. ಆಕೆಯ ಅತೀಂದ್ರಿಯ ಶಕ್ತಿಗಳು ಆಕೆಯನ್ನು ಬೇರೆಯಾಗಿ ನಿಲ್ಲಿಸುವುದಾದರೂ ಅದೆಲ್ಲದಕ್ಕಿಂತ ಹೆಚ್ಚಾಗಿ ಆಕೆ ಜೀವನವಿಮುಖಿ. ಜೀವದ್ವೇಷಿ. ತನಗೆ ಬೇಡವಾದ ದೇಹಸುಖ ಗಂಡನಿಗೂ ಬೇಡ ಎಂದು ನಿರ್ಧರಿಸುವವಳು. ವಾಸುದೇವ ಮತ್ತು ಸರಸ್ವತಿ ತಮ್ಮ ದೇಹದ ಆಕರ್ಷಣೆಯಿಂದಲೇ ಹತ್ತಿರವಾಗುತ್ತಿದ್ದಾರೆ ಎಂದು ತಿಳಿದು

ಅವರಿಬ್ಬರನ್ನೂ ಶತ್ರುಗಳಂತೆ ಕಾಣುವವಳು. ತನ್ನೆಲ್ಲಾ ಶಕ್ತಿಯನ್ನು ಬಳಸಿ ಅವರಿಬ್ಬರನ್ನು ಪರಸ್ಪರರಿಂದ ದೂರ ಮಾಡುವವಳು. ಮನೆಯ ಜನರನ್ನು ಕಾಲಕಸದಂತೆ ಕಾಣುವವಳು. ತನಗಿಷ್ಟವಿಲ್ಲದ ಅಡುಗೆಯನ್ನು ಬಡಿಸಿದರೆ ತಟ್ಟೆಯನ್ನು ಸಿಟ್ಟಿನಿಂದ ರೊಯ್ಯನೆ ಎದುರು ಗೋಡೆಗೆ ಅಪ್ಪಳಿಸುವಂತೆ ಎಸೆಯುವವಳು. ತನ್ನ ವಿಕಾರಮತಿಯಿಂದ ಜೊತೆಯಲ್ಲಿ ಬದುಕುವ ಪಾತ್ರಗಳಲ್ಲಿ ಮತ್ತು ಮುಖ್ಯವಾಗಿ ಓದುಗರಲ್ಲಿ ಜಿಗುಪ್ಸೆ ಮೂಡಿಸುವವಳು. ಮನಸ್ಸನರಿಯಬಲ್ಲ ಅತೀಂದ್ರಿಯ ಶಕ್ತಿಯ ಮೂಕಜ್ಜಿ ಕಾರಂತರಿಗೆ ಮೌಲಿಕ ಜಗತ್ತಿನ ರೂಪಕವಾಗಿ ಕಂಡರೆ ಅದೇ ತರಹದ ಅತೀಂದ್ರಿಯ ಶಕ್ತಿಯುಳ್ಳ ಮಾಮಿ ಸುರೇಂದ್ರನಾಥರಿಗೆ ತದ್ವಿರುದ್ಧ ಜಗತ್ತಿನ ರೂಪಕವಾಗಿ ಕಾದಂಬರಿಯಲ್ಲಿ ಮೂಡುತ್ತಾಳೆ. ಇಂಗ್ಲೀಷ್‌ನ devil's advocate ಎನ್ನುವ ನುಡಿಗಟ್ಟು ಈ ಮಾಮಿಯ ಸಂದರ್ಭದಲ್ಲಿ ಪದೇಪದೇ ನೆನಪಿಗೆ ಬರುತ್ತದೆ.

'ಎನ್ನ ಭವದ ಕೇಡು' ಪೂರ್ತಿಯಾಗಿ ಎಂದು ಹೇಳುವಷ್ಟು ಸ್ತ್ರೀಪಾತ್ರಗಳ ಪ್ರಾಬಲ್ಯತೆಯ ಕಾದಂಬರಿಯಾದರೂ ಯಾವ ಪಾತ್ರವೂ ಸಬಲವಾಗದಿರುವುದು ನಿಜಕ್ಕೂ ಒಂದು ರೀತಿಯ ದುರಂತವೇ. ಕಥೆಯ ಚಿತ್ರಣ ಐವತ್ತು ದಶಕಗಳ ಹಿಂದಿನದು ಎನ್ನುವುದು ಒಂದು ಕಾರಣವಾಗಬಹುದಾದರೂ ಅದನ್ನೇ ಮುಖ್ಯ ಕಾರಣವನ್ನಾಗಿ ಊಹಿಸಿಕೊಳ್ಳುವುದು ಕಷ್ಟವಾಗುತ್ತದೆ. ತಂದೆಯೊಂದಿಗೆ ಹೊಟೇಲ್ ವ್ಯವಹಾರ ನಡೆಸುವ ಗಂಗೆ ಈ ವಿಷಯದಲ್ಲಿ ಸ್ವಲ್ಪ ಸಬಲತೆಯನ್ನು ಪ್ರದರ್ಶಿಸಿದರೂ, ಸ್ತ್ರೀಪಾತ್ರಗಳ ಅಸಹಾಯಕತೆಯನ್ನೇ ಪ್ರಧಾನವಸ್ತುವಾಗಿಸ ಹೊರಟ ಲೇಖಕರು ಗಂಗೆಯನ್ನು ಆಕೆ ಸ್ವರೂಪವಹಿಸುವ ಮೊದಲೇ ಮುಗಿಸಿಬಿಡುತ್ತಾರೆ. ಗಂಗೆಯ ತಂಗಿಯರಾಗಿ ಬರುವ ಯಮುನೆ, ಗೋದಾವರಿ ಮತ್ತು ಸರಸ್ವತಿಯರು ಬಳಲುವುದು ಕಾಲ ಮತ್ತು ಪರಿಸ್ಥಿತಿ ಗಿಂತಲೂ ಹೆಚ್ಚಾಗಿ ತಮ್ಮ ಮಾನಸಿಕ ದೌರ್ಬಲ್ಯಗಳಿಂದ, ದೇಹ ಪ್ರಕೃತಿಯನ್ನು ಮತ್ತು ದೇಹ ವಾಂಛಲ್ಯಗಳನ್ನು ಮಿತಿಯಾಗಿ ಸ್ವೀಕರಿಸುವ ತಮ್ಮ ಮನೋಸ್ಥಿತಿಗಳಿಂದ. ಈ ದೌರ್ಬಲ್ಯಗಳು ಒಮ್ಮೊಮ್ಮೆ ಎಂತಹ ಸಂಕೋಲೆಗಳಾಗಿ ಬಿಡುತ್ತವೆ ಎಂದರೆ ಸರಸ್ವತಿ ತನ್ನನ್ನು ನಿಜವಾಗಿ ಪ್ರೀತಿಸುವ ಡಾಕ್ಟರನನ್ನು ತಿರಸ್ಕರಿಸಿ ಬರೀ ಕಾಮಿಸುವ ವಾಸುದೇವನನ್ನು ಗೊತ್ತಿದ್ದೂ ಆರಿಸಿಕೊಳ್ಳುತ್ತಾಳೆ. ಇಂತಹ ತದ್ವಿರುದ್ಧ ನಿಲುವುಗಳೇ, ಇಂತಹ ಸ್ವನಿರ್ಮಿತ ಮಿತಿಯೊಳಗಿನ ಬಳಲಿಕೆಗಳೇ ಪಾತ್ರಗಳಿಗೆ 'ಭವದ ಕೇಡಾಗಿ' ಬಂದೆರಗುತ್ತವೆ.

ಇಡೀ ಕಾದಂಬರಿ ಕಾಮ ಮತ್ತು ಶೃಂಗಾರವೆನ್ನುವ ಸಂಕೀರ್ಣ ವಸ್ತುವಿನ ಮೇಲೆ ತೇಲುತ್ತದೆ. ನೋಬಲ್ ಪುರಸ್ಕೃತ ಮೆಕ್ಸಿಕನ್ ಕವಿ ಅಕ್ಟೋವಿಯೊ ಪಾಜ್‌ನ ಸಾಲುಗಳು ಇಲ್ಲಿ ನನಗೆ ನೆನಪಾಗುತ್ತವೆ– There is nothing more natural

than sexual desire; there is nothing less natural than the forms in which it is made manifest and satisfied. ಕಾಮ ಮತ್ತು ಶೃಂಗಾರ ಎಂದು ಹೇಳುವಾಗ ಯಾವುದು ಯಾವುದಕ್ಕೆ ಪೂರಕವಾಗಿ ಬರುತ್ತವೆ ಎಂದು ಹೇಳುವುದು ಕಷ್ಟ. ಶೃಂಗಾರವೆನ್ನುವುದು ಕಾಮಕ್ಕೆ ಭಾಷೆಯಾಗಿ ಬರುತ್ತದೆ. ಕೇವಲ ಕಾಮಕ್ಕಷ್ಟೇ ಅಲ್ಲದೆ ಶೃಂಗಾರ ಕಲೆಗೂ ಭಾಷೆಯಾಗಬಲ್ಲುದು. ಹಾಗಾಗಿಯೇ, ನಮ್ಮ ದೇಗುಲಗಳಲ್ಲಿ ಲೈಂಗಿಕ ಶಿಲ್ಪಗಳುಶ್ ನೇರವಾಗಿ ಕಾಮಕ್ರಿಯೆಯ ಚಿತ್ರಣವೇ ಆದರೂ ಅವು ಪ್ರತಿನಿಧಿಸುವುದು ಶೃಂಗಾರವನ್ನು; ತನ್ಮೂಲಕ ಕಲೆಯನ್ನು. ಬೇಲೂರಿನ ತುಂಬುಮೊಲೆಯ ಶಿಲಾಬಾಲಿಕೆಯರು ಕಾಮೋತ್ತೇಜಕರಾಗದೆ ಕಲೋತ್ತೇಜಕರಾಗುತ್ತಾರೆ. ಕಾಮ ದೇಹದ ತೃಷೆಯಾದರೆ ಶೃಂಗಾರ ಮನಸ್ಸಿನ ಸೃಷ್ಟಿ. ಕಾಮೀಯ ವರ್ತನೆ ಪ್ರಾಣಿಜನ್ಯವಾದರೆ ಶೃಂಗಾರ ವರ್ತನೆ ನಾಗರಿಕಜನ್ಯವಾಗುತ್ತದೆ. ಹಾಗಾಗಿ, ದೇಹದ ಕಕ್ಷೆ ದಾಟಿ ನಾಗರಿಕತೆಯ ರಕ್ಷೆಯಲ್ಲಿ ಬೆಳೆಯುವ ಪ್ರಕೃತಿಯಿಂದಲೇ ಶೃಂಗಾರ ಕಾಲ, ಭಾಷೆ, ಧರ್ಮ ಮತ್ತು ಇತಿಹಾಸಗಳ ಹೊರತಾಗಿ ನಿಲ್ಲುತ್ತದೆ. ಹೀಗಾಗಿಯೇ, ಕಲಾಕೃತಿ, ಉದಾಹರಣೆಗೆ ಒಂದು ನಗ್ನ ಸ್ತ್ರೀಯ ಪೈಂಟಿಂಗ್, ಕಾಮಕಾರಣ ಅಂಗಗಳನ್ನು ಭಂಗಿಗಳನ್ನು ತೋರಿಸಿಯೂ ಕಾಮಪ್ರಚೋದಕವಾಗದೆ ಅದರಿಂದ ಹೊರತಾಗಿಯೇ ಉಳಿಯುತ್ತದೆ. ದೇಹ ನಿರ್ಮಿತ ಕಾಮ ಮತ್ತು ಮಾನಸ ಸೃಷ್ಟಿ ಶೃಂಗಾರ ಯಾವುದೋ ಒಂದು ಬಿಂದುವಿನಲ್ಲಿ ಸಂಧಿಸಿದಾಗ ಆ ಒಂದು ಕ್ಷಣದಲ್ಲಿ ಅದ್ಭುತಲೋಕದ ಸೃಷ್ಟಿಯಾಗುತ್ತದೆ. ಈ ಬಿಂದುವನ್ನು ಮುಟ್ಟುವುದು ಸಾಮಾನ್ಯದ ವಿಷಯವಲ್ಲ. ಅದಕ್ಕೆ ತಪಸ್ಸಿನಂತಹ ಧ್ಯೇಯ ಬೇಕು. ಪರಿಪಕ್ವ ಮನಸ್ಸಿನ ಸ್ಥಿತಿ ಬೇಕು. ಹಾಲಿನಲ್ಲಿ ಸಕ್ಕರೆಯನ್ನು ಬೆರಸಿದರಷ್ಟೇ ಸಾಲದಾಗಿ ಅವು ಬೆರತು ಹೋಗಲು ನಾಲಿಗೆಗೆ ಹಿತವಾಗಲು ಕಾವಿನರೂಪದಲ್ಲಿ ಪ್ರೀತಿಬೇಕು. ಪ್ರೀತಿಯನ್ನು ಅರಿಯಬಲ್ಲ ಪ್ರಜ್ಞೆಬೇಕು. ಮಾನವ ವರ್ತನೆಯ ಲಿಖಿತ ದಾಖಲೆಯಿಂದ ಮಾನವ ಮೌಲ್ಯಗಳ ತತ್ವಶಾಸ್ತ್ರದೆಡೆಗೆ ತಲುಪುವುದನ್ನೇ ತನ್ನ ಮುಖ್ಯ ಗುರಿಯನ್ನಾಗಿಸಿ ಅದಕ್ಕಾಗಿ ಹೆಣಗುವ ಸಾಹಿತ್ಯ ತನ್ನೆಲ್ಲಾ ಶಕ್ತಿಯನ್ನು ಸುರಿಯುವುದು ಈ ಬಿಂದುವನ್ನು ಅರಸುವಲ್ಲಿಯೇ.

ಇಲ್ಲಿ ಒಂದು ಎಚ್ಚರಿಕೆಯ ಮಾತು. ಕಾಮ ಮತ್ತು ಶೃಂಗಾರಗಳು ಒಂದು ಬಿಂದುವಿನಲ್ಲಿ ಸಂಧಿಸಿ ಬೆಳಕನ್ನು ನೀಡಬಲ್ಲವಾದರೂ ಬಿಂದುವಿಗೆ ಹೊರತಾಗಿ ಅವುಗಳ ಮೂಲವನ್ನು ಶೋಧಿಸ ಹೊರಟಾಗಲೆಲ್ಲಾ ನಮಗೆದುರಾಗುವುದು ಅಂಧಕಾರ. ಅದರಲ್ಲೂ ವಿಶೇಷವಾಗಿ ದೇಹಜನ್ಯವಾದ ಕಾಮ. ಹಾಗಾಗಿಯೇ, ಬಹುಪಾಲು ಲೇಖಕರು ಕಾಮ ಮತ್ತು ಶೃಂಗಾರಗಳು ಸಂಧಿಸುವ ಬಿಂದುವಿನ ಸುತ್ತಮುತ್ತಲೇ, ಸಂಗಮ ಬಿಂದುವಿನ ಬೆಳಕು ಹರಡುವ ಮತ್ತು ಕರಗುವ ಗಡಿಯನ್ನು ಗುರುತಿಸಿಕೊಂಡು

ಆ ಗಡಿಯೊಳಗೆ ಮಾತ್ರವೇ ತಮ್ಮ ಪಾತ್ರಗಳನ್ನು ಬದುಕಲು ಬಿಡುತ್ತಾರೆ, ಬೆಳಕಿನ ಗಡಿ ದಾಟಿದೊಡನೆಯೇ ನೀವು ಮುಳುಗಿಹೋಗುವುದು ಅಂಧಕಾರದ ವಿಶ್ವದಲ್ಲಿ ಎನ್ನುವುದನ್ನು ಅರಿತೇ. ಗಡಿ ದಾಟಬಲ್ಲ ಭೈರಪ್ಪನವರಂತಹ ಲೇಖಕರೂ ಈ ಮಿತಿಯೊಳಗೇ ಕಥೆಯನ್ನು ಹೆಣೆಯುವುದು ಅವರ ಸಾಮರ್ಥ್ಯಕ್ಕಿಂತಲೂ ಹೆಚ್ಚಾಗಿ ಓದುಗರನ್ನು ಕಳೆದುಕೊಳ್ಳಬಾರದೆಂಬ ಉದ್ದೇಶದಿಂದ. ಸಮುದ್ರದ ಈಜು ಎಷ್ಟೇ ಸಾಹಸಮಯವಾದರೂ ಬಹುಪಾಲು ಜನರು ಬಯಸುವುದು ಕೊಳದ ಈಜನ್ನೇ. ಆದರೆ ಸುರೇಂದ್ರನಾಥ್ ಸಾಹಸಿಗರು. ಕಾಮದ ಸ್ಕೇಲಿನ ಒಂದು ತುದಿಗೆ ಮಾಮಿಯನ್ನಿಟ್ಟು ಮತ್ತೊಂದು ತುದಿಗೆ ಸರಸ್ವತಿಯನ್ನು ಬಿಟ್ಟು ಸ್ಕೇಲಿನ ಮಧ್ಯದಲ್ಲಿ ನಿಮ್ಮನ್ನು ನಿಲ್ಲಿಸಿ ಯಾರು ಹೆಚ್ಚು ಜಗ್ಗುತ್ತಿದ್ದಾರೆ ಅಳತೆ ಮಾಡಿ ಎನ್ನುತ್ತಾರೆ. ಮಾಮಿ ಮತ್ತು ಸರಸ್ವತಿಯರ ಘರ್ಷಣೆಯಲ್ಲಿ ಏಳುವ ಬೃಹತ್ ಅಲೆಗಳ ಮಧ್ಯೆ 'ಬನ್ನಿ ಈಗ ಈಜೋಣ, ನಾನೂ ಇರುತ್ತೇನೆ' ಎನ್ನುತ್ತಾರೆ.

ಪ್ರೀತಿ ಶೃಂಗಾರಗಳೇ ಇಲ್ಲದ ಸರಸ್ವತಿ ಮತ್ತು ವಾಸುದೇವರ ಸಂಬಂಧವನ್ನು ಕೇವಲ ಕಾಮದ ನೆಲೆಯಲ್ಲೇ ನಿಲ್ಲಿಸಿ ವಾಸುದೇವ ಸರಸ್ವತಿಯ ಅಕ್ಕ ಯಮುನೆಯನ್ನು ಮದುವೆಯಾದರೂ ಅವರಿಬ್ಬರ ದೇಹಸಂಬಂಧವನ್ನು ಮುಂದುವರೆಸಿ ದೇಹಸುಖ ತೆರೆದುಕೊಳ್ಳಬಹುದಾದ ಬೃಹತ್ ಸ್ವರೂಪಗಳನ್ನು ತೋರಿಸುತ್ತಾರೆ. ಬೆಳಕಿನಾಚೆಯಲ್ಲೇ ಮಾಮಿಯ ಪಾತ್ರವನ್ನು ನಿಲ್ಲಿಸಿ ಬೆಳಕನ್ನು ಬಯಸುವ ಪಾತ್ರಗಳೂ ಈ ಮಾಮಿಯ ಸುತ್ತ ಸುತ್ತುವಂತೆ ಮಾಡುತ್ತಾರೆ. ಬೆಳಕಿನಲ್ಲಿಯೇ ಕಥೆ ನಡೆಯಬೇಕೆನ್ನುವ ಬಹುಪಾಲು ಓದುಗರನ್ನು ಕಳೆದುಕೊಳ್ಳಬೇಕಾಗುತ್ತದೆ ಎನ್ನುವ ಯಾವ ದರ್ದಿಗೂ ಅಂಜದೆ 'ಇದು ಸಮುದ್ರದ ಈಜು. ಗಟ್ಟಿ ಎದೆಯವರಷ್ಟೇ ನನ್ನೊಂದಿಗೆ ಬರಬಹುದು' ಎನ್ನುವ ಸಂದೇಶವನ್ನು ಕೊಟ್ಟುಬಿಡುತ್ತಾರೆ. ಒಬ್ಬ ಲೇಖಕನನ್ನು ಇದು ಬ್ರಾಂಡ್ ಮಾಡುವುದಾದರೂ, ಲೇಖಕರು ಬಯಸಿದ್ದೂ ಅದೇ ಆದರೆ ಅಲ್ಲಿಗೆ ಅವರು ಸಫಲರೇ. ಯಾವ ಓದುಗರನ್ನು ಗುರಿಯಿಡುತ್ತಿದ್ದೇನೆ ಎನ್ನುವುದು ಲೇಖಕರ ವೈಯಕ್ತಿಕ ವಿಚಾರವಾದದ್ದರಿಂದ ಎಸ್. ಸುರೇಂದ್ರನಾಥರು 'ಎನ್ನ ಭವದ ಕೇಡು' ಕಾದಂಬರಿಗೆ ಓದುಗರನ್ನು ಬಯಸಿದ್ದು ಮುಖ್ಯವಾಹಿನಿಯ ಹೊರತಾದ ಓದುಗರನ್ನು ಎಂಬ ಊಹೆಯನ್ನು ಮಾಡಿಕೊಂಡರೆ ಈ ಕಾದಂಬರಿಯನ್ನು ಓದಲು ನಮ್ಮನ್ನು ಮಾನಸಿಕವಾಗಿ ಸಿದ್ಧಮಾಡಿಕೊಂಡಂತಾಗುತ್ತದೆ.

ಕಾದಂಬರಿಯ ಮೊದಲ ಪುಟದಲ್ಲಿಯೇ ಅಮೆರಿಕನ್ ಕವಿ ವಾಲ್ಟ್ ವ್ಹಿಟ್‌ಮನ್‌ನ ಒಂದು ಸಾಲನ್ನು ಲೇಖಕರು ಉಲ್ಲೇಖಿಸುತ್ತಾರೆ–I exist as I am, and that is enough. ಇಡೀ ಕಾದಂಬರಿ ಈ ವಾಕ್ಯದ ಸುತ್ತಲೇ ಉಪಗ್ರಹದಂತೆ ಸುತ್ತುತ್ತದೆ.

'ಕಾಡು ಬೆಕ್ಕನ್ನು ಕಾಡುಬೆಕ್ಕಾಗಿಯೇ ಸಾಯಲು ಬಿಡಿ' ಎನ್ನುವ ಮಾತಿದೆಯಲ್ಲ, ಹಾಗೆ ಕಾದಂಬರಿಯ ಮುಖ್ಯ ಪಾತ್ರವಾದ ಮಾಮಿ ಅತೀಂದ್ರಿಯ ಶಕ್ತಿಯೊಂದಿಗೆ ಕಾಡುಬೆಕ್ಕಾಗಿ ಹುಟ್ಟಿ, ಹಾಗೆ ಹುಟ್ಟಿದ್ದಕ್ಕೆ ಹೆಮ್ಮೆಪಡುತ್ತ ಬದಲಾಗುವ ಯಾವ ಲಕ್ಷಣವನ್ನೂ ತೋರದೆ ನಡುವೆ ಬದುಕುವವರಿಗೆ ನರಕವನ್ನು ತೋರಿಸುತ್ತಾಳೆ. (ಕೆಲವು ಸಂಸ್ಕೃತಿಗಳಲ್ಲಿ ಕಾಡುಬೆಕ್ಕು ಅತೀಂದ್ರಿಯ ಶಕ್ತಿಯ ಸಂಕೇತವಾಗಿರುವುದರಿಂದ ಮಾಮಿಯನ್ನು ಅದಕ್ಕೆ ಹೋಲಿಸುತ್ತಿದ್ದೇನೆ) ಮತ್ತೊಂದು ಮುಖ್ಯ ಪಾತ್ರವಾದ ಸರಸ್ವತಿ ತನ್ನ ಮಿತಿಯೊಳಗೇ ಸಿಲುಕಿಕೊಂಡು ಬದಲಾಗಬೇಕೆಂಬ ಇರಾದೆ ಇದ್ದರೂ ಬದಲಾಗಲಾರದೆ ತನ್ನ ಕೇಡನ್ನು ಕಾಣುತ್ತಾಳೆ. ಬದಲಾಗುವ ಶಕ್ತಿಯಿದ್ದರೂ ಬದಲಾಗದ ಮಾಮಿ ಮತ್ತು ಬದಲಾಗುವ ಶಕ್ತಿಯಿಲ್ಲದೆ ಬರೀ ಆಕಾಂಕ್ಷೆಯನ್ನಷ್ಟೇ ಹೊತ್ತ ಸರಸ್ವತಿಯರ ಮುಖಾಮುಖಿ ಮತ್ತು ದ್ವಂದ್ವ ಇಬ್ಬರ ಭವದ ಕೇಡನ್ನು ಎತ್ತಿತೋರಿಸುತ್ತದೆ.

ಸುರೇಂದ್ರನಾಥರ ಬರವಣಿಗೆಯ ಶೈಲಿ ಬಹಳ ಲವಲವಿಕೆಯಿಂದ ಕೂಡಿದ್ದಾಗಿದೆ. ಹಳೆಯ ಮೈಸೂರು ಮತ್ತು ಉತ್ತರ ಕರ್ನಾಟಕದ ಭಾಷೆಯ ಸೊಗಡನ್ನು ಸಮಾನವಾಗಿ ಮೈಗೂಡಿಸಿಕೊಂಡ ದಾವಣಗೆರೆಯ ಶೈಲಿ ಮನ ಮೆಚ್ಚುವಂತೆ ವ್ಯಕ್ತವಾಗಿದೆ. ಐವತ್ತು ವರ್ಷಗಳ ಹಿಂದಿನ ಸಾಮಾಜಿಕ ಸ್ಥಿತಿಗಳನ್ನು ಲೇಖಕರು ಚೆನ್ನಾಗಿ ಗುರುತಿಸಿದ್ದಾರೆ. ಬದಲಾಗುವ ಪರಿಸ್ಥಿತಿಯನ್ನು ಹೊಟೇಲ್ ಉದ್ಯಮ ಮತ್ತು ಕಾಟನ್‌ಮಿಲ್‌ನ ಯೂನಿಯನ್ ಗಲಾಟೆಗಳ ಮುಖಾಂತರ ತಾರ್ಕಿಕವಾಗಿ ಗುರುತಿಸಿದ್ದಾರೆ. ಬರೆಯುವ ನೈಪುಣ್ಯವನ್ನು ಬಹಳ ಸೊಗಸಾಗಿ ರೂಢಿಸಿಕೊಂಡಿರುವ ಸುರೇಂದ್ರನಾಥರಿಂದ ಕನ್ನಡ ಸಾರಸ್ವತ ಲೋಕಕ್ಕೆ ಇನ್ನೂ ಉತ್ತಮ ಕೊಡುಗೆಗಳು ಬರುವುವು ಎನ್ನುವುದರಲ್ಲಿ ಯಾವ ಸಂದೇಹವಿಲ್ಲ. ಪುಸ್ತಕ ಪ್ರಕಟಣೆಯಲ್ಲಿ ಇತ್ತೀಚೆಗೆ ಒಳ್ಳೆಯ ಹೆಸರು ಗಳಿಸಿರುವ ಛಂದ ಪುಸ್ತಕ ಮತ್ತು ಪ್ರಕಟಣೆಯ ಎಲ್ಲಾ ಜವಾಬ್ದಾರಿಗಳನ್ನು ಹೊತ್ತು ಸೊಗಸಾಗಿ ನಿರ್ವಹಿಸುವ ಕತೆಗಾರ ವಸುಧೇಂದ್ರರ ಪ್ರತಿಭೆ ಈ ಪುಸ್ತಕದಲ್ಲೂ ಎದ್ದು ಕಾಣುವಂತಿದೆ.

ಸುರೇಂದ್ರನಾಥರು ತಮ್ಮ ಮುನ್ನುಡಿಯಲ್ಲಿ ಮೆಕ್ಸಿಕನ್ ಕಾದಂಬರಿಗಾರ್ತಿ ಲಾರಾ ಎಸ್ಕ್ವಿವೇಲ್‌ಳ Like Water for Chocolate ಕಾದಂಬರಿಯ ಛಾಯೆಯಿದೆ ಎಂದು ಹೇಳಿದ್ದಾರೆ. ನನ್ನ ಗಮನಕ್ಕೆ ಬಂದ ಮಟ್ಟಕ್ಕೆ ಆ ಕಾದಂಬರಿಯ ಛಾಯೆ ಬಹಳ ದಟ್ಟವಾಗಿಯೇ ಇದೆ. ವಿಶೇಷವಾಗಿ, ಪಾತ್ರವರ್ಗಗಳ ಸಂಘರ್ಷ ಮತ್ತು ಅದಕ್ಕಾಗಿ ಲಾರಾ ಎಸ್ಕ್ವಿವೇಲ್ ಬಳಸುವ ತಂತ್ರ (magical realism) ದಿಂದ ಸುರೇಂದ್ರನಾಥರು ಬಹಳವಾಗಿಯೇ ಪ್ರಭಾವಿತರಾಗಿದ್ದಾರೆ.

ಕಾದಂಬರಿಯ ಹೆಸರನ್ನು ಬಸವಣ್ಣನವರ ವಚನದಿಂದ ಅರ್ಥಪೂರ್ಣವಾಗಿ ಆರಿಸಲಾಗಿದೆ. ಈ ವಚನದ ಸಾಲುಗಳು ಇಡೀ ಕಾದಂಬರಿಯಲ್ಲಿ ಅಲ್ಲಲ್ಲಿ ಮೂಡಿಬರುತ್ತವೆ:

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ.
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ.
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ.
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ.
ಕೂಡಲಸಂಗನ ಶರಣರನುಭಾವದಿಂದ
ಎನ್ನ ಭವದ ಕೇಡು ನೋಡಯ್ಯ.

**ಕೃತಿ ವಿವರ:** ಎನ್ನ ಭವದ ಕೇಡು, ಎಸ್. ಸುರೇಂದ್ರನಾಥ್, ಛಂದ ಪುಸ್ತಕ, ಬೆಂಗಳೂರು. ೨೦೦೭, ಪು. ೨೩೬

# ವಿವೇಕ ಶಾನಭಾಗರ 'ಒಂದು ಬದಿ ಕಡಲು'

-ವಿಶ್ವನಾಥ್ ಹುಲಿಕಲ್, ಕುಪರ್ಟಿನೊ, ಕ್ಯಾಲಿಫೋರ್ನಿಯಾ

(ಉತ್ತರ ಕ್ಯಾಲಿಫೋರ್ನಿಯಾದ ಸಾರಾಟೋಗ ವಾಚನಾಲಯದಲ್ಲಿ ಡಿಸೆಂಬರ್ ೧೩, ೨೦೦೮ರಂದು ನಡೆದ 'ಸಾಹಿತ್ಯ ಗೋಷ್ಠಿ'ಯ ೭ನೆಯ ವಾರ್ಷಿಕೋತ್ಸವದಲ್ಲಿ ನೀಡಿದ ಉಪನ್ಯಾಸದ ಸಾರಸಂಗ್ರಹ)

ವಿವೇಕ ಶಾನಭಾಗರು ೨೦೦೭ರಲ್ಲಿ ಪ್ರಕಟಿಸಿದ ತಮ್ಮ ಎರಡನೆಯ ಕಾದಂಬರಿ 'ಒಂದು ಬದಿ ಕಡಲು'. ಈ ಕೃತಿ ಈಗಾಗಲೇ ಸಾಕಷ್ಟು ಚರ್ಚಿತವಾಗಿದೆ. ಇದರಿಂದ ಮೂಡಿದ ಒಮ್ಮತದ ಅಭಿಪ್ರಾಯವೆಂದರೆ, ಈ ಕಾದಂಬರಿ ಕನ್ನಡ ಕಾದಂಬರಿಗಳಲ್ಲಿ ಮಹತ್ವದ ಸ್ಥಾನ ಪಡೆದಿರುವುದೇ ಆಗಿದೆ. ಇಂತಹ ಕಾದಂಬರಿಯ ಬಗ್ಗೆ ವಿಮರ್ಶೆ ಮಾಡುವುದು ಅತ್ಯಂತ ಪ್ರಸ್ತುತವೂ, ಔಚಿತ್ಯಪೂರ್ಣವೂ ಆಗಿದೆ.

**೧. ಕಾದಂಬರಿಕಾರರ ಪರಿಚಯ**

ವಿವೇಕ ಶಾನಭಾಗರು ಉತ್ತರ ಕನ್ನಡ ಜಿಲ್ಲೆಯವರು. ಇವರು ಮಾಹಿತಿ ವಿಜ್ಞಾನದಲ್ಲಿ ಇಂಜಿನಿಯರಿಂಗ್ ಪದವೀಧರರಾದರು. ಪ್ರಸ್ತುತ ಬಹುರಾಷ್ಟ್ರೀಯ ಕಂಪನಿಯೊಂದರ ಉನ್ನತ ಹುದ್ದೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಶ್ರೀಯುತರು ಇದುವರೆಗೆ ನಾಲ್ಕು ಕಥಾಸಂಕಲನಗಳನ್ನು ರಚಿಸಿದ್ದಾರೆ: 'ಅಂಕುರ', 'ಲಂಗರು', 'ಹುಲಿ ಸವಾರಿ' ಮತ್ತು 'ಮತ್ತೊಬ್ಬನ ಸಂಸಾರ'. ಎರಡು ಕಾದಂಬರಿಗಳನ್ನು ಬರೆದಿದ್ದಾರೆ: 'ಇನ್ನೂ ಒಂದು' ಮತ್ತು 'ಒಂದು ಬದಿ ಕಡಲು'. ಇದಲ್ಲದೆ, ಕಳೆದ ಮೂರು ವರ್ಷಗಳಿಂದ 'ದೇಶ ಕಾಲ' ಎಂಬ ಶುದ್ಧ ಸಾಹಿತ್ಯಿಕ ಕನ್ನಡ ತ್ರೈಮಾಸಿಕ ಪತ್ರಿಕೆಯೊಂದನ್ನು ನಡೆಸಿಕೊಂಡು ಬರುತ್ತಿದ್ದಾರೆ. ಇವರ ಅನೇಕ ಕಥೆಗಳಿಗೆ, 'ಸುಧಾ', 'ಪ್ರಜಾವಾಣಿ', ಇನ್ನಿತರ ಕನ್ನಡದ ಪ್ರಮುಖ ನಿಯತಕಾಲಿಕೆಯವರು ಆಯೋಜಿಸಿದ ಸ್ಪರ್ಧೆಗಳಲ್ಲಿ ಪ್ರಥಮ ಪಾರಿತೋಷಕಗಳು ದೊರೆತಿವೆ. ಶ್ರೀಯುತರು ಈಗ ಬೆಂಗಳೂರಿನಲ್ಲಿ ತಮ್ಮ ಪತ್ನಿ ಮತ್ತು ಇಬ್ಬರು ಮಕ್ಕಳೊಡನೆ ವಾಸಿಸುತ್ತಿದ್ದಾರೆ.

೨. ಕಾದಂಬರಿಯ ಸ್ಥೂಲ ಕಥೆ

ಕಾದಂಬರಿಯ ಕಥೆ ಘಟಿಸುವುದು ಉತ್ತರ ಕನ್ನಡ ಜಿಲ್ಲೆಯಲ್ಲಿ. ಇದರ ಮುಖ್ಯವಾಹಿನಿಯ ಸ್ಥೂಲ ಕಥೆ ಹೀಗಿದೆ: ಕಾವೇರಿ, ಕಸ್ತೂರಿ, ಮಥುರಿ, ಗೋದಾವರಿ ಮತ್ತು ಮಂಜುನಾಥ ಇವರುಗಳು ಅಕ್ಕ-ತಂಗಿಯರು ಮತ್ತು ತಮ್ಮ. ದೇವರಾಯ, ವಾಸುದೇವ, ಅನಂತ, ಸರ್ವೋತ್ತಮ ಮತ್ತು ಗಿರಿಜೆ - ಅನುಕ್ರಮವಾಗಿ ಇವರುಗಳ ಪತಿ-ಪತ್ನಿಯರು. ವಾಸುದೇವನ ತಂಗಿ ಸಾವಿತ್ರಿ. ಸಾವಿತ್ರಿಯ ಮಗ ಪುರಂದರ. ಗಂಡನನ್ನು ಕಳೆದುಕೊಂಡ ಸಾವಿತ್ರಿಯ ಸಂಸಾರಕ್ಕೆ ಆಸರೆಯಾಗಿ ಬಂದವನು ವಾಸುದೇವ; ಅವರ ಸಂಸಾರಕ್ಕೆ ಸಹಾಯ ಮಾಡುತ್ತಲೇ ಪುರಂದರನ ಕಾಲೇಜು ವಿದ್ಯಾಭ್ಯಾಸವನ್ನೂ ಸಹ ನೋಡಿಕೊಂಡ. ಅವನು ಪದವೀಧರನಾದ ನಂತರ, ತನ್ನ ಭಾವಮೈದುನನಾದ ಮಂಜುನಾಥ/ಮಂಜಯ್ಯನ ನೆರವಿನಿಂದ, ಅವನನ್ನು ಹುಬ್ಬಳ್ಳಿಯಲ್ಲಿ ಒಂದು ಕಿರಾಣಿ ಅಂಗಡಿಯಲ್ಲಿ ಕೆಲಸಕ್ಕೆ ಸೇರಿಸಿದ.

ಪುರಂದರ ಉದ್ಯೋಗಿಯಾಗಿ ಕೆಲಸವನ್ನು ಮಾಡಲಾರಂಭಿಸಿದ. ಒಂದೆರಡು ವರ್ಷಗಳು ಕಳೆದರೂ, ಅವನು ಆ ಕೆಲಸದಲ್ಲಿ ಪ್ರಗತಿ ಹೊಂದಲಿಲ್ಲ. ಇದರಿಂದ ಬೇಸತ್ತ ಅವನು, ಮುಂಬೈಗೆ ಹೋಗಿ ಅಲ್ಲಿಯಾದರೂ ನೌಕರಿ ಮಾಡಬೇಕೆಂದುಕೊಂಡ. ಅಷ್ಟರಲ್ಲಿ ವಾಸುದೇವ ತನ್ನ ಮಗಳಾದ ರತ್ನಳನ್ನು ಪುರಂದರನಿಗೆ ಮದುವೆ ಮಾಡಿಕೊಡುವ ಪ್ರಸ್ತಾಪ ತೆಗೆದುಕೊಂಡು ಹುಬ್ಬಳ್ಳಿಗೆ ಬಂದ. ಇದರ ಬಗ್ಗೆ ಆ ವೇಳೆಗಾಗಲೇ ಪುರಂದರನಿಗೆ ಅವನಮ್ಮನಿಂದ ಪತ್ರ ಬಂದಿತ್ತು; ಅವಳು ಸಹ ಆ ಸಂಬಂಧವನ್ನು ಒಪ್ಪಿದ್ದಳು. ಆದರೆ ಪುರಂದರ ಆಗ ಮದುವೆಗೆ ಸಿದ್ಧನಿರಲಿಲ್ಲ. ಅವನು ಮೊದಲು ಒಂದು ಒಳ್ಳೆಯ ಕೆಲಸಕ್ಕೆ ಹತ್ತಿಕೊಂಡು, ಅದರಲ್ಲಿ ಭದ್ರವಾಗಿ ತಳ ಊರಬೇಕಿತ್ತು. ಮಂಜಯ್ಯನ ಮನೆಯಲ್ಲಿ ಸೇರಿದ್ದ ವಾಸುದೇವನಿಗೆ ಅವನು ಅದೇ ಅಭಿಪ್ರಾಯವನ್ನು ತಿಳಿಸಿದ. ಆಗ ವಾಸುದೇವ ಮದುವೆಗೆ ತನ್ನ ಕಬೂಲಿಯನ್ನು ತಿಳಿಸಿದರೆ ಸಾಕು, ತಾವು ಬೇಕಾದರೆ ಎರಡು ವರ್ಷ ಕಾಯಲು ಸಿದ್ಧ ಎಂದು ತಿಳಿಸಿದನು. ಆಗ ಪುರಂದರ ತನ್ನ ಕೆಲಸ ಪಕ್ಕಾ ಆಗುವವರೆಗೂ, ತನಗೆ ಮದುವೆಯ ಯೋಚನೆಯೇ ಇಲ್ಲವೆಂದು ಪುನಃ ಸ್ಪಷ್ಟಪಡಿಸಿದ. ಆಗ ಮಂಜಯ್ಯ ಇವನಿಗೆ ತನ್ನ ಬ್ಯಾಂಕಿನಲ್ಲೇ ಇದ್ದ ಕ್ಯಾಷಿಯರ್ ಕೆಲಸವನ್ನು ಕೊಡಿಸಲು, ಆ ಸಂಬಂಧ ಮಾತನಾಡಲು ಅವನನ್ನು ಮ್ಯಾನೇಜರ್ ಮಥಾಯಿ ಸಾಹೇಬರ ಮನೆಗೆ ಕರೆದುಕೊಂಡುಹೋದ. ಮೊದಲು ಅವರಿಗೆ ತಾವು ವಹಿಸಿಕೊಟ್ಟ ಕೆಲಸವನ್ನು ತಾನು ಎಷ್ಟು ಅಚ್ಚುಕಟ್ಟಾಗಿ ನಿರ್ವಹಿಸಿದೆಯೆಂಬುದರ ಬಗ್ಗೆ ವರದಿ ಒಪ್ಪಿಸಿ, ನಂತರ ಅವರು ಒಳ್ಳೆಯ ಲಹರಿಯಲ್ಲಿದ್ದ ಸಮಯವನ್ನುಪಯೋಗಿಸಿಕೊಂಡು ಪುರಂದರನಿಗೆ ಕ್ಯಾಷಿಯರ್ ಕೆಲಸವನ್ನು ಕೊಡಬೇಕೆಂದುಕೊಂಡು ವಿನಂತಿಸಿಕೊಂಡ. ಯಾರ ಅದೃಷ್ಟವೋ ಏನೋ, ಆ ಕೆಲಸ

ಪುರಂದರನಿಗೆ ಸಿಕ್ಕೇಬಿಟ್ಟಿತು! ಮನೆಗೆ ಬಂದ ನಂತರ, ದೇವರ ಮುಂದೆ ಅವನನ್ನು ನಿಲ್ಲಿಸಿ, ಮದುವೆಗೆ ಒಪ್ಪಿಗೆ ನೀಡಲು ಒತ್ತಾಯಿಸಿದ. ಒಳ್ಳೆಯ ಕೆಲಸ ಸಿಗುವವರೆಗೆ ಮದುವೆ ಬಗ್ಗೆ ಯೋಚನೆಯಿಲ್ಲ ಎಂಬುದನ್ನು, ಕೆಲಸ ಸಿಕ್ಕ ನಂತರ ಮದುವೆಗೆ ಒಪ್ಪಿಗೆ ನೀಡುವಂತೆ ವಿಷಯವನ್ನು ತಿರುಚಿದ ಅವನ ಚಾಣಾಕ್ಷತನಕ್ಕೆ ಪುರಂದರ ಸಿಲುಕಿದ. ವಿಧಿಯಿಲ್ಲದೆ, ಮಂಜಯ್ಯನ ತಂಗಿಯ ಮಗಳನ್ನು ಮದುವೆಯಾಗಲು ಒಪ್ಪಿಗೆ ನೀಡಿದ.

ಈ ವಿಚಾರ ಹೇಗೋ ಗೋದಾವರಿಗೆ ತಿಳಿಯಿತು. ಆಕೆಗೆ ತನ್ನದೇ ಆದ ಮಕ್ಕಳಿಲ್ಲದಿದ್ದರೂ, ತನ್ನ ತಂಗಿ ಮಧುರಿ ಮತ್ತು ಆಕೆಯ ಗಂಡ ಅನಂತನ ಅಕಾಲಿಕ ಮರಣದ ನಂತರ, ಅವರ ಮಗಳಾದ ಸುನಂದೆಯನ್ನು ಸಾಕಿ ಬೆಳಸುತ್ತಿದ್ದಳು. ಆ ವೇಳೆಗೆ ಸುನಂದೆಯೂ ಸಹ, ವಿವಾಹದ ಪ್ರಾಪ್ತವಯಸ್ಸಿಗೆ ಬಂದಿದ್ದಳು. ತಾನೇಕೆ ತನ್ನ ಸಾಕುಮಗಳ ವಿವಾಹದ ಪ್ರಸ್ತಾಪವನ್ನು ಪುರಂದರನ ತಾಯಿ ಸಾವಿತ್ರಿಯ ಮುಂದಿಡಬಾರದೆಂಬ ಆಲೋಚನೆ ಅವಳಿಗೆ ಬಂತು. ಸರಿ, ಕೂಡಲೇ ಕಾರ್ಯಪ್ರವೃತ್ತಳಾದಳು. ತಮ್ಮ ಸಂಬಂಧಿಕರ ಮದುವೆಮನೆಯಲ್ಲಿ ಅವಳನ್ನು ಭೇಟಿಯಾಗಿ, ನಂತರ ಕಾಸರಕೋಡಿಗೆ ಸಾವಿತ್ರಿಯ ಮನೆಗೆ ಹೋಗಿ ಅವಳಿಂದ ಗೌಪ್ಯವಾಗಿ ಪುರಂದರನ ಜಾತಕವನ್ನು ತೆಗೆದುಕೊಂಡು ಬಂದಳು; ಪುರಂದರನನ್ನು ಇಕ್ಕಟ್ಟಿಗೆ ಸಿಕ್ಕಿಸಿ, ಅವನಿಂದ ಒಪ್ಪಿಗೆ ಪಡೆದ ವಿಚಾರ ಸಾವಿತ್ರಿಗೆ ಸರಿಬರಲಿಲ್ಲ. ನಂತರ, ಮಂಜಯ್ಯನ ಹೆಂಡತಿ ಗಿರಿಜೆಯ ಅನಾರೋಗ್ಯದ ನಿಮಿತ್ತ, ಗೋದಾವರಿಗೆ ಹುಬ್ಬಳ್ಳಿಗೆ ಹೋಗಿ ಆಕೆಯನ್ನು ನೋಡಿಕೊಳ್ಳುವ ಯೋಗ ತಂತಾನೇ ದೊರೆಯಿತು. ದೊರಕಿದ ಅವಕಾಶವನ್ನು ಅವಳು ಸದುಪಯೋಗಪಡಿಸಿಕೊಂಡಳು: ಪುರಂದರನನ್ನು ಭೇಟಿಯಾಗಿ ಸುನಂದೆಯ ಮದುವೆಯ ಪ್ರಸ್ತಾಪವನ್ನು ಅವನ ಮುಂದಿಟ್ಟಳು. ಅವಳನ್ನು ಮದುವೆಯಾದರೆ, ತನ್ನ ಮತ್ತು ಮಧುರೆಯಿಟ್ಟಿದ್ದ ಬಂಗಾರವೆಲ್ಲವೂ ಸುನಂದೆಗೇ ಸಿಗುತ್ತದೆಂದು ಆಸೆ ತೋರಿಸಿದಳು. ಅವನಾಗ ಒಪ್ಪದಿದ್ದರೂ, ಅವನ ಮನಸ್ಸನ್ನು ಸುನಂದೆಯ ಕಡೆಗೆ ತಿರುಗಿಸುವಲ್ಲಿ ಗೋದಾವರಿ ಯಶಸ್ವಿಯಾದಳು.

ಇದಾದ ನಂತರ, ರಜಾದಲ್ಲಿ ಪುರಂದರ ಹೊನ್ನಾವರಕ್ಕೆ ಹೋಗಿ ದೇವರಾಯ ಮತ್ತು ಗೋದಾವರಿಯನ್ನು ಭೇಟಿಯಾದ, ಸುನಂದೆಯನ್ನು ಸಹ ನೋಡಿದ. ಆಗ ಅವನಿಗೆ ಮುಂದಿನ ತಿಂಗಳು ತಾತ್ಕಾಲಿಕ ಕೆಲಸದಲ್ಲಿರುವವರನ್ನು ಶಾಶ್ವತ ಮಾಡಲು ನಡೆಸುವ ಪರೀಕ್ಷೆಯಿದೆಯೆಂದು ದೇವರಾಯನಿಂದ ತಿಳಿದು, ಮನಸ್ಸಿಗೆ ಕೊಂಚ ಬೇಜಾರಾಯಿತು; ಏಕೆಂದರೆ, ಮಂಜಯ್ಯ ಈ ವಿಷಯವನ್ನು ತನಗೆ ಹೇಳದೆ, ದೇವರಾಯನಿಗೆ ಹೇಳಿದ್ದ! ಸರಿ, ಹುಬ್ಬಳ್ಳಿಗೆ ಮರಳಿ, ತನ್ನ ಬ್ಯಾಂಕಿನ ಸಿಂಧೆ ಸಾಹೇಬರನ್ನು ಭೇಟಿಯಾದ. ಅವರು ಪರೀಕ್ಷೆಗೆ ಮಾರ್ಗದರ್ಶನ ಮಾಡಿದರು. ಅಷ್ಟೆ ಅಲ್ಲ, ಅವನೊಬ್ಬ ಒಳ್ಳೆಯ ಕೆಲಸಗಾರ, ಅವನ ಕೆಲಸ ತನ್ನ ಸ್ವಪ್ರಯತ್ನ ಮತ್ತು ಅರ್ಹತೆಯ ಆಧಾರದ

ಮೇಲೆಯೇ ಖಾಯಂ ಆಗುವುದೆಂಬ ಭರವಸೆಯನ್ನೂ ಸಹ ನೀಡಿದರು. ಇದರಿಂದ ಉತ್ತೇಜಿತನಾದ ಪುರಂದರ, ಲಿಖಿತ ಪರೀಕ್ಷೆಗಾಗಿ ಚೆನ್ನಾಗಿಯೇ ಸಿದ್ಧತೆ ನಡೆಸಿದ; ಅದರಲ್ಲಿ ತೃಪ್ತಿಕರವಾಗಿ ಮಾಡಿದ. ನಂತರದ ಮೌಖಿಕ ಪರೀಕ್ಷೆಯಲ್ಲೂ ಉತ್ತಮ ಪ್ರದರ್ಶನ ನೀಡಿದ. ಆಗ ಮಂಜಯ್ಯ, ತಾನು ಮಥಾಯಿ ಸಾಹೇಬರಿಗೆ ವಶೀಲಿ ಹಚ್ಚಿ, ಅವನ ಕೆಲಸವನ್ನು ಖಾಯಂ ಮಾಡುವುದಾಗಿ ಭರವಸೆಕೊಟ್ಟದ್ದು ಪುರಂದರನಿಗೆ ಸರಿಬೀಳಲಿಲ್ಲ. ನಂತರ ಪ್ರಕಟವಾದ ಫಲಿತಾಂಶದಲ್ಲಿ, ಪುರಂದರ ಉತ್ತೀರ್ಣನಾಗಿ, ಅವನನ್ನು ಕುಮುಟೆಗೆ ಭಡ್ತಿ ನೀಡಿ ಹೊಸ ಕೆಲಸಕ್ಕೆ ಹಾಕಿದ್ದರು.

ಇದಾದ ನಂತರ ಗೋದಾವರಿ ಇನ್ನೊಮ್ಮೆ ಸಾವಿತ್ರಿಯನ್ನು ಭೇಟಿಯಾದಳು. ಸುನಂದೆ ಮತ್ತು ಪುರಂದರರನ ಜಾತಕದ ೧೬ ಆಣೆ ಗುಣಗಳು ಕೂಡುತ್ತವೆಂದು ಹೇಳಿದಳು. ಆಗ ಸಾವಿತ್ರಿ, ರತ್ನ ಮತ್ತು ಪುರಂದರರನ ಜಾತಕಗಳನ್ನು ತಾಳೆ ಮಾಡಿದಾಗ, ೧೨ ಆಣೆ ಗುಣಗಳು ಕೂಡುತ್ತವೆಂದು ವಾಸುದೇವ ಹೇಳಿದ್ದನ್ನು ತಿಳಿಸಿದಳು. ಅದಕ್ಕೆ ಗೋದಾವರಿ, ೧೨ ಆಣೆ ಗುಣಗಳು ಕೂಡಿದಾಗ ಮದುವೆ ಮಾಡಬಹುದಾದರೂ, ನಂತರ ಸಂತಾನ-ಹೀನತೆಯೋ ಅಥವಾ ಇನ್ನೇನೋ ದೋಷ ಕಾಣಬಹುದೆಂದು ಹೇಳಿ, ಸಾವಿತ್ರಿಯನ್ನು ಕಳವಳಕ್ಕೆ ತಳ್ಳಿದಳು. ಅಷ್ಟೇ ಅಲ್ಲ, ತನಗೆ ಸಾವಿತ್ರಿ ಮತ್ತು ಪುರಂದರರನ ಒಪ್ಪಿಗೆ ದೊರೆತರೆ, ಏನೇ ಆಗಲಿ ತಾನು ಸುನಂದೆ ಮತ್ತು ಪುರಂದರರನ ಮದುವೆಯನ್ನು ಮಾಡಿಯೇ ತೀರುತ್ತೇನೆಂದು ಘೋಷಿಸಿದಳು, ಹೊನ್ನಾವರಕ್ಕೆ ಮರಳಿದಳು.

ಅಲ್ಲಿ ಕಾವೇರಿಗೆ ಆ ಸುದ್ದಿಯನ್ನು ತಿಳಿಸಿದಳು. ವಾಸುದೇವ, ಪುರಂದರ ಮತ್ತು ರತ್ನಳ ವಿವಾಹವನ್ನು ಪಕ್ಕಾ ಮಾಡಿದ್ದ ವಿಷಯ ಕಾವೇರಿಗೆ ತಿಳಿದಿದ್ದರಿಂದ, ಅವಳು ಹೌಹಾರಿದಳು. ಗೋದಾವರಿಯನ್ನು ತಡೆಯಲು ಪ್ರಯತ್ನಿಸಿದಳು, ಆದರೆ ಅವಳು ತನ್ನ ಮಾತನ್ನು ಕೇಳಿಸಿಕೊಳ್ಳಲು ತಯಾರಿರಲಿಲ್ಲ. ಕೂಡಲೇ ಅವಳು ಈ ಸುದ್ದಿಯನ್ನು ಬೇರೊಬ್ಬರ ಮೂಲಕ ವಾಸುದೇವನಿಗೆ ತಲುಪಿಸಿದಳು. ವಾಸುದೇವನಿಗೆ ಆಘಾತವಾಯಿತು, ಅವನು ಕೂಡಲೇ ಹುಬ್ಬಳ್ಳಿಗೆ ಹೋದ. ಆ ವೇಳೆಗಾಗಲೇ, ಪುರಂದರ ಕುಮುಟೆಯಿಂದ, ಹುಬ್ಬಳ್ಳಿಗೆ ವರ್ಗವಾಗಿ ಬಂದಿದ್ದ. ಮಂಜಯ್ಯನ ಮನೆಯಲ್ಲಿ ಪುನಃ ಅವರೆಲ್ಲರ ಭೇಟಿ ಆಯಿತು. ಪುರಂದರನ ವೇಷ-ಭೂಷಣ, ನಿಲುವು ಇವುಗಳಿಂದ ವಾಸುದೇವ ಅಧೀರನಾದ. ರತ್ನಳ ಜೊತೆ ಅವನ ಮದುವೆಯನ್ನು ಯಾವಾಗ ಇಟ್ಟುಕೊಳ್ಳಬಹುದೆಂದು ಮಂಜಯ್ಯ ಅವನನ್ನು ಪ್ರಶ್ನಿಸಿದ. ಅದಕ್ಕೆ ಪುರಂದರ ತಾನಿನ್ನೂ ಕೆಲಸದಲ್ಲಿ ಬೇರೂರಬೇಕೆಂದೂ, ಆಗಲೇ ತನಗೆ ಮದುವೆಯಾಗಲು ಇಷ್ಟವಿಲ್ಲವೆಂದೂ ಹೇಳಿದ. ಅವನ ನೌಕರಿ ಆಗಲೇ ಶಾಶ್ವತ ಆಗಿರುವುದರಿಂದ ತಡವೇಕೆ ಎಂದು ಮಂಜಯ್ಯ ಅವನನ್ನು ಪ್ರಶ್ನಿಸಿದ. ಪುರಂದರನಿಗೆ ಅವನು ಪ್ರಶ್ನಿಸುವ

ಧಾಟಿ ಇಷ್ಟವಾಗದೆ, ತನಗೆ ಆಗಲೇ ಮದುವೆಯ ಜವಾಬ್ದಾರಿ ಹೊರುವುದು ಸಾಧ್ಯವಾಗಲಾರದೆಂದು ನಿರ್ದಾಕ್ಷಿಣ್ಯವಾಗಿ ತಿಳಿಸಿದ. ಮಾತಿಗೆ ಮಾತು ಬೆಳೆದು ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಅವನು ಕೊಟ್ಟ ಮಾತನ್ನು ಮುರಿಯುತ್ತಿದ್ದಾನೆಂದು ಮಂಜಯ್ಯ ಆಪಾದಿಸಿದ. ತಮಗೆ ಹೆದರದೇ ಇದ್ದರೂ ಪರವಾಗಿಲ್ಲ, ಆದರೆ ದೇವರ ಮುಂದೆ ಕೊಟ್ಟ ವಚನವನ್ನು ಧಿಕ್ಕರಿಸುವಷ್ಟರಮಟ್ಟಿಗೆ ಅವನು ಬೆಳೆದಿದ್ದಾನೆಂದು ಮಂಜಯ್ಯ ಲೇವಡಿಮಾಡಿದ. ಇದಕ್ಕೆ ಪುರಂದರನಿಗೆ ಅಸಾಧ್ಯ ಸಿಟ್ಟುಬಂದು, ಆಗ ಅವನು ತಾನು ಮಂಜಯ್ಯನ ತಂಗಿಯ ಮಗಳನ್ನು ಮದುವೆಯಾಗುತ್ತೇನೆಂದು ಮಾತು ಕೊಟ್ಟಿರುವುದಾಗಿ ಜ್ಞಾಪಿಸಿ, ಮಥುರೆಯ ಮಗಳಾದ ಸುನಂದೆಯನ್ನು ವರಿಸುವುದಾಗಿ ಹೇಳಿ, ಎಲ್ಲರಿಗೂ ಆಘಾತಕೊಟ್ಟು ನಡೆದೇಬಿಟ್ಟ! ವಾಸುದೇವ ಅವನನ್ನಿನ್ನೆಂದೂ ನೋಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ.

ಇದಾದ ಒಂದು ತಿಂಗಳಿನಲ್ಲಿಯೇ ರತ್ನಳ ಮದುವೆ ಪಾಂಡುರಂಗನ ಜೊತೆ ನಡೆಯಿತು. ನಂತರ ಪುರಂದರನ ವಿವಾಹ ಸುನಂದೆಯ ಜೊತೆ ನಡೆಯಿತು; ಎಲ್ಲರ ಎಣಿಕೆಯಂತೆ ಅದಕ್ಕೆ ವಾಸುದೇವ, ಕಸ್ತೂರಿ ಬರಲಿಲ್ಲ. ಕುಟುಂಬದ ಧ್ರುವೀಕರಣ ನಿಚ್ಚಳವಾಗಿ ತೋರುತ್ತಿತ್ತು. ಪುರಂದರ ಹುಬ್ಬಳ್ಳಿಯಲ್ಲಿ ಸಂಸಾರ ಹೂಡಿದ. ಅವನ ಜೀವನ ಸರ್ವೇಸಾಮಾನ್ಯವಾಗಿ ನಡೆಯಲಾರಂಭಿಸಿತು. ಆದರೆ, ಅದಕ್ಕೆ ತದ್ವಿರುದ್ಧವಾಗಿ, ಅವನ ಕಾಲೇಜಿನ ಸಹಪಾಠಿ ಯಶವಂತನ ಬದುಕು ಬಹಳ ರೋಚಕವಾಗಿತ್ತು: ಅವನು ಡಿಗ್ರಿ ಮುಗಿಸಿ, ಯಾರಿಗೂ ಹೇಳದೇ-ಕೇಳದೇ ಮನೆ ಬಿಟ್ಟು ಹೋದವನು, ಪುಣೆಗೆ ಹೋಗಿ ಯಾವುದೋ ಒಂದು ನಾಟಕದ ಕಂಪನಿಗೆ ಸೇರಿಕೊಂಡ. ಅಲ್ಲಿ ಅವನಿಗೆ ತನ್ನ ವಯಸ್ಸಿಗಿಂತ ಹಿರಿಯವರಾದ ಕಲಾವಿದೆಯೊಡನೆ ದೈಹಿಕ ಸಂಪರ್ಕ ಬೆಳೆಯಿತು. ನಂತರ ನಾಸಿಕದಲ್ಲಿ ನಾಟಕದ ಕ್ಯಾಂಪು ಇದ್ದಾಗ ಅಲ್ಲಿ ಒಬ್ಬ ಗೃಹಿಣಿಯ ಜೊತೆ ಮಿಲನವಾದ. ಕೊನೆಗೆ ಅವಳೂ ಕೈತಪ್ಪಿ ಹೋದ ನಂತರ, ಭ್ರಮನಿರಸನನಾದ. ಅಪ್ಪನ ಹುಡುಕಾಟದ ಫಲವಾಗಿ ಊರಿಗೆ ಹಿಂತಿರುಗಿದ. ಇದು ಮುಖ್ಯವಾಹಿನಿಯ ಸ್ಥೂಲ ಕಥೆ.

## ೩. ಕಾದಂಬರಿಯ ವಿಮರ್ಶೆ

ನಗರ ಪ್ರದೇಶದಲ್ಲಿ ಕೆಲಸ ಮಾಡುತ್ತಿರುವ ವಿವೇಕ ಶಾನಭಾಗರು, ತಮ್ಮ ಬಾಲ್ಯಕಾಲದ ಸ್ಮೃತಿ ಮತ್ತು ಶ್ರುತಿಗಳ ಆಧಾರದ ಮೇಲೆ ಈ ಕಾದಂಬರಿಯನ್ನು ಬರೆದಿರಬೇಕು; ಯಾಕೆಂದರೆ ಶಾನಭಾಗರು ತಾವು ಕಾದಂಬರಿಯಲ್ಲಿ ಚಿತ್ರಿಸುವ ಉತ್ತರ ಕನ್ನಡ ಕರಾವಳಿ ಜೀವನದ ಹಿನ್ನೆಲೆಯಿಂದಲೇ ಬಂದವರು. ಆದರೆ ಆ ಪರಿಸರವನ್ನು ಬಿಟ್ಟು ಬಂದು ಹಲವು ವರ್ಷಗಳಾದ ನಂತರ ಇಂಥ ಕೃತಿಯನ್ನು ಬರೆಯಬೇಕಾದರೆ,

ಲೇಖಕ ಮಾನಸಿಕವಾಗಿ ಆ 'ದೇಶ–ಕಾಲ'ಕ್ಕೆ ಮರಳದೆ ಸಾಧ್ಯವಿಲ್ಲ. ವಾಸ್ತವವಾದಿ ನೆಲೆಯಲ್ಲಿ ಮೂಡಿಬಂದಿರುವ ಈ ಕಥನದಲ್ಲಿ ಎಷ್ಟೊಂದು ವಿವರಗಳು, ಎಷ್ಟೊಂದು ಪಾತ್ರಗಳು ಮತ್ತು ಸಂಬಂಧಗಳು ಹಾಗೂ ಇವಕ್ಕೆ ಯೋಗ್ಯವಾದ ಪದಸಂಪತ್ತು ಎಂದು ಯೋಚಿಸಿದರೆ ಆಶ್ಚರ್ಯವಾಗುತ್ತದೆ. ತಾವು ಹುಟ್ಟಿ ಬೆಳೆದ ಪರಿಸರವನ್ನು ಗಾಢವಾಗಿ ಪ್ರೀತಿಸುವ ಲೇಖಕನಿಗೆ ಮಾತ್ರ ಇದು ಸಾಧ್ಯವಾಗುವುದು.

ಸದ್ಯದ ಸಾಹಿತ್ಯಿಕ ವಾತಾವರಣದಲ್ಲಿ ವಿವೇಕ ಶಾನಭಾಗರಂಥವರು ಈ ರೀತಿಯ ಕಾದಂಬರಿ ಬರೆಯಬೇಕಾದರೆ ನಿಜಕ್ಕೂ ಒಂದು ತರದ ನಿಸ್ಪೃಹತೆ ಬೇಕು. ಯಾಕೆಂದರೆ, ಸಾಹಿತಿಯ ಮೇಲೆ ಅನೇಕ ತರದ ಒತ್ತಡಗಳಿರುವ ಕಾಲ ಇದು. ದಲಿತ, ಬಂಡಾಯ, ಮತೀಯ ಸಂಘರ್ಷ, ಮೂಲಭೂತವಾದ, ರಾಜಕೀಯ ಭ್ರಷ್ಟಾಚಾರ, ನಕ್ಸಲೀಯತೆ, ಉಗ್ರಗಾಮಿತ್ವ, ಬಹುರಾಷ್ಟ್ರೀಯತೆ, ಸ್ತ್ರೀವಾದ, ಸಂಸ್ಕೃತಿ ವಿಸ್ಮೃತಿ ಇತ್ಯಾದಿ ಹಲವಾರು ಉರಿಯುವ ಸಮಸ್ಯೆಗಳಿಂದ ಸಮಕಾಲೀನ ವಾತಾವರಣ ಪ್ರಕ್ಷುಬ್ಧವಾಗುತ್ತ, ಇವುಗಳೆಲ್ಲದರಿಂದ ಮಾನಸಿಕ ದೂರ ಸ್ಥಾಪಿಸಿಕೊಂಡು ಹಿಂದಣ ಕಾಲಕ್ಕೆ ಹೋಗುವುದು ಧ್ಯಾನಸ್ಥ ಮನಸ್ಸಿಗೆ ಮಾತ್ರವೇ ಸಾಧ್ಯವಾಗುವ ಸಂಗತಿ.

ಅಷ್ಟೇನು ದೀರ್ಘವಲ್ಲದ 'ಒಂದು ಬದಿ ಕಡಲು'ವಿನ ನಿಧಾನ ಗತಿಗೆ ಅದರ ಆಳವೇ ಕಾರಣ. ಒಂದು ಕೃತಿಗೆ ಅನೇಕ ಆಳ ಕಾರಣಗಳಿಂದ ಬರಬಹುದು. ಇವುಗಳಲ್ಲಿ ಒಂದು, ಲೇಖಕರು ವಿವರಣೆಯಲ್ಲಿ ತೋರುವ ಸೂಕ್ಷ್ಮಜ್ಞತೆ. ಕೆಲವು ವಿವರಣೆಗಳು ಕತೆಗೆ ವ್ಯಂಜನವಾಗಿ ಬರುತ್ತವೆ. ಉದಾಹರಣೆಗೆ, ದೇವರಾಯನ ಮರಣದ ಸನ್ನಿವೇಶ ಇಂಥದು. ಆದರೆ ಇನ್ನು ಕೆಲವು ಅಷ್ಟೇನೂ ವ್ಯಂಜಕವಾಗಿರುವುದಿಲ್ಲ. ಉದಾಹರಣೆಗೆ, ವೆಂಕಟೇಶ ಎಂಬ ಯುವಕನೊಬ್ಬ ರತ್ನಳ ಗಂಡನ ಸಾವಿನ ಸುದ್ದಿಯನ್ನು ದೇವರಾಯನ ಮನೆಗೆ ತರುವಲ್ಲಿ ಇಂಥ ವಿವರವಿದೆ. ವಾಸ್ತವದಲ್ಲಿ ವೆಂಕಟೇಶನ ಕಥನ ಶೈಲಿಯ ಕುರಿತು, ಲೇಖಕರು ಏನೂ ಹೇಳುವ ಅಗತ್ಯವಿಲ್ಲ; ಯಾಕೆಂದರೆ ಇಲ್ಲಿ ಮುಖ್ಯವಾಗುವುದು ಅವನು ತಂದ ಮಾಹಿತಿ ಮಾತ್ರ. ಆದರೂ ಶಾನಭಾಗರು ಕೇವಲ ಕತೆ ಹೇಳುವುದರಲ್ಲಿ ಆಸಕ್ತರಲ್ಲ. ಅವರಿಗೆ ಒಟ್ಟಾರೆಯಾದ ಊರಿನ ವಾತಾವರಣವನ್ನು ಸೃಷ್ಟಿಸುವುದು ಮುಖ್ಯವೆನಿಸುತ್ತದೆ. ಆದ್ದರಿಂದ ಪಾತ್ರ ಎಷ್ಟೇ ಸಣ್ಣದಾದರೂ ಅದರ ಆಳದ ಆಯಾಮದ ಕಡೆ ಅವರು ಗಮನ ಸೆಳೆಯುವುದು. ಲೋಕದ ಬಹು ಮುಖ್ಯ ಲೇಖಕರೆಲ್ಲ, ಶೇಕ್ಸ್‌ಪಿಯರ್, ಟಾಲ್‌ಸ್ಟಾಯ್, ಮುಂತಾದವರು ಇದನ್ನೇ ಮಾಡುವುದು. ಶೇಕ್ಸ್‌ಪಿಯರಿಗಾದರೆ ರಂಗದ ಮೇಲೊಂದು ಶವ ಬಿದ್ದಿದ್ದರೂ, ಸಮಾನಾಂತರವಾಗಿ ನಡೆವ ಇತರ ಸಂಗತಿಗಳೂ ಮುಖ್ಯವಾಗುತ್ತವೆ. ಕಾದಂಬರಿ ಕೊನೆಯಾಗುವುದೂ ಒಂದು ದೈನಂದಿನ ಸಾಮಾನ್ಯತೆಯಲ್ಲಿ: ಯಮುನೆಯನ್ನು ಮದುವೆಯಾದ ರಮಾಕಾಂತ ಆಳಿನಿಂದ ಮಾವಿನಕಾಯಿ ಕೊಯ್ಯಿಸುತ್ತ, ಕೆಳಗೆ ನಿಂತು ಅವುಗಳನ್ನು ಹಿಡಿಯುವ ದೃಶ್ಯದಲ್ಲಿ; ಯಮುನೆ ಅದನ್ನು ನೋಡಿ ನಗುತ್ತ ನಿಂತಿರುತ್ತಾಳೆ.

ಇಲ್ಲಿ ಊರು ಬಿಟ್ಟವರೆಲ್ಲ ಮರಳಿ ಬರುತ್ತಾರೆ; ಮರಳಿ ಬಂದು ಸನ್ನಿವೇಶ ತಮಗೆ ವಿಧಿಸಿದ ಜೀವನವನ್ನು ಬದುಕುತ್ತಾರೆ. ಕಾದಂಬರಿಯ ಈ ಲಯವನ್ನು ನಾಟಕದ ನಟನಾಗಬೇಕೆಂದು ಊರು ಬಿಟ್ಟು ಮತ್ತೆ ಮರಳಿದ ಯಶವಂತನ ಬದುಕಿಗೆ ತನ್ನದನ್ನು ಹೋಲಿಸಿಕೊಳ್ಳುವ ಪುರಂದರನ ವಿಚಾರಲಹರಿಯ ಉದ್ದಕ್ಕೂ ಕಾಣಬಹುದಾಗಿದೆ. ಎಷ್ಟು ಯತ್ನಿಸಿದರೂ ಆಕಸ್ಮಿಕಗಳೇ ನಡೆಯದ ಬದುಕು ಅವನದು; ಮೊದಲೇ ಗುರುತಿಸಿದ ದಾರಿಯಲ್ಲಿ ಸಾಗುವಂಥದು. ಪಲ್ಲಟಗಳನ್ನು ಆಗುಮಾಡುವ ಧೈರ್ಯವೇ ಇಲ್ಲದಿರುವುದು. 'ಸುನಂದೆಯ ಬಗ್ಗೆ ತಕರಾರು ಎತ್ತಲಿಕ್ಕೆ ಏನೂ ಇಲ್ಲ. ನನ್ನದು ಉಬ್ಬರವಿಲ್ಲದ ಶಾಂತ ಸಮುದ್ರ. ಮಹತ್ವಾಕಾಂಕ್ಷೆಯೇ ಇಲ್ಲದ ಜೀವನ, ಅಷ್ಟೇ ಯಾಕೆ, ತೊಂದರೆಯಾಗದಿದ್ದರೆ ಸಾಕು ಎಂಬುದಷ್ಟೇ ನನ್ನ ಆಕಾಂಕ್ಷೆ. ಅವಳೂ ಹಾಗೆಯೇ. ಯಾವುದನ್ನೂ ಅತಿಯಾಗಿ ಮಾಡುವವಳಲ್ಲ. ಇದ್ದರೆ ಸಂತೋಷ, ಇಲ್ಲದಿದ್ದರೂ ಸಂತೋಷ. ಯಾವುದರ ಬಗ್ಗೆಯೂ ಅಪೇಕ್ಷೆಗಳಿಲ್ಲ- ನಿತ್ಯದ ಊಟ ತಿಂಡಿ ಕಾಮಗಳಲ್ಲಿ ಸಾಧಾರಣ ಜೀವನ ನಡೆಸುತ್ತಿರುವ ನನಗೆ ಸುನಂದೆಯಲ್ಲದೆ ಬೇರೆ ಯಾರೇ ಇದ್ದರೂ ವ್ಯತ್ಯಾಸವಾಗುತ್ತಿರಲಿಲ್ಲ ಎಂದು ಕೆಲವೊಮ್ಮೆ ಅನಿಸುತ್ತದೆ. ನನ್ನದು ಅತಿ ಸಾಧಾರಣ ಬದುಕು. ಮೊದಲ ರಾತ್ರಿ ಎಷ್ಟು ಸಾಧಾರಣ ಇತ್ತು ಗೊತ್ತೇನು? ಛೇಡಿಸುವುದಕ್ಕೂ ಮನೆಯಲ್ಲಿ ಜನ ಇರಲಿಲ್ಲ. ಅಂಥಾ ಮದುವೆ ಮನೆ...' (ಪುಟ ೧೬೬). ಪುರಂದರನ ಈ ಇಂಥಾ ವಿಚಾರಗಳಲ್ಲಿ ಒಂದು ರೀತಿಯ ವಿಷಣ್ಣತೆಯನ್ನು ನಾವು ಕಾಣಬಹುದು, ಆದರೆ ಅತೃಪ್ತಿಯನ್ನಲ್ಲ. ಯಾಕೆಂದರೆ ಜೀವನ ಬದಲಾವಣೆಯನ್ನು ಅಪೇಕ್ಷಿಸುತ್ತಲೇ ಇರುತ್ತದೆ, ಆದರೆ ಕೌಟುಂಬಿಕ ಅಂತರ್ಜಾಲದ ಮೇಲೆ ನಿಂತಿರುವ ಸಮಾಜ ಸ್ಥಿತಿಸ್ಥಾಪಕ ಗುಣವುಳ್ಳದ್ದಾಗಿರುತ್ತದೆ [೧]

'ಒಂದು ಬದಿ ಕಡಲು', ಬದುಕಿನ ವಿಜೃಂಭಣೆಯನ್ನು, ಸೋತ ನಂತರವೂ ಹುಟ್ಟಬಹುದಾದ ಆಶಾವಾದವನ್ನು, ವ್ಯಾಮೋಹಿಯೊಬ್ಬನಿಗೆ ಸಾಧ್ಯವಾಗಬಹುದಾದ ಅದಮ್ಯ ಪ್ರೀತಿಯನ್ನು, ಬದಲಾದ ಸಂದರ್ಭಕ್ಕೆ ಅನುಗುಣವಾಗಿ, ಭಾರವಿಲ್ಲದ ಮನುಷ್ಯನೊಬ್ಬ ಮಾಡಿಕೊಳ್ಳುವ ರಾಜಿ, ಹೊಂದಾಣಿಕೆ ಮತ್ತು ದಿನನಿತ್ಯದ ಅನುಸಂಧಾನಗಳ ಕತೆಯನ್ನು ಹೇಳುತ್ತವೆ. ಇಲ್ಲಿಯ ಯಾವ ಪಾತ್ರಗಳೂ ನಮಗೆ ಹೊಸತಲ್ಲ; ಬದಲಿಗೆ ಕಾಲಕಾಲದಲ್ಲಿ ನಾವೇ ಪಡೆಯಬಹುದಾದ, ನಮ್ಮ ಪೂರ್ವಿಕರ ದಪ್ಪ ಚಾದರದ ಕಮಟುವಾಸನೆಯನ್ನು ಹೊತ್ತಿರುವ ನಮ್ಮ ಅಹಂಕಾರಗಳ ಆಕಾಶವನ್ನು, ನಿಶ್ಚಿತ ಸಾಧ್ಯತೆಯ, ಮಿತಿಯ ಭೂಮಿಗೆ ತಂದು ನಿಲ್ಲಿಸುವಂತಹದ್ದು. ಇಲ್ಲಿನ ಯಾವ ಪಾತ್ರಗಳೂ ಯಾವ ಮಹದೋದ್ದೇಶಗಳ ಬೆನ್ನುಹತ್ತಿ ಅಲೆಯುವುದಿಲ್ಲ. ಬದುಕು ಹೀಗೆಯೇ ಇರಬೇಕು ಎನ್ನುವ ಆಶಯವಿದ್ದರೂ ಅದನ್ನು ಒಂದು ನೀಲಿ--ನಕ್ಷೆಯನ್ನಾಗಿ

ಮಾಡಿಕೊಳ್ಳುವುದಿಲ್ಲ. ಕಡಲಿಗೆ, ಕಡಲಿನ ತೆರೆಗೆ ವಿರುದ್ಧವಾಗಿ ಈಸಿ ಜೈಸುವ ಧೈರ್ಯವನ್ನು ಹೊತ್ತಿರುವಂತಹವರಲ್ಲ. ಆದರೂ ಇಲ್ಲಿಯ ಎಲ್ಲ ಪಾತ್ರಗಳು, ಬದುಕಿನ ಹಲವು ಸಾಧ್ಯತೆಗಳಿಗೆ ಏಕಮುಖವಾಗಿ ತೆರೆದುಕೊಳ್ಳುತ್ತಲೇ ಹೋಗುತ್ತವೆ. ಹಾಗೆ ಬದುಕುವ ಪಾತ್ರಗಳಲ್ಲಿ ಭಿನ್ನಧೋರಣೆಯಲ್ಲಿ, ನಡೆಯುವ ತಿಕ್ಕಾಟಗಳಲ್ಲಿ, ಅಸೂಯೆ, ಮತ್ಸರ ಮೆಚ್ಚುವಿಕೆಯಲ್ಲಿ, ಹತ್ತು ಹಲವು ದಿನನಿತ್ಯದ ಜಂಜಡಗಳಲ್ಲಿ, ಬದುಕಿನ ವಿಧಿಗಳಲ್ಲಿ ಪಕ್ವವಾಗುತ್ತಾ ಹೋಗುತ್ತವೆ. ಹುಟ್ಟಿಕೊಂಡ ದ್ವೇಷ, ಅಸೂಯೆಗಳು, ಕಾಲಕ್ರಮೇಣ ಅರ್ಥಕಳೆದುಕೊಂಡು, ಮಾನವೀಯ ಅನುಕಂಪವೊಂದನ್ನೇ ಉಳಿಸಿಕೊಳ್ಳುವ ಎಲ್ಲ ಪಾತ್ರಗಳೂ, ತಮ್ಮ ಮಿತಿಯಲ್ಲಿಯೆ ಬದುಕಿನ ಸಾರ್ಥಕ್ಯವನ್ನು ಕಂಡುಕೊಳ್ಳುತ್ತವೆ. ಅಂತಹ ಬದುಕಿಗೆ ತೆರೆದುಕೊಳ್ಳುವ ಕ್ರಿಯೆಯಲ್ಲಿಯೇ ಅವು ಜೀವಕ್ಕೆ, ಜೀವಿಸಲಿಕ್ಕೆ ಬೇಕಾದ ಒಂದು ಅಂತರಂಗದ ಶಾಂತಿಯನ್ನು ಪಡೆದುಕೊಳ್ಳಲು ಶಕ್ತವಾಗುತ್ತವೆ. ಬಹುಶಃ ಸರಳತೆಯಲ್ಲಿಯೇ ವ್ಯಕ್ತವಾಗುವ ಜಗತ್ತಿನ ಹಲವು ಸತ್ಯಗಳನ್ನು– ಸಾಮಾನ್ಯ ಪಾತ್ರಗಳ ಮೂಲಕ, ದಿನನಿತ್ಯದ ಘಟನೆಗಳ ಮೂಲಕವೇ– ವಿವೇಕರ ಒಳದೃಷ್ಟಿಕೋನ ನಮಗೆ ಒದಗಿಸುತ್ತದೆ. ಈ ನಿಟ್ಟಿನಲ್ಲಿ, ವಿವೇಕರು ಆಯ್ದುಕೊಳ್ಳುವ ಮಾರ್ಗ ಜಗತ್ತಿನ ಪ್ರಧಾನ ಲೇಖಕರಾದ ಟಾಲ್‌ಸ್ಟಾಯ್, ಗಾರ್ಕಿ ಮತ್ತು ಸ್ಟೇನ್‌ಬೇಕರ ದಾರಿಯನ್ನೇ ನೆನಪಿಸುವುದು ಆಕಸ್ಮಿಕ ಅಲ್ಲ.

ಕಾದಂಬರಿ ತೆರೆದುಕೊಳ್ಳುವ ಮೊದಲ ವಾಕ್ಯವನ್ನೇ ಗಮನಿಸಿ: ಒಂದು ದಿನಾಂಕ, ಇಸವಿಗಳ ಯಾವ ಹಂಗಿಲ್ಲದೆ, ಅಂದು ಆಗಬಹುದಾದ, ಇಂದಿಗೂ ಸಲ್ಲುವ, ಅತ್ತ ಗ್ರಾಮೀಣವೂ ಅಲ್ಲದ, ಇತ್ತ ನಗರವೂ ಅಲ್ಲದ ಒಂದು ಪೇಟೆಯ ಯಾವುದೋ ಓಣಿಯಲ್ಲಿ ಮಗನನ್ನು ಮತ್ತು ಗಂಡನನ್ನು ಕಳೆದುಕೊಂಡ ಅತ್ತೆ ಪಂಢರಿಯೂ ಹಾಗೂ ಅವಳ ವಿಧವೆ ಸೊಸೆ ಯಮುನೆಯೂ ಜಗಳಮಾಡಲಿಕ್ಕಾಗಿಯೇ ಕಾಯ್ದು ನಿಂತಿರುವಂತೆ, ಹಾಗೆ ಕಾಯುತ್ತಲೇ ತಮಗೆ ಸ್ವಗತ ಎನ್ನುವಂತೆ ಒಂದು ಮಾತು ಹೇಳುತ್ತಾರೆ: 'ಮಳೀ ಬಂದರೂ ಕಾಯೂದೇ'. ಈ ಒಂದು ವಾಕ್ಯ ಇಡಿಯ ಕಾದಂಬರಿಯ ಸೂತ್ರದಂತೆ ಕೆಲಸ ಮಾಡುತ್ತದೆ. ಮಳೆ ಜೀವೋತ್ಸವದ ಸಂಕೇತ, ಮಳೆ ಮನುಷ್ಯತ್ವ ಮತ್ತು ದೈವತ್ವಗಳ ಕೊಂಡಿ,.ಮಳೆ ಅನಂತ ಸಾಧ್ಯತೆಯ ಆಕಾಶವನ್ನು ನಿಶ್ಚಿತ ನೆಲೆಗಟ್ಟಿನ ಭೂಮಿಗೆ ಹಿಡಿದಿಡುವ ಒಂದು ನೈಸರ್ಗಿಕ ಕ್ರಿಯೆ– ಒಂದರ ಹೊರತಾಗಿ ಮತ್ತೊಂದಕ್ಕೆ ಯಾವ ರೂಪವೂ ಇಲ್ಲ. ಈ ಕ್ರಿಯೆ ಎಷ್ಟು ಭೌತಿಕವೋ, ಅಷ್ಟೇ ಅಭೌತಿಕ. ಎಷ್ಟು ನಿಜವೋ, ಅಷ್ಟೇ ಮಾಯೆ. ಇಂತಹ ಮಳೆ ಆಕಾಶ ಕಡಿದು ನೆಲಕ್ಕೆ ಅಪ್ಪಳಿಸಿದರೂ ತಂಪಾಗಲಾರದಂತೆ ಕಾಯುವ ಕೈಂಕರ್ಯ ಅತಿಸಾಮಾನ್ಯನೊಬ್ಬನಿಗೆ ದಕ್ಕುವಂತಹುದು. ಇಡಿಯ ಕಾದಂಬರಿಯನ್ನು ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಇದೊಂದೇ ವಾಕ್ಯವನ್ನು ಉದ್ಧರಿಸಿಬಿಡಬಹುದಾದಮಟ್ಟಿಗಿನ ಧ್ವನಿಶಕ್ತಿಯನ್ನು ಈ ವಾಕ್ಯ ಕಾದಂಬರಿಯ ಉದ್ದಕ್ಕೂ ಪಡೆಯುತ್ತದೆ.

ಅಕಾಲಕ್ಕೆ ಮಗನನ್ನು ಕಳೆದುಕೊಂಡ ಪಂಢರಿ ಮತ್ತು ಅವಳ ಸೊಸೆ ಯಮುನೆಯ ಜೀವನ ವಿಧಾನವೇ ಒಂದು ವಿಸ್ಮಯಕಾರಕವಾದದ್ದು. ಸ್ಥಾಯಿಭಾವದಲ್ಲಿಯೂ ಅವು ಹೊರಗಿನ ಸಮಾಜದ ಜೊತೆ ಒಂದು ನಿರ್ದಿಷ್ಟವಾದ ಸಂಪರ್ಕವನ್ನು ಕಾಲಕಾಲಕ್ಕೆ ಪಡೆಯುತ್ತಲೇ ಹೋಗುತ್ತವೆ. ದೈನಿಕವೆಲ್ಲವನ್ನು ಒಬ್ಬರಿಗೊಬ್ಬರು ಆರೋಪಿಸಿಕೊಳ್ಳುತ್ತಲೇ, ಹಿಂದಿನ ಯಾವುದನ್ನೂ ನೆನಪಿಗೆ ತಂದುಕೊಳ್ಳದಂತೆ ಅವರಿಬ್ಬರು ಮುಂದಿನ ದಿನಕ್ಕಾಗಿ ಕಾಯುತ್ತಾರೆ. ಈ ಕಾಯುವಿಕೆಯಲ್ಲಿ, ಬದುಕಿಗೆ ವಿಮುಖವಾಗುವ ಯಾವ ಭಾವನೆಯೂ ಇಲ್ಲ, ಮನಸ್ಸು ಮುದುಡುವುದೂ ಇಲ್ಲ. ಶೀನ್ನನ ಊಟದ ಬರುವಿಕೆಯನ್ನು ಗಮನಿಸುವುದರ ಹಿಂದೆ, ಅವನ ಹೆಂಡತಿ ವಾರದ ಹಿಂದೆ ಊರಿಗೆ ಹೋಗಿರಬಹುದಾದುದರ ಕುರಿತು ಅವರು ಚಿಂತಿಸುತ್ತಾರೆ. ಅವರು ಜನರನ್ನು ಹುಡುಕಿ ಹುಡುಕಿ, ಮೆಣಸಿನಕಾಯಿಯ ಘಾಟಿನಂತಹ ಪ್ರಶ್ನೆಯನ್ನು ಆಟಕ್ಕೆನ್ನುವಂತೆ ಎಸೆಯುವುದು ಕೂಡಾ, ಸಮಾಜದ ಜೊತೆ ನಿರಂತರ ಸಂಪರ್ಕಕ್ಕಾಗಿ ಅವರೇ ಕಂಡುಕೊಂಡ ಒಂದು ಸರಳ ಉಪಾಯವಾಗಿ ಮಾತ್ರ ತೋರುತ್ತದೆ. ಈ ಸರಳ ಉಪಾಯಗಳೇ ಅವರನ್ನು ಬದುಕಿನ ಹಲವು ದಾರಿಗಳಲ್ಲಿ ಕೈಹಿಡಿದು ನಡೆಸುವುದು ಒಂದು ಅಚ್ಚರಿಯಾಗಿ ನಮಗೆ ದಕ್ಕುತ್ತದೆ. ಬಾಂದಕಲ್ಲಿನ ಬಗೆಗಾಗಲಿ, ದೇವರಾಯನ ವಿಶ್ವದರ್ಶನವಾಗಲಿ, ಅಥವಾ ಬೀಳುವ ಮಾವಿನಹಣ್ಣಿನ ಕುರಿತಾಗಿಯೇ ಹದಿಹರೆಯದ ಪುರಂದರ ಮೋಹಿನಿಯರ ಮಧ್ಯದ ಸ್ಪರ್ಧೆ, ಪುರಂದರನ ನವಿರುಭಾವನೆಗಳು- ಎಲ್ಲವೂ ನಮ್ಮ ಮುಂದೆಯೇ ನಡೆಯುತ್ತಿರುವುದು ಎನ್ನುವ ನಿಖರತೆಯಲ್ಲಿ ವಿವೇಕರು ಕಾದಂಬರಿಯ ಪ್ರತಿ ಘಟನೆಗಳನ್ನ ಸಹಜವಾಗಿ ಕಟ್ಟಿದ್ದಾರೆ.

ಇಡಿಯ ಕಾದಂಬರಿಯಲ್ಲಿ, ಒಂದೇ ಒಂದು ಬೇಡವಾಗಿತ್ತು ಅನಿಸುವ ಘಟನೆಗಳಾಗಲೀ, ವಾಕ್ಯಗಳಾಗಲೀ ಇಲ್ಲ. ಕಾದಂಬರಿಯ ಮೊದಲಿಗೆ ಬರುವ ಒಂದು ಸನ್ನಿವೇಶವನ್ನೇ ಗಮನಿಸಿ: ಯಮುನೆಯ ವೈಧವ್ಯದ ಹಿನ್ನೆಲೆಯಲ್ಲಿ ಈ ವಾಕ್ಯವಿದೆ-ಆ ರಾತ್ರಿ ಹೊತ್ತಿಸಿಟ್ಟ ದೀಪದ ಬದಿಯಲ್ಲಿ, ತುದಿಯನ್ನು ಹಾಲಿನ ಬಟ್ಟಲಲ್ಲಿ ಇಳಿಬಿಟ್ಟು, ಮೇಲಿನ ಮೊಳೆಯೊಂದಕ್ಕೆ ನೇತು ಹಾಕಿದ ನೂಲಿನ ನೆರಳು ಅಲ್ಲಾಡುವುದನ್ನು ನೋಡುತ್ತ ಕೂತಾಗ ಅವರಿಗೆ ಮುಂದಿನ ದಿನಗಳ ಚಿತ್ರ ಮೂಡತೊಡಗಿತು.' ಬರಿದಾದ ಮನ ಮತ್ತು ಮನೆಯಲ್ಲಿ ಅವರಿಗೆ ಆಸರೆಯಾಗುವುದು ಕಳೆದ ದಿನಗಳ ನೆನಪಲ್ಲ; ಬದಲಿಗೆ ಮುಂಬರುವ ದಿನಗಳ ಬಗೆಗಿನ ಒಂದು ಖಚಿತ ನಿಲುವು. ಸಮಾಜದ ಜೊತೆ ಸಂಘರ್ಷಕ್ಕೆ ಇಳಿಯಬೇಕಾದ ಅನಿವಾರ್ಯತೆಯ ಕುರಿತದ್ದು. ಅತ್ತೆಯಾದ ಪಂಢರಿ, ಸೊಸೆ ಯಮುನೆಯ ಬಳೆಗಳನ್ನು ಒಡೆಯಲು ಬಿಡದೆ, 'ಆಡುವವರಿಗೇನು, ಅವರ ಬಾಯಲ್ಲಿ ಸೆಗಣಿ ಬೀಳಲಿ' ಎನ್ನುವ ಮಾತಿನ ಹಿಂದಿರುವ ಛಲ, ಧಾಡಸಿತನ ಮಳೆಯ ಇನ್ನೊಂದು ಮುಖವನ್ನು ಎದುರಿಸಿ ನಿಂತಿರುವ ಜೀವೋತ್ಸವವಿದು. ಇಲ್ಲಿ

ಮಳೆ ಪಡೆಯುವ ಅರ್ಥ ಆಪ್ಯಾಯಮಾನವಾದುದಲ್ಲ. ಅದನ್ನ ಎದುರಿಸಿ ನಿಲ್ಲುವ ಜೀವಛಲ ಕೂಡಾ, ಸಮುದ್ರದ ರುದ್ರನರ್ತನಕ್ಕೆ ಸಿಕ್ಕಿಕೊಂಡರೂ ದಡಸೇರುವ ಗಟ್ಟಿಮನಸ್ಸಿನ ಹಾಯಿದೋಣಿಯದು. ಎಲ್ಲವನ್ನು ಪಲ್ಲಟಗೊಳಿಸುವ ಕಾಲದ ಎದುರು ಸಡ್ಡು ಹೊಡೆದು ನಿಲ್ಲುವ ಈ ಎರಡು ಹತಭಾಗ್ಯ ದೇವತೆಯರ ಚಿತ್ರಣ ಮನಸ್ಸಿನೊಳಗೆ ಬಹುಕಾಲ ನಿಲ್ಲುವಂತಹುದು [೨]

ವಿವರಗಳು ಇನ್ನಿಲ್ಲದಂತೆ ಕಾದಂಬರಿಯ ಉದ್ದಕ್ಕೂ ಹಬ್ಬಿವೆ. ಪಂಢರಿಯ ಅಲುಗುವ ಕೆನ್ನೆಯ ಎಲುಬುಗಳು, ಮಂಜಯ್ಯನ ಕಿವಿಯ ಹಿಂದಿನ ಗಂಟು, ದೇವರಾಯನ ಮನೆಯ ಕಪ್ಪು ಹಿಡಿದ ಜೇಡರಬಲೆ, ಯಮುನೆಯ ಬಿಳಿಯ ಬೆನ್ನು, ಸುನಂದೆಯ ಜಡೆ, ಇನ್ನಿತರ ವಿವರಗಳು ತೀವ್ರ ಅನುಭವ ಮತ್ತು ಸೂಕ್ಷ್ಮತೆಯಿಂದ ಮಾತ್ರ ಸಾಧ್ಯ [೩]. ಒಂದು ಬದಿ ಕಡಲು ಎಂಬ ಶಬ್ದಗುಚ್ಛವೇ ಎಷ್ಟು ಸುಮಧುರವಾಗಿದೆ... ಇನ್ನೊಂದು ಬದಿ ಏನಿದ್ದಿರಬಹುದು? ಅದು ಹರಿವ ಬದುಕೆ? ನದಿಯೆ? ದ್ವೀಪಗಳೆ? ಮುಖಜ ಪ್ರದೇಶವೆ? ಕರಾವಳಿಯ ಬೆವರೆ? ಧೊಪ್ಪೆಂದು ಜಡಿವ ಮಳೆಯೆ? ಸಂಬಂಧಗಳೆ? ವಿವೇಕ ಶಾನಭಾಗರ ಕಾದಂಬರಿಯು ತನ್ನೊಳಗಿನ ವ್ಯಕ್ತಿಗಳ ಸಹಜ ಭಾವಗಳನ್ನು ಮೂಡಿಸುತ್ತ, ಕೆಲವೊಮ್ಮೆ ಕಾವ್ಯಮಯವಾಗಿ, ಕೆಲವೊಮ್ಮೆ ರಮ್ಯಲೋಕದ ಝುಲಕ್ನಂತೆ ಮಿಂಚುತ್ತ ನಮ್ಮನ್ನು ತುಂಬಾ ಕಾಡುತ್ತದೆ.

೨೧೨ ಪುಟಗಳ ಈ ಕಾದಂಬರಿಯಲ್ಲಿ ಪುರಂದರ ಎಂಬೊಬ್ಬ ಹುಡುಗ ಬೆಳೆಯುತ್ತ ಹೋಗುವುದನ್ನೇ ಒಂದು ಸೂತ್ರವಾಗಿಟ್ಟುಕೊಳ್ಳಬಹುದು. ಅವನ ಸುತ್ತಮುತ್ತಲೇ ಕಥೆ ಇದೆ ಎನ್ನುವುದೊಂದೇ ಇದಕ್ಕೆ ಹಿನ್ನೆಲೆ. ಹೊರತಾಗಿ ಈ ಕಾದಂಬರಿಯಲ್ಲಿ ಯಾವುದೇ ಪಾತ್ರದ ಬಗ್ಗೆ ಹೆಚ್ಚಿನ ಮೋಹ ಇಟ್ಟುಕೊಳ್ಳದೆ ಹೋಗಿರುವುದು ವಿವೇಕ ಶಾನಭಾಗರ ಸಂಯಮ ಎನ್ನಬಹುದು. ಈ ಕಥೆ ಹೇಗಿದೆ ಎನ್ನುವುದಕ್ಕಿಂತ ಕಥೆಯು ಎಷ್ಟು ಸುಮಧುರವಾಗಿ, ಸುಲಲಿತವಾಗಿ ಹರಿದುಕೊಂಡಿದೆ ಎಂಬುದು ಮುಖ್ಯ. ಅದೇ ತಾನೆ ಓದಿಸಿಕೊಳ್ಳುವುದು. ಓದಿದ ಮಾಹಿತಿಯನ್ನು ಕಥೆಯೆಂಬ ಹಂದರದ ಮೂಲಕ ಹೇರುವುದಕ್ಕೂ, ಅನಿಸಿದ ಭಾವಗಳನ್ನು ಬಿಂಬಿಸುವುದಕ್ಕೂ ಇರುವ ವ್ಯತ್ಯಾಸವನ್ನು ಸುಲಭವಾಗಿ ಕಂಡುಹಿಡಿಯಬಹುದು!

ವಿವೇಕ ಶಾನಭಾಗರದು ನಿಯತ್ತಿನ ಭಾಷೆ. ಅವರ ನಿವೇದನೆಯಲ್ಲಿ, ನಿರೂಪಣೆಯಲ್ಲಿ ಒಂದು ಬಗೆಯ ವಿಶಿಷ್ಟತೆಯಿದೆ. ಯಾವುದೇ ರೋದನವಿಲ್ಲದೆ, ವೈಚಾರಿಕತೆಯ ಪಸೆಯಿಲ್ಲದೆ, ಕೇವಲ ದೃಶ್ಯಗಳ ಮೂಲಕವೇ ಸಂಸ್ಕೃತಿಯನ್ನು ದಾಖಲಿಸುವ ಸೂಕ್ಷ್ಮ ಕೆಲಸವನ್ನು ಶಾನಭಾಗರು ಮಾಡಿದ್ದಾರೆ. ಈ ಜಗತ್ತಿನಲ್ಲಿ ಬೆಳಕಿನ ವೇಗದಲ್ಲಿ ನಶಿಸುತ್ತಿರುವ ಸಂಕುಲಗಳಲ್ಲಿ ಸಂಸ್ಕೃತಿಯ ನೆನಹೂ ಒಂದು. ಅದನ್ನು ದಾಖಲೀಕರಣ ಮಾಡುವುದೇ ಕೆಲವರ ಉದ್ಯೋಗವಾಗಿದ್ದರೆ, ಅದನ್ನು ಸುಮಧುರವಾಗಿ ಆಹ್ವಾನಿಸಿಕೊಳ್ಳುವುದು

ವಿವೇಕ ಶಾನಭಾಗರಂಥವರ ಸಹಜ ಸಾಮರ್ಥ್ಯ. ಈ ಕಾದಂಬರಿಯು ಇಂಥ ಒಂದು ಗ್ಲೋಬಲ್ ಕಾರ್ಯಕ್ಕೆ ಕೈ ಹಾಕಿ ಯಶ ಸಾಧಿಸಿದೆ. ಅಂಡಮಾನಿನ ಜರವಾ ಬುಡಕಟ್ಟನ್ನೇ ಭೇದಿಸುವ ಅಂಡಮಾನ್ ಟ್ರಂಕ್ ರೋಡನ್ನು ಟೀಕಿಸುವ ಪರಿಸರವಾದಿಗಳಿಗಿಂತ ಉಗ್ರವಾದ ಭಾವನೆಗಳು ವಿವೇಕರ ಒಡಲೊಳಗೆ ಕುದಿಯುತ್ತಿವೆ. ಆದರೆ ಅದನ್ನು ಹೊರಹಾಕಲು ಅವರು ವಿವೇಕಯುತ ಮಾರ್ಗವನ್ನು ಬಳಸಿದ್ದಾರೆ. ಬಹುಶಃ ಒಂದು ಬದಿ ಎಷ್ಟೋ ಲಕ್ಷ ವರ್ಷಗಳಿಂದ ಬದುಕುತ್ತಿರುವ ಕಡಲಿನ ಅಲೆಗಳು, ಅದೇ ನೊರೆ, ಅದೇ ಕಿನಾರ, ಅದೇ ತೆಂಗು, ಬಂಗುಡೆ, ಸೇತುವೆಗಳು ವಿವೇಕರ ಈ ಶಾಂತ ಮನಸ್ಸಿಗೆ ಕಾರಣವಾಗಿವೆ.

ಇಡೀ ಕಾದಂಬರಿಯಲ್ಲಿ ಕೆಲವೊಮ್ಮೆ ತಾಂತ್ರಿಕ ತೊಂದರೆಗಳು ಕಾಣಿಸಿಕೊಳ್ಳುತ್ತವೆ ಎನ್ನುವುದೂ ನಿಜ. ಉದಾಹರಣೆಗೆ, ಪಂಢರಿ ಮತ್ತು ಯಮುನಾರ ಕಥೆಯು ಮೊದಲ ಪುಟಗಳಲ್ಲೇ ಬಂದರೂ ಅವರು ಮತ್ತೆ ಕಾಣಿಸಿಕೊಳ್ಳುವುದು ಪುರಂದರನು ಡಿಗ್ರಿ ಮುಗಿಸಿದ ಮೇಲೆ. ಎಲ್ಲಿಂದಲೋ ಬಂದವರಂತೆ ಅವರು ಕಾಣಿಸಿಕೊಳ್ಳುತ್ತಾರೆ. ಅದರಲ್ಲೂ ಮೊದಲ ಪುಟದ ಘಟನೆಯನ್ನೇ ಅವರ ಮರುಪ್ರವೇಶಕ್ಕೆ ಲಿಂಕ್ ಮಾಡಿರುವುದು ಯಾಕೋ ಕೊಂಚ ಕೃತಕ ಎನ್ನಿಸುತ್ತದೆ. ಹಾಗೆಯೇ ನಾಟಕದ ಯಶವಂತನ ಪಾತ್ರವು ಇನ್ನೇನು ಕಾದಂಬರಿ ಮುಗಿಯುವಲ್ಲಿಗೆ ಹಠಾತ್ತನೆ ಬಂದು ಕಥಾನಾಯಕನಾಗಿರುವ ಪುರಂದರನ ಬದುಕಿನೊಂದಿಗೆ ಸಮೀಕರಣಗೊಳ್ಳುತ್ತದೆ. ಅವನು ಪರಾರಿಯಾಗಿದ್ದ ಎನ್ನುವುದೇನೋ ನಿಜ. ಆದರೆ ಅವನ ಕಥೆಯೂ ಎಲ್ಲೋ ಒಂದು ವಿಶೇಷ ದೃಶ್ಯದಂತೆ ಕಾಣಿಸುತ್ತದೆ. ಹಾಗೆಯೇ ರಮಾಕಾಂತನ ಪಾತ್ರವೂ ಬಹುಬೇಗ ಕ್ರಾಂತಿಕಾರಿಯಾಗಿ ಬೆಳೆಯುತ್ತದೆ. ಈ ಮಹಾಶಯರೂ ಕಾದಂಬರಿಯ ಕೊನೆಗೆ ಪ್ರಬಲರಾಗಿ ಪುರಂದರನನ್ನು ಮರೆಸುತ್ತಾರೆ. ಒಂದು ಸಂದರ್ಭದಲ್ಲಂತೂ ಪುರಂದರನೇ ತನ್ನದು ಎಂಥ ಸಾಮಾನ್ಯ ಬದುಕು ಎಂದು ಬೇಜಾರುಪಟ್ಟುಕೊಳ್ಳುತ್ತಾನೆ. ಇವೆಲ್ಲವೂ ವಿವೇಕರ ತಾರತಮ್ಯರಹಿತ ಪಾತ್ರನಿರ್ವಹಣೆ ಎಂದುಕೊಂಡರೂ ಯಾಕೋ ಅವರು ತುಂಬಾ ನಿರಾಸಕ್ತರಾಗಿದ್ದಾರೆ; ಪಾತ್ರಗಳ ಪರಕಾಯ ಪ್ರವೇಶದಲ್ಲಿ, ಪಾತ್ರಗಳನ್ನು ಬೆಳೆಸುವಲ್ಲಿ ತೋರಬೇಕಾದ ನಿಯಂತ್ರಣವನ್ನೂ ತೋರಿಲ್ಲ ಎಂದು ಕೆಲವರಿಗೆ ಅನ್ನಿಸಬಹುದು [೪].

**೪. ಭಾಷೆ**

'ಒಂದು ಬದಿ ಕಡಲು' ನನಗೆ ಇಷ್ಟವಾಗಿದ್ದು ಅದರ ಶಿಸ್ತಿನ ಬರವಣಿಗೆಯಿಂದ. ಕಾದಂಬರಿಯನ್ನು ಒಂದು ಪ್ರಾಜೆಕ್ಟ್ ರಿಪೋರ್ಟ್ ಬರೆದಷ್ಟೇ ಆಸ್ಥೆಯಿಂದ ಪ್ರತಿ ಸಣ್ಣ ವಿವರಗಳಿಗೂ ಪ್ರಾಮುಖ್ಯತೆ ಕೊಟ್ಟು ಒಂದು ಸುಂದರ ಕಾವ್ಯವನ್ನಾಗಿಸಿದ್ದಾರೆ. ವಿವೇಕ್ ಉಪಯೋಗಿಸಿರುವ ಸರಳ, ಸುಂದರ ಭಾಷೆ ಉತ್ತರ ಕನ್ನಡ ಜಿಲ್ಲೆಯ ದಟ್ಟ ಸಾಂಸ್ಕೃತಿಕ

ವಿವರಗಳನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿದೆ. ಭಾಷೆ ಒಂದು ಕಾದಂಬರಿಯ ಓಘಕ್ಕೆ ಎಷ್ಟು ಮುಖ್ಯ ಎನ್ನುವುದು ಈ ಕಾದಂಬರಿಯಿಂದ ಬಹಳ ಸ್ಪಷ್ಟವಾಗುತ್ತದೆ [೩].

ವಿವೇಕರು ಭಾಷೆಯನ್ನು ಅತ್ಯಂತ ಕಾಳಜಿ ಮತ್ತು ಎಚ್ಚರದಿಂದ ಬಳಸುತ್ತಾರೆ. ಇವರ ಈ ಗುಣವನ್ನು ಪರಿಗಣಿಸಿದರೆ, ನನಗೆ ನೆನಪಾಗುವ ಇನ್ನೊಬ್ಬ ಸಾಹಿತಿಗಳೆಂದರೆ ಯಶವಂತ ಚಿತ್ತಾಲರು. ವಿವೇಕ ಶಾನಭಾಗರು ಕನ್ನಡ ಭಾಷೆಯನ್ನು ಅತ್ಯಂತ ಸಮಚಿತ್ತದಿಂದ ಮತ್ತು ಸೂಕ್ಷ್ಮ ಗ್ರಹಿಕೆಗಳಿಂದ ಕಲಿತು ಅದನ್ನು ನಾಜೂಕಾಗಿ ಬಳಸುತ್ತಾರೆ. ಅವರ ವಾಕ್ಯಗಳಲ್ಲಿ ಘಟನೆ ಇರುತ್ತದೆಯೇ ಹೊರತು ಯಾವುದೇ ಬಗೆಯ ಭಾಷೆಯ ಕಿರಿಕಿರಿ ಇರುವುದಿಲ್ಲ. ಭಾಷೆಯು ಸಂಸ್ಕೃತಿಯನ್ನು ಬಿಂಬಿಸುವ ವಾಹಕವಾಗುತ್ತದೆ. ಯಾವುದೇ ಕ್ಲೀಷೆಯಿಲ್ಲದೆ ಭಾಷೆಯನ್ನು ಶ್ರದ್ಧೆಯಿಂದ ಬಳಸುವ ರೀತಿ, ಅಚ್ಚುಕಟ್ಟಾದ ವಾಕ್ಯರಚನೆ, ಯಾವುದೇ ಗೊಂದಲವಾಗದಂತೆ ಪ್ಯಾರಾಗಳ ವಿಂಗಡಣೆ, ಕಥೆಯನ್ನು ಅಧ್ಯಾಯವಾಗಿ ಹೆಣೆಯುವ ಬಗೆ– ಹೀಗೆ ಶಿಸ್ತಿನಿಂದ ಮತ್ತು ಆಸ್ಥೆಯಿಂದ ಬರೆಯುವ ವಿವೇಕ ಶಾನಭಾಗರು ತಮ್ಮ ಈ ಕಾದಂಬರಿಯಿಂದ ಕನ್ನಡದ ಅತಿ ಮಹತ್ವದ ಕಾದಂಬರಿಕಾರರಾಗಿದ್ದಾರೆ ಎಂದು ನಾನು ಈ ಮೂಲಕ ಅಭಿಪ್ರಾಯಪಡುತ್ತೇನೆ [೪].

**೫. ಪಾತ್ರ ಚಿತ್ರಣ**

ಪಾತ್ರಗಳೆಲ್ಲವೂ ರಕ್ತ ಮಾಂಸ ತುಂಬಿಕೊಂಡು ಕೊನೆಯತನಕ ಕಾಡುತ್ತವೆ. ಗೋದಾವರಿ ಮತ್ತು ಪುರಂದರನ ಪಾತ್ರಗಳು ಇನ್ನು ಉತ್ತಮವಾಗಲು ಸಾಧ್ಯವೇ ಇಲ್ಲವೇನೋ ಎನ್ನುವಷ್ಟು ಚೆನ್ನಾಗಿ ಮೂಡಿಬಂದಿವೆ. ಇನ್ನು ಕ್ರಾಸ್ ಸೆಕ್ಷನಲ್ ಪಾತ್ರವಾಗಿ ಬರುವ ಸುಂದ್ರಜ್ಜಿ, ಬನಭಂಡಾರಿ ಪಾತ್ರಗಳು ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ. ಲೀನಿಯರ್ ಪಾತ್ರಗಳಾದ ದೇವರಾಯ, ವಾಸುದೇವ, ಮಂಜಯ್ಯ ಇವುಗಳು ಪೂರಕವಾಗಿ ಎಷ್ಟು ಬೇಕೋ ಅಷ್ಟು ಕೆಲಸವನ್ನು ಮಾತ್ರ ಮಾಡಿವೆ. ಪಂಢರಿ ಮತ್ತು ಯಮುನೆಯಿಂದ ಕಥೆ ಆರಂಭವಾಗಿ, ಬಾಂದಿನ ಕಲ್ಲಿನ ಪ್ರಸಂಗಕ್ಕೆ ನಿಂತು ಮತ್ತೆ ಅಲ್ಲಿಂದಲೇ ಆರಂಭವಾಗುವಷ್ಟರಲ್ಲಿ, ಪುರಂದರನ ವಿದ್ಯಾಭ್ಯಾಸ, ಕೆಲಸ, ಪ್ರಥಮ ಪ್ರೀತಿ ಎಲ್ಲವೂ ಮುಗಿದಿರುತ್ತದೆ. ಕಾದಂಬರಿಗೆ ಇರುವ ಶಕ್ತಿಯೇ ಅದೆಂದು ನನ್ನ ಭಾವನೆ. ಈ ರೀತಿಯ ಫ್ಲಾಗ್ಮೆಂಟೆಡ್ ನರೇಷನ್‌ನಿಂದ ಕಾದಂಬರಿಯ ಓದಿಗೆ ತೊಂದರೆಯಂತೂ ಆಗುವುದಿಲ್ಲ.

ಪುರಂದರ ಮೀಡಿಯಾಕ್ರಿಟಿಯನ್ನು ಮೀರಲು ಪ್ರಯತ್ನಿಸುತ್ತಿದ್ದರೆ ಯಶವಂತ (ಪುರಂದರನ ದೃಷ್ಟಿಯಲ್ಲಿ) ತನ್ನ ನಾಟಕದ ಕಂಪೆನಿಗಳ ಸಾಹಸದಿಂದಲೇ ಅದನ್ನು ಮೀರಲು ಪ್ರಯತ್ನಿಸಿದ್ದಾನೆ. ಆದರೆ, ಅದರಲ್ಲಿ ಆತ ಗೆದ್ದಿದ್ದಾನೆಯೇ? ಯಶವಂತನ

ಪಾತ್ರವೊಂದು ಮಾತ್ರ (ಅದಕ್ಕಿರುವ ಅವಕಾಶದಲ್ಲಿ) ಸ್ವಲ್ಪ ಹೆಚ್ಚೇ ಮಾತಾಡುತ್ತದೆ ಅನ್ನಿಸಿತು. ಪುರಂದರರ ಪಾಲಿಗೆ ಯಶವಂತ ಏನೋ ಮಹಾಕಾರ್ಯ ಸಾಧಿಸಲು ಹೊರಟವನೇ. ಆದರೆ, ಆತನ ಕ್ರಾಂತಿ, ಧ್ಯೇಯಗಳು ನಾಟಕ ಕಂಪೆನಿಗೆ ಸೇರುವುದು ಅಥವಾ ಲಕ್ಷ್ಮೀಬಾಯಿ, ದುರ್ಗಾವತಿಯರ ಹಿಂದೆ ತಿರುಗುವ ಪ್ರೇಮಿಯ ಮಟ್ಟಿಗೇ ನಿಂತರೂ ಪುರಂದರನಿಗೆ ಆತನ ಬದುಕು ರೋಚಕ ಎನ್ನಿಸುವುದು ಪುರಂದರ ಬದುಕುತ್ತಿರುವ ಮೀಡಿಯೋಕರ್ ಬದುಕಿಗೆ ಸಾಕ್ಷಿ. ಯಶವಂತ ಪುರಂದರನಾಗಿ ಕಾಮರೂಪಿತನದಲ್ಲಿ ಇನ್ನೊಬ್ಬನ ಸುಖವನ್ನು ಅನುಭವಿಸಿದರೆ, ಪುರಂದರ, ಯಶವಂತ ಪುರಂದರನಾಗಿದ್ದಾಗ ಆತ ಏನು ಮಾಡಿರಬಹುದು ಅಥವಾ ಮಾಡಿರಬಹುದಾದ ವಿಷಯಗಳಲ್ಲಿ ತನಗೆ ಹೇಳದೇ ಇರುವುದು ಎಷ್ಟು ಎಂದು ನೆನೆಸಿ·ಪುಳಕಗೊಳ್ಳುತ್ತಾನೆ. ಕೊನೆಯಲ್ಲಿ ಬರುವ ಪುರಂದರನ 'ಕ್ಲೋಸಿಂಗ್ ಸ್ಪೀಚ್'ನಲ್ಲಿ ಆತ ಹೇಳುತ್ತಾನೆ– 'ಮದುವೆಯಾಗುವತನಕದ್ದನ್ನು ಕುತೂಹಲ ಕೆರಳಿಸುವ ಕಥೆಯಾಗಿ ಹೇಳಿಯೇನು. ಅದಕ್ಕೆ ಮುಂದಿನದು ದಿನ ನಿತ್ಯದ ಕೊನೆಯಿಲ್ಲದ ಗೋಳಾಗಿ ಕಾಣಬಹುದು.' ಇಡೀ ಕಾದಂಬರಿ ಓದಿದ ಮೇಲೆ, ಪುರಂದರನ ಬಾಯಲ್ಲಿ ಕಾದಂಬರಿಯ ಸಾರವನ್ನು ಹೇಳಿಸುವುದರ ಔಚಿತ್ಯ ಎಷ್ಟಿತ್ತು ಎಂದು ಒಮ್ಮೊಮ್ಮೆ ಅನ್ನಿಸಿದರೂ, ಅವನ ಮಿಡಿಯಾಕ್ರಿಟಿ ಎಷ್ಟು ಕಷ್ಟದ್ದು ಮತ್ತು ಅದರಿಂದ ಕೊಂಚವೇ ಹೊರಬರಲು ಪ್ರಯತ್ನಿಸುವುದೂ ಕೇವಲ ಮನುಷ್ಯರಿಗೆ ಎಷ್ಟು ಕಷ್ಟ ಅನ್ನಿಸುತ್ತದೆ.

ರಮಾಕಾಂತ ಮಾಸ್ತರರ ಐಡಿಯಾಲಜಿ ಇದ್ದಕ್ಕಿದ್ದಂತೆ ಧುತ್ತೆಂದು ನಿಂತುಬಿಡುತ್ತದೆ. ಆದರೆ ನಮಗ್ಯಾರಿಗೂ ಗೊತ್ತಾಗದ ಮಾಸ್ತರರ ಐಡಿಯಾ ಪಂಢರಿಯ ಅರಿವಿಗೆ ಮುಂಚೆಯೇ ಬಂದಿರುತ್ತದೆ. ಸೂಕ್ಷ್ಮವಾಗಿ ಎರಡನೆಯ ಬಾರಿ ಓದಿದಲ್ಲಿ ಯಮುನೆಯ ಈ ಹೊಸಾ ಪಾತ್ರಕ್ಕೆ ಪಂಢರಿ ಮೊದಲಿನಿಂದಲೂ ಸಿದ್ಧಳಿದ್ದಳು ಎಂದೇ ಎನ್ನಿಸುತ್ತದೆ. ಕಾದಂಬರಿಯ ಪ್ರತಿ ಪಾತ್ರಗಳೂ ತಮ್ಮಲ್ಲಿರುವ ಅಪೂರ್ಣತೆಯನ್ನು ಮನಗಂಡು ಪರಿಪೂರ್ಣತೆಗಾಗಿ ಅಥವಾ ಬಿಡುಗಡೆಗಾಗಿ ಹಾತೊರೆಯುತ್ತಾರೆ. ತನ್ನ ಆರಕ್ಕೇರದ ಮೂರಕ್ಕಿಳಿಯದ ದಿನಚರಿಯಿಂದ ಬೇಸತ್ತ ಪುರಂದರ, ಕ್ರಾಂತಿ, ಇನ್ನಿತರ ಧ್ಯೇಯಗಳನ್ನಿಟ್ಟುಕೊಂಡು ನಾಟಕ ಕಂಪೆನಿ ಸೇರುವ ಯಶವಂತ, ಸುನಂದೆಯ ಮದುವೆ, ಇನ್ನಿತರ ದೈನಿಕಗಳು ಅವರವರ ಗ್ರಹೀತಕ್ಕೆ ಅಪರಿಪೂರ್ಣವಾಗಿ ಕಂಡು ನಂತರದ ಕಂಪ್ಲೀಟ್‌ನೆಸ್‌ಗಾಗಿ ಅಥವಾ ಬಿಡುಗಡೆಗಾಗಿ ಹಾತೊರೆಯುತ್ತವೆ. ಕೆಲವು ಪಾತ್ರಗಳಲ್ಲಿ ಇದು ಸಂಪೂರ್ಣವಾಗಿ ಕಾಣಿಸಿಕೊಂಡರೆ, ಇನ್ನು ಕೆಲವು ಪಾತ್ರಗಳಲ್ಲಿ (ಉದಾ– ಯಶವಂತ) ಅದು ವಾಚ್ಯದಮಟ್ಟಿಗೆ ನಿಂತುಬಿಡುತ್ತದೆ; ದೋಷ ಎನ್ನಬಹುದಾದರೆ, ಇದನ್ನು ಉದಾಹರಿಸಬಹುದು [೩].

ಕಾದಂಬರಿಯಲ್ಲಿ ಬಹುವಾಗಿ ಕಾಡಿದ ಇನ್ನು ಎರಡು ಪಾತ್ರಗಳ ಬಗೆಗೆ ಹೇಳಬೇಕು: ಅವು, ಮೋಹಿನಿ ಮತ್ತು ಪುರಂದರರದ್ದು. ಏಕಮುಖಿವಾದ ಪ್ರೀತಿಯೋ ಪ್ರೇಮವೋ ಎಂದು ಕೂಡಾ ನಿರ್ಧರಿಸಲಾರದ ಪುರಂದರ, ಎಲ್ಲವನ್ನು ಒಂದು ಸ್ಪರ್ಧೆಯಂತೆಯೆ ನೋಡುವ ಮೋಹಿನಿಯು ಒಂದು ಮುಖಾಮುಖಿ, ಕಾದಂಬರಿಯಲ್ಲಿ ಮುಂದುವರಿಯದಿದ್ದರೂ ಯಾವತ್ತು ಒಂದು ಸಾಧ್ಯತೆಯಾಗಿಯೇ ಹಿನ್ನೆಲೆಯಲ್ಲಿ ಉಳಿದುಬಿಡುತ್ತದೆ. ಅವರ ಮಾವಿನ ಹಣ್ಣು ಹೆಕ್ಕುವ ಸ್ಪರ್ಧೆಯ ಹಿನ್ನೆಲೆಯಲ್ಲಿ ಒಂದು ಗಡಿ ಜಗಳ ಆರಂಭಗೊಳ್ಳುತ್ತದೆ. ಒಂದು ತುಂಡು ಭೂಮಿ ಪಂಢರಿ ಯಮುನೆಯರಿಗೇ ಸಮಾಜದ ಜೊತೆ ಹಕ್ಕಿಗಾಗಿ ನಡೆಸುವ ಒಂದು ಹೋರಾಟದ ಸಾಧ್ಯತೆಯಾಗಿ ಕಂಡರೆ, ಅದು ಯಾಕಾದರೂ ಆಯಿತೋ ಎಂದು ಹಿಂದೆ ಸರಿಯುವ ದೇವರಾಯನಿಗೆ ಸಮಾಜದ ಜೊತೆಗಿನ ವಾಗ್ವಾದ ನಿಲ್ಲಿಸಲು ತೋರುವ ದಾರಿಯಂತೆ ಹೊಳೆಯುತ್ತದೆ. ತನ್ನದೇ ರೇಜಿಗೆಯಲ್ಲಿ, ದೇವರಾಯ ಪುರಂದರನ ಕುರಿತಂತೆ ಹೇಳುವ 'ದರವೇಶಿ' ಎನ್ನುವ ಶಬ್ದ ಪುರಂದರನ ಬದುಕಿನ ಜೊತೆ ಹಾಸುಹೊಕ್ಕಾಗಿ ಬಿಡುತ್ತದೆ. ಮುಂದೆ ಆಕಸ್ಮಿಕ ಎನ್ನುವಂತೆ ರತ್ನಳ ಕುರಿತಾದ ಅವನ ನಡುವಳಿಕೆಯಲ್ಲಿಯೂ ಇದೇ ಹಣಿಕಿಹಾಕುತ್ತದೆ. ಪ್ರತಿಯೊಂದು ತಿರುವಿನಲ್ಲಿಯೂ ಪುರಂದರನ ಕ್ರಿಯೆಗಳೆಲ್ಲವೂ ವಿರುದ್ಧ ಪರಿಣಾಮವನ್ನೇ ಬೀರುತ್ತವೆ.

ಸುನಂದೆಯನ್ನು ಸಾಕುವ ಗೋದಾವರಿಯ ಪಾತ್ರವೂ ಓದುಗನೊಬ್ಬನ ಮನಸ್ಸಿನಲ್ಲಿ ಬಹುಕಾಲ ಇರುವಂತಹದ್ದು. ಸಾಮಾನ್ಯವಾಗಿ ತೋರುವ ಗೋದಾವರಿ, ಬದುಕಿನ ಜೊತೆ ನಡೆಯುವ ಜಟಾಪಟಿಗಳಲ್ಲಿ ಅಸಾಮಾನ್ಯಳಾಗುತ್ತ ಹೋಗುತ್ತಾಳೆ. ಅವಳ ಗಂಡ ಸರ್ವೋತ್ತಮ ಬದುಕಿನ ಗತಿಗಳಿಗೆ ಯಾವ ವಿರೋಧವೂ ಇಲ್ಲದೇ ಶರಣಾದರೆ, ಗೋದಾವರಿ ಅದಕ್ಕೆ ವಿರುದ್ಧವಾದ ಚೈತನ್ಯತೆಯಲ್ಲಿಯೇ ಬದುಕಿನ ತಿರುವುಗಳನ್ನ ನಿರ್ಣಯಿಸಲು ಪ್ರಯತ್ನಿಸುತ್ತಾಳೆ. ಅವಳ ವ್ಯಕ್ತಿತ್ವವನ್ನು ಒಂದೇ ಒಂದು ಶಬ್ದದಲ್ಲಿ ವಿವೇಕರು ಕಟ್ಟಿಕೊಡುತ್ತಾರೆ: ಅದು 'ಜೀರಿಗೆ ಮೆಣಸು' ಎನ್ನುವ ಅಪ್ಪಟ ಉತ್ತರ ಕನ್ನಡ ನೆಲದ ಭಾಷೆಯದು. ಕಾದಂಬರಿಯ ತುಂಬ ಇಂತಹ ಹಲವು ಶಬ್ದಗಳು, ವಾಕ್ಯಗಳು ನಿರುದ್ದೇಶಿತವಾಗಿದ್ದರೂ, ಅವು ತೆರೆದು ತೋರಿಸುವ ಪಾತಳಿಗಳು ಒಳ್ಳೆಯ ಬರಹವೊಂದಕ್ಕೆ ಹಿಡಿಯಲು ಸಾಧ್ಯವಾಗುವ ಬದುಕಿನ ಕೆಲವು ಸತ್ಯಗಳಾಗಿಯೇ ನನಗೆ ಕಂಡಿವೆ. ಇಲ್ಲಿ ಬರುವ ಅಪ್ಪಣ್ಣ, ವಿಠೋಬ, ಜನ್ನರಾಯನಂತಹ ಹಲವು ಪಾತ್ರಗಳು ಕೂಡಾ ಸಹಜವಾಗಿ ಕಾದಂಬರಿ ಸೃಷ್ಟಿಸುವ ವಿಶ್ವಾಸನೀಯ ಲೋಕಕ್ಕೆ ಸೇರಿಕೊಳ್ಳುತ್ತಾರೆ. ಸುನಂದೆಯ ಮದುವೆಯಾಗದಿದ್ದರೂ ಪರವಾಗಿಲ್ಲ, ಆದರೆ ನೆಮ್ಮದಿಯ ಬದುಕಿಗೆ ಬೇಕಾಗುವ ಯಾವ ಎಳೆಗಳೂ ಕಾಣದ ಮನೆಯೊಂದಕ್ಕೆ ಅವಳನ್ನ ಸೊಸೆಯಾಗಿ ಕಳುಹಿಸಲಾರೆ ಎಂದು ಗೋದಾವರಿ ತಳೆಯುವ ನಿಲುವು, ಡಿಗ್ರಿ, ಹಣ, ಮನೆ, ಕಾರು ಮುಂತಾದುವನ್ನೇ ನೋಡಿ ನಡೆಯುವ ಇವತ್ತಿನ, ಪ್ರೀತಿ-ಪ್ರೇಮ ಮದುವೆಗಳಿಗೂ ಅನ್ವಯಿಸುತ್ತದೆ.

ತನ್ನದೇ ಅನುಭವಗಳ ಮುಖಾಂತರ ಗೋದಾವರಿ ಕಂಡುಕೊಳ್ಳುವ ಇಂತಹ ಸರಳ ಸತ್ಯಗಳು ಮನುಕುಲಕ್ಕೆ ಯಾವತ್ತೂ ಸೇರಿದವಾಗಿವೆ.

ಇಂತಹುದೆ ಲೋಕಾರೂಢಿಗೆ ಭಿನ್ನವಾದ ನಿಲುವುಗಳನ್ನು ಇಲ್ಲಿಯ ಬೇರೆ ಬೇರೆ ಪಾತ್ರಗಳು ಪಡೆಯುತ್ತವೆ. ಶ್ರೀಮಂತ ಮನೆತನದ ಹಿನ್ನಲೆಯಲ್ಲಿಯೇ ಬಂದಿದ್ದರೂ ನಾಟಕ ಕಂಪನಿಯ ಹುಚ್ಚಿನಿಂದ ತಿರುಗುವ ಯಶವಂತನ ಕನಸಾಗಲಿ, ನೌಕರಿಗಾಗಿ ನಿರಂತರ ಹುಡುಕಾಟ ನಡೆಸುವ ಪುರಂದರನ ವ್ಯಕ್ತಿತ್ವದ ಮತ್ತೊಂದು ಸಾಧ್ಯತೆಯಾಗಿಯೇ ನನಗೆ ಕಾಣುತ್ತದೆ. ಇವೆಲ್ಲವನ್ನು, ವಿವೇಕ ಮೆಲುದನಿಯೊಂದರಲ್ಲಿಯೇ ದಾಖಲಿಸುತ್ತ ಹೋಗುತ್ತಾರೆ. ಯಶವಂತ ಮನೆ ಬಿಟ್ಟು ಹೋದೊಡನೆ ನಡೆಯುವ ಹುಡುಕಾಟದಲ್ಲಿ ಎದುರಾಗುವ ಪೊಲೀಸ್ ಪ್ರಶ್ನಾವಳಿಯಲ್ಲಿ, 'ಕಾಲೇಜಿನ ಸ್ಟೋರ್ ರೂಂನಲ್ಲಿ ನಡೆಯುವ ರಿಹರ್ಸಲ್ಲಲ್ಲಿ ನಿಮಗೆ ಇಷ್ಟವಾದದ್ದು ಯಾವುದು?' ಎಂದರೆ, ಅದಕ್ಕೆ ಪುರಂದರ 'ಅಲ್ಲಿ ತರಿಸುತ್ತಿದ್ದ ಮಂಡಕ್ಕಿ ಚಹಾ ಬಹಳ ಚೆನ್ನಾಗಿತ್ತು' ಎನ್ನುತ್ತಾನೆ. 'ನೀವು ಮುಂದೇನು ಮಾಡುತ್ತೀರಿ?' ಎನ್ನುವ ಪ್ರಶ್ನೆಗೆ, ನೌಕರಿ ಎನ್ನುವ ಉತ್ತರ ಅವನಿಗರಿವಿಲ್ಲದಂತೆಯೇ ಬರುತ್ತದೆ. ಇಂತಹ ವಾಕ್ಯಗಳು, ಕಾದಂಬರಿಯ ಪಾತ್ರಗಳು ಲೇಖಕನನ್ನು ಮೀರಿ ಬೆಳೆಯುವುದರಿಂದಲೆ ಸಾಧ್ಯವಾಗುವಂತಹುದು. ಪುರಂದರನ ನೌಕರಿಯ ಹುಡುಕಾಟಕ್ಕೆ ಊರುಗೋಲಾಗಿ ಬರುವ ಮಂಜಯ್ಯರಾಗಲಿ, ಬ್ಯಾಂಕಿನ ವ್ಯವಸ್ಥೆಯ ಸೂತ್ರ ಹಿಡಿದಿರುವ ಮಥಾಯ್ ಸಾಹೇಬರಾಗಲಿ, ಎಲ್ಲರೂ ನಮ್ಮ ಜೀವನದಲ್ಲಿಯೂ ನಾವು ಎದುರಾಗುವ ಪಾತ್ರಗಳೇ. ಈ ಅನುಭವಗಳು, ತನ್ನ ಕಾಲ ಮೇಲೆ ತಾನೆ ನಿಲ್ಲಲು ಒಂದು ತುಂಡು ಭೂಮಿಯನ್ನ ಹುಡುಕಿಕೊಳ್ಳುವ ತುರ್ತಿರುವ ನಮ್ಮೆಲ್ಲರ ಅನುಭವವಾಗಿ ಹೊಳೆಯುತ್ತವೆ.

ಇಡಿಯ ಕಾದಂಬರಿಯಲ್ಲಿ ಎಳೆಎಳೆಯಾಗಿ ಸಿಗುವ ಹಲವು ಪಾತ್ರಗಳಲ್ಲಿ, ಯಾವುದು ಮುಖ್ಯ ಯಾವುದು ಅಲ್ಲ ಎನ್ನುವುದು ಕಷ್ಟಕರವೇ. ಕಿಟಕಿಯಲ್ಲಿ ಒಮ್ಮೆ ತಲೆ ಹಾಕಿ ಗಾಡಿ ಓಡಿಸಿ ಗೋಟಾವಳಿಗೆ ಕಾರಣವಾಗುವ ಮಳ್ಳನಂತಹ ಟ್ರಕ್ ಡ್ರೈವರ್, ಹೋಪ್ ಹೋಪ್ ಎನ್ನುತ್ತಲೆ ಗಾಲಿ ಅಡಿಯಲ್ಲಿ ಸಿಲುಕುವ ಪಾಂಡುರಂಗ, ಅದನ್ನ ಒಂದು ರೋಚಕ ಕತೆಯಂತೆ ಚಪ್ಪಾಳೆ ತಟ್ಟಿ ಹೇಳುವ ವೆಂಕಟೇಶ, ಜೀವನದ ಸಂಧ್ಯಾಕಾಲದಲ್ಲಿ ಎಲ್ಲರ ಮೇಲೆ ಸೇಡು ತೀರಿಸುವವನಂತೆ ಕಡತ ಹಿಡಿದು ಓಡಾಡುವ ಸರ್ವೋತ್ತಮ, ಬದುಕಿನ ಛಲಬಿಡದ ಗೋದಾವರಿ, ಸಿನೇಮಾದಲ್ಲಿ ಎಕ್ಸ್ಟ್ರಾ ಆಗಿ ನಟಿಸಿದ ಯಶವಂತ– ಎಲ್ಲರೂ ನಮ್ಮ ನೆರೆಕೇರಿಯವರೇ ಆಗಿ, ಓದು ಮುಗಿಸಿದ ಮೇಲೆ ಮನದ ಚಡಿಯೇರಿ ಮಾತಿಗೆ ನಿಲ್ಲುವ ಅನನ್ಯತೆಯ ಅನುಭವವನ್ನು ಈ ಕಾದಂಬರಿ ದೊರಕಿಸಿಕೊಡುತ್ತದೆ[೨]

## ೫. ಸಮಾಪ್ತಿ

ಹೀಗೆ ಒಟ್ಟಾರೆಯಾಗಿ ಸಾಮಾನ್ಯ ಜೀವನದ 'ಅಸಾಮಾನ್ಯತೆ'ಯನ್ನು ಚಿತ್ರಿಸುವ 'ಒಂದು ಬದಿ ಕಡಲು' ಓದುಗರಿಗೆ ಯಾವ ಸಂದೇಶವನ್ನೂ ನೀಡುವುದಿಲ್ಲ; ಯಾವ

ತಾತ್ವಿಕ, ನೈತಿಕ, ಸಾಮಾಜಿಕ ಅಥವಾ ರಾಜಕೀಯ ಜಿಜ್ಞಾಸೆಗೂ ಪ್ರೇರೇಪಿಸುವುದಿಲ್ಲ, ಯಾರ ಪಕ್ಷವನ್ನೂ ವಹಿಸುವುದಿಲ್ಲ, ಇದರಲ್ಲಿ ಪಕ್ಷವೆಂಬುದೇ ಇರುವುದಿಲ್ಲ. ಎಂದರೆ, ನಮ್ಮ ವಿಮರ್ಶೆಯ ನುಡಿಗಟ್ಟುಗಳಿಂದ ಅದನ್ನು ಅಳೆಯುವುದಕ್ಕೆ ಬರುವುದಿಲ್ಲ. ಈ ನಮ್ಮ ಕಾಲ ನಿರೀಕ್ಷಿಸದಂಥ 'ಒಂದು ಬದಿ ಕಡಲು' ಅದೇ ಕಾರಣಕ್ಕೆ ಅತ್ಯಂತ ಪ್ರಸ್ತುತವೂ ಆಗಿರುವ ಕಾದಂಬರಿ [೧].

ಇದು ಸಾಮಾನ್ಯ ಮನುಷ್ಯರ ಸಾಮಾನ್ಯ ಕಥೆ. ಪ್ರತಿಯೊಬ್ಬರೂ ತಮ್ಮ ಸಾಮಾನ್ಯತೆಯನ್ನು ಮೀರುವ ಹಂಬಲದಲ್ಲಿಯೇ ಇರುವುದರಿಂದ ಮತ್ತು ಯಾರ ಜೀವನದಲ್ಲಿಯೂ ಏನೂ ಹೇಳಿಕೊಳ್ಳುವಂತಹದು ನಡೆಯದೇ ಇರುವುದರಿಂದ, ಅದರ ಅಸಾಧಾರಣ ಸೂಕ್ಷ್ಮ ದಾಖಲಾತಿ ಸಾಧ್ಯವಾಗಿರುವುದು ವಿವೇಕರ ಪ್ರತಿಭೆಗೆ ಸಾಕ್ಷಿ [೩].

ಅತಿ ಸಾಮಾನ್ಯರ ದನಿಗಳಿಗೊಂದು ಅಖಾಡ ಕಲ್ಪಿಸಿಕೊಟ್ಟು, ಪಾತ್ರಗಳಿಂದ ದೂರವೇ ಉಳಿಯುವ ವಿವೇಕರು ಸಾಧಿಸುವ ಸರಳತೆ ಈ ಕಾದಂಬರಿಯ ಹೆಚ್ಚುಗಾರಿಕೆ. ಸೃಜನಶೀಲತೆಯ ಉತ್ತುಂಗವೊಂದರ ಅಭಿವ್ಯಕ್ತಿಯಂತೆ ಇರುವ ಈ ಕೃತಿ ಈ ದಶಕದ ಒಂದು ಒಳ್ಳೆಯ ಅಭಿವ್ಯಕ್ತಿ. ಧ್ವನಿ ಇಲ್ಲದವರ ಲೋಕದ ಬದುಕಿನ ತರ ತರದ ರಾಗಗಳ ಒಂದು ದಾಖಲೆಯಾಗಿ ಕಾಣುವ ಅಪರೂಪದ ಈ ಪುಸ್ತಕವನ್ನು ಪುಸ್ತಕಪ್ರೀತಿಯ ಲೋಕ ಬರಮಾಡಿಕೊಳ್ಳಲಿ [೨].

**ಗ್ರಂಥ ಋಣ/ಕೃತಜ್ಞತಾ ಸಮರ್ಪಣೆ:**

೧. ಧ್ಯಾನಸ್ಥ ಮನಸ್ಥಿತಿಯ 'ಒಂದು ಬದಿ ಕಡಲು' – ಕೆ. ವಿ. ತಿರುಮಲೇಶ್, ಗಾಂಧಿ ಬಜಾರ್, ಅಕ್ಟೋಬರ್ ೨೦೦೭.
೨. ಒಂದು ಬದಿ ಕಡಲು: ಹಲವಾರು ಕಲರವಗಳ ಸಂಗೀತಸೃಷ್ಟಿ – ಅಶೋಕ ಹೆಗಡೆ, ೨೦೦೭.
೩. ಒಂದು ಬದಿ ಕಡಲಿನ ಇನ್ನೊಂದು ಬದಿ – ಗುರುಪ್ರಸಾದ ಕಾಗಿನೆಲೆ, ಕನ್ನಡಬುಕ್ಸ್ ಬ್ಲಾಗ್, ಜುಲೈ ೧೮, ೨೦೦೭.
೪. ಒಂದು ಬದಿ ಕಡಲು: ಕಡಲು ಕಡೆದು ಬದುಕಿನ ಕೆನೆ ತೆಗೆದ ಕಥೆ – ಬೇಲೂರು ಸುದರ್ಶನ, ಜೂನ್ ೧೨, ೨೦೦೭.

**ಕೃತಿ ವಿವರ:** ಒಂದು ಬದಿ ಕಡಲು, ವಿವೇಕ ಶಾನಭಾಗ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೭, ಪು. ೨೧೨

# ಶಾಂತಿನಾಥ ದೇಸಾಯಿ ಮತ್ತು ಅವರ ಮೇರುಕೃತಿ 'ಓಂ ಣಮೋ'

– ತ. ನಂ. ರಾಜಶೇಖರ; ಲಿಂಡನ್‌ವೊಲ್ಡ್, ನ್ಯೂ ಜೆರ್ಸಿ

## ಸಾರಾಂಶ

ಶಾಂತಿನಾಥ ದೇಸಾಯಿ ಅವರು ನವ್ಯಸಾಹಿತ್ಯ ಕೃತಿಗಳನ್ನು ರಚಿಸಿರುವ ಪ್ರತಿಭಾವಂತ ಲೇಖಕರ ಸಾಲಿನಲ್ಲಿ ಎದ್ದು ಕಾಣುವ ವಿದ್ವಾಂಸರು. ಇವರ ಕೊನೆಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕೃತಿ 'ಓಂ ಣಮೋ' ಜೈನ ಧರ್ಮದ ಹಿನ್ನೆಲೆಯಲ್ಲಿ, ಆಧುನಿಕತೆ, ಧಾರ್ಮಿಕ ನಂಬಿಕೆ ಮತ್ತು ಆಚರಣೆ, ಪಾಶ್ಚಾತ್ಯ ಜೀವನದ ಪ್ರಭಾವ, ವೈಯಕ್ತಿಕ ಹಾಗೂ ಸಾಮಾಜಿಕ ನಿರೀಕ್ಷೆಗಳ ಘರ್ಷಣೆ ಇವುಗಳನ್ನು ವಿಶ್ಲೇಷಿಸಿ ರಚಿಸಿರುವ ವಿಶಿಷ್ಟ ಕಾದಂಬರಿ. ಶಾಂತಿನಾಥ ದೇಸಾಯಿಯವರ ಸಂಕ್ಷಿಪ್ತ ಜೀವನ ಚಿತ್ರಣ ಮತ್ತು ಅವರ 'ಓಂ ಣಮೋ' ಕಾದಂಬರಿಯ ಸ್ಥೂಲ ಪರಿಚಯ ಮಾಡಿಕೊಡುವ ಪ್ರಯತ್ನ ಈ ಲೇಖನದಲ್ಲಿ ಮಾಡಲಾಗಿದೆ.

## ಪ್ರಾರಂಭ

ಪ್ರಗತಿಶೀಲ ಮನೋಭಾವ, ತೀಕ್ಷ್ಣ ದೃಷ್ಟಿಕೋನ, ಆಧುನಿಕ ವೈಚಾರಿಕತೆ ಇವುಗಳು ಶಾಂತಿನಾಥ ದೇಸಾಯಿಯವರ ಬರಹಗಳಲ್ಲಿ ಕಾಣಬಹುದಾದ ವೈಶಿಷ್ಟ್ಯಗಳು. ಹೀಗಾಗಿ ಇವರು ನವ್ಯಸಾಹಿತ್ಯ ಕೃತಿಗಳನ್ನು ರಚಿಸಿರುವ ಪ್ರತಿಭಾವಂತ ಲೇಖಕರ ಸಾಲಿನಲ್ಲಿ ಎದ್ದು ಕಾಣುವ ವಿದ್ವಾಂಸರು. ಈ ಪ್ರತಿಷ್ಠಿತ ಸಾಲಿಗೆ ಸೇರಬಹುದಾದಂತಹ ಕೆಲವು ಪ್ರಸಿದ್ಧ ಲೇಖಕರು– ಯಶವಂತ ಚಿತ್ತಾಲ, ಯು. ಆರ್. ಅನಂತಮೂರ್ತಿ, ಪಿ. ಲಂಕೇಶ್, ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಮುಂತಾದವರು. ಶಾಂತಿನಾಥ ದೇಸಾಯಿಯವರು ೧೯೬೧ರಲ್ಲಿ ಪ್ರಕಟಿಸಿದ ತಮ್ಮ ಪ್ರಥಮ ಕಾದಂಬರಿ 'ಮುಕ್ತಿ'ಯ ಮೂಲಕ ಕಾದಂಬರಿ ಲೋಕಕ್ಕೆ ಪದಾರ್ಪಣ ಮಾಡಿ ಓದುಗರ ಗಮನ ಸೆಳೆದರು. 'ಓಂ ಣಮೋ' ಇವರ ಏಳನೆಯ ಹಾಗೂ ಕೊನೆಯ ಕಾದಂಬರಿ. ಇದು ಇವರ

ಮರಣಾನಂತರ ೧೯೯೮ರಲ್ಲಿ ಪ್ರಥಮ ಮುದ್ರಣ ಕಂಡಿತು. ಇದರ ಮೊದಲ ಮಾತಿನಲ್ಲಿ ಶಂಕರ ಮ. ಪಾಟೀಲರು ತಿಳಿಸಿರುವಂತೆ, ಈ ಕಾದಂಬರಿಯನ್ನು ಬರೆಯಲು ಪ್ರಾರಂಭಿಸುವುದಕ್ಕೆ ಮೊದಲು ಸ್ವತಃ ಜೈನರಾದ ಶಾಂತಿನಾಥ ದೇಸಾಯಿಯವರು ದೀರ್ಘಕಾಲ ಜೈನಧರ್ಮ, ಸಿದ್ಧಾಂತ, ಆಚಾರ, ಸಮಾಜ, ಇತಿಹಾಸ ಇವುಗಳ ಬಗ್ಗೆ ಆಳವಾದ ಅಭ್ಯಾಸ, ಚಿಂತನೆ ನಡೆಸಿ, ಹಲವಾರು ಗ್ರಂಥಗಳನ್ನು ಪರಿಶೀಲಿಸಿದರು. ೧೯೯೫-೯೬ರಲ್ಲಿ ಇಂಗ್ಲೆಂಡಿನಲ್ಲಿ ತಮ್ಮ ಮಗಳ ಮನೆಯಲ್ಲಿ ಈ ಕಾದಂಬರಿಯ ಬಹುಭಾಗವನ್ನು ಬರೆದು ಭಾರತಕ್ಕೆ ಮರಳಿದರು. ಅನಾರೋಗ್ಯದ ಕಾರಣ ಕೂಡಲೇ ಉಳಿದ ಭಾಗವನ್ನು ಬರೆಯಲಾಗಲಿಲ್ಲ. ೧೯೯೮ರ ಜನವರಿಯಲ್ಲಿ ಅವರ ಆರೋಗ್ಯ ಹದಗೆಟ್ಟು, ಈ ಕಾದಂಬರಿಯನ್ನು ಹೇಗಾದರೂ ಪೂರ್ಣಗೊಳಿಸಬೇಕೆಂದು, ಇವರ ಆಪ್ತಮಿತ್ರರಾದ ಶಂಕರ ಪಾಟೀಲರ ಸಂಗಡ ಇದರ ಬಗ್ಗೆ ಚರ್ಚಿಸುತ್ತ, ಬರವಣಿಗೆಯನ್ನು ಪರಿಷ್ಕರಿಸುತ್ತ, ಮುದ್ರಣ ಪ್ರತಿಯನ್ನು ತಯಾರಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು. ಆದರೆ ಪ್ರಕಟಣೆ ಕಾರ್ಯ ಮುಗಿಯುವ ಮೊದಲೇ, ಶಾಂತಿನಾಥ ದೇಸಾಯಿಯವರು ಮಾರ್ಚ್ ೨೬, ೧೯೯೮ರಂದು ದೈವಾಧೀನರಾದರು. ಶಂಕರ ಪಾಟೀಲರು ಉಳಿದ ಭಾಗಗಳನ್ನು ಪ್ರಕಟಣೆಗೆ ಸಿದ್ಧಪಡಿಸಿ ಈ ಅಮೂಲ್ಯ ಕೃತಿಯನ್ನು ಓದುಗರಿಗೆ ತಲುಪಲು ಸಾಧ್ಯವಾಗಿಸಿದರು.

ಶಾಂತಿನಾಥ ದೇಸಾಯಿ ಅವರು ಬೆಳೆದುಬಂದ ಪರಿಸರ, ವಿದ್ಯಾಭ್ಯಾಸ, ವೃತ್ತಿಜೀವನದ ಹಿನ್ನೆಲೆ, ವಿದೇಶ ಪ್ರವಾಸದ ಅನುಭವ ಇವುಗಳೆಲ್ಲದರ ಪರಿಣಾಮ ಅವರ ವ್ಯಕ್ತಿತ್ವದಲ್ಲಿ ಹಾಸುಹೊಕ್ಕು, ಇವುಗಳ ಪ್ರಭಾವ ಅವರ ಬರಹಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಇವರ ಲೇಖನಗಳನ್ನು ಅರ್ಥಪೂರ್ಣವಾಗಿ ಅಭ್ಯಾಸ ಮಾಡಲು, ಇವರ ವ್ಯಕ್ತಿಚಿತ್ರದ ಪರಿಚಯ ಪೂರಕವಾಗುವ ಸಾಮಗ್ರಿಯಾಗುವುದು. ಈ ದೃಷ್ಟಿಯಿಂದ, ಮೊದಲು ಇವರ ಸಂಕ್ಷಿಪ್ತ ಜೀವನ ಚಿತ್ರಣವನ್ನು ನಿರೂಪಿಸಿ, ನಂತರ ಓಂ ಣಮೋ ಕಾದಂಬರಿಯಲ್ಲಿ ಬರುವ ಪಾತ್ರಗಳು, ಜೈನಧರ್ಮದ ತತ್ವ, ಆಚರಣೆ ಇವುಗಳನ್ನು ಪಾತ್ರ-ಸಂದರ್ಭಗಳೊಂದಿಗೆ ಅಳವಡಿಸಿರುವುದು, ಆಧುನಿಕ ಮತ್ತು ವಾಸ್ತವಿಕ ದೃಷ್ಟಿಯಲ್ಲಿ ಜೈನಧರ್ಮದ ತಿಳುವಳಿಕೆ ಮುಂತಾದ ವೈಚಾರಿಕ ಸಂಗತಿಗಳನ್ನು ಚಿತ್ರಿಸಲಾಗಿದೆ.

**ಶಾಂತಿನಾಥ ದೇಸಾಯಿ**

ಇಪ್ಪತ್ತನೆಯ ಶತಮಾನ ಕಂಡ ವೈಜ್ಞಾನಿಕ ಹಾಗೂ ತಾಂತ್ರಿಕ ಸಂಶೋಧನೆಗಳ ಅದ್ಭುತ ಪ್ರಗತಿ ಮತ್ತು ಸಾಧನೆಗಳಿಂದ ಪ್ರಪಂಚವು ಸಂಕೀರ್ಣಗೊಂಡು ದೇಶಗಳ, ಸಂಸ್ಕೃತಿಗಳ, ಭಾಷೆಗಳ, ನಾಗರಿಕತೆಗಳ ಒಡನಾಟ ಸುಲಭವಾಯಿತು. ಇದರಿಂದ ಜನರಿಗೆ ವಿದೇಶೀ ಸಂಸ್ಕೃತಿಗಳ ಮತ್ತು ನಾಗರಿಕತೆಗಳ ನೇರ ಸಂಪರ್ಕ ಸಾಧ್ಯವಾಗಿ ಜ್ಞಾನ ವೈಶಾಲ್ಯ ಮತ್ತು ದೃಷ್ಟಿಕೋನಗಳನ್ನು ವಿಸ್ತರಿಸಿಕೊಳ್ಳುವಂತಾಯಿತು. ಇವುಗಳ

ಪ್ರಭಾವ ಇಪ್ಪತ್ತನೆಯ ಶತಮಾನದ ದ್ವಿತೀಯ ಭಾಗದ ಅನೇಕ ಸಾಹಿತಿಗಳಲ್ಲಿ ಮತ್ತು ಅವರ ಸಾಹಿತ್ಯ ಕೃತಿಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಶಾಂತಿನಾಥ ದೇಸಾಯಿ ಅವರು ಈ ಗುಂಪಿಗೆ ಸೇರಿದ ಪ್ರಮುಖ ಸಾಹಿತಿಗಳಲ್ಲೊಬ್ಬರು.

ಶಾಂತಿನಾಥ ದೇಸಾಯಿಯವರು ಧಾರವಾಡ ಜಿಲ್ಲೆಯ, ಹಳಿಯಾಳ ತಾಲ್ಲೂಕಿನ ಹವಗಿ ಎಂಬ ಗ್ರಾಮದಲ್ಲಿ ಜುಲೈ ೨೨, ೧೯೨೯ರಂದು ಜೈನ ಹಾಗೂ ಸಮಾಜದ ಪ್ರತಿಷ್ಠಿತ ಕುಟುಂಬದಲ್ಲಿ ಜನಿಸಿದರು. ಇವರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಹಳಿಯಾಳದಲ್ಲಿ, ಪ್ರೌಢ ಶಿಕ್ಷಣ ಧಾರವಾಡದಲ್ಲಿ, ಮತ್ತು ಕಾಲೇಜು ವಿದ್ಯಾಭ್ಯಾಸ ಮುಂಬಯಿಯಲ್ಲಿ ಪಡೆದು, ಉದ್ದಕ್ಕೂ ಪ್ರತಿಭಾವಂತ ವಿದ್ಯಾರ್ಥಿಯಾಗಿ ಉತ್ತಮದರ್ಜೆಯಲ್ಲಿ ತೇರ್ಗಡೆ ಹೊಂದುತ್ತಾರೆ. ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಎಂ.ಎ. ಮುಗಿಸಿ, ಇಂಗ್ಲೆಂಡ್‌ನ ಲೀಡ್ಸ್ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಅಧ್ಯಯನ ಕೈಗೊಂಡು, ನಂತರ ೧೯೫೪ರಲ್ಲಿ ವಿಲ್ಸನ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿ ಜೀವನ ಪ್ರಾರಂಭಿಸುತ್ತಾರೆ. ಇವರು ಬರೆದ 'The Theme of Childhood in Modern English Fiction' ಎಂಬ ಸಂಶೋಧನಾ ಪ್ರಬಂಧಕ್ಕೆ ೧೯೬೩ರಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿ ದೊರೆಯುತ್ತದೆ. ಅಲ್ಲದೆ ವರ್ಷದ ಅತ್ಯುತ್ತಮ ಸಂಶೋಧನಾ ಪ್ರಬಂಧ ಎಂಬ ಪ್ರಶಸ್ತಿಯನ್ನೂ ಪಡೆಯುತ್ತದೆ. ಇವರು ಉಪನ್ಯಾಸಕರಾಗಿ, ಉತ್ತಮ ಬೋಧಕರಾಗಿ ವಿದ್ಯಾರ್ಥಿಗಳ ಹಾಗೂ ಸಹೋದ್ಯೋಗಿಗಳ ಮನ್ನಣೆ ಗಳಿಸುವುದಲ್ಲದೆ, ಮಹಾರಾಷ್ಟ್ರ ಸರ್ಕಾರದಿಂದ ಅತ್ಯುತ್ತಮ ಬೋಧಕ ಪ್ರಶಸ್ತಿಯನ್ನೂ ಗಳಿಸುತ್ತಾರೆ.

ಮುಂಬಯಿಯ ವಿಲ್ಸನ್ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕ ಹುದ್ದೆಯಿಂದ ವೃತ್ತಿ ಜೀವನ ಪ್ರಾರಂಭಿಸಿದ ಇವರು, ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯ ಮತ್ತು ಕೊಲ್ಹಾಪುರದ ಶಿವಾಜಿ ವಿಶ್ವವಿದ್ಯಾನಿಲಯಗಳಲ್ಲಿ ಮುಂದುವರಿದು ಉತ್ತಮ ಶಿಕ್ಷಕರಾಗಿ, ನುರಿತ ಸಂಶೋಧಕರಾಗಿ, ಸಂಶೋಧನಾ ಮಾರ್ಗದರ್ಶಕರಾಗಿ, ದಕ್ಷ ಆಡಳಿತಗಾರರಾಗಿ ಹೆಸರು ಗಳಿಸುತ್ತಾರೆ. ಇವರ ಪ್ರತಿಭೆ, ವಿದ್ವತ್, ವೃತ್ತಿನಿಷ್ಠೆಗಳನ್ನು ಗಮನಿಸಿದ ಕರ್ನಾಟಕ ಸರ್ಕಾರ, ಇವರನ್ನು ಕುವೆಂಪು ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿಯಾಗಿ ೧೯೮೭ರಲ್ಲಿ ನೇಮಿಸುತ್ತದೆ. ವಿಶ್ವವಿದ್ಯಾನಿಲಯಗಳು ನೀಡುವ ಶಿಕ್ಷಣದ ಧ್ಯೇಯೋದ್ದೇಶಗಳಲ್ಲಿ 'ಪರಿಸರದ ಬಗ್ಗೆ ಕಾಳಜಿ, ಭವಿಷ್ಯತ್ತಿನ ಬಗ್ಗೆ ಭರವಸೆ, ಮಾನವೀಯತೆಗೆ ಹೆಚ್ಚು ಒತ್ತು' ಇವುಗಳಿಗೆ ಪ್ರಾಮುಖ್ಯ ಇರಬೇಕೆಂದು ಶಾಂತಿನಾಥ ದೇಸಾಯಿಯವರು ಹೇಳಿದ್ದಾರೆ. ಇಂತಹ ಪ್ರಗತಿಪರ ಮನೋಭಾವದಿಂದ ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಪ್ರಾರಂಭದ ಮೂರು ವರ್ಷ ಕುಲಪತಿಗಳಾಗಿ ದಕ್ಷ ಆಡಳಿತ ನೀಡಿ, ಪ್ರಗತಿಪಥದ ಆಧಾರವನ್ನು ಸ್ಥಾಪಿಸಿ ವೃತ್ತಿ ಜೀವನದಿಂದ ನಿವೃತ್ತಿ ಹೊಂದುತ್ತಾರೆ.

ಇಂಗ್ಲಿಷ್ ಸಾಹಿತ್ಯ ಇವರ ಪ್ರಧಾನ ಅಧ್ಯಯನ ಕ್ಷೇತ್ರವಾಗಿದ್ದರೂ, ಆಧುನಿಕ ಕನ್ನಡ ಸಾಹಿತ್ಯದ ಉತ್ತಮ ಕೃತಿಗಳನ್ನು ತೀವ್ರ ಆಸಕ್ತಿಯಿಂದ ಓದುತ್ತಿದ್ದರು. ಜೊತೆಗೆ ಮರಾಠೀ ಮತ್ತು ಹಿಂದಿ ಸಾಹಿತ್ಯ ಕೃತಿಗಳನ್ನೂ ಇಷ್ಟಪಟ್ಟು ಓದುತ್ತಿದ್ದರು. ಸಾಹಿತ್ಯ ಕೃತಿಗಳಿಗಷ್ಟೇ ಇವರ ಆಸಕ್ತಿ ಸೀಮಿತವಾಗಿರಲಿಲ್ಲ. ತತ್ವಶಾಸ್ತ್ರ, ಮನಃಶಾಸ್ತ್ರ, ಇತಿಹಾಸ, ಮುಂತಾದ ಇತರೆ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಆಸಕ್ತಿಯಿಂದ ಓದಿ ತಮ್ಮ ಜ್ಞಾನವೈಶಾಲ್ಯವನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಶಾಂತಿನಾಥ ದೇಸಾಯಿಯವರ ಸಾಹಿತ್ಯಾಸಕ್ತಿಗೆ ಮತ್ತು ಸಾಹಿತ್ಯ ಸೃಷ್ಟಿಗೆ ಬಿ. ಎಂ. ಶ್ರೀ, ಬೇಂದ್ರೆ, ಗೋಕಾಕ, ಗಂಗಾಧರ ಚಿತ್ತಾಲ ಮುಂತಾದ ಹೆಸರಾಂತ ಸಾಹಿತಿ-ಕವಿಗಳ ಪ್ರೋತ್ಸಾಹ, ಉತ್ತಮ ಲೇಖಕರಾಗಲು ಉತ್ತೇಜನ ದೊರೆಯುತ್ತದೆ. ಕವಿತೆಗಳನ್ನು ಬರೆಯುವ ಮೂಲಕ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುತ್ತಾರೆ. ಇವರ ಮೊದಲ ಕೆಲವು ಕವಿತೆಗಳು ಜೀವನ, ಜಯಂತಿ ಮುಂತಾದ ಮಾಸ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಆದರೆ ಕ್ರಮೇಣ ಇವರ ಆಸಕ್ತಿ ಗದ್ಯರಚನೆಯತ್ತ ಸಾಗಿ ಕತೆ-ಕಾದಂಬರಿಗಳನ್ನು ರಚಿಸಲು ತೊಡಗುತ್ತಾರೆ. ಇವರ ಮೊದಲ ಕಥಾಸಂಕಲನ 'ಮಂಜುಗಡ್ಡೆ' ೧೯೫೫ರಲ್ಲಿ ಪ್ರಕಟವಾಯಿತು. ಇವರ 'ಸಂಬಂಧ' ಕಾದಂಬರಿ ಸುಧಾ ವಾರಪತ್ರಿಕೆಯ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿ ೧೯೮೧ರಲ್ಲಿ ಪ್ರಕಟಗೊಳ್ಳುತ್ತದೆ. ಶಾಂತಿನಾಥ ದೇಸಾಯಿ ಅವರ ಸಾಹಿತ್ಯ ಕೃಷಿ ಸುಮಾರು ನಾಲ್ಕು ದಶಕಗಳ ಕಾಲ ಮುಂದುವರೆದು ಅವರ 'ಓಂ ಣಮೋ' ಕಾದಂಬರಿಯೊಂದಿಗೆ ಕೊನೆಗೊಳ್ಳುತ್ತದೆ.

ಶಾಂತಿನಾಥ ದೇಸಾಯಿಯವರು ಹುಟ್ಟಿ ಬೆಳೆದ ಗ್ರಾಮ್ಯ ಪರಿಸರ, ಮುಂದೆ ವಿದ್ಯಾಭ್ಯಾಸ ಮತ್ತು ವೃತ್ತಿ ಜೀವನ ನಡೆಸಿದ ಧಾರವಾಡ, ಮುಂಬೈ ಮುಂತಾದ ನಗರಗಳ ವಾತಾವರಣ ಮತ್ತು ಜೀವನ ಕ್ರಮ, ಪಾಶ್ಚಾತ್ಯ ದೇಶಗಳ ಪ್ರವಾಸದ ಅನುಭವ, ಪಾಶ್ಚಾತ್ಯ ಸಂಸ್ಕೃತಿಯ ಅವಲೋಕನ, ಇಂಗ್ಲಿಷ್ ಸಾಹಿತ್ಯದ ಆಳವಾದ ಅಧ್ಯಯನದಿಂದ ಗಳಿಸಿದ ಪಾಂಡಿತ್ಯ ಇವುಗಳ ಪ್ರಭಾವ ಅವರ ವ್ಯಕ್ತಿತ್ವ ಹಾಗೂ ಬರಹಗಳಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ. ಅವರ ಬರವಣಿಗೆಯ ಮೂಲ ಪ್ರೇರಣೆಯ ಬಗ್ಗೆ ತಮ್ಮ 'ಸಂಬಂಧ' ಕಾದಂಬರಿಯಲ್ಲಿ ಹೀಗೆ ಹೇಳಿದ್ದಾರೆ: '...ಬುದ್ಧಿಯನ್ನು ಬಿಟ್ಟು, ಪ್ರಜ್ಞೆಯನ್ನು ಬಿಟ್ಟು ಬೇರೆ ಯಾವ ರೀತಿಯಿಂದಲೂ ಜೀವನವನ್ನು ತಿಳಿದುಕೊಳ್ಳುವುದು ಅಶಕ್ಯ. ಅಂತೆಯೇ ನನ್ನ ಅನುಭವಗಳನ್ನು, ವಸ್ತುನಿಷ್ಠವಾಗಿ ನನ್ನ ಮುಂದಿಟ್ಟು, ತಿಳಿಗಣ್ಣಿನಿಂದ ನೋಡುವುದೇ ನನ್ನ ಕಥೆ ಕಾದಂಬರಿಗಳ ಹಿಂದಿನ ಮೂಲ ಪ್ರೇರಣೆ...' ಶಾಂತಿನಾಥ ದೇಸಾಯಿಯವರು ಕನ್ನಡ ಸಾಹಿತ್ಯಕ್ಕೆ ಒಟ್ಟು ಏಳು ಕಾದಂಬರಿ, ಒಂಬತ್ತು ಕಥಾ ಸಂಗ್ರಹಗಳಲ್ಲದೆ ಅನೇಕ ವಿಮರ್ಶಾತ್ಮಕ-ವೈಚಾರಿಕ ಲೇಖನಗಳನ್ನೂ, ಮರಾಠೀ ಮತ್ತು ಹಿಂದಿ ಕೃತಿಗಳ ಭಾಷಾಂತರಗಳನ್ನೂ ಬಳುವಳಿಯಾಗಿ ಕೊಟ್ಟಿದ್ದಾರೆ.

ಶಾಂತಿನಾಥ ದೇಸಾಯಿ ಅವರು ಮೃದು ಸ್ವಭಾವದ, ಪ್ರಾಮಾಣಿಕ, ನುಡಿದಂತೆ ನಡೆಯುವ, ಸ್ನೇಹಪರ, ಮಾನವತಾವಾದಿಯಾದ ವ್ಯಕ್ತಿತ್ವ ಹೊಂದಿದ್ದವರು. ಇವರ ಪತ್ನಿ ಸುಮಿತ್ರ ದೇಸಾಯಿಯವರು ಅವರ ಎಲ್ಲ ಚಟುವಟಿಕೆಗಳಲ್ಲಿಯೂ ಪೂರಕವಾಗಿ ಸಹಕರಿಸಿ, ಅವರ ಯಶಸ್ಸಿಗೆ ಆಧಾರವಾಗಿ ನಿಂತಿದ್ದಾರೆ. ದೇಸಾಯಿ ದಂಪತಿಗೆ ನಾಲ್ಕು ಜನ ಹೆಣ್ಣು ಮಕ್ಕಳಿದ್ದು, ಇವರದು ಆದರ್ಶ ಕುಟುಂಬವಾಗಿ ಹೆಸರು ಪಡೆದಿದೆ.

ಶಾಂತಿನಾಥ ದೇಸಾಯಿ ಅವರನ್ನು ಅರಸಿ ಬಂದ ಗೌರವಗಳಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಇವುಗಳು ಸೇರಿವೆ. ತಮ್ಮ ಲೇಖನಗಳಿಂದ ಕನ್ನಡ ಸಾಹಿತ್ಯಕ್ಕೆ ಆಧುನಿಕತೆಯ ವಿಚಾರಪೂರ್ಣ ಹೊಸ ತಿರುವು ಕೊಟ್ಟು, ತಮ್ಮದೇ ಆದ ಸ್ಪಷ್ಟ ಛಾಪನ್ನು ಬಿಟ್ಟು, ಸ್ನೇಹಪರ ಸಹೃದಯೀ ವ್ಯಕ್ತಿತ್ವದಿಂದ ಜನಪ್ರಿಯರಾಗಿ ಬಾಳಿದ ಶಾಂತಿನಾಥ ದೇಸಾಯಿ ಅವರು ಕನ್ನಡ ನಾಡಿನ ಹೆಮ್ಮೆಯ ಪುತ್ರರಲ್ಲೊಬ್ಬರು.

**ಓಂ ಣಮೋ**

ಜೈನ ಧರ್ಮದ ತತ್ವಗಳು, ಸಂಪ್ರದಾಯ, ಆಚರಣೆ, ಬದಲಾದ ಆಧುನಿಕ ವಾತಾವರಣದಲ್ಲಿ ಇವುಗಳನ್ನು ಕಾಣುವ ರೀತಿ, ಇವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು, ಅದಕ್ಕೆ ಪೂರಕವಾಗಿ ಹೊಂದುವಂತಹ ಪರಿಸರ, ಪಾತ್ರವರ್ಗ, ಸನ್ನಿವೇಶಗಳನ್ನು ಸೃಷ್ಟಿಸಿ, ಬಹು ರಸವತ್ತಾಗಿ ಪೋಣಿಸಿರುವ ಅನನ್ಯ ಕಾದಂಬರಿ 'ಓಂ ಣಮೋ'. ಉತ್ತರ ಕರ್ನಾಟಕದ ಶ್ರೀಮಂತ ಹಾಗೂ ಸ್ಥಳೀಯ ಸಮಾಜದ ಪ್ರತಿಷ್ಠಿತ ದಿಗಂಬರ ಜೈನ ಕುಟುಂಬದ ಮೂರು ತಲೆಮಾರಿನ ಸದಸ್ಯರ ವಿಭಿನ್ನ ವ್ಯಕ್ತಿತ್ವಗಳು, ಇಂದಿನ ವಸ್ತುಸ್ಥಿತಿಯನ್ನು ಪ್ರತಿಬಿಂಬಿಸುವ ಅನಿವಾಸಿ ಭಾರತೀಯ ಹಾಗೂ ವಿದೇಶೀ ಪಾತ್ರಗಳು, ಇವುಗಳ ನಡುವೆ ಕಂಡು ಬರುವ ಕುತೂಹಲಕಾರಿ ತಿಕ್ಕಾಟಗಳು, ಓದುಗರ ಆಸಕ್ತಿಯನ್ನು ಕೆರಳಿಸಿ, ಚಿಂತಿಸುವಂತೆ ಮಾಡುವ ಚೈತನ್ಯವುಳ್ಳ ಕಾದಂಬರಿ ಇದು.

ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು ಹೀಗಿವೆ:

ದೇವೇಂದ್ರಪ್ಪ – ಧಾರ್ಮಿಕ ಪ್ರಜ್ಞೆಯ, ಸಾಧು ಸ್ವಭಾವದ, ಜೀವನದ ಬಗ್ಗೆ ನಿರ್ಲಿಪ್ತತೆ ಹೊಂದಿರುವ, ಜೈನ ಸಮಾಜದಲ್ಲಿ ಗೌರವಾರ್ಹ, ಕೃಷ್ಣಾಪುರದ ಜೈನ ದೇಸಾಯಿ ಕುಟುಂಬದ ಹಿರಿಯ ವ್ಯಕ್ತಿ.

ಅಪ್ಪಾಸಾಹೇಬ (ರಾವ ಸಾಹೇಬ, ದೇಶಭಕ್ತ ಬಿರುದಾಂಕಿತ) – ದೇವೇಂದ್ರಪ್ಪನವರ ತಮ್ಮ, ವ್ಯವಹಾರ ಚತುರ, ಸ್ವಂತ ಏಳಿಗೆಗಾಗಿ ಯುಕ್ತಿ, ಕುಯುಕ್ತಿಗಳನ್ನು ಲಾಭದಾಯಕವಾಗಿ ಉಪಯೋಗಿಸಿಕೊಳ್ಳುವ ಪ್ರವೀಣ. ಈಚೆಗೆ ಆರೋಗ್ಯ ಕ್ಷೀಣಿಸುತ್ತಿದ್ದು ತನ್ನ ಚಟುವಟಿಕೆಗಳಿಗೂ ವಿರಾಮ ದೊರೆತಂತಿದೆ.

ನೇಮಿನಾಥ – ದೇವೇಂದ್ರಪ್ಪನವರ ಮಗ, ಬುದ್ಧಿವಂತ, ಇಂಗ್ಲೆಂಡಿನಲ್ಲಿ ಸ್ನಾತಕೋತ್ತರ ವಿದ್ಯಾಭ್ಯಾಸಕ್ಕೆಂದು ಹೋಗಿ, ಅಲ್ಲಿನವಳನ್ನೇ ಮದುವೆಯಾದ (ಇಂಗ್ಲೆಂಡಿಗೆ ಹೋಗುವುದಕ್ಕೆ ಮೊದಲು ಕುಟುಂಬದ ಹಿರಿಯರು ಅವನಿಗೆ ಲಗ್ನ ಮಾಡಿ ಕಳುಹಿಸಿದ್ದರು. ಆಕೆಗೆ ನೇಮಿನಾಥನ ಮರುವಿವಾಹದ ವಿಷಯ ತಿಳಿದು, ಜೀವನದಲ್ಲಿ ಜಿಗುಪ್ಸೆಗೊಂಡು, ನಿಗ್ರಂಥ ಸ್ವಾಮಿಗಳ ಜೈನ ಸಂಘದಲ್ಲಿ ಆರ್ಯಿಕೆಯಾಗಿ ಸೇರಿಬಿಟ್ಟಳು). ವಿದ್ಯಾಭ್ಯಾಸ ಮುಗಿದ ಮೇಲೆ, ಇಂಗ್ಲೆಂಡಿನ ಒಂದು ವಿಶ್ವವಿದ್ಯಾನಿಲಯದಲ್ಲಿಯೇ ವೃತ್ತಿ ಗಳಿಸಿ, ಈಗ ಕಾಮನ್ ವೆಲ್ತ್ ಸ್ಟಡೀಸ್‌ನಲ್ಲಿ ಪ್ರಾಧ್ಯಾಪಕನಾಗಿ ಸೇವೆ ಸಲ್ಲಿಸುತ್ತಿದ್ದಾನೆ.

ಭರತ – ಅಪ್ಪಾಸಾಹೇಬರ ಸುಕುಮಾರ, ಜೈನಧರ್ಮದ ಬಗ್ಗೆ ತಿರಸ್ಕಾರ, ಭ್ರಷ್ಟಜೈನ ಎಂದು ಬೇಕಾದರೂ ಹೇಳಬಹುದು. ಅವನ ಪ್ರಿಯವಾದ ಹವ್ಯಾಸಗಳೆಂದರೆ ಸ್ತ್ರೀ, ಸಿಗರೇಟು, ಮತ್ತು ಶರಾಬು.

ಆ್ಯಡಂ – ನೇಮಿನಾಥನ ಮತ್ತು ಅವನ ಬಿಳಿ ಹೆಂಡತಿಯ ಮಗ. ಇಂಗ್ಲೆಂಡಿನಲ್ಲಿ ಹುಟ್ಟಿ–ಬೆಳೆದ ಹುಡುಗ, ಈಗ ಭಾರತಕ್ಕೆ ತನ್ನ ಸ್ನೇಹಿತೆ ಆ್ಯನ್ ಜೊತೆ ಬಂದಿದ್ದಾನೆ. ಜೈನಧರ್ಮದ ಬಗ್ಗೆ ಅಷ್ಟು ನಿಷ್ಠೆಯಿಲ್ಲ, ತಾಯಿಯ ಪ್ರಭಾವದಿಂದ ಕ್ರೈಸ್ತಧರ್ಮದಲ್ಲಿ ಹೆಚ್ಚು ಒಲವು, ಪಾಶ್ಚಾತ್ಯ ವಾತಾವರಣದಲ್ಲಿ ಬೆಳೆದಿರುವುದರಿಂದ ಮುಕ್ತ ಮನಸ್ಸು, ಮಾನವತಾವಾದಿ, ಎಲ್ಲರೊಂದಿಗೂ ಸುಲಭವಾಗಿ ಹೊಂದಿಕೊಂಡು ಹೋಗುವ, ಲವಲವಿಕೆಯ, ಸರಳ ಸ್ವಭಾವದ ಯುವಕ. ಅವನೇ ಕಾದಂಬರಿಯಲ್ಲಿ ಒಂದು ಕಡೆ ಹೇಳಿಕೊಂಡಿರುವಂತೆ ಜೀವನದ ರಸ ಉಣ್ಣಬೇಕೆನ್ನುವ ಮನುಷ್ಯ, ಜೀವನದ ಅರ್ಥ ಶೋಧಿಸಬೇಕೆನ್ನುವ ಧೀರ ಗಂಭೀರ ಮನುಷ್ಯನಲ್ಲ.

ಆ್ಯನ್ – ಆ್ಯಡಂ ಮತ್ತು ಆ್ಯನ್ ಇಬ್ಬರೂ ಸೋಶಿಯಲ್ ಆಂಥ್ರಪೋಲಜಿಯಲ್ಲಿ ಡಾಕ್ಟರೇಟ್ ವಿದ್ಯಾರ್ಥಿಗಳು. ಬಿಚ್ಚುಮನಸ್ಸಿನ ಸ್ನೇಹಿತರು. ಆ್ಯನ್‌ಗೆ ಜೈನ ಧರ್ಮದ ಬಗ್ಗೆ ಅತೀವ ಆಸಕ್ತಿ–ಕುತೂಹಲ. ಅದರ ತತ್ವ, ಆಚಾರ, ನಂಬಿಕೆ ಇವುಗಳ ಬಗ್ಗೆ ತನ್ನ ಸಂಶೋಧನೆಗೆ ವಿಷಯ ಸಂಗ್ರಹಿಸುವ ಸಲುವಾಗಿ ತನ್ನ ಮಿತ್ರನಾದ ಆ್ಯಡಂ ಜೊತೆ ಭಾರತಕ್ಕೆ ಬಂದಿದ್ದಾಳೆ. ಜೈನಧರ್ಮದ ಬಗ್ಗೆ ಸಾಕಷ್ಟು ವಿಷಯ ಸಂಗ್ರಹ ಮಾಡಿದ್ದಾಳೆ. ಜೈನರ ಹತ್ತು ಯತಿಧರ್ಮಗಳಾದ ಕ್ಷಮೆ, ಮಾರ್ದವ (ಮೃದು ಸ್ವಭಾವ), ಆರ್ಜವ (ಋಜು ಸ್ವಭಾವ), ನಿರ್ಲೋಭಿತಾ, ತಪ, ಸಂಯಮ, ಸತ್ಯ, ಶೌಚ, ಅಕಿಂಚನತ್ವ, ಬ್ರಹ್ಮಚರ್ಯ ಇವುಗಳ ಬಗ್ಗೆ ಯೋಚಿಸುತ್ತ, ಕೆಲವನ್ನಾದರೂ ಆಚರಿಸಿ, ಅದರ ಸ್ವಂತ ಅನುಭವ ಪಡೆಯಲು ಪ್ರಯತ್ನಿಸುತ್ತಾಳೆ. ಜೈನಧರ್ಮದ ತಾನು ಕಂಡ, ಕೇಳಿದ ಎಲ್ಲ ವಿಷಯಗಳನ್ನೂ ಶ್ರದ್ಧೆಯಿಂದ ಟಿಪ್ಪಣಿ ಮಾಡಿಕೊಳ್ಳುತ್ತಾಳೆ.

ನಿರ್ಮಲ – ಅಪ್ಪಾಸಾಹೇಬರ ಪ್ರೀತಿಯ ಮಗಳು. ವಿವಾಹವಾದ ಕೆಲವೇ ವರ್ಷಗಳಲ್ಲಿ ವಿಧವೆಯಾಗಿ, ಅಪ್ಪನ ಮನೆಯಲ್ಲಿಯೇ ಬಂದಿರುತ್ತಾಳೆ.

ನಿರ್ಮಲಕುಮಾರ – ಜೈನ ತತ್ವಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದಿದ್ದು ಧಾರವಾಡದ ಕಾಲೇಜಿನಲ್ಲಿ ಪ್ರಾಧ್ಯಾಪಕರು. ದೇಸಾಯಿ ಕುಟುಂಬದವರಿಗೆ ಬೇಕಾದವರು. ಆ್ಯನ್ ಇವರ ಮೂಲಕ ಸಾಕಷ್ಟು ಜೈನಧರ್ಮದ ಬಗ್ಗೆ ಚರ್ಚಿಸಿ ವಿಷಯ ಸಂಗ್ರಹಿಸಿದ್ದಾಳೆ.

ರೋಜ – ನಿರ್ಮಲಕುಮಾರರ ಒಬ್ಬಳೇ ಮಗಳು. ಪೊಲಿಟಿಕಲ್ ಸೈನ್ಸ್ ಎಂ.ಎ. ವಿದ್ಯಾರ್ಥಿ. ಮಾರ್ಕ್ಸಿಸ್ಟ್ ತತ್ವಗಳಿಂದ ಪ್ರಭಾವಿತೆ, ಸ್ವತಂತ್ರ ವ್ಯಕ್ತಿತ್ವದ ಆಧುನಿಕ ಯುವ ಮಹಿಳೆ, ಒಂದು ಬಗೆಯ ಬಂಡಾಯದ ಹುಡುಗಿ.

ಹೀಗೆ ಪಾತ್ರಗಳ ವೈವಿಧ್ಯತೆಯಿಂದಲೇ ಓದುಗರ ಕುತೂಹಲ ಕೆರಳಿಸುವುದಲ್ಲದೇ, ಕಾದಂಬರಿಯಲ್ಲಿ ಸೃಷ್ಟಿಸಿರುವ ಸನ್ನಿವೇಶಗಳಿಂದ ಜೈನ ಧರ್ಮದ ತತ್ವ, ಸಿದ್ಧಾಂತ, ಆಚರಣೆ, ಪುಣ್ಯಕ್ಷೇತ್ರ, ನಂಬಿಕೆ ಇವುಗಳ ಬಗ್ಗೆ ಸಾಕಷ್ಟು ಮಾಹಿತಿಗಳು ಸಹ ಓದುಗರಿಗೆ ದೊರಕುವುದು. ಇದರ ಕೆಲವು ಉದಾಹರಣೆಗಳು ಹೀಗಿವೆ:

– ಅಪ್ಪಾಸಾಹೇಬರು ಆಸ್ಪತ್ರೆಯಲ್ಲಿದ್ದಾಗ, ಅವರ ಪತ್ನಿ ಅವರ ಕಿವಿಯಲ್ಲಿ ಜೈನರ ಮಹಾಪವಿತ್ರ ಮಂತ್ರವಾದ ಣಮೋಕಾರ ಮಂತ್ರವನ್ನು ಹೇಳುವುದು.

– ಅಪ್ಪಾಸಾಹೇಬರು ಆಸ್ಪತ್ರೆಯಿಂದ ಗುಣಮುಖರಾಗಿ ಮನೆಗೆ ಹಿಂತಿರುಗಿ ಬಂದದ್ದರಿಂದ, ಹುಮಚದ ಪದ್ಮಾವತಿ ದೇವಿಗೆ ಸೀರೆ, ನತ್ತು ಹರಕೆ ಒಪ್ಪಿಸಲಿಕ್ಕಾಗಿ ಭರತ, ಭರತನ ಹೆಂಡತಿ ಸುನಂದ, ಆ್ಯನ್, ಆ್ಯಡಂ, ಮತ್ತು ರೋಜ ಹುಮಚ ಪ್ರವಾಸ ಮಾಡುವುದು. ಮತ್ತೆ ಹಾಗೆಯೇ ಶ್ರವಣಬೆಳಗೊಳಕ್ಕೆ ಹೋಗಿ ಬಾಹುಬಲಿಯ ದರ್ಶನ ಮಾಡಿಕೊಂಡು, ಅಲ್ಲಿನ ಮಠಾಧಿಪತಿಗಳನ್ನೂ ಭೇಟಿ ಮಾಡಿ ಬರುವುದು.

– ಕೃಷ್ಣಾಪುರದಲ್ಲಿ ಭಟ್ಟಾರಕ ಸ್ವಾಮಿಗಳು, ನಿಗ್ರಂಥ ಸ್ವಾಮಿಗಳು ಮತ್ತು ಅವರ ಶಿಷ್ಯಮಂಡಲ (ಕ್ಷುಲ್ಲಕರು, ಐಲಕರು) ಇವರುಗಳ ಸಮ್ಮುಖದಲ್ಲಿ ಶಾಂತಿಹೋಮ ಆಚರಿಸುವುದು.

– ಜೈನಧರ್ಮದ ಐದು ಮುಖ್ಯ ವ್ರತಗಳಾದ ಸತ್ಯ, ಅಹಿಂಸೆ, ಆಸ್ತೇಯ (do not steal), ಬ್ರಹ್ಮಚರ್ಯ, ಮತ್ತು ಅಪರಿಗ್ರಹ (non-attachment) ಇವುಗಳನ್ನು ಸಾಂದರ್ಭಿಕವಾಗಿ ಸೂಚಿಸಿ, ಅಪ್ಪಾಸಾಹೇಬರು ಈ ವ್ರತಗಳನ್ನು ಒಂದಲ್ಲ ಒಂದು ವಿಧದಲ್ಲಿ ಪಾಲಿಸುತ್ತಿದ್ದೇನೆ ಎಂದು ಭಾವಿಸಿ (ಅಥವಾ ಭ್ರಮಿಸಿ) ಸಮಾಧಾನಪಟ್ಟುಕೊಳ್ಳುವುದು.

– ಆ್ಯನ್ ಪ್ರಾತಃಕಾಲ ಸ್ವಾಧ್ಯಾಯದಲ್ಲಿ ಭಕ್ತಾಮರ ಸ್ತೋತ್ರ ಮತ್ತು ಸಾಮಾಯಿಕದ ಪದ್ಯಗಳನ್ನು ಹೇಳಿಕೊಂಡು ಪಾರ್ಶ್ವನಾಥಸ್ವಾಮಿ ಪೂಜೆ ಮಾಡುವುದು.

– ಆ್ಯನ್ ನಿರ್ಮಲಕುಮಾರರ ಜೊತೆ ಚಿಕ್ಕೋಡಿಯಲ್ಲಿ ಒಂದು ಜೈನ ಸಮಾರಂಭದಲ್ಲಿ ಭಾಗವಹಿಸಿ, ಧರ್ಮಸಾಗರ ಮುನಿಗಳ ಕೇಶಲೋಚನ ಮತ್ತು ಮತ್ತೊಬ್ಬ ಸ್ವಾಮಿಗಳ ನಿಗ್ರಂಥ ದೀಕ್ಷೆ (ಆಚಾರ್ಯಕಲ್ಪ) ವೀಕ್ಷಿಸುವುದು.

– ದೇವೇಂದ್ರಪ್ಪ, ಅವರ ಪತ್ನಿ ಲಕ್ಷ್ಮಿಂಬಾಯಿ, ಆ್ಯನ್, ಆ್ಯಡಂ ಇವರು ಜೈನರ ಪುಣ್ಯ ಕ್ಷೇತ್ರವಾದ ಸಮ್ಮೇದಶಿಖರಕ್ಕೆ ತೀರ್ಥಯಾತ್ರೆ ಹೋಗುವುದು.

– ಲಕ್ಷ್ಮಿಂಬಾಯಿ ಸಮ್ಮೇದಶಿಖರದಲ್ಲಿ ಎರಡು ದಿನ ಅನ್ನ, ನೀರು ಏನನ್ನೂ ಸ್ವೀಕರಿಸದೆ ಮರಣ ಹೊಂದಿದ ಸಂದರ್ಭದಲ್ಲಿ, ಒಂದು ಕಾಲದಲ್ಲಿ ಜೈನಧರ್ಮಿಗಳಲ್ಲಿ ಪ್ರಚಲಿತವಿದ್ದ ಸಲ್ಲೇಖನದ ವಿಷಯ ಪ್ರಸ್ತಾಪಿಸುವುದು.

– ಜೈನ ಮುನಿಗಳ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸುವ ಆಸಕ್ತಿಯಿಂದ ಆ್ಯನ್ ನಿರ್ಮಲಕುಮಾರರನ್ನು ವಿಚಾರಿಸಲು, ಅವರು ಶಾಂತಿಸಾಗರ ಮುನಿಗಳ ಜೀವನಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸುವುದು.

– ಆ್ಯನ್ ಜೈನಧರ್ಮದ ಬಗ್ಗೆ ಮತ್ತಷ್ಟು ಆಳವಾಗಿ ಅಧ್ಯಯನ ಮಾಡಿ, ವಿಷಯ ಸಂಗ್ರಹಿಸುವ ಸಲುವಾಗಿ ಮತ್ತೆ ಶ್ರವಣಬೆಳಗೊಳಕ್ಕೆ ಹೋಗುವುದು. ಅಲ್ಲಿ ಮಠಾಧಿಪತಿಗಳು ಆ್ಯನ್‌ಗೆ ಜೈನ ದೀಕ್ಷೆ ಕೊಟ್ಟು, ಶ್ರಾವಿಕೆಯನ್ನಾಗಿ ಮಾಡಿ, ಬರಲಿರುವ ಮಹಾಮಸ್ತಕಾಭಿಷೇಕದ ಒಂದು ಕಮಿಟಿಯಲ್ಲಿ ಸೇರಿಸಿ, ಗೈಡ್ ಪುಸ್ತಕ, ಜೈನಧರ್ಮದ ಪರಿಚಯ, ಗೋಮಟೇಶ್ವರ ಕತೆ ಇತ್ಯಾದಿ ಪ್ರಕಟಣೆ ಪತ್ರಗಳನ್ನು ಸಿದ್ಧಪಡಿಸುವ ಕಾರ್ಯದಲ್ಲಿ ತೊಡಗಿಸುವುದು.

ಹೀಗೆ ಶಾಂತಿನಾಥ ದೇಸಾಯಿ ಅವರು ಕಾದಂಬರಿಯ ಉದ್ದಕ್ಕೂ ಜೈನ ಧರ್ಮದ ವಿವಿಧನೋಟಗಳನ್ನು ಓದುಗರಿಗೆ ಉಣಬಡಿಸಿದ್ದಾರೆ. ಶಂಕರ ಮ. ಪಾಟೀಲರು ಮೊದಲ ಮಾತಿನಲ್ಲಿ ಹೇಳಿರುವಂತೆ 'ತಾತ್ವಿಕ ಗ್ರಂಥಗಳು, ಪ್ರಚಾರಕಿ ಸಾಹಿತ್ಯ, ಪಾಶ್ಚಿಮಾತ್ಯ ವಿದ್ವಾಂಸರ ವಿವೇಚನಾತ್ಮಕ ಗ್ರಂಥಗಳು ಇವನ್ನೆಲ್ಲ ಓದಿಯೂ ಅವಗತವಾಗದೆ ಇರಬಹುದಾದಂತಹ ಜೈನ ಮತ, ತತ್ವಜ್ಞಾನ, ಆಚರಣೆ, ಸಮಾಜದ ವಾಸ್ತವತೆಯ ತಿಳುವಳಿಕೆ, ಈ ಕಾದಂಬರಿಯಿಂದ ದೊರೆಯಬಹುದು ಎಂದರೆ ಉತ್ಪ್ರೇಕ್ಷೆಯಾಗಲಾರದು. ಜೈನರಿಗೂ ತಮ್ಮನ್ನು ತಾವು ಅರಿತುಕೊಳ್ಳುವಂತೆ ಮಾಡುವ ಕೃತಿಯಿದು.'

ಇನ್ನು ಮುಂದೆ ಸಾಮಾಜಿಕ ಮತ್ತು ವೈಯಕ್ತಿಕ ದೃಷ್ಟಿಯಿಂದ ಕಾದಂಬರಿಯಲ್ಲಿ ಬರುವ ಸನ್ನಿವೇಶಗಳು ಮತ್ತು ಆಧುನಿಕ ಪರಿಸರದಲ್ಲಿ ಪುರಾತನ ಧರ್ಮದ ತತ್ವ ಮತ್ತು ಆಚರಣೆಗಳಲ್ಲಿ ಕಾಣುವ ಪ್ರತಿಕೂಲಗಳನ್ನು ಪರಿಶೀಲಿಸೋಣ.

ಆ್ಯಡಂ ಮತ್ತು ಆ್ಯನ್ ಇಂಗ್ಲೆಂಡಿನ ವಾತಾವರಣದಲ್ಲಿ ಬೆಳೆದ ಬಿಚ್ಚುಮನಸ್ಸಿನ ಸ್ನೇಹಿತರು. ಒಬ್ಬರನ್ನೊಬ್ಬರು ಗೌರವಿಸುತ್ತಾರೆ, ಟೀಕಿಸುತ್ತಾರೆ, ಗೇಲಿ ಮಾಡುತ್ತಾರೆ, ಯಾವುದೇ ವಿಷಯವಾಗಲಿ ಸಂಕೋಚವಿಲ್ಲದೆ ವಿಚಾರಮಾಡುತ್ತಾರೆ, ಇಬ್ಬರಿಗೂ ಬೇಕೆನಿಸಿದರೆ ಜೊತೆಯಲ್ಲಿ ಮಲಗುತ್ತಾರೆ. ನಿರ್ಮಲಕುಮಾರರನ್ನು ಮೊದಲ ಸಲ ಭೇಟಿಯಾಗಲು ಅವರ ಮನೆಗೆ ಹೋದಾಗ, ಆ್ಯಡಂ ಮತ್ತು ಆ್ಯನ್‌ರನ್ನು ಸ್ವಾಗತಿಸುವುದು ಚುರುಕು ಮಾತಿನ, ಆಕರ್ಷಕ ಯುವತಿ ರೋಜಾ. ರೋಜಾಳ ಸುಂದರ ಮೈಮಾಟ, ಲವಲವಿಕೆಯ ವ್ಯಕ್ತಿತ್ವ, ಚುರುಕಿನ ಮಾತುಗಳು ಆ್ಯಡಂನನ್ನು ಬಹುವಾಗಿ ಆಕರ್ಷಿಸಿ ಅವಳ ಬಗ್ಗೆ ವಿಶೇಷ ಆಸಕ್ತಿಯನ್ನು ತೋರತೊಡಗಿದನು. ರೋಜಾ ಕೂಡ ಆ್ಯಡಂ ಜೊತೆ ಸ್ನೇಹದಿಂದ ವರ್ತಿಸಿ ಒಂದು ವಿಧವಾಗಿ ಅವನಲ್ಲಿ ಆಕರ್ಷಿತಳಾಗುತ್ತಾಳೆ. ರೋಜಾ ಆ್ಯಡಂ ಜೊತೆ ಮಾತನಾಡುವಾಗ ಹೀಗೆ ಹೇಳುತ್ತಾಳೆ: '...ನಿನ್ನ ಜೊತೆ ಮಾತಾಡೋ ಮುಂದೆ ಒಂದು ವಿಚಿತ್ರ ಸ್ವಾತಂತ್ರ್ಯದ ಅನುಭವ ಆಗ್ತದೆ... ಇಷ್ಟು ಮುಕ್ತ ರೀತಿಯಲ್ಲಿ ನಾ ಯಾರೊಡನೆಯೂ ಮಾತಾಡಿಲ್ಲ...' ಇದಕ್ಕೆ ಆ್ಯಡಂ ರೋಜಾಳಿಗೆ ಹೇಳುವ ಮಾತುಗಳು: '...ನನಗೆ ನಿನ್ನ ಕೂಡ ಮಾತಾಡ್ತಾ ಕೂಡ್ರಬೇಕಂತ ಅನಿಸ್ತದೆ... ಆ್ಯನ್ ಜತೆ ಕೂಡ, ಆದರೆ ನಿನ್ನ ಜೊತೆಯಲ್ಲಿ ಒಂದು ರೀತಿ ಮಾದಕತೆ ಏರ್ತದೆ... ಅವಳ ಜೊತೆ, ಬರೇ ಬೌದ್ಧಿಕ ಮಾತೇ ಆಗ್ತವೆ... ಅವಳಲ್ಲಿ ಒಂದು ನಿರ್ಲಿಪ್ತತೆ ಇದೆ... ಅವಳಿಗೆ ಸಿಟ್ಟು-ಕೆಚ್ಚು ಇಲ್ಲವೇ ಇಲ್ಲ... ನಿನ್ನಲ್ಲಿ ಪ್ಯಾಶನ್ ಇದೆ... ರೊಚ್ಚಿದೆ... ಸ್ಪಿರಿಟ್ ಇದೆ. ಅವಳು ದೇವರ ಮುಂದೆ ದೀಪದಂತೆ ಉರೀತಾಳೆ. ನೀನು ಬೆಂಕಿ ಬಿದ್ದ ಮನೆಯ ಉರಿಯಂತೆ ಉರೀತಿ...' ರೋಜಾಳ ತಂದೆ ನಿರ್ಮಲಕುಮಾರರಂತೂ ಇವರಿಬ್ಬರ ಸ್ನೇಹದಿಂದ ಉತ್ತೇಜಿತರಾಗಿ, ರೋಜಾ ಮತ್ತು ಆ್ಯಡಂರ ವಿವಾಹ ಸಾಧ್ಯತೆ ಬಗ್ಗೆ ಕನಸಿನ ಗೋಪುರಗಳನ್ನು ಕಟ್ಟತೊಡಗುತ್ತಾರೆ. ಆದರೆ ಯಾವ ತತ್ವಕ್ಕೂ ಬದ್ಧನಾಗದ, ಮಾನವತಾವಾದಿಯಾದ ಆ್ಯಡಂಗೂ, ಮಾರ್ಕ್ಸಿಸ್ಟ್ ತತ್ವಕ್ಕೆ ಬದ್ಧಳಾದ ರೋಜಾಳಿಗೂ ತಾತ್ವಿಕ ಹೊಂದಾಣಿಕೆ ಕಾಣದೆ, ಇಬ್ಬರೂ ಸ್ನೇಹಿತರಾಗಿ ಮಾತ್ರ ಮುಂದುವರಿಯಲು ತೀರ್ಮಾನಿಸುತ್ತಾರೆ.

ಆ್ಯನ್ ತುಂಬಾ ಶ್ರದ್ಧೆಯಿಂದ ಜೈನಧರ್ಮದ ತತ್ವ, ಆಚರಣೆ, ಸಂಪ್ರದಾಯ ಇವುಗಳ ಅವಲೋಕನ ಮಾಡಿ, ಸಾಧ್ಯವಾದಷ್ಟು ತಾನೇ ಸ್ವಂತವಾಗಿ ಪಾಲಿಸಲು ಬದ್ಧಳಾಗಿ, ಒಂದು ಕಾಲಕ್ಕೆ ಊರ್ಜಿತಾವಸ್ಥೆಯಲ್ಲಿದ್ದ ಈ ಧರ್ಮದ ವಿಶೇಷ ಗುಣಗಳನ್ನು ಕಂಡುಕೊಳ್ಳುವಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ಇದೇ ಉದ್ದಿಶ್ಯದಿಂದ ಶ್ರವಣಬೆಳಗೊಳದಲ್ಲಿ ಜೈನದೀಕ್ಷೆ ಸ್ವೀಕರಿಸಿ, ಜೈನಸಮಾಜದ ಮಧ್ಯೆ ವಾಸ ಮಾಡಿ, ಸ್ವಂತ ಅನುಭವದ ವಸ್ತುನಿಷ್ಠ ಪ್ರಯೋಗ ಕೈಗೊಳ್ಳುತ್ತಾಳೆ. ಈ ಪ್ರಯತ್ನದಿಂದ ಅವಳು ಕಂಡುಕೊಂಡ ಸತ್ಯವೆಂದರೆ, ಇಂದಿನ ಜೈನಧರ್ಮ ತನ್ನ ಸ್ವಂತಿಕೆಯನ್ನು ಕಳೆದುಕೊಂಡು, ಅವನತಿಯ ಹಾದಿಯಲ್ಲಿರುವ ಕಾರಣಗಳು:

– ಇಂದಿನ ಜೈನರಿಗೆ ಸಮಾಜ ಪ್ರಜ್ಞೆಯ ಅರಿವು ಮಾತ್ರ ಇದೆ. ತಾತ್ವಿಕವಾಗಿ ಅಜ್ಞಾನಿಗಳು

– ತೀರ್ಥಂಕರರನ್ನು ದೇವತ್ವಕ್ಕೇರಿಸಿದ್ದಾರೆ

– ಅಂಧಶ್ರದ್ಧೆ, ಅಂಧಭಕ್ತಿಯೇ ಹೆಚ್ಚು

ಆ್ಯನ್ ತನ್ನನ್ನು ಸ್ವಾಯತ್ತ ಜೈನ, ಜೈನಧರ್ಮವನ್ನು ಪ್ರಶ್ನಿಸುವ, ಪರೀಕ್ಷಿಸುವ ಜೈನ ಎಂದು ಹೇಳಿಕೊಳ್ಳುತ್ತಾಳೆ. ಶ್ರವಣಬೆಳಗೊಳದ ಸಾಂಘಿಕ ಜೀವನದ ಅನುಭವ, ಆ್ಯನ್‌ಳ ಪಾಲಿಗೆ ಭ್ರಮನಿರಸನದಿಂದ ಅಂತ್ಯಗೊಳ್ಳುತ್ತದೆ. ತನ್ನಂಥ ಸ್ವಾತಂತ್ರ್ಯಪ್ರಿಯ, ವ್ಯಕ್ತಿನಿಷ್ಠ ಜನರು ಸಾಂಘಿಕ ಜೀವನಕ್ಕೆ ನಿರುಪಯೋಗಿ ಎಂದು ಅಭಿಪ್ರಾಯಪಟ್ಟು, ಮಹಾಮಸ್ತಕಾಭಿಷೇಕ ಮುಗಿದ ನಂತರ ಆ್ಯಡಂ ಜೊತೆ ಇಂಗ್ಲೆಂಡಿಗೆ ಹೋಗಲು ನಿರ್ಧರಿಸುತ್ತಾಳೆ.

ಇತ್ತ ಶ್ರವಣಬೆಳಗೊಳದಲ್ಲಿ ಮಹಾಮಸ್ತಕಾಭಿಷೇಕದ ಸಿದ್ಧತೆ ಭರದಿಂದ ಸಾಗಿತ್ತು. ಧಾರ್ಮಿಕ ಆಚರಣೆಗಿಂತ, ಇದೊಂದು ಸಮಾಜದ ಐಡೆಂಟಿಟಿ ಪ್ರದರ್ಶನ, ಭಾರತೀಯ ಮಹಾಜಾತ್ರೆ ಎನ್ನುತ್ತಾಳೆ ಆ್ಯನ್. ಇನ್ನೂ ಕೆಲವು ಪ್ರತಿಗಾಮಿ ಗುಂಪುಗಳು ಈ ಮಹಾಮಸ್ತಕಾಭಿಷೇಕಕ್ಕೆ ವ್ಯಯವಾಗುತ್ತಿರುವ ಅಪಾರ ಹಣ, ಜೈನ ಶ್ರೀಮಂತರ ಆಡಂಬರ ಪ್ರದರ್ಶನ ಎಂದು ಪ್ರತಿಭಟಿಸಿ, ಇದೇ ಹಣವನ್ನು ಬಡಬಗ್ಗರ ಉದ್ಧಾರಕ್ಕೆ ಖರ್ಚುಮಾಡಬೇಕೆಂದು ಗುಲ್ಲೆಬ್ಬಿಸುತ್ತಿದ್ದಾರೆ.

ಭರತನಂತಹವರ ದೃಷ್ಟಿಯಲ್ಲಿ '...ಇಂದಿನ ಜೈನಧರ್ಮ ತೀರ ನೆಗೆಟಿವ್ ಧರ್ಮ, ಮೃತ್ಯುವಿನ ಕಡೆಗೆ ಒಯ್ಯುವ ಧರ್ಮ– ಎಲ್ಲ ತ್ಯಾಗ ಮಾಡ್ತಾ, ಕೊನೆಗೆ ಸಲ್ಲೇಖನವೆಂಬ ಆತ್ಮಹತ್ಯೆ ಮಾಡಿಕೊಳ್ಳುವ ಧರ್ಮ...'

ಆ್ಯಡಂಗೆ, ನಿರ್ಮಲ ನೆಚ್ಚಿನ ಆಂಟಿ. ಅವಳ ಸದ್ಯದ ಸ್ಥಿತಿಯ ಬಗ್ಗೆ ತುಂಬಾ ಅನುಕಂಪ. ಅವಳು ಕಾಲೇಜು ವಿದ್ಯಾಭ್ಯಾಸವನ್ನು ಮುಂದುವರಿಸಿ, ನಂತರ ಸಾಧ್ಯವಾದರೆ ಮರುವಿವಾಹ ಮಾಡಿಕೊಳ್ಳಬೇಕೆಂಬುದು ಅವನ ಬಯಕೆ. ಜೈನ ಸಂಪ್ರದಾಯದಲ್ಲಿ ಮರುವಿವಾಹ ನಿಷಿದ್ಧ ಎಂಬ ನಂಬಿಕೆ ಇದ್ದರೂ, ಇಂದಿನ ಸನ್ನಿವೇಶದಲ್ಲಿ ಅದರಲ್ಲಿ ತಪ್ಪೇನೂ ಇಲ್ಲ ಎಂದು ವಾದಿಸಿ, ಮಾನವತಾವಾದಿಯಾದ ಆ್ಯಡಂ, ನಿರ್ಮಲೆಯ ಮನಸ್ಸಿನಲ್ಲಿ ಒಂದು ಆಶಾಕಿರಣವನ್ನು ಬೆಳಗಿಸುತ್ತಾನೆ.

ಹೀಗೆ ಜೈನ ತತ್ವ, ಆಚರಣೆ, ಅವುಗಳ ವೈಚಾರಿಕ ಪರಿಶೀಲನೆ, ಆಧುನಿಕ ದೃಷ್ಟಿಕೋನ ಇವುಗಳು ಕಾದಂಬರಿ ಉದ್ದಕ್ಕೂ ಹಾಸುಹೊಕ್ಕು, ಅವುಗಳಿಗೆ ತಕ್ಕ ಪಾತ್ರಗಳನ್ನು ಹೊಂದಿಸಿ, ಒಂದು ಕುತೂಹಲಕಾರಿ, ವಿಚಾರಶೀಲ ಕೃತಿಯನ್ನು ಶಾಂತಿನಾಥ ದೇಸಾಯಿ ಅವರು ನಮಗೆ ಉಣಬಡಿಸಿದ್ದಾರೆ.

## ಮುಕ್ತಾಯ

ಶಾಂತಿನಾಥ ದೇಸಾಯಿ ಅವರ ವ್ಯಕ್ತಿಚಿತ್ರ ಮತ್ತು ಅವರ ಶ್ರೇಷ್ಠ ಕಾದಂಬರಿ ಓಂ ಣಮೋ ಓದುಗರಿಗೆ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ಈ ಲೇಖನವನ್ನು ರಚಿಸಲಾಗಿದೆ. ಈ ಉದ್ದೇಶ ಎಷ್ಟರಮಟ್ಟಿಗೆ ಸಫಲವಾಗಿದೆ ಎಂಬುದನ್ನು ಪ್ರಿಯ ಓದುಗರಾದ ನೀವೇ ಹೇಳಬೇಕು. ಇದನ್ನು ಓದಿದ ಕೆಲವರಲ್ಲಾದರೂ ಶಾಂತಿನಾಥ ದೇಸಾಯಿ ಮತ್ತು ಅವರ ಕೃತಿಗಳ ಬಗ್ಗೆ ಆಸಕ್ತಿಯನ್ನು ಕೆರಳಿಸಿದರೆ, ಈ ಲೇಖನದ ಪ್ರಯತ್ನ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಜೈನಧರ್ಮದ ಮಹಾಪವಿತ್ರವಾದ ಮಂತ್ರವೆಂದು ಪರಿಗಣಿಸಲಾದ ಣಮೋಕಾರ ಮಂತ್ರದೊಂದಿಗೆ ಈ ಲೇಖನವನ್ನು ಮುಗಿಸುತ್ತೇನೆ:

ಓಂ ಣಮೋ ಅರಿಹಂತಾಣಂ
ಣಮೋ ಸಿದ್ಧಾಣಂ
ಣಮೋ ಆಇರಿಯಾಣಂ
ಣಮೋ ಊವಜ್ಞಾಯಾಣಂ
ಣಮೋ ಲೋಎ ಸವ್ವ ಸಾಹೂಣಂ

## ಕೃತಜ್ಞತೆ

ಈ ಒಂದು ಕಿರುಲೇಖನವನ್ನು ಬರೆಯಲು ಅವಕಾಶ ಮಾಡಿಕೊಟ್ಟ ಕನ್ನಡ ಸಾಹಿತ್ಯ ರಂಗದ ಸಂಪಾದಕ ಸಮಿತಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಈ ಲೇಖನವನ್ನು ತಯಾರಿಸುವ ಕಾರ್ಯದಲ್ಲಿ ಸಂಪೂರ್ಣ ಬೆಂಬಲ, ಪ್ರೋತ್ಸಾಹ ನೀಡಿ ಸಹಕರಿಸಿದ ನನ್ನ ಸಹಧರ್ಮಿಣಿ ಶಂಕರಿಯನ್ನು ಇಲ್ಲಿ ನೆನೆಯಲು ಇಚ್ಛಿಸುತ್ತೇನೆ.

**ಕೃತಿ ವಿವರ:** ಓಂಣಮೋ, ಶಾಂತಿನಾಥ ದೇಸಾಯಿ, ಎಸ್. ಬಿ. ಎಸ್. ಪಬ್ಲಿಶರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ೧೯೮೮, ಪು. ೨೭೦

## ಗ್ರಂಥಋಣ

ಶಾಂತಿನಾಥ ದೇಸಾಯಿ ಅವರ ಸಾಹಿತ್ಯ–ಒಂದು ಅಧ್ಯಯನ, ಕೆ. ಎನ್. ಗಂಗಾ ನಾಯಕ್, ಮೈಸೂರು ವಿಶ್ವವಿದ್ಯಾನಿಲಯದ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸಿದ ನಿಬಂಧ, ೧೯೯೩.

## ದೇವನೂರ ಮಹಾದೇವ ಅವರ 'ಕುಸುಮಬಾಲೆ'

–ಅಲಮೇಲು ಅಯ್ಯಂಗಾರ್, ಸಾರಟೋಗ, ಕ್ಯಾಲಿಫೋರ್ನಿಯಾ

ಕನ್ನಡ ಸಾಹಿತ್ಯ ಪ್ರಕಾರದಲ್ಲಿ ಕಾದಂಬರಿ ಪ್ರಕಾರ ಅತ್ಯಂತ ಜನಪ್ರಿಯವಾದದ್ದು. ಅಲ್ಲಿಯವರೆಗೂ ಬರೀ ಶಿಷ್ಟವರ್ಗದ ಸ್ವತ್ತಾಗಿದ್ದ ಸಾಹಿತ್ಯ ಪ್ರಪಂಚ ಶ್ರೀಸಾಮಾನ್ಯರಿಗೂ ಎಟಕುವಂತೆ ಆಗಿದ್ದು ಕಥೆ ಮತ್ತು ಕಾದಂಬರಿಗಳು ಸಾಹಿತ್ಯವಲಯವನ್ನು ಪ್ರವೇಶಿಸಿದಾಗ. ಬರಹಗಾರರು ತಮ್ಮ ಸುತ್ತಲ ಜಗತ್ತಿನ ಬದುಕಿನ ಆಗುಹೋಗುಗಳನ್ನು ಸುಲಭವಾಗಿ ಅರ್ಥವಾಗುವ, ತಾವು ಪ್ರತಿದಿನ ಆಡುವ ತಿಳಿಗನ್ನಡದಲ್ಲಿ ನಿರೂಪಿಸತೊಡಗಿದಾಗ ಆ ಶೈಲಿ ಬಹು ಜನಪ್ರಿಯವಾಗಿ ಕಾದಂಬರಿಕಾರರು ಜನಪ್ರಿಯರಾಗತೊಡಗಿದರು. ನವೋದಯ ಕಾಲದಲ್ಲಿ ವಾಸ್ತವಮಾರ್ಗದಲ್ಲಿದ್ದ ಕನ್ನಡ ಕಾದಂಬರಿಗಳು ಅರವತ್ತರ ದಶಕದಲ್ಲಿ ಪಾಶ್ಚಾತ್ಯ ಪ್ರಭಾವದಿಂದ ನವ್ಯಮಾರ್ಗವನ್ನು ಅನುಸರಿಸತೊಡಗಿದವು. ಮನುಷ್ಯನ ವ್ಯಕ್ತಿತ್ವದ ಸಂಕೀರ್ಣತೆಯ ಚಿತ್ರಣ ಪ್ರಧಾನವಾಗಿ, ಬದುಕಿನ ವೈಪರೀತ್ಯಗಳ ಮನೋವೈಜ್ಞಾನಿಕ ವಿಶ್ಲೇಷಣೆ ನವ್ಯ ಕಾದಂಬರಿಗಳ ಗುರಿಯಾಯಿತು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಎಂಬತ್ತರ ದಶಕವನ್ನು ದಲಿತ ಬಂಡಾಯ ಸಾಹಿತ್ಯದ ಯುಗ ಎಂದು ಗುರುತಿಸಬಹುದಾಗಿದೆ.

ದೇವನೂರರು ದಲಿತ, ಬಂಡಾಯ ಸಾಹಿತ್ಯದ ನೇತಾರರು. ಅವರ 'ಕುಸುಮಬಾಲೆ' ಕನ್ನಡ ಕಾದಂಬರಿ ಪ್ರಕಾರದಲ್ಲಿ ಒಂದು ಹೊಸ ಕ್ರಾಂತಿಯನ್ನು ಸೃಷ್ಟಿಸಿದಂಥ ಕೃತಿ. ಕುಸುಮಬಾಲೆ ಹಲವಾರು ಕಾರಣಗಳಿಂದ ಒಂದು ವಿಶಿಷ್ಟ ಕೃತಿಯಾಗಿದೆ. ಹೊಸಗನ್ನಡ ಸಾಹಿತ್ಯದಲ್ಲಿ ಒಂದು ನವೀನ ಅಲೆಯನ್ನೆಬ್ಬಿಸಿದ ಈ ಕೃತಿಯನ್ನು ಕೇವಲ ಒಂದು ಕಾದಂಬರಿ ಎಂದು ಕರೆದಲ್ಲಿ ಅಪಚಾರವಾದೀತು. ಇಲ್ಲಿ ಕಥೆ ಕೇವಲ ಕಥೆಯ ನೆಲೆಯಲ್ಲೇ ಉಳಿಯದೆ ಒಂದು ಬುಡಕಟ್ಟಿನ ಜನಾಂಗದ ಬದುಕಿನ ಮನೋವೈಜ್ಞಾನಿಕ ವಿಶ್ಲೇಷಣೆ ಜಾನಪದೀಯ ಕಾವ್ಯವಾಗಿ ಬಿಚ್ಚಿಕೊಂಡಿದೆ. ಮೊದಲ ಓದಿಗೆ ದಕ್ಕದಂತಿರುವ ಕುಸುಮಬಾಲೆಯ ಭಾಷಾಶೈಲಿ ಓದಿಓದಿದಂತೆ ಅದರ ಲಯ ಒಗ್ಗಿ, ಒಳ್ಳೆಯ

ಪುಂಗಿಯಂತೆ ನಮ್ಮ ಮನಸ್ಸನ್ನು ಹಿಡಿದಿಟ್ಟುಕೊಳ್ಳುತ್ತದೆ. ಕೆಲವು ಉತ್ತಮ ಕವನದ ಸಾಲುಗಳನ್ನು ಹೇಗೆ ಮತ್ತೆ ಮತ್ತೆ ಓದಿ ಮೆಲುಕು ಹಾಕಬೇಕೆನಿಸುವುದೋ ಹಾಗೆ ಇಲ್ಲಿನ ಭಾಷೆ, ಕೆಲವು ಪ್ರತಿಮೆಗಳು, ಅವನ್ನು ಕಥೆಗಾರರು ಬಳಸಿರುವ ರೀತಿ ನಮ್ಮಿಂದ ಮತ್ತೆ ಮತ್ತೆ ಓದಿಸಿಕೊಳ್ಳುತ್ತವೆ. ಅನೇಕ ನವ್ಯ ಕಾದಂಬರಿಗಳಂತೆ ಇಲ್ಲಿನ ಕಥಾವಸ್ತುವೂ ದಲಿತ ಸಮಾಜವೊಂದರ ದಾರುಣ ಬದುಕಿನ ಚಿತ್ರಣವೇ ಆಗಿದ್ದರೂ, ಆ ಶೋಷಣೆಯೇ ಕೇಂದ್ರಬಿಂದುವಾಗಿ, ಅದನ್ನು ಪ್ರತಿಭಟಿಸುವ ಏಕಮಾತ್ರ ಗುರಿಯಿಂದ ಬರೆದ ಪ್ರಚಾರಪುಸ್ತಕವಾಗಿಲ್ಲ. ಅದು ಕಥೆಯ ಒಂದು ಅವಿಭಾಜ್ಯ ಅಂಗ ಮಾತ್ರವಾಗಿ, ಶೈಲಿ ಮತ್ತು ತಂತ್ರನಾವೀನ್ಯತೆ ಮುಖ್ಯವಾಗಿ, ದಲಿತ ಬದುಕಿನ ಹಿನ್ನೆಲೆಯಲ್ಲಿ ಆ ಸಮುದಾಯದ ಜೀವನದ ಸಹಜ ಚಿತ್ರಣ ಬಿಚ್ಚಿಕೊಂಡಿದೆ. ವಸ್ತು ಮತ್ತು ಶೈಲಿಗಳ ಐಕ್ಯತೆಯನ್ನು ಇಷ್ಟು ಸಮರ್ಥವಾಗಿ ಸಾಧಿಸಿರುವ ಮಹಾದೇವರ ಕ್ರಿಯಾಶೀಲತೆ ಅದ್ಭುತವಾದದ್ದು.

ಈ ಕಾರಣದಿಂದಲೇ ಕುಸುಮಬಾಲೆಯನ್ನು ಒಂದು ಜಾನಪದ ಮಹಾಕಾವ್ಯ ಎಂದು ವಿಮರ್ಶಕರು ಗುರುತಿಸುವುದು. ಸಂಭಾಷಣೆಯಲ್ಲಿ ಹೆಚ್ಚು ತೊಡಗಿಕೊಳ್ಳದ ಪಾತ್ರಗಳ ಸ್ವಗತಲಹರಿಯಲ್ಲೇ ಕಥೆ ಮುಂದುವರಿಯುವುದು ಇಲ್ಲಿನ ಮತ್ತೊಂದು ನಾವೀನ್ಯ. ಪ್ರಸಕ್ತ ಮತ್ತು ಭೂತ ಘಟನೆಗಳ ನಡುವೆ ಜೋಕಾಲಿಯಾಡುತ್ತದೆ ಕಥೆ. ಕಾದಂಬರಿಯ ಭಾಷೆ ನವ್ಯಸಾಹಿತ್ಯ ಪ್ರಕಾರಕ್ಕೂ ನವ್ಯವಾದದ್ದು. ಕೃತಿಯ ಭಾಷೆ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶದ, ಒಂದು ನಿರ್ದಿಷ್ಟ ಜನಸಮುದಾಯದ ಭಾಷೆಯಾಗಿದೆ. ಅದರ ಔಚಿತ್ಯದ ಬಗ್ಗೆ ವಿಮರ್ಶಕರ ನಡುವೆ ಅನೇಕ ವಾದವಿವಾದಗಳು ನಡೆದಿವೆ. ಇಲ್ಲಿರುವುದು ಚಾಮರಾಜನಗರದ ಸುತ್ತುಮುತ್ತಲಿನ ಹಳ್ಳಿಗಳ ದಲಿತರ ಆಡುಭಾಷೆ. ಕೃತಿಯ ಭಾಷೆಯನ್ನು ಒಂದು ಭೌಗೋಳಿಕ ಪ್ರದೇಶಕ್ಕೆ ಸೀಮಿತಗೊಳಿಸಿ ಆ ಬುಡಕಟ್ಟಿನ ಜನಾಂಗದ ರೀತಿರಿವಾಜುಗಳನ್ನು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಶಾಶ್ವತವಾಗಿ ಕಡೆದು ನಿಲ್ಲಿಸಿದ್ದಾರೆ. ತಾವು ಬೆಳೆದ ಮತ್ತು ತಮ್ಮ ಮನಸ್ಸಿಗೆ ಅತ್ಯಂತ ಪ್ರಿಯವಾದ, ಆತ್ಮೀಯವಾದ ಪರಿಸರ, ಅದರ ಸಂಸ್ಕೃತಿ, ಆ ಸಮುದಾಯದ ಸಹಜ ಬದುಕಿನ ನೈಜ ಚಿತ್ರಣವನ್ನು ಕನ್ನಡ ಜನಾಂಗಕ್ಕೆ ಪರಿಚಯಿಸುವ ಆಶಯ ದೇವನೂರರದಾಗಿದ್ದರೆ ಅವರು ಅದರಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿನ ಭಾಷೆಯ ಬನಿ ಲಯಬದ್ಧವಾದ ಗದ್ಯ ಪದ್ಯಗಳ ಹಿತವಾದ ಮಿಶ್ರಣವಾಗಿ, ಒಳ್ಳೆಯ ಕಾವ್ಯವೊಂದನ್ನು ಓದಿದ ಅನುಭವ ನೀಡುತ್ತದೆ. ಕುಸುಮಬಾಲೆಯ ಮೊದಲ ಆವೃತ್ತಿ ೧೯೮೮ರಲ್ಲಿ ಮುದ್ರಿತವಾಗಿದ್ದು ಇಲ್ಲಿನವರೆಗೆ ೮ ಮುದ್ರಣಗಳು ಹೊರಬಂದಿರುವುದು ಕೃತಿಯ ಜನಪ್ರಿಯತೆಗೆ ಕುರುಹಾಗಿದೆ. ೨೦೦೮ರಲ್ಲಿ ಬಂದ ಆವೃತ್ತಿಯನ್ನು ಲಯಾಕಾರ ವಿನ್ಯಾಸದಲ್ಲಿ ಕಡೆದಿಟ್ಟಿರುವ ಎಲ್. ಬಸವರಾಜು ಅವರು ಕುಸುಮಬಾಲೆಯನ್ನು 'ಅಭಿನವ ಜಾನಪದ ಕಾವ್ಯ', 'ಮಹಾಕಾವ್ಯ' ಎಂದು ಕರೆದಿದ್ದಾರೆ.

ತಾವು ಈ ಕಾದಂಬರಿಯನ್ನು ಬರೆಯಲು ಪ್ರೇರೇಪಿಸಿದ ಸಂಗತಿಗಳ ಬಗ್ಗೆ ಮಹಾದೇವ ಅವರು ಹೀಗೆ ಹೇಳಿದ್ದಾರೆ: 'ಕುಸುಮಬಾಲೆಯನ್ನು ಬರೆಯಲು ನನ್ನನ್ನು ಪ್ರೇರೇಪಿಸಿದ್ದು ಈ ಮೂರು– ಮೊದಲನೆಯದು ನಾನಿನ್ನೂ ಹುಡುಗನಾಗಿದ್ದಾಗ ಸಾವಿನ ಕಡೆಗೆ ನಡೆದು ಹೋಗುತ್ತಿದ್ದವರನ್ನು ಉಳಿಸಲು ಆಚರಿಸುವ ನೇಮ ಒಂದರ ಬಗ್ಗೆ ಕೇಳಿದ್ದೆ. ದೇಹಕ್ಕೆ ದೆವ್ವ ಬಡಿದಿದೆ ಎಂಬೊಂದು ನಂಬಿಕೆ. ಆ ದೆವ್ವವನ್ನು ಓಡಿಸಲು ಕುಟುಂಬ ಒಂದು ದೊಡ್ಡ ಔತಣವನ್ನು ಆ ವ್ಯಕ್ತಿಗೆ ಗೊತ್ತಿಲ್ಲದಂತೆ ಸಿದ್ಧಪಡಿಸಿ, ಆ ವ್ಯಕ್ತಿಯನ್ನು ಒಂಟಿಯಾಗಿ ಆ ಅನಿರೀಕ್ಷಿತ ಔತಣದ ಮುಂದೆ ಕುಳ್ಳಿರಿಸಿ ಮನೆಬಿಟ್ಟು ಹೊರಗೆ ಹೋಗುತ್ತದೆ. ಆಗ ದೆವ್ವಕ್ಕೆ ಎಷ್ಟು ಆಘಾತವಾಗುತ್ತದೆ ಯೆಂದರೆ ಅದು ದೇಹವನ್ನು ಬಿಟ್ಟು ಓಡಿಹೋಗುತ್ತದೆ. ಈ ನೇಮದ ಕಥೆ ನನ್ನನ್ನು ಬಹಳ ವರ್ಷಗಳ ಕಾಲ ಕಾಡಿತು. ಇದು ನನಗೆ ಬಡತನವನ್ನು ಅರ್ಥಮಾಡಿಸಿತು. ಜಾನಪದ ಆಚರಣೆ ನಮ್ಮ ಜನ ತಮ್ಮ ಅರಿವಿನ ಮೂಲಕ ರೂಢಿಸಿಕೊಂಡ ಒಂದು ರೀತಿಯ ಮನೋಚಿಕಿತ್ಸೆ. ನಾನೆಂದೂ ಈ ಆಚರಣೆಯನ್ನು ಕಣ್ಣಾರೆ ನೋಡಿಲ್ಲ. ಆದರೆ ನನ್ನ ಕಾದಂಬರಿಯಲ್ಲಿ ಈ ಆಚರಣೆಯನ್ನು ವಿವರಿಸುವ ಪುಟಗಳು ನನ್ನ ಅತ್ಯುತ್ತಮ ಬರವಣಿಗೆ ಎಂದು ನಾನು ಭಾವಿಸಿದ್ದೇನೆ.

ಇನ್ನೊಂದು ಕೂಡ ಒಂದು ಜಾನಪದ ಕಥೆಯೇ, ಜೋತಮ್ಮಗಳನ್ನು ಕುರಿತದ್ದು. ರಾತ್ರಿ ದೀಪಗಳನ್ನು ಆರಿಸಿದ ನಂತರ ಈ ದೀಪದೆವ್ವಗಳು ಹಳ್ಳಿಯ ಒಂದು ಸ್ಥಳದಲ್ಲಿ ಮರವೊಂದರ ಕೆಳಗಿರುವ ಮಂಟಪದಲ್ಲಿ ಸೇರಿ ತಮ್ಮ ಮನೆಗಳಲ್ಲಿ ಏನೇನು ಆಗುತ್ತಿದೆ ಎಂಬುದರ ಬಗ್ಗೆ ಹರಟೆ ಹೊಡೆಯುತ್ತವೆ ಎಂಬುದು ಈ ಕಥೆ. ಜಾನಪದ ಕಥೆಯಲ್ಲಿ ಇದನ್ನು ತಮಾಷೆಗೆಂದು ಬಳಸಲಾಗಿದೆ. ಆದರೆ ಸತ್ಯವನ್ನು ನಿರೂಪಿಸಲು ಇದನ್ನು ಅದ್ಭುತ ರೀತಿಯಲ್ಲಿ ಬಳಸಬಹುದೆಂದು ನಾನು ಭಾವಿಸಿದೆ.

ಕೆಲ ವರ್ಷಗಳ ಹಿಂದೆ ನನಗೆ ಗೊತ್ತಿದ್ದ, ರಾಜಕೀಯ ಸಂಘರ್ಷಣೆಯಲ್ಲಿದ್ದ, ನನ್ನ ಸ್ನೇಹಿತನೊಬ್ಬನ ಕೊಲೆಯಾಯಿತು. ನಾನು ಆತನು ಕೊಲೆಯಾದ ಸ್ಥಳಕ್ಕೆ ಹೋಗಿ ನೋಡಿದರೆ ಆ ಸ್ಥಳದಲ್ಲಿದ್ದ ಗೋಡೆಗಳಿಗೆ ಸುಣ್ಣ ಬಳಿಯಲಾಗಿತ್ತು. ಅಲ್ಲಿದ್ದ ಒಂದು ಮುದುಕಿ 'ನೀವು ಎರಡು ದಿನ ಮುಂಚೆ ಬಂದಿದ್ದರೆ ರಕ್ತದ ಕಲೆಗಳನ್ನು ನೋಡಬಹುದಿತ್ತು' ಎಂದಳು. ಆ ಕ್ಷಣ ನನಗೆ ಗೋಡೆಗೆ ಸುಣ್ಣ ಬಳಿದರೆ ರಕ್ತದ ಕಲೆಗಳು ಕಾಣೆಯಾಗಿಬಿಡುತ್ತವಾ ಎಂದು ಆಶ್ಚರ್ಯವಾಯಿತು. ಒಂದು ದಿನ ನನ್ನ ಮನಸ್ಸಿನಲ್ಲಿ ಈ ಮೂರೂ ಕಥೆಗಳೂ ಐಕ್ಯಗೊಂಡವು. ನಾನು ಕುಸುಮಬಾಲೆಯನ್ನು ಬರೆಯಲಾರಂಭಿಸಿದೆ. ಕುಸುಮಬಾಲೆ ಕಥೆಯಲ್ಲಿ ಕಥೆ ಎಂಬುದೇನೂ ಇಲ್ಲ. ನನ್ನ ಹಳ್ಳಿಯಲ್ಲಿ ಜನ ಇಂಥ ನಾಟಕವನ್ನು ಮತ್ತೆ ಮತ್ತೆ ನೋಡುತ್ತಲೇ ಇರುತ್ತಾರೆ. ನಾನು ಆರಂಭದಲ್ಲೇ ಕಥೆಯ ಸಾರಾಂಶ ಕೊಟ್ಟಿರುವುದರಿಂದ ಕಾದಂಬರಿಗಿಂತ ಹೆಚ್ಚಾಗಿ

ಇದು ಮನುಷ್ಯ ಸಂಬಂಧಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದೆ.' ಎಂಬ ಹೇಳಿಕೆಯನ್ನಿತ್ತು ಕುಸುಮಬಾಲೆಯ ಸೃಷ್ಟಿಯ ಹಿಂದಿರುವ ಸ್ಫೂರ್ತಿಯ ನೆಲೆಯನ್ನು ಸ್ಪಷ್ಟಪಡಿಸಿದ್ದಾರೆ. ಮತ್ತೊಂದೆಡೆ 'ನಾನು ಸಿದ್ಧಾಂತಗಳನ್ನು ಹೇಳೋಕೆ ಕಥೆ ಬರೆಯುವುದಿಲ್ಲ' ಎಂದು ತಮ್ಮ ಸೃಜನಶೀಲತೆಯ ನಿಲುವನ್ನು ದೃಢೀಕರಿಸಿದ್ದಾರೆ.

ಕಥೆಯನ್ನು ಮಹಾದೇವ ಅವರು ಕಾದಂಬರಿಯ ಮೊದಲಲ್ಲಿ ಹೀಗೆ ಸಂಗ್ರಹಿಸುತ್ತಾರೆ.

'ಅಕ್ಕಮಹಾದೇವಮ್ಮನು ಗಂಡನ ತಿಥಿಯಾದ ಮಾರನೆಗೇ ತನ್ನ ತವರಿಗೆ ಹೋದವಳು ಆರು ವರುಷದ ಬಳಿಕ, ಅಪ್ಪ ಸತ್ತ ಹನ್ನೆರಡು ತಿಂಗಳಿಗೆ ಹಟ್ಟಿ ಜೀತಗಾರನಿಗೆ ಹುಟ್ಟಿದವನೆಂಬ ಅಪವಾದದ ತನ್ನ ಮಗ ಯಾಡನೊಡನೆ ಗಂಡನ ಮನೆಗೆ ಪಾಲಿಗಾಗಿ ಬರುವಳು. ಆಗ ಭಾವ ಬಸಪ್ಪಸೋಮಿ, ಮೈದುನ ಸಿದ್ದೂರರು ಕುಪಿತರಾಗಿ ಅವಳನ್ನು ಗೋಮಾಳದಲ್ಲಿ ಬಿಸುಡುವರು. ಬಿಸುಟಲ್ಲೇ ನೆಲೆಯಾದ ಅಕ್ಕಮಹಾದೇವಮ್ಮನ ಸುತ್ತ ಒಂದು ಜೋಪಡಿ ಎದ್ದು ಮುಂದೆ ಯಾಡ ಬೆಳೆದಂತೆ ಅವನ ಸಾಮರ್ಥ್ಯವೂ ಸೇರಿ ಆ ಜೋಪಡಿಯು ನಿಧಾನವಾಗಿ ಒಂದು ದೊಡ್ಡ ಮನೆಯಾಗಿ ಆ ದೊಡ್ಡ ಮನೆಗೆ ಕಾಲಾನುಕ್ರಮದಲ್ಲಿ ಬಸಪ್ಪಸೋಮಿ, ಸಿದ್ದೂರರ ಹಟ್ಟಿಯೇ ದನದ ಕೊಟ್ಟಿಗೆಯಾಗುವುದು.

ಈ ಯಾಡೇಗೌಡನ ಮಗ ಸೋಮಪ್ಪ ಊರಿಗೇ ದೊಡ್ಡವರು. ಈ ಊರಿಗೆ ದೊಡ್ಡವರ ಮಗಳು ಕುಸುಮಬಾಲೆ. ಕುಸುಮ ಮತ್ತು ಹೊಲಾರ ಚೆನ್ನರ ನಡುವಿನ ಗುಪ್ತ ಸಂಬಂಧವು ಕುಸುಮಳಿಗಾದ ಮಗುವಿನಿಂದಾಗಿ ಬಯಲಾಗಿ ಅರಿವಾಗದೋಪಾದಿಯಲ್ಲಿ ಚೆನ್ನನ ಕೊಲೆಯಾಗುವುದು.

ಇತ್ತ ಇಡೀ ಊರಿಗೆ ಊರೇ ಕಿಚ್ಚುಹಾಯಿಸೋ ಹಬ್ಬಕ್ಕೆ ಸಿದ್ಧವಾಗುತ್ತಿದ್ದರೆ, ಚೆನ್ನನ ಬಳಗಕ್ಕೆ ಸೇರಿದ ಕೆಂಪಿಗೆ ಹುಟ್ಟಿದ ಕಂದನನ್ನು ಬದುಕಿಸಲು ತಾಯಿ ತೂರಮ್ಮ ವಿಧಿಯೊಡನೆ ಸೆಣಸುತ್ತ, ಅಲ್ಲೇ ತೂರಮ್ಮನ ಅಕ್ಕನ ಮಗಳು ಈರಿಯು ತನ್ನ ಸವೆಯುತ್ತಿದ್ದ ಕಂದನನ್ನು ಉಳಿಸಿಕೊಳ್ಳಲು ವಿಫಲಳಾಗಿ ಹಾಗೂ ಚೆನ್ನನ ಕೊಲೆ ಅರಿಯದ ಬಳಗವು ಕಾಯುವುದು ಚೆನ್ನನ ಬರವಿಗಾಗಿ'.

ಈ ಸಂಕ್ಷಿಪ್ತ ಕಥೆಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು ದಲಿತ ಸಮಾಜದ ಒಂದು ಸಮುದಾಯದ ಬದುಕಿನ ಹಲವಾರು ಎಳೆಗಳನ್ನು ಕಲಾತ್ಮಕವಾಗಿ ಹೆಣೆದು ಓದುಗರ ಗಮನವನ್ನು ಕೊನೆಯವರೆಗೂ ಹಿಡಿದಿಟ್ಟುಕೊಳ್ಳುತ್ತಾರೆ ಮಹಾದೇವ ಅವರು. ಕಾದಂಬರಿಯ ಮುಖ್ಯ ಪಾತ್ರಗಳಾದ ಅಕ್ಕಮಹಾದೇವಿ, ಕುಸುಮಬಾಲೆ, ಯಾಡ, ಚೆನ್ನ, ತೂರಮ್ಮ, ಕೆಂಪಿ ಮುಂತಾದ ಪಾತ್ರಗಳೊಡನೆ, ಜೋತಮ್ಮಗಳು, ಮಂಚ, ಜೀವಾತ್ಮಗಳೂ ಜೀವಂತಗೊಂಡು ಕಥೆಯಲ್ಲಿ ಪಾಲುಗೊಳ್ಳುತ್ತವೆ. ಕಾದಂಬರಿ

ಜಾನಪದಸತ್ವ ಭರಿತವಾಗಿರುವುದರಿಂದ ಅಮೂರ್ತ ವಸ್ತುಗಳು ಜೀವಂತವಾಗಿ ಸಂಭಾಷಣೆ ನಡೆಸಿದರೂ ಅದು ನಮಗೆ ಅಸಹಜ ಎನ್ನಿಸುವುದಿಲ್ಲ. ಹಿಂದೊಮ್ಮೆ ಕೇಳಿದ ಜಾನಪದ ಕಥೆಯನ್ನು ನೆನಪಿಸಿಕೊಂಡು ಮಹಾದೇವ ಅವರು ಇಲ್ಲಿ ಜೋತಮ್ಮಗಳನ್ನು ಉಪಯೋಗಿಸಿಕೊಂಡಿರುವ ರೀತಿ ನವೀನವಾಗಿ ಸ್ವಾರಸ್ಯವಾಗಿದೆ. ಕೇರಿಗೊಂದು ಜೋತಮ್ಮನನ್ನು ಸೃಷ್ಟಿಸಿ ಅವುಗಳೆಲ್ಲ ಒಂದು ಕಡೆ ಸೇರಿ ಆಯಾಯ ಹಟ್ಟಿಗಳಲ್ಲಿ ನಡೆಯುವ ಸಂಗತಿಗಳನ್ನು ವಿನಿಮಯ ಮಾಡಿಕೊಳ್ಳುವ ನೆವದಲ್ಲಿ ಕಥೆಯನ್ನು ಹೇಳಿರುವುದು ಆ ಪಾತ್ರಗಳ ಸಮರ್ಥ ಬಳಕೆ ಎನ್ನಿಸುತ್ತದೆ. ಅದು ಬರೀ ಕಾಡು ಹರಟೆಯಾಗದೆ ಆ ಸಮುದಾಯದ ಬದುಕಿನ ಆಂತರ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಓದುಓದುತ್ತಿದ್ದಂತೆ ಅವು ಕಥೆಗಾರನ ಕಲ್ಪನೆಯ ಸೃಷ್ಟಿ ಎನ್ನುವುದು ಮರೆತೇ ಹೋಗುತ್ತದೆ. ಇಲ್ಲಿ ಜೋತಮ್ಮಗಳು ಕುಸುಮಬಾಲೆ ಮತ್ತು ಚೆನ್ನರ ನಡುವಿನ ಸಂಬಂಧವನ್ನು ಕುರಿತು ಚರ್ಚಿಸುತ್ತಾರೆ. ಆದರೆ ಆ ಸಂಬಂಧ ಅನೈತಿಕವಾದದ್ದು ಎನ್ನುವ ಭಾವ ಅವರಾರಿಗೂ ಇರುವಂತಿಲ್ಲ. ಅವರಲ್ಲೇ ಒಬ್ಬ ಜೋತಮ್ಮ ಹೇಳುವಂತೆ, 'ಐ... ಎಲ್ರೂ ಮಾಡೋ ಯಥಾರ್ಥಾನೆ ಹೇಳ್ತಳ. ಏನ್ ವಿಚಾರ್ವ ಅದು' ಎಂಬ ಮಾತು ಇಂತಹ ಸಂಬಂಧಗಳು ಆ ಸಮುದಾಯದಲ್ಲಿ ಸಾಮಾನ್ಯ ಎನ್ನುವುದರ ಸುಳಿವನ್ನು ಕೊಡುತ್ತದೆ. ಇಂತಹ ಸಮಾಜದ ನೈತಿಕ ಮತ್ತು ಜಾತಿವ್ಯವಸ್ಥೆಯನ್ನು ಮೀರಿದ, ವಿವಾಹ ಬಾಹಿರ ಸಂಬಂಧಗಳು ಕಾದಂಬರಿಯ ಉದ್ದಕ್ಕೂ ಮುಖ್ಯಪಾತ್ರಗಳನ್ನು ಪೋಣಿಸುವ ಸೂತ್ರವಾಗುತ್ತದೆ.

ಕುಸುಮಬಾಲೆ ಮತ್ತು ಚೆನ್ನ, ಕುಸುಮಬಾಲೆಯ ತಾತ ಯಾಡ, ತೂರಮ್ಮನ ಮಗಳು ಕೆಂಪಿ, ಇವರೆಲ್ಲರೂ ಇಂತಹ ಸಂಬಂಧಗಳನ್ನು ಇಟ್ಟುಕೊಂಡಿದ್ದರೂ ಕಥೆಗಾರರು ಅವರನ್ನು ತಪ್ಪಿತಸ್ಥರಂತೆ ಚಿತ್ರಿಸದೆ ಪರಿಸ್ಥಿತಿಯ ಅನಿವಾರ್ಯತೆಗೆ ಪ್ರಾಮುಖ್ಯ ಕೊಟ್ಟಿರುವುದು ಇಲ್ಲಿನ ವಿಶೇಷ. ಎಂಟನೆಯ ಆವೃತ್ತಿಯ ಮುನ್ನುಡಿಯಲ್ಲಿ ಎಲ್.ಬಸವರಾಜು ಅವರು 'ಕುಸುಮಬಾಲೆಯಲ್ಲಿ ದೇವನೂರು ಮಹಾದೇವರು ಅನಿರ್ಬಂಧಿತ ಪ್ರೇಮ ಸಂಬಂಧವೆಂಬ ದಾಳಿಯ ಮೂಲಕ ಜಾತಿವ್ಯವಸ್ಥೆಯನ್ನು ಗೇಲಿ ಮಾಡುತ್ತಾ, 'ಮಾನ್ಯತೆ ಇರುವುದು ಬದುಕುವ ಬದುಕಿನಲ್ಲಿಯೇ ಹೊರತು, ಹುಟ್ಟಿದ ಜಾತಿಯಿಂದಲ್ಲ' ಎಂದು ಹೇಳಿ ಕಥೆಯ ನಾಯಕಿಯರಾದ ಅಕ್ಕಮಹಾದೇವಿ ಮತ್ತು ಕುಸುಮಬಾಲೆಯರನ್ನು ವ್ಯಭಿಚಾರಿಣಿಗಳಂತೆ ಚಿತ್ರಿಸದೆ ಕಾವ್ಯನಾಯಕಿಯರನ್ನಾಗಿ ಮಾಡಿ ಆ ತಾಯಂದಿರ ಕಥೆಯನ್ನು ಮಹಾಕಾವ್ಯದ ವಿಸ್ತಾರದಲ್ಲಿ ಅದೇ ಜಾನಪದ ಧಾಟಿಯಲ್ಲಿ ಹೆಣೆದಿರುವುದರಿಂದ ಕುಸುಮಬಾಲೆಯನ್ನು 'ಅಭಿನವ ಜಾನಪದ ಕಾವ್ಯ'ವೆಂದು ಮಾತ್ರವಲ್ಲ, 'ಮಹಾಕಾವ್ಯ'ವೆಂದೇ ನಿರ್ಧರಿಸುವುದು ಒಳ್ಳೆಯದು' ಎನ್ನುತ್ತಾರೆ. ಕಾದಂಬರಿಯ ಮತ್ತೊಂದು ಮುಖ್ಯ ಪಾತ್ರ ಯಾಡನದು. ಅಕ್ಕಮಹಾದೇವಿ ಮತ್ತು ಹಟ್ಟಿಯ ಜೀತಗಾರನೊಬ್ಬನ ನಡುವಿನ ಅನೈತಿಕ ಸಂಬಂಧದಿಂದ ತಂದೆ ಸತ್ತ ಹನ್ನೆರಡು

ತಿಂಗಳ ನಂತರ ಹುಟ್ಟಿದುದರ ಫಲವಾಗಿ ಯಾಡ ಬಂಧುಗಳ ಅಲಕ್ಷ್ಯಕ್ಕೆ ಗುರಿಯಾಗಿ ಬೆಳೆದರೂ ತಾಯಿಯ ಕೆಚ್ಚು ಅವನಲ್ಲಿ ಸ್ಥೈರ್ಯವನ್ನು ತುಂಬಿ ಯಾರು ಅವನಿಗೆ ತಮ್ಮ ಹಟ್ಟಿಯಲ್ಲಿ ಇರಲು ಜಾಗ ಕೊಡಲಿಲ್ಲವೋ ಅವರ ಹಟ್ಟಿಯೇ ಮುಂದೆ ಅವನ ಮನೆಯ ದನದ ತೊಟ್ಟಿಯಾಗುವಷ್ಟು ದೊಡ್ಡ ಮನುಷ್ಯನಾಗುತ್ತಾನೆ.

ಅವನು ಮಾಡುತ್ತಿದ್ದ ಕೆಲಸಗಳೆಲ್ಲ ಕಳ್ಳತನ, ಕಳ್ಳಸಾಗಾಣಿಕೆ, ಕಳ್ಳನೋಟು ತಯಾರಿಕೆ, ಇಂತಹ ಕಾನೂನು ಬಾಹಿರವಾದ ಕಾರ್ಯಗಳಾಗಿದ್ದರೂ ಇಲ್ಲಿ ಯಾರೂ ಅವನನ್ನು ತಪ್ಪಿತಸ್ಥನಂತೆ ಕಾಣುವುದಿಲ್ಲ. ಅಂತಸ್ತು ಏರಿಏರಿದಂತೆ ಯಾಡ ಯಾಡೇಗೌಡನಾಗುತ್ತಾನೆ. ಹೀಗೇ ಒಂದು ದಿನ 'ಮಗ ಸೋಮಪ್ಪಗ ಮಲ್ಲಾಜಮ್ಮನ ತಂದ್ಕೊಂಡು ಏಡೂದಿಕ್ಲ ಆಸ್ತಿಗಳ ಕಸಿ ಮಾಡಿ ಮತ್ತೂ ಏಳ್ಗೆ ಹೊಂದಿದವರಾಗಿ ನಗ್ತ ತಾವೂ ನಿಧನರಾಗಿದ್ದರು' ಎಂದು ಯಾಡನ ಪಾತ್ರಕ್ಕೆ ಮುಕ್ತಿ ಕಾಣಿಸುತ್ತಾರೆ. ಮಂಚ ಮತ್ತು ಜೀವಾತ್ಮಗಳ ನಡುವಿನ ಸಂವಾದದಲ್ಲಿ ಯಾಡನ ಬದುಕು ಬಿಚ್ಚಿಕೊಂಡಿರುವ ರೀತಿ ಬಹಳ ಚೆನ್ನಾಗಿ ಮೂಡಿಬಂದಿದೆ.

ಕಾದಂಬರಿಯಲ್ಲಿ ಎದ್ದು ನಿಲ್ಲುವ ಮತ್ತೊಂದು ಪಾತ್ರ ಅಮಾಸನದು. ನಿರಕ್ಷರಕುಕ್ಷಿ ಆಗಿದ್ದ ಅಮಾಸ ಜೀವನೋಪಾಯಕ್ಕೆ ಒಂದು ವಿಚಿತ್ರ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ಹಳ್ಳಿಯ ಹೆಂಗಸರ ಮುಟ್ಟಿನ ಸ್ಯಾಲೆಗಳನ್ನು ಕದ್ದು ಮಾರಿ ಅದರಿಂದ ದುಡ್ಡು ಸಂಪಾದಿಸುವುದೇ ಅವನ ವೃತ್ತಿ. ಅದಕ್ಕೆ ಎಷ್ಟು ಬೇಕೋ ಅಷ್ಟು ಅಂಕಗಣಿತವನ್ನು ತಿಳಿದುಕೊಂಡು ನೆಮ್ಮದಿಯ ಬದುಕನ್ನು ಬದುಕುತ್ತಾನೆ. 'ಸ್ವಪ್ರತಿಭೆಯಿಂದ ಈ ಕಾಯಕ್ವ ಕಂಡುಹಿಡ್ಡವನಾಗಿ ಅದನು ನೇಮ ನಿಷ್ಟೇಲಿ ಆಚರಿಸುತಲಿದ್ದ', 'ಅಮಾಸನ ಈ ಕಾಯಕವು, ಕೂಲಿ ಕೆಲಸಕ್ಕಿಂತ ಹೆಚ್ಚು ಲಾಭದಾಯಕವಾಗಿಯೂ ಅನಿಶ್ಚಯತೆ ಇಲ್ಲದ್ದಾಗಿಯೂ ಹಾಗೂ ಯಾರ್ಗಾರೂ ಮುಟ್ಟುನಿಂತು ಸಂಭವಿಸೋ ಲುಕ್ಸಾನಿಗೆ ಪ್ರಕೃತಿಯು ಹೊಸ ಗಿರಾಕಿ ಕೊಡುಸ್ತಾ ಅದು ಅಲ್ಲಲ್ಲಿಗ ಸಮನಾಗಿ ಇದು ಅಮಾಸನ ಹೊಟ್ಟೆಬಟ್ಟೆ ಬೀಡಿ ಸಿನಿಮಾ ಸೈಕಲ್ ಬಾಡ್ಗೆಗೂ ಆಗಿ ಉಳುದುದು ಇವನ ನೆಚ್ಚಿ ಮಾರೀಗುಡಿ ನೆಲಕ್ಕಂಟಿ ಬಾಯ ಬಿಟ್ಕೊಂಡಿದ್ದ ಕರಿಯಯ್ಯಗ ಗಂಜಿನೀರ ಕಾಣಿಸ್ತಿತ್ತು'. ಬಾಡಿಗೆಯ ಬೈಸಿಕಲ್ಲಿನಲ್ಲಿ 'ಹ್ಯಾಂಡಲ್ಲೂ' ಹಿಡಿದುಕೊಳ್ಳದೆ ಅವನು ನಲಿನಲಿದು ಬರುತ್ತಿದ್ದುದನ್ನು ನೋಡಿ ಅಸೂಯೆಗೊಂಡ ಮೇಲುಜಾತಿಯವನೊಬ್ಬ 'ನೋಡ್ರೂಡಾ ನೋಡ್ರೂಡ! ಹೊಟ್ಟಗಹಿಟ್ಟು ಇಲ್ದೇ ಇದ್ರೂ ಆ ಹೊಲೆಯ್ನ್ ಕೊಬ್ಬಾ! ನಾವ್ ನೋಡ್ಲೀ ಅಂತ್ಲೀಯ ಹಾವ್ನ ಥರವಾಗಿ ನಲೀತ ಬತ್ತಾ ಅವನಲ್ಲ' ಎಂದು ಉದ್ಗರಿಸುತ್ತಾನೆ. ಸಮಾಜದ ವ್ಯವಸ್ಥೆಯೊಂದನ್ನು ತನ್ನ ಏಳ್ಗೆಗಾಗಿ ಬಳಸಿಕೊಂಡದ್ದೇ ಅಲ್ಲದೆ ಮತ್ತೊಬ್ಬನಿಗೂ ಗಂಜಿ ನೀರು ಒದಗಿಸುತ್ತಿದ್ದ ಅಮಾಸ ಮಾಡುತ್ತಿದ್ದುದು ಕಳ್ಳತನವಾದರೂ ತನ್ನ ಕೈಲಾದಷ್ಟು ದಾನ ಧರ್ಮ ಮಾಡುತ್ತ ಓದುಗರ ಮೆಚ್ಚುಗೆಗೆ ಪಾತ್ರನಾಗುತ್ತಾನೆ.

ಹೀಗೆ ಈ ಕಾದಂಬರಿಯ ನಾಯಿಕೆಯರಂತೆ ಇತರ ಪಾತ್ರಗಳೂ (ತೂರಮ್ಮ, ಚೆನ್ನನ ತಂದೆ, ಗಾರಸಿದ್ಧಮಾವ, ಅಮಾಸ ಮುಂತಾದವರು) ತಾವು ಇರುವ ವ್ಯವಸ್ಥೆಯಲ್ಲಿ ಹೇಗೋ ಬದುಕಲು ಕಲಿತುಕೊಂಡಿರುತ್ತಾರೆ. ಆದರೆ ಎಲ್ಲ ವ್ಯವಸ್ಥೆಗೂ ಮೀರಿದ ಮಾನವನ ಮೂಲಭೂತ ಸಹಜ ಲೈಂಗಿಕ ತೃಷೆ ಜಾತಿವ್ಯವಸ್ಥೆಯನ್ನು ಅಲ್ಲಾಡಿಸಿಬಿಡುತ್ತದೆ. ಕಾದಂಬರಿಯ ಉದ್ದಕ್ಕೂ ಮೇಲು ಮತ್ತು ಕೆಳಜಾತಿಯ ವ್ಯಕ್ತಿಗಳ ನಡುವೆ ಲೈಂಗಿಕ ಸಂಬಂಧಗಳು ನಡೆಯುತ್ತಲೇ ಇರುತ್ತವೆ. ಜಾತಿಪದ್ಧತಿಗಳ ಬಗ್ಗೆ ಗೇಲಿಮಾಡುವಂತೆ ಮಹಾದೇವ ಅವರು ಗಾರಸಿದ್ಧಮಾವನನ್ನು ಹೊಡೆದದ್ದೇ ಕಾರಣವಾಗಿ ಹುಟ್ಟಿಕೊಂಡಿದ್ದ ದಲಿತ ಸಂಘವೊಂದರ ಸಭೆಯಲ್ಲಿ, ಹೊಲೆಯರ ಕುರಿಯಯ್ಯನ ಮೇಲೆ ತೊರಾರ ಜೋತಮ್ಮ ಆವಾಹನೆಯಾಗಿ ಈ ಮಾತುಗಳನ್ನು ಆಡಿಸಿದ್ದಾರೆ, 'ಯಾನಾರು ನಂ ಜಾತಿ ಬಡ್ಡೆತ್ತವುಗಳು ನಿಯತ್ತಗಾರ್‍ರು ಅಂದ್ಕೊಂಡಿದ್ದೀರಯ್ಯ ಯಾನಾರುವ್ವಿ? ನಂಬೀರಿ ಜೋಕೆ... ...ನಮ್ ಜಾತಿ ಬಡ್ಡೇತ್ತವು ಕಾಯ್ಕೊಂಡಿದ್ದು ತಂ ಕಣ್ಣುಗ ಬೇಕ್ಬೇಕಾದ ಉತ್ತಮ ಜಾತ್ಯವರ ಹೆಡ್ತೀರ ಹೊತ್ಕೊಂಡು ನಡ್ದುಬಿಡೋರು... ಎಲ್ಲಿಗ್ಯಾ? ಬೆಟ್ಟದ ಕಿಬ್ರಿಗ. ಆಯ್ತಾ? ವಸಿ ದಿನಗಂಟ ಅಲ್ಲೇ 'ಇರಾರು ಆಯ್ತಾ? ಆಮ್ಯಾಕ ಕೇಳಿ ಆ ಬಡ್ಡೇತ್ತವು ತಿರ್ಗಾ ತಂ ಊರ್ಗೀಯ ಬರೋವು. ಯಾನೇ ಆಗ್ಲಿ ಆಗ ಉತ್ತಮಜಾತಿ ಜನ ಒಳ್ಳೇವರಾಗಿದ್ರುಕಯ್ಯ. ಅದ್ಕೀಯ ಅವ್ರಿಗೆ ಉತ್ತಮಜಾತಿ ಅಂತ ಹೆಸ್ರು ಬಂದು ನಿಂತಿರೋದು... ಬೆಟ್ಟದ ಕಿಬ್ರಿಯಿಂದ ಬಂದವ್ರಿಗ ಏನಂತಿದ್ರು ಅಂದ್ರ– ನೋಡ್ರಯ್ಯ ಆದ್ದು ತಿರುಗ ಬರಲ್ಲ, ಯಾನ ಆಯ್ತು, ಯಾನ ಹೋಯ್ತು. ನೀವ್ಗಳು ಕಟ್ಟುಕಟ್ಟ ಮುರ್ದು ಮಾಡ್ದ ತಪ್ಪುಗ ಈಗ ನೀವ್ಗಳು ಊರಾಚ್ಗ ಇದ್ದಕಂಡು ನಾವ್ ಹೇಳ್ದ ಕೆಲ್ಸ ಮಾಡ್ಕೊಂಡು ಹೆಂಗೋ ಇದ್ಕಳ್ಳಿ... ಅಂತ ಅನ್ನವ್ರು, ನಮ್ಮ ಜಾತಿ ಬಡ್ಡೇತ್ತವ್ಕ ಬೇಕಾಗಿದ್ದೂ ಅದೀಯ. ಆ ಉತ್ತಮರು ಕಾಲಲ್ಲಿ ತೋರ್ಸಿದ್ದ ಇವ್ರು ಕೈಲಿ ಮಾಡ್ಕಳೋರು... ಇರೋರು' ಎಂದು ಅಸ್ಪೃಶ್ಯತೆಯ ಅಸಹಜತೆಯ ಬಗ್ಗೆ ಅಣಕವಾಡಿದ್ದಾರೆ.

ಈ ಕಾದಂಬರಿಯ ಕೊನೆಯಲ್ಲಿ ಎಳನೀರು ಕದ್ದನೆಂದು ಗಾರಸಿದ್ಧಮಾವನಿಗೆ ಏಟುಬಿದ್ದ ಕಾರಣದಿಂದ ಸಂಘಟಿತವಾದ ದಲಿತ ಸಂಘದ ಚಟುವಟಿಕೆ ಮತ್ತು ಬೊಂಬಾಯಿಯ ಚಿತ್ರಣಗಳನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ. ಈ ಹಳ್ಳಿಯ ಸಮುದಾಯದ ಮೇಲೆ ಆಧುನಿಕ ಜಾಗತಿಕ ಜಗತ್ತಿನ ನೆರಳುಬಿದ್ದು ಅವರ ಜೀವನವನ್ನು ಅಲ್ಲೋಲ ಕಲ್ಲೋಲ ಮಾಡುತ್ತದೆ. ಅಮಾಸ ಕೂಡ ತನ್ನ ನೆಮ್ಮದಿಯ ಬದುಕನ್ನು ಬಿಟ್ಟು ದಲಿತ ಸಂಘದ ಓಡಾಟದಲ್ಲಿ 'ತಿಂಗಳ ಕಾಯಕದಲ್ಲೂ ಮೂರ್ಜಿನ ಖೋತವಾಗ್ತ ದುಡ್ಡುಕಾಸು ಓಡಾಡುವುದು ನಿಲುಗಡೆಯಾಗಿ ಅಮಾಸನ ಆರ್ಥಿಕ ಸ್ಥಿತಿಯು ಡಲ್ ಹೊಡೀತ ಬೀಡಿಗೂ ಭಂಗ ಪಡಬೇಕಾದ ಸ್ಥಿತಿಗೆ ಬಂದನು'. ಬೊಂಬಾಯಿಯಲ್ಲಿ ಚೆನ್ನ ಕೊಲೆಯಾಗಿರುವ ಸುದ್ದಿ ತಿಳಿದಿಲ್ಲದ ಹಳ್ಳಿಯ ಮಂದಿ ಅವನ ಅಲ್ಲಿನ ಜೀವನವನ್ನು

ರಾಜವೈಭೋಗ ಎಂಬಂತೆ ಊಹಿಸಿಕೊಳ್ಳುತ್ತಾರೆ. ಚೆನ್ನನ ತಂದೆತಾಯಿ ಮಗನನ್ನು ನೋಡಲು ದೂರದ ಬೊಂಬಾಯಿಗೆ ಹೋಗಲು ಹಣದ ಅಭಾವದಿಂದ ಸಾಧ್ಯವಾಗದೆ ಎಂದಾದರೂ ಬಂದೇ ಬರುತ್ತಾನೆ ಎಂಬ ಭರವಸೆಯಿಂದ ಕಾಲಹಾಕುತ್ತಿರುತ್ತಾರೆ. ಕಾದಂಬರಿಯ ದಲಿತ ಚಟುವಟಿಕೆಗಳ ಚಿತ್ರಣದಲ್ಲಿ ಕಥೆಯ ಆರಂಭದಲ್ಲಿನ ತೀವ್ರತೆ ಸ್ವಲ್ಪ ಕಡಿಮೆಯಾದಂತಿದೆ. ನಿರೂಪಣೆ ವಿಡಂಬನಾತ್ಮಕವಾಗಿರುವುದೂ ಅದಕ್ಕೆ ಕಾರಣವಾಗಿರಬಹುದು. ಅಲ್ಲಿಯವರೆಗೂ ಕಾದಂಬರಿಕಾರರಾಗಿ ಹಿನ್ನೆಲೆಯಲ್ಲಿ ಮಾತ್ರ ಉಳಿದಿದ್ದ ಮಹಾದೇವರು ಜೋತಮ್ಮ ಮೈಮೇಲೆ ಬಂದಿದ್ದ ಹೊಲೇರ ಕುರಿಯನ ಬಾಯಲ್ಲಿ ಒಂದು ಪಾತ್ರವಾಗಿ ಬಂದಾಗ ಕಾಲ್ಪನಿಕ ಪ್ರಪಂಚದಿಂದ ಪ್ರತ್ಯಕ್ಷಪ್ತಕ್ಕೆ ಧಿಡೀರನೆ ಧುಮುಕಿದಂತಾಗುತ್ತದೆ. ಇದರಿಂದ ಇದು ಬರೀ ಕಥೆಯಲ್ಲ... ನೈಜ ಘಟನೆಗಳ ನಿರೂಪಣೆ ಎನ್ನಿಸಿ ಸ್ವಲ್ಪ ರಸಭಂಗವಾಗುವ ಸಾಧ್ಯತೆ ಉಂಟು.

ಕುಸುಮಬಾಲೆಯ ಬಗ್ಗೆ ಇರುವ ವಿವಾದಗಳೆಲ್ಲ ಅದರ ಭಾಷೆಯನ್ನು ಕುರಿತದ್ದೇ ಆಗಿದೆ. ಅಲ್ಲಿಯವರೆಗೆ ನವ್ಯರೂ ಕೂಡ ಶಿಷ್ಟಭಾಷೆಯಲ್ಲೆ ಸಾಹಿತ್ಯ ರಚನೆ ಮಾಡುತ್ತಿದ್ದಾಗ ದಲಿತ ಜನಾಂಗದ ಭಾಷೆಯೊಂದರಲ್ಲಿ ಬರೆದಿರುವ ಮಹಾದೇವರ ಉದ್ದೇಶ್ಯವನ್ನು ಹಲವಾರು ವಿಮರ್ಶಕರು ಪ್ರಶ್ನಿಸಿದ್ದಾರೆ. ಚಂದ್ರಶೇಖರ ಪಾಟೀಲರು 'ಇದು ಕನ್ನಡಕ್ಕೆ ಅನುವಾದವಾಗಬೇಕು' ಎಂದು ಟೀಕಿಸಿದ್ದಾರೆ. ಮೊದಲ ಓದಿನಲ್ಲಿ ಕಾದಂಬರಿಯ ಓಟಕ್ಕೆ ಸ್ಪಂದಿಸುವುದು ಕಷ್ಟ ಎನ್ನಿಸಿದರೂ, ಅದರ ಲಯ ಕರಗತವಾದೊಡನೆ ಆ ಭಾಷೆಯ ಸೊಗಡು, ಅದನ್ನು ಮಹಾದೇವರು ಬಳಸಿರುವ ರೀತಿ ಓದುಗರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ. ಆ ಭಾಷೆಯಲ್ಲಲ್ಲದೆ ಈ ಕಥೆಯನ್ನು ಮತ್ತಾವುದರಲ್ಲೂ ಊಹಿಸಿಕೊಳ್ಳಲೂ ಕಷ್ಟವಾಗುತ್ತದೆ. ಅಪೂರ್ಣ ವಾಕ್ಯಗಳು, ಕ್ರಿಯಾಪದದ ಪುನರುಚ್ಚಾರ, ಕಣ್ಣಿಗೆ ಕಟ್ಟುವಂಥ ಪ್ರತಿಮೆಗಳು ಮಹಾದೇವ ಅವರು ಎಂತಹ ಪ್ರಖಂಡ ಲೇಖಕರು ಎನ್ನುವುದಕ್ಕೆ ಸಾಕ್ಷಿಯಾಗಿವೆ. ಗದ್ಯ ಪದ್ಯ ಸಂಮಿಶ್ರಣದ ಆ ದಲಿತ ಭಾಷೆಯನ್ನು ತೆಗೆದುಕೊಂಡು, ಅಲ್ಲಲ್ಲಿ ವಾಕ್ಯಗಳ ಮಧ್ಯ ಇಂಗ್ಲಿಷ್, ಹಿಂದಿ ಪದಗಳನ್ನು ತೂರಿಸಿ (ಉದಾ: 'ಇಡೀ ಬೊಂಬಾಯ್ ಮೇಲೇನೆ ಅವ್ವು ಏವೊನ್ ದಿಲ್ದಾರ್ ಅವ್ನೆ ಅವ್ನು') ತಮ್ಮದೇ ವಿಶೇಷತೆಯನ್ನು ಸೇರಿಸಿ ಒಂದು ವಿಶಿಷ್ಟ ಭಾಷೆಯನ್ನು ಸೃಷ್ಟಿಸಿದ್ದಾರೆ ಮಹಾದೇವ ಅವರು. ಕೆಲವು ನುಡಿಚಿತ್ರಗಳಂತೂ ಮತ್ತೆಮತ್ತೆ ಮೆಲುಕುಹಾಕುವಂತಹವು. ಕೆಳಗಿನ ಉದಾಹರಣೆಗಳನ್ನು ನೋಡಿ:

ಕುಸುಮಬಾಲೆಯ ಲಾವಣ್ಯವನ್ನು ಒಬ್ಬ ಜೋತಮ್ಮ ಹೀಗೆ ವರ್ಣಿಸುತ್ತಾಳೆ: 'ಸಿವಸಿವಾ ಅವ್ಳು ನಕ್ಕರೋ. ಅವಳ ಹಲ್ಲಿನಮೇಗಳ ಆ ಒಂಚುಟ್ಟೇ ಸಿಂಗಲ್ಲಿನಲ್ಲೇ ಈ ಲೋಕದ ಚೆಲೂನೆಲ್ಲ ಆ  ಭಗವಂತ್ನು ಇಟ್ಟೂ... ಆ ರತಿ ಅಂಬಳ್ಗಿಯಾ ಅದ್ನೀಗ ಹೆಂಗಾರೂ ಮಾಡಿ ಕಿತ್ಕಂಡು, ತನ್ನ ಹಲ್ನ ಮ್ಯಾಕ್ಕ ಇಟ್ಟಗಬೇಕೂ ಅನ್ಸಂಗ ಇದ್ದವಳೂ'.

ಸನ್ನಿವೇಶಗಳನ್ನು ಚಿತ್ರಿಸುವಾಗಲಂತೂ ಮಹಾದೇವ ಅವರ ಕೈಯಲ್ಲಿ ಈ ಭಾಷೆ ಅತ್ಯುತ್ತಮ ಶಿಲ್ಪಿಯ ಉಳಿಗೆ ಸಿಕ್ಕಿದ ಕಲ್ಲು ಸುಂದರ ವಿಗ್ರಹವಾಗುವಂತೆ ಕಡೆದು ನಿಲ್ಲುತ್ತದೆ. ಮನೆಯ ಬಾಗಿಲು ತೆಗೆದುದನ್ನು ಹೀಗೆ ವರ್ಣಿಸುತ್ತಾರೆ, 'ಊರು ಒಂದು ಸಲ ಆಕಳಿಸಿದಷ್ಟು ಸಬುದ ಮಾಡ್ತ ತಕ್ಕಂಡಿತು. ಆಗಲೀಗ ಹಟ್ಟಿಯ ಒಳಗಿದ್ದೂ ಇದ್ದೂ ಬೇಜಾರು ತುಂಬ್ಕೊಂಡಿದ್ದ ಕತ್ತಲು, ಬಾಗಿಲು ತೆಗೆಯುವುದನ್ನೇ ಕಾಯುತ್ತಿದ್ದು ಹೊರಬಂದುದೇ ಉಸಿರು ಬುಡಲು, ಹಾಗೆಯೇ ಹಟ್ಟಿ ಹೊರಗಿದ್ದ ಕತ್ತಲೂ ತಾನೂ ಒಂದ್ಸಲ ಹಟ್ಟಿಯ ಒಳಚಂದ್ವ ನೋಡುವ ಅನ್ನಿ ಅದೋ ಒಳಬಂತು'. ನೆಳಲುಬೆಳಕಿನ ಈ ವರ್ಣನೆ ಎಷ್ಟು ಆತ್ಮೀಯವಾಗಿದೆ! ತಮ್ಮ ಆಡುಭಾಷೆಯ ಮೇಲೆ ತಮಗಿರುವ ಪ್ರಭುತ್ವದಿಂದ ಮಹಾದೇವ ಅವರು ಕಾದಂಬರಿಯ ಉದ್ದಕ್ಕೂ ಅಪ್ರತಿಮ ಪ್ರತಿಮೆ, ರೂಪಕಗಳನ್ನು ಸೃಷ್ಟಿಸಿದ್ದಾರೆ. ಗಂಡನ ಮನೆಗೆ ಪಾಲು ಕೇಳಲು ಬಂದ ಅಕ್ಕಮಹಾದೇವಿಯನ್ನು ನೋಡಿದಾಗ ಅವಳ ಮೈದುನ ಸಿದ್ದೂರನ ಬಗೆಯನ್ನು ಹೀಗೆ ವರ್ಣಿಸುತ್ತಾರೆ, 'ಈ ಬಂದು ಕುಂತವಳ ನೋಡಲು ಅವನ ತುಟಿ ಮೀಸ್ಗಳು, ತಮ್ಮಟ ಮುಂದೆ ಐಕಳು ಕುಣೀವಂತೆ ಕುಣೀತೊಡಗಿದವು'. ಮತ್ತೊಂದು ಉದಾಹರಣೆ ನೋಡಿ, 'ತನ್ನ ಕೆದುರೀದ ಕೂದುಲುಗ ಎಣ್ಣನೀರು ಕಾಣಿಸ್ದ ಅವಳೋ ಆ ಕೆಂಚ್ಗ ಇರೋ ಆ ಕೂದ್ಲುಗುವ ಅದ್ಯಾವ ಅವಳೋ ಒಂದು ಕಡ್ಡಿ ತುದೀಗ ಬಟ್ಟಸುತ್ತಿ ಎಣ್ಣಹಾಕಿ ಹಚ್ಚಿಟ್ಟ ಉರಿಯೋ ಪಂಜಿನಂತಿದ್ದಳು.' ಇಂತಹ ನುಡಿಗಟ್ಟುಗಳಲ್ಲಿ ಜೀವಂತಿಕೆಯನ್ನು ಮೆರೆದಿರುವ ಮಹಾದೇವ ಅವರು ಕುಸುಮಬಾಲೆಯನ್ನು ತಮ್ಮ ಕುಲದೇವರು ಮಾದಾರ ಮಲೆಮಾದೇಶ್ವರನಿಗೆ ಅರ್ಪಿಸಿ ತನ್ನ ಮನೆದೇವರಿಗೆ, ತನ್ನ ಜನಾಂಗಕ್ಕೆ, ಮುಖ್ಯವಾಗಿ ಕನ್ನಡ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆಯನ್ನು ಕೊಟ್ಟಿದ್ದಾರೆ. ಇಂತಹ ಪ್ರತಿಭಾಶಾಲಿ ಲೇಖಕರು ಬರೀ ಮೂರು ಪುಸ್ತಕಗಳನ್ನು ಬರೆದು ಇಲ್ಲಿಯವರೆಗೂ ಮತ್ತೇನನ್ನೂ ಪ್ರಕಟಿಸದೇ ಇರುವುದು ಕನ್ನಡ ಸಾರಸ್ವತ ಪ್ರಪಂಚಕ್ಕೆ ಭಾರೀ ನಷ್ಟವಾಗಿದೆ. ಆದರೆ ಮತ್ತೊಬ್ಬ ಕುಸುಮಬಾಲೆಯನ್ನು ಸೃಷ್ಟಿಸುವುದು ಅದರ ಕರ್ತೃವಿಗೇ ಕಷ್ಟವಾಗಬಹುದು ಎನ್ನಿಸುವಂತಹ ಅಮೋಘ ಕಾದಂಬರಿ ಇದು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಹಾದೇವ ಅವರ ಹೆಸರನ್ನು ಶಾಶ್ವತವಾಗಿಸಿದ ಈ ಕಾದಂಬರಿಗೆ ೧೯೯೦ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ.

**ಕೃತಿ ವಿವರ:** ಕುಸುಮಬಾಲೆ, ದೇವನೂರ ಮಹಾದೇವ, ಅಭಿನವ, ಬೆಂಗಳೂರು, ೧೯೯೩ (೮ನೇ ಮುದ್ರಣ ೨೦೦೮), ಪು. ೧೬೪

**ಗ್ರಂಥ ಋಣ:**

ಕನ್ನಡ ನವ್ಯ ಕಾದಂಬರಿಗಳು– ಡಾ. ಕೆ. ವಿಜಯಶ್ರೀ

ಕೆಲವು ಕಡೆಗಳಲ್ಲಿ ಕಾದಂಬರಿಯ ಭಾಷೆಯನ್ನು ಯಥಾವತ್ತಾಗಿ ಉದ್ಧರಿಸಲಾಗಿದೆ.

# ಚಿತ್ತಾಲರ ಕಾದಂಬರಿ, 'ಕೇಂದ್ರ ವೃತ್ತಾಂತ' – ಒಂದು ಅನಿಸಿಕೆ

–ಆಹಿತಾನಲ (ನಾಗ ಐತಾಳ); ಆರ್ಕೇಡಿಯ, ಕ್ಯಾಲಿಫೋರ್ನಿಯಾ

ಯಶವಂತ ಚಿತ್ತಾಲರ ಕೃತಿ, 'ಕೇಂದ್ರ ವೃತ್ತಾಂತ' ಅವರ ಇತ್ತೀಚಿನ (೧೯೯೬) ಕಾದಂಬರಿ. ಈ ಕಾದಂಬರಿಯ ಒಂದು ವಿಶಿಷ್ಟತೆಯೆಂದರೆ, ಅಲ್ಲಿ ಬಳಸಿರುವ ತಂತ್ರ, ಕಾರಂತರ 'ಅಳಿದ ಮೇಲೆ' ಕಾದಂಬರಿಯ ನೆನಪು ತರುತ್ತದೆ. ಇವೆರಡೂ ಕಾದಂಬರಿಗಳಲ್ಲಿ ಬಳಸಿರುವ 'ನಿರೂಪಣೆ'ಯ ತಂತ್ರ ಕಾದಂಬರಿಗೆ ಬೇರೆಯೇ ರೂಪವನ್ನು ನೀಡಿದೆ. ಆದರೆ, ಕಾರಂತರ ಬಳಕೆಯಲ್ಲೂ, ಚಿತ್ತಾಲರ ಬಳಕೆಯಲ್ಲೂ ವ್ಯತ್ಯಾಸವಿರುವುದನ್ನು ಗಮನಿಸಬಹುದು. ಮುಖ್ಯವಾಗಿ, ಚಿತ್ತಾಲರು ಬಳಸಿದ ನಿರೂಪಕ, 'ನನ್ನ ಹೆಸರು ಅಭಿಜಿತ್. ನಾನು ಈ ಕಥಾಸಂಗ್ರಹದ ನಿರೂಪಕ'ನೆಂದು ಮೊದಲೇ ಗುರುತಿಸಿಕೊಂಡಿದ್ದಾನೆ; ಹಾಗೂ, ಅವನೇ ಕಾದಂಬರಿಯಲ್ಲಿ 'ಕೇಂದ್ರ' ಸ್ಥಾನವನ್ನು ಬಹುಮಟ್ಟಿಗೆ ಆಕ್ರಮಿಸಿದ್ದಾನೆ. ಅಂದರೆ, ಇಲ್ಲಿ ನಿರೂಪಕನೇ ಕಥಾನಾಯಕ. 'ಅಳಿದ ಮೇಲೆ' ಕಾದಂಬರಿಯಲ್ಲಿ, 'ಯಶವಂತ' ಕಥಾನಾಯಕನಾಗಿದ್ದು, ನಿರೂಪಕ, 'ವೃತ್ತ'ದ ಪರಿಧಿಯಲ್ಲಿದ್ದೇ, ಕಥಾನಿರೂಪಣೆಯನ್ನು ಮಾಡುತ್ತ, ಕಾದಂಬರಿಯಲ್ಲೊಂದು ಮುಖ್ಯ ಸ್ಥಾನವನ್ನೂ ಪಡೆದಿದ್ದಾನೆ. ಅಲ್ಲಿ ಅವನು (ನಿರೂಪಕ), ಯಶವಂತ ಅಳಿದ ಮೇಲೆ, ಅವನು ಬಿಟ್ಟುಹೋದ ಹಣದ ಹಂಚುವಿಕೆಯನ್ನು ಸ್ನೇಹಿತನಾದ 'ನಿರೂಪಕ'ನಿಗೆ ವಹಿಸಿಕೊಟ್ಟಿದ್ದುದರಿಂದ, ಆ ಹಣ ಪಡೆಯಲು ಅರ್ಹರಾದವರನ್ನು ಅರಸುತ್ತ ಹೋದಂತೆ, ಯಶವಂತನ ಜೀವನ ಮೌಲ್ಯ ಮತ್ತು ಅವನ 'ಜೀವನ ಚರಿತ್ರೆ'ಯೇ ಓದುಗರ ಮುಂದೆ ಹರಡುವಂತಾಗುತ್ತದೆ. ಅಂದರೆ, 'ಅಳಿದ ಮೇಲೆ'ಯಲ್ಲಿ ಕತೆ 'ಹಿಂದು-ಹಿಂದಾಗಿ' ಸರಿಯುತ್ತ, ನಿರೂಪಣೆ 'ಮುಂದುವರಿಯುತ್ತ' ಹೋಗುತ್ತದೆ. ಅದೊಂದು (ಆ ಕಾಲದಲ್ಲಂತೂ) ಅಪೂರ್ವ ತಂತ್ರ. ಆದರೆ, 'ಕೇಂದ್ರ ವೃತ್ತಾಂತ'ದಲ್ಲಿ, ನಿರೂಪಕ 'ಖೇತವಾಡಿ'ಯ ಚಾಳಿನಲ್ಲಿ ನಡೆದ ಒಂದು ಘಟನೆಯಲ್ಲಿ ತನ್ನನ್ನು ತಾನೇ

ತೊಡರಿಸಿಕೊಂಡು, ಪಲವಾರು ತೊಂದರೆಗಳಿಗೊಳಗಾಗುತ್ತಾನೆ. ಹಾಗಾಗಿ, ನಿರೂಪಣೆಯಲ್ಲಿ ಈ ಎರಡು ಕಾದಂಬರಿಯಲ್ಲಿ ವ್ಯತ್ಯಾಸ ಕಂಡುಬರುವುದು ಸಹಜ!

'ಕೇಂದ್ರ ವೃತ್ತಾಂತ'ದಲ್ಲಿ ಕಥೆ ಪ್ರಾರಂಭವಾಗುವುದು, ಖೇತವಾಡಿಯ 'ಖೇಮರಾಜ ಭವನ'ದ ಬಿಡಾರವೊಂದರಲ್ಲಿ ವಾಸಿಸುತ್ತಿದ್ದ, ರಾಮಜಿಭಾಯಿ-ಜಯಂತಿ ದಂಪತಿಯ ಮಗಳು, ರೇಖಾ, '...ಒಂದು ರಾತ್ರಿ ಯಾರಿಗೂ ಹೇಳದೇ ಕೇಳದೇ ಎನ್ನುವಂತೆ ಯಾರೊಡನೆಯೋ ಓಡಿ ಹೋದಳು' ಎಂಬ, ಅದೇ ವಠಾರದಲ್ಲಿ ವಾಸಿಸುತ್ತಿದ್ದವರು 'ತೀರ ಕ್ಷುಲ್ಲಕವೆಂದು ತಿಳಿದ ಒಂದು ಸಾಮಾನ್ಯ ಘಟನೆ'ಯೊಂದಿಗೆ. ಆದರೆ, ಅದೇ 'ಕ್ಷುಲ್ಲಕ ಘಟನೆ' ಅದೇ ವಠಾರದ ಚಾಳಿಯೊಂದರಲ್ಲಿ ವಾಸಿಸುತ್ತಿದ್ದ, 'ನಿರೂಪಕ' ಅಭಿಜಿತ್‌ನ ಜೀವನದಲ್ಲಿ ಜಟಿಲ ರೀತಿಯಿಂದ ಸುತ್ತಿಕೊಂಡು, ಅವನು ನಿರೀಕ್ಷಿಸದಂಥ ಅನೇಕ ಸಂದಿಗ್ಧ ಪರಿಸ್ಥಿತಿಗಳಿಗೆ ಗುರಿಮಾಡುತ್ತದೆ.

ಕಾದಂಬರಿಯ ಕಥಾವಸ್ತುವಿನ ಮೇಲೆ ಒಂದೆರಡು ಮಾತುಗಳು: ಹಿಂದೆ ತಿಳಿಸಿದಂತೆ ಇದೊಂದು ನಿರೂಪಣಾ ಕತೆಯಾಗಿ ಮುಂದುವರಿಸಿಕೊಂಡು ಹೋಗುತ್ತದೆ. ರೇಖಾ ಎಂಬ ಒಬ್ಬ ತರುಣಿಯು ಒಬ್ಬ ಯುವಕನೊಡನೆ ಓಡಿಹೋಗುವುದೇ ಇಲ್ಲಿಯ ಕಥಾ ಬೆಳವಣಿಗೆಗೆ ಕಾರಣ. ಆದರೆ, ಕತೆ ಮುಂದುವರಿಯುತ್ತಿದ್ದಂತೆ ಈ ಪ್ರಕರಣದ ಪ್ರಾಮುಖ್ಯತೆ ನೇಪಥ್ಯಕ್ಕೆ ಸರಿದು, ಅದರಿಂದ ಉದ್ಭವವಾದ ಹಲವು ಇತರ ಪ್ರಕರಣಗಳೇ ಮುಖ್ಯ ರಂಗಸ್ಥಳವನ್ನು ಆಕ್ರಮಿಸುತ್ತವೆ. ಈ ಹೊಸ ಪ್ರಸಂಗಗಳಲ್ಲಿ, ಅರುಣಾ ಮತ್ತು ಉಜ್ವಲಾ ಎಂಬ ರಾಮಜಿಭಾಯಿಯವರ ಇನ್ನಿಬ್ಬರು ವಯಸ್ಸಿಗೆ ಬಂದ ತರುಣಿಯರು ಮುಖ್ಯ ಪಾತ್ರ ವಹಿಸುತ್ತಾರೆ. ಇದು ಪ್ರಾಯಶಃ ಕಥಾ ವಿನ್ಯಾಸದ ಹೊಸ ಮುಖಕ್ಕೆ ಕಾರಣವೆನ್ನಬಹುದೇನೋ! ರೇಖಾ ಓಡಿಹೋದ ವಿಷಯ ಖೇಮರಾಜ ನಿವಾಸದ ಚಾಳಿಯವರೆಲ್ಲರ ಕುತೂಹಲವನ್ನು ಕೆರಳಿಸುತ್ತದೆ. ರಾಮಜಿಭಾಯಿ-ಜಯಂತಿಯರ ಸಮಸ್ಯೆ ಇಲ್ಲಿ ಖೇತವಾಡಿಯ ದಿನ-ನಿತ್ಯ ಚರ್ಚೆಯ ವಸ್ತುವಾಗುತ್ತದೆ. ಈ ಘಟನೆ ಮುಂಬಯಿಯ ಇನ್ಯಾವುದಾದರೂ ಚಾಳಿಯಲ್ಲಿ ನಡೆದರೂ, ಅದು ಅಲ್ಲಿಯವರ ಸಮಸ್ಯೆಯೇ ಆಗುತ್ತಿತ್ತು. ಅದು ಮನುಷ್ಯ ಸ್ವಭಾವಕ್ಕೆ ಸಹಜವಾದುದೇ! ಆದರೆ, ಇದು ಅಭಿಜಿತ್‌ನ ಸಮಸ್ಯೆಯಾದುದು ಒಂದು ವಿಶೇಷ, ಹಾಗೂ ಅದು ಕತೆ ಮುಂದುವರಿಯುವುದಕ್ಕೊಂದು ಕಾರಣವೂ ಹೌದು. ಈ ಪ್ರಕರಣದಲ್ಲಿ ಅಭಿಜಿತ್‌ನ ತೊಡರುವಿಕೆಗೆ ಅವನು ಗುಪ್ತವಾಗಿ ರಾಮಜಿಭಾಯಿಯವರ ಹಿರಿಯ ಹೆಣ್ಣು ಹುಡುಗಿಯರಾದ - ಅರುಣಾ, ರೇಖಾ ಮತ್ತು ಉಜ್ವಲಾ - ಮೂವರನ್ನೂ ಮನಸಾರೆ ಮೆಚ್ಚಿದುದೇ ಕಾರಣವೆನ್ನಬಹುದು. ಈ ಮೆಚ್ಚುಗೆ ಸಾಮಾನ್ಯ ಮೆಚ್ಚುಗೆಯ 'ಪರಿಧಿ'ಯನ್ನು ದಾಟಿದ್ದು, ಅದು ಒಂದು ಬಗೆಯ ವ್ಯಾಮೋಹವೆಂದೇ ಹೇಳಬಹುದು. ಆದರೆ, ಅವನ ಈ ಸುಪ್ತ ಬಯಕೆಯ ಅರಿವು ಖೇಮರಾಜ ಭವನದ

ಚಾಳಿಯವರಿಗೆಲ್ಲ ತಿಳಿದಿರುವುದು ಒಂದು ಬಹಿರಂಗ ರಹಸ್ಯ! ಪರಿಣಾಮವಾಗಿ, ರೇಖಾಳ ಪಲಾಯನಕ್ಕೆ ಅಭಿಜಿತ್‌ನೇ ಕಾರಣನೆಂಬ ಅಪವಾದವೂ ಅವನ ಮೇಲೆ ಬೀಳುತ್ತದೆ. ಈ ಅಪವಾದವನ್ನು ಅವನ ಮೇಲೆ ಹೊರಿಸಿದವರಲ್ಲಿ ಮುಖ್ಯ ಕಾರಣರಾದವರ ಪೈಕಿ, ಅದೇ ಚಾಳಿಯಲ್ಲಿ ವಾಸಿಸುತ್ತಿದ್ದ ಒಬ್ಬ ಪತ್ರಕರ್ತ ಮಹಾಶಯ, ಮುಕುಂದರಾವ್ ಪ್ರಮುಖ. ಅವನು ನಡೆಸುತ್ತಿದ್ದ ವಾರ್ತಾ ಪತ್ರಿಕೆಯಲ್ಲೂ ಈ ಅನುಮಾನಾಸ್ಪದವಾದ ಅಪವಾದ ಪ್ರಕಟವಾಗುತ್ತದೆ. ಪರಿಣಾಮವಾಗಿ ಅಭಿಜಿತ್ ಪೊಲೀಸ್ ಲಾಕಪ್‌ನಲ್ಲೂ ಒಂದು ರಾತ್ರಿ ಕಾಲಕಳೆಯಬೇಕಾಗುತ್ತದೆ. ಮುಂದೆ ಒಂದು ಕಡೆ ರೇಖಾ ಓಡಿ ಹೋದುದು, ಪ್ರಭಾಕರನ್ ಎಂಬ ಒಬ್ಬ ಮಲಯಾಳೀ ತರುಣನೊಡನೆ ಎಂಬ ವಾರ್ತೆಯ ಬೆನ್ನಲ್ಲೇ, ಅವಳು ಓಡಿಹೋದ ತರುಣ ಒಬ್ಬ ಮುಸ್ಲಿಮ್ ಎಂಬ ವಾರ್ತೆಯೂ ಹಬ್ಬುತ್ತದೆ. ಕೆಲವು ದಿನಗಳಲ್ಲೇ ಪ್ರಭಾಕರನ್ ಖೇಮರಾಜ ಭವನದ ಚಾಳಿಯಲ್ಲಿ ಪ್ರತ್ಯಕ್ಷನಾದ ಸಂದರ್ಭವೂ ಬರುತ್ತದೆ. ಇದು ರೇಖಾಳ ಪ್ರೇಮಿ ಬೇರೊಬ್ಬನಾಗಿದ್ದಾನೆಂಬ ಹೊಸ ಮುಖ ಆ ಪ್ರಕರಣಕ್ಕೆ ಕಾರಣವಾಗಿ, ಆ ಪ್ರೇಮಿಯ ಗುರುತು ಇನ್ನಷ್ಟು ನಿಗೂಢವಾಗಲು ಎಡೆಮಾಡಿಕೊಡುತ್ತದೆ. ಒಟ್ಟಿನಲ್ಲಿ ಕಾದಂಬರಿಗೆ ಕಾರಣವಾಗಿದ್ದ ರೇಖಾ ಓಡಿಹೋದ ಪ್ರಸಂಗ, ಹಾಗೂ ಅವಳು ಯಾರ ಜೊತೆ ಓಡಿಹೋದಳೆಂಬ ಸುಳಿವೂ, ಕಾದಂಬರಿಯ ಕೊನೆಯವರೆಗೂ ನಿಗೂಢವಾಗಿದ್ದು, ಅದು ಬಗೆಹರಿಯದೇ ಕಾದಂಬರಿ ಅಂತ್ಯವಾಗುತ್ತದೆ. ಇದು ಅಸಾಮಾನ್ಯವಾಗಿ ಕಂಡುಬಂದಲ್ಲಿ ಆಶ್ಚರ್ಯವಿಲ್ಲ. ಅಥವಾ ಈ ರೀತಿಯ 'ಬೆಳವಣಿಗೆ'ಯೇ ಕಾದಂಬರಿಗೊಂದು ಹೊಸ ಮುಖ ಕೊಟ್ಟಿರಲು ಕಾರಣವಾಗಿ ರಬಹುದು. ಅದೇ ಇಲ್ಲಿಯ 'ಹೊಸ ತಂತ್ರ'ವಿದ್ದರೂ ಇದ್ದಿರಬಹುದು!

ಮುಂದೆ, ಪ್ರಭಾಕರನ್ ತಪಾಸಣೆಯಲ್ಲಿ ಇನ್ನೊಬ್ಬ ಮಲೆಯಾಳಿ – ರಾಮನ್ – ಎಂಬವನೊಬ್ಬನ ಪ್ರವೇಶವಾಗುತ್ತದೆ, ಕಾದಂಬರಿಯಲ್ಲಿ. ನನಗೇಕೋ ಈ ರಾಮನ್‌ನ ಪ್ರಸ್ತಾಪದ ಔಚಿತ್ಯ ಇನ್ನೂ ಅರ್ಥವಾಗಿಲ್ಲ. ಯಾಕೆಂದರೆ, ಕಾದಂಬರಿಯಲ್ಲಿ ಅವನ ಪ್ರವೇಶ ಆಕಸ್ಮಿಕವಾಗಿ ಕಂಡುಬಂದು, ಅವನ ಪ್ರಸ್ತಾಪ ಅಷ್ಟೇ ಅಕಸ್ಮಾತ್ತಾಗಿ, ರೇಖಾಳ ಪತ್ತೆ ಕಾರ್ಯದಲ್ಲಿ ಏನೊಂದೂ ಉಪಯೋಗವಿಲ್ಲದೆ, ಮರೆಯಾಗುವುದು. ಅಥವಾ, ರೇಖಾಳ ಜೊತೆ ಪಲಾಯನ ಮಾಡಿದವನು ಈ ರಾಮನ್‌ನೇ? ಹಾಗಿದ್ದಲ್ಲಿ, ಅವನೇಕೆ ಕಾದಂಬರಿಯಿಂದ ನಿಷ್ಕ್ರಮಿಸಿದ? ಇದು ಕಾದಂಬರಿಯ ನಿಗೂಢತೆಯನ್ನು ಹೆಚ್ಚಿಸುತ್ತದೆ, ಅದ್ಯಾವುದೋ ಕಾರಣಕ್ಕಾಗಿ!

ಕಾದಂಬರಿಯ ಶೀರ್ಷಿಕೆ, 'ಕೇಂದ್ರ ವೃತ್ತಾಂತ' ಇಲ್ಲಿ ಮಹತ್ವ ಪಡೆದಿದೆ; ಅಂದರೆ, ಈ ಕಾದಂಬರಿ 'ಕೇಂದ್ರ ವೃತ್ತಾಂತ' ಎಂದು ಕರೆಯಿಸಿಕೊಳ್ಳುವುದಕ್ಕೊಂದು ಮಹತ್ವವಾದ ಹಿನ್ನೆಲೆ ಇದೆ. ಕಾದಂಬರಿ ಪ್ರಾರಂಭವಾಗುವುದೇ ಈ ಹಿನ್ನೆಲೆಯಲ್ಲಿ.

ಒಮ್ಮೆ ಅಭಿಜಿತ್‌ನ ತಂದೆ ಆಸ್ಪತ್ರೆಯಲ್ಲಿದ್ದ ಸ್ನೇಹಿತರೊಬ್ಬರನ್ನು ನೋಡಲು ಮಗ ಅಭಿಜಿತ್‌ನನ್ನು ಕರೆದುಕೊಂಡು ಹೋದಾಗ ನಡೆದ ಒಂದು ಪುಟ್ಟ ಪ್ರಕರಣ ಈ ಕಾದಂಬರಿ ರೂಪುಗೊಳ್ಳಲು ಪ್ರೇರಣೆಯನ್ನು ಒದಗಿಸಿಕೊಟ್ಟಿದೆ. ಆ ಹಿನ್ನೆಲೆಯ ವಿವರ ಹೀಗಿದೆ: ಆ ಸ್ನೇಹಿತರು ತಮ್ಮ ಕೈಗೆ ಸಿಕ್ಕಿದ ವೃತ್ತಾಂತ ಪತ್ರಿಕೆಯೊಂದರಲ್ಲಿ ಒಂದು '...ವರ್ತುಲವನ್ನು ಬಿಡಿಸಿದರು. ವರ್ತುಲದ ಕೇಂದ್ರದಲ್ಲಿ, ಹಲವು ಬಾರಿ ಗೀರಿದಲ್ಲೇ ಗೀರಿ ಕುಂಕುಮದ ಬೊಟ್ಟಿನಷ್ಟು ದೊಡ್ಡ ಬಿಂದುವನ್ನು ರಚಿಸಿದರು. ವೃತ್ತದ ಗಡಿರೇಖೆಯ ಮೇಲೆ ಒಂದೆಡೆಯಲ್ಲಿ ಇಂಗ್ಲಿಷ್‌ನ 'ಜಿ' ಆಕಾರದ ಕಾಟು ಚಿಹ್ನೆಯನ್ನು ಬರೆದು ಎರಡೆರಡು ಬಾರಿ ಗೀರಿ ಆಕೃತಿಯನ್ನು ಸ್ಫುಟಗೊಳಿಸಿದರು.' ಅವರು ಆ ಆಕೃತಿಯನ್ನು ನೋಡಿ ತೃಪ್ತಿಪಡುತ್ತ, ಅಭಿಜಿತ್‌ನ ತಂದೆಯವರೊಡನೆ ತಾನೊಂದು ಕಾದಂಬರಿ ಬರೆಯಲು ಇಚ್ಛಿಸುವೆನೆಂದು ಹೇಳಿ, ಅದರ ಕಥಾವಸ್ತುವನ್ನು ತಾವು ಬರೆದ ಆಕೃತಿಯನ್ನು ತೋರಿಸುತ್ತ, ಈ ರೀತಿ ವಿವರಿಸಿದರು: '...ಇಲ್ಲಿ ಈ ಪರಿಧಿಯ ಮೇಲೆ ಕುಳಿತವನೊಬ್ಬನು, ಈ ಕೇಂದ್ರದಲ್ಲಿ ನಡೆಯುತ್ತಿದ್ದ ಘಟನೆಗಳನ್ನೆಲ್ಲ ಅವು ನಡೆಯುತ್ತಿದ್ದ ಹಾಗೇ ವರದಿ ಮಾಡುತ್ತ ಹೋಗುತ್ತಾನೆ. ವರದಿ ಮಾಡುವಾಗ ಅವನು ತಿಳಿದುಕೊಂಡಿದ್ದೇನೆಂದರೆ–ದೂರ ಪರಿಧಿಯ ಮೇಲೆ ಕುಳಿತಿರುವ ತಾನು, ಹಾಗೆ ಕುಳಿತಿರುವ ಕಾರಣಕ್ಕೇ ಕೇಂದ್ರದಲ್ಲಿ ನಡೆಯುತ್ತಿರುವ ವಿದ್ಯಮಾನಗಳಿಗೆ ಯಾವುದೇ ರೀತಿಯ ಸಂಬಂಧ ಇಲ್ಲದವನು...ಆದರೆ ವರದಿ ಮಾಡುತ್ತ ಹೋದಹಾಗೆ, ...ತಾನು ಯಾವುದನ್ನು ಒಂದು ವರ್ತುಲದ ಪರಿಧಿಯ ಮೇಲಿನ ಜಾಗವೆಂದು ತಿಳಿದಿದ್ದನೋ ಅದು ಇನ್ನೊಂದೇ ವರ್ತುಲದ ಕೇಂದ್ರವಾಗಿದೆ ಮಾತ್ರವಲ್ಲ, ಅದರ ಪರಿಧಿಯ ಮೇಲೆ ಕುಳಿತವನೊಬ್ಬನ ವರದಿಗೆ ತಾನೇ ವಸ್ತುವಾಗಿದ್ದಾನೆ' ಎಂದು. ಆದರೆ, ಆ ಸ್ನೇಹಿತರ ಆಸೆ ಕೈಗೂಡಲಿಲ್ಲ; ಅಂದೇ ರಾತ್ರಿ ಅವರು ತೀರಿಕೊಂಡರು. ಈ ಸಂಗತಿ ಮತ್ತು ಅವರು ಬಿಡಿಸಿದ ಆಕೃತಿ ಅಭಿಜಿತ್‌ನ ಮೇಲೆ ಆಳವಾದ ಪ್ರಭಾವ ಬೀರಿತು. ಹಲವು ವರ್ಷಗಳ ಮೇಲೆ, ಆ ಮಹಾಶಯರು ಸಂಪೂರ್ಣಗೊಳಿಸದ ಕಥಾವಸ್ತುವನ್ನೇ 'ಕೇಂದ್ರ'ವಾಗಿಟ್ಟುಕೊಂಡು, ಖೇತವಾಡಿಯಲ್ಲಿ ನಡೆದ ಒಂದು ಘಟನೆಯನ್ನು ನಿರೂಪಿಸುವಲ್ಲಿ ಈ ಕಾದಂಬರಿಯ ಸೃಷ್ಟಿಯಾಯ್ತು.

'ಕೇಂದ್ರ', 'ವರ್ತುಲ', 'ಪರಿಧಿ' – ಈ ಎಲ್ಲ ಶಬ್ದಗಳಿಗೆ ಈ ಕಾದಂಬರಿಯಲ್ಲಿ ವಿಶಿಷ್ಟವಾದ ಅರ್ಥವಿದೆ. ಇಲ್ಲಿ ಬರುವ ಹಲವು ಪಾತ್ರಗಳನ್ನು 'ಕೇಂದ್ರ'ದಲ್ಲಿಟ್ಟು, ನಿರೂಪಕ 'ಪರಿಧಿ'ಯಲ್ಲಿ ಕುಳಿತು ವೀಕ್ಷಿಸುತ್ತಿದ್ದೇನೆಂದು ತಿಳಿದರೂ, ಕಥೆಯು ಅನಾವರಣವಾಗುತ್ತಿದ್ದಂತೆ, ಅದು ಹಲವು ತಿರುವು–ಮುರುವುಗಳಿಗೊಳಗಾಗಿ, ರಭಸದಿಂದ ತಿರುಗುತ್ತಿರುವ ಬುಗುರಿಯಂತೆ, ಕೇಂದ್ರ ಪರಿಧಿಗಳು ಒಂದರೊಳಗೊಂದು ಕರಗಿ ಹೋಗುವುದನ್ನು ಕಾದಂಬರಿಯಲ್ಲಿ ಗಮನಿಸಬಹುದು. ಇದೇ ಈ ನಿರೂಪಣಾ

ಕತೆಯ ವೈಶಿಷ್ಟ್ಯ. 'ಕೇಂದ್ರ' ವಸ್ತುವಾಗಿದ್ದ ರೇಖಾಳ ಪಲಾಯನದಲ್ಲಿ ಅನವಶ್ಯಕ ಆಸಕ್ತಿ ವಹಿಸಿ, 'ಪರಿಧಿ'ಯಲ್ಲಿ ನಿಂತು ನೋಡುತ್ತಿರುವ ಅಭಿಜಿತ್, ಅವನಿಗೆ ತಿಳಿಯದಂತೆ ಒಮ್ಮೊಮ್ಮೆ ಇದ್ದಕ್ಕಿದ್ದಂತೆ 'ಕೇಂದ್ರ'ವಾಗಿಬಿಡುತ್ತಾನೆ. ಅಲ್ಲದೆ, ಮುಂದೆ ರೇಖಾಳ ಪಲಾಯನದ ಮಹತ್ವ ಕಡಿಮೆಯಾಗಿ ಆ ಸ್ಥಾನದಲ್ಲಿ ಅರುಣಾ, ಉಜ್ವಲಾ, ಮತ್ತಿತರರು ಸೇರಿದಂತೆ, ಕೇಂದ್ರ ಪರಿಧಿಗಳು ಒಂದರೊಳಗೊಂದು ಕರಗುವುದನ್ನು ಕಾದಂಬರಿಯಲ್ಲಿ ಗಮನಿಸಬಹುದು. ತಾನೇ ನೇಯ್ದ ಜಾಲದ ಮಧ್ಯೆ ಕುಳಿತ ಜೇಡನನ್ನು ಜಾಲದಲ್ಲಿ ಸಿಕ್ಕಿಬಿದ್ದ ಹುಳುಗಳು ಕುಕ್ಕುತ್ತಿರುವ ಪಾಡು ಅಭಿಜಿತ್‌ನದಾಗಿರಬೇಕು. ತನಗೆ ಯಾವುದೇ ಸಂಬಂಧವಿಲ್ಲದ ರೇಖಾಳ ಪಲಾಯನದ ಪ್ರಕರಣದಿಂದ ಬಿಡುಗಡೆ ಹೊಂದಿ, ತನ್ನನ್ನು ತಾನೇ ಇರಿಸಿಕೊಂಡ 'ಕೇಂದ್ರ' ಸ್ಥಾನದಿಂದ 'ಪರಿಧಿ'ಗೆ ವರ್ಗಾಯಿಸಿಕೊಳ್ಳಲು ಮಾಡಿದ ಅವನ ಪ್ರಯತ್ನಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ನಿಷ್ಫಲವಾಗಿ, ಅವನನ್ನು ಅದೇ 'ಕೇಂದ್ರ' ಸ್ಥಾನದಲ್ಲಿರಿಸುತ್ತಿತ್ತು, ಇದಕ್ಕೆ ಕಾರಣ ಕತೆಯಲ್ಲಿ ಸಂಭವಿಸುತ್ತಿರುವ ಹಲವಾರು ತಿರುವು–ಮುರುವುಗಳು. ಆಶ್ಚರ್ಯವೆಂದರೆ, ಕತೆಗೇ ಚಾಲನೆ ಕೊಟ್ಟ ರೇಖಾಳ ಪಲಾಯನದ ಪರಿಣಾಮವಾಗಿ ಉದ್ಭವಿಸಿದ 'ರೇಖಾ ನಿಜಕ್ಕೂ ಏನಾಗಿರಬಹುದು?' ಎಂಬ ಪ್ರಶ್ನೆ ಕೊನೆಯವರೆಗೂ ಪ್ರಶ್ನೆಯಾಗಿಯೇ ಉಳಿಯುತ್ತದೆ. ಆ ಪ್ರಶ್ನೆಯನ್ನು ಕೆದಕಿದವರಲ್ಲಿ ಗೋದಾವರಿಯೆಂಬವಳ ಕೈವಾಡ ಸ್ವಲ್ಪಮಟ್ಟಿಗೆ ಇದ್ದಿತ್ತು. ಆದರೂ, ಪ್ರಶ್ನೆ ಮಾತ್ರ ಕೊನೆಗೂ ಬಗೆಹರಿಯುವುದಿಲ್ಲ.

ತಂದೆಯ ಸ್ನೇಹಿತರು ಬರೆದ ಆಕೃತಿ, ಅಭಿಜಿತ್‌ನ ಮೇಲೆ ಎಷ್ಟೊಂದು ಪರಿಣಾಮ ಮಾಡಿತ್ತೆಂದರೆ, ಆ ಆಕೃತಿ ಅವನ ಕೆಲಸದ ನಿಮಿತ್ತವೂ ಕಾಡುತ್ತಿತ್ತು. ಅವನು ವ್ಯವಸಾಯಿಕ ಸಮಸ್ಯೆಗಳಿಗೆ ರಚಿಸಿದ ಕೆಲವು ಆಕೃತಿಗಳು, ನಿತ್ಯ ಜೀವನದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದರಲ್ಲೂ ಸಹಾಯವಾಗಬಲ್ಲುದೆಂದು ಅರಿವಾಗಿ, ಅದು ಅವನ ಬದುಕಿನ ಮೇಲೆ ಪರಿಣಾಮ ಮಾಡುತ್ತಲೇ ಇದ್ದಿತ್ತು. ಅವನು ಕೆಲಸ ಮಾಡುವ ಫ್ಯಾಕ್ಟರಿಯಲ್ಲೆ ಟ್ರೈನಿಂಗ್ ಕ್ಲಾಸ್‌ಗಳನ್ನು ನಡೆಸುತ್ತಿದ್ದ ಡಾ. ಪಟಣಕರ್ ಮತ್ತು ಡಾ. ಕೃಷ್ಣನ್ ಇವರುಗಳು ರಚಿಸಿದ ಕೆಲವು ಪಟಗಳು ಅಭಿಜಿತ್‌ನ ಭಾವನೆಗಳ ಮೇಲೆ ವಿಲಕ್ಷಣ ಪರಿಣಾಮವನ್ನುಂಟುಮಾಡಿದ್ದವು. ಡಾ ಪಟಣಕರ್‌ರ ಪಾಲಿಮರ್ ಪಾಠಕ್ಕೆ ಸಂಬಂಧಿಸಿದ ಅಟಾಮಿಕ್ ಮಾಡೆಲ್‌ನ ಪಟ ಅವನ ಮೇಲೆ ವಿಶೇಷವಾದ ಪರಿಣಾಮವನ್ನುಂಟುಮಾಡಿತ್ತು. ಸೌರಮಂಡಲವನ್ನು ಹೋಲುವ ಈ ಪಟದ ಮಧ್ಯೆ ಸಣ್ಣ ಕೇಂದ್ರದ ಒಳಗೆ ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳು ಮನೆಮಾಡಿದ್ದು, ಆ ಕೇಂದ್ರದ ಸುತ್ತಲೂ ಇರುವ ಎಲೆಕ್ಟ್ರಾನ್ ಶೆಲ್‌ಗಳು ಅವನಿಗೆ ತನ್ನ ತಂದೆಯ ಸ್ನೇಹಿತರು ಬರೆದ ಕೇಂದ್ರ–ವರ್ತುಲದ ಆಕೃತಿಯ ನೆನಪನ್ನೇ ತರುತ್ತಿತ್ತು. ಆ ವಿವಿಧ ಎಲೆಕ್ಟ್ರಾನ್ ಶೆಲ್‌ಗಳಲ್ಲಿ ತನ್ನ ಬದುಕಿನಲ್ಲಿ ಹಾದು ಹೋದ ವಿವಿಧ ವ್ಯಕ್ತಿಗಳನ್ನು ಕೂರಿಸಿ,

ಅಂಥವರ ಸಂಪರ್ಕದಿಂದ ಪರಿಣಮಿಸಿದ ಅನುಭವಗಳನ್ನು ಮೆಲುಕಲು ಆ ಪಟಗಳು ದಾರಿ ಮಾಡಿಕೊಟ್ಟಿದ್ದವು. ರಾಮಜಿಭಾಯಿಯವರ ಪುತ್ರಿಯರಾದ ಅರುಣಾ, ಉಜ್ವಲಾ ಅಂಥ ವ್ಯಕ್ತಿಗಳಲ್ಲಿ ಇಬ್ಬರು ಪ್ರಮುಖರು, ಹಾಗೂ ಅವನ ಬದುಕಿನ ಮೇಲೆ ಅಪಾರ ಪರಿಣಾಮವನ್ನು ಉಂಟುಮಾಡಿದವರು. ಒಟ್ಟನಲ್ಲಿ, ತಂದೆಯ ಸ್ನೇಹಿತರು ಬರೆದ ಆಕೃತಿ ಅಭಿಜಿತ್‌ನನ್ನು ಸದಾ ಕಾಡುತ್ತಲೇ ಇದ್ದುದಲ್ಲದೆ ಅವನನ್ನು ಇಲ್ಲದ ಗೊಂದಲಗಳಿಗೆ ಸಿಲುಕಿಸಿತ್ತು. ತನ್ನದಲ್ಲದ ಸಮಸ್ಯೆಯನ್ನು ತನ್ನದಾಗಿ ಮಾಡಿಕೊಂಡು, ಸಮಸ್ಯೆಯ ಕೇಂದ್ರದಲ್ಲಿ, ಜೇಡರ ಜಾಲದಲ್ಲಿ ಸಿಲುಕಿದಂತೆ ಸಿಲುಕಿ, ಅಲ್ಲಿಂದ ಬಿಡಿಸಿಕೊಳ್ಳಲಾಗದೇ, ಅಭಿಜಿತ್ ಹಲವಾರು ಮಾನಸಿಕ ಮತ್ತು ಇತರ ತೊಂದರೆಗಳಿಗೊಳಗಾಗುತ್ತಾನೆ. ಆ ಕೇಂದ್ರದಿಂದ ಬಿಡುಗಡೆಯಾಗದಿರಲು ಬಹುಮಟ್ಟಿಗೆ ಅರುಣಾ, ರೇಖಾ, ಮತ್ತು ಉಜ್ವಲಾ, ಈ ಮೂವರೂ ಅಭಿಜಿತ್ ಮೇಲೆ ಮೋಹಪರವಶರಾದುದೇ ಕಾರಣವಾಗುತ್ತದೆ. ಆದರೆ, ಅಲ್ಲಿಂದ ಬಿಡುಗಡೆ ಹೊಂದಲು, ಅವನ ಸೋದರತ್ತೆ ಮತ್ತು ಅವನು ಕೈಹಿಡಿದ ಹೆಂಡತಿ, ಜಾಹ್ನವಿ, ಇವರಿಬ್ಬರೂ ಅವನ ಸಹಾಯಕ್ಕೆ ಬರುತ್ತಾರೆ. ಕೇಂದ್ರ, ಪರಿಧಿಗಳಲ್ಲಿ ಕುಣಿಯುತ್ತಿರುವ ಪಾತ್ರಧಾರಿಗಳಿಂದಲೇ ಈ ಕಾದಂಬರಿ ಮುಂದುವರಿಯುತ್ತದೆ. ರೇಖಾಳಿಂದ ಪ್ರಾರಂಭವಾದ ಕತೆ, ಅರುಣಾ, ಉಜ್ವಲರಿಂದ ಮುಂದುವರಿದು, ಅಭಿಜಿತ್ ಅದರಲ್ಲಿ ಭಾಗಿಯಾಗಿದ್ದು, ಕೊನೆಯಲ್ಲಿ ಯಾರ ಸಮಸ್ಯೆಯೂ ಆಗದೆ ಮುಕ್ತಾಯವಾಗುತ್ತದೆ.

ಈ ಕತೆಗೆ ರೇಖಾ ಮತ್ತು ಉಜ್ವಲಾರೇ ಜೀವಾಳವೆನ್ನಬಹುದು. ಇವರಿಬ್ಬರಲ್ಲದೇ ಅರುಣಾಳದೂ ಸಾಕಷ್ಟು ಮುಖ್ಯ ಪಾತ್ರವಿದೆ. ರೇಖಾ ಕತೆ ಪ್ರಾರಂಭವಾಗುವುದಕ್ಕೆ ಕಾರಣಳಾಗಿ, ಕಾದಂಬರಿಯ ಮೊದಲ ಹಂತಗಳಲ್ಲಿ ಕೇಂದ್ರ ಸ್ಥಾನ ಪಡೆಯುತ್ತಾಳೆ. ಆದರೆ, ಕತೆಯಲ್ಲಿ ಎಲ್ಲೂ ಅವಳು ಪ್ರತ್ಯಕ್ಷ ಪಾತ್ರ ವಹಿಸುವುದಿಲ್ಲ. ಕತೆ ಮುಂದುವರಿಯುತ್ತಿದ್ದಂತೆ, ಅವಳ ಪಲಾಯನದ ಪರಿಣಾಮವಾಗಿ, ಬೇರೆ ಬೇರೆ ಸಮಸ್ಯೆಗಳು ಉದ್ಭವಿಸುವುದಕ್ಕೆ ಕಾರಣಳಾಗುತ್ತಾಳೆ. ಕತೆ ಹಂತ-ಹಂತವಾಗಿ ಹರಡುತ್ತ ಹೋದಂತೆ ಹಲವು ತಿರುವು-ಮುರುವುಗಳಿಂದಾಗಿ, ಅಲ್ಲಲ್ಲಿ ಅರುಣಾ ಮತ್ತು ಉಜ್ವಲಾರು ಕೇಂದ್ರ ಸ್ಥಾನವನ್ನು ಆಕ್ರಮಿಸುತ್ತಾರೆ. ಅದರಲ್ಲೂ ಉಜ್ವಲಾ ಆತ್ಮಹತ್ಯೆ ಮಾಡಿಕೊಂಡ ಮೇಲೂ, ಅವಳು ಬಿಟ್ಟು ಹೋದ ಪತ್ರವೊಂದು ಮುಖ್ಯ ಸ್ಥಾನ ಪಡೆದು, ಅವಳು ಕತೆ ಅನಿರೀಕ್ಷಿತ ತಿರುವಿಗೊಳಗಾಗುವುದಕ್ಕೆ ಕಾರಣಳಾಗುತ್ತಾಳೆ. ಅರುಣಾಳ ಪಾತ್ರವೂ ಕಡಿಮೆಯೇನಲ್ಲ. ಉಜ್ವಲಾಳ ಪತ್ರವನ್ನು ಅಭಿಜಿತ್‌ಗೆ ತಲುಪಿಸಲು ಅವಳ ಪಾತ್ರ ಮುಖ್ಯವಾಗಿದೆ. ಆದರೆ, ಒಟ್ಟಾರೆ ನೋಡಿದಾಗ, ರೇಖಾಳಿಂದ ಪ್ರಾರಂಭವಾದ ಈ ಕತೆ, ಉಜ್ವಲಾಳಿಂದ

ಮುಂದುವರಿಯುತ್ತ, ಅಭಿಜಿತ್‌ನಿಂದ ಕೊನೆಗೊಳ್ಳುತ್ತದೆಯೇ? – ಎಂಬ ಭ್ರಮೆ ಓದುಗರಲ್ಲಿ ಮೂಡಿ ಬಂದರೆ ಆಶ್ಚರ್ಯವೇನಿಲ್ಲ.

ಈ ಕಾದಂಬರಿಯಲ್ಲಿ ಬರುವ ಇತರ ಪಾತ್ರಗಳಲ್ಲಿ ಸೋದರತ್ತೆ, ಜಾಹ್ನವಿ, ಗೋದಾವರಿ, ಮುಕುಂದ ರಾವ್ – ಇವರದು ಮುಖ್ಯವೆಂಬುದು ನನ್ನ ಅನಿಸಿಕೆ. ಮೊದಲಿನ ಮೂವರು ಅಭಿಜಿತ್‌ನ ಯೋಗಕ್ಷೇಮಕ್ಕಾಗಿ ದುಡಿದವರಾದರೆ, ಪತ್ರಕರ್ತನಾದ ಮುಕುಂದ ರಾವ್, ಅಭಿಜಿತ್‌ನ ಕೆಡುಕನ್ನೇ ಬಯಸಿ, ಅದಕ್ಕಾಗಿ ದುಡಿದವನು. ಎಲ್ಲರೂ ಅಭಿಜಿತ್‌ನ ಬದುಕಿನ ಮೇಲೆ ಅಪಾರ ಪ್ರಭಾವ ಬೀರಿದ್ದಾರೆ. ಸೋದರತ್ತೆಯ ಪಾತ್ರವಂತೂ ನನಗೆ ಬಹಳ ವಿಶಿಷ್ಟವಾಗಿ ಕಂಡು ಬಂತು. ತಂದೆಯನ್ನು ಕಳೆದುಕೊಂಡಮೇಲೆ ಅಭಿಜಿತ್‌ನ ಯೋಗಕ್ಷೇಮವನ್ನು ಅವನ ಸೋದರತ್ತೆಯೇ ನೋಡಿಕೊಳ್ಳುತ್ತಿದ್ದಳು. ಬರಿಯ ಊಟೋಪಚಾರವಲ್ಲದೆ, ಅವನಿಗೆ ಎಲ್ಲ ರೀತಿಯ ಸಲಹೆಗಳನ್ನೂ ಕೊಟ್ಟು, ಅಭಿಜಿತ್‌ನ ಜೀವನದ ಗುರಿಯನ್ನು ತಿದ್ದಲೂ, ಅವನ ದಾಂಪತ್ಯ ಜೀವನವನ್ನು ರೂಪಿಸುವುದರಲ್ಲೂ ಅವಳು ಮುಖ್ಯ ಪಾತ್ರದಾರಳಾಗಿದ್ದಳು. ಈ ಸೋದರತ್ತೆಯ ಹೆಸರು 'ನರ್ಮದಾ' ಎಂದಿದ್ದು, ಅದು ಕಾದಂಬರಿಯಲ್ಲಿ ಒಂದು ಕಡೆ ಮಾತ್ರ ಉಲ್ಲೇಖವಾಗಿದ್ದುದು ನಮ್ಮ ಗಮನಕ್ಕೆ ಬೀಳುತ್ತದೆ. ಇದಕ್ಕೆ ಏನಾದರೂ ಕಾರಣವಿದ್ದಿರಬಹುದೇ? ಒಮ್ಮೆ ಅಭಿಜಿತ್, ಹಿಂದೆ ನಡೆದ ತನ್ನ ಅನುಭವವನ್ನು ಸೋದರತ್ತೆಗೆ ವಿವರಿಸಿದಾಗ, ಅವಳೂ, ಅವನ ಹೆಂಡತಿ ಜಾಹ್ನವಿಯೂ ಅದನ್ನು ಕಾದಂಬರಿಯಾಗಿ ಬರೆಯಲು ಉತ್ತೇಜಿಸಿದ್ದರು. ಆಗ ಸೋದರತ್ತೆ ಹೇಳಿದ – 'ನನ್ನ ಹೆಸರನ್ನು ಮಾತ್ರ ಎಲ್ಲೂ ತರಬೇಡ' ಎಂಬ ಮಾತಿನ ಸಂಕೇತ ಇಲ್ಲಿ ಅಡಗಿರಬಹುದು.

ಹಿಂದೊಮ್ಮೆ ಸೋದರತ್ತೆಯ ಮೇಲೆ ಅಪವಾದ ಬಿದ್ದಿದ್ದು, ಅವಳು ಮುಕುಂದ ರಾವ್‌ನ ತಂದೆಯ ಕಿರುಕುಳಕ್ಕೊಳಗಾಗಬೇಕಾಯ್ತು. ಖೇತವಾಡಿಯ ಚಾಳಿಯೊಂದರಲ್ಲಿ ವಾಸಿಸುತ್ತಿದ್ದ, ಅಭಿಜಿತ್‌ನ ತಂದೆಯ ಆತ್ಮೀಯರಲ್ಲೊಬ್ಬರಾದ, ಪರಶುರಾಮ ಎಂಭವರೊಡನೆ ಸೋದರತ್ತೆಯ ಪ್ರೇಮ ಪ್ರಕರಣವೆನ್ನಲಾದ ಸಂಗತಿಯನ್ನು (ಈ ಪ್ರೇಮ ಪ್ರಕರಣ ಕಾದಂಬರಿಯಲ್ಲಿ ಬಹಳ ಸೂಕ್ಷ್ಮವಾಗಿಯೂ, ನವಿರಾಗಿಯೂ ವ್ಯಕ್ತವಾಗಿದೆ) ಮುಕುಂದ ರಾವ್‌ನ ತಂದೆ ಬಣ್ಣ ಹಚ್ಚಿ ಬಯಲಿಗೆಳೆದ ಪರಿಣಾಮವಾಗಿ ಪರಶುರಾಮರು ಖೇತವಾಡಿಯನ್ನು ಬಿಡಬೇಕಾದ ಪ್ರಸಂಗ ಬಂದೊದಗಿತ್ತು. ಅದಲ್ಲದೆ, ಮುಕುಂದರಾವ್ ಆ ಪ್ರಕರಣವನ್ನು ತನ್ನ ಲಾಭಕ್ಕೆ ಉಪಯೋಗಿಸಿಕೊಂಡು, ಸೋದರತ್ತೆಯನ್ನು ಕೆಡಿಸಲೂ ಪ್ರಯತ್ನಪಟ್ಟಿದ್ದ ಎನ್ನುವ ಸಮಾಚಾರವೂ ಹೊರಬರುತ್ತದೆ. ಇವೆಲ್ಲವೂ ಮೇಲೆ ತಿಳಿಸಿದ ಸೋದರತ್ತೆಯ ಮಾತಿಗೆ ಕಾರಣವಿದ್ದಿರಲೂಬಹುದು. ಅಭಿಜಿತ್ ಬರೆಯಬಹುದಾದ ಕಾದಂಬರಿಯಲ್ಲಿ ಈ ಎಲ್ಲ ಹಿಂದಿನ ಘಟನೆಗಳು

ಬೆಳಕಿಗೆ ಬಂದು, ತನ್ನ ಹೆಸರು ಕೆಡಬಹುದು ಎಂಬ ಭಯ ಸೋದರತ್ತೆಗೆ ಇದ್ದಿದ್ದರಲ್ಲಿ ಆಶ್ಚರ್ಯವಿಲ್ಲ. ಈಗ ಮುಕುಂದರಾವ್, ರೇಖಾ ಓಡಿಹೋದ ಪ್ರಕರಣಕ್ಕೆ ಅಭಿಜಿತ್‌ನನ್ನು ಜೋಡಿಸಿ, ಅವನಿಗೆ ಸಾಕಷ್ಟು ಕಿರುಕುಳ ಕೊಡುತ್ತಿದ್ದ. ಆ ಪರಿಸ್ಥಿತಿಯಿಂದ ಅಭಿಜಿತ್‌ನನ್ನು ರಕ್ಷಿಸಲು ಸೋದರತ್ತೆ ಮಾಡಿದ ಪ್ರಯತ್ನಗಳು ಅಷ್ಟಿಷ್ಟಲ್ಲ. 'ನಿನಗೆ ಬೇಡದ ಉಪದ್ವ್ಯಾಪಗಳಲ್ಲಿ ಸಿಕ್ಕಿಹಾಕಿಕೊಳ್ಳದೇ ಜೀವಕ್ಕೆ ಚೈನಿಯೇ ಬೀಳುವುದಿಲ್ಲವೇನೋ' ಎಂದು ಅವನನ್ನು ಆಗಾಗ್ಗೆ ಅವಳು ಛೇಡಿಸುತ್ತಿದ್ದಳು. ಅಂಥ 'ಉಪದ್ವ್ಯಾಪ'ಗಳಿಂದ ಹೊರತರಲು ಅವಳು ಅವನನ್ನು ಜಾಹ್ನವಿಯೊಡನೆ ವಿವಾಹವಾಗಲೂ, ಖೇತವಾಡಿ ಯನ್ನು ಬಿಟ್ಟು, ಸಾಂತಾಕ್ರೂಸ್‌ನಲ್ಲಿ ಮನೆ ಕೊಳ್ಳಲೂ ಉತ್ತೇಜಿಸುತ್ತಾಳೆ ಹಾಗೂ ಸಫಲಳೂ ಆಗುತ್ತಾಳೆ. ತನ್ನಿಂದ ಸಾಧ್ಯವಾಗದ ಕೆಲವು ಸಲಹೆಗಳನ್ನು ಪರಶು ರಾಮರಿಂದಲೂ ಹೇಳಿಸುತ್ತಾಳೆ. ರೇಖಾಳ ಪಲಾಯನದಿಂದ ಉದ್ಭವಿಸಿದ ಹಲವಾರು ಪ್ರಕರಣಗಳಲ್ಲಿ ಅಭಿಜಿತ್ ತನ್ನನ್ನು ತಾನೇ ಅನವಶ್ಯಕವಾಗಿ ತೊಡಗಿಸಿಕೊಂಡಾಗ, ಅದರಿಂದಾಗುವ ಹಲವು ಪರಿಣಾಮಗಳನ್ನು ಸೋದರತ್ತೆ ಅವನಿಗೆ ಅರಿವು ಮಾಡಿಕೊಡುತ್ತಾಳೆ. ಅವಳು ಅಭಿಜಿತ್‌ಗೆ ಸೋದರತ್ತೆಯೂ ಹೌದು, ತಾಯಿಯೂ ಹೌದು, ಹಿತಚಿಂತಕಳೂ ಹೌದು; ಮೇಲಾಗಿ ಅವೆಲ್ಲವೂ ತನ್ನ ಕರ್ತವ್ಯಗಳೆಂದೂ ಅವಳು ತಿಳಿದಿದ್ದಳು. ಒಟ್ಟಿನಲ್ಲಿ, ಸೋದರತ್ತೆಯ ಪಾತ್ರ ಈ ಕಾದಂಬರಿಯಲ್ಲಿ ಹೆಚ್ಚಿನ ಸದ್ದು-ಗದ್ದಲಗಳಿಲ್ಲದೆ ಓದುಗರ ಗಮನ ಸೆಳೆಯುವುದರಲ್ಲಿ ಯಶಸ್ಸು ಗಳಿಸಿದೆ.

ಜಾಹ್ನವಿಯ ಪಾತ್ರವೂ ಓದುಗರ ಗಮನವನ್ನು ವಿಶೇಷವಾಗಿ ಸೆಳೆಯುತ್ತದೆ. ಜಾಹ್ನವಿ ಮತ್ತು ಅಭಿಜಿತ್‌ರ ಸಂಬಂಧ ಬೆಳೆದು ವಿವಾಹದಲ್ಲಿ ಪರಿಣಮಿಸಲು ಸೋದರತ್ತೆಯೇ ಕಾರಣ. ಜಾಹ್ನವಿಗೆ, ಅಭಿಜಿತ್ ಅನವಶ್ಯಕವಾಗಿ ರೇಖಾ ಮತ್ತು ಅವಳ ಸೋದರಿಯರಾದ ಅರುಣಾ ಮತ್ತು ಉಜ್ವಲಾರ ಸಮಸ್ಯೆಗಳಲ್ಲಿ ತೊಡಗಿಸಿಕೊಂಡುದರ ಅರಿವು ಇದೆ. ಮಾತ್ರವಲ್ಲ; ಅಭಿಜಿತ್ ಆ ಮೂವರೂ ತರುಣಿಯರ ಸೌಂದರ್ಯಕ್ಕೆ ಮಾರು ಹೋಗಿದ್ದಾನೆ ಮತ್ತು ಆ ತರುಣಿಯರೂ ಅಭಿಜಿತ್‌ನಲ್ಲಿ ಮೋಹಿತರಾಗಿದ್ದರೆಂಬುದನ್ನೂ ಅರಿತಿದ್ದಳು. ಆದಾಗ್ಯೂ, ಅವಳು ಮತ್ಸರಕ್ಕೊಳಗಾಗದೆ, ಅಭಿಜಿತ್‌ನನ್ನು ತನ್ನ ಪ್ರೇಮಪಾಶದಲ್ಲಿ ಸೆಳೆದುಕೊಳ್ಳುತ್ತಾಳೆ. ಮುಕುಂದರಾವ್‌ನ ಕುತಂತ್ರದಿಂದ ಅಭಿಜಿತ್ ಪೊಲೀಸ್ ಠಾಣೆಯಲ್ಲಿರಬೇಕಾದ ಸಂದರ್ಭದಲ್ಲಿ, ಜಾಹ್ನವಿ ತನ್ನ ಮಾವ ಮಾಧವ ರಾವ್ ಸಹಾಯದಿಂದ ಅವನನ್ನು ಬಿಡಿಸಿಕೊಂಡು ಬರುತ್ತಾಳೆ. ಆದರೆ, ಅವನೇ ತನ್ನ ಸುತ್ತಲೂ ಬೆಳೆಸಿಕೊಂಡ ಕೋಟೆಯಿಂದ ಬಿಡಿಸಿಕೊಳ್ಳಲಾರದೆ ತೊಳಲುತ್ತಿರುವುದನ್ನು ಮನಗಂಡು, ಅವನಿಗೆ ತನ್ನೆಲ್ಲ ನೈತಿಕ ಸಹಾಯವನ್ನೊದಗಿಸಿ, ಅವನನ್ನು ರಕ್ಷಿಸುವುದಲ್ಲದೆ, ಅವನ ಹೃದಯವನ್ನೂ ಗೆಲ್ಲುತ್ತಾಳೆ. ಖೇತವಾಡಿಯನ್ನು ಬಿಟ್ಟು ಬಂದರೂ, ರೇಖಾಳ ಪಲಾಯನ ಮತ್ತು ಅದಕ್ಕೆ ಸಂಬಂಧಪಟ್ಟ

ಇತರ ಸಮಸ್ಯೆಗಳು ಅಭಿಜಿತ್‌ನನ್ನು ಬೆನ್ನಟ್ಟಿ ಬಂದಾಗ, ಆ ಸಮಸ್ಯೆಗಳಿಂದ ಪಾರಾಗಲು ಜಾಹ್ನವಿ ಮಾಡಿದ ಪ್ರಯತ್ನಗಳು ಬಹಳಷ್ಟು. ಅವು ಅಭಿಜಿತ್‌ನ ಬದುಕಿನ ಮೇಲೆ ಹಾಗೂ ತಮ್ಮ ದಾಂಪತ್ಯ ಜೀವನದ ಮೇಲೆ ಪರಿಣಾಮವನ್ನುಂಟು ಮಾಡದಂತೆ ಅವಳು ಬಲು ಎಚ್ಚರಿಕೆ ವಹಿಸಿದ್ದಳು, ಹಾಗೂ ಅವನಿಗೆ ಸೂಕ್ತ ಸಲಹೆಗಳನ್ನು ನೀಡಿ ಬೆಂಬಲ ಕೊಟ್ಟಿದ್ದಳು. ಆದರೆ ಒಮ್ಮೆ, ಈ ಪ್ರಕರಣಗಳಲ್ಲಿ ಅಭಿಜಿತ್ ತೀರ ತೊಡಗಿಸಿಕೊಂಡಿರುವುದನ್ನು ನೋಡಿ, 'ಈ ಪ್ರಕರಣ ನಮ್ಮ ವೈವಾಹಿಕ ಜೀವನವನ್ನು ಹದಗೆಡಿಸುವುದನ್ನು ನಾನು ಇನ್ನು ಮುಂದೆ ಸಹಿಸಲಾರೆ' ಎಂಬ 'ಮುನ್ನೆಚ್ಚರಿಕೆ'ಯನ್ನೂ ಕೊಡಲು ಅವಳು ಹಿಂಜರಿದಿರಲಿಲ್ಲ. ಅದನ್ನು ಯಾವ ಹೆಣ್ಣೂ ಸಹಿಸಲಾರಳೆಂಬುದೇ ಅವಳ ತರ್ಕ. ಇಷ್ಟಾಗಿಯೂ, ಕಾದಂಬರಿಯುದ್ದಕ್ಕೂ, ಅವಳ ದೃಢತೆ, ದಕ್ಷತೆ, ಹಾಗೂ ಇನ್ನೊಬ್ಬರ ಸಮಸ್ಯೆಗಳನ್ನು ಅರಿತುಕೊಳ್ಳುವ ಸೂಕ್ಷ್ಮತೆ – ಇವುಗಳು ಅವಳ ವ್ಯಕ್ತಿತ್ವದ ಮೇಲೆ ಬಹಳಷ್ಟು ಬೆಳಕು ಚೆಲ್ಲುವುದನ್ನು ಓದುಗರು ಗಮನಿಸದೇ ಇರಲಾರರು. ಜೊತೆಯಲ್ಲಿ ಅವಳ ಮನೋವಿಶಾಲತೆ ಇವೆಲ್ಲದಕ್ಕೂ ಇನ್ನಷ್ಟು ಮೆರಗು ಕೊಟ್ಟಿದೆ. ಇವಕ್ಕೆಲ್ಲಾ ಅವಳು ವ್ಯಾಸಂಗ ಮಾಡುತ್ತಿರುವ ಸೈಕಾಲಜಿಯೇ ಕಾರಣವಿದ್ದಿರಬೇಕು. ಅವಳ ಸೌಮ್ಯ ಸಮತೋಲ ಬುದ್ಧಿ, ಓದುಗರ ಗಮನ ಸೆಳೆಯುವುದಂತೂ ನಿಜ!

ಗೋದಾವರಿಯ ಪ್ರವೇಶ ಕಾದಂಬರಿಗೊಂದು ಹೊಸ ಆಯಾಮವನ್ನು ನೀಡಿದೆ. ಗೋದಾವರಿ, ಸೋದರತ್ತೆಗೆ ಪರಿಚಿತಳೇ! ಅಲ್ಲದೆ, ಅಭಿಜಿತ್‌ನ ತಂದೆಯ ಅಂತ್ಯಕ್ರಿಯೆ ಮಾಡಿಸಿದ, ಗೋಕರ್ಣದ ಹನುಮಂತ ಭಟ್ಟ ಎಂಬವರ ಮಗಳು ಅವಳಾಗಿದ್ದು, ಅಭಿಜಿತ್‌ಗೆ ದೂರದ ಪರಿಚಯದವಳೂ ಆಗಿದ್ದಳು. ಅವಳು ತನ್ನ ಅಕ್ಕನ ಮಗುವನ್ನು ನೋಡಿಕೊಳ್ಳಲೆಂದು ಮುಂಬಯಿಗೆ ಬಂದದ್ದು. ಮೊದಲಿಗೆ ಹಳ್ಳಿಯ ಮುಗ್ಧತೆ ಅವಳಲ್ಲಿ ಪ್ರಕಟವಾದರೂ, ಅವಳು ಮುಂಬಯಿಯಂಥ ನಗರದ ಜೀವನಕ್ಕೆ ಹೊಂದಿಕೊಂಡ ಬಗೆ ಓದುಗರನ್ನು ಆಶ್ಚರ್ಯಗೊಳಿಸುತ್ತದೆ. ಅಭಿಜಿತ್‌ನ ಸಹಾಯದಿಂದ ಅವನು ಕೆಲಸ ಮಾಡುವ ಫ್ಯಾಕ್ಟರಿಯಲ್ಲೇ ಕೆಲಸ ಗಿಟ್ಟಿಸಿಕೊಂಡಿದ್ದಳು. ಮುಂಬಯಿಗೆ ಬರುವಾಗ ಇಂಗ್ಲಿಷ್ ಬಾರದ ಅವಳು, ಕೆಲವೇ ದಿನಗಳಲ್ಲಿ 'Good morning sir; How are you sir; How is everybody at home, sir' ಎಂದು ಅಭಿಜಿತ್‌ನನ್ನು ಕೇಳಿ, ಅವನನ್ನು ದಂಗುಬಡಿಸುವಷ್ಟು ಮುಂಬಯಿಯಂಥ ಶಹರಿನ ಜೀವನಶೈಲಿಗೆ ಹೊಂದಿಕೊಂಡಿದ್ದಳು. ಮರೆತು ಹೋದ ರೇಖಾಳ ಪಲಾಯನದ ಘಟನೆಗೆ ಹೊಸ ಆಯಾಮವನ್ನು ನೀಡುವುದರಲ್ಲಿ ಅವಳ ಕೈವಾಡವೂ ಇದೆ. 'ರೇಖಾ ಎನ್ನುವ ಹುಡುಗಿ ನಿಜಕ್ಕೂ ಏನಾದಳು?' ಎಂದು ಮುಂಬಯಿಯ ಪತ್ರಿಕೆಯಲ್ಲಿ ದಪ್ಪಕ್ಷರದಲ್ಲಿ ಪ್ರಕಟವಾಗಲು ಅವಳೇ ಕಾರಣಳು ಹಾಗೂ ಹಳೆಯದೆಂದೆನಿಸಿದ ಘಟನೆಗೆ ವಿದ್ಯುತ್ ಚಾಲನೆ ಕೊಟ್ಟು, ಅಭಿಜಿತ್‌ನನ್ನು ಪುನಃ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕಿಸಿದಳು ಎಂಬ ಅನುಮಾನವನ್ನು

ಸೋದರತ್ತೆ ಮತ್ತಿತರರಲ್ಲಿ ಮೂಡುವಂತೆ ಮಾಡಿದ್ದಳು. ಗೋಕರ್ಣದಲ್ಲಿ ನಡೆಯಿತು ಎಂದು ಅಂಥದೇ ಕತೆಯೊಂದನ್ನು ಸೋದರತ್ತೆ ಮತ್ತು ಅಭಿಜಿತ್‌ಗೆ ಹೇಳಿ, ಆ ಘಟನೆಯ ಬಗ್ಗೆ ಅವಳು ತೋರಿದ ಆಸಕ್ತಿಯೇ ಇದಕ್ಕೆ ಕಾರಣವಾಗಿರಬಹುದು.

ತನ್ನ ಉದ್ಯೋಗ ಸ್ಥಳದಲ್ಲೂ ಅವಳು ಚೂಟಿಯಾಗಿದ್ದು, ಮ್ಯಾನೇಜ್ಮೆಂಟ್ ಮತ್ತು ಇತರ ಸಹೋದ್ಯೋಗಿಗಳ ಮೆಚ್ಚುಗೆಗೆ ಪಾತ್ರಳಾಗಿದ್ದಳು. ಮಾರ್ಕೆಟಿಂಗ್ ಪ್ರೊಮೋಷನ್ ಬಗ್ಗೆ ಅಭಿಜಿತ್‌ನ ಕಲ್ಪನೆಯಲ್ಲಿ ಮೂಡಿದ ಆಕೃತಿಗಳಿಗೆ ಬಣ್ಣದಲ್ಲಿ ಜೀವ ತುಂಬುವಷ್ಟು ಗೋದಾವರಿ 'ಸ್ಮಾರ್ಟ್' ಆಗಿದ್ದಳು. ಅದು ಅಭಿಜಿತ್‌ನನ್ನು ನಿಜಕ್ಕೂ ದಂಗುಬಡಿಸಿತ್ತು. ಗೋಕರ್ಣದಂಥ ಹಳ್ಳಿಯಲ್ಲಿ ಸಾಧಿಸಲಾಗದಿದ್ದುದನ್ನು, ಅವಳು ಮುಂಬಯಿಯಲ್ಲಿ ಸಾಧಿಸುತ್ತಾಳೆ. ಅಭಿಜಿತ್‌ನ ಹಿತವನ್ನು ಬಯಸಿಯೇ, ಅವಳು ರೇಖಾ ಪ್ರಕರಣದಲ್ಲಿ ಎಲ್ಲೆ ಮೀರಿ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ಆ ಪ್ರಕರಣ ಬಹಳಷ್ಟು ಜಟಿಲಗೊಂಡು, ಅದು ಕೇವಲ ಖೇಮರಾಜ ಭವನದ ನಿವಾಸಿಗಳ ಸಮಸ್ಯೆಯಾಗದೇ, ರಾಜಕೀಯ ಸೆಲೆಗೊಳಗಾಗಿ, ಮುಂಬಯಿಯ ಪ್ರಮುಖ ಪತ್ರಿಕೆಗಳಲ್ಲಿ ವರದಿಯಾಗುತ್ತದೆ. ಹೊಸ ತಿರುವಿಗೊಳಗಾದ ಈ ಪ್ರಕರಣದಲ್ಲಿ ಗೋದಾವರಿಯ ಅತಿ ಆಸಕ್ತಿ, ಮಧುಚಂದ್ರದಲ್ಲಿದ್ದ ಅಭಿಜಿತ್–ಜಾಹ್ನವಿಯರಿಗೆ ಆ ಪ್ರಕರಣದ ಪ್ರಗತಿಯನ್ನು ತಿಳಿಸಲೂ ಕಾರಣವಾಗುತ್ತದೆ. ಆದರೆ, ಅವಳ ಅತಿ ಉತ್ಸಾಹವೇ ಅವಳ ಕೆಲಸಕ್ಕೆ ಸಂಚಕಾರ ತರುತ್ತದೆ. ಫ್ಯಾಕ್ಟರಿಯ ಮ್ಯಾನೇಜರ್ ಅವಳನ್ನು ವಜಾ ಮಾಡಲು ನೋಟೀಸ್ ಕೊಡುವ ಮೊದಲೇ ಅದನ್ನು ತಿಳಿದ ಅವಳು, ತನ್ನ ರಾಜೀನಾಮೆ ಪತ್ರವನ್ನು ಮ್ಯಾನೇಜರರ ಮುಖದ ಮೇಲೆ ಎಸೆದು, ಅವನ ಕಪಾಳಕ್ಕೆ ಬಿಗಿದು ಹೋಗುತ್ತಾಳೆ. ಹಳ್ಳಿಯಿಂದ ಬಂದ ಒಬ್ಬ ಮುಗ್ಧ ಮಹಿಳೆ ಈ ರೀತಿಯ ಗಡಸುತನವನ್ನು ತೋರಿಸಿದ ಬಗೆ ನಮ್ಮನ್ನು ದಂಗುಬಡಿಸುತ್ತದೆ. ಅಂತೂ, 'ಧುತ್' ಎಂದು ಕಾದಂಬರಿ ಪ್ರವೇಶಿಸಿದ ಗೋದಾವರಿ, ಅದೇ 'ಧುತ್'ತನದಲ್ಲೇ ಮುಂಬಯಿಯಿಂದ ನಿಷ್ಕ್ರಮಿಸಿ, ಕತೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆಯುತ್ತಾಳೆ. ಗೋಕರ್ಣಕ್ಕೆ ಮರಳಿ, ಅಲ್ಲಿ ಒಬ್ಬನನ್ನು ಮದುವೆಯಾಗುತ್ತಾಳೆ. ತನ್ನ ಇನಿಯನಲ್ಲಿ '...ಎಲ್ಲೋ, ಎಲ್ಲೋ–ಮೂಗಿನ ತುದಿಯಲ್ಲೋ, ತುಟಿಗಳ ಮೂಲೆಯಲ್ಲೋ, ಕಣ್ಣುಗಳಲ್ಲಿಯ ಹೊಳಪಿನಲ್ಲೋ, ಕಿವಿಗಳ ಅಂಚಿನಲ್ಲೋ' ಅವಳು ಅಭಿಜಿತ್‌ನ 'ಝಳಕ'ನ್ನು ಕಂಡಳೆಂದು ಅಭಿಜಿತ್‌ಗೆ ಅವಳು ಬರೆದ ಪತ್ರದಲ್ಲಿ ವ್ಯಕ್ತಪಡಿಸಿದ್ದಳು. 'ರೇಖಾಗೂ ತನ್ನೊಡನೆ ಓಡಿಹೋದ ಹುಡುಗನಲ್ಲಿ ನೀನೇ ಕಂಡಿರಬೇಕೆಂದು ಅರುಣಾ ಹೇಳುತ್ತಿದ್ದಳು. ಅಂದರೆ ನೀನು ಕೇವಲ ನೆಪ, ಒಂದು ಪ್ರಚೋದನೆ' ಎಂಬ ಅವಳ ಮಾತಿನಲ್ಲಿ (ಮಾತು ಉಜ್ವಲಾ ಮತ್ತು ಅರುಣಾರಿಗೂ ಅನ್ವಯಿಸಬಹುದು) ಕಾದಂಬರಿಗೆ ಸಂಬಂಧಿಸಿದ ಸತ್ಯಾಂಶವೊಂದು ಅಡಗಿರಬಹುದೇನೋ!

ಮುಕುಂದರಾವ್ ಈ ಕಾದಂಬರಿಯಲ್ಲಿ ಒಬ್ಬ ಕುತಂತ್ರದವನಾಗಿ ಕಾಣಿಸಿಕೊಳ್ಳುತ್ತಾನೆ. ತನ್ನ ಪತ್ರಕರ್ತ ವ್ಯವಹಾರವನ್ನು ದುರುಪಯೋಗಪಡಿಸಿಕೊಂಡು, ಅದರಲ್ಲಿ ಒಂದು

ವಿಶೇಷ ತೃಪ್ತಿ ಪಡೆಯುತ್ತಾನೆ. ಸಮಾಜದ ಕೆಲವು ಆಗು–ಹೋಗುಗಳಿಗೆ ಬಣ್ಣ ಕೊಟ್ಟು, ಜನರನ್ನು ಬ್ಲ್ಯಾಕ್‌ಮೈಲ್ ಮಾಡುತ್ತ ಹಣ ಸಂಪಾದಿಸುವ ಮನುಷ್ಯ ಆತ. ಒಂದು ಕಾಲದಲ್ಲಿ ಸೋದರತ್ತೆಯನ್ನು ಕೆಡಿಸಲು ಪ್ರಯತ್ನಪಟ್ಟ ಅವನು, ಆ ಪ್ರಕರಣ ಬಯಲಿಗೆ ಬರುವ ಸಂದರ್ಭ ಬಂದಾಗ, ಸಾಧುವಾಗಿ ಬಿಡುತ್ತಾನೆ. ಅವನ ಸಂಗಾತಿ ಸೆಟ್ಟಿ ('ಲಾಫ್ಟಿಂಗ್ ಬುದ್ಧ') ಕೂಡ ಓದುಗರಲ್ಲಿ ಜಿಗುಪ್ಸೆಗೊಳಿಸುವ ಭಾವನೆಯನ್ನೇ ಮೂಡಿಸುತ್ತಾನೆ.

ಇನ್ನು, ಕತೆಯಲ್ಲಿ ಉಲ್ಲೇಖಿಸಿದ ಎರಡು ಪತ್ರಗಳು ನನ್ನ ಕುತೂಹಲವನ್ನು ವಿಶೇಷವಾಗಿ ಕೆರಳಿಸಿದವು. ಮೊದಲನೆಯದು, ಉಜ್ವಲಾ ತನ್ನ ಆತ್ಮಹತ್ಯೆಯ ಮೊದಲು ಅಭಿಜಿತ್‌ಗೆ ಅರುಣಾಳ ಮೂಲಕ ತಲುಪಿಸಿದ 'ಲಿಫಾಫೆ'. ಅದರಲ್ಲಿ ಉಜ್ವಲಾಳ 'ಸಾವಿನ ನೆರಳು' ಇದೆ ಎಂಬುದು ಅಭಿಜಿತ್ ಮತ್ತು ಇತರರ ಅಭಿಪ್ರಾಯವಾಗಿತ್ತು. ಆ ಪತ್ರ ಅಭಿಜಿತ್‌ನನ್ನು ಎಲ್ಲಿಲ್ಲದ ಗೊಂದಲಕ್ಕೆ ಸಿಲುಕಿಸಿತ್ತು. ಅವಳ ಆತ್ಮಹತ್ಯೆಗೆ ಅಭಿಜಿತ್‌ನೇ ಕಾರಣನಾಗಿರಬಹುದೆಂಬ ಊಹೆ ಎಲ್ಲರಲ್ಲೂ ಮೂಡಿಸಿತ್ತು. ಕತೆಯ ಅನಾವರಣವಾಗುತ್ತಿದ್ದಂತೆ ಆ ಪತ್ರವನ್ನು ಅಭಿಜಿತ್ ಓದುವುದಕ್ಕೆ ಸೋದರತ್ತೆ, ಜಾಹ್ನವಿ, ಪರಶುರಾಮ ಕಾಕಾ, ಮಾಧವರಾವ್, ಮೊದಲಾದ ಹಿತೈಷಿಗಳು ತಡೆ ಹಾಕಿದ್ದರು. ಕಾರಣ, ಪತ್ರ ಬಹಿರಂಗವಾದಲ್ಲಿ ಅಭಿಜಿತ್ ಇನ್ನಷ್ಟು ಗೊಂದಲಗಳಿಗೊಳಗಾಗುತ್ತಾನೆ ಎಂಬುದು. ಹಾಗಾಗಿ ಅಭಿಜಿತ್ ಕೊನೆಯವರೆಗೂ ಆ 'ಲಿಫಾಫೆ'ಯನ್ನು ಒಡೆದಿರಲಿಲ್ಲ. ಆದರೆ, ಅದರ ವಿಚಾರ ಪದೇ–ಪದೇ ಕಾದಂಬರಿಯಲ್ಲಿ ಬರುತ್ತಿದ್ದು, ಅದು ಓದುಗರ ಕುತೂಹಲವನ್ನು ಕೆರಳಿಸಲು ಕಾರಣವಾಗುತ್ತದೆ. ಅದು ನಿಗೂಢವಾದಷ್ಟೂ, ನಾವು ಅದರ ಬಗ್ಗೆ ತಿಳಿದುಕೊಳ್ಳುವ ಆತುರತೆಯನ್ನು ಹೆಚ್ಚಿಸುತ್ತ ಹೋಗುತ್ತದೆ, ಹಾಗೂ ಆ ನಿಗೂಢತೆಯನ್ನು ಹೆಚ್ಚಿಸುವುದೇ ಕತೆಗೊಂದು ಹೊಸ ತಿರುವನ್ನು ಕೊಡುವುದು ಕಾದಂಬರಿಯ ಉದ್ದೇಶವಾಗಿರಬಹುದು. ಕೊನೆಗೂ ಆ ಲಕೋಟೆಯನ್ನು ಒಡೆದವಳು ಜಾಹ್ನವಿ; ಅಭಿಜಿತ್ ಅಲ್ಲ. ಅದರೊಳಗಿದ್ದುದು 'suicide note' ಅಲ್ಲ. ಬದಲಿಗೆ ಅರುಣಾ, ರೇಖಾ ಮತ್ತು ಉಜ್ವಲಾರು ತಮ್ಮ ಹದಿನೇಳನೆಯ ವರ್ಷಕ್ಕೆ ಕಾಲಿಡುತ್ತಿದ್ದಂತೆ ಬರೆದ ಮೂರು ಪ್ರೇಮ ಪತ್ರಗಳು! ಆದರೆ, ಲಕೋಟೆಯ ಮೇಲಿನ ಅಡ್ರೆಸ್ ಮಾತ್ರ, 'To Dearest Abhijit' ಎಂದಿದ್ದು, ಅದನ್ನು ಉಜ್ವಲಾಳೇ ಬರೆದಿದ್ದಿರಬಹುದು. ಆ ಮೂರೂ ಪತ್ರಗಳು (ಒಂದನ್ನಂತೂ ಉಜ್ವಲಳೇ ಬರೆದಿದ್ದುದು) ಉಜ್ವಲಾಳ ಕೈಗೆ ಹೇಗೆ ಸಿಕ್ಕಿತು? – ಎಂಬುದು ಒಂದು ನಿಗೂಢವೇ! ಅಲ್ಲದೆ, ಅದನ್ನು ಆ ತರುಣಿಯರೇ ಯಾಕೆ ಸ್ವತಃ ಅಭಿಜಿತ್‌ಗೆ ಸೂಕ್ತ ಸಮಯದಲ್ಲಿ ತಲುಪಿಸಲಿಲ್ಲ ಎಂಬುದೂ ನಿಗೂಢವೇ! ಆ ಪತ್ರಗಳನ್ನು ಬರೆದವರಲ್ಲಿ ಒಬ್ಬಳು, ಅರುಣಾ, ಮದುವೆಯಾಗಿ ಹೋದಳು;

ಮತ್ತೊಬ್ಬಳು, ರೇಖಾ, ಯಾರೊಡನೆಯೋ ಓಡಿಹೋದಳು; ಇನ್ನೊಬ್ಬಳು, ಉಜ್ವಲಾ, ಗ್ಯಾಂಗ್‌ರೇಪ್‌ಗೆ ಒಳಗಾಗಿ ಆತ್ಮಹತ್ಯೆ ಮಾಡಿಕೊಂಡಳು. ಆದರೆ, ಮೂವರೂ ಅಭಿಜಿತ್‌ನಲ್ಲಿ ಮೋಹಿತರಾದವರು! ಆ ಪತ್ರಗಳ ಇರುವಿಕೆಯ ಬಗ್ಗೆ, ಅದನ್ನು ತಲುಪಿಸಿದ ಅರುಣಾಳಿಗೂ ಮಾಹಿತಿ ಇದ್ದಿತ್ತೇ? ಎಂಬುದೂ ಕತೆಯಲ್ಲಿ ಸ್ಪಷ್ಟವಾಗಿಲ್ಲ. ಆದರೆ, ಆ ಲಕೋಟೆ, ಕತೆ ವಿಶಿಷ್ಟ ರೀತಿಯಲ್ಲಿ, ರೋಮಾಂಚಕಾರಿಯಾಗಿ ಮುಂದುವರಿಯುವುದಕ್ಕೆ ಕಾರಣವಾಯ್ತು ಎಂಬುದಂತೂ ನಿಜ!

ಹಾಗೆ ಇನ್ನೊಂದು ಪತ್ರ ನನ್ನ ಗಮನವನ್ನು ವಿಶೇಷವಾಗಿ ಸೆಳೆದುದು, 'ತಲೆತಿರುಕ'ನೊಬ್ಬ ಬರೆದನೆನ್ನಲಾಗಿದ್ದ 'ಮೂಕಪತ್ರ' (ಇಲ್ಲಿ ಮೂಕ ಪತ್ರವೆಂಬುದಕ್ಕೆ ಅರ್ಥ ಅನಾಮಧೇಯ ಪತ್ರ ಎಂದು). ರೇಖಾಳ ಪಲಾಯನ ಮತ್ತು ಉಜ್ವಲಾಳ ಆತ್ಮಹತ್ಯೆಯ ಪ್ರಕರಣ ತಿರುವು-ಮುರುವುಗಳಿಗೊಳಗಾಗಿ, ರಾಜಕೀಯವೆಂಬ ನೆರಳು ಬಿದ್ದು, ಜಟಿಲವಾದಾಗ, ಒಬ್ಬ 'ತಲೆತಿರುಕ' ಒಂದು ಅನಾಮಧೇಯ ಪತ್ರವನ್ನು ಹದತಪ್ಪಿದ ಆ ಪ್ರಕರಣಗಳನ್ನು ಪ್ರಕಟಗೊಳಿಸುತ್ತಿರುವ ಪತ್ರಿಕೆಗೆ ಕಳುಹಿಸುತ್ತಾನೆ. ಹಾಗೆ ಕಳುಹಿಸಿದುದರ ಉದ್ದೇಶ ಪ್ರಕರಣವನ್ನು ಬೇಕೆಂತಲೇ ದಾರಿ ತಪ್ಪಿಸುವುದಕ್ಕೆಂದು. ಪರಿಣಾಮವಾಗಿ ಖೇತವಾಡಿಯ ಒಂದು ಸಾಮಾನ್ಯ ಪ್ರಕರಣದಲ್ಲಿ, ಮುಂಬಯಿಯ ಮುಖ್ಯ ಪತ್ರಿಕೆಯ ಸಂಪಾದಕರನ್ನೂ, ರಾಜಕಾರಣಿಗಳನ್ನೂ ಆ ಪತ್ರ involve ಮಾಡುತ್ತದೆ. ಆ ಮೂಕಪತ್ರ ಮಾಡಿದ ಒಂದು ಮುಖ್ಯ ಪರಿಣಾಮವೆಂದರೆ, ರೇಖಾ ಪ್ರಕರಣದಲ್ಲಿ, ರೇಖಾ ಎಂಬ ವ್ಯಕ್ತಿಯೇ ಕಾಲ್ಪನಿಕ; ಅದನ್ನು ಬೇಕೆಂತಲೇ ಒಬ್ಬ ತಲೆತಿರುಕ ಸೃಷ್ಟಿ ಮಾಡಿ ಎಲ್ಲರನ್ನೂ ಮೋಸಗೊಳಿಸಿದ್ದಾನೆ-ಎಂಬುದು. ಅದರಿಂದಾಗಿ ಮುಂಬಯಿಯಲ್ಲಿ ದೊಡ್ಡ ಕೋಲಾಹಲವೇ ಏಳುತ್ತದೆ. ಆ ಪತ್ರ ಮುಕುಂದರಾವ್‌ನ ಹಾಗೂ ಅವನ ಜೊತೆಗಾರ 'ಲಾಫ್ಲಿಂಗ್ ಬುದ್ಧ'ನ ದುಷ್ಟ ವರ್ತನೆಯನ್ನೂ ಬಯಲಿಗೆಳೆಯುವುದರಲ್ಲಿತ್ತು. ಗಾಬರಿಗೊಂಡ ಮುಕುಂದ ರಾವ್ ಅದನ್ನು ಅಭಿಜಿತ್‌ನೇ ಕಳುಹಿಸಿದುದೆಂದು ಊಹಿಸುತ್ತಾನೆ. ಸೋದರತ್ತೆ, ಜಾಹ್ನವಿ, ಮಾಧವರಾವ್, ಪರುಶುರಾಮ ಕಾಕಾ ಮುಂತಾದ ಅಭಿಜಿತ್‌ನ ಹಿತೈಷಿಗಳ ಊಹೆಯೂ ಅದೇ ಆಗಿತ್ತು. ಆ ಪ್ರಕರಣದಲ್ಲಿ ಒಬ್ಬ ಹೆಸರಾಂತ ರಾಜಕಾರಣಿ ಮಂತ್ರಿಯ ಹೆಸರೂ ಪ್ರಕಟವಾಗಿದ್ದು, ಅವನು ಪತ್ರಿಕೆಗೆ ಕೊಟ್ಟ ಹೇಳಿಕೆಯಲ್ಲಿ, ಆ 'ತಲೆತಿರುಕ'ನನ್ನು 'ಅಭಿಜಿತ್' ಎಂದು ಹೆಸರಿಸಿದುದು ಇನ್ನಷ್ಟು ಗೊಂದಲಕ್ಕೆ ಎಡೆಮಾಡಿಕೊಡುತ್ತದೆ. ಅಭಿಜಿತ್ ಎಷ್ಟೊಂದು ಬಾರಿ ಆ ಪತ್ರವನ್ನು ತಾನು ಬರೆದುದಲ್ಲವೆಂದು ಹೇಳಿಕೊಂಡರೂ, ಅವರೆಲ್ಲರ ಶಂಕೆ ಮಾತ್ರ ನಿವಾರಣೆಯಾಗಲಿಲ್ಲ. ಮೂಕಪತ್ರವನ್ನು ಬರೆದವನು ತಾನಲ್ಲವೆಂದು ನಿರಾಕರಿಸಿದರೂ, ಅದರಿಂದ ಪರಿಣಮಿಸಿದ ಬೆಳವಣಿಗೆ ಅಭಿಜಿತ್‌ಗೆ ಬಹಳ ಮೋಜಾಗಿ ಕಾಣಿಸುತ್ತದೆ. ಕತೆ ಮುಂದುವರಿಯುತ್ತಿದ್ದಂತೆ, ಆ

ಪತ್ರಕ್ಕೆ ಕಾರಣರಾದವರ ಗುರುತನ್ನು ಬೇಕೆಂತಲೇ ಗೋಪ್ಯವಾಗಿಟ್ಟುದು ಓದುಗರ ಗಮನಕ್ಕೆ ಬರುತ್ತದೆ. ಹಾಗೆ ಗೋಪ್ಯವಾಗಿಟ್ಟುದು ಕತೆಯ ಸ್ವಾರಸ್ಯವನ್ನು ಹೆಚ್ಚಿಸಲು ಕಾರಣವಾಗುತ್ತದೆ. (ಈ ತಂತ್ರ ನನ್ನನ್ನು ಬಹುವಾಗಿ ಮೆಚ್ಚಿಸಿತು) ಕೊನೆಯಲ್ಲಿ ಆ 'ಮೂಕಪತ್ರ'ವನ್ನು ಬರೆದವನು ಅಭಿಜಿತ್ ಎಂದು ತಿಳಿದಾಗ, ಅದನ್ನು ಗೋಪ್ಯವಾಗಿಟ್ಟ ರೀತಿ ಹೆಚ್ಚಿನ ಪ್ರಮಾಣದಲ್ಲಿ ನಮ್ಮ ಮೆಚ್ಚುಗೆ ಪಡೆಯುವುದರಲ್ಲಿ ಯಶಸ್ಸು ಗಳಿಸುತ್ತದೆ.

'ಕೇಂದ್ರ ವೃತ್ತಾಂತ'ದಲ್ಲಿ ಸಾಮಾನ್ಯ ಮನುಷ್ಯನ ವರ್ತನೆಯ ವಿಶ್ಲೇಷಣೆಯ ಕೆಲವು ಹಂದರವನ್ನು ನಾವು ಕಾಣಬಹುದು. ಕಾದಂಬರಿಯಲ್ಲೊಂದು ಮಾತು ಬರುತ್ತದೆ: '...ಯಾವಾಗಲೂ ಎಲ್ಲದರ ಕೇಂದ್ರ ತಾನೇ ಎಂದು ತಿಳಿಯುವವನ ಕಣ್ಣಿಗೆ ತನ್ನನ್ನು ಬಿಟ್ಟು ಬೇರೆ ಯಾರೂ ಕಾಣಿಸುವುದಿಲ್ಲ' ಎಂದು. ಆ ಮಾತು ಈ ಕಾದಂಬರಿಗೆ ಸರಿಯಾಗಿ ಅನ್ವಯಿಸುವುದೋ ಏನೋ! ಅಭಿಜಿತ್‌ನ ಎಲ್ಲ ಸಮಸ್ಯೆಗಳೂ ಮತ್ತು ಅವನು ಅವುಗಳಿಗೆ ಸ್ಪಂದಿಸಿದ ಬಗೆ ಈ ಮಾತನ್ನೇ ಸಮರ್ಥಿಸುತ್ತದೆ. ಅಂಥ ಮನೋಭಾವ ಅವನನ್ನು ಹಲವಾರು ಕಷ್ಟ-ನಷ್ಟಗಳಿಗೆ ಗುರಿಮಾಡುತ್ತದೆ. ಕಾದಂಬರಿಯಲ್ಲಿ ಘಟನೆಗಳು ಹರಡುತ್ತ ಹೋದಂತೆ, ಆ ಮಾತು ಇನ್ನಷ್ಟು ಅರ್ಥಪೂರ್ಣವಾಗುತ್ತದೆ.

ಅಭಿಜಿತ್‌ನ ತಂದೆಯ ಸ್ನೇಹಿತರೊಬ್ಬರು ಬರೆದ ಆಕೃತಿ ಅವನ ಮೇಲೆ ಮಾಡಿದ ಪರಿಣಾಮವೇ ಈ ಕಾದಂಬರಿಯ ಹುಟ್ಟಿಗೆ ಕಾರಣ. ಆ ಸ್ನೇಹಿತರು ಬರೆದ ಆಕೃತಿ, ಅನಿರೀಕ್ಷಿತ ಘಳಿಗೆಗಳಲ್ಲಿ, ಅನಿರೀಕ್ಷಿತ ವಸ್ತುಗಳಲ್ಲಿ ಅಭಿಜಿತ್‌ನ ಕಣ್ಣೆದುರು ಕಾಣಿಸಿಕೊಂಡು, ಅವನ ಕಲ್ಪನಾ ಶಕ್ತಿಗೆ ಚಾಲನೆ ಕೊಡುತ್ತಿತ್ತು. ಉದಾಹರಣೆಗೆ, ಸೂರ್ಯ ಮಂಡಲ ಅವನಲ್ಲಿ ಒಂದು ಪ್ರತಿಮೆಯನ್ನು ನಿಲ್ಲಿಸುತ್ತಿತ್ತು. ಕಲ್ಪನೆಯ ಆಕೃತಿಯಲ್ಲಿ ಮೂಡಿಬರುವಂಥ ಪ್ರತಿಮೆಗಳು, ಆ ಪ್ರತಿಮೆಗಳ ಹಿಂದೆ ಕುಣಿಯುತ್ತಿರುವ ನೆರಳುಗಳು, ಆ ನೆರಳುಗಳು ಮೂಡಿಬರಲು ಕಾರಣವಾದ ಕತ್ತಲೆಯ ಕೈವಾಡ – ಇವೆಲ್ಲವೂ ಜೀವನದಲ್ಲಿ ಅನುಭವ ಪಡೆಯುವ ವಿಧಾನವೆಂದು ಅಭಿಜಿತ್‌ನ ಅರಿವಿಗೆ ಬಂತು. ಆ ಅರಿವೇ ಅವನನ್ನು ರೇಖಾಳ ಪಲಾಯನ ಮತ್ತು ಅದರ ಪರಿಣಾಮವಾಗಿ ಉದ್ಭವಿಸಿದ ಮತ್ತಿತರ ಸಮಸ್ಯೆಗಳಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಣೆ ಕೊಟ್ಟಿರುವುದು. ಈ ಕತೆಯನ್ನು ಬರೆಯುವಾಗಲೂ 'ನಡೆದದ್ದನ್ನು ನಡೆದಂತೆ ಹೇಳಲು ಪ್ರಯತ್ನಿಸಿದಷ್ಟೂ, ಹೇಳಿದ್ದು ಕಟ್ಟು ಕಥೆಯಾಗುತ್ತಿದೆ; ವಾಸ್ತವಕ್ಕೆ ಹತ್ತಿರವಾದಷ್ಟೂ ನಿರೂಪಣೆಗೆ ಅದ್ಭುತ ರಮ್ಯ ಬಣ್ಣ ಬರುತ್ತಿದೆ' ಎಂಬ ಅನಿಸಿಕೆ ಅವನಲ್ಲಿ ಮೂಡುತ್ತಿತ್ತು. ಇದು ಅವನ ಮಾನಸಿಕ ಹೊಯ್ದಾಟದ ಮೇಲೆ ಬೆಳಕು ಚೆಲ್ಲುತ್ತದೆ. ರೇಖಾಳ ಪಲಾಯನ ಖೇತವಾಡಿ ಜನರ ಕುತೂಹಲ ಕೆರಳಿಸಿದ್ದು ಸಹಜವೇ! ಅದು ಮನುಷ್ಯ ಸಹಜ ವರ್ತನೆಯೇ! ಅದು ಖೇತವಾಡಿಯ ಜನರಲ್ಲಿ ಮೂಡಿಸಿದ ಊಹೆಗಳು ಎಷ್ಟರಮಟ್ಟಿಗೆ ಬೆಳೆದಿತ್ತೆಂದರೆ,

ಅದು 'ಸತ್ಯ'ವೇ ಎಂಬಷ್ಟು, ಖೇತವಾಡಿಯ ಜನರ ಈ 'ಸತ್ಯ', ಬರಿಯ ಊಹೆಯೆಂದು ತಿಳಿದಿದ್ದರೂ, ಓದುಗರು ಅದನ್ನೇ ನಂಬುವಂತಾಗುತ್ತದೆ. ಅಂದರೆ, ಆ ಊಹೆ ಓದುಗರಾದ ನಮ್ಮದೂ ಆಗುವಂತೆ ಕತೆ ಸಾಗುತ್ತದೆ.

ವಾಸ್ತವಸತ್ಯ–ಊಹೆ–ಆಕಸ್ಮಿಕಗಳು ಒಂದಕ್ಕೊಂದು ಕೊಂಡಿಯಾಗಿ, ಹೇಗೆ ಒಂದು ಘಟನೆಯಾಗುವುದರಲ್ಲಿ ಮಹತ್ವ ಪಡೆಯುತ್ತವೆ – ಎಂಬುದು ಈ ಕಾದಂಬರಿಯಲ್ಲಿ ಚೆನ್ನಾಗಿ ಮೂಡಿಬಂದಿದೆ. ರೇಖಾಳ ಪಲಾಯನ ಖೇತವಾಡಿಗೇ ವಿಶಿಷ್ಟವಾದ ಕಲ್ಪನಾಶಕ್ತಿಯನ್ನು ಎಚ್ಚರಗೊಳಿಸಿ, ಹಲವು ಊಹೆಗಳ ಜೊತೆಗೇ ಬೇರೆ ಬೇರೆ ಸಂದಿಗ್ಧ ಪರಿಸ್ಥಿತಿಗಳನ್ನೂ ಹುಟ್ಟಿಸಿತ್ತು. ಈ ಪರಿಸ್ಥಿತಿಗಳು ವಾಸ್ತವಿಕವಾಗಿದ್ದು, ಅವು ಅಕಸ್ಮಾತ್ತಾಗಿ ಉದ್ಭವಿಸಿದವು. ಇಂತಹ 'ಆಕಸ್ಮಿಕ'ವೆಂದು ಕರೆಯುವ ಘಟನೆಗಳು ನಿಜವಾದಲ್ಲಿ, 'ಅವು ವಾಸ್ತವಕ್ಕಿಂತ ನಮ್ಮ ಗ್ರಹಿಕೆಗಳಿಗೆ ಸಂಬಂಧಪಟ್ಟವು.' 'ಬಿಡಿಯಾಗಿ ನಡೆಯುವಂತೆ ತೋರುವಂಥ ಘಟನೆಗಳು ನಮ್ಮ ಪ್ರಜ್ಞೆಯ ಗ್ರಹಿಕೆಯಲ್ಲಿ ನಿಶ್ಚಿತ ಕ್ರಮದಲ್ಲಿ ಒಂದೆಡೆ ಬರುತ್ತವೆ. ಹಾಗೆ ಬರುವುದರ ಮೂಲಕವೇ ಅರ್ಥ ಪಡೆಯುತ್ತವೆ. ಅರ್ಥವಿಲ್ಲದ್ದು ಗ್ರಹಿಕೆಯಾಗಲಾರದು. ಕಾರ್ಯಕಾರಣಗಳು ಗ್ರಹಿಕೆಯ ಹುಟ್ಟುವಳಿಗಳು. ಒಂದರ ನಂತರ ಇನ್ನೊಂದು ಬಂದ ಮಾತ್ರಕ್ಕೇ, ಒಂದು ಕಾರಣ, ಇನ್ನೊಂದು ಕಾರ್ಯ. ಎರಡೂ ಅರ್ಥಾಪೇಕ್ಷಿಯಾದ ಮನಸ್ಸಿನ ಅದ್ಭುತ ಸೃಷ್ಟಿಗಳು' – ಈ ಮಾತಿನ ತಿರುಳೇ ಈ ಕತೆಯನ್ನು ನಡೆಸಿಕೊಂಡು ಹೋಗುತ್ತದೆ. ಕಾದಂಬರಿಯಲ್ಲಿ ಜರಗುವ ಬಿಡಿ–ಬಿಡಿ ಘಟನೆಗಳು ಅಭಿಜಿತ್ ಮತ್ತು ಇತರರ ಗ್ರಹಿಕೆಯಲ್ಲಿ ನಿಶ್ಚಿತ ಕ್ರಮದಲ್ಲಿ ಜರಗುತ್ತವೆ. ಒಂದು ಕಾರ್ಯ ಇನ್ನೊಂದಕ್ಕೆ ಕಾರಣವಾಗಿ, ಘಟನೆಗಳಿಗೊಂದು ಅರ್ಥಕೊಟ್ಟಿದೆ. ಇಂಥ ಘಟನೆಗಳು ಮೊದಲಿಂದಲೂ ಎಲ್ಲೋ ಹೊಂಚು ಹಾಕಿಕೊಂಡಿದ್ದು, ಒಂದು ಕಾಲದಲ್ಲಿ ಅವು 'ಅಕಸ್ಮಾತ್' ಆಗಿ ಜರಗುತ್ತವೆ. ಹಾಗೆ ಜರಗಲು ಮನುಷ್ಯ ಕಲ್ಪನೆಯೂ ವಿಶಿಷ್ಟ ರೀತಿಯಲ್ಲಿ ಕೆಲಸ ಮಾಡುತ್ತದೆ. ಘಟನೆಗಳಿಗೆ ಆಕೃತಿ ಇದ್ದು, ಅದು ಕೆಲವು ಪ್ರತಿಮೆಗಳನ್ನು ಅಲ್ಲಿ ಕುಣಿಸುವುದಿದ್ದರೂ, 'ವಾಸ್ತವ ಸತ್ಯ' ಎಂದೆನಿಸಿಕೊಳ್ಳುವ ಆಕೃತಿ ಇರುವುದು ಅಪರೂಪ. ರೇಖಾಳ ಪಲಾಯನ ವಾಸ್ತವವಾಗಿದ್ದರೂ, ಮುಂದೆ ಅದರ ಪರಿಣಾಮದಿಂದುಂಟಾದ ಪ್ರಕರಣಗಳು ರೇಖಾಗೆ ಸೇರಿದವುಗಳಲ್ಲ. ಅವು ಎಲ್ಲರ ಕಲ್ಪನಾ ಪ್ರಪಂಚಕ್ಕೆ ಸೇರಿದ್ದು. ಅಂತೆಯೇ ಉಜ್ವಲಾಳ ಆತ್ಮಹತ್ಯೆಯೂ ಎಲ್ಲರ ಕಲ್ಪನಾ ಲೋಕವನ್ನು ಸೇರುತ್ತದೆ. ರೇಖಾ ಓಡಿಹೋದಳು, ಅಥವಾ ಉಜ್ವಲಾ ಆತ್ಮಹತ್ಯೆ ಮಾಡಿಕೊಂಡಳು ಎಂಬುದಷ್ಟೇ ವಾಸ್ತವ. ಅದರಿಂದಾಚೆ ಎಲ್ಲವೂ ಕಲ್ಪನೆಯ ಲೋಕ. ಉಜ್ವಲಾ ಬಿಟ್ಟು ಹೋದ ಪತ್ರವೂ ಅಷ್ಟೆ, ಊಹಾ ಪ್ರಪಂಚದಲ್ಲಿ ಅದು 'suicide note' ಎಂತ ಹೇಳಿಸಿಕೊಂಡಿತು. ಆ ಪತ್ರ ನಿರ್ಮಿಸಿದ ಆಕೃತಿ 'ವಾಸ್ತವ ಸತ್ಯ'ಕ್ಕೆ ದೂರ. ಘಟನೆಗಳನ್ನು ನಿರ್ಮಿಸುವಲ್ಲಿ ಎಲ್ಲಾದರೂ ಬಿರುಕುಗಳು

ಕಂಡುಬಂದಲ್ಲಿ, ಅವುಗಳನ್ನು ನಮ್ಮ ಊಹೆಗಳಿಂದ ತುಂಬಿಸಿ, ಘಟನೆಗಳಿಗೆ ಒಂದು ಅರ್ಥ ಬರುವಂತೆ ಮಾಡುತ್ತೇವೆ, ಅಷ್ಟೆ! ಇಂಥ ತರ್ಕಬದ್ಧ ವಾದಸರಣಿಗಳು ಓದುಗರನ್ನು ಆಶ್ಚರ್ಯಪಡಿಸುತ್ತಲೇ, ಈ ಕಾದಂಬರಿ ನವ್ಯ ಸಾಹಿತ್ಯಕ್ಕೊಂದು ಉತ್ತಮ ಉದಾಹರಣೆ ಎಂಬ ಅರಿವನ್ನು ಮಾಡಿಕೊಡುತ್ತವೆ. ಮೇಲಿಂದ ಈ ವಾದಸರಣಿಗಳು ಅರ್ಥವಾಗದೇ ಹೋದರೂ, ಹಲವು ಬಾರಿ ಓದಿದ ಮೇಲೇ ಕಾದಂಬರಿಯಲ್ಲಿ ಅವುಗಳ ಮಹತ್ವದ ಅರಿವು ಮೂಡುತ್ತದೆ.

'ಕೇಂದ್ರ', 'ವೃತ್ತ' 'ಪರಿಧಿ'ಗಳೆಂಬ ಅದ್ಭುತ ಕಲ್ಪನೆಯಿಂದ ಮೂಡಿದ ಈ ಕಾದಂಬರಿ, ಮೊದಲಿಗೆ 'ಕೇಂದ್ರ'ದಲ್ಲಿ ಕುಳಿತಿದ್ದ ರೇಖಾ, ಕಾದಂಬರಿಯ ಅಂತ್ಯದಲ್ಲಿ ಎಲ್ಲ ಪರಿಧಿಗಳನ್ನೂ ಮೀರಿ ಕಲ್ಪನಾ ಲೋಕದಲ್ಲಿ ಮರೆಯಾಗುತ್ತಾಳೆ. ಕಾದಂಬರಿಗೆ ಚಾಲನೆಕೊಟ್ಟ ಅವಳು ಈ ರೀತಿ ಮರೆಯಾದುದು ಈ ಕಾದಂಬರಿಯ ವಿಶಿಷ್ಟತೆಯನ್ನು ಹೆಚ್ಚಿಸಿದೆ. 'ಕೇಂದ್ರ ವೃತ್ತಾಂತ' ಎಂಬ ಶೀರ್ಷಿಕೆಯಲ್ಲಿ ಪ್ರತಿಯೊಂದು ಶಬ್ದವೂ ಮಹತ್ವ ಪಡೆದಿರುತ್ತದೆ. 'ವೃತ್ತಾಂತ' ಎಂಬಲ್ಲಿ 'ವೃತ್ತ' ಇದ್ದುದು ಆಕಸ್ಮಿಕವಲ್ಲ. ರೇಖಾ ಈ ತುದಿ-ಕೊನೆಯಿಲ್ಲದ 'ವೃತ್ತ'ದಿಂದ ದೂರವಾಗಿ ಮರೆಯಾದ 'ವೃತ್ತಾಂತ'ವೂ ಕಾದಂಬರಿಯ 'ಅಂತ್ಯ'ಕ್ಕೆ ಒಂದು ವಿಶೇಷ ಅರ್ಥ ಕೊಟ್ಟಿದೆ ಎಂಬುದು ನನ್ನ ಅನಿಸಿಕೆ. ನವ್ಯ ಸಾಹಿತ್ಯದಲ್ಲಿ ಗುರುತಿಸಿಕೊಂಡ ಚಿತ್ತಾಲರು ರಚಿಸಿದ ಕಾದಂಬರಿಗಳಲ್ಲಿ 'ಕೇಂದ್ರ ವೃತ್ತಾಂತ' ಒಂದು ವಿಶಿಷ್ಟ ಸ್ಥಾನವನ್ನು ಪಡೆದು, ಆಧುನಿಕ ಕಾದಂಬರಿಗಳಲ್ಲಿ ಅದು ಒಂದು ಗಮನಾರ್ಹ ಕೃತಿ.

**ಕೃತಿ ವಿವರ:** ಕೇಂದ್ರ ವೃತ್ತಾಂತ ಯಶವಂತ ಚಿತ್ತಾಲ, ಗೀತಾ ಬುಕ್ ಹೌಸ್, ಮೈಸೂರು, ೧೯೯೬, ಪು. ೩೦೩

## ಗಾಂಧಿಯುಗಕ್ಕೆ ಕನ್ನಡಿ

ನಾಗವೇಣಿಯವರ 'ಗಾಂಧಿ ಬಂದ' ಮತ್ತು ವ್ಯಾಸರಾಯ ಬಲ್ಲಾಳರ 'ಹೆಜ್ಜೆ...'
ಕಾದಂಬರಿಗಳ ಸಮೀಕ್ಷೆ

–ಎಚ್. ವೈ. ರಾಜಗೋಪಾಲ್, ಮೀಡಿಯಾ, ಪೆನ್ಸಿಲ್ವೇನಿಯಾ

'...And then Gandhi came. He was like a powerful current of fresh air that made us stretch ourselves and take deep breaths; like a beam of light that pierced the darkness and removed the scales from our eyes; like a whirlwind that upset many things, but most of all the working of people's minds...'

- Jawaharlal Nehru, Discovery of India

ಭಾರತದ ರಾಜಕೀಯ ರಂಗದಲ್ಲಿ ಗಾಂಧಿ ಕಾಲಿಡುವ ಹೊತ್ತಿಗೇ ನಮ್ಮ ರಾಷ್ಟ್ರೀಯ ಪ್ರಜ್ಞೆ ಎಚ್ಚರಗೊಂಡಿತ್ತು. ಆದರೆ ಆ ಸ್ವಾತಂತ್ರ್ಯ ಹೋರಾಟದಲ್ಲಿ ನಮ್ಮೆಲ್ಲರ ಪಾಲೂ ಇದೆ ಎಂಬ ಸಾಮೂಹಿಕ ಪ್ರಜ್ಞೆ ಇನ್ನೂ ಅಷ್ಟಾಗಿ ಬಂದಿರಲಿಲ್ಲ. ಗಾಂಧಿ ಬಂದಮೇಲೆ ಜನತೆಯಲ್ಲಿ ಒಂದು ಅದ್ಭುತ ಮಾರ್ಪಾಡು ಕಾಣಿಸಿಕೊಂಡಿತು. ಅದನ್ನು ಕುರಿತು ಚರಿತ್ರಕಾರ ಜವಾಹರಲಾಲ್ ನೆಹ್ರೂ ತಮ್ಮ ಕವಿಸಹಜ ಶೈಲಿಯಲ್ಲಿ ಹೇಳಿದಂತೆ, ಬಿರುಗಾಳಿಯಂತೆ ಬಂದ ಅವರು ನಾನಾ ವಸ್ತುಗಳನ್ನು ಪಲ್ಲಟಗೊಳಿಸಿದರು; ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಅವರು ಪಲ್ಲಟಗೊಳಿಸಿದ್ದು ಜನರ ಆಲೋಚನಾಧಾರೆಯನ್ನು.

ಅಹಿಂಸಾಮಾರ್ಗವಲ್ಲದೆ, ಗಾಂಧಿಯವರ ಸ್ವಾತಂತ್ರ್ಯ ಹೋರಾಟದ ಕಲ್ಪನೆಯಲ್ಲಿ ಇನ್ನೂ ಒಂದು ವಿಶೇಷವಿತ್ತು. ಅವರು ರಾಜಕೀಯ ಹೋರಾಟದೊಂದಿಗೇ ಸಮಾಜ ಸುಧಾರಣೆಯನ್ನೂ ಕೈಗೊಂಡರು. ಅಮೆರಿಕದ ಸ್ವಾತಂತ್ರ್ಯ ಘೋಷಣೆಯಲ್ಲಿ ಆಗಿನ ಬಿಳಿಯ ಜನ 'We hold these truths to be self-evident, that all men

are created equal...' ಎಂದು ಹೇಳುತ್ತಲೇ ಕಪ್ಪು ಜನರನ್ನು ತಮ್ಮ ಗುಲಾಮರಾಗಿ ಇರಿಸಿಕೊಂಡಿದ್ದರು. ಗಾಂಧಿಗೆ ಆ ಹೇಳಿಕೆಯಲ್ಲಿನ ಕಪಟತನ ತಟ್ಟಿರಬೇಕು. ಆ ದಾಸ್ಯ ಪದ್ಧತಿ ರದ್ದಾಗಲು ಸುಮಾರು ತೊಂಬತ್ತು ವರ್ಷ ಬೇಕಾಯಿತು. ಹಾಗೆ ಅಧಿಕೃತವಾಗಿ ಅದು ರದ್ದಾದ ಮೇಲೂ ವರ್ಣದ್ವೇಷ ೧೯೬೦ರ ದಶಕದವರೆಗೂ ದೇಶದ ದಕ್ಷಿಣದಲ್ಲಿ ಆಚರಣೆಯಲ್ಲಿತ್ತು. ಒಬ್ಬ ಕಪ್ಪು ಪ್ರಜೆ ದೇಶದ ಅಧ್ಯಕ್ಷನಾಗಲು '...all men are created equal' ಎಂದು ಹೇಳಿದ ಮೇಲೆ ೨೩೨ ವರ್ಷಗಳೇ ಬೇಕಾಯಿತು!

ಈ ಗಾಂಧಿಯೆಂಬ ಬಿರುಗಾಳಿ ಭಾರತದ ಮೂಲೆಮೂಲೆಗೂ ಬೀಸಿತು. ದೊಡ್ಡದೊಡ್ಡ ಶಹರುಗಳಲ್ಲದೆ ಸಣ್ಣ ಪುಟ್ಟ ಊರುಗಳು, ಹಳ್ಳಿಗಳಲ್ಲೆಲ್ಲ ಬೀಸಿತು. ಯುವಕರು, ಹಿರಿಯರು, ಮುದುಕರು, ಮಕ್ಕಳು, ಕೆಲಸಗಾರರು, ದಣಿಗಳು, ಪ್ರತಿಷ್ಠಿತರು, ದೀನರು, ಮೇಲ್ಜಾತಿಯವರು, ಅತ್ಯಂತ ಕೆಳ ಜಾತಿಯವರು – ಎಲ್ಲರಿಗೂ ಸ್ವಾತಂತ್ರ್ಯ ಸಂಗ್ರಾಮದ ಕರೆ ಇತ್ತಿತು. ಅದಕ್ಕೆ ಎಲ್ಲರೂ ಒಂದೇ ರೀತಿ ಓಗೊಟ್ಟರೆಂದು ಹೇಳಲಾಗದಿದ್ದರೂ ಹಿಂದೆಂದೂ ಕಂಡಿರದಷ್ಟು ಜನ, ಊಹಿಸಲಾರದಷ್ಟು ಜನ ಆ ಕರೆಗೆ ಓಗೊಟ್ಟರು; ಅದರ ಪ್ರಭಾವಕ್ಕೆ ಒಳಗಾದರು. ಜನರ ಮನಸ್ಸುಗಳಲ್ಲಿ, ಸಂಸಾರಗಳಲ್ಲಿ, ಸಾಮಾಜಿಕ ವ್ಯವಸ್ಥೆಗಳಲ್ಲಿ, ದೇಶದ ರಾಜಕೀಯದಲ್ಲಿ ಬದಲಾವಣೆಗಳು ಕಾಣತೊಡಗಿದವು.

ಆ ಯುಗಕ್ಕೆ ಸಂಬಂಧಿಸಿದ ಎರಡು ಕಾದಂಬರಿಗಳ ವೀಕ್ಷಣೆ ಇಲ್ಲಿದೆ: ಮೊದಲಾಗಿ ಎಚ್. ನಾಗವೇಣಿಯವರ ಮೊಟ್ಟಮೊದಲ ಕಾದಂಬರಿ 'ಗಾಂಧಿ ಬಂದ', ಆಮೇಲೆ ಕನ್ನಡದ ಖ್ಯಾತ ಹಿರಿಯ ಕತೆಗಾರ ವ್ಯಾಸರಾಯ ಬಲ್ಲಾಳರು ತಮ್ಮ ಜೀವಿತದ ಕಡೆಯ ದಿನಗಳಲ್ಲಿ ಬರೆದ ಕಾದಂಬರಿ 'ಹೆಜ್ಜೆ...' ಈ ಎರಡೂ ಕರ್ನಾಟಕದ ಒಂದೇ ಪ್ರದೇಶದಲ್ಲಿ ನಡೆಯುವ ಕತೆಗಳು. ಕಾಲಪ್ರಕಾರವಾಗಿಯೂ ಅವು ಒಂದರ ತರುವಾಯ ಮತ್ತೊಂದು ನಡೆಯುವಂಥವು.

೧

'ಗಾಂಧಿ ಬಂದ' ಕರ್ನಾಟಕದ ಪಶ್ಚಿಮ ಕರಾವಳಿಯ ಮಂಗಳೂರಿನ ಸುತ್ತಮುತ್ತಿನ ತುಳುನಾಡ ಪ್ರದೇಶದಲ್ಲಿ ಸುಮಾರು ೧೯೨೦ರಿಂದ ೧೯೩೪ರ ವರೆಗೆ ನಡೆಯುವ ಕತೆಯನ್ನು ಹೇಳುತ್ತದೆ. ಅಂದಿನ ಸಮಾಜದ, ಅದರಲ್ಲಿ ಗಾಂಧಿಯ ಪ್ರಭಾವದಿಂದಾದ ಪಲ್ಲಟಗಳ ಚಿತ್ರಣ ಇಲ್ಲಿದೆ. ಕತೆಯಲ್ಲಿ ಇಡೀ ಊರಿಗೆ ಊರೇ ಪಾತ್ರವಹಿಸುತ್ತದೆ. ಕತೆಯೆಲ್ಲ ಸುಮಾರು ಒಂದು ದಿನದ ಪ್ರಯಾಣದ ಪರಿಧಿಯ ಪ್ರದೇಶದಲ್ಲಿ ನಡೆಯುತ್ತದೆ.

ಕತೆಯ ಮುಖ್ಯ ತಾಣ ಸುರಗಿಮಠ. ಊರ ಪಟೇಲರು ಶ್ರೀನಿವಾಸ ಹೆಬ್ಬಾರರು. ಅವರ ಮನೆಯಲ್ಲಿ ಇರುವ ಇತರರು ಹೆಬ್ಬಾರರ ಪತ್ನಿ ರುಕುಣಿಯಮ್ಮ, ತಾಯಿ ಅಂಮುಣಿಯಮ್ಮ, ಮಕ್ಕಳು ದ್ರೌಪದಿ ಮತ್ತು ಹಯವದನ. ಹೆಬ್ಬಾರರು ಅನುಕೂಲವಂತರು,

ಅವರ ದೇಣಿಯಲ್ಲಿ ಪತ್ತಾರು ಜನ ಕೆಲಸ ಮಾಡುತ್ತಾರೆ. ಕೊರಗರ ಐತು, ಅಂತಪ್ಪ ಪೂಜಾರಿ, ಅಂಗರ ಮೂಲ್ಯ, ಪಾಂಚ ಪೂಜಾರಿ, ಕೂಸು ಮೊಯ್ಲಿ - ಇವರೆಲ್ಲ ಅವರ ಒಕ್ಕಲ ಆಳುಗಳು. ದ್ರೌಪದಿ ತಣ್ಣೀರುಬಾವಿಯ ಕೇಶವ ಶಾನುಭೋಗರ ಮಗ ನರಹರಿಯನ್ನು ಮದುವೆಯಾಗಿ ಒಂದೇ ವರ್ಷದಲ್ಲಿ ಮಕ್ಕಳಿಲ್ಲದೆಯೇ ವಿಧವೆಯಾಗಿದ್ದಾಳೆ. ಸಂಪ್ರದಾಯಸ್ಥರಾದ ಹೆಬ್ಬಾರರು ಅವಳ ಇಚ್ಛೆಗೆ ವಿರುದ್ಧವಾಗಿ ಅವಳಿಗೆ ಮಡಿ ಹಿಡಿಸಿದ್ದಾರೆ. ಅವಳ ಓಡಾಟ ವ್ಯವಹಾರಗಳ ಮೇಲೆ ಎಲ್ಲ ಬಗೆಯ ನಿರ್ಬಂಧಗಳನ್ನು ಹಾಕಿದ್ದಾರೆ. ತಾಯಿ ರುಕುಣಿಯಮ್ಮನಿಗೆ ಮಗಳ ವೈಧವ್ಯದ ಬಗ್ಗೆ ಒಳಗೆ ಅನುತಾಪವಿದ್ದರೂ, ಅವಳ ಸ್ವತಂತ್ರ ಮನೋಭಾವದ, 'ದಿಂಡೆ ಬಸವಿ'ತನದ ಬಗ್ಗೆ ಅಸಹನೆ ಇದೆ. ಅಜ್ಜಿ ಆಂಮುಣಿಯಮ್ಮ, ಮಾವ ಕೇಶವ ಶಾನುಭೋಗರಿಗಾದರೂ ಅವಳ ಬಗ್ಗೆ ಅನುಕಂಪವಿದೆ, ಆದರೆ ತಂದೆತಾಯಿಯರಿಗಿಲ್ಲ. ಅದಕ್ಕೆ ಮುಖ್ಯ ಕಾರಣ ಅವಳಿಗೂ ಅದ್ರಾಮನಿಗೂ ಬೆಳೆಯುತ್ತಿರುವ ಪರಸ್ಪರ ಅನುರಾಗ. ಅದ್ರಾಮ ಆ ಸುತ್ತಮುತ್ತಲಿನವರಿಗೆಲ್ಲ ಬೇಕಾದವ. ಅಲ್ಲಿನ ಒಂದೇ ಜಟಕಾಬಂಡಿಯ ಮಾಲೀಕ-ಸಾರಥಿ. ಮುಸಲ್ಮಾನ. ಚಿಕ್ಕಂದಿನಲ್ಲಿ ನಾಲ್ಕಾರು ವರ್ಷ ಶಾಲೆಗೆ ಹೋಗಿದ್ದು ಹೇಗೋ ಗಾಂಧಿ ಬಗ್ಗೆ ತಿಳಿದುಕೊಂಡಿದ್ದಾನೆ. ಅವರ ಹೊಸ ಆಲೋಚನೆಗಳಿಗೆ ಮನಸ್ಸು ಕೊಟ್ಟಿದ್ದಾನೆ. ದ್ರೌಪದಿಯ ಅಸಹಜ, ಅಸಹಾಯಕ ಸ್ಥಿತಿಯ ಬಗ್ಗೆ ಅವನಿಗೆ ಅತೀವ ಅನುಕಂಪ. ಕೇಶಮುಂಡನ ಇತ್ಯಾದಿಗಳಿಂದ ಅವಳನ್ನು ವಿರೂಪಗೊಳಿಸಿದ್ದರೂ, ಅವಳ ಚೆಲುವು, ಅವಳ ಕಣ್ಣಿನ ಹೊಳಪು ಅವನಿಗೆ ಕಾಣದೆ ಇಲ್ಲ. ಒಂದು ಸಲ ಅದ್ರಾಮ ಪಕ್ಕದ ಊರಿಗೆ ಹೋಗುತ್ತಿದ್ದಾಗ ಹೆಬ್ಬಾರರು ತಮ್ಮ ಮಗಳ ಕೇಶಮುಂಡನಕ್ಕೆ ಕ್ಷೌರಿಕನನ್ನು ಬರಹೇಳು ಅಂದಾಗ ಅವನು 'ತಲೆಬೋಳಿಸಿದರೆ ಆಕೆಯ ಹೋದ ಬದುಕು ಮರಳಿ ಬರುತ್ತಾ ಭಟ್ರೇ... ಮೊದಲು ಆಕೆಗೊಂದು ಮದುವೆ ಮಾಡಿಬಿಡಿ' ಎಂದದ್ದು ಕೇಳಿದಾಗಿನಿಂದ ಹೆಬ್ಬಾರರಿಗೆ ಅವನ ಮೇಲೆ ಕೋಪ. ತನ್ನಂಥ ಆಚಾರವಂತ ಬ್ರಾಹ್ಮಣನಿಗೆ ಬುದ್ಧಿಹೇಳುವಷ್ಟು ಸೊಕ್ಕೇ ಅವನಿಗೆ! ಮೊದಲಿಂದ ಹೆಬ್ಬಾರರು ಅವನ ಗಾಡಿ ಹತ್ತುತ್ತಿದ್ದರೂ, ಅವನು ಪರಿಚಿತನೇ ಆಗಿದ್ದರೂ, ಒಂದು ಕಾಲಕ್ಕೆ ರುಕುಣಿಯಮ್ಮನಿಗೂ ಅವರ ತಂದೆಯ ಮನೆಯವರಿಗೂ ಅವನು ತುಂಬ ಬೇಕಾದವನೇ ಆಗಿದ್ದರೂ, ಈಗ ಅವನು ದೂರವಿಡಬೇಕಾದ ವ್ಯಕ್ತಿ. ಕೋಲವೊಂದರಲ್ಲಿ ಅದ್ರಾಮ ವೇಷಧಾರಿಯಾಗಿ ಬಂದು ದ್ರೌಪದಿಯನ್ನು ಮಾತನಾಡಿಸಿ ಹೋದಮೇಲಂತೂ ಅವನ ಮೇಲಿನ ಕೋಪ, ಅವಳ ಮೇಲಿನ ನಿರ್ಬಂಧ ಹೆಚ್ಚುತ್ತದೆ. ತನ್ನಿಂದ ದ್ರೌಪದಿಗೆ ತೊಂದರೆಯಾಗದಿರಲಿ ಎಂದು ಅದ್ರಾಮ ಅವಳಿಂದ ಎಷ್ಟೇ ದೂರವಿರಲು ಪ್ರಯತ್ನಿಸಿದರೂ, ಅವನ ಮನಸ್ಸು ಮತ್ತೆ ಮತ್ತೆ ಅವಳ ಕಡೆಗೇ ತಿರುಗುತ್ತದೆ. ಅವರ ಪ್ರೇಮ ಬೆಳೆಯುತ್ತಲೇ ಹೋಗುತ್ತದೆ.

ಹೆಬ್ಬಾರರು ಮಗಳ ಮೇಲೆ ಧರ್ಮ, ನೀತಿಯ ಕಟ್ಟುಪಾಡು ಹೇರಿದ್ದರೂ, ತಾವೇ

ಅದಕ್ಕೆ ಬಾಹಿರರು. ಅದೇ ಊರಿನ ನಾರ್ಣ ಭಟ್ಟರು ಪೂಜೆ ಪೌರೋಹಿತ್ಯದ ಕೆಲಸದ ಮೇಲೆ ತಿಂಗಳುಗಟ್ಟಲೆ ಮಲೆಯಾಳಕ್ಕೆ ಹೋಗುವಾಗೆಲ್ಲ ಅವರು ತಮ್ಮ ಭೂಮಿ ಮನೆ ವ್ಯವಹಾರಗಳನ್ನು ನೋಡಿಕೊಳ್ಳಲು ಹೆಬ್ಬಾರರಿಗೆ ವಹಿಸಿ ಹೋಗುತ್ತಾರೆ. ಭಟ್ಟರ ಹೆಂಡತಿ ಪುಟ್ಟಮ್ಮಕ್ಕ 'ಕಡಲೆ ಕಾಳಿನ ನಡುವೆ ಹೆಸರು ಕಾಳಿನಂಥ' ಹೆಂಗಸು. ಹೆಬ್ಬಾರರು ಆಕೆಯನ್ನು ಒಂದು ಕೈ ಹೆಚ್ಚಾಗಿಯೆ ನೋಡಿಕೊಳ್ಳುತ್ತಾರೆ. ಆದರೆ ಅದಕ್ಕೆ ಸನಾತನ ಧರ್ಮದಲ್ಲಿ ಅವಕಾಶವಿದೆ, ಅದು ಧರ್ಮಬಾಹಿರವಲ್ಲ ಎಂದು ಅವರು ಕೊಡುವ ಸಮರ್ಥನೆ. ಊರಿನವರಿಗೆಲ್ಲ ಇವರ ಸಂಬಂಧ ಗೊತ್ತು. ನಾಲ್ಕು ಬಾರಿ ಆಕೆ ಇವರಿಗೆ ಬಸುರಾಗಿದ್ದಾಳೆ. ಮೂರು ಬಾರಿ ಹೆಬ್ಬಾರರು ಅವಳ ಮೈಯಿಳಿಸಿಸಿದ್ದಾರೆ. ಆದರೆ ನಾಲ್ಕನೆಯ ಬಾರಿ ಅದು ಸಾಧ್ಯವಾಗದೆ, ಏಳನೆಯ ತಿಂಗಳಲ್ಲಿ ಹುಟ್ಟಿದ ಮಗುವಿನ ಹೊಕ್ಕಳ ಬಳ್ಳಿ ಬಿಗಿಸದೆ ರಕ್ತಸ್ರಾವದಿಂದ ಮಗು ಸಾಯುವಂತೆ ಮಾಡಿ ಅದನ್ನೊಂದು ಹಳ್ಳಕ್ಕೆ ಎಸೆಯುತ್ತಾರೆ. ರುಕುಣಿಯಮ್ಮನಿಗೆ ಇವರ ಈ ಸಂಬಂಧ ಮೈಯುರಿಯುವ ವಿಷಯ.

ಹೆಬ್ಬಾರರಿಗೆ ಸ್ವಲ್ಪ ಎದುರಾಗಿ ನಿಲ್ಲುವವರು ಅದೇ ಊರಿನ ಗುತ್ತಿನ ಒಡೆಯರು – ಕುಳಾಯ್ ಗುತ್ತಿನ ಪಾಂಡು ಶೆಟ್ಟರು, ಪೊಸೊಡಿ ಗುತ್ತಿನ ತೌಡ ಶೆಟ್ಟರು. ಅವರ ಒಕ್ಕಲಾಳುಗಳು ಮಂಜಪ್ಪ, ಪಿಜಿನ ಮೂಲ್ಯ, ದೊಂಬ ಪೂಜಾರಿ. ಕೋಲ, ನೇಮ ಮುಂತಾದ ಸಂಭ್ರಮಗಳಲ್ಲಿ ಅವರು ಹೆಬ್ಬಾರರೊಂದಿಗೆ ಅವರು ಬ್ರಾಹ್ಮಣರು, ಪಟೇಲರು ಎಂಬ ಕಾರಣಗಳಿಂದ ಸಹಕರಿಸಿದರೂ, ಅವರಿಗೆ ಹೆಬ್ಬಾರರ ಮೇಲೆ ಸ್ವಲ್ಪ ಪೈಪೋಟಿಯೆ. ಗುತ್ತಿನ ಮನೆಯವರು ಅಳಿಯಕಟ್ಟು ಸಂಪ್ರದಾಯಕ್ಕೆ ಸೇರಿದವರು. ಮಾತೃಪ್ರಧಾನವಾದ ಆ ಸಂಪ್ರದಾಯದಲ್ಲಿ ಮನೆಯ ಆಸ್ತಿ ತಾಯಿಯಿಂದ ಮಗಳಿಗೆ ಹೋಗುವುದರಿಂದ ಮನೆಯಲ್ಲಿ ಹೆಂಗಸರ ಪ್ರಾಬಲ್ಯ ಹೆಚ್ಚು. ಆ ಹೆಂಗಸರದ್ದು ರಾಣಿ ಜೇನಿನ ನಿರಾತಂಕ ಜೀವನ. ಗಂಡಸರದೇನಿದ್ದರೂ ಸಂಸಾರದ ವ್ಯವಹಾರ ಎಲ್ಲವನ್ನೂ ನೋಡಿಕೊಳ್ಳುವುದು, ಆಸ್ತಿ ವೃದ್ಧಿಸುವುದು, ತಮ್ಮ ನಂತರ ತಮ್ಮ ಅಧಿಕಾರವನ್ನು ತಮ್ಮ ಹೆಂಡತಿಯ ಕಡೆಯವರಿಗೆ ಒಪ್ಪಿಸುವುದು ಅಷ್ಟೆ. ಪಾಂಡು ಶೆಟ್ಟರ ತಾಯಿ ಸೊನ್ನಕ್ಕೆಯ ತಂಗಿ ಸೂರಕ್ಕೆಗೆ ಮದುವೆಯಾಗಿ ಆಕೆಯ ಗಂಡ ಹೆಂಡತಿಯ ಮನೆಗೆ ಬಂದ ಮೇಲೆ ಸ್ವಲ್ಪ ಸಮಯದಲ್ಲೇ ಆ ಪದ್ಧತಿಗೆ ಬೇಸತ್ತು ತಾನೇ ಸ್ವಲ್ಪ ಭೂಮಿ ಮಾಡಿಕೊಂಡು ಬೇರೆಡೆಗೆ ಹೋಗುತ್ತಾನೆ. ಸೂರಕ್ಕೆಯೂ ಅವನೊಡನೆ ಸಹಕರಿಸಿ ಅವನೊಂದಿಗೆ ಇರುತ್ತಾಳೆ. ಹೀಗೆ ತನ್ನ ಗಂಡನ ಅಭಿಮಾನಕ್ಕಾಗಿ ತನ್ನ ತವರುಮನೆಯ ಸಕಲೈಶ್ವರ್ಯಗಳನ್ನು ಬಿಟ್ಟು ಅವನ ಹಿಂದೆ ನಡೆದ ಸೂರಕ್ಕೆಯ ಬಗ್ಗೆ ಜನರಿಗೆ ತುಂಬಾ ಗೌರವ. ಅವರ ಮಗನೇ ಮಾರಪ್ಪ.

ಈ ಮಾರಪ್ಪ ಹೆಬ್ಬಾರರ ತಿರಸ್ಕಾರದ ಮಾತಿನಲ್ಲಿ 'ಗಾಂಧಿ ಬಾಲ'. ಈತನಿಗೆ ಮೂವತ್ತೈದು ವಯಸ್ಸಾದರೂ ಮದುವೆಯ ಚಿಂತೆಯೇ ಇಲ್ಲ. ಒಬ್ಬ ಹೆಂಗಸನ್ನೂ

ಕಣ್ಣೆತ್ತಿ ಕೂಡ ನೋಡ. ಕರ್ನಾಟಕದ ಪ್ರಥಮ ಕಾಂಗ್ರೆಸ್ ಮುಂದಾಳುಗಳಲ್ಲಿ ಒಬ್ಬರಾದ ಕಾರ್ನಾಡ ಸದಾಶಿವರಾಯರ ಶಿಷ್ಯನಾಗಿ ಗಾಂಧಿಯ ಅಸಹಕಾರ ಚಳವಳಿ, ಖಾದಿ ಪ್ರಚಾರ, ಮದ್ಯಪಾನ ನಿರೋಧ ಇವುಗಳಲ್ಲೇ ತನ್ನ ಸಮಯವೆಲ್ಲ ಕಳೆಯುತ್ತಿದ್ದಾನೆ. ತಾಯಿ ಸೂರಕ್ಕೆಗೆ ತನ್ನ ಮುದಿಗಾಲಕ್ಕೆ ತನಗೆ ಸಹಾಯ ಮಾಡಲು ಒಬ್ಬ ಸೊಸೆ ಇಲ್ಲವಲ್ಲ ಎಂಬ ಕೊರಗು. ಅದರಿಂದಾಗಿ ಮಗನ ಮೇಲೆ ಕೋಪ, ಗಾಂಧಿಯ ಮೇಲೆ ಕೋಪ. ಈ ಮಾರಪ್ಪನಿಗೂ ಅದ್ರಾಮನಿಗೂ ತುಂಬ ನಂಟು, ಗಾಂಧಿ ಕಾರಣದಿಂದ. ಈ ಅದ್ರಾಮ ದ್ರೌಪದಿಯನ್ನು ಸಂಧಿಸದಂತೆ ತಡೆಯುವ ಬಗೆ ಹೇಗೆ ಎಂದು ಹೆಬ್ಬಾರರು ಮಾರಪ್ಪನನ್ನು ಕೇಳಿದಾಗ ಅವನು 'ಎತ್ತಣ ದಾರಿ ಬದಲಿಸಿದರೂ ಈ ತೋಡು ಹರಿಯುವುದು ಅತ್ತಲೇ... ಆ ಕಡಲಿನತ್ತಲೇ' ಎಂದು 'ದಾರ್ಶನಿಕನಂತೆ' ಹೇಳಿದ್ದು ಹೆಬ್ಬಾರರಿಗೆ ಹಿಡಿಸದ ಮಾತು.

ವಿಧವೆ ದ್ರೌಪದಿಯ ಪಾಡು ಒಂದಾದರೆ, ಸಮೀಪದ ಊರಾದ ಜಾರಿಗೆ ಬೆಟ್ಟಿನ ಸುಬ್ಬಯ್ಯಶೆಟ್ಟರ ಮಗಳು ದಾರುವಿನ ಪಾಡು ಇನ್ನೊಂದು. ಸುಂದರಿಯಾಗಿ ಬೆಳೆಯುತ್ತಿದ್ದ ಮಗಳು ಯೌವ್ವನ ಬಂದರೂ ಹೊರಗಾಗದಿದ್ದ ಚಿಂತೆಯಲ್ಲಿ ಅವಳನ್ನು ವೈದ್ಯರ ಬಳಿಗೆ ಕೊಂಡುಹೋದಾಗ ಅವಳಿಗೆ ಗರ್ಭಕೋಶವೇ ಇಲ್ಲವೆಂದು ತಿಳಿಯುತ್ತದೆ. ಊರಿನ ನಾಟಿವೈದ್ಯ ಅವಳು ಶಿಖಂಡಿಯೆಂದು ಒರಟು ಮಾತಿನಲ್ಲಿ ಹೇಳುತ್ತಾನೆ. ಅದರಿಂದ ಅತ್ಯಂತ ವ್ಯಾಕುಲಗೊಂಡ ದಾರು ಅಂದಿನಿಂದ ಅಡುಗೆಮನೆ ಬಿಟ್ಟು ಹೊರಗೆ ಬಾರಳು. ಅವಳ ತಾಯಿ ಅದೇ ದುಃಖದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಮೇಲೆ ಅವಳ ಬಾಳು ಇನ್ನಷ್ಟು ಅರ್ಥಶೂನ್ಯವಾಗುತ್ತದೆ. ತಾಯಿ ಸತ್ತಾಗ ತನ್ನ ದುಃಖವನ್ನು ಕಣ್ಣೀರಿನಲ್ಲೂ ತೋಡಿಕೊಳ್ಳಲು ಅವಳಿಗೆ ಸಾಧ್ಯವಾಗುತ್ತಿಲ್ಲ.

ಇಂಥ ಸಮಯದಲ್ಲಿ ಕಾರ್ನಾಡ ಸದಾಶಿವರಾಯರೂ ಅವರ ಸಹವರ್ತಿ ತಿಂಗಳಾಯರೂ ಗಾಂಧಿಯನ್ನು ಮಂಗಳೂರಿಗೆ ಕರೆತರುತ್ತಾರೆ. ಮಾರಪ್ಪ ಶೆಟ್ಟರೂ ತಿಂಗಳಾಯರೂ ಜನರಲ್ಲಿ ಆ ಬಗ್ಗೆ ಪ್ರಚಾರ ಮಾಡಿ ಅವರಿಗಾಗಿ ನಿಧಿ ಸಂಗ್ರಹಕ್ಕೆ ಮೊದಲಿಡುತ್ತಾರೆ. ಎಲ್ಲರೂ ಒಂದಿಷ್ಟು ಕೊಟ್ಟರೂ ಹೆಬ್ಬಾರರು ಒಂದು ಕಾಸೂ ಬಿಚ್ಚರು. ಗುತ್ತಿನ ಶೆಟ್ಟರ ಒಕ್ಕಲಾಳು ಪಿಜಿನ ಮೂಲ್ಯನಿಗೆ 'ಗಾಂಧಿಯೆಂದರೆ ಪಂಜುರ್ಲಿ ಭೂತದ ಸೌಮ್ಯಾವತಾರ'. ತನ್ನ ಕಿವಿಯಲ್ಲಿನ ಬೆಳ್ಳಿಯ ಮುರುವನ್ನು ತೆಗೆದು ಮಾರಪ್ಪನ ಕೈಗಿಡುತ್ತಾನೆ. ಮಾರಪ್ಪ ಅವನನ್ನು ಬಾಚಿ ತಬ್ಬಿಕೊಂಡು 'ನೀನು ಕಳ್ಳು-ಗಂಗಸರ ಕುಡಿಯುವುದನ್ನು ಕಮ್ಮಿ ಮಾಡು; ಅದೇ ನೀನು ಗಾಂಧಿಯವರಿಗೆ ಕೊಡುವ ವಂತಿಗೆ' ಎಂದು ಬುದ್ಧಿ ಹೇಳಿ ಅವನ ಮುರುವನ್ನು ತಾನೇ ಅವನಿಗೆ ತೊಡಿಸುತ್ತಾನೆ. ಗುತ್ತಿನ ಶೆಟ್ಟರು, ಅವರ ಒಕ್ಕಲುಗಳು, ಹೆಬ್ಬಾರರ ಒಕ್ಕಲುಗಳು, ಅದ್ರಾಮ – ಎಲ್ಲರಿಗೂ ಅವರನ್ನು ನೋಡುವ ಕಾತರ. ಐತುವಿಗಂತೂ ಅವರದೇ ಧ್ಯಾನ! ಎಲ್ಲರೂ ಮಾರಪ್ಪನ

ಸಹಾಯದಿಂದ ಗಾಂಧಿಯನ್ನು ನೋಡಲು ಹೋಗುತ್ತಾರೆ. ಆದರೆ ಆ ಮಹಾಸಭೆಯಲ್ಲಿ ದೂರದಿಂದ ಗಾಂಧಿಯನ್ನು ಗುರುತಿಸುವುದಕ್ಕೇ ಆಗದು. ಗಾಂಧಿ ಬಂದರು ಎಂಬುದನ್ನು ಕೇಳಿದರೆ ಹೊರತು, ಹೌದು ನಾನು ನೋಡಿದೆ ಎಂದು ಹೇಳಲಾರರು. ಏಳು ವರ್ಷದ ನಂತರ ಗಾಂಧಿ ಮತ್ತೆ ಬರುತ್ತಾರೆ. ಆದರೆ ಗಾಂಧಿ ಬರುವ ಹಿಂದಿನ ದಿನವಷ್ಟೆ ದಾರುವಿನ ತಾಯಿ ಆತ್ಮಹತ್ಯೆ ಮಾಡಿಕೊಂಡ ದುಃಖ ಎಲ್ಲರನ್ನೂ ಆವರಿಸಿರುತ್ತದೆ. ಅದರಿಂದಾಗಿ ಗುತ್ತಿನ ಪಾಂಡು ಶೆಟ್ಟರು ಆ ಸಮಯದಲ್ಲಿ ತಾವು ಗಾಂಧಿಯನ್ನು ನೋಡಲಾಗದ್ದಕ್ಕೆ ವ್ಯಥೆಪಟ್ಟು ತಾವು ಅವರಿಗೆ ಕೊಡಬೇಕೆಂದಿದ್ದ ಒಡವೆಯ ಗಂಟನ್ನು ಹೆಬ್ಬಾರರಿಗೆ ಕೊಟ್ಟು ಅದನ್ನು ಗಾಂಧಿಗೆ ತಲಪಿಸಲು ಹೇಳುತ್ತಾರೆ. ಆದರೆ ಹೆಬ್ಬಾರರು ಆ ಒಡವೆಗಳನ್ನು ಗಾಂಧಿಗೆ ತಲುಪಿಸದೆ ತಮ್ಮ ಪ್ರೇಯಸಿ ಪುಟ್ಟಮ್ಮಕ್ಕನ ಮೈಮೇಲೆ ಹಾಕುತ್ತಾರೆ. ಹೆಬ್ಬಾರರೊಂದಿಗೆ ದ್ರೌಪದಿಯೂ ಹೋಗುತ್ತಾಳೆ. ಗುಟ್ಟಾಗಿ ತನ್ನ ಗತಿಸಿದ ಗಂಡನಿಗೆ ಮದುವೆಯ ಸಂದರ್ಭದಲ್ಲಿ ಕೊಟ್ಟಿದ್ದ ಚಿನ್ನದ ಗುಂಡಿಗಳನ್ನು ಗಾಂಧಿ ನಿಧಿಗೆ ಅರ್ಪಿಸುತ್ತಾಳೆ.

ಒಬ್ಬ ದಾರುಣ ಸ್ಥಿತಿಯಲ್ಲಿರುವ ಹೆಂಗಸನ್ನು ಮದುವೆಯಾಗಿ ಅವಳ ಬದುಕನ್ನು ಹಸಿರುಗೊಳಿಸಬೇಕೆಂಬ ಕಾರ್ನಾಡರ ಸಂದೇಶವನ್ನು ಮನಗೊಂಡಿದ್ದ ಮಾರಪ್ಪ ತಾಯಿಯನ್ನು ಕಳಕೊಂಡ ದುಃಖದಲ್ಲಿ ತೀವ್ರ ವೇದನೆಗೆ ಒಳಗಾದ ದಾರುವನ್ನು ಮದುವೆಯಾಗುತ್ತಾನೆ. ಮದುವೆ ಆದದ್ದೇನೋ ಆಯಿತು. ದಾರು ಎಷ್ಟೋ ಸಂತಸದಿಂದ ತನಗೂ ಈ ಜೀವನದಲ್ಲಿ ಗಂಡನ ಒಲವು ಸುಖ ಒಂದಷ್ಟಾದರೂ ಸಿಕ್ಕೀತೇ ಎಂದು ಎದುರು ನೋಡಿದಷ್ಟೂ ಮಾರಪ್ಪ ವಿಮುಖನಾಗಿಯೇ ಇದ್ದಾನೆ. ಅವನಿಗೆ ತಾನಾಯಿತು, ತನ್ನ ಖಾದಿಯಾಯಿತು. ಅವನು ಬರೀ ಖಾದಿಮಾರಪ್ಪನೇ ಆಗಿದ್ದಾನೆ.

ಇತ್ತ ತಾವು ಕೊಟ್ಟ ಒಡವೆಗಳನ್ನು ಹೆಬ್ಬಾರರು ಗಾಂಧಿಗೆ ತಲುಪಿಸಲೇ ಇಲ್ಲವೆಂದು ತಿಳಿದ ಗುತ್ತಿನ ಶೆಟ್ಟರು ಈ ಹೆಬ್ಬಾರರ ಮರ್ಯಾದೆಯನ್ನು ಬೀದಿಪಾಲು ಮಾಡುವ ಹಠ ತೊಡುತ್ತಾರೆ. ಹೇಗಾದರೂ ದ್ರೌಪದಿ-ಅದ್ರಾಮರನ್ನು ಒಂದುಗೂಡಿಸಿದರೆ, ಅಲ್ಲಿಗೆ ಹೆಬ್ಬಾರರ ಬ್ರಾಹ್ಮಣ್ಯದ ಸೊಕ್ಕು ಮುರಿಯುತ್ತದೆ, ಅವರು ಮತ್ತೆ ತಲೆಯೆತ್ತಿ ಓಡಾಡುವಂತಿಲ್ಲ ಎಂದು ಬಗೆದು, ಅವರು ಅದ್ರಾಮ ದ್ರೌಪದಿಯನ್ನು ಮದುವೆಯಾಗುವಂತೆ ಉತ್ತೇಜಿಸುತ್ತಾರೆ. ಅವಳನ್ನು ಮದುವೆಯಾದರೆ ಅವಳನ್ನು ಬಾಳಿಸಲು ಸಹಾಯವಾಗುವಂತೆ ಅವನಿಗೆ ದೇಣಿಗೆ ಭೂಮಿ, ಇರಲು ಮನೆ ಕೊಡುವ ಆಶ್ವಾಸನೆ ತೋರುತ್ತಾರೆ. ಗುತ್ತಿನ ಶೆಟ್ಟರ ಒಳ ಆಲೋಚನೆ ತಿಳಿಯದ ಅದ್ರಾಮ ಅವರ ಸಹಾಯವನ್ನು ಒಪ್ಪಿಕೊಳ್ಳುತ್ತಾನೆ. ಮಾರಪ್ಪನೂ ಸಹಕರಿಸುತ್ತಾನೆ. ಅದ್ರಾಮ-ದ್ರೌಪದಿಯರ ಪ್ರೇಮಮಯ ದಾಂಪತ್ಯ ಮೊದಲಾಗುತ್ತದೆ. ವರುಷದಲ್ಲೇ ದ್ರೌಪದಿ ಗಂಡು ಮಗುವಿನ

ತಾಯಾಗುತ್ತಾಳೆ. ಎಂದೂ ತಾಯಾಗಲಾರದ ದಾರು ಈ ಮಗುವನ್ನೇ ತನ್ನ ಮಗುವೆಂದು ಹಚ್ಚಿಕೊಳ್ಳುತ್ತಾಳೆ.

ಈ ಮಧ್ಯೆ ಉಪ್ಪಿನ ಸತ್ಯಾಗ್ರಹ ನಡೆದಿದೆ. ದೇಶಾದ್ಯಂತ ಚಳವಳಿಗಳು ನಡೆಯುತ್ತಿವೆ. ಪಶ್ಚಿಮ ಕರಾವಳಿಯ ಅಂಕೋಲೆಯಲ್ಲಿ ಉಪ್ಪು ಮಾಡುವ ಕೆಲಸ ಮುಂದುವರೆಸುವ ಯತ್ನ ನಡೆದಿದೆ. ಎಲ್ಲೆಲ್ಲೂ ಲಾಠಿ ಛಾರ್ಜುಗಳು ನಡೆದಿವೆ. ಅಂಥ ಒಂದು ಸಂದರ್ಭದಲ್ಲಿ ಅದ್ರಾಮ, ಮಾರಪ್ಪ ಇಬ್ಬರೂ ತೀವ್ರವಾಗಿ ಗಾಯಗೊಳ್ಳುತ್ತಾರೆ. ಅದ್ರಾಮ ಅಸು ನೀಗುತ್ತಾನೆ. ದ್ರೌಪದಿ ಎರಡನೆಯ ಬಾರಿ ವಿಧವೆಯಾಗುತ್ತಾಳೆ. ಪೊಲೀಸರ ಹೊಡೆತದ ಫಲವಾಗಿ ಕಾಲಿಗೆ ವಿಪರೀತ ಪೆಟ್ಟಾಗಿ ಮಾರಪ್ಪ ಮನೆಗೆ ಹಿಂದಿರುಗುತ್ತಾನೆ. ದಾರುವಿನ ಶುಶ್ರೂಷೆಯಲ್ಲಿ ಕಾಲು ಗುಣವಾಗುವುದಲ್ಲದೆ ಮಾರಪ್ಪನ ಮರದಂಥ ಮನಸ್ಸು ತಣಿದು ಅವಳಲ್ಲಿ ಪ್ರೇಮ ಚಿಗುರಿ ಅವರಿಬ್ಬರ ಬಾಳು ಹಸನಾಗುತ್ತದೆ.

ಮೂರನೆಯ ಬಾರಿ ಗಾಂಧಿ ಬರುವ ಹೊತ್ತಿಗೆ ದ್ರೌಪದಿಯ ತಮ್ಮ ಹಯವದನನ ಮದುವೆಯ ಸಿದ್ಧತೆ ನಡೆಯುತ್ತಿದೆ. ಅದರಿಂದಾಗಿ ಹೆಬ್ಬಾರರು ಅವರನ್ನು ಕಾಣಲು ಹೋಗಲಾರರು. ದಾರು ದ್ರೌಪದಿಯರಿಬ್ಬರು ಗಾಂಧಿಗೆ ಕೊಡಲೆಂದು ತಮ್ಮ ಒಡವೆಗಳ ಗಂಟು ಮಾಡಿಟ್ಟುಕೊಂಡಿದ್ದಾರೆ. ಇತ್ತ ಪುಟ್ಟಮ್ಮಕ್ಕನೂ – ಇತ್ತೀಚೆಗೆ ಹೆಚ್ಚು ಹೆಚ್ಚು ಆಧ್ಯಾತ್ಮದಲ್ಲಿ ತೊಡಗಿದವಳು – ಗಾಂಧಿಯನ್ನು ನೋಡಲು ಗುತ್ತಿನವರೊಂದಿಗೆ ಹೋಗಬೇಕೆಂದಿದ್ದವಳು ಅದೇ ತಾನೇ ಮಲೆಯಾಳದಿಂದ ರೋಗಿಷ್ಠನಾಗಿ ಹಿಂತಿರುಗಿ ಬಂದ ಗಂಡನನ್ನು ಬಿಟ್ಟುಬರಲಾರದೆ ತನಗೆ ಹೆಬ್ಬಾರರು ಹಿಂದೆ ಕೊಟ್ಟಿದ್ದ ಒಡವೆಗಳನ್ನು ಗಂಟುಕಟ್ಟಿ ಗುತ್ತಿನ ಶೆಟ್ಟರಿಗೇ ಕೊಟ್ಟು ಅವನ್ನು ಗಾಂಧಿಗೆ ತಲುಪಿಸಬೇಕೆಂದು ಕೋರುತ್ತಾಳೆ. ಅವೆಲ್ಲ ಗುತ್ತಿನವರು ಹಿಂದೆ ಗಾಂಧಿಗೆ ತಲುಪಿಸಬೇಕೆಂದು ಹೆಬ್ಬಾರರಿಗೆ ಕೊಟ್ಟಿದ್ದ ಒಡವೆಗಳೇ ಎಂದು ತಿಳಿದು ಗುತ್ತಿನ ಒಡೆಯರು ಆಶ್ಚರ್ಯ ಪಟ್ಟುಕೊಳ್ಳುತ್ತಾರೆ.

ದಾರು ದ್ರೌಪದಿ ಮಾರಪ್ಪನ ಜೊತೆ ಹೋಗಿ ತಮ್ಮ ನಿಧಿ ಸಮರ್ಪಣೆ ಮಾಡುತ್ತಾರೆ. ಮಾರಪ್ಪನಿಂದ ಅದ್ರಾಮನ ವಿಷಯ ತಿಳಿದುಕೊಂಡ ಗಾಂಧಿ ಆ ಗಂಟು ತೆಗೆದು ಅದರಿಂದ ಹಲವು ಒಡವೆಗಳನ್ನು ತೆಗೆದು ದಾರುವಿನ ಕೈಲೇ ಅವನ್ನು ದ್ರೌಪದಿಗೆ ತೊಡಿಸುತ್ತಾರೆ. ಅವಳ ಬೋಳು ಹಣೆಗೆ ಕುಂಕುಮ ಹಚ್ಚಿಸಿ ಅವಳನ್ನು ಪ್ರೀತಿಯಿಂದ ಹರಸಿ ಬೀಳ್ಕೊಡುತ್ತಾರೆ.

*

ಈ ಕತೆಯ ಹರಹು ಅಷ್ಟೇನೂ ವಿಸ್ತಾರವಾದುದಲ್ಲ. ಪಾತ್ರಗಳೂ ಅಷ್ಟೆ ಮೊದಲಿಂದ ಕೊನೆಯವರೆಗೂ ಅವೇ ಪಾತ್ರಗಳು. ಕೆಲವರು ಮಧ್ಯೆ ಗತಿಸಿದ್ದಾರೆ, ಆದರೆ ಅವು ಗೌಣ ಪಾತ್ರಗಳು. ಆದರೆ ಕತೆ ಹೇಳುವಲ್ಲಿ ನಾಗವೇಣಿಯವರು ಅದಕ್ಕೆ ಹಿನ್ನೆಲೆಯಾಗಿ

ಅಂದಿನ ಸಮಾಜದ ನೂರಾರು ವಿಷಯಗಳನ್ನು ತಿಳಿಸಿಕೊಡುತ್ತಾರೆ. ಆದ್ದರಿಂದ ಇದು ಒಂದು ಸಮಗ್ರವಾದ ಕತೆ ಎನ್ನಿಸುತ್ತದೆ.

ಇದು ಸಮಾಜವೊಂದು ಬದಲಾವಣೆಯ ಸ್ಥಿತಿಯಲ್ಲಿರುವ ಚಿತ್ರಣ, ಅಲ್ಲಿ ಒಂದು ಕಾಲದಲ್ಲಿ – ಗಾಂಧಿ ಯುಗದಲ್ಲಿ – ಆದ ಸಾಮಾಜಿಕ ಬದಲಾವಣೆಗಳ ಚಿತ್ರಣ, 'ಗಾಂಧಿ ಬಂದ' ಎಂದರೆ ಬದಲಾವಣೆ ಬಂತು ಎಂಬುದರ ಸಂಕೇತವಷ್ಟೆ ಎಂದು ಎಷ್ಟೇ ನಾವು ತಾರ್ಕಿಕವಾಗಿ ಹೇಳಿಕೊಂಡರೂ, ಒಳಗೊಳಗೆ ನಮ್ಮ ಹೃದಯಕ್ಕೆ ತಟ್ಟುವುದು ಅದ್ರಾಮ–ದ್ರೌಪದಿಯರ ಪ್ರೇಮ ಕತೆಯೆ. 'ಪ್ರೇಮಕ್ಕೆ ಜಾತಿಯಿಲ್ಲ, ಸಾವಿಗೆ ಜಾತಿಯಿಲ್ಲ' ಎಂದ ಅದ್ರಾಮ ಆ ಎರಡನ್ನೂ ಪೂರ್ಣಗೊಳಿಸುವುದು ವಿಧಿಯ ವಿಡಂಬನ. ಅದೊಂದು ಅತ್ಯಂತ ಹೃದಯಸ್ಪರ್ಶಿ ಸನ್ನಿವೇಶ. ಪ್ರೇಮ ಪ್ರಪಂಚದ ಎಲ್ಲ ಸಮಾಜಗಳಲ್ಲೂ, ಕಾಲದೇಶಗಳನ್ನು ಮೀರಿ, ಎಲ್ಲ ಸಾಮಾಜಿಕ, ಧಾರ್ಮಿಕ, ರಾಜಕೀಯ ನಿರ್ಬಂಧಗಳನ್ನೂ ದಾಟಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದೆ. ವಿಶ್ವ ಸಾಹಿತ್ಯದಲ್ಲಿ ಅದಕ್ಕೆ ನೂರಾರು ನಿದರ್ಶನಗಳಿವೆ. ಆದರೆ ಪ್ರತಿ ಬಾರಿ ಅಂಥ ಪ್ರೇಮ ಕತೆ ಓದಿದಾಗಲೂ ಅದೊಂದು ಹೊಸ ಕತೆಯಾಗಿಯೆ ಅನ್ನಿಸುತ್ತದೆ, ಅದೊಂದು ಹಳಸಿದ ಕತೆ ಎಂದು ಎಂದೂ ಅನ್ನಿಸುವುದಿಲ್ಲ, ಅದಲ್ಲವೆ ಸೋಜಿಗ! ರಾಮಾಯಣವನ್ನೇ ಗಾಂಧಿ ಒಂದು ಪ್ರೇಮ ಕತೆ ಎಂದುದನ್ನು ರಾಜಾಜಿ ತಮ್ಮ ರಾಮಾಯಣದಲ್ಲಿ ನೆನೆಯುತ್ತಾರೆ.

ಈ ಪ್ರೇಮ ಕತೆಯಲ್ಲಿ ಕಾಣುವ ಒಂದು ವೈಶಿಷ್ಟ್ಯವೆಂದರೆ, ಇದರಲ್ಲಿ ಪ್ರೇಮಿಗಳು ದ್ರೌಪದಿ–ಅದ್ರಾಮ ಕೂಡುವ, ಮಾತನಾಡುವ ಸನ್ನಿವೇಶಗಳು ಅಪರೂಪ. ಅವರು ಮಾತಾಡಿಕೊಂಡರು ಎಂಬ ಮಾತಿದೆಯೆ ಹೊರತು ಏನು ಮಾತಾಡಿಕೊಂಡರು ಎಂಬುದು ನಮಗೆ ತಿಳಿಯುವುದಿಲ್ಲ. ಆದರೆ ಅವರ ಪ್ರೇಮ ಅರಳುತ್ತಲೇ ಹೋಗುತ್ತಿದೆ ಎಂಬ ಅನುಭವ ನಮಗೆ ನಿಸ್ಸಂದೇಹವಾಗಿ ತಟ್ಟುತ್ತದೆ. ಈ ಚಿತ್ರಣದಲ್ಲಿ ನಾಗವೇಣಿಯವರು ಬದಲಾವಣೆಯ ಕಾದಂಬರಿಯ ಸಂದರ್ಭದಲ್ಲೂ ಸಹ ಭಾರತೀಯ ಕಾವ್ಯಸಂಪ್ರದಾಯಕ್ಕೆ ಸೇರಿದ 'ವಿರಹಿಗಳ ಶೃಂಗಾರ'ವನ್ನು ಚಿತ್ರಿಸುತ್ತಿದ್ದಾರೆಯೇ ಎನ್ನಿಸುತ್ತದೆ. ಪ್ರೇಮದ ಅತ್ಯಂತ ಸಮರ್ಥ ಚಿತ್ರಣ ವಿರಹದಲ್ಲಿದೆ ಎಂಬ ನಮ್ಮ ಅತಿ ಪ್ರಾಚೀನ ಕಾವ್ಯಸಂಪ್ರದಾಯದ ಸಮರ್ಥನೆ ಇಲ್ಲಿದೆ ಎನ್ನಿಸುತ್ತದೆ. ಮಲ್ಲಿಗೆ ಕಣ್ಣಿಗೆ ಕಾಣದಿದ್ದರೂ ಅದರ ಸೌರಭ ದಿವ್ಯತೆಯ ಅನುಭವವನ್ನು ಮನಸ್ಸಿಗೆ ತೊಡಿಸುವಂತೆ ಅದ್ರಾಮ–ದ್ರೌಪದಿಯರ ಸ್ನಿಗ್ಧ ಪ್ರೇಮ ಓದುಗರಲ್ಲಿ ಒಂದು ಆರ್ದ್ರ ಪವಿತ್ರ ಭಾವವನ್ನು ಹುಟ್ಟಿಸುತ್ತದೆ. ದ್ರೌಪದಿ ತನ್ನ ಮೊದಲ ಗಂಡ ನರಹರಿಯನ್ನೂ ಪ್ರೀತಿಸಿದವಳೆ. ಆದರೆ ಅವನು ಸತ್ತಾಗ, ತಂದೆ ಹೆಬ್ಬಾರರು ಅವಳಿಗೆ ಕೇಶಮುಂಡನ ಮಾಡಿಸಲು ಅನುವಾದಾಗ, ಅವಳು ಅತ್ತು ರಂಪ ಮಾಡಿ ಮನೆಯವರ ಕೈಗೆ ಸಿಕ್ಕದಂತೆ ಓಡಿದ್ದವಳು. ಆದರೆ ಈಗ, ಅದ್ರಾಮ ಸತ್ತಾಗ, ತಾನೇ ಅಪೇಕ್ಷಿಸಿ ಕೇಶಮುಂಡನ ಮಾಡಿಸಿಕೊಳ್ಳುತ್ತಾಳೆ.

ಈ ಕತೆಯಲ್ಲಿ ಬರುವ ಇನ್ನೊಂದು ಮದುವೆ- ಮಾರಪ್ಪ ದಾರುಗಳದ್ದು- ಅದ್ರಾಮ ದ್ರೌಪದಿಯರ ಮದುವೆಗಿಂತ ಭಿನ್ನವಾದದ್ದು. ಅದ್ರಾಮನೂ ಬಹುಶಃ ಸ್ವಲ್ಪಮಟ್ಟಿಗಾದರೂ ಗಾಂಧಿ ವಿಚಾರ ತತ್ತ್ವಗಳಿಂದ ಪ್ರಭಾವಿತನಾಗಿಯೆ ದ್ರೌಪದಿಯನ್ನು ಮದುವೆಯಾಗಿರಬಹುದು. ಆದರೆ ಅದರಲ್ಲಿ ತಾತ್ವಿಕ ನೆಲೆಗಿಂತ ಶುದ್ಧ ಪ್ರೇಮವೇ ಅವನನ್ನು ಮುನ್ನಡೆಸಿದಂತೆ ಅನ್ನಿಸುತ್ತದೆ. ಗಾಂಧಿ ವಿಚಾರಧಾರೆ ಅವನ ಮನಸ್ಸಿಗೆ ಸ್ವಲ್ಪ ಧೈರ್ಯ ತಂದುಕೊಟ್ಟಿರಬಹುದಷ್ಟೆ. ಆದರೆ ಮಾರಪ್ಪನ ಸಂಗತಿ ಬೇರೆ. ಅವನಿಗೆ ದಾರುವನ್ನು ಮದುವೆಯಾಗುವುದರಲ್ಲಿ ಪ್ರೇಮಾನುಭೂತಿಯೇ ಇಲ್ಲ. ಅವನು ದಾರುವನ್ನು ಮದುವೆಯಾಗುವುದು ಕೇವಲ ತಾತ್ವಿಕ ಕಾರಣಗಳಿಂದ, ಸಮಾಜ ಧಿಕ್ಕರಿಸುವಂಥ ಅಸಹಾಯಳಾದ ಸ್ತ್ರೀಯನ್ನು ಆ ದೀನ ಸ್ಥಿತಿಯಿಂದ 'ಮೇಲೆತ್ತುವ' ಉದ್ದೇಶದಿಂದ. ಅದರಿಂದಲೇ ದಾರುವಿಗೆ ಮದುವೆಯಾದರೂ ಸುಖವಿಲ್ಲ, ಗಂಡನಿಂದ ಒಂದೇ ಒಂದು ಪ್ರೀತಿಯ ಮಾತಿಲ್ಲ, ಸ್ಪರ್ಶವಂತೂ ಇಲ್ಲವೇ ಇಲ್ಲ. ಮರಗಟ್ಟಿದ್ದ ಅವನ ಮನಸ್ಸು ಹಸಿರಾಗುವುದು ಅವನು ಲಾಠಿ ಪ್ರಸಂಗದಲ್ಲಿ ಕಾಲು ಮುರಿದುಕೊಂಡು ನೋವಿನಲ್ಲಿದ್ದಾಗ ದಾರು ಅವನನ್ನು ಪ್ರೇಮದಿಂದ ಶ್ರದ್ಧೆಯಿಂದ ಆರೈಕೆ ಮಾಡಿದಾಗಲೇ. ಅದಾದಮೇಲೆ ಅವರ ಜೀವನ ಸುಖಮಯವಾಗಿಯೆ ಇರುತ್ತದೆ. ದಾರುವಿಗೆ ಮಕ್ಕಳಾಗುವ ಸೌಭಾಗ್ಯವೇ ಇಲ್ಲ, ದ್ರೌಪದಿಯ ಮಗುವೇ ಅವರಿಬ್ಬರ ಮಗು. ಆ ಮಗುವಿನ ಮೇಲೇ ದಾರು-ಮಾರಪ್ಪರಿಬ್ಬರೂ ತಮ್ಮ ಪ್ರೀತಿಯನ್ನು ಧಾರೆಯೆರೆಯುತ್ತಾರೆ.

ಗುತ್ತಿನ ಒಡೆಯರು - ಮುಖ್ಯವಾಗಿ ಪಾಂಡು ಶೆಟ್ಟರು - ಅದ್ರಾಮ ದ್ರೌಪದಿಯರನ್ನು ಒಂದುಗೂಡಿಸಲು ಯತ್ನಿಸುವ ಕಾರಣ ಹೆಬ್ಬಾರರನ್ನು ಸದೆಬಡಿಯಬೇಕೆನ್ನುವುದು. ಅವರ ಉದ್ದೇಶ ಅಷ್ಟೇನೂ ಗೌರವಾರ್ಹವಾದುದಲ್ಲ. ಆದರೆ ಅದ್ರಾಮನಿಗೆ ವಿಶೇಷ ಸೌಕರ್ಯಗಳನ್ನು (ಭೂಮಿ, ಮನೆ) ನೀಡಿ ಅವನನ್ನು ತಮ್ಮ ಕಡೆ ಮಾಡಿಕೊಂಡರೂ ಗುತ್ತಿನ ಒಡೆಯರು ಅವನ ಬಗ್ಗೆ, ಅದಕ್ಕಿಂತ ಹೆಚ್ಚಾಗಿ ದ್ರೌಪದಿಯ ಬಗ್ಗೆ ವಿಶೇಷವಾದ ಗೌರವ ಭಾವವನ್ನೇ ಇಟ್ಟುಕೊಂಡಿರುವುದರಿಂದ, ತಮ್ಮ ಐಶ್ವರ್ಯ, ಅಧಿಕಾರ, ಪ್ರಭಾವಗಳಿಂದ ಅವರು ಅದ್ರಾಮ-ದ್ರೌಪದಿಯರನ್ನು ತಮ್ಮ ಕೈಗೊಂಬೆಗಳನ್ನಾಗಿಸಿಕೊಂಡರು ಎಂಬ ಭಾವ ಬರುವುದಿಲ್ಲ. ಈ ಒಡೆಯರ ಒಕ್ಕಲುಗಳಿಗೂ ಮೊದಲಿಂದ ಈ ಇಬ್ಬರ ಬಗ್ಗೆ ಪ್ರೀತಿಯೇ. ಈಗ ತಮ್ಮ ಒಡೆಯರೆ ಇವರಿಗೆ ಇಷ್ಟು ಮನ್ನಣೆ ತೋರಿದಾಗ, ಅವರೂ ತಮ್ಮ ನೆರವು ನೀಡುತ್ತಾರೆ.

ನಾಗವೇಣಿಯವರು ಈ ಸಮಾಜದ ಬಗ್ಗೆ ಕೊಡುವ ಚಿತ್ರಣ ಸಮಾಜ ಶಾಸ್ತ್ರಜ್ಞರಿಗಷ್ಟೇ ಅಲ್ಲ, ಆ ವಿಷಯದ ಬಗ್ಗೆ ಒಂದಿಷ್ಟು ಕುತೂಹಲ ಇರುವವರಿಗೂ ಒಂದು ಸುಗ್ಗಿ. ಆ ತುಳುನಾಡ ಸಂಸ್ಕೃತಿಯನ್ನು ಅವರು ತೆರೆದಿಡುವ ರೀತಿ ಒಂದು ಅದ್ಭುತವಾದ ಕೌಶಲದ ಸಾಧನೆ. ಅವರು ಬಣ್ಣಿಸುವ ಕೋಲಗಳು, ನೇಮಗಳು, ಹಬ್ಬಗಳು, ಸಾಮಾಜಿಕ

ಪದ್ಧತಿಗಳು– ಎಲ್ಲವೂ ಗತಕಾಲಕ್ಕೆ ಒಂದು ಕನ್ನಡಿ ಹಿಡಿಯುತ್ತವೆ. ಕಾದಂಬರಿ ಪ್ರಾರಂಭವಾಗುವುದೇ ಒಂದು 'ಕೋಲ'ದಿಂದ, ಕೆಸರಿನ ಗದ್ದೆಯಲ್ಲಿ ಕೋಣಗಳನ್ನು ಓಡಿಸುವ ಪಂದ್ಯದ ಚಿತ್ರಣದಿಂದ. ಅಲ್ಲಿಂದ ಮುಂದೆ ಈ ಕಾದಂಬರಿಯ ಹರಹಿನಲ್ಲಿ ಅನೇಕಾನೇಕ ಸಾಮಾಜಿಕ ಸಮಾರಂಭಗಳ ಚಿತ್ರಣಗಳಿವೆ. ಕೋಳಿ ಪಂದ್ಯಗಳಿವೆ. ಭೂಮಿತಾಯಿಯೂ ಮುಟ್ಟಾಗಿ ಮೂರುದಿನ ಹೊರಗೆ ಕುಳಿತು ಕೊಳ್ಳುವಳೆಂಬ ಕಲ್ಪನೆ, ಪೈರು ತೆನೆಗೆ ಬಂದಾಗ ಅವಳಿಗಾಚರಿಸುವ ಸೀಮಂತ, ಉಪಕತೆಯಾಗಿ ಬರುವ ಏಳು ಸೋದರರ ಜಾನಪದ ಕತೆ– ಇವೆಲ್ಲ ಅಪರೂಪದ ವಸ್ತುಗಳು. 'ಅಳಿಯಕಟ್ಟು' ಪದ್ಧತಿಯ ವಿವರಣೆ ಇದೆ. ಕೆಲವು ವೇಳೆ ಈ ವಿವರಣೆಗಳು ಕತೆಯ ಓಟಕ್ಕೆ ಸ್ವಲ್ಪ ಅಡ್ಡಬರುವುದೂ ಉಂಟು. ಉದಾಹರಣೆಯಾಗಿ, ದಾರುವಿನ ತಾಯಿಯ ಅಂತ್ಯಸಂಸ್ಕಾರದ ಅತಿ ವಿಸ್ತಾರವಾದ ಬಣ್ಣನೆಯನ್ನು ಹೇಳಬಹುದು. ಆಕೆಯ ಬಗ್ಗೆ ಅದುವರೆಗೆ ಕತೆಯಲ್ಲಿ ಏನಾದರೂ ಬಂದುದೇ ಇಲ್ಲ. ತನ್ನ ಮರಣದಿಂದಲೇ ಆಕೆ ನಮ್ಮ ಕಣ್ಣಿಗೆ ಬೀಳುವುದು. ಅವಳ ಅಂತ್ಯಕ್ರಿಯೆಯನ್ನು ಅಷ್ಟು ವಿಸ್ತಾರವಾಗಿ ಬಣ್ಣಿಸಿರುವುದು ದಾಖಲೆಯ ಸಲುವಾಗಿ ಮಾತ್ರ ಎನ್ನಿಸುತ್ತದೆ.

ಜಾತಿಪದ್ಧತಿಗಳು, ಕಟ್ಟುಪಾಡುಗಳು ಇನ್ನೂ ಬಿಗಿಯಾಗಿದ್ದ ಕಾಲದ ಕತೆ ಇದು. ಪ್ರತಿಜಾತಿಗೂ ಅದರದರ ನಿಯತ ಸ್ಥಾನವಿತ್ತು. ಅವರಿಗೆ ಆ ಸ್ಥಾನಕ್ಕೆ ತಕ್ಕ ಮರ್ಯಾದೆ, ಅವಮರ್ಯಾದೆಗಳೂ ಇದ್ದವು. ಮೇಲು ಜಾತಿಯವರೊಂದಿಗೆ ವ್ಯವಹರಿಸುವಾಗ ಕೆಳ ಜಾತಿಯವರು ತೋರುತ್ತಿದ್ದ ಅತಿ ದೈನ್ಯದ ಜೊತೆಜೊತೆಗೇ ಆ ಮೇಲು ಜಾತಿಯವರು ಅತ್ತ ತಿರುಗಿದರೆ ಇವರು ತಮ್ಮಲ್ಲಿ ಹುದುಗಿದ್ದ ತೀವ್ರ ಅಸಮಾಧಾನವನ್ನು ವ್ಯಕ್ತಪಡಿಸುವರು. ಕೆಳಜಾತಿಯವರಲ್ಲೂ ಪರಸ್ಪರ ತಾರತಮ್ಯ, ಭೇದಭಾವ ಉಂಟು. ಭೂತದ ಕೋಲಗಳು, ದೇವಸ್ಥಾನಗಳಲ್ಲಿ ನಡೆಯುವ ಸಮಾರಂಭಗಳು, ಊಟಗಳು– ಎಲ್ಲೆಲ್ಲಿ ಪಂಕ್ತಿಭೋಜನ ಇದೆಯೋ ಅಲ್ಲೆಲ್ಲ– ಹೇಗೆ ಈ ಜಾತಿ ಪ್ರಶ್ನೆ ಅತಿ ಹೆಚ್ಚಿನ ಮಹತ್ವ ಪಡೆದುಕೊಳ್ಳುತ್ತಿತ್ತು ಎಂಬುದರ ಪರಿಚಯವನ್ನು ನಾಗವೇಣಿಯವರು ಚೆನ್ನಾಗಿ ಮಾಡಿಕೊಟ್ಟಿದ್ದಾರೆ.

ಅದ್ರಾಮು–ದ್ರೌಪದಿಯರ ಮದುವೆಯ ವಿಷಯದಲ್ಲಿ ಈ ಇಬ್ಬರೂ ಅನ್ಯಮತೀಯರಾದರೂ, ಬಹು ಮಂದಿ ಆ ಮದುವೆಗೆ ತಮ್ಮ ಒತ್ತಾಸೆ ನೀಡುತ್ತಾರೆ. ಒಂದೆರಡು ಕಾರಣಗಳನ್ನು ಹಿಂದೆಯೇ ಸೂಚಿಸಿದೆ. ಇಲ್ಲಿ ಜಾತಿಯ ದೃಷ್ಟಿಯಿಂದ ನೋಡುವುದಾದರೆ, ಅವರ ಮದುವೆಗೆ ಒತ್ತಾಸೆ ಕೊಡುವವರಲ್ಲಿ ಯಾರೂ ಬ್ರಾಹ್ಮಣ ಅಥವಾ ಮುಸಲ್ಮಾನರಲ್ಲ. ಆದ್ದರಿಂದ ಇತರರಿಗೆ ಅವರಿಬ್ಬರಿಗೂ ಮದುವೆಯಾದರೆ ತಮ್ಮ ಜಾತಿಗೆ ಅದರಿಂದ ಏನೂ ಅಪಚಾರವಿಲ್ಲ ಎಂಬ ನಿರ್ಲಿಪ್ತಭಾವನೆಯೂ ಇದ್ದಿರಬಹುದು. ಆದರೆ, ಆ 'ಎಳೆ ಜೋವು' ದ್ರೌಪದಿಯ ಬಗ್ಗೆ ಊರವರಿಗೆಲ್ಲ

ಅನುಕಂಪವಿದ್ದುದನ್ನೂ, ಹಾಗೆಯೇ ಅದ್ರಾಮನ ಬಗ್ಗೆ ಪ್ರೀತಿಯಿದ್ದುದನ್ನೂ ಮರೆಯಬಾರದು. ಅದ್ರಾಮನ ತಂದೆಗೆ, ಇತರ ಮುಸಲ್ಮಾನ ಧಾರ್ಮಿಕ ಮುಖಂಡರಿಗೆ ಈ ಮದುವೆ ಆಗಕೂಡದೆಂದಲ್ಲ. ಒಬ್ಬ ಮುಸಲ್ಮಾನ ಅನ್ಯಮತೀಯ ಹೆಂಗಸನ್ನು ಮದುವೆ ಆಗಬಹುದು, ಆದರೆ ಆ ಹೆಣ್ಣು ಇಸ್ಲಾಂ ಧರ್ಮವನ್ನು ಸ್ವೀಕರಿಸಬೇಕು ಅಷ್ಟೆ ಎಂದು ಅವರ ನಿಲವು. ಆದರೆ ಅದ್ರಾಮ ಇದಕ್ಕೆ ಒಪ್ಪುವುದಿಲ್ಲ. ಇಲ್ಲಿ ಅವನ ಹೃದಯವೈಶಾಲ್ಯ ಎದ್ದು ಕಾಣುತ್ತದೆ. ದ್ರೌಪದಿ ಮದುವೆಯಾದ ಮೇಲೂ ಅವಳು ಹಿಂದುವಾಗಿಯೇ ಇರಲು ಬಿಡುತ್ತಾನೆ. ಇದು ಅದ್ರಾಮನ ತಂದೆಗಾಗಲೀ, ಇತರ ಮುಸ್ಲಿಮರಿಗಾಗಲೀ ಸಹ್ಯವಾಗದ ಮಾತು. ಅದರಿಂದಾಗಿ ಅವನು ಸತ್ತಾಗ ಅವನ ಬಗೆಗೆ ಅವರಲ್ಲಿ ಯಾರಿಗೂ– ತಂದೆಗೂ ಸಹ– ಅನುಕಂಪವಿಲ್ಲ. ಬ್ರಾಹ್ಮಣರ ಪೈಕಿ ದ್ರೌಪದಿಯ ಮಾವ ಕೇಶವ ಶಾನುಭೋಗರು ತೋರುವ ಔದಾರ್ಯ, ಹೃದಯವಂತಿಕೆ ಅಪರೂಪವಾದದ್ದು. ಆದರೆ ಆ ದೊಡ್ಡತನ ಅವರ ಮಕ್ಕಳಿಗಿಲ್ಲ.

ನಾಗವೇಣಿಯವರ ಕಥನ ಭಾಷೆಯಲ್ಲಿ ಅನೇಕಾನೇಕ ತುಳು–ಕನ್ನಡ ಪದಗಳಿವೆ. ಇದರಿಂದ ಪ್ರಾದೇಶಿಕತೆಯ ಸೊಗಡು ಹೆಚ್ಚಿದೆ. ಇದೊಂದು ವಿಶಿಷ್ಟ ಸೊಗಸು. ಕೆಲವು ಕಡೆ ಪ್ರಾದೇಶಿಕ ಪದಗಳಿಗೆ ಸಮಾನ ಕನ್ನಡ ಪದಗಳನ್ನು ಸೂಚಿಸಿದ್ದರೂ ಎಷ್ಟೋ ಪದಗಳನ್ನು ನಾವು ಸಾಂದರ್ಭಿಕವಾಗಿ ಊಹಿಸಿಕೊಳ್ಳಬೇಕಾಗುತ್ತದೆ. ಹೇಳುವುದನ್ನು ಬಹುಮಟ್ಟಿಗೆ ಪ್ರಾದೇಶಿಕ ನುಡಿಗಟ್ಟುಗಳನ್ನು ಬಳಸಿಕೊಂಡೇ ಹೇಳುವುದರಿಂದ ನಾಗವೇಣಿಯವರ ಭಾಷೆಗೆ ಶಕ್ತಿ, ವಾಸ್ತವತೆ ಬರುತ್ತದೆ.

'ಗಾಂಧಿ ಬಂದ' ಎನ್ನುವಲ್ಲಿ, ಗಾಂಧಿ ಮೂರು ಸಲ ಬಂದು ಹೋದರು ಎಂಬುದಕ್ಕಿಂತ ಅವರ ವರ್ಚಸ್ಸು ಈ ಸಮಾಜದ ಮೇಲೆ ಹೇಗೆ ಪರಿಣಾಮ ಬೀರಲು ತೊಡಗಿತು ಎಂಬುದನ್ನು ತೋರಿಸುವುದು ಕಾದಂಬರಿಯ ಉದ್ದೇಶ. ನಾವು ಇಲ್ಲಿ ಕಾಣುವುದು ಬದಲಾವಣೆಯ ಮೊದಲ ಹಂತಗಳನ್ನಷ್ಟೆ, ಪೂರ್ತಿ ಬದಲಾವಣೆಯನ್ನಲ್ಲ. ಈ ಬದಲಾವಣೆ ಹೇಗೆ ಬೇರೂರುತ್ತಿದೆ, ಮೊಳೆತು ಚಿಗುರುತ್ತಿದೆ ಎಂಬುದರ ಸಂಕೇತವಾಗಿ ದ್ರೌಪದಿ–ಅದ್ರಾಮರ ಮಗ ಮಾರಪ್ಪನ ಭುಜ ಏರಿ ಕುಳಿತು ಕೇಕೆಹಾಕುತ್ತಿದ್ದಾನೆ.

೨

'ಹೆಜ್ಜೆ...' ಉಡುಪಿ ಬಳಿಯ ಕೊಡದೂರಿನ ಸಂಪ್ರದಾಯಸ್ಥ ಕುಟುಂಬವೊಂದರಲ್ಲಿ ಗಾಂಧಿಯುಗದಲ್ಲಿ ಆಗುವ ತೀವ್ರ ಬದಲಾವಣೆಗಳ ಕತೆ. ಕುಟುಂಬದ ಯಜಮಾನರು ತರ್ಕತೀರ್ಥ ಶ್ರೀಕಂಠ ಶಾಸ್ತ್ರಿಗಳು ತುಂಬ ತಿಳಿದವರು, ಸಾತ್ವಿಕರು, ಅಲ್ಲಿನ ಮಹಾಲಿಂಗೇಶ್ವರನ ದೇವಸ್ಥಾನದ ಮೊಕ್ತೇಸರರು. ತಮ್ಮ ಶಾಸ್ತ್ರಜ್ಞಾನ, ಪಾಠಪ್ರವಚನ,

ನಿಷ್ಠೆ, ಪ್ರಾಮಾಣಿಕತೆಗಳಿಂದ ಊರಿನವರೆಲ್ಲರ ಗೌರವ ಗಳಿಸಿದ್ದಾರೆ. ತಮ್ಮ ಸ್ವಂತ ಶ್ರಮದಿಂದ ಸಾಕಷ್ಟು ಆಸ್ತಿ ಗಳಿಸಿ ಅನುಕೂಲವಾಗಿದ್ದಾರೆ. ಗಂಗಮ್ಮ ಅವರಿಗೆ ತಕ್ಕ ಹೆಂಡತಿ. ಐವರು ಮಕ್ಕಳು. ಹಿರಿಯ ಮಗಳು ಪಾರ್ವತಿಗೆ ಮದುವೆಯಾಗಿ ಆಗಲೇ ಗಂಡನ ಮನೆ ಸೇರಿದ್ದಾಳೆ. ಅವಳ ನಂತರ ನಾಲ್ವರು ಗಂಡು ಮಕ್ಕಳು: ಗಂಗಾಧರ, ಶಶಿಧರ, ವಿದ್ಯಾಧರ ಮತ್ತು ಶ್ರೀಧರ. ಮೊದಲಿಬ್ಬರಿಗೂ ಮದುವೆಯಾಗಿ ಮಕ್ಕಳಿದ್ದಾರೆ. ಮೂರನೆಯವ ವಿದ್ಯಾನಿಗೆ ಇದೇ ತಾನೆ ಮದುವೆಯಾಗಿದೆ. ಅವನ ಹೆಂಡತಿ ಸಾವಿತ್ರಿಯೇ ಇಲ್ಲಿನ 'ಗಾಂಧಿ ಹುಡುಗಿ', ಈ ಮನೆಯ ಬದಲಾವಣೆಗಳ ಪ್ರವರ್ತಕಳು. ಅವಳ ತಂದೆ ಹತ್ತಿರದ ಊರಿನಲ್ಲಿ ಫೋಟೋ ಅಂಗಡಿ ನಡೆಸುತ್ತಿದ್ದಾರೆ. ಅವರ ತಮ್ಮ ಶಂಕರ–ಪಚ್ಚೆ. ಶಂಕರ–ಚಿಕ್ಕಂದಿನಿಂದಲೆ ಗಾಂಧಿ ಚಳವಳಿ ಸೇರಿ ಮನೆಯಿಂದ ದೂರವಿದ್ದಾರೆ. ಬ್ರಹ್ಮಚಾರಿಯಾದ ಆತನಿಗೆ ಅಣ್ಣನ ಮಗಳು ಸಾವಿತ್ರಿಯ ಮೇಲೆ ತುಂಬ ಪ್ರೀತಿ. ಅವಳಿಗೆ ಹೊಸ ವಿಚಾರಗಳನ್ನು ತಿಳಿಸುವವರು, ಪುಸ್ತಕಗಳನ್ನು ತಂದುಕೊಡುವವರು ಅವರೆ. ಅವಳ ಕೈಲಿ ಗಾಂಧಿಗೆ ಹಾರ ಹಾಕಿಸಿದ್ದು ಅವರೆ. ಗಾಂಧಿ ಎಂದರೆ ಒಬ್ಬ ಯುಗಪುರುಷ ಎಂಬ ನಂಬಿಕೆ ಅವಳಲ್ಲಿ ಬಿತ್ತಿದವರು ಅವರೆ.

ಸಾವಿತ್ರಿ ಹೈಸ್ಕೂಲು ಮುಗಿಸಿದ್ದಾಳೆ. ಇಂಗ್ಲಿಷ್, ಹಿಂದಿ ಚೆನ್ನಾಗಿ ಬಲ್ಲಳು. ಶಾಲೆಯಲ್ಲಿ ಉತ್ತಮ ವಿದ್ಯಾರ್ಥಿನಿಯಾಗಿ ಎಲ್ಲರ ಮೆಚ್ಚುಗೆ ಗಳಿಸಿದವಳು. ಅಂಥವಳು ಈಗ ಈ ಸಂಪ್ರದಾಯಸ್ಥರ ಮನೆಗೆ ಸೊಸೆಯಾಗಿ ಬಂದಿದ್ದಾಳೆ. ಕಾರಣ ಶಾಸ್ತ್ರಿಗಳಿಗೂ ಅವರ ಪತ್ನಿಗೂ ಈ ಹುಡುಗಿಯಲ್ಲಿ ಕಾಣುವ ಒಂದು ಅಸಾಧಾರಣ ದೈವೀ ಕಳೆ, ಅವಳ ಜಾತಕದಲ್ಲಿ ಕಾಣುವ ವೈಶಿಷ್ಟ್ಯ. ಅವಳಲ್ಲಿ ದಿಟ್ಟತನವಿದೆ, ಎಲ್ಲಕ್ಕೂ ತಗ್ಗಿ ಬಗ್ಗಿ ನಡೆಯುವವಳಲ್ಲ ಎಂದು ತಿಳಿದಿದ್ದರೂ, ಅವಳ ನಿಷ್ಕಪಟತೆ, ನ್ಯಾಯಪರತೆ, ವಿನಯ, ಸ್ವಾಭಾವಿಕವಾಗಿಯೇ ಇರುವ ದೊಡ್ಡಗುಣಗಳಿಂದ ಅತ್ತೆಮಾವಂದಿರಿಗೆ 'ಮುದ್ದಿನ ಸೊಸೆ' ಆಗುತ್ತಾಳೆ. ಅದರಿಂದ ಮೊದಲ ಗಂಡುಮಕ್ಕಳಿಗೆ ಅವರ ಹೆಂಡತಿಯರಿಗೆ ಕಣ್ಣು ಕೆಂಪಾಗುತ್ತದೆ. ಚಿಕ್ಕಪ್ಪ ಶಂಕರನಿಗೆ ಈ ಸಂಬಂಧ ಏನೇನೂ ಇಷ್ಟವಿಲ್ಲ, ಮದುವೆಗೆ ಆತ ಬರುವುದೂ ಇಲ್ಲ.

ಶಾಸ್ತ್ರಿಗಳ ಮಕ್ಕಳು ಯಾರೂ ಅವರಂತೆ ವೈದಿಕವೃತ್ತಿಗೆ ಹೋಗಿಲ್ಲ. ಮೊದಲ ಇಬ್ಬರಿಗೆ ವಿದ್ಯೆಯೇ ಹತ್ತಲಿಲ್ಲ. ಗಂಗಾಧರ ಮನೆಯ ವ್ಯಹಾರಗಳನ್ನು ನೋಡಿಕೊಂಡರೆ, ಶಶಿಧರ ದೇವಸ್ಥಾನದ ವ್ಯವಹಾರ ನೋಡಿಕೊಳ್ಳುತ್ತಾನೆ. ವಿದ್ಯಾಧರ ಹೈಸ್ಕೂಲು ಮುಗಿಸಿ ಅಲ್ಲಿನ ಪ್ರೈಮರಿ ಶಾಲೆಯಲ್ಲಿ ಉಪಾಧ್ಯಾಯ. ಶ್ರೀಧರ ಇನ್ನೂ ಶಾಲೆಗೆ ಹೋಗುತ್ತಿರುವವ. ಅವನೂ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಬೇಕೆಂದಿದ್ದಾನೆ.

ಸಾವಿತ್ರಿ ವಿದ್ಯಾಧರನಿಗೆ ಪ್ರೇಮದ ಮಡದಿಯಾಗಿ ಬರುವುದಲ್ಲದೆ, ಅವನ ವಿದ್ಯಾಗುರುವಾಗಿಯೂ ಬರುತ್ತಾಳೆ. ವೃತ್ತಪತ್ರಿಕೆಯನ್ನು ಕೂಡ ಓದದ ಗಂಡನಿಗೆ

ಹೊರಗಿನ ಸಮಾಜದ ಬಗ್ಗೆ, ದೇಶದ ರಾಜಕೀಯದ ಬಗ್ಗೆ ತಿಳಿದುಕೊಳ್ಳಲು ಉತ್ತೇಜಿಸುತ್ತಾಳೆ. ತಾನು ತವರಿಂದ ಬರುವಾಗ ಒಂದು ಗಾಂಧಿ ಪಟ ತಂದಿಟ್ಟು ಕೊಂಡಿದ್ದಾಳೆ. ತಕಲಿಯಿಂದ ನೂಲು ತೆಗೆಯುತ್ತಾಳೆ. ವಿದ್ಯಾನಿಗೆ ಗಾಂಧಿ ಟೊಪ್ಪಿಯನ್ನೂ ಹಾಕಿಸುತ್ತಾಳೆ. ಅಲ್ಲಿಂದ ಮುಂದೆ ಬದಲಾವಣೆಯ ಅಲೆಗಳು ಒಂದರ ಮೇಲೊಂದು ಬರತೊಡಗುತ್ತವೆ.

ಮೊದಲನೆಯದಾಗಿ, ಶ್ರೀಕಂಠಶಾಸ್ತ್ರಿಗಳ ತಮ್ಮ ನಾರಾಯಣಶಾಸ್ತ್ರಿಗಳ ಮಗಳು ಶಾಂಭವಿ ವಿಧವೆಯಾದಾಗ– ಅವಳಿಗೂ ಸಾವಿತ್ರಿಯ ವಯಸ್ಸೇ; ಅವಳನ್ನೂ ಶಾಸ್ತ್ರಿಗಳು ತಮ್ಮ ಮಗುವೆಂದೇ ಪ್ರೀತಿಯಿಂದ ಕಂಡಿದ್ದವರು– ಸಾವಿತ್ರಿ 'ಸಂಪ್ರದಾಯದ ಹೆಸರಿನಲ್ಲಿ ಅವಳನ್ನು ಹೆಣವಾಗಿ ಬದುಕುವಂತೆ ಮಾಡಬೇಡಿ, ಮನುಷ್ಯಳಾಗಿ ಬದುಕಲು ಬಿಡಿ' ಎಂದು ಅತ್ಯಂತ ಸಹಾನುಭೂತಿಯಿಂದ ಮಾವನವರಿಗೆ ಹೇಳುತ್ತಾಳೆ. ಸಾವಿತ್ರಿಯ ಮಾತು ಅವರನ್ನು ತುಂಬಾ ಯೋಚನೆಯಲ್ಲಿ ತೊಡಗಿಸುತ್ತದೆ. ಶಾಸ್ತ್ರಗ್ರಂಥಗಳನ್ನು ತಿರುವಿಹಾಕುತ್ತಾರೆ. ಆದರೆ ಅವಳಿಗೆ ಕೇಶಮುಂಡನ ಆಗಲೇಬೇಕೆಂದು ಯಾವ ಶಾಸ್ತ್ರವಿಧಿಯಲ್ಲೂ ಸಾಕಷ್ಟು ಸಮರ್ಥನೆ ಇಲ್ಲ ಎಂದೇ ಅವರಿಗೆ ತೋರಿ, ಅವಳಿಗೆ ಆ ಕ್ರೂರ ವಿಧಿ ಬೇಕಿಲ್ಲ ಎಂದು ತೀರ್ಮಾನಿಸುತ್ತಾರೆ. ಸಾವಿತ್ರಿಯ ಸಲಹೆಯಂತೆ ಅವಳು ಹಿಂದಿ ಕಲಿತು, ಉಪಾಧ್ಯಾಯಿನಿಯಾಗಿ, ಸ್ವತಂತ್ರ ಬದುಕು ಬಾಳುತ್ತಾಳೆ. ಮುಂದೆ ಬೇರೆ ಜಾತಿಯ ಒಬ್ಬ ಸಂಭಾವಿತನನ್ನು ಮದುವೆಯಾಗಿ ತಾಯಿಯೂ ಆಗುತ್ತಾಳೆ.

ಸಾವಿತ್ರಿಯ ಒತ್ತಾಸೆಯಿಂದ ಹೆಚ್ಚುಹೆಚ್ಚಾಗಿ ಲೋಕಜ್ಞಾನ, ಸಾಮಾಜಿಕ, ರಾಜಕೀಯ ಜ್ಞಾನ ಪಡೆದುಕೊಳ್ಳುತ್ತಿದ್ದ ವಿದ್ಯಾ ಶಾಲೆಯಲ್ಲಿ ಅವನ ಮುಖ್ಯೋಪಾಧ್ಯಾಯರು ಸುಧಾಕರರಾಯರು ಮತ್ತು ಸಹೋದ್ಯೋಗಿ ಒಬ್ಬರ (ಇಬ್ಬರೂ ಗಾಂಧೀವಾದಿಗಳೇ) ಸಹಾಯದಿಂದ ಮತ್ತಷ್ಟು ಪ್ರಬುದ್ಧನಾಗುತ್ತಾನೆ, ಉತ್ತಮ ಶಿಕ್ಷಕನಾಗುತ್ತಾನೆ.

ಆ ಸಮಯದಲ್ಲಿ ಆ ಊರಿನಲ್ಲಿ, ಶಾಸ್ತ್ರಿಗಳ ಮನೆಯಲ್ಲಿ ಅತಿ ದೊಡ್ಡ ಗೊಂದಲ ಎಬ್ಬಿಸುವ ಸಂಗತಿಯೊಂದು ನಡೆಯುತ್ತದೆ. ಮದರಾಸಿನಲ್ಲಿ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದು ಎಲ್ಲ ಅಸ್ಪೃಶ್ಯ ಮಕ್ಕಳನ್ನೂ ಶಾಲೆಗೆ ಸೇರಿಸಿಕೊಳ್ಳಬೇಕೆಂಬ ಆಜ್ಞೆ ಜಾರಿಗೆ ಬರುತ್ತದೆ (೧೯೩೭). ಆಗ ಸುಧಾಕರರಾಯರು ದೇವಸ್ಥಾನದಲ್ಲಿ ಬೆಡಿ ಹೊಡೆಯುತ್ತಿದ್ದ ಪೊಟ್ಟ ದೂಮನ ಮಗ ಕೆಂಚನನ್ನು ಶಾಲೆಗೆ ಸೇರಿಸಿಕೊಳ್ಳುತ್ತಾರೆ. ಇದು ಊರಿನಲ್ಲೂ, ಮನೆಯಲ್ಲೂ ತುಂಬ ಪ್ರತಿಭಟನೆ ಎಬ್ಬಿಸುತ್ತದೆ. ಸಾವಿತ್ರಿ ಈ ಹುಡುಗನಿಗೆ ಆ ಹೊತ್ತಿಗಾಗಲೇ ಒಂದು ಗಾಂಧಿ ಟೊಪ್ಪಿ ಕೊಡಿಸಿದ್ದಾಳೆ. ವಿದ್ಯಾ ಬಹಳ ಮುತುವರ್ಜಿಯಿಂದ ಅವನಿಗೆ ಪಾಠ ಹೇಳುತ್ತಾನೆ. ಇದರಿಂದ ಊರಿನಲ್ಲಿ ಈ ಅಪಚಾರಗಳಿಗೆಲ್ಲ ಶಾಸ್ತ್ರಿಗಳ ಮನೆಯವರದೇ ಬೆಂಬಲ ಇದೆಯೆಂಬ ಭಾವನೆ,

ಅಸಮಾಧಾನ ಹಬ್ಬುತ್ತದೆ. ಗಂಗಾಧರನೇ ಇನ್ನು ಮುಂದೆ ಆ ಅಸ್ಪೃಶ್ಯ ಹುಡುಗ ಬರುವ ಶಾಲೆಗೆ ತನ್ನ ಮಗನನ್ನು ಕಳಿಸುವುದಿಲ್ಲ ಎಂದು ಕೂಗಾಡುತ್ತಾನೆ. ಶಾಸ್ತ್ರಿಗಳು ಊರಿಗೆಲ್ಲ ಸಮಾಧಾನ ಹೇಳಬೇಕು. ಸರ್ಕಾರದ ಆಜ್ಞೆಯೇ ಹಾಗಿದ್ದ ಮೇಲೆ ಅದನ್ನು ಮೀರುವುದಕ್ಕಾಗದು ಎಂಬ ಕಾರಣ ಹೇಳುತ್ತಾರೆ. ಅಲ್ಲದೆ 'ದೈವೇಚ್ಛೆ' ಹೇಗಿದೆಯೋ ಎಂದು ತಿಳಿಯಲು ಹಳೆಗಾಲದ ಪದ್ಧತಿಯಂತೆ ಒಂದು ಹೂವಿನ ದಳಗಳನ್ನು ಬಿಡಿಸುತ್ತ ಬಂದು, ಅದು ಸಮಸಂಖ್ಯೆಯೋ ಬೆಸವೋ ನೋಡಿ, ಅದರ ಪ್ರಕಾರ ಅದೂ ಈ ಆಜ್ಞೆಯನ್ನು ಸಮರ್ಥಿಸುತ್ತದೆ ಎನ್ನುತ್ತಾರೆ!

ಈ ಮಧ್ಯೆ ಶಾಸ್ತ್ರಿಗಳಿಗೆ ಇನ್ನೊಂದು ಆಘಾತ ಎರಗುತ್ತದೆ. ಅವರ ಹಿರಿಯ ಮಗಳು ಪಾರ್ವತಿಯ ಜೀವನ ಆತ್ಮಹತ್ಯೆಯಲ್ಲಿ ಕೊನೆಗೊಳ್ಳುತ್ತದೆ. ಅವಳ ಗಂಡ ಶಂಕರ ತನ್ನ ತಂದೆಯಂತೆಯೆ ದುಶ್ಚಟಗಳಿಗೆ ಬಿದ್ದು ಇದ್ದ ಆಸ್ತಿಯನ್ನೆಲ್ಲ ಕರಗಿಸಿ ಸಾಲದಲ್ಲಿ ಮುಳುಗುತ್ತಾನೆ. ಮಕ್ಕಳಿಲ್ಲದ ಪಾರ್ವತಿ ಸಾವಿತ್ರಿಯ ಚಿಕ್ಕಪ್ಪ ಹಿಂದೊಮ್ಮೆ ಅವರ ಮನೆಗೆ ಕರೆತಂದು ಬಿಟ್ಟಿದ್ದ ಹುಡುಗ ಮಾಣುವನ್ನೇ ಮಗನಂತೆ ಬೆಳೆಸಿರುತ್ತಾಳೆ. ಗಂಡನ ವ್ಯವಹಾರ ಏನೇನೂ ತಿಳಿಯದ ಅಮಾಯಕಳು ಅವಳು. ಆದರೂ ಹೋಟೆಲು ನಡೆಸುವ ಪ್ರಯತ್ನದಲ್ಲಿರುವ ಅವಳ ಗಂಡ ಹುಡುಗನನ್ನು ತನ್ನ ಕೆಲಸದಲ್ಲಿ ನೆರವಾಗಲು ಕಳಿಸಬೇಕೆಂದು ಕೇಳಿದಾಗ ಅವಳು ಹುಡುಗನ ಭವಿಷ್ಯ ಹಾಳಾಗದಿರಲಿ ಎಂದು ಅವನನ್ನು ಗಂಡನ ಕೈ ತಪ್ಪಿಸಿ ಒಂದು ಗಾಂಧಿ ಆಶ್ರಮಕ್ಕೆ ಕಳಿಸಿಕೊಡುತ್ತಾಳೆ. ಇದರಲ್ಲಿ ಅವಳ ಮಾವನ ಉಪಪತ್ನಿ ನಾಗಿಯ ತಮ್ಮ ವೇಣು (ಅವನೂ ಈಗ ಗಾಂಧಿವಾದಿಯೇ) ಸಹಾಯ ಮಾಡುತ್ತಾನೆ. ಈ ಸಂಸಾರದ ದಾರುಣತೆ ತಡೆಯಲಾರದೆ ಪಾರ್ವತಿ ಸಮುದ್ರದಲ್ಲಿ ಬಿದ್ದು ಸಾಯುತ್ತಾಳೆ. ಕೈತುಂಬ ಸಾಲ, ಮೈತುಂಬ ರೋಗ ಹೊತ್ತಿದ್ದ ಅವಳ ಗಂಡನೂ ಬಾವಿಗೆ ಬಿದ್ದು ಸಾಯುತ್ತಾನೆ. ಅವರ ಮನೆಯ ವ್ಯವಹಾರಗಳನ್ನೆಲ್ಲ ನೋಡಿಕೊಳ್ಳಲು ಹೋದ ವಿದ್ಯಾಧರ ಅದನ್ನೆಲ್ಲ ಸಮರ್ಪಕವಾಗಿ ಮಾಡಿದರೂ ಆ ಅಪರಕರ್ಮಗಳಲ್ಲಿ ಅವನಿಗೆ ನಂಬಿಕೆ ಇಲ್ಲದೆ, ಅವುಗಳಲ್ಲಿ ಭಾಗವಹಿಸುವುದಿಲ್ಲ. ಅವನು ತನ್ನ ಜನಿವಾರ ಕಿತ್ತೊಗೆದಿದ್ದಾನೆ. ಅವನಿಗೆ ಈಗ ದೇವರ ಅಸ್ತಿತ್ವದಲ್ಲೇ ನಂಬಿಕೆ ಹೋಗಿದೆ.

ಶಾಸ್ತ್ರಿಗಳ ಹಿರಿಯ ಮಗ ಗಂಗಾಧರ ತನ್ನ ಮಾವನ ಸಹಾಯದಿಂದ ಸಕಲೇಶಪುರದಲ್ಲಿ ಒಂದು ಹೋಟೆಲು ನಡೆಸುವ ಸಿದ್ಧತೆ ಮಾಡಿಕೊಂಡು ತಂದೆತಾಯಿಯರಿಗೆ ಪೂರ್ವಭಾವಿಯಾಗಿ ಹೇಳದೆ ಸಂಸಾರ ಸಮೇತ ಮನೆ ಬಿಟ್ಟು ಹೋಗುತ್ತಾನೆ. ಶಾಸ್ತ್ರಿಗಳಿಗೂ ಗಂಗಮ್ಮನವರಿಗೂ ಇದೂ ಒಂದು ಆಘಾತ. 'ಅನ್ನ ವಿಕ್ರಯ' ಬ್ರಾಹ್ಮಣರಿಗೆ ಸಲ್ಲದು ಎಂದು ಶಾಸ್ತ್ರಿಗಳು ಅದನ್ನು ಯಾವಾಗಲೂ ವಿರೋಧಿಸಿದ್ದವರು.

ವಿದ್ಯಾಧರ-ಸಾವಿತ್ರಿಯರಿಗೆ ಈಗ ಒಂದು ಹೆಣ್ಣು ಮಗು ಆಗಿದೆ. ಸಾವಿತ್ರಿ ಬಸುರಿಯಾಗಿದ್ದಾಗ ಎಲ್ಲರೂ ಗಂಡು ಮಗುವಿನ ತಾಯಾಗು ಎಂದು ಹರಸಿದರೆ ತನಗೆ ಹೆಣ್ಣಾಗುವುದೇ ಇಷ್ಟ ಎಂದವಳು ಅವಳು. ಶಾಸ್ತ್ರಿಗಳು ಮಗುವಿಗೆ ಶಾರದೆ ಎಂಬ ಹೆಸರು ಸೂಚಿಸಿದರೆ, ತಾನಾಗಲೆ ಅವಳಿಗೆ ಕಸ್ತೂರಿ ಎಂಬ ಹೆಸರು ಇರಿಸಿದ್ದಾಳೆ (ಗಾಂಧಿಯ ಪತ್ನಿಯ ಹೆಸರು).

ವಿದ್ಯಾಧರನ ಜ್ಞಾನಾರ್ಜನೆ ಹೆಚ್ಚಿದಂತೆಲ್ಲ, ಅವನಿಗೆ ದೇಶದ ಸ್ವಾತಂತ್ರ್ಯ ಗಳಿಕೆಯ ಹೋರಾಟದಲ್ಲಿ ಸಕ್ರಿಯವಾಗಿ, ಪರಿಣಾಮಕಾರಿಯಾಗಿ ಏನಾದರೂ ಮಾಡಬೇಕೆಂಬ ಹಂಬಲವೂ ಬಲವಾಗುತ್ತದೆ. ಏನು ಮಾಡಬಹುದು, ಏನು ಮಾಡಬಲ್ಲೆ, ತನ್ನ ಕಾರ್ಯಕ್ಷೇತ್ರ ಏನು, ತನ್ನ ಜವಾಬ್ದಾರಿ ಏನು ಎಂಬ ಪ್ರಶ್ನೆಗಳು ಅವನನ್ನು ಕಾಡುತ್ತವೆ. ಉಪಾಧ್ಯಾಯನಾಗಿಯೇ ಮುಂದುವರೆದರೆ ಆ ಕೆಲಸ ಸಾಧ್ಯವೇ ಎಂಬ ಪ್ರಶ್ನೆಯೂ ಅವನಲ್ಲಿದೆ. ಜೊತೆಗೆ, ಇನ್ನೂ ಮುಖ್ಯವಾಗಿ, ಸ್ವಾತಂತ್ರ್ಯ ಗಳಿಕೆಗೆ ಬರೀ ಗಾಂಧೀಮಾರ್ಗವೇ ಸಾಕೇ ಎಂಬ ಪ್ರಶ್ನೆಯೂ ಅವನನ್ನು ಬಾಧಿಸುತ್ತದೆ. ಶಾಲೆಯ ಕೆಲಸದ ಮೇಲೆ ಆಗಾಗ ಮಂಗಳೂರಿಗೆ ಹೋಗಿಬರುತ್ತಿದ್ದಾಗ ಅಲ್ಲಿನ ಲಾಯರ್ ಮಂಗೇಶರಾಯರು ಅವನಿಗೆ ಕಮ್ಯುನಿಸಂ ತತ್ವಗಳನ್ನು ಪರಿಚಯಮಾಡಿಕೊಟ್ಟು ಕಾರ್ಮಿಕ ಸಂಘಟನೆಯ ಬಗ್ಗೆ ಪ್ರೋತ್ಸಾಹಿಸುತ್ತಾರೆ. ತನ್ನ ಉಪಾಧ್ಯಾಯ ವೃತ್ತಿಗೆ ಸಂಬಂಧಿಸಿದ ಹೆಚ್ಚಿನ ತರಪೇತಿ ಪಡೆಯುವ ನೆಪದಲ್ಲಿ ಒಂದು ವರ್ಷ ಶಾಲೆಗೆ ರಜೆ ಹಾಕಿ ವಿದ್ಯಾ ಮಂಗಳೂರಿಗೆ ತೆರಳುತ್ತಾನೆ- ತನ್ನನ್ನು ತಾನು ಕಮ್ಯುನಿಸ್ಟ್ ರಾಜಕೀಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಬೇಕಾದ ಸಿದ್ಧತೆ ಮಾಡಿಕೊಳ್ಳಲು. ಅಲ್ಲಿ ಬರುವ ಮುನ್ನ ವಿದ್ಯಾ ಕೆಂಚನಿಗೆ ಪಾಠ ಹೇಳುವ ಕೆಲಸವನ್ನು ಸಾವಿತ್ರಿಗೆ ವಹಿಸಿದ್ದಾನೆ. ಅದಕ್ಕೆ ಅವಳೂ ಸಿದ್ಧಳೆ, ಆದರೆ ಶಾಸ್ತ್ರಿಗಳಿಗೂ ಅವರ ಹೆಂಡತಿಗೂ ಇದು ತೀರ ವಿಪರೀತಕ್ಕಿಟ್ಟುಕೊಂಡಿತು ಎನ್ನಿಸಿ, ಅದನ್ನು ಕಠಿಣವಾಗಿಯೇ ಪ್ರತಿಭಟಿಸುತ್ತಾರೆ.

ಮಂಗಳೂರಲ್ಲಿ ಹೆಚ್ಚಿನ 'ತರಪೇತಿ' ಪಡೆದ ವಿದ್ಯಾಧರ ಅಲ್ಲಿಂದ ಮುಂದೆ ಮುಂಬಯಿಯೇ ತನ್ನ ಕಾರ್ಯಕ್ಷೇತ್ರ ಎಂದು ನಿರ್ಧರಿಸಿ ಸಾವಿತ್ರಿ-ಕಸ್ತೂರಿಯರೊಡನೆ ಅಲ್ಲಿಗೆ ತೆರಳುತ್ತಾನೆ. ಶಾಸ್ತ್ರಿಗಳಿಗೂ ಅವರ ಪತ್ನಿಗೂ ಈ ಅಗಲಿಕೆ ದುಃಖದ ಸಂಗತಿಯಾದರೂ, ಹೇಗೋ ಸಾಂತ್ವನದಿಂದ ಕಳಿಸಿಕೊಡುತ್ತಾರೆ. ಅವರ ಖರ್ಚಿಗೆ ಹಣ ಕೊಡುತ್ತಾರೆ. ವಿದ್ಯಾಧರ-ಸಾವಿತ್ರಿಯರ ಜೀವನದ ಮುಂದಿನ ಘಟ್ಟ ಪ್ರಾರಂಭವಾಗುತ್ತದೆ.

ಮುಂಬಯಿ ಸೇರಿದ ವಿದ್ಯಾಧರ-ಸಾವಿತ್ರಿಯರು ಮಂಗಳೂರಿನ ಲಾಯರು ಕೊಟ್ಟ ಪರಿಚಯ ಪತ್ರಗಳಿಂದ ಹಲವಾರು ಹೊಸ ಮಿತ್ರರ ಪರಿಚಯ ಮಾಡಿಕೊಂಡು ಅಲ್ಲೊಂದು ಚಾಳಿನಲ್ಲಿ ಮನೆ ಹಿಡಿಯುತ್ತಾರೆ. ಈ ಮಧ್ಯೆ ಸಾವಿತ್ರಿಯ ತಂದೆ ತಾವಿದ್ದ

ಸಣ್ಣ ಊರಿನಲ್ಲಿ ತಮ್ಮ ಫೋಟೋ ವ್ಯಾಪಾರಕ್ಕೆ ಸಾಕಷ್ಟು ಗಿರಾಕಿ ಇಲ್ಲವೆಂದು ಈಗ ತಾವೂ ಮುಂಬಯಿಗೇ ಬಂದು ನೆಲೆಸಿದ್ದಾರೆ. ಆದರೆ ವಿದ್ಯಾ–ಸಾವಿತ್ರಿಯರು ಅವರಿಗೆ ಭಾರವಾಗಿರಲು ಮನಸ್ಸಿಲ್ಲದೆ ಅವರಿಗೆ ತಮ್ಮ ಬರವನ್ನು ತಿಳಿಸಿಲ್ಲ. ಆದರೆ ಇತರರ ಮೂಲಕ ಅವರಿಗೆ ತಿಳಿದು ಇವರಿಗೆ ನೆರವಾಗುತ್ತಾರೆ.

ಬಂದ ಎರಡು ಮೂರು ದಿನದಲ್ಲೇ ಸಾವಿತ್ರಿ ತಾವು ನೆಲೆಸಿದ ಚಾಳಿನ ಇತರ ಹೆಂಗಸರ ಪರಿಚಯ ಮಾಡಿಕೊಂಡು ಅಲ್ಲಿದ್ದ ಇಬ್ಬರು ಮಕ್ಕಳಿಗೆ ಹಿಂದಿ ಶಿಕ್ಷಕಿಯಾಗಿ ಕೆಲಸ ಮೊದಲಿಡುತ್ತಾಳೆ. ವಿದ್ಯಾಧರನೂ ಮಂಗೇಶರಾಯರ ಮಿತ್ರರಾದ ಒಬ್ಬ ಪ್ರಸಿದ್ಧ ಕ್ರಿಮಿನಲ್ ಲಾಯರ್ ಮಖನ್‌ವಾಲಾರವರ ಕಚೇರಿಯಲ್ಲಿ ಕೆಲಸ ಗಳಿಸುತ್ತಾನೆ. ಮಖನ್‌ವಾಲಾರವರ ಸಹಾಯಕ ರಫ಼ಿಯ ಪರಿಚಯವೂ, ಅವನ ಮೂಲಕ ಮುಂಬಯಿಯ ಪರಿಚಯವೂ ಚೆನ್ನಾಗಿ ಆಗುತ್ತದೆ. ಮಖನ್‌ವಾಲಾ ಮತ್ತು ರಫ಼ಿ ಇಬ್ಬರಿಗೂ ವಿದ್ಯಾಧರನಲ್ಲಿ ತುಂಬ ವಿಶ್ವಾಸ, ಗೌರವ ಬೆಳೆಯುತ್ತದೆ. ಅವನ ಕಣ್ಣಿನ ಕಾಂತಿ, ಮುಖದಲ್ಲಿ ಮಾತಿನಲ್ಲಿ ಕಾಣುವ ನಿಸ್ಪೃಹತೆ ಅವರನ್ನು ಸೆಳೆಯುತ್ತದೆ.

ವಿದ್ಯಾಧರ, ಮಂಗೇಶರಾಯರ ಸಲಹೆಯಂತೆ, ಮುಂಬಯಿಯ ಹೊಟೇಲುಗಳಲ್ಲಿ ದುಡಿಯುವ ಸಹಸ್ರಾರು ಯುವಕರನ್ನು (ಹೆಚ್ಚಾಗಿ ದಕ್ಷಿಣ ಕನ್ನಡದಿಂದ ಹೋದವರು) ಸಂಘಟಿಸುವ ಉದ್ದೇಶದಿಂದ ಆ ಕೆಲಸ ಪ್ರಾರಂಭಿಸಿದ ಮೊದಲಲ್ಲೇ ಹೊಟೇಲು ಮಾಲೀಕನೊಬ್ಬನಿಂದ ಹೊಡೆತ ತಿನ್ನಬೇಕಾಗುತ್ತದೆ. ಆದರೂ ತನ್ನ ನಿಶ್ಚಯ ಬದಲಿಸದೆ ಕೆಲಸ ಮುಂದುವರೆಸುತ್ತಾನೆ. ಈ ಮಧ್ಯೆ ರಫ಼ಿ ವಿದ್ಯಾನನ್ನು ತಾನು ನಡೆಸುವ ರಾತ್ರಿ ಶಾಲೆಯಲ್ಲಿ ವೇತನವಿಲ್ಲದೆ ದುಡಿದು ಸಹಾಯಮಾಡಲು ತೊಡಗಿಸುತ್ತಾನೆ. ಸಾವಿತ್ರಿಗೆ ಅನಪೇಕ್ಷಿತವಾಗಿ ಒಂದು ಕಾಲೇಜಿನಲ್ಲಿ ಹಿಂದಿ ಶಿಕ್ಷಕಿಯಾಗಿ ಕೆಲಸ ದೊರೆಯುತ್ತದೆ.

ಆ ಹೊತ್ತಿಗೆ ದೇಶದ ರಾಜಕೀಯದಲ್ಲಿ ನಾನಾ ಬದಲಾವಣೆಗಳು ಬೆಳವಣಿಗೆಗಳು ಮೈತಾಳಿವೆ. ಯೂರೋಪಿನ ಯುದ್ಧ ಭಾರತದ ಅಂಚಿಗೂ ಬಂದಿದೆ. ಬ್ರಿಟಿಷ್ ಸರಕಾರದೊಡನೆ ಕಾಂಗ್ರೆಸ್ ನಡೆಸಿದ ಎಲ್ಲ ಸಂಧಾನಗಳೂ ಮುರಿದು ಬಿದ್ದಿವೆ. ಮುಸ್ಲಿಂ ಲೀಗ್ ದೇಶವಿಭಜನೆಯ ಬಗ್ಗೆ ತನ್ನ ಒತ್ತಾಯವನ್ನು ಮತ್ತಷ್ಟು ಬಲವಾಗಿ ಹೇರುತ್ತಿದೆ. ೧೯೪೨ರ Quit India ಚಳವಳಿ ಮೊದಲಾಗುತ್ತದೆ.

ಆ ದಿನ ಬೆಳಿಗ್ಗೆ, ಆಗಸ್ಟ್ ಒಂಬತ್ತರಂದು, ಸ್ವಲ್ಪ ಹೊತ್ತು ಹೊರಗೆ ಹೋಗಿ ಏನಾಗುತ್ತಿದೆಯೋ ನೋಡಿಬರುತ್ತೇನೆಂದು ಹೋದ ವಿದ್ಯಾ ಎಷ್ಟು ಹೊತ್ತಾದರೂ ಮನೆಗೆ ಬರುವುದಿಲ್ಲ. ಆತಂಕಗೊಂಡ ಸಾವಿತ್ರಿ ರಫ಼ಿಗೆ ಫೋನ್ ಮಾಡಿ ವಿಷಯ ತಿಳಿಸುತ್ತಾಳೆ. ಅವನೂ, ಮಖನ್‌ವಾಲಾರವರೂ ಪೊಲೀಸ್ ಅಧಿಕಾರಿ ಒಬ್ಬನ ಸಹಾಯದಿಂದ ಊರೆಲ್ಲಾ ಹುಡುಕಿದರೂ ಅವನ ಪತ್ತೆ ಇಲ್ಲ. ಕಡೆಗೆ ಆಸ್ಪತ್ರೆಯ

ಶವಾಲಯದಲ್ಲಿ ಅವನ ಶವ ಸಿಕ್ಕುತ್ತದೆ. ಅವನು ಕೈಯಲ್ಲಿ ಕೋವಿ ಹಿಡಿದಿದ್ದನೆಂದೂ ಅದರಿಂದಲೇ ಪೊಲೀಸರು ಅವನ ಮೇಲೆ ಗುಂಡು ಹಾರಿಸಬೇಕಾಯಿತೆಂದೂ ಪೊಲೀಸರ ವರದಿ ತಿಳಿಸುತ್ತದೆ. ಕೇವಲ ಐದೇ ವರ್ಷಗಳ ಅವರ ದಾಂಪತ್ಯ, ಅತ್ಯಂತ ಮುಗ್ಧವಾಗಿ ಒಂದು ಸಣ್ಣ ಊರಿನಲ್ಲಿ ಮೊಳೆತು ಮುಂಬಯಿ ಮಹಾನಗರದಲ್ಲಿ ಒಂದು ಉಜ್ವಲ ಹೋರಾಟದಲ್ಲಿ ಕೊನೆಗೊಳ್ಳುತ್ತದೆ.

ಮುಂದಿನ ಆರು ವರ್ಷಗಳಲ್ಲಿ ಆಪ್ತರೆಲ್ಲರ ಸಹಾಯದಿಂದ, ಮುಖ್ಯವಾಗಿ ತನ್ನ ಕಾಲೇಜಿನ ಪ್ರಿನ್ಸಿಪಲ್ ಶರ್ಮಾರವರ ಪ್ರೋತ್ಸಾಹದಿಂದ, ಸಾವಿತ್ರಿ ತನ್ನ ಕೆಲಸದ ಜೊತೆಗೇ ಮತ್ತೆ ತನ್ನ ವಿದ್ಯಾಭ್ಯಾಸ ಮುಂದುವರೆಸಿ ಅರ್ಥಶಾಸ್ತ್ರದಲ್ಲಿ M.A. ಪದವಿ ಪಡೆಯುತ್ತಾಳೆ. ತನ್ನ ನಂತರ ಅವಳನ್ನೇ ಕಾಲೇಜಿನ ಪ್ರಿನ್ಸಿಪಲ್ ಮಾಡುವ ಉದ್ದೇಶ ಶರ್ಮಾರಿಗೆ.

ಒಂದು ದಿನ ಸಾವಿತ್ರಿ ಕಾಲೇಜಿನಲ್ಲಿ ಶರ್ಮಾರೊಂದಿಗೆ ಏನೋ ಕೆಲಸವಿದ್ದು ಅದನ್ನು ಮುಗಿಸಿ ಸಂಜೆಗೆ ಮನೆಗೆ ತೆರಳುವ ಹೊತ್ತಿಗೆ, ದಾರಿಯಲ್ಲೆಲ್ಲ ಅಂಗಡಿಗಳು ಮುಚ್ಚುತ್ತಿವೆ. ಸಾವಿತ್ರಿ ಅದಕ್ಕೆ ಅಷ್ಟು ಗಮನ ಕೊಡದೆ ಮನೆಗೆ ಬರುವ ಹೊತ್ತಿಗೆ ಜನ ಗುಂಪುಗುಂಪಾಗಿ ನಿಂತಿದ್ದಾರೆ, ನೆರೆಮನೆಯ ಗೆಳತಿ ಓಡಿ ಬಂದು, ಗಾಂಧಿ ಹತ್ಯೆಯಾದದ್ದು ನಿನಗೆ ತಿಳಿಯಲಿಲ್ಲವೆ ಎಂದು ಕೇಳಿದಾಗ ಬರಸಿಡಿಲಿನಂಥ ಆ ಸುದ್ದಿ ಕೇಳಿ ಸಾವಿತ್ರಿ ಕಣ್ಣೀರಿಡುತ್ತಾಳೆ. ಆ ದುಃಖದಲ್ಲಿ ಶೂನ್ಯಮನಸ್ಕಳಾಗಿ ಮುಸುಕುತ್ತಿರುವ ಕತ್ತಲಲ್ಲಿ ಕುಳಿತಿದ್ದಾಗ ಯಾರೋ ಒಳಗೆ ಬಂದಂತಾಗುತ್ತದೆ. ಮಾವ ಶಾಸ್ತ್ರಿಗಳು! ಅವರ ಜೊತೆಗೆ ಅವರ ಆತ್ಮೀಯ ಮಿತ್ರರಾದ ಕಮ್ತಿಯವರು. ಶಾಸ್ತ್ರಿಗಳು ತಮ್ಮ ಹೆಂಡತಿ ಗಂಗಮ್ಮ ತೀರಿಕೊಂಡ ವಿಚಾರವನ್ನೂ ತಾವು ಹರಿದ್ವಾರಕ್ಕೆ ಹೊರಟಿರುವ ವಿಷಯವನ್ನು ತಿಳಿಸುತ್ತಾರೆ. ಎಲ್ಲರ ಚಿತಾಭಸ್ಮಗಳನ್ನೂ ಗಂಗೆಯಲ್ಲಿ ವಿಸರ್ಜಿಸಲು ಹೊರಟಿದ್ದಾರೆ. ದಾರಿಯಲ್ಲಿ ಮುಂಬಯಿಯಲ್ಲಿ ಇಳಿದು ಸೊಸೆಯನ್ನು ನೋಡಲು ಬಂದಿದ್ದಾರೆ. ಹಾಗೆ ಬರುವಾಗ ಎಲ್ಲಿ ನೋಡಿದರಲ್ಲಿ ಜನ ಅನಾಥರಂತೆ ಅಳುತ್ತಿರುವುದನ್ನು ಕಂಡ ಶಾಸ್ತ್ರಿಗಳು ಗಾಂಧಿಯ ಯೋಗ್ಯತೆಯನ್ನು ಅರಿತುಕೊಂಡು 'ಸುಮ್ಮಗೆ ಮಹಾತ್ಮ ಅಂತ ಕರೀತಾರೆಯೇ?' ಎನ್ನುವಲ್ಲಿಗೆ ಕಾದಂಬರಿ ಮುಗಿಯುತ್ತದೆ.

*

ಇದೊಂದು ವಿಸ್ತಾರವಾದ, ಮನಸ್ಸು ತುಂಬಿಕೊಳ್ಳುವ ಕತೆ. ಇದರ ಮೊದಲ ಭಾಗದಲ್ಲಿ (ವಿದ್ಯಾಧರ-ಸಾವಿತ್ರಿ ಮುಂಬಯಿಗೆ ಹೋಗುವ ಮೊದಲು) ಶಾಸ್ತ್ರಿಗಳ ದೊಡ್ಡ ಕುಟುಂಬದಲ್ಲಿ ಆಗುತ್ತಿರುವ ಬದಲಾವಣೆಗಳಿಗೆ ಮುಖ್ಯ ಚಾಲಕ ಶಕ್ತಿ ಸಾವಿತ್ರಿ. ಶಾಸ್ತ್ರಿಗಳು ತಮ್ಮ ಮನೆಯಲ್ಲಿ, ತಮ್ಮ ಮನಸ್ಸಿನಲ್ಲಿ, ಜೀವನದಲ್ಲಿ ಆಗುತ್ತಿರುವ ಬದಲಾವಣೆಗಳ ಬಗ್ಗೆ ತುಂಬ ಚಿಂತಿಸಿದ್ದಾರೆ. ಇದೆಲ್ಲ ಸಾವಿತ್ರಿಯಿಂದಲೇ ಆದುವೇ? ಅಥವಾ ತನ್ನಲ್ಲೇ

ಬದಲಾವಣೆಗಳಾಗುತ್ತಿವೆಯೇ? ಕಾಲ ಮಹಿಮೆಯೇ? ದೈವೇಚ್ಛೆಯೇ? ಈ ಆಲೋಚನೆಗೆ ಅವರಿಗೆ ಸರಿಯಾದ ಉತ್ತರ ದೊರೆತಿಲ್ಲ. ಅವರು ಸಂಪ್ರದಾಯಸ್ಥ ರಾದರೂ ಬದಲಾವಣೆಯನ್ನು ಪೂರ್ತಿ ತಿರಸ್ಕರಿಸದಂಥ ಸಂಸ್ಕಾರವಂತರೆ. ಅವರಿಗೆ ತಮ್ಮ ಮನಸ್ಸಿನ ಮೇಲೆ ಹಿಡಿತವಿದೆ. ಉದ್ರೇಕಗೊಳ್ಳುವವರಲ್ಲ. ಸಾವಿತ್ರಿ ತೋರುವ ಮನೋಭಾವ ತಮ್ಮನ್ನು ಎಷ್ಟೇ ಗೊಂದಲದಲ್ಲಿ ಸಿಕ್ಕಿಸಿದರೂ ಅದರಲ್ಲೂ ನ್ಯಾಯವನ್ನು ಕಾಣುವಷ್ಟು ಉದಾರಹೃದಯರು. ಆದರೆ ಅವರ ಮಕ್ಕಳು ಗಂಗಾಧರ, ಶಶಿಧರರು ಹಾಗಲ್ಲ. ಅವರಿಗಂತೂ ವಿದ್ಯೆ ಹತ್ತಲೇ ಇಲ್ಲ. ಕೇವಲ ತಮ್ಮ ಹಿತಾಸಕ್ತಿಗಳನ್ನು ಭದ್ರಮಾಡಿಕೊಂಡು ಇರುವವರು ಅವರು. ವಿದ್ಯಾಧರ ತನ್ನ ಮನೆಯ ಎಲ್ಲ ಸಂಪ್ರದಾಯಗಳನ್ನು ತಿರಸ್ಕರಿಸಿದ್ದರೂ ಮೊದಲ ಇಬ್ಬರು ಗಂಡುಮಕ್ಕಳಲ್ಲಿ ಕಾಣದ ಪ್ರಾಮಾಣಿಕತೆ, ಸಂಪನ್ನತೆಯನ್ನು ಶಾಸ್ತ್ರಿಗಳು ಅವನಲ್ಲಿ ಗುರುತಿಸಿದ್ದಾರೆ. ಆದರೆ ತಲೆತಲಾಂತರದಿಂದ ಬಂದಿದ್ದ ವ್ಯವಸ್ಥೆ, ರೂಢಿಯ ಚೌಕಟ್ಟಿನಲ್ಲಿ ತಮಗೆ ದೊರಕಿದ್ದ ನೆಮ್ಮದಿ, ಭದ್ರತೆ ಎಲ್ಲ ಕೈಜಾರಿಹೋಗುತ್ತಿದೆಯೇ ಎಂಬ ಭಯ, ಅನಿಶ್ಚಿತತೆ ಅವರನ್ನು ಕಾಡುತ್ತದೆ. 'ಹೊರಗಿನ ವಿಚಾರಕ್ಕೆ ಗಾಂಧಿ ಸರಿ, ಸಾವಿತ್ರೀ. ಆದರೆ ನಮ್ಮ ಕುಟುಂಬದ ಸಮಸ್ಯೆಗಳಿಗೆ ಗಾಂಧಿ ಉತ್ತರ ಕೊಡೋಲ್ಲ...' ಎಂಬುದು ಅವರ ನಿಲುವು.

ಆದರೆ ಬದಲಾವಣೆಯ ಸ್ವರೂಪವೇ ಹಾಗಲ್ಲವೆ? ಒಂದು ಪರಿಚಿತವಾದ, ಸುಭದ್ರ ಎಂದುಕೊಂಡ ವ್ಯವಸ್ಥೆ ಬಿರುಕು ಬಿಡುತ್ತ, ಪಲ್ಲಟವಾಗುವ ಸೂಚನೆಗಳನ್ನು ತೋರಲು ಮೊದಲಿಟ್ಟಾಗ, ಆ ಬದಲಾವಣೆಗಳನ್ನು ಎದುರಿಸುವ ಸಂಪ್ರದಾಯವಾದಿ ಶಕ್ತಿಗಳು ಒಂದುಗೂಡುತ್ತವೆ. ಇನ್ನು ಈ ಬದಲಾವಣೆಗಳನ್ನು ನಿಲ್ಲಿಸಲಾಗುವುದಿಲ್ಲ ಎನ್ನುವವರೆಗೂ ಆ ಹೋರಾಟ ನಿಲ್ಲದು. ಆ ಬದಲಾವಣೆ ಎಲ್ಲರಿಗೂ ಕೂಡಲೆ ಸುಖ-ಸಂತೋಷಗಳನ್ನು ತರುವಂಥದೂ ಅಲ್ಲ. ಬಹುಮಟ್ಟಿಗೆ ಮೊದಲು ಅವು ತರುವುದು ಕಷ್ಟನಷ್ಟಗಳನ್ನೇ. ಬದಲಾವಣೆಗಳಿಗೆ ಹೊಂದಿಕೊಳ್ಳುವುದರಲ್ಲಿರುವ ಆತಂಕ, ಅನಿಶ್ಚಿತತೆಗಳ ಸಹಜ ಚಿತ್ರಣ ಇಲ್ಲಿ ಯಶಸ್ವಿಯಾಗಿ ಮೂಡಿದೆ. ಇಲ್ಲಿ ಸ್ವಾರಸ್ಯವಾದ ಸಂಗತಿಯೆಂದರೆ, ಶಾಸ್ತ್ರಿಗಳ ಮನೆಗೆ ಬದಲಾವಣೆಯನ್ನು ತಂದ ಸಾವಿತ್ರಿಯೇ ತನ್ನ ಗಂಡ ತನ್ನ ನಿರೀಕ್ಷೆಗಿಂತ ಬೇರೆ ರೀತಿಯಲ್ಲಿ ಬದಲಾಗುತ್ತಿರುವುದನ್ನು ಕಂಡು ಆತಂಕಗೊಳ್ಳುತ್ತಾಳೆ. ಸಾವಿತ್ರಿಯಲ್ಲಿ ಕಾಣುವ ಗಾಂಧೀಭಕ್ತಿ ಒಂದು ಬಗೆಯ ಮುಗ್ಧ ಆರಾಧನೆ. ಅದರಲ್ಲೇ ಅವಳು ಒಂದು ಬಗೆಯ ನೆಮ್ಮದಿ, ಸುಭದ್ರತೆ ಕಂಡುಕೊಂಡಿದ್ದಾಳೆ– ಮಾವ ಶಾಸ್ತ್ರಿಗಳು ತಮ್ಮ ಸಂಪ್ರದಾಯದಲ್ಲಿ ಕಂಡುಕೊಂಡಿದ್ದ ಹಾಗೆ. ಆದರೆ ವಿದ್ಯಾಧರನಿಗೆ ಬರೀ ಗಾಂಧಿ-ನೆಹರೂಗಳಷ್ಟೇ ಸಾಲದು ಎನ್ನಿಸಿದೆ. ಚಿಂತನೆಯಲ್ಲಿ ಅವನು ಅವಳಿಗಿಂತ ಬೇರೆ ಮಾರ್ಗದಲ್ಲಿ ಹೋಗಿದ್ದಾನೆ. ಅವನು ಆರಿಸಿಕೊಳ್ಳುವ ಮಾರ್ಗ ಸಾಮ್ಯವಾದ (ಕಮ್ಯೂನಿಸಂ). ಸಾಯುವಾಗ ಅವನು ಕೋವಿ ಹಿಡಿದಿದ್ದ ಎಂಬುದು ಪೋಲೀಸರ

ಹೇಳಿಕೆ. ಅದು ನಿಜವಾದರೆ, ಅವನಿಗೆ ಬ್ರಿಟಿಷ್ ಆಳಿಕೆಗೆ ಅಹಿಂಸಾಮಾರ್ಗವಷ್ಟೆ ಅಲ್ಲದೆ ಸಶಸ್ತ್ರ ವಿರೋಧ ತೋರಿಸಬೇಕೆಂಬ ಉದ್ದೇಶವೂ ಇದೆ. ಈ ಬದಲಾವಣೆಗಳ ಬಗೆಗೆ ಸಾವಿತ್ರಿಗೇ ಸಮ್ಮತಿಯಿಲ್ಲ. ವಿದ್ಯಾಧರನ ಓದು, ವ್ಯಾಸಂಗ, ಚಿಂತನೆಗಳು ಅವನನ್ನು ಆ ಪರಿಸರದಿಂದಲೇ ಪರಕೀಯನನ್ನಾಗಿ ಮಾಡಿವೆ. ಆದರೆ ಗಾಂಧಿಯನ್ನು ನೆಚ್ಚಿಕೊಂಡ ಸಾವಿತ್ರಿಗೆ ಆ ಬಗೆಯ ಪರಕೀಯತೆ ಇಲ್ಲ- ಗಾಂಧಿಯ ತತ್ವಗಳು ಬಹುಮಟ್ಟಿಗೆ ಭಾರತೀಯ ಮೌಲ್ಯಗಳಲ್ಲೇ ಬೇರೂರಿದ್ದವೆಂಬ ಕಾರಣದಿಂದಲೋ ಏನೋ.

*

ತಮ್ಮ ಮೊಟ್ಟಮೊದಲ ಕಾದಂಬರಿ 'ವಾತ್ಸಲ್ಯ ಪಥ'ದ ಮಾಲತಿ ಯಶೋದೆಯರಿಂದ ಮೊದಲುಗೊಂಡು, ಸ್ತ್ರೀಪಾತ್ರಗಳನ್ನು ಚಿತ್ರಿಸುವಲ್ಲಿ ಬಹಳ ನಿಷ್ಣಾತರಾದ ಬಲ್ಲಾಳರು ಇಲ್ಲಿಯೂ ಹಲವಾರು ಉತ್ತಮ ಚಿತ್ರಣಗಳನ್ನು ನೀಡಿದ್ದಾರೆ. ಮುಖ್ಯವಾಗಿ ಸಾವಿತ್ರಿ. ದೇಶದ ಬದಲಾವಣೆಗಳಿಗೆ ಚಾಲಕ ಶಕ್ತಿ ಗಾಂಧಿಯಾದರೆ, ಇಲ್ಲಿ ಕೊಡದೂರಿನಂಥ ಸಣ್ಣ ಊರಿನ ಪ್ರತಿಷ್ಠಿತ ಕುಟುಂಬವೊಂದರಲ್ಲಿ ನಡೆಯುವ ಬದಲಾವಣೆಗಳಿಗೆ ಅವಳು ಚಾಲಕ ಶಕ್ತಿ. ಅವಳಲ್ಲಿ ಕಾಣುವ ಮನೋಭಾವ ಆ ಕಾಲದ ದೊಡ್ಡ ಪಟ್ಟಣಗಳಲ್ಲಿ ವಾಸಿಸುತ್ತಿದ್ದ ಪ್ರಗತಿಪರ ಮನೆತನಗಳಲ್ಲಿ ಕಾಣುತ್ತಿದ್ದಂಥದ್ದು. ಅವರಲ್ಲಿ ಹಿಂದಿನ ಸಂಪ್ರದಾಯಗಳನ್ನೆಲ್ಲ ತೊಡೆದುಹಾಕಿ ಒಂದು ಬೇರೆಯೇ ಆದ ಹೊಸ ಹಾದಿಯಲ್ಲಿ ಹೋಗಬೇಕೆಂಬ ಕ್ರಾಂತಿಕಾರಕ ವಿಧ್ವಂಸಕ ಮನೋಭಾವ ಇರಲಿಲ್ಲ. ಆದಷ್ಟು ಹಿಂದಿನ ಸಂಸ್ಕೃತಿಯ ಜೊತೆಗೇ ಹೊಂದಿಕೊಂಡು, ಆದರೆ ಅದರಲ್ಲಿ ತಲೆತಲಾಂತರದಿಂದ ತುಂಬಿಕೊಂಡಿದ್ದ ಧೂಳು, ಕಸ ಝಾಡಿಸಿ, ಅದಕ್ಕೆ ಒಂದು ಹೊಸ ಚೇತನ ತುಂಬುವ ಮನೋಭಾವವಿತ್ತು. ಅದಕ್ಕೆ ಗಾಂಧಿಯೇ ನಿದರ್ಶನ. ಅಸ್ಪೃಶ್ಯರನ್ನೂ ದೇವಸ್ಥಾನದೊಳಗೆ ಬಿಡಬೇಕು ಎಂದರೇ ಹೊರತು, ಯಾರೂ ದೇವಸ್ಥಾನಗಳಿಗೆ ಹೋಗಬೇಡಿ ಅಥವಾ ದೇವಸ್ಥಾನಗಳೇ ಇರಬಾರದು ಎನ್ನಲಿಲ್ಲ. ಸಾವಿತ್ರಿ ತನ್ನ ಮಾವನ ಮನೆಯ ಸಂಸ್ಕೃತಿಯನ್ನೆಲ್ಲ ಅಲ್ಲಗಳೆಯಲಿಲ್ಲ. ಅವಳು ತಾಯಿಯೊಡನೆ ದೇವಸ್ಥಾನಕ್ಕೆ ಒಮ್ಮೆ ಬಂದಿದ್ದಾಗಲೇ ಶಾಸ್ತ್ರಿಗಳು ಅವಳನ್ನು ಕಂಡದ್ದು. ಸೊಸೆಯಾಗಿ ಬಂದ ಮೇಲೆ ಶಾಸ್ತ್ರಿಗಳ ಪೂಜೆಗೆ ಸಿದ್ಧಪಡಿಸಿದ ಮಂಗಳಾರತಿ ತಟ್ಟೆಯಲ್ಲಿ ಅವಳು ಬಿಡಿಸಿದ ಗಣಪತಿ ಚಿತ್ರ ಶಾಸ್ತ್ರಿಗಳನ್ನು ಭಾವಪರವಶರನ್ನಾಗಿಸುತ್ತದೆ. ಹಾಗೆಯೇ ಅವಳು ಹಾಕುವ ರಂಗೋಲಿ. ಶಶಿಧರನ ಹೆಂಡತಿ ನಾಗವೇಣಿ ಕಾಟಾಚಾರಕ್ಕೆ ನಾಲ್ಕು ಗೆರೆ ಎಳೆದರೆ ಇವಳು ಹಾಕುವ ರಂಗೋಲಿ ಒಂದು ಕಲಾಕೃತಿ. ಶಾಸ್ತ್ರಿಗಳಿಗೆ ಇವೆಲ್ಲ ಅನುಭವಕ್ಕೆ ಬಂದ ಮಾತು. ಸಾವಿತ್ರಿಯ ಆಲೋಚನೆಗಳಲ್ಲಿ, ಭಾವನೆಗಳಲ್ಲಿ, ಅವಳು ಬಳಸುವ ಭಾಷೆಯಲ್ಲಿ ಬಹುಮಟ್ಟಿಗೆ ಒಂದು ಬಗೆಯ ದೃಢತೆ ಇದೆ. ಗಂಡ ವಿದ್ಯಾಧರನಿಗೆ ಇರುವ ತೊಳಲಿಕೆ

ಅವಳಲ್ಲಿ ಇಲ್ಲ. ಆದರೂ ಅವಳ ಮಾತಿನಲ್ಲಿ ನಯವಿದೆ, ವಿನಯವಿದೆ. ಗಡಸುತನವಿಲ್ಲ, ಆತ್ಮಪ್ರತ್ಯಯವಿದ್ದರೂ ಅಹಂಕಾರವಿಲ್ಲ, ಯಾರ ಬಗೆಗೂ ತಿರಸ್ಕಾರವಿಲ್ಲ. ಅತ್ತೆಮಾವಂದಿರೊಡನೆ ಭಿನ್ನಾಭಿಪ್ರಾಯವಿದ್ದರೂ ಅದನ್ನು ಅವಳು ನಗೆಮೊಗದಿಂದ, ಹಗೆತನವಿಲ್ಲದೆ ವಿಶ್ವಾಸದಿಂದ ಹೇಳುವ ಪರಿ ಅವರಿಗೆ ತುಂಬಾ ಅಚ್ಚುಮೆಚ್ಚು. ಮನೆಗೆ ಒಂದು ಕಳೆ ತಂದ ಭಾಗ್ಯನಿಧಿ ಅವಳು ಎಂದೇ ಅವರ ನಂಬಿಕೆ. ಅವಳು ನಡೆದರೆ '... ಯಾವುದೋ ಒಂದು ರೀತಿಯ ಬೆಳಕು ಈಗ ತನ್ನ ಮನೆಯಲ್ಲಿ ಸಂಚರಿಸುತ್ತಿದೆಯೆಂದೇ ಭಾಸವಾಗುತ್ತಿತ್ತು' ಶಾಸ್ತ್ರಿಗಳಿಗೆ. 'ಸಾವಿತ್ರಿ ತನ್ನ ಮನೆಗೆ ಸರ್ವೇಶ್ವರಿಯನ್ನು ನೆಲೆಸಲೆಂದೆ ಸೊಸೆಯಾಗಿ ಬಂದಿದ್ದಾಳೆ' ಎಂದೇ ಅವರ ನಂಬಿಕೆ. ಅವಳ ಕಣ್ಣುಗಳಲ್ಲಿನ ಪ್ರಭೆ 'ಸೌಂದರ್ಯಲಹರಿ'ಯಲ್ಲಿ ಕಾಣುವ ದೇವಿಯ ಕಣ್ಣಹೊಳಪಿನಂತೆ ಕಾಣಿಸುತ್ತದೆ ಅವರಿಗೆ. ಸ್ತ್ರೀಯ ಪ್ರಚಂಡ ಅತೀಂದ್ರಿಯ(mystical) ಶಕ್ತಿಯ ಅನುಭಾವವನ್ನು ಬಲ್ಲಾಳರು ಇಲ್ಲಿ ಬಳಸಿ ಕೊಂಡಿದ್ದಾರೆ. (ಅನಂತಮೂರ್ತಿಯವರೂ ತಮ್ಮ 'ದಿವ್ಯ' ಕಾದಂಬರಿಯಲ್ಲಿ ಇದನ್ನು ಬಳಸಿರುವುದನ್ನು ನೆನೆಯಬಹುದು.) ಆದರೆ, ಇಲ್ಲಿ ಬಲ್ಲಾಳರು ಸ್ವಲ್ಪ – ಒಂದು ಹಿಡಿ ಹೆಚ್ಚಾಗಿ– ಭಾವುಕರಾಗಿದ್ದಾರೆಯೇ ಎನ್ನಿಸದೆ ಇರದು. ಈ ದೈವತ್ವವನ್ನು ಅವಳಿಗೆ ಆರೋಪಿಸುವ ಅವಶ್ಯಕತೆ ಏನಿತ್ತು? ಶಾಸ್ತ್ರಿಗಳ ಮನೆಗೆ ಪ್ರವೇಶ ದೊರಕಿಸಲೆಂದೆ? ಆದರೆ ಅದರಿಂದ ಗಾಂಧಿಯದೇ ಆದ ಪ್ರಭಾವಕ್ಕೆ ಕುಂದಾಗಲಿಲ್ಲವೆ?

ಸಾವಿತ್ರಿ ಸ್ತ್ರೀಶಕ್ತಿಯ ಸ್ವರೂಪವಾದರೆ, ಪಾರ್ವತಿ, ಶಾಸ್ತ್ರಿಗಳ ಹಿರಿಯ ಮಗಳು, ಗಂಡನ ಕೈಗೆ ಸಿಕ್ಕು ಯಾವ ಬಗೆಯ ಸ್ವಾತಂತ್ರ್ಯ, ಸ್ಥಾನಮಾನವೂ ಇಲ್ಲದೆ ಜೀವನದಲ್ಲಿ ನಶಿಸಿಹೋಗುವ ಅಸಂಖ್ಯಾತ ಅಸಹಾಯಕ ಸ್ತ್ರೀಯರ ಸಾಕಾರ ಮೂರ್ತಿ. ಅವಳ ಕತೆ ಅತ್ಯಂತ ದಾರುಣವಾದದ್ದು. ತನ್ನ ಅಸಹಾಯಕತೆಯಲ್ಲೂ ಅವಳು ತೋರುವ ಒಂದು ಕಿಡಿ ಧೈರ್ಯ ತನ್ನ ಸಾಕು ಮಗ ಮಾಣುವನ್ನು ಗಂಡ ತನ್ನ ಸಹಾಯಕ್ಕೆ ಹೊಟೇಲಿನ ಕೆಲಸಕ್ಕೆ ಬರಲಿ ಎಂದು ಎಷ್ಟು ಒತ್ತಾಯಿಸಿದರೂ ಅವನ ವಶಕ್ಕೆ ಒಪ್ಪಿಸದೆ ಅವನನ್ನು ಗಾಂಧಿ ಆಶ್ರಮ ಸೇರಲು ಕಳಿಸಿದ್ದು. ತನಗಿಂತಲೂ ಚಿಕ್ಕ ವಯಸ್ಸಿನ ಅತ್ತಿಗೆ ಸಾವಿತ್ರಿಯನ್ನು ಕುರಿತ ಅವಳ ಪ್ರೇಮ ಅಭಿಮಾನ ಮನಸ್ಸು ತಟ್ಟುವಂತಿದೆ.

ಬದಲಾವಣೆ, ಹೊಸ ರೀತಿಯ ಆಲೋಚನೆಗಳು ಒಬ್ಬನಲ್ಲಿ ತರಬಹುದಾದ ಪರಕೀಯತೆಯನ್ನು (alienation) ಪ್ರತಿನಿಧಿಸುತ್ತಾನೆ ವಿದ್ಯಾಧರ. ದೇಶ, ಸಮಾಜ, ವ್ಯಕ್ತಿ ಇವುಗಳನ್ನು ರೂಪಿಸುವ, ಚಲಿಸುವ ಶಕ್ತಿಗಳ ಬಗ್ಗೆ ತನ್ನ ತಿಳುವಳಿಕೆ ಹೆಚ್ಚಿಸಿಕೊಂಡಂತೆಲ್ಲ ವಿದ್ಯಾಧರನಿಗೆ ತನ್ನ ಸುತ್ತಲ ಪರಿಸರದಿಂದ, ಸಂಸಾರದಿಂದ ಪರಕೀಯನಾಗುತ್ತಿರುವ ಭಾವ ಬರತೊಡಗುತ್ತದೆ, ಅವನ ಒಳಗಿನ ತಳಮಳವೂ ಹೆಚ್ಚುತ್ತದೆ. ಕಮ್ಯೂನಿಸ್ಟ್ ತತ್ತ್ವಗಳನ್ನು ಪರಿಚಯ ಮಾಡಿಕೊಂಡ ಮೇಲೆ ಅವನಿಗೆ ಕಾರ್ಮಿಕ ಸಂಘಟನೆಯೇ ತನ್ನ ದಾರಿ ಎಂಬ ತಿಳುವಳಿಕೆ ಬಲವಾಗಿ ಅದಕ್ಕೆ ಸರಿಯಾದ

ಕಾರ್ಯಕ್ಷೇತ್ರ ಮುಂಬಯಿಯೇ ಎಂದು ಅಲ್ಲಿಗೆ ತೆರಳುತ್ತಾನೆ. ಈ ಮಧ್ಯೆ ವಿಶ್ವಯುದ್ಧದಲ್ಲಿ ರಷ್ಯಾ ಮಿತ್ರರಾಷ್ಟ್ರಗಳ ಕೂಟವನ್ನು ಸೇರಿದ್ದರಿಂದ ಹಿಂದೆ ಎಡಪಂಥೀಯ ಪಕ್ಷದ ಬಗ್ಗೆ ಇದ್ದ ಅಪನಂಬಿಕೆ ಬ್ರಿಟಿಷ್ ಸರಕಾರಕ್ಕೆ ಸಡಿಲವಾಗಿ ಇವನ ಕೆಲಸಕ್ಕೆ ಹಿಂದಿದ್ದ ರಹಸ್ಯತೆಯ ಅವಶ್ಯಕತೆ ಇಲ್ಲವಾಗಿದೆ. ಗಾಂಧಿಯ ಅಹಿಂಸಾವಾದದಲ್ಲಿ ಅವನಿಗೆ ಸಂಪೂರ್ಣ ನಂಬಿಕೆ ಇಲ್ಲ. ಸಾವಿತ್ರಿ ಗಾಂಧೀತತ್ತ್ವಗಳನ್ನು ಪ್ರಶ್ನಿಸುವ ಗೋಜಿಗೇ ಹೋಗದೆ ಅವನ್ನು ಶ್ರದ್ಧಾಭಕ್ತಿಗಳಿಂದ ಸ್ವೀಕರಿಸಿದವಳು. ವಿದ್ಯಾನಿಗೆ ಅಹಿಂಸಾಮಾರ್ಗ ಅತಿ ನಿಧಾನದ ರೀತಿ, ಬ್ರಿಟಿಷರನ್ನು ಭಾರತದಿಂದ ಓಡಿಸಲು ಈಗಿರುವ ಅವಕಾಶವನ್ನು ಆದಷ್ಟು ಬಲವಾಗಿ ಉಪಯೋಗಿಸಿಕೊಳ್ಳಬೇಕು ಎಂಬ ಆತುರದಲ್ಲಿ ಅವನ ಮನಸ್ಸು ಹಿಂಸಾಮಾರ್ಗಕ್ಕೂ ಹೊರಳುತ್ತದೆ. ಭಾರತದಿಂದ ಬ್ರಿಟಿಷರನ್ನು ಓಡಿಸಲು ಸುಭಾಷರು ಜರ್ಮನಿ ಜಪಾನುಗಳ ಜೊತೆ ಸೇರಿದ ಯೋಚನೆ ಸಾಧುವೆಂದೆ ಅವನಿಗನ್ನಿಸುತ್ತದೆ. ಆದರೆ ಅವನೂ ಒಂದು ರೀತಿಯಲ್ಲಿ ಮುಗ್ಧನೇ. ಎಂದೂ ಕೋವಿ ಹಿಡಿಯದ ಅವನು ಅಂದು ಅದನ್ನು ಹಿಡಿದು ಪೊಲೀಸರ ಗುಂಡಿನೇಟಿಗೆ ಬಲಿಯಾಗುತ್ತಾನೆ.

ಶಾಸ್ತ್ರಿಗಳದು ಘನವಾದ ವ್ಯಕ್ತಿತ್ವ. ಅವರು ಎಷ್ಟೇ ಸಂಪ್ರದಾಯಸ್ಥರಾದರೂ ಸುಸಂಸ್ಕೃತರು, ಪ್ರಾಮಾಣಿಕರು. ಅದರಿಂದಲೇ ಅವರಿಗೂ ಅವರಷ್ಟೇ ಸುಸಂಸ್ಕೃತ ವ್ಯಕ್ತಿಯಾದ ಅವರ ಹೆಂಡತಿ ಗಂಗಮ್ಮನವರಿಗೂ ವಿದ್ಯಾ–ಸಾವಿತ್ರಿಯರಲ್ಲಿ ವಿಶ್ವಾಸ, ಅನುಕಂಪ. ಕಟ್ಟಕಡೆಯ ಸನ್ನಿವೇಶದಲ್ಲಿ–ಗಾಂಧಿಯ ಕೊಲೆಯಾಗಿ ಶಾಸ್ತ್ರಿಗಳು ಸಾವಿತ್ರಿಯನ್ನು ನೋಡಲು ಬಂದ ದಿನ– ಅವರು ಯಾರದೋ ಹಳೆಯ ಕೋಟು, ಗಾಂಧಿ ಟೊಪ್ಪಿ ಹಾಕಿಕೊಂಡು (ಬಹುಶಃ ತಮ್ಮಲ್ಲಾದ ಬದಲಾವಣೆಯ ಕುರುಹಾಗಿ) ಬರುವುದು ನಾಟಕೀಯವಾಗಿಯೂ ಸ್ವಲ್ಪ ಅನುದ್ದೇಶಿತವಾಗಿ ನಗುಬರಿಸುವಂತೆಯೂ (comical) ಕಾಣುತ್ತದೆ. ಆದರೂ ಒಟ್ಟಿನಲ್ಲಿ ಅವರು ನಮ್ಮ ವಿಶ್ವಾಸ ಗೌರವಗಳನ್ನು ಗಳಿಸುವ ವ್ಯಕ್ತಿಯೆ.

ಕತೆಯಲ್ಲಿ ಬರುವ ಇನ್ನೂ ಹತ್ತಾರು ಜನ ಒಟ್ಟಿನಲ್ಲಿ ಸುಸಂಸ್ಕೃತರೆ. ಬಹುಮಟ್ಟಿಗೆ ಬಲ್ಲಾಳರು ಚಿತ್ರಿಸುವ ಸಮಾಜ ಒಂದು ಸುನೀತವಾದ ಮಧ್ಯಮವರ್ಗದ ಸಮಾಜ. ಶಹರಿನ ನಾಗರಿಕ (urban) ಸಮಾಜವನ್ನು ಚಿತ್ರಿಸುವುದರಲ್ಲೂ ಬಲ್ಲಾಳರದ್ದು ಪಳಗಿದ ಕೈ. ಮುಂಬಯಿಯಂಥ ಮಹಾನಗರದ ಜೀವನಾಡಿಯ ಮಿಡಿತ ಅವರ ಕತೆಗಳಲ್ಲಿ ಚೆನ್ನಾಗಿ ಕೇಳಿಬರುತ್ತದೆ.

೩

'ಗಾಂಧಿ ಬಂದ' ಮತ್ತು 'ಹೆಜ್ಜೆ...'– ಈ ಎರಡೂ ಭಾರತದ ಈಚಿನ ಚರಿತ್ರೆಯ ಅತ್ಯಂತ ಸತ್ವಯುತವಾದ ಕಾಲದ ಕತೆಗಳು. ಇಡೀ ದೇಶವೇ ಎಚ್ಚೆತ್ತುಕೊಳ್ಳುತ್ತಿದ್ದ

ಕಾಲವದು. ಆ ಕಾಲದ ವೈಯಕ್ತಿಕ, ಸಾಮಾಜಿಕ, ರಾಜಕೀಯ ಪಲ್ಲಟಗಳನ್ನು ಎರಡು ಕಾದಂಬರಿಗಳೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಸಮರ್ಥವಾಗಿ ಹಿಡಿದಿಟ್ಟಿವೆ. 'ಗಾಂಧಿ ಬಂದ', 'ಹೆಜ್ಜೆ...' ಎರಡೂ ಬಹಳ ಧ್ವನಿಪೂರ್ಣವಾದ ಹೆಸರುಗಳು. 'ಗಾಂಧಿ ಬಂದ' ಎಂಬುದರಲ್ಲಿ ನೆಹ್ರೂರವರ 'And then Gandhi came' ಎಂಬುದರ ಛಾಯೆ ಕಾಣುತ್ತದೆ. ಬಲ್ಲಾಳರು ತಮ್ಮ ಕಾದಂಬರಿಯಲ್ಲಿ ಉದ್ಧರಿಸುವ Henry Jamesನ ಮಾತು, 'It takes a lot of history to produce a little literature' ಈ ಸನ್ನಿವೇಶದಲ್ಲಿ ತುಂಬ ಅರ್ಥಪೂರ್ಣವಾಗಿದೆ. ಈ ಕತೆಗಳ ಪುಟಗಳ ನಡುವೆ ನಡೆದುಹೋದ ಚರಿತ್ರೆ ಬಹು ದೊಡ್ಡದು.

ಈ ಕತೆಗಳಲ್ಲಿ ನಾವು ಕಾಣುವುದು ಚಾರಿತ್ರಿಕ ಘಟನೆಗಳಿಗೂ ವೈಯಕ್ತಿಕ ಜೀವನಕ್ಕೂ ಇರಬಹುದಾದ ಸಂಬಂಧ. ನಮ್ಮ ಹಿಂದಿನ ತಲೆಮಾರುಗಳ ಆದರ್ಶವೆಲ್ಲ 'ನೆಮ್ಮದಿಯಾಗಿರುವುದು ಅಂದರೆ ಚರಿತ್ರೆ, ರಾಜಕೀಯಗಳನ್ನು ವೈಯಕ್ತಿಕ ಜೀವನದಿಂದ ದೂರವಿಡುವುದೇ ಆಗಿತ್ತು. ತಲೆತಲಾಂತರದಿಂದ ಬಂದಿದ್ದ ಸಮಾಜದ ಕಟ್ಟುಪಾಡುಗಳು, ಅವುಗಳ ಚೌಕಟ್ಟಿನಲ್ಲೇ ನಡೆಯುತ್ತಿದ್ದ ಆಲೋಚನೆ, ವ್ಯವಹಾರಗಳು– ಇವು ಒಂದು ಸುಭದ್ರತೆಯ, ನೆಮ್ಮದಿಯ ಭಾವನೆಯನ್ನು ಹುಟ್ಟಿಸುತ್ತಿದ್ದವು. ಬ್ರಿಟಿಷರ ಬಗ್ಗೆ ನಮ್ಮ ಜನಕ್ಕೆ ಇದ್ದ ಒಂದು ದೊಡ್ಡ ಗೌರವ ಅವರು ನಮ್ಮ ಸಾಮಾಜಿಕ, ಜಾತೀಯ ಕಟ್ಟುಪಾಡುಗಳ ವ್ಯವಸ್ಥೆಯಲ್ಲಿ ಕೈಹಾಕುವುದಿಲ್ಲ, ನಾವು ನಮ್ಮ ಜಾತಿ ಮತಾಚಾರಗಳನ್ನು ಯಾವ ತೊಂದರೆಯೂ ಇಲ್ಲದೆ ನಡೆಸಿಕೊಂಡು ಹೋಗಬಹುದು ಎಂಬುದು. ಅದರಿಂದ ಅವರು ಎಷ್ಟು ಲಾಭ ಪಡೆಯುತ್ತಿದ್ದಾರೆಂಬ ಕಲ್ಪನೆ ನಮ್ಮವರಿಗೆ ಬೇಕಿರಲಿಲ್ಲ. ಇಂಥ ಸಂದರ್ಭದಲ್ಲಿ ವೈಯಕ್ತಿಕ, ಸಾಮಾಜಿಕ ರಾಜಕೀಯ ವಿಚಾರಗಳಿಗೆಲ್ಲ ಸಂಬಂಧ ಕಲ್ಪಿಸಿದವರು ಗಾಂಧಿ. ಸ್ವಾತಂತ್ರ್ಯದ ಹೆಸರಿನಲ್ಲಿ ನಮ್ಮ ಕುಲವನ್ನೆಲ್ಲ ಹಾಳುಮಾಡಲು ಹೊರಟಿರುವವನು ಗಾಂಧಿ ಎಂದೆ ಆ ಕಾಲದ ಆಚಾರವಂತರ ಆಕ್ರೋಶಕ್ಕೆ ಕಾರಣ. ಆದರೆ, ಈ ಕಾದಂಬರಿಗಳ ಕಡೆಯಲ್ಲಿ ಅಂಥವರೂ ಬದಲಾಗುವುದನ್ನು ಕಾಣುತ್ತೇವೆ. 'ಗಾಂಧಿ ಬಂದ'ನಲ್ಲಿ ಮಾರಪ್ಪನ ತಾಯಿ ಸೂರಕ್ಕೆಗೆ ತನ್ನ ಮಗ ಮೂವತ್ತೈದು ದಾಟಿದ್ದರೂ ಮದುವೆಯಾಗಿಲ್ಲದ್ದಕ್ಕೆ ಗಾಂಧಿಯೆ ಕಾರಣ ಎಂದು ಅವರನ್ನು ಶಪಿಸುತ್ತಿದ್ದವಳು ಕಡೆಯಲ್ಲಿ, 'ನಾನೂ ಒಂದು ಸಲ ಅವರನ್ನು ನೋಡಿರಬೇಕಿತ್ತು' ಎಂದುಕೊಳ್ಳುತ್ತಾಳೆ. 'ಹೆಜ್ಜೆ...'ಯಲ್ಲಿ ಗಾಂಧಿ ಸತ್ತ ದಿನ ಮುಂಬಯಿಗೆ ಬಂದು ಇಡೀ ಜನಸ್ತೋಮ ಕಣ್ಣೀರಿಡುವುದನ್ನು ಕಂಡ ಶಾಸ್ತ್ರಿಗಳಿಗೆ ಗಾಂಧಿಯ ಹಿರಿತನದ ಅರಿವಾಗಿ 'ಸುಮ್ಮಗೆ ಮಹಾತ್ಮ ಅಂತ ಕರೀತಾರೆಯೇ?' ಎನ್ನುತ್ತಾರೆ.

ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ಬಲ್ಲಾಳರು ಬಹು ಚೆನ್ನಾಗಿ ಬಲ್ಲವರು. ಆ ಹೋರಾಟದ ಅತ್ಯಂತ ಮುಖ್ಯ ಕಾರ್ಯಕ್ಷೇತ್ರಗಳಲ್ಲಿ ಒಂದಾದ

ಮುಂಬಯಿಯಲ್ಲಿ ಬಹು ಕಾಲ ವಾಸಿಸಿ, ಆ ಹೋರಾಟದ ಸೂಕ್ಷ್ಮ ವಿವರಗಳನ್ನೆಲ್ಲ ತಿಳಿದವರು. ಮಿಗಿಲಾಗಿ ಪತ್ರಿಕೋದ್ಯಮಿ ಆಗಿದ್ದವರು (ಮುಂಬಯಿಯ ಕನ್ನಡ ಸಾಪ್ತಾಹಿಕ ಪತ್ರಿಕೆ 'ನುಡಿ'ಯ ಸಂಪಾದಕ ವರ್ಗದಲ್ಲಿದ್ದವರು). ಜೂನ್ ೧೯೪೭ರಲ್ಲಿ ಆಗಿನ ಭಾರತದ ವೈಸ್‌ರಾಯ್ ಆಗಿದ್ದ ಮೌಂಟ್‌ಬ್ಯಾಟನ್ ಕಾಂಗ್ರೆಸ್ ಮುಂದಿಟ್ಟ ದೇಶ ವಿಭಜನೆಯ ಸೂತ್ರವನ್ನು ಪ್ರತಿಭಟಿಸಿ ಅವರು 'ನುಡಿ'ಯಲ್ಲಿ ಬರೆದ ಲೇಖನ ಆಗಿನ ಮುಂಬಯಿ ಸರ್ಕಾರದ ಅವಕೃಪೆಗೆ ಒಳಗಾಗಿ, ಸರಕಾರದಿಂದ ಅವರಿಗೆ 'ಎಚ್ಚರಿಕೆ' ಬಂದಿತ್ತು. ದೇಶದ ಸ್ವಾತಂತ್ರ್ಯ ಹೋರಾಟದ ನಿಕಟ, ನಿಖರ ಜ್ಞಾನ ಅವರ ಕಾದಂಬರಿಗೆ ಬಹು ಹೆಚ್ಚಿನ ಯಥಾರ್ಥತೆಯನ್ನು (authenticity) ಒದಗಿಸುತ್ತದೆ. ನಾಗವೇಣಿಯವರ ಕತೆಯಲ್ಲಿ ಬಂದಂತೆ ಇವರ ಕತೆಯಲ್ಲಿ ಗಾಂಧಿಯೇ ಆಗಲಿ, ಅವರ ಹತ್ತಿರದ ಅನುಯಾಯಿಗಳೇ ಆಗಲಿ– ಕಾರ್ನಾಡ ಸದಾಶಿವರಾಯ ರಂಥವರು– ಯಾರೂ ನೇರವಾಗಿ ಪಾತ್ರ ವಹಿಸುವುದಿಲ್ಲವಾದರೂ ಇಲ್ಲಿ ದೇಶದ ರಾಜಕೀಯ ವಾತಾವರಣ ಹೆಚ್ಚು ದಟ್ಟವಾಗಿ ಹರಡಿಕೊಂಡಿದೆ. ನಾಗವೇಣಿಯವರ ಕತೆ ಆ ಕಾಲದ ತುಳುನಾಡ ಸಮಾಜವನ್ನು ಅತ್ಯಂತ ಯಶಸ್ವಿಯಾಗಿ ಚಿತ್ರಿಸುತ್ತದೆ, ಆದರೆ 'ಗಾಂಧಿ ಬಂದ' ಎಂಬ ಶೀರ್ಷಿಕೆಯನ್ನು ಸಮರ್ಥಗೊಳಿಸುವಲ್ಲಿ ಅಷ್ಟೇ ಯಶಸ್ವಿಯಾಗಿದೆಯೇ ಎಂಬಲ್ಲಿ ಸ್ವಲ್ಪ ಹಿಂದೆ ಬೀಳುತ್ತದೆ.

ಒಟ್ಟಿನಲ್ಲಿ ಈ ಎರಡು ಕಾದಂಬರಿಗಳನ್ನೂ ಒಟ್ಟಿಗೆ ಅಭ್ಯಾಸ ಮಾಡಿದ್ದು ಮನಸ್ಸಿಗೆ ದೊಡ್ಡ ಸಂತೋಷ ಕೊಟ್ಟಿತಲ್ಲದೆ ನಮ್ಮ ನಾಡಿನ ಸಮಾಜದ, ಚರಿತ್ರೆಯ ಒಂದು ನಿಕಟ ಚಿತ್ರಣವನ್ನೂ ಕಣ್ಣ ಮುಂದಿರಿಸಿತು. ಎಲ್ಲಕ್ಕಿಂತ ಹೆಚ್ಚಾಗಿ ಮನಸ್ಸನ್ನು ಚಿಂತನೆಗೆ ಒಳಗಾಗಿಸಿತು. ಗಾಂಧಿ, ಅವರ ತತ್ತ್ವಗಳು, ಸಾಧನೆಗಳ ಬಗ್ಗೆ ಉದಾಸೀನ, ಅಜ್ಞಾನ, ಅಪಹಾಸ್ಯಗಳೇ ಹೆಚ್ಚುತ್ತಿರುವ ಇಂದಿನ ಭಾರತದಲ್ಲಿ (ಅಮೆರಿಕದಲ್ಲಂತೂ ಹಾಗೆ ಕಾಣುವುದಿಲ್ಲ) ಇಂಥ ಎರಡು ಉತ್ತಮ ಕಾದಂಬರಿಗಳು ಬಂದದ್ದು ಅಭಿನಂದನೀಯ. ನಾಗವೇಣಿಯವರಿಗೂ ಹಿರಿಯರಾದ ಬಲ್ಲಾಳರ ಸ್ಮೃತಿಗೂ ನಮ್ಮ ಸಪ್ರೇಮ ನಮಸ್ಕಾರಗಳು.

**ಕೃತಿ ವಿವರ:**

ಗಾಂಧಿ ಬಂದ, ಎಚ್. ನಾಗವೇಣಿ, ಲೋಹಿಯ ಪ್ರಕಾಶನ, ಬಳ್ಳಾರಿ, ೧೯೯೯ (೩ನೇ ಮುದ್ರಣ ೨೦೦೮), ಪು. ೩೬೮

ಹೆಜ್ಜೆ..., ವ್ಯಾಸರಾಯ ಬಲ್ಲಾಳ, ಗೀತಾ ಬುಕ್ ಹೌಸ್, ಮೈಸೂರು , ೨೦೦೦, ಪು. ೪೮೮

# ಧರಮನಟ್ಟಿಯ 'ತೇರು'– ನನ್ನ ನೋಟದಲ್ಲಿ

– ಸುಪ್ತದೀಪ್ತಿ (ಜ್ಯೋತಿ ಮಹಾದೇವ್);ಸನ್ನಿವೇಲ್, ಕ್ಯಾಲಿಫೋರ್ನಿಯಾ

'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕೃತಿ' ಎನ್ನುವ ಗರಿಯನ್ನು ಮುಕುಟದೊಳಗೆ ಧರಿಸಿಕೊಂಡಿರುವ 'ತೇರು', ಕಾದಂಬರಿ ಎನ್ನುವುದಕ್ಕಿಂತಲೂ ನೀಳ್ಗತೆ ಎನ್ನಬಹುದಾದ್ದು. ಸಿ. ಎನ್. ರಾಮಚಂದ್ರನ್ನರ ಮುನ್ನುಡಿ, ಪುರುಷೋತ್ತಮ ಬಿಳಿಮಲೆಯವರ ಮೆಚ್ಚುನುಡಿ, ಎಚ್. ಎಸ್. ವೆಂಕಟೇಶಮೂರ್ತಿಯವರ ಬೆನ್ನುಡಿಯನ್ನು ಹೊಂದಿ, ಮೂರು ಮುದ್ರಣಗಳನ್ನು ಕಂಡ ಕೃತಿಯಿದು. ಇತಿಹಾಸ ಮತ್ತು ಪುರಾಣದ ನಡುವಿನ ತೆಳುಗೆರೆಯ ಮೇಲೆ ಮೂಡುವ ಜಾನಪದ ಕತೆಯಂತೆ ಭಾಷೆ, ಭಾವ, ಶೈಲಿ, ಸೊಗಡುಗಳಲ್ಲಿ ಆವರಿಸಿಕೊಂಡು ಓದಿಸಿಕೊಳ್ಳುವ 'ತೇರು', ಒಂದು ಉತ್ತಮ ಕಥಾನಕ. ಮಲ್ಲಾಡಿಹಳ್ಳಿಯ ಆನಂದಕಂದ ಗ್ರಂಥಮಾಲೆಯು ಹೊರತಂದಿರುವ ಈ ಕೃತಿಯನ್ನು ಬೆಂಗಳೂರಿನ ಚಾಮರಾಜಪೇಟೆಯ ವಿಶ್ವಾಸ್ ಪ್ರಿಂಟರ್ಸ್ ಅಂದವಾಗಿ ಮುದ್ರಿಸಿದ್ದಾರೆ.

**ಪರಿಚಯ: ಕೃತಿ ಮತ್ತು ಕರ್ತೃ**

ಕರ್ತೃ ರಾಘವೇಂದ್ರ ಪಾಟೀಲರು ಕಥೆಗಾರ, ಕಾದಂಬರಿಕಾರ, ವಿಮರ್ಶಕ, ಮತ್ತು ಸಂಪಾದಕ. ಒಟ್ಟು ಹದಿನಾರು ಕೃತಿಗಳನ್ನು ಹೊರತಂದಿರುವ ಪಾಟೀಲರು ಹಲವು ವರ್ಷಗಳಿಂದ 'ಸಾಹಿತ್ಯ ಸಂವಾದ' ಎಂಬ ನಿಯತಕಾಲಿಕದ ಸಂಪಾದಕರೂ ಹೌದು. 'ತೇರು' ಕೃತಿಯ ಮುನ್ನುಡಿಯಲ್ಲಿ ಸಿ. ಎನ್. ರಾಮಚಂದ್ರನ್ ಅವರು '...ಪಾಟೀಲರು ನವ್ಯೋತ್ತರ ಕನ್ನಡ ಕಥೆಗಾರರಲ್ಲಿ ಪ್ರಮುಖರು' ಎನ್ನುತ್ತಾರೆ. ಇದನ್ನು ಕೇವಲ ಕಾಲಸೂಚಕವಾಗಿ ಉಪಯೋಗಿಸಿಲ್ಲವೆಂದು ವಿವರಿಸುತ್ತಾ, '...ಕನ್ನಡದ 'ಸಣ್ಣಕಥೆ' ಎಂಬ ಪ್ರಭೇದ ನವ್ಯಯುಗದಲ್ಲಿ ಒಂದು ದಿಕ್ಕಿನಲ್ಲಿ ಅದ್ಭುತವಾಗಿ ಬೆಳೆಯಿತು– ನವ್ಯ ಕಾವ್ಯಕ್ಕೆ ಸರಿಸಾಟಿಯಾಗಿ (ನವ್ಯ ಸಾಹಿತ್ಯದಲ್ಲಿ ಪ್ರತಿಯೊಂದು ಪ್ರಭೇದವೂ 'ಕಾವ್ಯ'ದ ಮತ್ತೊಂದು ರೂಪವೇ ಆಗಿತ್ತು; ಅಥವಾ ಆಗಿರಬೇಕು ಎಂಬುದು ನವ್ಯ ಲೇಖಕರ

ನಿಲುವಾಗಿತ್ತು ಎಂಬುದು ಇಂದು ಎಲ್ಲರಿಗೂ ಗೊತ್ತಿರುವ ವಿಷಯ). ಈ ನಿಲುವಿಗೆ ವಿರುದ್ಧವಾಗಿ, ನವ್ಯೋತ್ತರ ಕಥನ ಸಾಹಿತ್ಯ ಮತ್ತೊಂದು ದಿಕ್ಕಿನಲ್ಲಿ– ಸಮಷ್ಟಿ ಚಿಂತನೆ, ಅಂತರ್‌ಶಿಸ್ತೀಯ ಸಾಮಾಜಿಕ ಗ್ರಹಿಕೆ, ಭ್ರಮೆ–ವಾಸ್ತವಗಳ ಮಿಶ್ರಣ, ಇತ್ಯಾದಿಗಳ ದಿಕ್ಕಿನಲ್ಲಿ– ಕಥನ ಸಾಹಿತ್ಯದ ಸಾಧ್ಯತೆಗಳನ್ನು ಆಳವಾಗಿ ಶೋಧಿಸಲು ತೊಡಗಿತು. ಈ ಹಿನ್ನೆಲೆಯಲ್ಲಿ ರಾಘವೇಂದ್ರ ಪಾಟೀಲರ 'ದೇಸಗತಿ', 'ಮಾಯಿಯ ಮುಖಗಳು' (ಕಥಾಸಂಕಲನಗಳು) ಮತ್ತು 'ತೇರು' ಹೆಚ್ಚು ಅರ್ಥಪೂರ್ಣವಾಗಿ ಕಾಣುತ್ತವೆ...' ಎಂದಿದ್ದಾರೆ.

ತಮ್ಮ ಮೆಚ್ಚುನುಡಿಯಲ್ಲಿ ಪುರುಷೋತ್ತಮ ಬಿಳಿಮಲೆಯವರು, 'ತೇರು ಕಾದಂಬರಿಯು ಪಾಟೀಲರು ಸಾಹಿತ್ಯ ಕ್ಷೇತ್ರದಲ್ಲಿ ನಡೆಸುತ್ತಿರುವ ಸೃಜನಶೀಲ ಪ್ರಯೋಗಕ್ಕೆ ಇನ್ನೊಂದು ಉದಾಹರಣೆ. ತುಂಬ ಮನೋಹರವಾಗಿ ಆರಂಭಗೊಂಡು, ಲಲಿತವಾಗಿ ಬೆಳೆಯುತ್ತಾ ಹೋಗುವ ಈ ಕಾದಂಬರಿಯು ಮುಕ್ತಾಯವಾಗುವ ಹೊತ್ತಿಗೆ ಆರಂಭದ ತನ್ನ ರಮ್ಯ ಗುಣಗಳನ್ನು ಕಳಕೊಂಡು ಸಂಕೀರ್ಣವಾಗುತ್ತಾ ವಿಷಾದದ ಎಳೆಗಳನ್ನು ನೇಯುತ್ತಾ ಮನರಂಜನೆಯಾಚೆ ದಾಟುತ್ತದೆ. ಈ ಅರ್ಥದಲ್ಲಿ ಇದು ಜಾನಪದದ ಅಂಶಗಳನ್ನು ಒಡಲಲ್ಲಿ ಇರಿಸಿಕೊಂಡೂ, ಕೇವಲ ಜಾನಪದವಾಗಿ ಉಳಿಯುವುದಿಲ್ಲ. ನಮ್ಮ ಕಾಲದ ಪತನಮುಖೀ ಮೌಲ್ಯಗಳಿಗೆ ಸಂಕೇತವಾಗಿ ಉಳಿಯುತ್ತದೆ... ...ಈ ಕಾದಂಬರಿಯನ್ನು ಓದುತ್ತಿದ್ದಂತೆ ನಮಗೆ ಮಾಸ್ತಿಯವರ ಕತೆ ಹೇಳುವ ತಂತ್ರ ಕಣ್ಣ ಮುಂದೆ ಬರುತ್ತದೆ. ಪುರಾಣ ಕಾಲದ ಹರಿಶ್ಚಂದ್ರನೂ ಹಾದು ಹೋಗುತ್ತಾನೆ. ರಮ್ಯತೆಯೊಳಗಡೆ ವಿಷಾದವನ್ನು ದಾಖಲಿಸುವ ಬೇಂದ್ರೆ ಕಾವ್ಯ ಮನಸ್ಸಿನಲ್ಲಿ ಹಾದು ಹೋಗುತ್ತದೆ. ಮೂರು ತಲೆಮಾರಿನ ಕತೆ ಹೇಳಿದ 'ಮರಳಿ ಮಣ್ಣಿಗೆ' ಕಾದಂಬರಿಯ ಶಿವರಾಮ ಕಾರಂತರೂ ಪ್ರತ್ಯಕ್ಷರಾಗುತ್ತಾರೆ. ತೇರನೆಳೆಯಲಾರದ ಜನರನ್ನು ಕಂಡರಿಸಿದ ಖಾಸನೀಸರೂ ನೆನಪಾಗದಿರುವುದಿಲ್ಲ... ಇಷ್ಟೆಲ್ಲಾ ನೆನಪುಗಳ ನಡುವೆಯೇ ಪಾಟೀಲರು 'ಧರಮನಟ್ಟಿ'ಯ ಅನನ್ಯತೆಯನ್ನು ತೇರಿನ ಮೂಲಕ ಕಾಪಾಡಿಕೊಂಡು ಬಂದಿದ್ದಾರೆ. ಮೇಲಿನ ನೆನಪುಗಳ ಮೂಲಕ ಹೊಸ ನೆನಪೊಂದನ್ನು ಸೃಜಿಸಿದ್ದಾರೆ...' ಎಂದು ಬರೆದಿದ್ದಾರೆ.

ಬೆನ್ನುಡಿಯಲ್ಲಿ, ಕವಿ–ವಿಮರ್ಶಕ ಡಾ. ಎಚ್. ಎಸ್. ವೆಂಕಟೇಶಮೂರ್ತಿ ಯವರು, 'ಕನ್ನಡದ ಜುವಾರಿ ಕತೆಗಾರ ರಾಘವೇಂದ್ರ ಪಾಟೀಲರ ತೇರು ಮುಖ್ಯವಾಗಿ ಸ್ಥಿತ್ಯಂತರವನ್ನು ಕುರಿತ ಕಾದಂಬರಿ. ಕಾಲ ಕಾಲಕ್ಕೆ ಸಂಭವಿಸುವ ಸಾಮಾಜಿಕ–ಸಾಂಸ್ಕೃತಿಕ–ರಾಜಕೀಯ ಪಲ್ಲಟಗಳು ಮನುಷ್ಯ ಜೀವಿತದ ಗುಣಾತ್ಮಕತೆಯ ಮೇಲೆ ಬೀರುವ ಅಪರಿಹಾರ್ಯ ವೆನಿಸುವ ಪ್ರಭಾವಗಳನ್ನು ರೂಪಕಾತ್ಮಕ ನೆಲೆಯಲ್ಲಿ ಕಟ್ಟಿಕೊಡುವುದು ತೇರು ಕಾದಂಬರಿಯ ವೈಶಿಷ್ಟ್ಯ' ಎಂದಿದ್ದಾರೆ. '...ಕಾದಂಬರಿಯು ಪುರಾಣದ ಕೀರ್ತನೆಗೋ ವರ್ತಮಾನದ

ಭರ್ತ್ಸನೆಗೋ ತೊಡಗದೆ ಬದುಕಿನ ಸೂಕ್ಷ್ಮಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತದೆ... (ಪಾತ್ರಗಳು) ಆಯಾ ಕಾಲದ ಒತ್ತಡವು ನಿರ್ಮಿಸಿದ ಕ್ರಿಯಾಶಕ್ತಿಗಳಾಗಿ ರೂಪದಾಳುವುದಕ್ಕೆ ಲೇಖಕರ ಪಾಕ್ಷಿಕವಲ್ಲದ ಜೀವನಗ್ರಾಹಕ ಶಕ್ತಿಯೇ ಕಾರಣ. ಕೇವಲ ಬದುಕಿನ ಗುಣಾತ್ಮಕತೆಗೆ ಬದ್ಧನಾದ ಲೇಖಕನಿಗೆ ಮಾತ್ರ ತೇರುವಿನಂಥ ಕಾದಂಬರಿಯನ್ನು ಸೃಷ್ಟಿಸುವುದು ಸಾಧ್ಯವಾಗುತ್ತದೆ.' ಎಂದೂ ಬೆನ್ನು ತಟ್ಟಿದ್ದಾರೆ.

**ಸಂಕ್ಷಿಪ್ತ ಕಥಾನಕ:**

'ತೇರು' ಎನ್ನುವ ಶೀರ್ಷಿಕೆಯ ಜೊತೆಗೇ 'ಆಧುನಿಕ ಪುರಾಣ' ಎಂಬ ಉಪಶೀರ್ಷಿಕೆಯನ್ನೂ ಯಶವಂತ ಚಿತ್ತಾಲರಿಂದ ಗಿಟ್ಟಿಸಿಕೊಂಡ ಈ ಕಥೆಗೆ ಪುರಾಣದಂಥ ಕಥಾವಲಯವಿದೆ. ಧರಮನಟ್ಟಿ ಎನ್ನುವ ಪುಟ್ಟ ಊರಿನ ಸುತ್ತ ಹಬ್ಬಿಕೊಳ್ಳುವ ಈ ಕಥೆಗೆ ನೂರೈವತ್ತು ವರುಷಗಳ ಕಾಲದ ಹರಹೂ ಇದೆ. ಒಂದು ದೇಸಗತಿಯ– ಸಣ್ಣ ಸಾಮ್ರಾಜ್ಯವೊಂದರ– ವೈಭವೋಪೇತ ಆರಂಭದ ಸಂದರ್ಭ ಹಾಗೂ ಪ್ರಸ್ತುತದ ಗದ್ದಲದ ರಾಜಕಾರಣದ ವಾತಾವರಣ ಈ ಕಿರುಕಾದಂಬರಿಯಲ್ಲಿ ಮುಖಾಮುಖಿ ಯಾಗುತ್ತವೆ.

ಧರಮನಟ್ಟಿಯೆಂಬ ದೇಸಗತಿಯನ್ನು ಹುಟ್ಟುಹಾಕಿದ ರಂಗೋ ಪಟವರ್ಧನ ದೇಸಾಯಿಯು ತನ್ನ ಮನೆದೇವರಾದ ವಿಠ್ಠಲನ ಭವ್ಯ ದೇವಾಲಯ ಮತ್ತು ಅದ್ಭುತವೆನಿಸುವಂಥ ಕಲ್ಲಿನ ರಥವನ್ನೂ ಕಟ್ಟಿಸುತ್ತಾನೆ. ದೇವಾಲಯದ ಮೊದಲ ಉತ್ಸವಕ್ಕೂ ಮೊದಲೇ ಅಶುಭ ಸೂಚನೆಗಳಾದರೂ ಕಾರಭಾರಿಯು ಅದನ್ನು ಕಡೆಗಣಿಸುತ್ತಾನೆ. ಉತ್ಸವಕ್ಕೆ ಎಲ್ಲ ತಯಾರಿಗಳು ನಡೆದು ತೇರನ್ನೆಳೆಯುವ ಸಂದರ್ಭದಲ್ಲಿ ಅಶುಭ ಸೂಚನೆಗಳ ಫಲ ಕಂಡುಬರುತ್ತದೆ. ಜನರಿಂದಾಗಲೀ ಕುದುರೆ, ಎತ್ತುಗಳಿಂದಾಗಲೀ ರಥವನ್ನು ಎಳೆಯುವುದಾಗಲೇ ಇಲ್ಲವೆಂಬಂಥ ಸನ್ನಿವೇಶ ಎದುರಾಗುತ್ತದೆ. ಶಾಸ್ತ್ರದ ಅಯ್ಯನವರನ್ನು ಕರೆಸಿ, ಶಾಸ್ತ್ರ ಕೇಳಿ, ಪರಿಹಾರವನ್ನು ತಿಳಿದಾಗ ಮತ್ತೊಮ್ಮೆ ದಿಗ್ಭ್ರಾಂತರಾಗುತ್ತಾರೆ, ದೇಸಾಯರು ಮತ್ತು ಕಾರಭಾರಿಗಳಾದ ತ್ರಿಯಂಬಕ ಭಟ್ಟರು. ಪರಿಹಾರವೆಂದು ಹೇಳಲ್ಪಟ್ಟ 'ನರಬಲಿ'ಗೆ ತಮ್ಮ ತಮ್ಮ ಮನೆಗಳವರು ಸಾಧ್ಯವಿಲ್ಲವೆಂದು ಅವರವರೇ ನಿರ್ಧರಿಸಿ 'ಡಂಣಾಯಕ'ನಿಗೆ ಯಾರನ್ನಾದರೂ ಹಿಡಿದು ತಾರೆಂದು ಅಪ್ಪಣೆ ಕೊಡುವಾಗ, 'ಕಾಟುಕ ಕುಲದವರು ಬೇಕು. ಫಕ್ತ ಉತ್ತಮರ ಕುಲದವರು ಬೇಡ. ಹೆಣ್ಣು ಗಂಡೆಂಬುವ ಭೇದವಿಲ್ಲ; ದೊಡ್ಡವರು ಸಣ್ಣವರೆಂಬ ವಯಸ್ಸಿನ ನಿರ್ಬಂಧ ಇಲ್ಲ. ಯಾರಾದರೂ ಇಸಮನ್ನ ಹಿಡಿದು ತರಬೇಕು' ಎಂದಾಗುತ್ತದೆ.

ಡಣಾಯಕ ಊರೆಲ್ಲ ಅಲೆದಾಡಿ, ಯಾರಲ್ಲೂ ಈ ಮಾತನ್ನು ಆಡಲಾಗದೆ, ನರಬಲಿಗೆ ಬನ್ನಿರೆಂದು ಕೇಳಲಾಗದೆ, ಸಂಕಟಪಟ್ಟುಕೊಂಡು ಹಿಂದಿರುಗಿ ಬಂದು, ಮನೆಯಲ್ಲಿ ತಲೆಗೆ ಕೈಕೊಟ್ಟು ಕುಳಿತಿರುವಾಗ ಆತನ ಮಡದಿ ಪಾರೋತಿ ಅವನನ್ನು ಸಮಾಧಾನಿಸುತ್ತಾಳೆ. ತಾನು ಕಂಡ ಬಡ ಕುಟುಂಬವೊಂದನ್ನು ಭೇಟಿಯಾಗಿ, 'ವ್ಯಾಪಾರೀ ಬುದ್ಧಿ' ಉಪಯೋಗಿಸಿ, ಒಂಬತ್ತು ಮಕ್ಕಳ ಬಡತಂದೆ ಗೊಂಬೀರಾಮರ ದ್ಯಾವಪ್ಪನನ್ನು 'ಜ್ವಾಳ–ಗೋದೀ–ಬ್ಯಾಳೀ–ಬೆಲ್ಲ'ಗಳ ಉಡುಗೊರೆಯಿಂದ ಒಪ್ಪಿಸಿ, ಎಂಟೆಕರೆ ಜಮೀನಿನ ಆಮಿಷ ಒಡ್ಡಿ, ಆತನ 'ನಡುಕಲ ಹುಡುಗ ಚಂದ್ರಾಮ'ನನ್ನು ನರಬಲಿಗಾಗಿ 'ಕೊಂಡು' ಮನೆಗೆ ಬರುತ್ತಾಳೆ. ವಿರೋಧ ವ್ಯಕ್ತಪಡಿಸಿದ್ದ ದ್ಯಾವಪ್ಪನ ಬಸುರಿ ಹೆಂಡತಿಯನ್ನು ಗಮನದಲ್ಲಿರಿಸಿ ಅವರೆಲ್ಲ ರಾತ್ರೆಯೇ ತಪ್ಪಿಸಿಕೊಂಡು ಹೋಗದಂತೆ ಕಾವಲು ಹಾಕಲು ಗಂಡನಿಗೆ ಹೇಳಿ ಎಲ್ಲ ವ್ಯವಸ್ಥೆಯನ್ನು ಮಾಡಿಸುತ್ತಾಳೆ. ಮರುದಿನ, ಚೈತ್ರ ಶುಕ್ಲ ನವಮಿಯಂದೇ ಪುಟ್ಟ ಬಾಲಕ ಚಂದ್ರಮನ ಬಲಿಯೊಂದಿಗೆ ವಿಠ್ಠಲದೇವರ ರಥೋತ್ಸವವೂ ಸಾಂಗವಾಗುತ್ತದೆ.

(ಇಲ್ಲಿಯವರೆಗಿನ ಕಥಾನಕವನ್ನು, ಕಾದಂಬರಿಯ ಒಂದು ನಿರೂಪಕ ಪಾತ್ರವಾಗಿರುವ ಪತ್ರಕರ್ತ ಪಾಟೀಲ, ಗೋಕಾವಿಯ ಬಸ್‌ಸ್ಟ್ಯಾಂಡಿನಲ್ಲಿ ಇನ್ನೊಂದು ನಿರೂಪಕ ಪಾತ್ರವಾಗಿರುವ ಸ್ವಾಂವಜ್ಜನನ್ನು ಭೇಟಿಯಾಗಿ, ಆತನಿಂದ ಧರಮನಟ್ಟಿಯ ತೇರಿನ ಮತ್ತು ಉತ್ಸವದ ಸುದ್ದಿ ತಿಳಿದು ಅದನ್ನು ನೋಡಲು ಹೋಗುವಂತೆ, ಅಲ್ಲಿ ತೇರಿನ ಹಿಂದಿನ ರಾತ್ರಿ ವೃತ್ತಿಗಾಯಕರಾದ ಗೊಂದಲಿಗರು ತಲಾಂತರದ ಕಥೆಯನ್ನು ಹಾಡುವಂತೆ– ದೇಸಾಯರು ಕಟ್ಟಿಸಿದ ರಥದ ವರ್ಣನೆ, ನರಬಲಿಯ ಕಥನ, ರಕ್ತ ತಿಲಕದ ಪದ್ಧತಿಯ ವಿವರಗಳು– 'ಗೊಂದಲಿಗರ ಗಾಯನ' ರೂಪದಲ್ಲೇ ಈ ಕಾದಂಬರಿಯೊಳಗೆ ಹೆಣೆದುಕೊಳ್ಳಲಾಗಿದೆ. ಇಲ್ಲಿಂದ ಮುಂದಿನ ಕಥೆಗೆ ಕೃತಿಕಾರ, ಪತ್ರಕರ್ತ ಪಾಟೀಲ, ಸ್ವಾಂವಜ್ಜ ನಿರೂಪಕರಾಗುತ್ತಾರೆ.)

ದ್ಯಾವಪ್ಪನಿಗೆ ಸಮೀಪದ ಗ್ರಾಮ ಕಳ್ಳೀಗುದ್ದಿಯಲ್ಲಿ ಎಂಟೆಕರೆ ಭೂಮಿಯನ್ನು ಕೊಡಲಾಗುತ್ತದೆ. ದ್ಯಾವಪ್ಪ ತನ್ನ ಉಳಿದ ಎಂಟು ಮಕ್ಕಳನ್ನೂ, ಬಸುರಿ ಮಡದಿಯನ್ನೂ ಅಲ್ಲಿಗೆ ಕರೆದೊಯ್ದು, ಮೊದಲು ಗುಡಿಸಲು, ನಂತರ ಮನೆಯನ್ನೇ ಕಟ್ಟಿಕೊಂಡು ಕಳ್ಳೀಗುದ್ದಿಯಲ್ಲಿ ನೆಲೆಸುತ್ತಾನೆ. ದೇಸಾಯರ ಕಾರಬಾರಿ ತ್ರಿಯಂಬಕ ಭಟ್ಟರು ಈ ಘಟನೆಯನ್ನು ಅಲ್ಲಿಗೇ ಬಿಡದೆ, ಅದನ್ನೊಂದು ಪದ್ಧತಿಯನ್ನಾಗಿಸುತ್ತಾರೆ. ಇದನ್ನೇ ದೇಸಾಯರ ಆಜ್ಞೆಯಂತೆ ಸನದಾಗಿಸಿ ದ್ಯಾವಪ್ಪನಿಗೆ ಕೊಡಲಾಗುತ್ತದೆ. 'ವಿಠ್ಠಲದೇವರ ಉತ್ಸವಕ್ಕೆ ಮುನ್ನ ಪ್ರತೀ ವರ್ಷವೂ ದ್ಯಾವಪ್ಪ, ನಂತರ ಅವನ ವಂಶದವರು, ರಥದ ಕಲ್ಲಿನ ಗಾಲಿಗೆ ಹಣೆಹೊಡೆದುಕೊಂಡು, ರಕ್ತವನ್ನು ರಥದ ಮೂಡಲ ದಿಕ್ಕಿನ ಮುಖಕ್ಕೆ ತಿಲಕವಾಗಿಸುವುದು' ಉತ್ಸವದ ಅವಿಭಾಜ್ಯ ಅಂಗವಾಗಿ ಆಚರಣೆಗೆ ಬರುತ್ತದೆ.

ಗೊಂಬೀರಾಮರ (ತೊಗಲು/ಸೂತ್ರದ ಗೊಂಬೆಯಾಟದ) ಕಸುಬಿನ ದ್ಯಾವಪ್ಪ ಮತ್ತವನ ಮನೆತನವೇ ಈ ವಿಠ್ಠಲ ದೇವಸ್ಥಾನಕ್ಕೆ ಬದ್ಧವಾಗಿರಬೇಕಾದ ಎಳೆ ಬೆಸೆದುಕೊಳ್ಳುತ್ತದೆ.

ಧರಮನಟ್ಟಿಯ ವಿಠ್ಠಲದೇವರಿಗೆ ಮಗನನ್ನು ಬಲಿಕೊಟ್ಟ ದ್ಯಾವಪ್ಪನಿಗೆ ತಾನೇನೋ ವಿಶೇಷವಾದದ್ದನ್ನು ಮಾಡಿದೆನೆಂಬ ನಂಬಿಕೆ ಗಾಢವಾಗುತ್ತಾ ಹೋಗುತ್ತದೆ. ಆತ, ವಿಠ್ಠಲ ದೇವರಲ್ಲಿ ಅಚಲ ಭಕ್ತಿ, ಶ್ರದ್ಧೆ, ವಿಶ್ವಾಸಗಳನ್ನು ಬೆಳೆಸಿ, ಇರಿಸಿಕೊಂಡು ತನ್ನ ರಕ್ತತಿಲಕದ ಸೇವೆಯನ್ನು ತನ್ನ ವಂಶಜರು ಕಟ್ಟುನಿಟ್ಟಿನಿಂದ ಪಾಲಿಸಿಕೊಂಡು ಬರಬೇಕೆಂಬುದಾಗಿ ಬಯಸುತ್ತಾನೆ. ಅದಕ್ಕಾಗಿ ತಾನೇ ಒಂದು ನಿಯಮಾವಳಿಯನ್ನು ರೂಪಿಸಿಕೊಂಡು ಅದನ್ನು ಅನೂಚಾನವಾಗಿ ನಡೆಸಿಕೊಂಡೂ ಬರುತ್ತಾನೆ. ತೇರಿನ ಉತ್ಸವಕ್ಕೆ ಇನ್ನೂ ಒಂದೂವರೆ ತಿಂಗಳಿದೆ ಎನ್ನುವಾಗಲೇ 'ರಕ್ತ ಶುದ್ಧೀಕರಣ'ಕ್ಕಾಗಿ ಇಪ್ಪತ್ತು ದಿನಗಳ ಔಷಧ-ಪಥ್ಯ ಶುರುಮಾಡಿಕೊಂಡು, ಅದು ಮುಗಿದ ನಂತರ ಇಪ್ಪತ್ತು ದಿನಗಳ ಕಾಲ ಸುತ್ತಮುತ್ತಲ ದೇವಸ್ಥಾನಗಳಿಗೆ ತೀರ್ಥಯಾತ್ರೆ ಮಾಡಿಕೊಂಡು ತೇರಿನ ಮೂರು ದಿನ ಮೊದಲೇ- ಚೈತ್ರ ಶುಕ್ಲ ಷಷ್ಠಿಯ ಸಂಜೆಯೇ- ಧರಮನಟ್ಟಿಯನ್ನು ತಲುಪುತ್ತಾನೆ. ಅಲ್ಲಿ ಆತನಿಗೆ ಬಹುದೊಡ್ಡ ಮರ್ಯಾದೆಯೇ ದೊರೆಯುತ್ತದೆ. ಜನರು ಗೌರವ ತೋರುತ್ತಾರೆ; ಭಕ್ತಿಯಿಂದ ಅವನಿಗೆ, ತದನಂತರ ಅವನ ವಂಶಜರಿಗೆ ಕಾಯಿ, ಧೋತರ, ಅಕ್ಕಿ, ಬೇಳೆ, ಬೆಲ್ಲ ಮೊದಲಾಗಿ ಕಾಣಿಕೆ ಒಪ್ಪಿಸುತ್ತಾರೆ. ಅವನ್ನೆಲ್ಲ ಚಕ್ಕಡಿಯಲ್ಲಿ ಹಾಕಿಸಿಕೊಂಡು ಕಳ್ಳೀಗುದ್ದಿ ಸೇರುವಂತಾಗುವಷ್ಟು ಈ ಕಾಣಿಕೆಗಳ ಮೊತ್ತ ಬೆಳೆಯುತ್ತದೆ. ಮೊದಮೊದಲು ದ್ಯಾವಪ್ಪನನ್ನು ವಿರೋಧಿಸುತ್ತಿದ್ದ, ಬೈಯುತ್ತಿದ್ದ ಲಗಮವ್ವನಿಗೆ, ಅಲ್ಪಕಾಲದಲ್ಲೇ ತನ್ನ ಗಂಡನ 'ಮಹಾತ್ಮೆ'ಯ ಅರಿವಾಗುತ್ತದೆ. ಸಂಪೂರ್ಣ ಸಹಕಾರ ನೀಡುತ್ತಾಳೆ. ವರ್ಷಗಳು ಕಳೆದಂತೆ ದ್ಯಾವಪ್ಪ ಸಂತನಂತಾಗುತ್ತಾನೆ. ಕ್ರಮೇಣ ನರಬಲಿಯ ಪ್ರಸಂಗ ಪುರಾಣದಂಥ ಮುಖ ಪಡೆಯುತ್ತದೆ. ಅದೇ ಸಮಯದಲ್ಲೇ, ತೇರಿನ ಹಿಂದಿನ ರಾತ್ರಿ- ಅಷ್ಟಮಿಯ ರಾತ್ರಿ- ಗೊಂದಲಿಗರು ಗಾಯನದ ಮೂಲಕ ಧರಮನಟ್ಟಿಯ ತೇರನ್ನು ಅಂದವಾಗಿ ವಿವರಿಸಿ, ನರಬಲಿಯ ಕಥೆಯನ್ನು ಹಾಡುವ ಪರಂಪರೆಯೂ ಬೆಳೆದುಬಂದು 'ಧರಮನಟ್ಟಿಯ ತೇರು' ಚರಿತ್ರೆಯನ್ನು ಮೀರಿದ ಐತಿಹ್ಯವಾಗುತ್ತದೆ.

ಇಲ್ಲಿಂದ ಮುಂದೆ ಓದುಗರನ್ನು ಎದುರಾಗುವುದು ಮೂಲ ದ್ಯಾವಪ್ಪನ ಆರನೆಯ ತಲೆಮಾರಿನವನಾದ ಆಧುನಿಕ ದ್ಯಾವಪ್ಪ. ಆತನ ಹೊಸ ವಿಚಾರಗಳು, ಗೊಂದಲಭರಿತ ಯೋಚನೆ-ಯೋಜನೆಗಳು ಊರಿನವರಲ್ಲಿ ಅಸಹನೆ ಹುಟ್ಟಿಸುತ್ತವೆ. 'ನವ ನಿರ್ಮಾಣ ಚಳುವಳಿ'ಯಲ್ಲಿ ಭಾಗವಹಿಸಿ, ಮೂರು ತಿಂಗಳ ಜೈಲುವಾಸ ಅನುಭವಿಸಿ, ಊರಿಗೆ ಬರುವ ಮುನ್ನ ಬೆಂಗಳೂರಿನಲ್ಲಿ ಪತ್ರಕರ್ತ ಪಾಟೀಲರನ್ನು ಭೇಟಿಯಾಗುತ್ತಾನೆ. ಧರಮನಟ್ಟಿಯಲ್ಲಿ ಅವನ ಬಗ್ಗೆ ಊಹಾಪೋಹಗಳು ಎದ್ದಿರುತ್ತವೆ. ಅವನಿಗೆ ದೇವರಲ್ಲಿ,

ಪದ್ಧತಿ–ಆಚರಣೆಗಳಲ್ಲಿ ನಂಬಿಕೆ ಕಳೆದಿರುತ್ತದೆ. ಅಂತೆಯೇ ಸರಕಾರದ ವ್ಯವಸ್ಥೆಗಳು, ಕಾನೂನು–ಕಟ್ಟಳೆಗಳು, ಸಾಮಾಜಿಕ ರೀತಿ–ನೀತಿಗಳು ಅವನ ರೋಷಕ್ಕೆ ಕಾರಣವಾಗಿರುತ್ತವೆ. ಎಲ್ಲದರ ವಿರುದ್ಧವೂ ಆತನಿಗೆ ಅಸಮಾಧಾನ. ಅದೇ ಸಮಯದಲ್ಲಿ, ರಂಗೋ ಪಟವರ್ಧನ ದೇಸಾಯರು ಕೊಡಮಾಡಿದ್ದ ಎಂಟೆಕರೆ ಜಮೀನನ್ನು ಕಳ್ಳೀಗುದ್ದಿಯ ಗೌಡ 'ಗೇಣಿದಾರನಿಗೆ ಮಾಲಕತ್ವದ ಹಕ್ಕು ಕಾಯಿದೆ'ಯನ್ನು ದುರುಪಯೋಗಪಡಿಸಿಕೊಂಡು ಎಲ್ಲವನ್ನೂ ತಾನು ಕಬಳಿಸಿದ್ದೂ ಕೂಡಾ ದ್ಯಾವಪ್ಪನ ನೋವಿಗೆ ಕಾರಣವಾಗಿರುತ್ತದೆ. ಆದರೂ ಕೆಲವಾರು ವರ್ಷಗಳ ಕಾಲ ಆತ 'ರಕ್ತ ತಿಲಕದ ಸೇವೆ' ನಡೆಸಿಕೊಂಡು ಬರುತ್ತಾನೆ. ಅದಾಗಲೇ ಅವನತಿಯನ್ನು ಕಾಣುತ್ತಿದ್ದ ಮೂಲ ಮುತ್ಯಾನ ಕಟ್ಟುನಿಟ್ಟಿನ ಆಚರಣೆಗಳು, ಪದ್ಧತಿಗಳು ಮತ್ತೂ ಕರಗುತ್ತವೆ. ಧರಮನಟ್ಟಿಯಲ್ಲಿ ದ್ಯಾವಪ್ಪ ನಗೆಚಟಾಕಿಯ ವಸ್ತುವಾಗಿಬಿಡುತ್ತಾನೆ.

ಧರಮನಟ್ಟಿಯ ತೇರಿಗೆ ನೂರೈವತ್ತು ವರ್ಷವಾದ ಸಂದರ್ಭದಲ್ಲಿ ಸ್ವಾಂವಜ್ಜನ ಪತ್ರವನ್ನು ಮನ್ನಿಸಿ, ಪತ್ರಕರ್ತ ಪಾಟೀಲ ತನ್ನ ಸಂಸಾರ ಸಮೇತ ಅಲ್ಲಿಗೆ ತಲುಪುತ್ತಾನೆ. ಮರುದಿನವೇ ಷಷ್ಟಿ. ದ್ಯಾವಪ್ಪ ಅದೇ ಸಂಜೆ ಊರಿನ ತೆಂಕಣ ದಿಕ್ಕಿನ ಅಗಸಿಗೆ ಬರುವವನು. ಪಾಟೀಲನೊಡನೆ ಮಾತಾಡುತ್ತಾ ಸ್ವಾಂವಜ್ಜ ತನಗೆ ದ್ಯಾವಪ್ಪನ ಬಗೆಗಿರುವ ಅಸಂತೋಷವನ್ನು ತೋಡಿಕೊಳ್ಳುತ್ತಾನೆ. ದೇವಸ್ಥಾನದ ಸಮಿತಿಯಿಂದ ತನ್ನ ಸೇವೆಗಾಗಿ ಮತ್ತು ಖರ್ಚಿಗಾಗಿ 'ಧಾರಣೆ'ಯ ಮಾತಾಡಿ ಹಣ ವಸೂಲಿ ಮಾಡುತ್ತಿದ್ದಾನೆ. ಮೂಲ ದ್ಯಾವಪ್ಪನಿಗೆ ದೇಸಾಯರು ಕೊಡಮಾಡಿದ್ದ ಜಮೀನನ್ನು ಅವನೂರಿನ ಗೌಡ ಹೊಡೆದುಕೊಂಡದ್ದರ ಬಗೆಗೆ ಅಜ್ಜನಿಗೆ ಅನುಕಂಪವಿದ್ದರೂ 'ಸೇವೆ'ಯನ್ನು 'ವ್ಯಾಪಾರೀಕರಣ'ಗೊಳಿಸಿದ್ದು ಆತನಿಗೆ ಸಹ್ಯವಿಲ್ಲ. ಆದರೂ ಷಷ್ಟಿಯಂದು ನಡುರಾತ್ರೆಯಾದರೂ ಬಾರದ ದ್ಯಾವಪ್ಪನನ್ನು ಹುಡುಕಿಸಲು ಮರುದಿನ ವ್ಯವಸ್ಥೆ ಮಾಡುತ್ತಾನೆ ಸ್ವಾಂವಜ್ಜ. ಸಪ್ತಮಿಯ ದಿನದ ಈ ಹುಡುಕಾಟದಲ್ಲಿ ದ್ಯಾವಪ್ಪನ ಸುಳಿವು ಸಿಗದೆ, ಅದರ ಮಾರನೇ ದಿನ– ತೇರಿನ ಮುನ್ನಾದಿನ– ಅಷ್ಟಮಿಯಂದು, ಗೋಕಾವಿಗೆ ಹುಡುಗರನ್ನು ಕಳುಹಿಸುವ ಸಿದ್ಧತೆಯಲ್ಲಿರುವಾಗ ವಿಠ್ಠಲ ದೇವರ ಪೂಜಾರಿ ಸ್ವಾಂವಜ್ಜನನ್ನು ಅರಸಿಕೊಂಡು ಬಂದು, ಗರ್ಭಗುಡಿಯ ಬೀಗ ಮುರಿದು ಗುಡಿ ಲೂಟಿಯಾಗಿದೆ, ದೇವರ ಆಭರಣಗಳೆಲ್ಲವೂ ಕಳವಾಗಿವೆ ಎನ್ನುವುದನ್ನು ತೊದಲುತ್ತಾ ನುಡಿಯುತ್ತಾನೆ. ಅಜ್ಜ ಆಘಾತದಿಂದ ಸಾವರಿಸಿಕೊಂಡು ಗುಡಿಯತ್ತ ಧಾವಿಸುತ್ತಾನೆ. ಎಲ್ಲರೂ ಅಲ್ಲೇ ಸೇರುತ್ತಾರೆ. ಊರಿನ ತರುಣರ ಮುಖಗಳು ಈಗ ಇಲ್ಲಿ ಕಾಣಬರುತ್ತವೆ. ಅಲ್ಲಿಯತನಕ, ಎಲ್ಲ ವ್ಯವಸ್ಥೆಗಳಿಗೆ ತಲೆಕೊಟ್ಟು, ಹಿರಿಯನಾಗಿ ನಿಂತಿದ್ದ ಸ್ವಾಂವಜ್ಜನನ್ನು ಕುರಿತು, 'ನೀನು ಜೈನರವ, ನಮ್ಮ ಗುಡಿ ಲೂಟಿಯಾದರೆ ನಿನಗೇನು' ಎಂಬ ಮಾತು ಹೊರಟು, ಎಲ್ಲೆಲ್ಲೋ ತಿರುಗಿ, ಜಾತಿ, ರಾಜಕೀಯ, ಪ್ರಜಾಪ್ರಭುತ್ವ, ಡೆಮಾಕ್ರಸಿ, ಎಳೆಯರಿಗೆ

ನಾಯಕತ್ವ, 'ಸಾಲಿ ಕಲಿತವರಿಗೆ ಗೌರವ', ಊರಿನ ಅಧಿಕಾರ/ಹಕ್ಕು, ಮುಂತಾದ ಮಾತುಗಳೆಲ್ಲವೂ ನುಸುಳಿ, ತರುಣರ ಎಳೆ-ಬಿಸಿ ರಕ್ತದ ರೋಷ ಮೇಲೆದ್ದು ದೇವಸ್ಥಾನದ ಎದುರು ಮಾರಾಮಾರಿಯಾಗುತ್ತದೆ. ಸ್ವಾಂವಜ್ಜ ತೀರಾ ನೊಂದುಕೊಂಡು ಅಲ್ಲಿಂದ ಹೊರಡುವಾಗಲೇ ಪೊಲೀಸ್ ಜೀಪು ಗುಡಿಯ ಮುಂದೆ ಬಂದು ನಿಲ್ಲುತ್ತದೆ.

ಅದಾಗಿ ಮತ್ತೆ ಆರು ವರ್ಷಗಳ ಬಳಿಕ ಧರಮನಟ್ಟಿಗೆ ಬಂದ ಪತ್ರಕರ್ತ ಪಾಟೀಲನಿಗೆ ಸ್ವಾಂವಜ್ಜನ ಸಾವಿನ ಸುದ್ದಿ ದೊರೆಯುತ್ತದೆ. ಅಲ್ಲಿಂದ ಆತ ಕಳ್ಳೀಗುದ್ದಿಗೆ ಹೋಗಿ ಗೌಡನನ್ನು ಭೇಟಿಯಾದಾಗ ಅವನಿಂದ ದ್ಯಾವಪ್ಪನ ಇನ್ನೊಂದೇ ಚಿತ್ರ ತೆರೆದುಕೊಳ್ಳುತ್ತದೆ. ಆತನೇ ಧರಮನಟ್ಟಿಯ ಗುಡಿಯನ್ನು ಲೂಟಿಮಾಡಿದ್ದೆಂದೂ, ನಂತರ ನಕ್ಸಲನಾದನೆಂದೂ, ಈಗ ಒಂದು ಕಾಲು ಕಳೆದುಕೊಂಡು ಅದೆಲ್ಲಿಯೋ ಆರೇನಾಡಿನಲ್ಲಿ ತಿರುಗಿಕೊಂಡು ಇದ್ದಾನೆಂದೂ ಗೌಡ ಅಧಿಕಾರಪೂರ್ವಕ ಹೇಳುತ್ತಾನೆ. ಹೀಗೆ, ದ್ಯಾವಪ್ಪನನ್ನು ಹುಡುಕಿಕೊಂಡು ಹೋಗುವ ಪತ್ರಕರ್ತ ಪಾಟೀಲನಿಗೆ ಎದುರಾಗುವುದು ಆತನ ಬಗೆಗೆ ಹಬ್ಬಿಕೊಂಡ ಊಹಾಪೋಹಗಳು, ಗುಲ್ಲುಗದ್ದಲಗಳು. ಕೊನೆಯಲ್ಲಿ, ಉದಗಟ್ಟಿಯಲ್ಲಿ, ಆತ ಮದುವೆಯಾಗಲು ಬಯಸಿದ್ದ ಬಾಲವಿಧವೆ ಬಾಳವ್ವನಿಂದ ಆಧುನಿಕ ದ್ಯಾವಪ್ಪನ ವೈಚಾರಿಕತೆಯ, ಆದರ್ಶದ ಮುಖದ ಪರಿಚಯವಾಗುತ್ತದೆ. ಅಲ್ಲಿಗೆ ಕಥಾನಕವನ್ನೂ ಕೊನೆಯಾಗಿಸುತ್ತಾರೆ ಲೇಖಕ.

## ಕೆಲವು ಪ್ರಮುಖ ಪಾತ್ರಗಳು:

**ಸ್ವಾಂವಜ್ಜ:**

ಸ್ವಾಂವಜ್ಜ- ಧರಮನಟ್ಟಿಯ ನೈತಿಕ, ಸಾಮಾಜಿಕ ಪ್ರಜ್ಞೆಯಂತೆ ಭಾಸವಾಗುವ ವ್ಯಕ್ತಿ. ಅಂಥವರು ಪ್ರತೀ ಊರಿಗೆ ಒಬ್ಬಿಬ್ಬರಾದರೂ ಇರುತ್ತಾರೆ, ಇರಲೇಬೇಕು ಅನಿಸುವಂತಿದೆ ಆತನ ವ್ಯಕ್ತಿತ್ವ. ಧರಮನಟ್ಟಿಯ ಹಿರಿಯ ತಲೆಗಳಲ್ಲಿ ಒಬ್ಬನಾದ ಸ್ವಾಂವಜ್ಜ, ಊರಿನ ಒಳಹೊರಗನ್ನು ಅರಿತವ, ರೀತಿ ರಿವಾಜುಗಳನ್ನು ತಿಳಿದವ. ಪತ್ರಕರ್ತ ಪಾಟೀಲನನ್ನು ಗೋಕಾವಿಯ ಬಸ್‌ಸ್ಟ್ಯಾಂಡಿನಲ್ಲಿ ಭೇಟಿಯಾಗಿ ಧರಮನಟ್ಟಿಯ ದೇವಾಲಯದ ಮತ್ತು ತೇರಿನ ಕಥನಕ್ಕೆ ನಾಂದಿ ಹಾಡುವ ಈ ಮುದುಕ, ತಾನು 'ಜಯ್ಯಾರವ' (ಜೈನ ಕುಲದವ) ಅನ್ನುತ್ತಲೇ ವಿಠ್ಠಲ ದೇವರಿಗೆ ಬದ್ಧನಾಗಿದ್ದವ. ಧರಮನಟ್ಟಿ ದೇಸಗತಿಯ ಕಥೆಯನ್ನು ಪಾಟೀಲನಿಗೆ ಹೇಳುತ್ತಲೇ ಅದರಲ್ಲಿ ಮಗ್ನನಾಗಿಬಿಡುವವ. ಪತ್ರಕರ್ತನನ್ನು ತನ್ನೂರಿಗೆ ಕರೆದೊಯ್ದು ಬೆಂಗಳೂರಿಗೆ ಧರಮನಟ್ಟಿಯ ಬಾಂಧವ್ಯ ಬೆಸೆದವ.

ಸಾಮಾನ್ಯವಾಗಿ ಎಲ್ಲ ಊರಿನ ಹಿರಿಯರೂ ನಡೆದುಕೊಳ್ಳುವಂತೆಯೇ, ಮಾತಾಡುವಂತೆಯೇ, ಈತನೂ ಎಲ್ಲ ಜವಾಬ್ದಾರಿಯನ್ನೂ ತನ್ನ ಮೇಲೆ ಹೊತ್ತುಕೊಂಡು, ಅದನ್ನು ನಿಸ್ವಾರ್ಥದಿಂದ ನಡೆಸಿಕೊಂಡು ಬರುತ್ತಾನೆ. ಈತ ನಮಗೆ ಎದುರಾಗುವುದು

ಪಾಟೀಲ ಧರಮನಟ್ಟಿಗೆ ಭೇಟಿಯಿತ್ತಾಗ ಮಾತ್ರ, ಅಂದರೆ ತೇರಿನ ಸಂದರ್ಭಗಳಲ್ಲಿ ಮಾತ್ರ. ಆವಾಗೆಲ್ಲ ಉತ್ಸವದ ಸುತ್ತಮುತ್ತಲ ಆಗುಹೋಗುಗಳಲ್ಲಿ ಈತನ ಉತ್ಸಾಹ ಮತ್ತು ತೊಡಗಿಸಿಕೊಳ್ಳುವಿಕೆ, ಊರಿನ ಹಿರಿಯರಲ್ಲಿ ಒಬ್ಬನಾದ್ದರಿಂದ ವಿಶೇಷ ಅನಿಸಿಕೊಳ್ಳದಿದ್ದರೂ, 'ನಾನು ಜಯ್ಯಾರವ' ಎನ್ನುವ ಅವನ ಮಾತಿನ ಹಿನ್ನೆಲೆಯಲ್ಲಿ ಅವೆಲ್ಲ ಎದ್ದು ಕಾಣುತ್ತವೆ. ಕಥಾನಕದ ಕೊನೆಯ ತನಕವೂ ಸ್ವಾಂವಜ್ಜನ ಈ ಉತ್ಸಾಹದ ಬಗ್ಗೆ ಊರಿನವರಿಗೆ ಯಾವುದೇ ತಕರಾರಿಲ್ಲವೇನೋ ಅನಿಸುವಂತೆಯೇ ನಡೆದುಕೊಂಡು ಹೋಗುತ್ತದೆ. ನೂರೈವತ್ತನೆಯ ತೇರಿನ ಮೊದಲು, ಷಷ್ಠಿಯ ಸಂಜೆಯೇ ಬರಬೇಕಾಗಿದ್ದ ರಕ್ತ ತಿಲಕದ ಸೇವೆಯ ದ್ಯಾವಪ್ಪ ಬರದೇ ಇದ್ದಾಗ ಊರವರನ್ನು ಸಮಾಧಾನವಾಗಿರಿಸಿ, ಮರುದಿನ ಅವನನ್ನು ಹುಡುಕಿ ಕರೆತರಲು ಅವನು ಇದ್ದಿರಬಹುದಾದ ಉದಗಟ್ಟಿಗೆ ಹುಡುಗರನ್ನು ಕಳುಹಿಸುತ್ತಾನೆ. ಅಲ್ಲಿಂದ ಹುಡುಗರು ಬರಿಗೈಯಲ್ಲಿ ಬಂದಾಗ ಅದರ ಮಾರನೇ ದಿನ, (ತೇರಿನ ಮುನ್ನಾದಿನವೇ) ದ್ಯಾವಪ್ಪನನ್ನು ಹುಡುಕಿಸಲು ಗೋಕಾವಿಗೆ ಹುಡುಗರು ಹೋಗಿ ಬರಲೆಂದು ತಿಳಿಹೇಳುತ್ತಾನೆ. ಅಂದಿನ ದಿನ ತಾನೇ ಅವರ ಮನೆಗಳಿಗೆ ಹೋಗಿ ಅವರನ್ನು ಹೊರಡಿಸುತ್ತಾನೆ. ತೇರಿನ ಬಗ್ಗೆ, ದ್ಯಾವಪ್ಪ ಬಾರದ್ದರ ಬಗ್ಗೆ, ಊರಿನ ಯುವಕರಿಗಿಲ್ಲದ ಕಾಳಜಿ ಈ ಮುದುಕಪ್ಪನಿಗೆ. ಅದೆಲ್ಲ ಮಾಡುವಾಗ ಯಾರೂ ಆತನನ್ನು ತಡೆಯುವುದಿಲ್ಲ; ಬದಲಾಗಿ, ಊರಿನ ಹಿರಿಯನೆಂದು ಆತನ ಮಾತಿನಂತೆಯೇ ನಡೆಯುತ್ತಾರೆ.

ಧರಮನಟ್ಟಿಯ ನೂರೈವತ್ತನೇ ತೇರಿನ ಮುನ್ನಾ ದಿನವಾದ ಅಂದೇ ನಡೆದ ಕಳವಿನ ಘಟನೆಯಿಂದಾಗಿ ಊರೊಳಗೆ ಒಬ್ಬರಿಗೊಬ್ಬರ ಮೇಲಿದ್ದ ಅಸಮಾಧಾನ ಭುಗಿಲೆದ್ದು, ಅದು ಹೇಗ್ಹೇಗೋ ತಿರುಗಿ, ಪರಸ್ಪರರ ಮೇಲೆಲ್ಲ ಹಾರಾಡಿ, ಕೊನೆಗೆ ದೇವಸ್ಥಾನದ ಮುಂದೆಯೇ, ಕಿರಿಯರು/ತರುಣರು ಸ್ವಾಂವಜ್ಜನನ್ನು ಒಂದಿಷ್ಟು ಹೀಯಾಳಿಸಿ, ಅವಹೇಳನದ ಮಾತುಗಳನ್ನಾಡುತ್ತಾರೆ. ಜಾತಿ ಮತ್ತು ರಾಜಕೀಯ- ಎರಡು ನೆಲೆಗಳಲ್ಲೂ ಸ್ವಾಂವಜ್ಜ ಅಲ್ಲಿ ಸಲ್ಲದವನಂತೆ ಕಾಣಲಾಗುತ್ತದೆ. ಇದರಿಂದ ನೊಂದು ಆತ ಅಲ್ಲಿಂದೆದ್ದು ಹೊರಟಾಗಲೂ ಅವನನ್ನು ಛೇಡಿಸುತ್ತಾರೆ: ಜೈನರವ ನೀನು. ನಿನ್ನ ಜಾತಿಯ ವ್ಯಾಪಾರೀ ಬುದ್ಧಿ ತೋರಿಸಿಬಿಟ್ಟಿ... ನಮ್ಮ ದೇವರ ಆಭರಣಗಳು ಕಳವಾದಾಗ ನಿನಗೆ ಆ ದೇವರು ಬೇಡಾದನೆ?... (ಪುಟ-೧೧೮) ಎನ್ನುವಂಥಾ ಮಾತುಗಳ ಕಿಡಿಗಳು ಹಾರುತ್ತವೆ. 'ಊರಿನ ಅಧಿಕಾರನ್ನೂದನ್ನ ಈ ಸ್ವಾಂವಜ್ಜಗ ಬರದ ಕೊಟ್ಟsತೇನು?' (ಪುಟ-೧೧೯) ಅಂತಲೂ ಎಗರಾಡುತ್ತದೆ ಹರೆಯದ ರಕ್ತ. ದೇವಸ್ಥಾನದ ಕಳವಿನ ಜೊತೆಗೆ ಸ್ವಾಂವಜ್ಜನ ಸಾಮಾಜಿಕ ಬದ್ಧತೆಯೂ ಲೂಟಿಯಾಗುತ್ತದೆ. ಗುಡಿಯ ಒಳಗೆ ವಿಠ್ಠಲ ರುಕುಮಾಯಿ ದೇವರು ಎಲ್ಲವನ್ನೂ ಕಳೆದುಕೊಂಡು ಬೆತ್ತಲಾಗಿದ್ದರೆ ಹೊರಗೆ ಸ್ವಾಂವಜ್ಜನನ್ನು ಬೆತ್ತಲಾಗಿಸುತ್ತದೆ ಆಧುನಿಕ ಯುವಜನತೆ.

ಕಥೆಯ ಉದ್ದಕ್ಕೂ ಸ್ವಾಂವಜ್ಜನ ಪಾತ್ರವು ಊರಿನ ಒಂದು ನೈತಿಕತೆಯಂತೆಯೂ ಆಧಾರಸ್ತಂಭದಂತೆಯೂ ಇರುತ್ತದೆ. ದೇವಸ್ಥಾನದ ಕಳವಿನ ನಂತರ, ತಾನು ಬೆಂಗಳೂರಿಗೆ ಹೊರಡಲು ತಯಾರಾಗಿ, ಪತ್ರಕರ್ತ ಪಾಟೀಲ ಸ್ವಾಂವಜ್ಜನನ್ನು ಬೀಳ್ಕೊಡಲು ಅವನ ಮನೆಗೆ ಹೋದಾಗ ಅಲ್ಲಿ ಕಂಡುಬರುವುದು ಎಲ್ಲವನ್ನೂ ಕಳೆದುಕೊಂಡ ದುಃಖತಪ್ತ ಸ್ವಾಂವಜ್ಜ; ಇಡೀ ಊರಿಗೆ ಊರೇ ಆತನನ್ನು ಒಂದು ಉದ್ವೇಗದ ಕ್ಷಣದಲ್ಲಿ ಪರಕೀಯವಾಗಿಸಿದ ಆಘಾತದ ಪರಿಣಾಮ. ಆಗ ಅವನಲ್ಲಿದ್ದ ನಿರುತ್ಸಾಹ, ಬೇಸರ, ದುಃಖ, ಅಸಹಾಯಕತೆ– ಎಲ್ಲವೂ ಆತನ ಕೊನೆ ಸಮೀಪಿಸಿದ ಗಾಢ ಲಕ್ಷಣಗಳೇ ಆಗಿ ಕಾಣುತ್ತವೆ. ಪಾಟೀಲನ ಮುಂದಿನ ಧರಮನಟ್ಟಿಯ ಭೇಟಿಯಲ್ಲಿ, ಸುಮಾರು ಆರು ವರ್ಷಗಳ ಬಳಿಕ, ಆತ ಸ್ವಾಂವಜ್ಜನ ಮನೆಗೆ ಹೋದಾಗ ಅಜ್ಜ ತೀರಿಕೊಂಡಿದ್ದ ಸಮಾಚಾರ ತಿಳಿಯುತ್ತದೆ. ಅಲ್ಲೂ ಸ್ವಾಂವಜ್ಜ ಇತರರಿಗಿಂತ ಭಿನ್ನವಾಗಿದ್ದು, ತನ್ನತನ ಕಾಪಾಡಿಕೊಂಡದ್ದು ಅವನ ಬಗೆಗೆ ವಿಶೇಷ ಪ್ರೀತಿ, ಆಸಕ್ತಿ ಹುಟ್ಟಿಸುತ್ತದೆ. ಸ್ವಾಂವಜ್ಜನ ಪಾತ್ರವನ್ನು ಪೂರ್ಣವಾಗಿ ಕಟ್ಟಿಕೊಡುವುದು ಕೊನೆಯಲ್ಲಿ ಆತನ ಪತ್ನಿ ಪದ್ದವ್ವ ಸಾವಕಾರ್ತಿ ಪಾಟೀಲನೊಡನೆ ಆಡುವ ಕೆಲವು ಮಾತುಗಳು ಮತ್ತು ಪಾಟೀಲ ಸ್ವಾಂವಜ್ಜನನ್ನು ನೆನೆಸಿಕೊಳ್ಳುವ ಸ್ವಗತದ ಕೆಲವು ಮಾತುಗಳು.

ಸ್ವಾಂವಜ್ಜನನ್ನೇ ಕಾಣಲು ಬಂದ ಪಾಟೀಲ ಕಂಡದ್ದು ಪದ್ದವ್ವನನ್ನು. ಆಕೆ ಹೇಳುತ್ತಾಳೆ, '...ವಿಠ್ಠಲ ದೇವರೂ ವಿಠ್ಠಲ ದೇವರೂ ಅಂತ ಬಾಳ ಮೋಹಾ ಇಟಗೊಂಡಿದ್ದ ನಮ್ಮ ಸಾವಕಾರಾs... ನಾನು ಹಗಲೆಲ್ಲಾ– ಇದೆಲ್ಲೀ ವಿಠ್ಠಲ ವಿಠ್ಠಲ ಅಂತ ಮಿಥ್ಯಾ ದೇವರನ ಕಟಿಗೊಂಡೀ... ಅಂತ ನಗಿಚಾಟಿಕೀ ಮಾಡಿದರ ನನ್ನ ಮ್ಯಾಗs ಸಿಟ್ಟಿಗೇಳಾಂವ... ಕಡೀಕ ಅದs ವಿಠ್ಠಲ ದೇವರ ದಸಿಂದನs ಎದೀ ಒಡಕೊಂಡು ಜೀವಾ ಕಳಕೊಂಡಾ!....' ದೇವಸ್ಥಾನದ ಕಳವಿನ ಹಿನ್ನೆಲೆಯಲ್ಲಿ ಸ್ವಾಂವಜ್ಜನನ್ನೂ ಎಳೆದೊಯ್ದ ಪೊಲೀಸರು ಮೂರು ದಿನಗಳ ಮೇಲೆ ಅವನನ್ನು ಬಿಡುತ್ತಾರೆ. ಅದರ ಮರುದಿನವೇ ಅರ್ಧಾಂಗ ವಾಯು ಹೊಡೆದು ಬಲಭಾಗದ ಶಕ್ತಿ ಪೂರಾ ಕುಂದಿದ ಮೇಲೆ, ಕೊನೆಯ ಬಾರಿ ವಿಠ್ಠಲನ ದರ್ಶನ ಮಾಡಿ ಬಂದ ಸ್ವಾಂವಜ್ಜ ಸಲ್ಲೇಖನ ಕೈಗೊಳ್ಳುವ ನಿರ್ಧಾರ ಮಾಡಿದ್ದನ್ನು ಪಾಟೀಲನಿಗೆ ತಿಳಿಸುತ್ತಾಳೆ, ಪದ್ದವ್ವ: '...ವಿಠ್ಠಲ ಸ್ವಾಮೀ, ವಿಠ್ಠಲ ದೇವರೂ ಅಂತ ಆ ದೇವರ ಮ್ಯಾಗ ಭಕತೀ ಮಾಡಿ ಈಗ ಈ ಸಲ್ಲೇಖನಾ ಅಂದರ ಹೆಂಗs?... ಮಿಥ್ಯಾತ್ವಕ್ಕs ಮತ್ತ ಸಲ್ಲೇಖನಕ್ಕs ಅಧೆಂಗ ಹೊಂದಾಣಿಕಿ ಆಗತೈತೀ?... ನಿಂದು ಎಡಬಿಡಂಗೀ ರೀತಿ ಇದಾ... ಇದನ್ನ ಬಿಡ ನೀನಾ... ಅಂತ ಬೈದು ಜಗಳಾಟಕ್ಕ ಎಳಿಯೂಣೂ ಅಂತಂದರ ಅಂವ ನನ್ನ ಮಾತಿಗೆ ಬರೇ ಒಂದ ಮುಗಳ ನಗೀ ನಕ್ಕು ಸುಮ್ಮಗಾದ!.... ....ನೀರ ಬಿಟ್ಟ ಎರಡನೇ ದಿನಕ್ಕs ಪ್ರಾಣಾ ಬಿಟ್ಟ...' (ಪುಟ–೧೨೭, ೧೨೮).

ಅಲ್ಲಿಂದ ಹಿಂತಿರುಗಿ ಬೆಟಗೇರಿಗೆ ತನ್ನ ಮನೆಗೆ ಬಂದ ಪತ್ರಕರ್ತ ಪಾಟೀಲ ಸ್ವಾಂವಜ್ಜನನ್ನು ನೆನೆಸಿಕೊಂಡು, '...ಅಂವ ಧರಮನಟ್ಟಿಯ ಜನರ ವಿವೇಕ ಪ್ರಜ್ಞೆಯಂತಿದ್ದ... ಆದರೆ ಧರಮನಟ್ಟಿಯ ಜನ ಯಾವತ್ತಿಗೂ ಅವನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲೇ ಇಲ್ಲ... ನಿತ್ಯ ಸಂಶಯಕ್ಕೆ ಈಡಾದರೂ ಅಂವ ಮಾತ್ರ ಕಡಿತನಕ ಊರಿನ ಸಮುದಾಯದ ನಡೆಗೆ ತನ್ನ ವಿವೇಕದ ನೋಟವನ್ನು ನೀಡುತ್ತಲೇ ಬಂದಿದ್ದ... ಈ ಸ್ವಾಂವಜ್ಜ ಜೈನನೋ... ವೈದಿಕನೋ... ಅವೈದಿಕನೋ... ಇಂಥದ್ದು ಒಂದು ಎಂದು ಪ್ರತ್ಯೇಕಿಸಿ ಹೇಳಲಿಕ್ಕೆ ಸಾಧ್ಯವಾಗುವುದೇ ಇಲ್ಲ...' (ಪುಟ-೧೨೯). ಇಂಥ ಸ್ವಾಂವಜ್ಜ ಓದುಗರ ದೃಷ್ಟಿಯಲ್ಲಿ ಎತ್ತರದ ಸ್ಥಾನ ಪಡೆಯುತ್ತಾನೆ. ಶುದ್ಧವಾದ ಜಾತ್ಯಾತೀತ ನಿಲುವುಳ್ಳ ಈ ಹಿರಿಯ ನಮ್ಮೆಲ್ಲರ ಒಳಗೆ ಸದಾ ಇರಲೇಬೇಕಾದ ನಿಸ್ಪೃಹ ನಾಗರಿಕ ಪ್ರಜ್ಞೆಯಂತೆ ಕಂಡುಬರುತ್ತಾನೆ. ಈ ಕಾದಂಬರಿಯಲ್ಲಿ ನನಗೆ ಅತ್ಯಂತ ಪ್ರಿಯವಾದ ಪಾತ್ರ ಸ್ವಾಂವಜ್ಜನದು.

**ಮೂಲ ದ್ಯಾವಪ್ಪ:**

ಬಡತನದ ಜಂಜಾಟದ ಜೀವನದಿಂದ ನೊಂದಿದ್ದ ಗೊಂಬೀರಾಮರ ದ್ಯಾವಪ್ಪ, ಒಂಬತ್ತು ಮಕ್ಕಳು ಮತ್ತು ಬಸುರಿ ಹೆಂಡತಿಯ ತನ್ನ ಸಂಸಾರಕ್ಕೆ ಒಂದು ಹೊತ್ತಿನ ಒಳ್ಳೆಯ ಊಟ ಮತ್ತು ಎಂಟೆಕರೆ ಭೂಮಿಯ ಆಮಿಷಕ್ಕೆ ಒಂದು ಕ್ಷಣ ಒಡ್ಡಿಕೊಂಡು, ಧರಮನಟ್ಟಿಯ ತೇರಿಗೆ ತನ್ನ ನಡುವಿನ ಮಗ ಚಂದ್ರಮನನ್ನು ನರಬಲಿಯಾಗಿಸಲು ಒಪ್ಪಿಕೊಳ್ಳುವ ದುರದೃಷ್ಟವಂತನಾಗಿ ಕಾದಂಬರಿಯಲ್ಲಿ ಮೊದಲಿಗೆ ಕಾಣಿಸುತ್ತಾನೆ. ಹೆಂಡತಿಯ ಗೋಳನ್ನು ನೋಡಲಾಗದೆ, ಅದೇ ರಾತ್ರೆ ಧರಮನಟ್ಟಿಯನ್ನು ತೊರೆದು ಓಡಿಹೋಗುವ ಅವನ ಹುನ್ನಾರ ವಿಫಲವಾಗುತ್ತದೆ. ಮರುದಿನ, ತೇರಿಗೆ ಮಗನ ಬಲಿಯಾದ ನಂತರ ಆತನಲ್ಲಿ ಬದಲಾವಣೆಯಾಗುತ್ತದೆ. ತನ್ನನ್ನು, ತನ್ನ ಮನೆತನದವರನ್ನು ವಿಶೇಷವಾದೊಂದು ಸೇವೆಗಾಗಿ ದೇವರೇ ಆರಿಸಿಕೊಂಡಿದ್ದಾನೆ, ತಾನು ಅದೃಷ್ಟವಂತ ಎನ್ನುವ ನಂಬಿಕೆ ಆತನಲ್ಲಿ ಮೊಳೆಯುತ್ತದೆ. ಕಳ್ಳೀಗುದ್ದಿಗೆ ಬಂದಾಗ, ಆ ಗೌಡನಲ್ಲಿ ಈತ ಹೇಳಿಕೊಳ್ಳುವ ಬಲಿಯ ಪ್ರಸಂಗ, ಈತನದಲ್ಲವೇನೋ ಎಂಬಂಥ ನಿರ್ಲಿಪ್ತ ರೀತಿಯಲ್ಲಿ, ಆದರೆ ಅತ್ಯಂತ ಸ್ವಾರಸ್ಯಕರವಾದೊಂದು ಕಥೆಯನ್ನು ಹೇಳುವಂತೆ, 'ಕಣ್ಣು-ಮನಸು ತುಂಬುವ ಹಂಗ ವರ್ಣಿಸತಾನೆ': '...ತನ್ನ ಮಗನ ಎದಿಯ ಮ್ಯಾಲೆ ಸ್ವಾಮಿಯ ತೇರು ಹಾಯುತ್ತಿದ್ದಂಗೇ ತೇರಿನ್ಯಾಗಿನ ಇತ್ಲ ಸ್ವಾಮಿಯ ಮೀಸಿಗಳು ಕುಣದವೂ... ಸ್ವಾಮಿಯ ಕಣ್ಣಿನ್ಯಾಗಿಂದ ಬೆಂಕಿಯ ಕೆಂಡದಂಥಾ ಬೆಳಕು ಚಿಮ್ಮಿ... ಆ ಬೆಳಕಿಗೆ ತನ್ನ ಹೇಂತಿಯ ಕಣ್ಣುಕುಕ್ಕಿ ಆಕಿ ಕಕ್ಕಾವಿಕ್ಕಿಯಾಗಿ ಬೇಹೋಶ ಆಗಿ ಹೆಂಗ ಬಿದ್ದಳೆಂಬುವದನ್ನ...' ಎಲ್ಲಾ ಕಥೆ ಮಾಡಿ ಹೇಳುತ್ತಾನೆ (ಪುಟ-೩೯). ಅಲ್ಲಿ, ಗೌಡನ ಚಾವಡಿಯಲ್ಲಿ 'ದುಸ್ಯಪ್ಪಗೋಳ ಸಂತ ರಾಮಜೀ' ತನ್ನ ಕಾಲಿಗೆರಗಿದಾಗ ಆತನಿಗೆ ತನ್ನಲ್ಲಿರುವ ವಿಶೇಷತೆಯ ಅರಿವಾಗುತ್ತದೆ. ತನಗೊದಗಿದ ಸೇವೆಯ ಸೌಭಾಗ್ಯ ತನ್ನ

ಮನೆತನದ ಪುಣ್ಯ ಎಂದುಕೊಳ್ಳುತ್ತಾನೆ. ಅಂಥ ಭಾಗ್ಯದ ದಾಖಲೆಯಾಗಿರುವ ದೇಸಾಯರ ಸನದನ್ನು ಗಾಜಿನ ಕಟ್ಟು ಹಾಕಿಸಿ, ದೇವರ ಗೂಡಿನ ಮೇಲೆ ಗೋಡೆಯಲ್ಲೇ ಕಿಂಡಿ ಮಾಡಿ ಕೂರಿಸಿ, ಅದಕ್ಕೊಂದು ಬೀಗವನ್ನೂ ಹಾಕುತ್ತಾನೆ.

ದೇವರಗೂಡಿನ ಮೇಲೆ ಬೀಗಹಾಕಿದ ಗೂಡಿನಲ್ಲಿಟ್ಟ ಗಾಜಿನ ಕಟ್ಟು ಹಾಕಿಸಿದ ಸನದನ್ನು ಕಂಡರೆ ದ್ಯಾವಪ್ಪನ ಬಸುರಿ ಮಡದಿ ಲಗಮವ್ವ ಉರಿದು ಬೀಳುತ್ತಿದ್ದಳು. 'ನನ ಮಗನ ರಗತಾ ಕುಡದ ಕಾಗಜ ಅದು... ಅದ ರಾಗಸಸ ಐತಿ' (ಪುಟ–೪೨) ಎನ್ನುತ್ತಿದ್ದಳು. ಅಷ್ಟರಲ್ಲೇ ಆಕೆಗೆ ಈ ಬಸುರೂ ಹೆರಿಗೆಯಾಗಿ ಹುಟ್ಟಿದ ಗಂಡು ಮಗು ಎರಡೇ ದಿನದಲ್ಲಿ ತೀರಿಕೊಂಡಾಗ, ಸಿಟ್ಟು ವಿಪರೀತವಾಗಿ, ಒಂದು ದಿನ ಅವಕಾಶ ಸಿಕ್ಕಾಗ ಆ ಸನದನ್ನು ತೆಗೆದು ಒಡೆದೇ ಬಿಡುವವಳಿದ್ದಳು. ದ್ಯಾವಪ್ಪ ಆಕೆಯಿಂದ ಅದನ್ನು ಕಿತ್ತುಕೊಂಡು ಆಕೆಯನ್ನು ತಳ್ಳಿದ ರಭಸಕ್ಕೆ ಗೋಡೆಗೆ ತಾಗಿ ತಲೆಯೊಡೆದುಕೊಂಡಳು. ಇದರ ಬಳಿಕ ಆಕೆ ಹುಚ್ಚಿಯಂತಾದಾಗ, ಆಕೆಯ ಮೇಲೆ ಸ್ವಾಮಿ ಸಿಟ್ಟುಗೊಂಡಿದ್ದಾನೆ ಎಂದೇ ತಿಳಿದ ದ್ಯಾವಪ್ಪ, 'ಯಪ್ಪಾ ಸ್ವಾಮೀ... ನಿನ್ನs ನಂಬೀದನು! ನನ್ನ ಸಂಸಾರದ ದೀಪಾ ಕಳೀಬ್ಯಾಡ. ಬುದ್ಧಿಯಿಲ್ಲದ ಹೆಂಗಸು... ತೆಪ್ಪ ಮಾಡೇತಿ. ಹೊಟ್ಯಾಗ ಹಾಕ್ಕೋ ತಂದೇ!... ನಿನ್ನ ಮಡಲಿಗೆ ಬಿದ್ದದೀವು. ಕೊಲ್ಲೂದು ಕಾಯೂದೂ ಎಲ್ಲಾ ನಿನ್ನs ಕೂಡೇತಿ... ಒಟ್ಟs ತೆಪ್ಪಸಧಂಗ ವರ್ಷಾ ವರ್ಷಾ ನಿಷ್ಠಾದಿಂದ ನಿನ ತೇರಿನ ರಗತ ತಿಲಕದ ಸೇವಾ ಮಾಡತೀವು...' ಅಂತ ಹರಕೆ ಹೊರುತ್ತಾನೆ. ಅದಾಗಿ ಎರಡು ತಿಂಗಳ ಬಳಿಕ ಸಾವಕಾಶವಾಗಿ ಲಗಮವ್ವ ಸುಧಾರಿಸಿಕೊಳ್ಳುತ್ತಾಳೆ. ನೋವು ಮರೆಯುತ್ತಾಳೆ. 'ತಾ ಹರಕೀ ಹೊತ್ತದ್ದಕ್ಕs ಹೇಂತಿಗೆ ಆರಾಮ ಆತು...' ಅಂತ ದ್ಯಾವಪ್ಪನಿಗೆ ಘಟ್ಟಿಯಾಗಿ ಸ್ವಾಮಿಯ ಮೇಲಿನ ಅವನ ನಂಬಿಕೆ ಇನ್ನಷ್ಟು ಹೆಚ್ಚೇ ಆಗುತ್ತದೆ (ಪುಟ–೪೨, ೪೩). ಇಂಥ ಸಣ್ಣ ಪುಟ್ಟ ಸಂಗತಿಗಳ ಮೂಲಕ ದ್ಯಾವಪ್ಪನಲ್ಲಿ ವಿಠ್ಠಲ ದೇವರ ಭಕ್ತಿ ತುಂಬಿಕೊಂಡು ಬೆಳೆಯುತ್ತಾ ಹೋಗುವುದು ನಿಚ್ಚಳವಾಗಿ ಕಾಣುತ್ತದೆ.

ಇಂಥ ದ್ಯಾವಪ್ಪ, ತನ್ನ ರಕ್ತಶುದ್ಧೀಕರಣಕ್ಕೂ ಇಳಿಯುತ್ತಾನೆ. ಹಾಗೆಂದು ಗೂಗಿಕೊಳ್ಳದಲ್ಲಿ ಅವನಿಗೆ ದರ್ಶನ ಕೊಟ್ಟ 'ಲಂಗಟದ ಸ್ವಾಮಿ'ಗಳು, 'ಮದಲ ರಗತದಾಗಿನ ಕಸರು ಬರೀಹರಿಸಿಕೋರಿ...' ಅಂತ ಅಪ್ಪಣೆ ಕೊಡಿಸಿರುತ್ತಾರೆ (ಪುಟ–೪೪). ಹೇಗೆ ರಕ್ತವನ್ನು ಶುದ್ಧೀಕರಿಸುವುದೆಂದು ತಿಳಿಯದ ದ್ಯಾವಪ್ಪ ಊರ ಗೌಡನನ್ನು ಕೇಳುತ್ತಾನೆ. ಗೌಡನಾದರೋ, ತಮಾಷೆಯಾಗಿ– 'ನಿನ್ನ ರಕ್ತ ಎಲ್ಲ ಬಸಿದು ಸೋಸುವ ಅರಿವೆಯಿಂದ ರಕ್ತವನ್ನೂ ಸೋಸಿಕೊಂಡು ಮತ್ತೆ ಅದನ್ನೇ ಕುಡಿ' ಅಂತಂದರೆ, ಅದನ್ನೇ ನಂಬಿಕೊಂಡು, 'ಹಾಗಾದರೆ ಕೈಯೋ ಕಾಲೋ ಕತ್ತರಿಸಿದರೆ ರಕ್ತ ಬಸಿದು ತೆಗೆಯಬಹುದಲ್ಲ?' (ಪುಟ–೪೫) ಅಂತ ಕೇಳುವಷ್ಟು ಮುಗ್ಧವ್ಯಕ್ತಿಯೂ ಆಗಿರುತ್ತಾನೆ

ಆತ. ನಂತರ, ಪಳಿಮನಿ ಶಂಕರಜ್ಜನ ಸಲಹೆಯಂತೆ, ಇಪ್ಪತ್ತು ದಿನಗಳ ಔಷಧ-ಪಥ್ಯದ ಆರೈಕೆ ಮಾಡಿಕೊಳ್ಳುತ್ತಾನೆ. ಇದರಿಂದ ದೇವರ ಸೇವೆಗೆ ತನ್ನ ರಕ್ತ ಶುದ್ಧವಾಗಿರುತ್ತದೆಂಬ ನಂಬಿಕೆ ಆತನದು. ಈ ರಕ್ತಶುದ್ಧಿಯ ನಂತರ ಇಪ್ಪತ್ತು ದಿನಗಳ ತೀರ್ಥಯಾತ್ರೆಯನ್ನೂ ಮಾಡಿ, ಮನಸ್ಸನ್ನೂ ನಿರ್ಮಲವಾಗಿಸಿಕೊಂಡು ಆತ ಧರಮನಟ್ಟಿಯ ತೇರಿನ ರಕ್ತ ತಿಲಕದ ಸೇವೆಗೆ ಷಷ್ಠಿಯ ಸಂಜೆಗೆ ಹಾಜರಾಗುವುದನ್ನು ರೂಢಿಸಿಕೊಳ್ಳುತ್ತಾನೆ. ತನ್ನ ನಂತರ ಮಗ ಕುಬೇರಪ್ಪ, ಮತ್ತವನ ಮಗ, ಮರಿಮಗನಾದಿಯಾಗಿ ತನ್ನ ವಂಶದವರೆಲ್ಲರೂ ಇದೇ ಹಾದಿಯಲ್ಲಿ ನಡೆಯಬೇಕೆಂದು ನಿಯಮಿಸುತ್ತಾನೆ. ಮಗ ಕುಬೇರಪ್ಪನನ್ನು ತನ್ನ ಕೊನೆಯ ನಾಲ್ಕು ವರ್ಷಗಳಲ್ಲಿ ಜೊತೆಯಲ್ಲೇ ಕರೆದುಕೊಂಡು ಹೋಗಿ, ಎಲ್ಲಾ ಪದ್ಧತಿಯನ್ನೂ, ಯಾತ್ರೆಯ ದಾರಿಯನ್ನೂ ಸಾರಾಸಾರವಾಗಿ ತೋರಿಸಿಕೊಡುತ್ತಾನೆ. ದೇವರಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ ಸಂತನಂತೆಯೇ ದ್ಯಾವಪ್ಪ ಜೀವನ ಸವೆಸುತ್ತಾನೆ. ಆತನ ನಂಬಿಕೆ, ಬದ್ಧತೆ, ಮತ್ತು ನಿಯತ್ತು ಆತನಿಗೆ ಊರಿನಲ್ಲಿ ಗೌರವವನ್ನೂ ತನ್ನೊಳಗೆ ಮನಸಿನ ನೆಮ್ಮದಿಯನ್ನೂ ತಂದುಕೊಡುತ್ತವೆ. ಈ ಮಟ್ಟದಲ್ಲಿ ದೈವಶಕ್ತಿಗೆ ಸಂಪೂರ್ಣ ಶರಣಾದವರನ್ನು ಕಾಣುವುದು ಅಪರೂಪ. ಧರಮನಟ್ಟಿಯ ಅಪರೂಪದ ತೇರಿನ ಸೇವೆಗೆ ಅಪರೂಪದ ರೀತಿಯಲ್ಲಿ ಸಮರ್ಪಿಸಿಕೊಂಡ ವ್ಯಕ್ತಿತ್ವ ಮೂಲ ದ್ಯಾವಪ್ಪನದು.

ತನ್ನ ಹೆಂಡತಿ ಮಕ್ಕಳಿಗೆ ಒಂದು ಒಳ್ಳೆಯ ಊಟದ ಮತ್ತು ಎಂಟೆಕರೆ ಭೂಮಿಯ ಆಸೆಯಿಂದ, ಒಂದು ಸಣ್ಣ ಲೌಕಿಕ ಕ್ಷಣದಲ್ಲಿ ಮಗನನ್ನು ತೇರಿನ ಗಾಲಿಯ ಕೆಳಗೆ ಮಲಗಿಸಲೊಪ್ಪಿದ ದ್ಯಾವಪ್ಪ, ಅದೇ ಘಟನೆಯನ್ನು ದಿವ್ಯವನ್ನಾಗಿ ಪರಿಗಣಿಸಿ, ಅಲೌಕಿಕ ನೋಟದಿಂದ ಅಳೆದು, ತನ್ನ ದೃಷ್ಟಿಯಲ್ಲಿ ಮಗನನ್ನು ತ್ಯಾಗಿಯನ್ನಾಗಿಸುವುದು ಪರಿವರ್ತನೆಯ ಕಾರಣ. ಅವನಲ್ಲಿನ ಈ ಅಲೌಕಿಕ ಭಕ್ತಿ, ತನ್ಮಯತೆ, ಯಾತ್ರೆಗೆ ಹೋದಲ್ಲೆಲ್ಲ ಅವನು ನಿಸರ್ಗದಲ್ಲಿ ದೇವಸ್ಥಾನಗಳಲ್ಲಿ ತಲ್ಲೀನನಾಗಿ ತನ್ನನ್ನೇ ಕಳೆದುಕೊಂಡು ಮಗ್ನನಾಗುವ ಪರಿಯನ್ನು ಕಂಡ ಸುತ್ತಲಿನ ಊರುಗಳ ಜನತೆ ಆತನನ್ನೇ ಸಂತನನ್ನಾಗಿಸುತ್ತದೆ. ಆತನನ್ನೇ ದೈವಸಮಾನ ಅನ್ನತೊಡಗುತ್ತದೆ. ನೂರೈವತ್ತನೇ ತೇರಿನ ಮೊದಲು, ಷಷ್ಠಿಯ ಸಂಜೆ ಹೊಸ ತಲೆಮಾರಿನ ದ್ಯಾವಪ್ಪನನ್ನು ಕಾಯುತ್ತಾ ಕೂತಿರುವ ಧರಮನಟ್ಟಿಯ ಮಂದಿಯ ಮಾತಿನಲ್ಲಿ ಆರು ತಲೆಮಾರಿನ ಮೊದಲ ಮೂಲ ದ್ಯಾವಪ್ಪ ಕಾಣುವ ರೀತಿ ಹೀಗಿದೆ: '...ಮಗನ್ನ ಸ್ವಾಮಿಯ ರಥಕ್ಕ ಬಲೀ ಕೊಟ್ಟ ಆ ದ್ಯಾವಪ್ಪ ಅಗದೀ ಥೇಟ್ ವಿಠ್ಠಲಸ್ವಾಮಿ ಇದ್ದಂಗ ಇದ್ದನಂತ!... ನಮ್ಮ ಹಿರ್ಯಾರು ಹೇಳತಿದ್ದರು... ತೇರಿಗೆ ಬಲೀ ಕೊಡಾಕಂತ ಅಂವ ತನ್ನ ಮಗನ್ನ ತೆಕ್ಯಾಗ ಅವಚಿ ಹಿಡಕೊಂಡು- ತೇರಿನ ಗಾಲಿಯ ತೆಳಗ ಇಡಾಕ ಹೀಂಗ ತೆಳಗ ಬಗ್ಗತಿದ್ದಂಗs ತೇರಿನ್ಯಾಗಿನ ವಿಠ್ಠಲಸ್ವಾಮಿ ತೆಳಗ ಇಳದ ಬಂದು... ದ್ಯಾವಪ್ಪನ ತೆಕ್ಯಾಗಿನ ಚಂದ್ರಾಮ

ಎನ್ನುವ ಆ ಹುಡುಗನ್ನ ತನ್ನ ತೆಕ್ಕಿಗೆ ತಗೊಂಡನಂತ... ತನ್ನ ರಥಕ್ಕ ಬಲೀ ಆಗಲಿಕ್ಕೆ ಬಂದ ಆ ಕಂದನ್ನ ತನ್ನ ತೆಕ್ಕ್ಯಾಗ ಇಟಗೊಂಡು ವಿಠ್ಠಲ ಸ್ವಾಮಿ ಗರುಡ ಪಕ್ಷೀ ಮ್ಯಾಲ ಕುಂತಗೊಂಡು ಅಂತರಿಕ್ಷಾಕ್ಕ ಹಾರಿದನಂತ... ...ಆಕಾಸದಾಗೇ ಪಂಢರಾಪುರದ ಹಾದೀ ಹಿಡಿದನಂತ... ನೆರೆದ ಮಂದಿ ಎಲ್ಲಾ ಮಕಾ ಮ್ಯಾಲಕೆತ್ತಿ ಸ್ವಾಮಿಯ ದರಶನಾ ಮಾಡಿ... ಹಂಗs ಕೈ ಮುಕ್ಕೊಂಡು– ಕಣ್ಣ ಮುಚಿಗೊಂಡು ನಿಂತಿರಬೇಕಾದರs... ಆ ಸ್ವಾಮಿಯ ತೇರನ್ನೂದು ಯಾರು ಅಂದರ ಯಾರೂ– ಒಬ್ಬರೂ ಕೈಮುಟ್ಟಿ ಎಳೀದs... ತನ್ನಂಗ ತಾನs ಮುಂದಕ ಹೊಂಟು ಪಾದಾಗಟ್ಟೀ ಸೇರಿತಂತ!... ಸತ್ಯೇದ ಕಾಲ ಅದಾ...' (ಪುಟ–೯೫). ಒಂದು ಕತೆ, ಒಬ್ಬ ವ್ಯಕ್ತಿ ಪುರಾಣವಾಗಲು ಇನ್ನೆಷ್ಟು ಬೇಕು!

**ಕೊನೆಯ/ ಆಧುನಿಕ ದ್ಯಾವಪ್ಪ:**

ಕಳ್ಳೀಗುದ್ದಿಯ ಗೊಂಬೀರಾಮರ ವಂಶಜ, ಧರಮನಟ್ಟಿಯ 'ರಕ್ತ ತಿಲಕ'ದ ಮೂಲ ಮುತ್ಯಾನ ಆರನೆಯ ತಲೆಮಾರಿನವನಾದ ಈತ ಹೊಸಚಿಂತನೆಯ ದ್ಯಾವಪ್ಪ. ಆತ ಬೆಂಗಳೂರಿನಲ್ಲಿ ಪತ್ರಕರ್ತ ಪಾಟೀಲರನ್ನು ಭೇಟಿಯಾಗಿ ಧರಮನಟ್ಟಿಯ ತೇರಿನ ಕಥೆಗೆ ಹೊಸ ರೂಪ, ಹೊಸ ರೇಖೆ, ಹೊಸ ನೋಟವನ್ನು ಕೊಡುತ್ತಾನೆ. ಅವನಲ್ಲಿರುವ ಆಧುನಿಕ ಚಿಂತನೆ, ಯುವಚೇತನಕ್ಕಾದ ನಿರಾಸೆ, 'ನವ ನಿರ್ಮಾಣ ಚಳುವಳಿಯ' ಪ್ರಭಾವ, ಅದರಿಂದಾದ ಪರಿಣಾಮ, ತದನಂತರದ ಪರಿವರ್ತನೆಗಳು, ಧರಮನಟ್ಟಿಯ ತೇರಿನ ಗೋಪುರದ ಎತ್ತರವನ್ನು ನಿಗೂಢ ರೀತಿಯಲ್ಲಿ ಕುಂಠಿತಗೊಳಿಸುತ್ತಾ ಸಾಗುತ್ತವೆ. ಸಾಮಾಜಿಕ ಬದಲಾವಣೆಯ ಕಾಲದಲ್ಲಿ ಯುವಕರಲ್ಲಿ ಉಂಟಾಗುವ ಗೊಂದಲಕ್ಕೆ ಸಾಕ್ಷಿಯಾಗಿಯೂ ಹೊಸ ದ್ಯಾವಪ್ಪ ಮೂಡುತ್ತಾನೆ. ಈ ಗೊಂದಲದಲ್ಲಿ ಆತ ತನ್ನನ್ನು ಕಂಡುಕೊಳ್ಳುತ್ತಾ, ತನ್ನ ಹಿರಿಯರ ಮೌಢ್ಯವನ್ನು ಕಳೆದುಕೊಳ್ಳುತ್ತಾ, ಕೊನೆಗೆ ಊರಿನ ಹಿರಿಯರ ದೃಷ್ಟಿಯಲ್ಲಿ ಕೀಳಾಗಿಯೂ ಕಂಡುಬರುತ್ತಾನೆ. ಅವನ ಬೀಳು–ಏಳುಗಳನ್ನು ಯಾವುದೇ ಉತ್ಪ್ರೇಕ್ಷೆಯಿಲ್ಲದೆ ಕಟ್ಟಿಕೊಡುವ ರೀತಿ ಮೆಚ್ಚುಗೆಯಾಗುತ್ತದೆ.

ಮೂಲ ದ್ಯಾವಪ್ಪನಿಗೆ 'ತನ್ನನ್ನು ಉದ್ಧರಿಸಿದ ಸ್ವಾಮಿ' ವಿಠ್ಠಲ ದೇವರ ಮೇಲೆ ಇದ್ದಂತಹ ನಂಬಿಕೆ/ ವಿಶ್ವಾಸ ಈತನಿಗೆ ತನ್ನ ಕಾಲದ ಕೆಲವು ಧುರೀಣರ ಮೇಲೆ. ಈತನ ಮೇಲೆ ಬಹಳ ಪರಿಣಾಮ ಬೀರಿದ ಜಾರ್ಜ್ ಫೆರ್ನಾಂಡಿಸ್ ಮತ್ತು ಜೇಪೀ ಅವರುಗಳು ತನ್ನಂಥಾ ಬಡವರಿಗಾದ ಅನ್ಯಾಯವನ್ನು ಸರಿಪಡಿಸುತ್ತಾರೆ ಎನ್ನುವುದು ಅವನ ನಿಷ್ಠೆಯ ತಳಹದಿ. ಅದಕ್ಕೂ ಕಾರಣವಾಗಿದ್ದು ಆತನ ಊರು ಮತ್ತದರ ಗೌಡ. ಈ ದ್ಯಾವಪ್ಪ, ತಾನು ಸೇವೆಯ ಪಟ್ಟಕ್ಕೆ ಬಂದ ಮೊದಲೆರಡು ವರ್ಷವೂ ತನ್ನ ಮೂಲಮುತ್ಯಾನಂತೆಯೇ, ಅದೇ ನಿಷ್ಠೆಯಿಂದ ರಕ್ತಶುದ್ಧಿ ಮತ್ತು ತೀರ್ಥಯಾತ್ರೆಯನ್ನು ಮಾಡಿ, ಧರಮನಟ್ಟಿಯ ರಕ್ತತಿಲಕದ ಸೇವೆಯನ್ನೂ ಮಾಡಿದ. 'ಭೂಸುಧಾರಣೆ ಕಾಯಿದೆ'ಯ ದುರುಪಯೋಗ ಪಡೆದು ತನ್ನೂರಿನ ಗೌಡ ತಮ್ಮ ಜಮೀನನ್ನೆಲ್ಲ

ಕಬಳಿಸಿದಾಗ ಯುವ ದ್ಯಾವನಿಗೆ ಅತೀವ ಭ್ರಮನಿರಸನವಾಗುತ್ತದೆ. ತನ್ನಂಥವರ ಸಹಾಯಕ್ಕಾಗಿ ಯಾವುದೇ ಕಾನೂನುಗಳು ಸಿಗದಿರುವಾಗ ರೋಷ ಏರುತ್ತದೆ. ತನ್ನಂಥ ಬಡವರಿಗೆ ಅನುಕೂಲಕ್ಕಿಲ್ಲದ ವ್ಯವಸ್ಥೆಯ ಮೇಲೆ, ಕಾನೂನಿನ ಮೇಲೆ ಆತನಿಗೆ ಅಸಹನೆ. ಅದಕ್ಕಾಗಿಯೇ ಜೇಪೀಯವರ 'ನವ ನಿರ್ಮಾಣ ಚಳವಳಿ'ಯಲ್ಲಿ ಭಾಗವಹಿಸಿ, ಸಿಕ್ಕಿಬಿದ್ದು, ಮೂರು ತಿಂಗಳು ಜೈಲನ್ನೂ ಅನುಭವಿಸುತ್ತಾನೆ. ಇದಕ್ಕಾಗಿ ಆತನಿಗೆ ನಾಚಿಕೆಯಾಗಲೀ ಕೀಳರಿಮೆಯಾಗಲೀ ಇರುವುದಿಲ್ಲ.

ಜೈಲಿನ ಅವಧಿ ಮುಗಿದು, ಊರಿಗೆ ಹಿಂತಿರುಗುವ ಮೊದಲು, ಬೆಂಗಳೂರಲ್ಲಿ ಪತ್ರಕರ್ತ ಪಾಟೀಲನನ್ನು ಭೇಟಿಯಾಗಿ, ಆತನ ಜೊತೆಗೆ ವಿಧಾನಸೌಧ ಮತ್ತು ಹೈಕೋರ್ಟುಗಳನ್ನು ನೋಡುತ್ತಾ ವಿಧಾನಸೌಧದ ಮೆಟ್ಟಲಲ್ಲಿ ಕೂತು, '...ಇದು ಹೆಂತಾ ವ್ಯವಸ್ಥಾರೀ? ಇಲ್ಲಿ ನೋಡರೀ... ಈ ಬೆಂಗಳೂರಿನ್ಯಾಗ ಎಲ್ಲಾ ಕಡೆ ಝಗ-ಮಗ ಅಂತ ಬೆಳಕು ಚಲ್ಯಾಡಿ ಹಾದೀಗುಂಟ ಹರೀತೈತಿ... ಇಡೀ ಊರಿಗೆ ಊರs ಚಲಸಾಕತ್ತೈತಿ ಅನ್ನೂ ಹಂಗ ರಸ್ತಾದ ತುಂಬ ಬಸ್ಸೂ ಕಾರಗಾಡೀ ಮತ್ತ ಮೋಟರ ಸೈಕಲ್ಲಗೋಳು ಭರಂಡೀ ಹೋಗತಾವು... ಅಲ್ಲಿ ನಮ್ಮ ಊರಗೋಳೊಳಗ... ...ಕತ್ತಲಿ ತುಂಬೈತಿ... ಚಿಮಿಣೀ ಬುಡ್ಡಿಗೆ ತಟಕ ಎಣ್ಣಿ ಸಿಗೂದಿಲ್ಲ... ...ಟೆನೆನ್ಸೀ ಬಂತು ಖರೇ, ಬಡವರಿಗೇನು ದಕ್ಕಲಿಲ್ಲ. ನಮ್ಮ ಜಮೀನು ನಮ್ಮ ಊರ ಗೌಡಗs ಹೋತು. ಅವಂಗ ಐವತ್ತ-ಅರವತ್ತ ಎಕರೇ ಭೂಮಿ ಐತರೀ. ಆದರ ಕಾಯ್ದೇಕ್ಕ ಹೆಂಗ ಟಾಂಗ ಕೊಡಬೇಕಂತ ಯಾವ ವಕೀಲನಕಿಂತಾ ಹೆಚ್ಚ ಜ್ಞಾನ ಐತಿ ಅವಂಗ...' (ಪುಟ-೭೩) ಎನ್ನುತ್ತಾನೆ. ತೇರಿನ ಸೇವೆಗೆ ಹೋದಾಗ ಭಕ್ತರು ಕೊಡುತ್ತಿದ್ದ ಕಾಣಿಕೆಗಳ ಬಗ್ಗೆ ಮಾತಾಡುತ್ತ ದ್ಯಾವಪ್ಪ: 'ಆಗ (ಹಿರಿಯರ ಕಾಲದಲ್ಲಿ) ಕೊಡವರು ಅದನ್ನ ಭಕ್ತೀ ಅಂತ ಕೊಡತಿದ್ದರು ಮತ್ತು ಇಸಗೋಳಾವರು ಅದನ್ನ ಭಿಕ್ಷಾ ಅಂತ ಅನಕೋತಿದ್ದಿಲ್ಲ. ಮುಂದ ಕೊಡವರಿಗೆ ಅದು ಭಿಕ್ಷಾ ಅಂತ ತಿಳೀತು... ಕೊಡೂದನ್ನ ಬಂದ ಮಾಡಿದರು... ...ಈಗ ಮಂದಿಗೆ ದೇವರ ಖರೇ ಹಕೀಕತ್ತು ತಿಳದೈತಿ. ಹಿಂಗಾಗಿ ಕೊಡೂದು ಗಿಡೂದು ಬಂದ ಮಾಡ್ಯಾರು... ...ದೇವರೂ ದಿಂಡರೂ ಎಲ್ಲ ಔಟ್ ಆಫ್ ಡೇಟ್ ಆಗ್ಯಾವರೀ... ಔಷಧದ ಬಾಟಲೀ ಮ್ಯಾಗಿನ... ಎಕ್ಸ್‌ಪೈರೀ ಡೇಟು... ಹಂಗ!...' (ಪುಟ-೭೪) ಎನ್ನುತ್ತಲೇ ತಾನು ಸೇವೆಗೆ ಹೋಗುವುದನ್ನು ಇನ್ನೂ ನಿಲ್ಲಿಸಿಲ್ಲ ಎಂದೂ ಒಪ್ಪಿಕೊಳ್ಳುತ್ತಾನೆ.

ಬೇರು ಕಡಿಯಲು ಸಾಧ್ಯವಿಲ್ಲದ ಅತಂತ್ರ ಸ್ಥಿತಿ ಆತನದು. ಜೊತೆಗೆ, 'ಇನ್ನೂ ನಿಂದರಿಸಿಲ್ಲರೀ... ಆದರ ನಾವು ನಡಕೋದರೊಳಗ ನಮಗ ನಂಬಿಕೀ ನಿಷ್ಠಾ ಇರಬೇಕಲ್ಲರಿ... ಖರೇದಿಂದ ನಡಕೋಬೇಕು... ...ಸ್ವತಾ ನಾನs ಈಗ ಎರಡ ವರ್ಷ ನಮ್ಮ ಮೂಲ ಮುತ್ಯಾ ಏನು ಹಾದೀ ಹಾಕಿಕೊಟ್ಟಿದ್ದ ನೋಡರಿ, ಅದs ಪ್ರಕಾರನs ಅಗದೀ ನಿಷ್ಠಾದಿಂದ ಸೇವಾ ನಡಿಸಿದಿನರೀ... ಒಳಗಿಂದು ಶುದ್ಧಮಾಡಿಕೊಳ್ಳುವ

ಆಚಾರಾ, ಯಾತ್ರಾ... ಎಲ್ಲಾನೂ... ಆದರ ಮನಸಿಗೇ ಎಲ್ಲಾ ವ್ಯರ್ಥ ಅನಿಸಿತರಿ. ಗೂಗೀಕೊಳ್ಳದಾಗ ಈಗ ಯಾವ ಸಿದ್ಧರೂ ಕಾಣೂದಿಲ್ಲ. ಅಲ್ಲಿ ಈಗ ಕಳ್ಳರು ಅಡಗಿಕೊಂಡಿರತಾರರಿ...' ಹೀಗೆ ಹೇಳುತ್ತಾ ಹೇಳುತ್ತಾ ಆತ, ಮುನ್ನೋಳಿಯಲ್ಲಿ ನದಿಯಲ್ಲಿ ದರಿಗಟ್ಟಿ, ನೀರು ಹರಿಯದೆ ಕೊಳೆತು ನಾರುತ್ತಿರುವುದನ್ನೂ, ಪಂಚಲಿಂಗೇಶ್ವರನ ಗುಡಿಯ ಹಾದಿಯುದ್ದಕ್ಕೂ ಬಾರುಗಳು ಮತ್ತು ತಂಬಾಕಿನ ಪ್ಯಾಕೆಟ್‌ಗಳ ತೋರಣಗಳನ್ನೂ ಕಂಡು ರೋಸಿಹೋಗಿದ್ದನ್ನು ವಿವರಿಸುವಾಗ 'ನಾವು ಎತ್ತ ಸಾಗಿದ್ದೇವೆ' ಎಂದು ನಮ್ಮನ್ನೇ ಪ್ರಶ್ನಿಸಿಕೊಳ್ಳುವಂತಾಗುತ್ತದೆ. ನಮ್ಮದೇ ಒಳಗಿನ ಒಂದು ಸಾಮಾಜಿಕ ನಿಷ್ಠೆಯ ಧ್ವನಿಯಾಗಿ ಈ ದ್ಯಾವ ಮಾತಾಡುತ್ತಾನೆ. ತಡೆಯಲಾರದ ಬಿಸಿಲಿನಿಂದ ನೆರಳಿಗೆಂದು ಯಾರದ್ದಾದರೂ ಮನೆಯ ಕಟ್ಟೆಗೆ ಹೋದರೆ ಅವರು ತಟಕ್ಕಂತ ಬಾಗಿಲು ಹಾಕಿಕೊಳ್ಳುವುದನ್ನೂ, ಬಾಯಾರಿದಾಗ ಒಂದು ಚರಿಗೆ ನೀರು ಕೇಳಿದರೆ ಚಹಾದ ಅಂಗಡಿಗೆ ಹೋಗೆನ್ನುತ್ತಾರೆ ಎನ್ನುವುದನ್ನೂ ವಿಷಾದದಿಂದ ಹೇಳುತ್ತಲೂ, 'ಒಮ್ಮೆ ನಳ್ಳಿಯಲ್ಲಿ ನೀರು ಬಂದರೆ ಮತ್ತೆ ಯಾವಾಗ ಬರುತ್ತೆ ಎನ್ನುವುದು ಅವರಿಗೇ ತಿಳಿಯದಿರುವಾಗ ಅವರಾದರೂ ಏನು ಮಾಡಿಯಾರು' ಎಂದು ಅವರೆಡೆಗೆ ಅನುಕಂಪವನ್ನೂ ತೋರಿಸುವ ದ್ಯಾವಪ್ಪ ನಮ್ಮವನೇ ಆಗಿಬಿಡುತ್ತಾನೆ. 'ಯಾವ ಒಂದ ದೇವಸ್ಥಾನದೊಳಗನೂ, ಒಂದ ಕ್ಷೇತ್ರದಾಗಾದರೂ ದೇವರಿದ್ದಾನಂತ ಅನ್ನೂ ಭಾವನಾ ನನಗ ಬರಲಿಲ್ಲ ನೋಡ್ರಿ' (ಪುಟ–೭೫) ಎನ್ನುವ ಆಧುನಿಕ ದ್ಯಾವಪ್ಪನ ಪ್ರಾಮಾಣಿಕತೆ ಮತ್ತು ನಿರ್ಭಿಡೆ ನಮಗಿದೆಯೆ?

ಕೊನೆಯಲ್ಲಿ, ದ್ಯಾವಪ್ಪನನ್ನು ಹುಡುಕುತ್ತಾ ಹೊರಟ ಪತ್ರಕರ್ತ ಪಾಟೀಲನಿಗೆ ಉದಗಟ್ಟಿಯ ಬಾಲವಿಧವೆ, ಎರಡು ಮಕ್ಕಳ ತಾಯಿ, ಡೊಂಬರ ಬಾಳವ್ವನಿಂದ ದೊರಕುವ ಮಾಹಿತಿಗಳು ಅವನತಿಯತ್ತ ಸಾಗಿದ್ದ ಆಧುನಿಕ ದ್ಯಾವಪ್ಪನಿಗೆ ಓದುಗರ ದೃಷ್ಟಿಯಲ್ಲಿ ಮತ್ತೆ ಎತ್ತರ ಗಳಿಸಿಕೊಡುತ್ತವೆ. ಇವರಿಬ್ಬರ ಸಂಬಂಧದ ಬಗೆಗೆ, ಆರುವರ್ಷಗಳ ಹಿಂದೆ, ಧರಮನಟ್ಟಿಯಿಂದ ದ್ಯಾವಪ್ಪನನ್ನು ಹುಡುಕಿಕೊಂಡು ಬಂದಿದ್ದ ಹುಡುಗರಿಗೆ ಬಾಳವ್ವನ ಅತ್ತೆ ಹೇಳಿದ ಮಾತುಗಳಿಂದಲೇ ಒಂದು ನಿಶ್ಚಿತ ರೂಪ ದೊರೆತಿದ್ದು, ಅದೀಗ ಬಾಳವ್ವನ ಮಾತುಗಳಿಂದ ಖಚಿತತೆ ಪಡೆಯುತ್ತದೆ. ಅಂದು ಆ ಮುದುಕಿ ಆ ಹುಡುಗರನ್ನು ಕೂರಿಸಿಕೊಂಡು, 'ದ್ಯಾವಪ್ಪ ದೇವರಂಥ ಮನುಷ್ಯ. ತನ್ನ ಸೊಸೆ ಬಾಳವ್ವ ವಿಧವೆಯಾದರೂ, ಈಕೆಗೆ ಎರಡು ಮಕ್ಕಳಿದ್ದಾರಾದರೂ, ತಾವು ಹೀನ ಕುಲದಲ್ಲಿ ಬಂದವರಾದರೂ, ಇವ್ಯಾವುದನ್ನೂ ಲೆಕ್ಕಿಸದೆ ಬಾಳವ್ವನನ್ನು ಮದುವೆಯಾಗಲು ಇಚ್ಛಿಸಿದ್ದ. ಆದರೆ, ತಾನೇ ಈ ಮದುವೆಗೆ ಉದ್ದವ್ವನ ಅಪ್ಪಣೆಯಾಗಬೇಕೆಂದು ಬಯಸಿದೆ. ದೇವಿಯನ್ನು ಕೇಳಿದರೆ ಆಕೆ, 'ಮುಂದೆ ನೋಡೋಣ...' ಎನ್ನುತ್ತಲೇ ವರ್ಷಾ ವರ್ಷಾ ಮುಂದೂಡುತ್ತಲೇ ಬಂದಳು. ಅದರಿಂದಾಗಿ, ದ್ಯಾವಪ್ಪ ಬಂದಾಗೆಲ್ಲ ಹೊರಗೆ ಜಗಲಿಯಲ್ಲಿ

ಅವನ ಹಾಸಿಗೆ ಹಾಸಿಕೊಳ್ಳುತ್ತಿದ್ದ. ತಾನೇ ಹೇಳಿದರೂ, ಬಾಳವ್ವ ಕರೆದರೂ ಒಳಗೆ ಬಂದು ಮಲಗುತ್ತಿರಲಿಲ್ಲ. ದೇವರ ಅಪ್ಪಣೆಗೆ ಕಾದ ಮೇಲೆ, ಅಪ್ಪಣೆ ಆಗಿಯೇ ಮದುವೆಯಾಗೋಣ, ಆಮೇಲೆಯೇ ಜೊತೆಗಿರೋಣ ಎನ್ನುತ್ತಿದ್ದನಂತೆ. ಅಷ್ಟಾದರೂ ಬಾಳವ್ವನಿಗೆ, ತನಗೆ ಮತ್ತು ಮಕ್ಕಳಿಗೆ ಊಟ-ಬಟ್ಟೆಗಾಗಿ, ಮಕ್ಕಳ ಶಾಲೆಗಾಗಿ ಹಣ ಕಳಿಸುತ್ತಲೇ ಇರುತ್ತಾನೆ. ತನ್ನನ್ನು ದೊಡ್ಡವ್ವ ಅಂತಲೇ ಆದರಿಸುತ್ತಾನೆ. ಅಂಥಾ ಒಳ್ಳೆಯವನನ್ನೂ ದೇವಿ ಉದ್ದವ್ವ ಅದೇಕೆ ಪರೀಕ್ಷಿಸುತ್ತಿದ್ದಾಳೋ ತಿಳಿಯದು...' (ಪುಟ-೧೦೦-೧೦೩) ಎಂದೆಲ್ಲ ಗೋಗರೆದಿದ್ದಳು.

ಅದರ ಮುಂದುವರಿಕೆಯಾಗಿಯೇ ಈಗ ಬಾಳವ್ವ ಪತ್ರಕರ್ತ ಪಾಟೀಲನಿಗೆ, ಆತ ಇನ್ನೂ ಅದ್ಯಾವುದೋ ಅರಿಯದ ಊರಿನಿಂದ, ಒಮ್ಮೊಮ್ಮೆ ಒಂದೊಂದು ಪೋಸ್ಟ್ ಆಫೀಸಿನಿಂದ, ಮನಿಯಾರ್ಡರು ಕಳಿಸುತ್ತಿದ್ದಾನೆಂದೂ, ತನ್ನ ಬಗ್ಗೆ ಏನೂ ಬರೆಯುತ್ತಿರಲಿಲ್ಲವೆಂದೂ ತಿಳಿಸುತ್ತಾಳೆ. ಬಳಿಕ, ತನ್ನದೇ ಪ್ರಯತ್ನದಲ್ಲಿ, ಪೋಸ್ಟ್ ಮಾಸ್ಟರರ ಸಹಾಯದಿಂದ 'ಅದೆಲ್ಯೋ ಮರಾಸ್ಟ್... ಅಂತ ಆರೇನಾಡ ಐತೆಂತ... ಅಲ್ಲಿ ವರದಾ ಅಂತ ಊರೈತೆಂತ... ಆ ಊರಾಗ ಒಂದ ಆಶ್ರೇಮ ಐತೆಂತ... ಆ ಆಶ್ರಮದಾಗ ಇದ್ದರೂ ಇದ್ದಿದ್ದಾನು...' (ಪುಟ-೧೩೭)ಎಂದೆಲ್ಲ ಊಹೆ ಮಾಡಿ ಅಲ್ಲಿಗೆ ಒಂದು ಪತ್ರ ಬರೆಸಿದ್ದಕ್ಕೆ, ಅಂದಿಗೆ ಆರು ತಿಂಗಳ ಹಿಂದೆಯಷ್ಟೇ ಬಂದ ಉತ್ತರವನ್ನು ತೋರಿಸುತ್ತಾಳೆ.

ಆ ಪತ್ರದಲ್ಲಿ ದ್ಯಾವಪ್ಪನು ಬಾಳವ್ವನಿಗೆ ಉನ್ನತವಾದ ಸಂದೇಶವನ್ನೇ ಕಳುಹಿಸಿದ್ದ. ಆಕೆಯಿಂದಲೂ ಅಂಥ ಆದರ್ಶವನ್ನು ಬಯಸಿದ್ದ. ತಾನು, ಬಾಬಾ ಆಮ್ಟೆಯವರ ಆಶ್ರಮದಲ್ಲಿ ಸೇವಾನಿರತನಾಗಿ ತನ್ನ ಬದುಕು ಸಮಾಜಕ್ಕೆ ಉಪಯೋಗವಾಗುವ ನಾಲ್ಕು ಕೆಲಸಗಳಿಗೆ ಬಳಕೆಯಾಗಲಿ ಎಂದು ಅಲ್ಲಿಗೆ ಹೋಗಿದ್ದಾಗಿ ತಿಳಿಸಿದ್ದ. ತನ್ನ ಮತ್ತು ಬಾಳವ್ವನ ಈ ಜನ್ಮದಲ್ಲಿ ತಮ್ಮ ಸಂಬಂಧ ಪ್ರೀತಿಯ ಮತ್ತು ಮನಸಿಗೆ ಸಂಬಂಧಿಸಿದ ಮುಖದಲ್ಲಿ ಮಾತ್ರ ಸಾಧ್ಯವೆಂದೂ ಪುನರ್ಜನ್ಮ ಇರುವುದಾದರೆ ಮುಂದಿನ ಜನ್ಮದಲ್ಲಿ ಗಂಡ ಹೆಂಡತಿಯ ಸಂಬಂಧದ ಇನ್ನೊಂದು ಮುಖವಾದ ದೈಹಿಕ ಸಂಬಂಧವೂ ಸಾಧ್ಯವಾಗಬಹುದು ಎಂದೂ ಬರೆದಿದ್ದ. '...ದೇವರು ಎನ್ನುವುದು ಇದ್ದರೆ ಅದರ ವಿರುದ್ಧ ನನ್ನ ಧಿಃಕಾರವಿದೆ- ಅದರ ವಿರುದ್ಧ ನನ್ನ ಸತ್ಯಾಗ್ರಹವಿದೆ. ...ಆ ಸತ್ಯಾಗ್ರಹದ ಸಲುವಾಗಿಯೇ ನನ್ನ-ನಿನ್ನ ಮದುವಿಯ ದೈಹಿಕ ಮುಖ ಈ ಜನ್ಮದಲ್ಲಿ ಸಾಧ್ಯ ಆಗುವುದಿಲ್ಲ. ದೇವರ ವಿರುದ್ಧದ ಬಂಡಾಯ ಇದು... ...ಈ ಬಂಡಾಯದಲ್ಲಿ ನೀನೂ ಭಾಗಿಯಾಗುತ್ತೀ ಅಂತ ನಂಬಿದ್ದೇನೆ... ನಿನಗೆ ಕಷ್ಟ ಅನಿಸುವದಾದರೆ, ನಿನ್ನ ಶರೀರ ಒಪ್ಪದಿದ್ದರೆ, ಯೋಗ್ಯರು ಯಾರಾದರೂ ಸಿಕ್ಕು ನೀನು ಮದುವೆಯಾಗುತ್ತೀ ಅನ್ನುವುದಾದರೆ

ನನ್ನದೇನೂ ಅಭ್ಯಂತರ ಇಲ್ಲ... ...ಮಕ್ಕಳಿಗೆ ಯೋಗ್ಯ ಶಿಕ್ಷಣ ಕೊಡಿಸು. ಹಣದ ಬಗ್ಗೆ ಚಿಂತೆ ಮಾಡುವದು ಬೇಡ...' (ಪುಟ-೧೩೯) ಎನ್ನುವುದು ಪತ್ರದ ಸಾರಾಂಶವಾಗಿತ್ತು.

ಪತ್ರ ಓದಿ ನಿಟ್ಟುಸಿರು ಬಿಟ್ಟ ಪತ್ರಕರ್ತ ಪಾಟೀಲನಿಗೆ ಬಾಳವ್ವನ ಹಳಹಳಿಕೆಗೆ– ತಮ್ಮ ಮದುವೆಯಾಗಿದೆಯೆಂದು ದ್ಯಾವಪ್ಪ ಒಮ್ಮೆ ಬರೆದು ನಂತರ ಈಕೆ ಯಾರನ್ನಾದರೂ ಮದುವೆಯಾಗುವುದಿದ್ದರೆ ಆತನ ಅಡ್ಡಿಯಿಲ್ಲವೆಂದುದೇ ಕಾರಣವಾಗಿ ಉಮ್ಮಳಿಸಿದ ದುಃಖಕ್ಕೆ– ಸಾಂತ್ವನವಿಲ್ಲವಾಗುವುದು, ದ್ಯಾವಪ್ಪನ ಪಾತ್ರದ ಮೇರುತ್ವಕ್ಕೆ ಗುರುತಾಗುತ್ತದೆ; ಬಾಳವ್ವನ ಪ್ರೀತಿಯ ನಿಷ್ಠೆಗೆ ಗೌರವವಾಗುತ್ತದೆ. ಆಧುನಿಕ ದ್ಯಾವಪ್ಪನ ಆದರ್ಶದಲ್ಲಿ ಬಾಳವ್ವನ ಪ್ರಾಮುಖ್ಯದ ಮನ್ನಣೆಯಾಗುತ್ತದೆ. ತೇರೆನ್ನುವುದು ಯುವ ದ್ಯಾವಪ್ಪನ ಆದರ್ಶಕ್ಕೆ ಪ್ರತೀಕವಾಗುತ್ತದೆ.

**ಪತ್ರಕರ್ತ ಪಾಟೀಲ:**

ಪತ್ರಕರ್ತ ಪಾಟೀಲ ಕಾದಂಬರಿಯ ನಿರೂಪಕರಲ್ಲಿ ಒಬ್ಬ. ಈತನದು ಒಂದು ರೀತಿಯಲ್ಲಿ ನಂಟು ಕಟ್ಟುವ ಪಾತ್ರ. ಕಥಾನಕದ ಬೇರೆ ಬೇರೆ ಕಾಲಮಾನವನ್ನು ಒಂದು ಎಳೆಯಲ್ಲಿ ಹೆಣೆಯುವುದಕ್ಕೆ ಬಳಸಿಕೊಂಡ ಪಾತ್ರ. ಈತ ಧರಮನಟ್ಟಿಯ ತೇರಿನ ಕಥಾನಕವನ್ನು ಇಂದಿನ ಕಾಲಮಾನಕ್ಕೆ ಹೆಣೆಯುವ ಸೂತ್ರವಾಗುತ್ತಾನೆ. ಈತನದೇ ವ್ಯಕ್ತಿತ್ವ ಅನ್ನುವಂಥ ಗಟ್ಟಿತನ ಢಾಳಾಗಿ ಕಾಣಿಸದಿದ್ದರೂ, ಕೊನೆಯಲ್ಲಿ ಈತ ಹೊಸ ದ್ಯಾವಪ್ಪನ ಪಾತ್ರವಿಕಸನದಲ್ಲಿ ಪ್ರಮುಖವಾಗುತ್ತಾನೆ. ಈತನ ಹುಡುಕಾಟದಲ್ಲಿಯೇ ದ್ಯಾವಪ್ಪ ತೆರೆದು ಬೆಳೆದು ನಿಲ್ಲುತ್ತಾನೆ.

ಪಾಟೀಲನದೇ ಎನ್ನುವಂಥಾ ಒಂದು ತುಣುಕು ನನ್ನನ್ನು ಬಹುವಾಗಿ ಸೆಳೆಯಿತು. ಅದು ನಮ್ಮಂಥ ಅನಿವಾಸಿ ಭಾರತೀಯರಿಗೆ, ಮರಳಿ ಮಣ್ಣಿಗೆ ಮರಳುವ ಕನಸಿಗರಿಗೆ ಒಂದು ಮುನ್ನೆಚ್ಚರಿಕೆಯಂತೆಯೂ ಕಂಡಿತು. ಪತ್ರಕರ್ತ ಪಾಟೀಲ, ತಾನು ರಿಟೈರ್ ಆಗಿ, ಫ್ಲಾಟನ್ನು ಬಂದಷ್ಟಕ್ಕೆ ಮಾರಿ, ಬೆಂಗಳೂರನ್ನು ತೊರೆದು, ಊರಿಗೆ ಬಂದುಬಿಡುತ್ತಾನೆ. ಬೆಟಗೇರಿಗೆ ಬಂದಮೇಲೆ, '...ನಾಕೈದು ತಿಂಗಳು ಅಲ್ಲಿ ನೆಲಿ ಊರಲಿಕ್ಕೆ ಕಳೆದವು... ಬೆಂಗಳೂರಿನ್ಯಾಗ ಇದ್ದವರು ವಾಪಸ್ಸು ಹಳ್ಳಿಗೆ ಬಂದು ನಿಲ್ಲುವುದರಲ್ಲಿ ಅದರದೇ ಆದ ಸಮಸ್ಯೆಗಳಿವೆ... ಬೆಂಗಳೂರಿನಿಂದ ನಮ್ಮೊಂದಿಗೆ ಇರಲು ಬಂದವರು ಅಂತ ಊರವರಿಗೆ ಏನೋ ಒಂದು ತರದ ಅಸಹನೆ ಮತ್ತು ಕುತೂಹಲ... ಅಲ್ಲಿಂದ ಬರುವಾಗ ಬುಟ್ಟಿಗಟ್ಟಲೆ ರೊಕ್ಕಾ ಕಟಿಗೊಂಡು ಬಂದಿರುತ್ತಾರೆನ್ನುವ ಭ್ರಮೆಯೊಳಗೆ ನಮ್ಮಿಂದ ಏನೇನೋ ಅಪೇಕ್ಷೆಗಳು... ಆಸೆಗಳು... ಸಣ್ಣಪುಟ್ಟ ಕೆಲಸಕ್ಕೆ ಕೂಲಿಗೆ ಕರೆದರೂ ಒಂದಕ್ಕೆ ಎರಡು ಮೂರು ಪಟ್ಟು ಕೇಳಿ ಗೋಳಾಡಿಸುವರು... ಯಾಕಾದರೂ ಹಳ್ಳಿಗೆ ಬಂದು ನೆಲೆಸುವ ವಿಚಾರ ಮಾಡಿದೆನೋ ಅನ್ನುವಂತೆ ಮಾಡಿದರು... ನಾನು ಕ್ರಮೇಣ ಅವರಿಗೆ

ಹೊಂದಿಕೊಂಡು... ಅವರನ್ನು ಸಾಧು ಮಾಡಿಕೊಳ್ಳಲಿಕ್ಕೆ ನಾಕೈದು ತಿಂಗಳು ಬೇಕಾಯಿತು...' (ಪುಟ-೧೨೬) ಎನ್ನುವ ಸ್ವಗತ ನಮ್ಮದೇ ಕಥೆ! ಅನಿವಾಸಿಗಳಾದ ನಾವೆಲ್ಲ ಕಾಣುವ, ಅನುಭವಿಸುವ ವಿಷಯ. ಅದೇ ಕಾರಣಕ್ಕಾಗಿ ಈ ಸಂದರ್ಭ ಗಮನ ಸೆಳೆಯಿತು.

**ತೇರು- ಒಂದು ಪ್ರತಿಮೆಯಾಗಿ:**

'ಬೃಹತ್ ಚಕ್ರಗಳ, ಆರು ಮಜಲಿನ, ಹೊನ್ನ ಕಲಶದ, ಅಷ್ಟಕೋನಾಕಾರದ ಕಲ್ಲಿನ ರಥ'- ಇದು ಧರಮನಟ್ಟಿಯ ತೇರಿನ ಚಿತ್ರಣ ಒಂದೇ ವಾಕ್ಯದಲ್ಲಿ. ಈ ತೇರಿನ ಹಿಂದೆ ಇರುವ ಗಾಥೆ ಮಾತ್ರ ಒಂದೂವರೆ ಶತಮಾನದ್ದು. ಧರಮನಟ್ಟಿಯ ದೇಸಗತಿಯನ್ನು ಸ್ಥಾಪಿಸಿದ ರಂಗೋ ಪಟವರ್ಧನ ದೇಸಾಯರು ತನ್ನ ಮನೆದೇವರಾದ ವಿಠ್ಠಲ ರುಕುಮಾಯಿಯ ದೇವಸ್ಥಾನ ಕಟ್ಟಿಸಿ, ದೇವಸ್ಥಾನದ ಭವ್ಯತೆಗೆ ಒಪ್ಪುವಂಥಾ ಭವ್ಯತೆಯನ್ನೇ ಹೊಂದಿದ ಈ ಕಲ್ಲಿನ ರಥವನ್ನೂ ಕಟ್ಟಿಸುತ್ತಾರೆ. ರಥಕ್ಕೆ ಎರಡು ಮಾರು ಎತ್ತರವಿದ್ದ ಕಲ್ಲಿನ ಗಾಲಿಗಳು. ಗಾಲಿಗಳಿಗಿಂತ ಒಂದು ಮೊಳದಷ್ಟು ಮೇಲೆ ಎತ್ತರಕ್ಕೆ, ಎತ್ತರವಾದ ಈ ಚೌಕಟ್ಟಿನ ಮೇಲೆ ಆರು ಮಜಲಿನ ಅಷ್ಟಕೋನಾಕಾರದ ತೇರು. ಈ ಆರು ಮಜಲುಗಳಲ್ಲಿ, ಒಂದೊಂದು ಮಜಲಿನಲ್ಲೂ ಒಂದೊಂದು ರೀತಿಯ ಕೆತ್ತನೆಗಳು. ಆರನೇ ಮಜಲಿನ ಮೇಲೆ, ಸಿಂಗಾರ ಪ್ರಭೆಯ ಬಂಗಾರ ಕಳಸವು ಸೂರ್ಯ ಚಂದ್ರ ಬಿಂಬಗಳ ಜೊತೆಗೆ ನೆತ್ತಿಯಲ್ಲಿ ಸಹಸ್ರಾರ ಚಕ್ರವನ್ನು ಧರಿಸಿ ಮೆರೆದಿದೆ. ಇಂಥ ವೈಭವದ ತೇರನ್ನು ಧರಮನಟ್ಟಿಯ ಮತ್ತು ಸುತ್ತಮುತ್ತಲ ಊರಿನ ವೈಭವದ ಪ್ರತೀಕವಾಗಿಯೂ ಕಾಣಬಹುದು.

ಮಜಲು ಮಜಲುಗಳಲ್ಲಿ ಚಿತ್ರಿತವಾಗಿರುವ ಬೇರೆ ಬೇರೆ ಕೆತ್ತನೆಗಳು ಸಮಾಜದ ಬೇರೆ ಬೇರೆ ಸ್ತರಗಳನ್ನೂ ಪ್ರತಿನಿಧಿಸುವುದು. ಯಾವುದೇ ಒಂದು ದೇಸಗತಿಯಲ್ಲಿ/ ಸಾಮ್ರಾಜ್ಯದಲ್ಲಿ ಆಡಳಿತದ ಭದ್ರತೆಗೆ, ಸ್ಥಿರತೆಗೆ, ಹಾಗೂ ಸಾಮಾಜಿಕ ಸಾಮರಸ್ಯಕ್ಕೆ ಎಲ್ಲ ಸ್ತರಗಳ ವ್ಯಕ್ತಿಗಳೂ ಜವಾಬ್ದಾರರು. ಮೇಲು ಕೀಳೆಂಬ ಭೇದ ನಡವಳಿಕೆಗಳಲ್ಲಿ ಇದ್ದರೂ ಸಾಮಾಜಿಕ ಜೀವನಕ್ಕೆ ಎಲ್ಲರೂ ಮುಖ್ಯರು. ತೇರಿನಲ್ಲಿನ ಆರು ಮಜಲುಗಳು ಸಮಾಜದಲ್ಲಿ ಅಂತಹ ಹೊಂದಾಣಿಕೆಯಿರಬೇಕಾದ ಅವಶ್ಯಕತೆಯನ್ನು ತೋರುತ್ತದೆ. ಯಾವುದೇ ಒಂದು ಮಜಲಿನ ಪ್ರಾಮುಖ್ಯವನ್ನು ಅಲ್ಲಗಳೆಯಲಾಗದು. ಅಂತೆಯೇ ತೇರಿನ ಹೊನ್ನ ಕಳಸ. ತೇರಿಗೆ ಮೆರುಗು ಕೊಡುವಂಥಾದ್ದು ಈ ಕಲಶವೇ ಆದರೂ, ಇತರ ಮಜಲುಗಳಿಲ್ಲದೆ ಕಲಶಕ್ಕೆ ನೆಲೆಯಿಲ್ಲ; ಕಳಸವಿಲ್ಲದೆ ಮಜಲುಗಳಿಗೆ ಬೆಲೆಯಿಲ್ಲ. ಈ ತೇರಿನ ಭವ್ಯತೆ, ದೇಸಾಯರ ಶ್ರೇಷ್ಠತೆಗೆ ಪ್ರತಿಮೆಯಾದಂತೆಯೇ ದೇಸಗತಿಯ ಜನಜೀವನದ ಉಚ್ಛ್ರಾಯದ ಸಂಕೇತವೂ ಹೌದು.

ಮೂಲ ದ್ಯಾವಪ್ಪನ ಕಾಲದಲ್ಲಿ ಮೊದಲ್ಗೊಂಡ ತೇರಿನ ಔನ್ನತ್ಯ ಆ ಕಾಲದಲ್ಲಿ ಸಾಮಾನ್ಯ ಜನರಿಗೆ ದೇವರ, ಉತ್ಸವದ ಮೇಲಿದ್ದ ಭಕ್ತಿ ಉತ್ಸಾಹಗಳಿಗೂ ರೂಪಕವಾಗಿ ಕಾಣುತ್ತದೆ. ಕಾಲ ಸಂದಂತೆ, ದ್ಯಾವಪ್ಪನ ವಂಶಜರ ಭಕ್ತಿ ಕಡಿಮೆಯಾಗುತ್ತಾ ಬಂದು, ಆಧುನಿಕ ದ್ಯಾವಪ್ಪನಲ್ಲಿ ದೇವರ ಬಗ್ಗೆ ಸಂಶಯ ನಿರಾಕರಣೆಗಳೇ ತುಂಬಿಕೊಳ್ಳುತ್ತವೆ. ಅದಕ್ಕೆ ಹೊಂದುವಂತೆ, ಅದೇ ಸಮಯದಲ್ಲಿ ತೇರಿನ ಭವ್ಯತೆಯ ಆಧಾರವಾದ ವಿಠ್ಠಲನ ದೇವಸ್ಥಾನದಲ್ಲಿ ದೇವರ ಆಭರಣಗಳ ಕಳ್ಳತನವೂ ಇದನ್ನೇ ಪ್ರತಿಬಿಂಬಿಸುವ ಪ್ರಸಂಗವಾಗುತ್ತದೆ. ತೇರಿಗೆ ನಡೆಯಬೇಕಾದ ರಕ್ತ ತಿಲಕದ ಸೇವೆ ನಿಂತೇ ಹೋಗಿ ತೇರಿನ ಶ್ರೇಷ್ಠತೆಯ ಮೇಲೆ ತೆರೆಯೆಳೆದಂತೆ, ಇದ್ದಕ್ಕಿದ್ದಂತೆ ಒಂದು ಉನ್ನತ ಪರಂಪರೆಯೇ ಕೊನೆಗೊಳ್ಳುತ್ತದೆ. ಅದೇ ನೆಪವಾಗಿದ್ದುಕೊಂಡು, ತೇರಿನ ವೈಭವದ ಆರಾಧಕನಾಗಿದ್ದ ಹಿರಿಯ ಸ್ವಾಂವಜ್ಜನೂ ಕೊನೆಯುಸಿರೆಳೆಯುತ್ತಾನೆ. ಸಮಾಜದಲ್ಲಿ ಅರ್ಥವಾಗದೆ ಕಳೆದುಹೋಗುವ ಕೆಲವು ಸಂಕೀರ್ಣ ಸಂಬಂಧಗಳ ಗುಂಪಿಗೆ ಸ್ವಾಂವಜ್ಜ–ತೇರಿನ ಸಂಬಂಧವೂ ಸೇರಿಹೋಗಿ, ಜನಮಾನಸದಿಂದ ಮರೆಯಾಗುತ್ತದೆ. ಹೊನ್ನ ಕಲಶದ ಕಲ್ಲಿನ ತೇರು ಇವೆಲ್ಲದಕ್ಕೂ ಬರೀ ಕಲ್ಲ ಸಾಕ್ಷಿಯಾಗಿ ಉಳಿದುಬಿಡುತ್ತದೆ.

**ಒಟ್ಟು ನಿರೂಪಣೆ– ತಂತ್ರ, ಶೈಲಿ, ಭಾಷೆ:**

ಲೇಖಕ ರಾಘವೇಂದ್ರ ಪಾಟೀಲರು ಈ ಕಾದಂಬರಿಯ ನಿರೂಪಣೆಯಲ್ಲಿ ಮೂರು ಪ್ರಮುಖ ನಿರೂಪಕರನ್ನೂ, ಗೊಂದಲಿಗರ ಗಾಯನವನ್ನೂ, ತೇರೆನ್ನುವ ಪ್ರತಿಮೆಯನ್ನೂ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಜಾನಪದ ಕಥಾನಕದಂತಹ ತೇರಿನ ಹಿನ್ನೆಲೆಯ ಕಥಾಭಾಗಕ್ಕೆ ಗೊಂದಲಿಗರ ಗಾಯನದಂತಹ ನಿರೂಪಣಾ ತಂತ್ರವನ್ನು ಹಿಡಿದಿದ್ದಾರೆ. ಅದರಲ್ಲಿನ ಜಾನಪದ ಸೊಗಡು ತೇರಿನ ಹಿನ್ನೆಲೆಗೆ ಗಟ್ಟಿತನ ಒದಗಿಸಿಕೊಡುತ್ತದೆ. ಕಥಾನಕದ ಉದ್ದಕ್ಕೂ ಬಳಸಲಾಗಿರುವ ಗ್ರಾಮ್ಯ ಭಾಷೆ, ಅಭ್ಯಾಸವಿಲ್ಲದವರಿಗೆ ಮೊದಲ ಓದಿನಲ್ಲಿ ತೊದಲುವಂತೆ ಅನಿಸಿದರೂ ಕಥೆಯ ವಾತಾವರಣದಿಂದಾಗಿ ಅದು ನಮ್ಮನ್ನು ಆವರಿಸಿಕೊಳ್ಳುವಲ್ಲಿ ಸಹಕಾರಿಯಾಗುತ್ತದೆ; ಕನ್ನಡದ ಒಂದು ಪ್ರಾದೇಶಿಕ ಸೊಗಡನ್ನು ಪರಿಚಯಿಸುತ್ತದೆ. ವಿವಿಧ ಕಾಲಘಟ್ಟಗಳಲ್ಲಿ ನಡೆಯುವ ಕಥೆಯನ್ನು, ವಿವಿಧ ಪ್ರದೇಶಗಳಲ್ಲಿ ನಡೆಯುವ ಘಟನೆಗಳನ್ನು ಒಂದೆಡೆಯಲ್ಲಿ ಪೋಣಿಸಿಡುವಲ್ಲಿ ಪತ್ರಕರ್ತ ಪಾಟೀಲ, ಸ್ವಾಂವಜ್ಜ ಮತ್ತು ಅವ್ಯಕ್ತ ನಿರೂಪಕನಾಗಿ ಕಾದಂಬರಿಕಾರ ಮೂರು ಹೆಣಿಗೆಗಳಾಗಿ ಒಂದೇ ಕಥಾನಕವನ್ನು ಹೆಣೆದುಕೊಟ್ಟು, ಓದುಗರಿಗೆ ಸುಂದರ ಕಲಾಕೃತಿ ಲಭ್ಯವಾಗಿದೆ.

**ಕಣ್ತೊಡಕುಗಳು:**

ಕಾದಂಬರಿಯನ್ನು ಓದಿಕೊಂಡು ಹೋಗುವಾಗ ಧುತ್ತನೇ ಗೋಡೆಯಂತೆ ಎದ್ದುನಿಲ್ಲುವಂತಹ ಅಥವಾ ಎಡವಿದಂತೆ ಭಾಸವಾಗುವಂತಹ ಗಂಭೀರ ಎಡವಟ್ಟುಗಳು

ಕಾಣದಿದ್ದರೂ ಈ ಕೆಲವು ಸಂದರ್ಭಗಳನ್ನು ಲೇಖಕರು ತುಸು ಜಾಗ್ರತೆಯಾಗಿ ನಿರ್ವಹಿಸಬಹುದಿತ್ತು ಅನಿಸಿತು. ಇವೆಲ್ಲವೂ ಕಥೆಯ ಓಟಕ್ಕೆ, ರಸಾಸ್ವಾದಕ್ಕೆ ಅಡ್ಡಿಯುಂಟುಮಾಡದಿದ್ದರೂ, ನನ್ನಂತೆ ಕತೆಯೊಳಗೆ ಪಾತ್ರವಾಗಿ ಹೂತುಹೋಗಿ ಓದುವವರಿಗೆ ಸ್ವಾದಿಷ್ಟ ಭೋಜನದಲ್ಲಿ ಕಲ್ಲು ಸಿಕ್ಕಂತೆ ಆಗಬಹುದು.

ಮೊದಲನೆಯದು ಗೊಂದಲಿಗರ ಗಾಯನದ ಸಂದರ್ಭ: ಗಾಯನದಲ್ಲಿ– 'ಚೈತ್ರ ಶುಕ್ಲದ ತ್ರಯೋದಶಿಯ ದಿನವೊ। ತದಗೀ ಎಂಬೂವ ಸುಮುಹೂರ್ತದಾಗೆ। ಸ್ವಾಮೀಯ ತೇರೂ ಎಳಿಯೂವದಯ್ಯಾ...' (ಪುಟ–೧೧). ಹೀಗೆ, 'ಚೈತ್ರದ ಶುಕ್ಲ ತದಗಿ'ಯ ದಿನ ತೇರನೆಳೆಯುವುದೆಂದು ಹೇಳುವಾಗ ಮೊದಲು ತ್ರಯೋದಶಿಯೆಂದು ನುಡಿದು ನಂತರ ತದಿಗೆಯೆಂದು ಹಾಡಲಾಗಿದೆ. ಗಾಯನದಲ್ಲಿ/ ಕಥೆಯಲ್ಲಿ ಮುಂದೆ ತದಿಗೆಯ ದಿನವೆಂದೇ ಬರುತ್ತದಾದ್ದರಿಂದ ಇದು ಕರಡು/ ಅಚ್ಚಿನಮನೆಯ ದೋಷ ಇರಬಹುದು ಅಂದುಕೊಂಡರೂ ಓದುತ್ತಿದ್ದಂತೆ, ಒಮ್ಮೆ ತ್ರಯೋದಶಿಯಿದ್ದದ್ದು ಮುಂದಿನ ಸಾಲಿಗೇ ತದಿಗೆಯಾದದ್ದು ತಮಾಷೆಯಾಗಿ ಕಾಣುತ್ತದೆ.

ಎರಡನೆಯದು ಇದೇ ಭಾಗದ ಕೊನೆಯಲ್ಲಿ ಬರುತ್ತದೆ: ಧರಮನಟ್ಟಿಯ ರಥೋತ್ಸವ ಮುಗಿಸಿಕೊಂಡು, ತೇರಿಗೆ, ರಕ್ತ ತಿಲಕಕ್ಕೆ ಸಂಬಂಧಪಟ್ಟ ಸನದನ್ನು ನೋಡುವ ಸಲುವಾಗಿ ಪತ್ರಕರ್ತ ಪಾಟೀಲ ಕಳ್ಳೀಗುದ್ದಿಗೆ ಹೋಗುತ್ತಾನೆ. '...ಅಲ್ಲಿ ಗೊಂಬೀರಾಮರ– ಸೂತರರ ಗೊಂಬಿಯ ಆಡಿಸುವ– ರಗತ ತಿಲಕದವರ ಮನಿ ಹುಡಿಕಿಕೊಂಡು ಹೋಗಿ– ಅಲ್ಲಿ ದೇವರ ಜಗಲಿಯ ಮ್ಯಾಲ ಇಟ್ಟಿದ್ದ ಧರಮನಟ್ಟಿಯ ದೇಸಗತಿಯವರು ಬರದುಕೊಟ್ಟ ಸನದನ್ನು ನೋಡಿ... ನನ್ನ ಕುತೂಹಲವನ್ನು ತಣಿಸಿಕೊಂಡ ಮೇಲೆಯೇ ಬೆಂಗಳೂರಿಗೆ ಬಂದೆ...' (ಪುಟ–೩೫), ಇದೇನೋ ಸರಿಯಿದೆ. ನನಗೆ ಗೊಂದಲವಿರುವುದು ಅಥವಾ ಕೊಂಡಿ ಸರಿಯಿಲ್ಲವೆಂದು ಅನಿಸಿದ್ದು– ಪಾಟೀಲ ಕಳ್ಳೀಗುದ್ದಿಗೆ ಹೋಗಿ ಅಲ್ಲಿ ಮನೆ ಹುಡುಕಬೇಕಾದ ಪ್ರಸಂಗ ಯಾಕೆ ಬಂದಿರಬೇಕು? ಕಥೆಯ ಪ್ರಕಾರ ಪ್ರತೀ ವರ್ಷದ ಉತ್ಸವಕ್ಕೆ ಕಳ್ಳೀಗುದ್ದಿಯಿಂದ ಗೊಂಬೀರಾಮರ ದ್ಯಾವಪ್ಪನ ವಂಶದವನೊಬ್ಬ ರಕ್ತತಿಲಕದ ಸೇವೆಗೆ ಬಂದಿರಲೇಬೇಕಲ್ಲ! (ಆಧುನಿಕ ದ್ಯಾವಪ್ಪನ ಮೊದಲು ಆತನ ತಂದೆ ಕುಬೇರಪ್ಪ ಉತ್ಸವಕ್ಕೆ ಬರುತ್ತಿದ್ದ, ರಕ್ತತಿಲಕದ ಸೇವೆ ನಡೆಸುತ್ತಿದ್ದ ಎನ್ನುವುದು ಮುಂದೆ ಬರುತ್ತದೆ.) ಅವನ ಜೊತೆಗೇ ಕಳ್ಳೀಗುದ್ದಿಗೆ ಹೋಗಿ ತನ್ನ ಕುತೂಹಲ ನಿವಾರಿಸಿಕೊಳ್ಳಬಹುದಿತ್ತಲ್ಲ. ಯಾಕೆ ಕುಬೇರಪ್ಪನ ಪ್ರಸ್ತಾಪವೇ ಬಂದಿಲ್ಲ ಇಲ್ಲಿ? ಯಾಕೆ ಅವನೊಂದಿಗೇ ಹೋಗಲಿಲ್ಲ? ಈ ಭಾಗ ಓದಿದ ತಕ್ಷಣವೇ ನನಗನಿಸಿದ್ದು ಇದು. ಇದನ್ನೂ ಲೇಖಕರು ಒಂದಿಷ್ಟು ಸೂಕ್ಷ್ಮವಾಗಿ ಗಮನಿಸಬಹುದಿತ್ತು.

ನಾನು ಗಮನಿಸಿದ ಇನ್ನೂ ಒಂದು ವಿಷಯವೆಂದರೆ, ಪುಟ ೯೩–ರಲ್ಲಿ ಕಿರಿಯ ದ್ಯಾವಪ್ಪನ ತಾಯಿಯ ಹೆಸರು ತಾರವ್ವ ಎಂದೂ, ಮುಂದೆ ಪುಟ ೧೩೦–ರಲ್ಲಿ

ಆಕೆಯು ಸುಶೀಲವ್ವ ಎಂದೂ ಇವೆ. ಮೊದಲು ಧರಮನಟ್ಟಿಯಲ್ಲಿ ಆಕೆಯನ್ನು ತಾರವ್ವ ಎನ್ನುತ್ತಾರೆ. ಸುಶೀಲವ್ವನೆಂದು ಕಳ್ಳೀಗುದ್ದಿಯಲ್ಲಿ ಪತ್ರಕರ್ತ ಪಾಟೀಲನಿಗೆ ಹೇಳಲಾಗುತ್ತದೆ. ಈಕೆಗೇನಾದರೂ ಎರಡು ಹೆಸರುಗಳಿದ್ದವೆ? ಅಥವಾ ಅವಸರದ ಬರವಣಿಗೆಯಲ್ಲಿ ಕಣ್ತಪ್ಪಿನಿಂದಾದುದೆ? ಇದೂ ನಿವಾರಿಸಿಕೊಳ್ಳಬಲ್ಲ ವಿಷಯ.

ಇನ್ನು ಪುಟ್ಟ ಪುಟ್ಟ ಒಂದೆರಡು ಪ್ರಸಂಗಗಳು, ಬರವಣಿಗೆಯಲ್ಲಿ ನಾವುಗಳೆಲ್ಲರೂ ಗಮನಿಸಲೇಬೇಕಾದ ಕಾಲಮಾನದ ಲೆಕ್ಕಾಚಾರದವು. 'ತೇರು'ವಿನಂತಹ ದೀರ್ಘಕಾಲಾವಧಿಯಲ್ಲಿ ನಡೆಯುವ ಕಾದಂಬರಿಯನ್ನು ಬರೆಯುವಾಗ ಕಾಲಮಾನದ ಲೆಕ್ಕ ತಪ್ಪುವುದು ಸಹಜ (ಪತ್ರಕರ್ತ ಪಾಟೀಲನ ನೆಲೆಯಲ್ಲಿ, ಸುಮಾರು ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಕಥೆ ಸಾಗುತ್ತದೆ; ಧರಮನಟ್ಟಿಯ ಕಥಾನಕವು ನೂರಾ ಇಪ್ಪತ್ತೈದು ವರುಷಗಳ ಹಿನ್ನೆಲೆಯನ್ನೇ ಪಡೆದು ಇದೇ ಇಪ್ಪತ್ತೈದು ವರ್ಷಗಳಲ್ಲಿ ಮುಂದುವರಿಯುತ್ತದೆ). ಆದರೆ, ತಮ್ಮದೇ ಕೃತಿಯನ್ನು ಮತ್ತೊಂದೆರಡು ಬಾರಿ ಕೂಲಂಕುಶವಾಗಿ ಲೇಖಕರೇ ಓದಿಕೊಂಡಾಗ ಇಂತಹ ಕಣ್ತಪ್ಪುಗಳನ್ನು ಹುಡುಕಿ ಹಿಡಿಯಬಹುದು(ಲೇಖಕರಿಗೆ ಕಥೆಯ ಕಾಲಮಾನದ ಅಂದಾಜಿರುವುದರಿಂದ ಅದು ಸುಲಭಸಾಧ್ಯ).

ಇದರಲ್ಲಿ ಮೊದಲಾಗಿ, ಮೂಲ ದ್ಯಾವಪ್ಪ ಕಳ್ಳೀಗುದ್ದಿಯಲ್ಲಿ ಹಳಿಮನಿ ಶಂಕರಜ್ಜನ ಜೊತೆ ಮಾತಾಡುತ್ತಾ, '...ನಾ ಕಳ್ಳೀಗುದ್ದಿಗೆ ಬಂದ ಇನೂ ಮೂರ ವರಸ ಸೈತ ಪೂರಾ ಆಗಿಲ್ಲ' ಎನ್ನುತ್ತಾನೆ (ಪುಟ-೪೭). ಪುಟ ೪೩-ರಲ್ಲಿ ಆತ ಮೊದಲ ಬಾರಿಗೆ ಧರಮನಟ್ಟಿಯ ತೇರಿಗೆ ರಕ್ತತಿಲಕದ ಸೇವೆಗೆ ಹೋದ ಪ್ರಸಂಗ ಬರುತ್ತದೆ. ಆ ಹಿನ್ನೆಲೆಯಲ್ಲಿ ಈ ಮಾತನ್ನು ನೋಡಿದಾಗ ಇದು 'ಎರಡು ವರ್ಷವೂ ಆಗಿಲ್ಲ' ಎಂದಾಗಬೇಕಿತ್ತು. ಇಷ್ಟೂ ಲೆಕ್ಕ ತಪ್ಪುವ ಹಳ್ಳಿಮುಕ್ಕನೇನಲ್ಲ ಮೂಲ ದ್ಯಾವಪ್ಪ. ಇದು ಲೇಖನಿಯ ಓಟದ ತಪ್ಪು (ಎರಡು ಅಥವಾ ಮೂರು ವರ್ಷ; ಏನಂಥ ವ್ಯತ್ಯಾಸ ಅನ್ನಲಾರಿರಿ ಎಂದುಕೊಂಡಿದ್ದೇನೆ).

ಎರಡನೆಯದಾಗಿ, ಕಾದಂಬರಿಯ 'ಭಾಗ: ಐದು'- ಮೊದಲ ವಾಕ್ಯವೇ 'ಮರುದಿವಸನs ಸಪ್ತಮಿ...' (ಪುಟ-೧೦೭). ಒಂದಿಷ್ಟು ಹಿನ್ನೋಟದಿಂದ, ಅಂದು 'ಅಷ್ಟಮಿ' ಆಗಬೇಕಾಗಿದ್ದುದು ತಿಳಿದುಬರುತ್ತದೆ. ಏಕೆಂದರೆ, ಸೇವೆಯ ದ್ಯಾವಪ್ಪ ಬರಬೇಕಾಗಿದ್ದುದು ಷಷ್ಟಿಯ ಸಂಜೆ. ಅಂದು ಆತ ಬರಲಿಲ್ಲ. ಮರುದಿನ- ಸಪ್ತಮಿಯ ದಿನ- ಸ್ವಾಂವಜ್ಜ ಹುಡುಗರನ್ನು ಉದಗಟ್ಟಿಗೆ ಕಳುಹಿಸಿ ಹುಡುಕಿಸುತ್ತಾನೆ. ಅಲ್ಲಿಯೂ ಆತ ಸಿಗದೆ, ಆತನ ಸುಳಿವಿಲ್ಲದೆ ಅವರೆಲ್ಲ ಸಂಜೆಗೆ ಹಿಂದಿರುಗುತ್ತಾರೆ. ಅದರ ಮಾರನೇ ದಿನ ಗೋಕಾವಿಗೆ ಹೋಗಬೇಕೆಂದು ಹುಡುಗರಿಗೆ ತಿಳಿಸುತ್ತಾನೆ. ದ್ಯಾವಪ್ಪ

ಅಲ್ಲಿರುತ್ತಾನೆ ಎನ್ನುವ ನಂಬಿಕೆ ಇಲ್ಲವಾದರೂ ಅಂದು ಎಲ್ಲರೂ ಸ್ವಾಂವಜ್ಜನ ಮಾತಿಗೆ ಹೂಂ ಅಂದು '...ಚಿಂತಿಯನ್ನು ತಲಿಗೆ ಕಟಿಗೊಂಡು ಮನಿಗೆ ಹೋದರು' (ಪುಟ-೧೦೪) ಅನ್ನುವಲ್ಲಿಗೆ ಸಪ್ತಮಿಯ ದಿನ (ಭಾಗ: ನಾಲ್ಕು ಕೂಡಾ) ಮುಗಿದಿರುತ್ತದೆ; ಮರುದಿವಸ ಅಷ್ಟಮಿ.

ಮೂರನೆಯದಾಗಿ, ಧರಮನಟ್ಟಿಯ ಸೂರ್ಯವತ್ತನೇ ರಥೋತ್ಸವದ ಮುನ್ನಾದಿನವೇ (ಅಷ್ಟಮಿಯ ದಿನ) ದೇವಸ್ಥಾನದ ಗರ್ಭಗುಡಿಯ ಬಾಗಿಲ ಬೀಗ ಒಡೆದು ಆಭರಣಗಳ ಕಳುವಾದ ಸಂದರ್ಭ. ಈ ಸಮಾಚಾರವನ್ನು ಸ್ವಾಂವಜ್ಜನಿಗೆ ವಿಠ್ಠಲ ದೇವರ ಪೂಜಾರಿ, ಛತ್ರೇರ ಮಾರೋತಿ ತಿಳಿಸುತ್ತಾನೆ. ಗಡಬಡಿಸುತ್ತಿದ್ದ ಅವನನ್ನು ಸ್ವಾಂವಜ್ಜ 'ಮಾರ್ಯಾs... ನೆಪ್ಪ ಮಾಡಿಕೋ... ನಿನ್ನೆ ರಾತ್ರೀ ಕೀಲೀ ಹಾಕಿದ್ಯೋ ಇಲ್ಲೋ ನೋಡು...' ಎಂದು ವಿಚಾರಿಸುವಾಗ ವಿವರಣೆ ಕೊಡುತ್ತಾ ಮಾರೋತಿ ಉತ್ತರಿಸುತ್ತಾನೆ: 'ಅಗದೀ ಪಕ್ಕಾ ನೆನಪ ಐತ್ಯೋ ಯಜ್ಜಾ... ನಿನ್ನೆ ರಾತ್ರಿ ದ್ಯಾವಪ್ಪ ಬರಾಂವ ಇದ್ದನಲಾs... ಅದಕ್ಕs ಬಾಳೊತ್ತನಕಾ ಗುಡ್ಯಾಗ ಕಾಕೊಂತ ಕುಂತಿದ್ದಿನಿ... ...ಸರಹೊತ್ತು ಆದರೂ ದ್ಯಾವಪ್ಪ ಬರಲಿಲ್ಲ... ಆಗ... ...ಗರ್ಭದ ಗುಡೀ ಬಾಗಲಾ ಎಳದು ಕೀಲೀ ಹಾಕಿದಿನಿ...' (ಪುಟ-೧೧೦) ಇಲ್ಲಿ ಗಮನಿಸಬೇಕಾದ ಅಂಶವೆಂದರೆ: ದ್ಯಾವ ಬರಬೇಕಾಗಿದ್ದದ್ದು ಷಷ್ಟಿಯ ಸಂಜೆ. ಅಂದು ಊರಿನವರೆಲ್ಲರೂ ಊರ ದಕ್ಷಿಣ ಅಗಸಿಯಲ್ಲಿ ನಡುರಾತ್ರಿಯ ತನಕ ಕಾದಿದ್ದು, ಆತ ಬಾರದೆ, ತಂತಮ್ಮ ಮನೆಗಳಿಗೆ ಹಿಂದಿರುಗಿರುತ್ತಾರೆ. ಆ ಸಮಯದಲ್ಲಿ ಮಾರೋತಿ ಗುಡಿಯಲ್ಲೇ ಕಾದಿದ್ದ ಎಂದರೆ ಸರಿಹೋಗುತ್ತದೆ. ಮಾರೋತಿಯ ಮಾತಿನಲ್ಲಿ, '...ನಿನ್ನೆ ರಾತ್ರಿ ದ್ಯಾವಪ್ಪ ಬರಾಂವ ಇದ್ದನಲಾs...' ಎನ್ನುವುದು, ಸಪ್ತಮಿಯ ಸಂಜೆಗೆ ಆತ ಬರುವವನಿದ್ದ ಎನ್ನುವ ಅರ್ಥ ಕೊಟ್ಟು, ಹಳಿ ತಪ್ಪಿದಂತೆ ಕಾಣುತ್ತದೆ.

ಯಾವುದೇ ಕೃತಿಯಲ್ಲಿಯೇ ಆಗಲಿ, ಇಂತಹ ಕೆಲವು ಅಂಶಗಳನ್ನು ಕೇವಲವೆಂದು ಕಡೆಗಣಿಸಬಹುದು. ಅದರಿಂದ ಬರಹಗಾರರಿಗೆ ಯಾವುದೇ ತೊಂದರೆಯಿಲ್ಲ. ಓದುಗರಿಗೆ ಏನು ಅನಿಸುವುದೋ ಅದಕ್ಕೆ ಬರಹಗಾರರು ಹೊಣೆಯಲ್ಲ ಅನ್ನುವ ವಾದ ಸುಲಭ. ನಾವೇ ಬರವಣಿಗೆಯಲ್ಲಿ ತೊಡಗಿಕೊಂಡಾಗ, ಬರಹದ ಓಟದಲ್ಲಿ, ರಸಾಸ್ವಾದದಲ್ಲಿ ಉಂಟಾಗಬಹುದಾದ ಇಂತಹ- ಸಣ್ಣ ಪುಟ್ಟವೇ ಇರಲಿ- ಕಂದರಗಳು ನುಸುಳದಂತೆ ಮುಂಜಾಗ್ರತೆ ವಹಿಸಬಹುದೆಂದು ನನ್ನ ಅಭಿಪ್ರಾಯ. ಅದಕ್ಕಾಗಿಯೇ ನನಗೆ ಕಂಡುಬಂದ ಈ ಕಣ್ತೊಡಕುಗಳನ್ನು ಇಲ್ಲಿ ದಾಖಲಿಸಿದ್ದೇನೆಯೇ ಹೊರತಾಗಿ ತಪ್ಪು ಹುಡುಕಬೇಕೆನ್ನುವ ಛಲದಿಂದಲ್ಲ.

**ಮುಗಿಸುವ ಮುನ್ನ:**

'ತೇರು'- ತನ್ನ ಕಥನದ ಗಾಢತೆಯಿಂದಲೂ, ಕೃತಿಕಾರರ ಸೃಜನಶೀಲತೆ ಯಿಂದಲೂ, ಪಾತ್ರಗಳ ವೈವಿಧ್ಯತೆಯಿಂದಲೂ, ನಿರೂಪಣೆಯ ಸಹಜತೆಯಿಂದಲೂ ಓದುಗರ

ಮೆಚ್ಚುಗೆಗೆ ಪಾತ್ರವಾಗುತ್ತದೆ ಎಂದು ನನ್ನದೇ 'ತೀರ್ಪು' ಕೊಡುವ ಬದಲು, ಕೃತಿಯಲ್ಲೇ ಮುದ್ರಿತವಾಗಿರುವ ಈ ಪ್ರತಿಕ್ರಿಯೆಯನ್ನು ಬಳಸಿಕೊಳ್ಳುವುದು ಹೆಚ್ಚು ಸೂಕ್ತವಾಗಬಹುದು...

**ತೇರು...**

ತೇರು ಅಂದರೆ ತೇರು; ಧರಮನಟ್ಟಿಯ ತೇರು
ಒಂದನೇ ಮಜಲಲ್ಲಿ ಆದಿಶೇಷನ ಸ್ಪ್ರಿಂಗು
ಎರಡನೇ ಮಜಲಲ್ಲಿ ಆನೆಗಳ ಆನಿಕೆ.
ಮೂರನೇ ಮಜಲಲ್ಲಿ ಮತ್ಸ್ಯ ಕೂರ್ಮ ವರಾಹ
ಆಹ! ನಾಲ್ಕನೇ ಮಜಲಿನಲ್ಲಿ ಆಕಳು, ಕುದುರಿ.
ಐದನೇ ಮಜಲಲ್ಲಿ ಇರಿವ ಕತ್ತಿ ಕಠಾರಿ!
ಆರನೇ ಮಜಲ ಶಿಖರಕ್ಕೆ ಥಳ ಥಳ ಕಲಶ.
ಇಂಥ ಮಜಲಿನ ತೇರು– ಕಲ್ಲು ಫಲಿಗಳ ತೇರು
ಯಾವ ಕಾಣದ ಕೈಯೊ ಎಳೆಯುತ್ತ ಎಳೆಯುತ್ತ
ಕಲ್ಲು ಹಾದಿಯ ಮೇಲೆ ಕಲ್ಲು ಚಕ್ರವು ಉರುಳಿ
ಕೆಳಗಿಂದು ಮ್ಯಾಲಕ್ಕೆ ಮೇಲು ಮಜಲು ಕೆಳಕ್ಕೆ
ನಿಲ್ಲು ಹಾಂಗಿಲ್ಲಯ್ಯ ಧರಮನಟ್ಟಿಯ ರಥ
ನಿಲ್ಲು ಹಾಂಗೇ ಇಲ್ಲ ರಗುತ ತಿಲಕದ ವ್ರತ!

(ಮೊದಲ ಮುದ್ರಣಕ್ಕೆ ಮುನ್ನ ಓದಿ, ಮೆಚ್ಚಿ, ತಮ್ಮ ಸ್ಪಂದನವನ್ನು ಕವಿತೆಯಾಗಿ ಕಟ್ಟಿಕೊಟ್ಟವರು: ಡಾ. ಎಚ್. ಎಸ್. ವೆಂಕಟೇಶಮೂರ್ತಿ)

**ಕೃತಿ ವಿವರ:** ತೇರು, ರಾಘವೇಂದ್ರ ಪಾಟೀಲ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿ ಹಳ್ಳಿ, ೨೦೦೩ (೩ನೇ ಮುದ್ರಣ ೨೦೦೭), ಪು. ೧೪೮

# 'ತೊಟ್ಟಿಲು' - ಒಂದು ಅವಲೋಕನ

-ಪ್ರತಿಭಾ ಭಾಗವತ್, ಲೇಕ್‌ಫಾರೆಸ್ಟ್, ಕ್ಯಾಲಿಫೋರ್ನಿಯಾ

ಮೂರು ತಲೆಮಾರುಗಳ ಕಥೆಯನ್ನು ವರ್ಣಿಸುವ 'ತೊಟ್ಟಿಲು', ಮೊಗಳ್ಳಿ ಗಣೇಶರ ಚೊಚ್ಚಲ ಕಾದಂಬರಿ. ಈ ಕಾದಂಬರಿ ಪ್ರಕಟವಾದುದು ೨೦೦೪ರಲ್ಲಿ. ಲೇಖಕರು ಹಲವಾರು ಸಣ್ಣ ಕಥೆಗಳನ್ನು ಬರೆದಿದ್ದು, ಸಾಹಿತ್ಯಲೋಕಕ್ಕೆ ಪರಿಚಿತರೇ. ನಮ್ಮ ಸಮಾಜದಲ್ಲಿ ನಡೆಯುತ್ತಿರುವ ಜಾತಿ, ವರ್ಗಗಳ ಶೋಷಣೆ, ಮೇಲ್ವರ್ಗದವರ ದೌರ್ಜನ್ಯಪರ ದಬ್ಬಾಳಿಕೆ, ಅವುಗಳಿಂದಾಗುವ ಪರಿಣಾಮಗಳನ್ನು ಪ್ರತಿಬಿಂಬಿಸುವ ಒಂದು ಹಳ್ಳಿಯ ಜನಜೀವನದ ವರ್ಣನೆ ಈ ಕಾದಂಬರಿಯ ಕಥಾವಸ್ತು. ಈ ಒಂದು ಪುಟ್ಟ ಸುಂದರವಾದ ಹಳ್ಳಿಯಲ್ಲಿ ನಡೆದ ಒಂದು ಕಥೆ ಹಾಗೂ ಅದರ ಮುಖ್ಯ ಪಾತ್ರವರ್ಗಗಳ ವರ್ಣನೆಯ ಒಂದು ಪಕ್ಷಿನೋಟವನ್ನು ಇಲ್ಲಿ ನಿಮ್ಮ ಮುಂದೆ ಇಡುತ್ತಿದ್ದೇನೆ. ಇದೊಂದು ನಿರೂಪಣಾ ಕಾದಂಬರಿ. ನಿರೂಪಕ ಆ ಹಳ್ಳಿಯ ಜನಜೀವನವನ್ನು ಕಥೆಯ ರೂಪದಲ್ಲಿ, ಮೌಖಿಕವಾಗಿ ಒಬ್ಬ ಇನ್ನೊಬ್ಬನಿಗೆ ಹೇಳುವಂತೆ, ವರ್ಣಿಸುತ್ತ ಹೋಗುತ್ತಾನೆ. ಹಾಗಾಗಿ, ನಿರೂಪಣೆ ಒಂದರ ಹಿಂದೊಂದು ಕ್ರಮಬದ್ಧವಾಗಿ ಸಾಗುವುದಿಲ್ಲ. ಕೆಲವೊಮ್ಮೆ ಕಥೆ ಹಿಂದು-ಮುಂದಾಗಿ ಸಾಗುತ್ತಿರುತ್ತದೆ ಎಂಬ ಭಾವನೆ ಮೂಡಿಬಂದಲ್ಲಿ ಆಶ್ಚರ್ಯವಿಲ್ಲ. ಈ ತಂತ್ರ ನವ್ಯವಾಗಿದ್ದು, ಕಾದಂಬರಿಗೊಂದು ವಿಶಿಷ್ಟತೆಯನ್ನು ಕೊಟ್ಟಿದೆ ಎಂದು ನನ್ನ ಅನಿಸಿಕೆ.

ಕಥೆಗೆ ಮುಖ್ಯವಾದ ಎರಡು ಕುಟುಂಬಗಳು - ದಿಬ್ಬದ ಮನೆ ಕುಟುಂಬ ಮತ್ತು ತಗ್ಗಿನ ಕುಟುಂಬಗಳೇ ಈ ಕಾದಂಬರಿಯ ಜೀವಾಳ. ಸೌಂದರ್ಯವನ್ನೆಲ್ಲ ಸೆರೆಹಿಡಿದು, ನಾಗರಿಕತೆಯ ಅನೇಕ ಅವಶ್ಯಕತೆಗಳಿಗೆ ಬಲಿಯಾಗಿ ತನ್ನ ಸೌಂದರ್ಯವನ್ನು ಕಳೆದುಕೊಳ್ಳದೆ, ಇನ್ನೂ 'ಕನ್ಯಾವಸ್ಥೆ'ಯಲ್ಲೇ ಮೆರೆಯುತ್ತಿದ್ದ ಆ ಪುಟ್ಟ ಹಳ್ಳಿಯ ವರ್ಣನೆ ಈ ಕಾದಂಬರಿಯಲ್ಲಿ ಮನೋಜ್ಞವಾಗಿದೆ. ಜುಳು-ಜುಳು ಹರಿಯುವ ನದಿ, ಭೋರ್ಗರೆವ ಜಲಪಾತ, ನುಣುಪಾದ ಕಲ್ಲುಬಂಡೆಗಳು, ಮನಸೆಳೆವ ಸರೋವರ, ತೋಪುಗಳು, ಹೊಲಗದ್ದೆ, ಸುತ್ತ ಹರಡಿರುವ ಬಯಲು, ಊರು ಕೇರಿ - ಎಲ್ಲವೂ ಆ ಹಳ್ಳಿಯ ಸೌಂದರ್ಯವನ್ನು

ಹೆಚ್ಚಿಸಿವೆ. ಒಂದು ದಂತಕಥೆಯ ಹಿನ್ನೆಲೆ ಇರುವ 'ಕಿನ್ನರಿ ಶಿಲೆ' ಈ ಕಾದಂಬರಿಗೆ ಅಪೂರ್ವ ಮಹತ್ವವನ್ನು ನೀಡಿದೆ. ಈ ದಂತಕಥೆಯ ವರ್ಣನೆ ಹೀಗಿದೆ: ದಿಬ್ಬದ ಮನೆಯ ಪೂರ್ವಿಕನೊಬ್ಬ ಅಲ್ಲಿಗೆ ವಿಹಾರಕ್ಕೆಂದು ಬಂದ ಕಿನ್ನರಿಯೊಬ್ಬಳನ್ನು ಮೋಹಿಸಿ, ಮೋಸಪಡಿಸಿ, ಕೆಡಿಸುತ್ತಾನೆ. ಮರ್ತ್ಯಲೋಕದವನ ಸ್ಪರ್ಶದಿಂದ ಅಪವಿತ್ರಳಾದ ಆ ಕಿನ್ನರಿ ಶಾಪಗ್ರಸ್ತಳಾಗಿ, ಪುನಃ ಕಿನ್ನರಲೋಕಕ್ಕೆ ಮರಳಲಾಗದೆ, ಅಲ್ಲೇ ನೆಲೆಸುವಂತಾಗುತ್ತದೆ. ಆ ಕಿನ್ನರಿಯ ಉದ್ದೇಶ ಪುನಃ ಕಿನ್ನರಲೋಕಕ್ಕೇ ವಾಪಾಸಾಗಲೆಂಬುದು. ಆದರೆ, ಶಾಪದಿಂದಾಗಿ ಅವಳ ಆ ಆಸೆ ಕೈಗೂಡುವುದಿಲ್ಲ. ತನ್ನ ತ್ರಿಶಂಕು ಸ್ಥಿತಿಗೆ ಕಾರಣನಾದ ದಿಬ್ಬದ ಮನೆಯ ಆ ಪೂರ್ವಿಕನ ವಂಶ ಉದ್ಧಾರವಾಗದಂತೆ ಆಕೆ ಅವನಿಗೆ ಶಾಪ ಕೊಡುತ್ತಾಳೆ. ದಿಬ್ಬದ ಮನೆಯ ಅವನತಿಯನ್ನು ನೋಡಲೆಂದೋ ಏನೋ, ಅವಳು ಒಂದು ಸುಂದರ ಶಿಲೆಯಾಗಿ ಅಲ್ಲಿ ಸ್ಥಾಪಿತಳಾಗುತ್ತಾಳೆ. ಈ ಹಿನ್ನೆಲೆ ದಂತಕಥೆಯಾಗಿದ್ದರೂ, ಆ ಹಳ್ಳಿಯಲ್ಲಿ ಮುಂದೆ ನಡೆಯುವ ಎಲ್ಲ ಆಗು–ಹೋಗುಗಳಿಗೆ 'ಮುನ್ನುಡಿ' ಬರೆದಂತಿದೆ.

ಹಿಂದೆ ತಿಳಿಸಿದಂತೆ ಆ ಹಳ್ಳಿಯಲ್ಲಿ ಒಂದು ದಿಬ್ಬದ ಮನೆ, ಮತ್ತೆಲ್ಲವು ತಗ್ಗಿನವು. ದಿಬ್ಬದ ಮನೆ ಬಹು ದೊಡ್ಡಮನೆ, ಮನೆ ತುಂಬಾ ಜನ. ಅದು ಜಮೀನುದಾರರ ಕುಟುಂಬ. ಅವರು ತಗ್ಗಿನ ಮನೆಯ ಕುಟುಂಬದವರನ್ನು ಕೆಲಸಕ್ಕಾಗಿ ಉಪಯೋಗಿಸಿಕೊಂಡು, ಶ್ರೀಮಂತರಾಗಿರುತ್ತಾರೆ. ಅಲ್ಲಿಯ ನಿವಾಸಿಗಳೆಲ್ಲರೂ ಹೃದಯವಂತಿಕೆಯನ್ನು ಕಳೆದುಕೊಂಡವರಂತಿದ್ದರು. ತಾತ, ದೊಡ್ಡಪ್ಪ, ಕಿರಿಯವ, ಕೇಶವಾನಂದ, ಹಿರಿಯಜ್ಜಿ, ಕಿರಿಯಜ್ಜಿ, ವೆಂಕಟಲಕ್ಷ್ಮಿ, ಅಶ್ವಿನಿ – ಮುಂತಾದವರು ದಿಬ್ಬದ ಕುಟುಂಬದ ಪ್ರಮುಖ ವ್ಯಕ್ತಿಗಳಾಗಿ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರಲ್ಲಿ, ಕೇಶವಾನಂದ, ಅವನ ಹೆಂಡತಿ ವೆಂಕಟಲಕ್ಷ್ಮಿ, ಮಗಳು ಅಶ್ವಿನಿಯರ ಪಾತ್ರ ವಿಶೇಷವಾದುದು ಹಾಗೂ ದಿಬ್ಬದ ಮನೆಯವರ ಸ್ವಭಾವಕ್ಕೆ ಭಿನ್ನವಾದುದು. ದಿಬ್ಬದ ಮನೆಯವರ ಶೋಷಣೆಯ ಫಲವಾಗಿ ತಗ್ಗಿನ ಮನೆಯವರು ಬಡವರಾಗಿಯೇ ಉಳಿಯುತ್ತಾರೆ. ದೊದಿಯ, ಕಾಪೀರ, ಭೀಮಪ್ಪ, ದೊಡ್ಡಯ್ಯ, ಮಲ್ಲಿ, ಮದನ – ಮುಂತಾದವರು ತಗ್ಗಿನವರಲ್ಲಿ ಪ್ರಾಮುಖ್ಯರು. ಕಾದಂಬರಿಯ ಇನ್ನೊಂದು ವೈಶಿಷ್ಟ್ಯವೆಂದರೆ, ಅಲ್ಲಿ ಬರುವ ದಿಬ್ಬದ ಮನೆಯ ಹೆಚ್ಚಿನ ಪಾತ್ರಗಳಿಗೆ ಹೆಸರಿಲ್ಲದೇ ಇರುವುದು. ಹಾಗಾಗಿ ದೊಡ್ಡಪ್ಪ, ತಾತ, ಕಿರಿಯಜ್ಜಿ, ಹಿರಿಯಜ್ಜಿ, ಕಿರಿಯವ, ಆ ಕಿರಿಯವ ಕೆಡಿಸಿದ ಮೂಕಿ – ಮುಂತಾದ ಪಾತ್ರಗಳು ಹೆಸರಿಲ್ಲದೇ ಕಾಣಿಸಿಕೊಳ್ಳುತ್ತವೆ.

ನೀತಿ–ನಡತೆಗಳನ್ನು ಕಳೆದುಕೊಂಡ ದಿಬ್ಬದ ಮನೆಯವರಲ್ಲಿ ಕಿರಿಯವನದೇ ಒಂದು ವಿಧದಲ್ಲಿ ಮೇಲುಗೈ! ಅವನು ಒಮ್ಮೆ ಮೂಕಿಯ ಮೇಲೆ ಅತ್ಯಾಚಾರವೆಸಗುತ್ತಾನೆ. ಆ ಪಾಪದ ಪಿಂಡವೇ ಈ ಕಾದಂಬರಿಯ ನಿರೂಪಕ! ಕಿರಿಯವನ ಆ ಅತ್ಯಾಚಾರವೇ ಈ ಕಾದಂಬರಿಯ ಹುಟ್ಟಿಗೂ ಕಾರಣವಾದುದು ಒಂದು ವಿಪರ್ಯಾಸವೇ! ತನ್ನನ್ನು ಮದುವೆಯಾಗಲು ಬಯಸಿದನೆಂದೇ ಊಹಿಸಿಕೊಂಡ ಮೂಕಿ, ಕಿರಿಯವನನ್ನು

ಹುಡುಕುತ್ತಾ ದಿಬ್ಬದ ಮನೆಗೆ ಬರುತ್ತಾಳೆ. ಅವಳ ಸ್ಥಿತಿ ನೋಡಿ ಕನಿಕರಿಸಿ ಹಿರಿಯಜ್ಜಿ ಆಶ್ರಯ ಕೊಡುತ್ತಾಳೆ. ಮೂಕಿ ದಿಬ್ಬದ ಮನೆಯ ಸೇವಕಿಯಾಗುತ್ತಾಳೆ. ಅವಳೊಂದು ಅಪರೂಪದ ವ್ಯಕ್ತಿ. ಅವಳಿಗಾದ ಅನ್ಯಾಯವನ್ನು ಮರೆತು ದಿಬ್ಬದ ಮನೆಯ ಏಳ್ಗೆಗಾಗಿ ದುಡಿಯುತ್ತಾಳೆ. ಅವಳ ಮಗ, ಯಾ, ಈ ಕಾದಂಬರಿಯ ನಿರೂಪಕನನ್ನೂ ಹಿರಿಯಜ್ಜಿಯೆ ಸಾಕುತ್ತಾಳೆ. ಹಾಗಾಗಿ ನಿರೂಪಕನೂ ದಿಬ್ಬದ ಮನೆಯವರಲ್ಲೊಬ್ಬ ನಾಗುತ್ತಾನೆ. ಮೂಕಿ ಮಾಡುವ ರಾಗಿ ರೊಟ್ಟಿಯ ವರ್ಣನೆ ಬಾಯಿಯಲ್ಲಿ ನೀರು ಬರಿಸುತ್ತದೆ. ಅವಳ ವ್ಯಕ್ತಿತ್ವವೇ ಉದಾರವಾದದ್ದು. ತನ್ನ ಸಂಕಟಗಳನ್ನೆಲ್ಲ ಇನ್ನೊಬ್ಬರಲ್ಲಿ ಹೇಳಿಕೊಳ್ಳಲು ಅವಳಿಗೆ ಮಾತು ಬಾರದು. ಹೃದಯದಲ್ಲಿ ಕುದಿಯುತ್ತಿದ್ದ ಎಲ್ಲ ದುಃಖಗಳಿಗೆ ಅನುಕಂಪದ ಕಿವಿಕೊಡುತ್ತಿದ್ದುದು ಒಂದು ಸಂಪಿಗೆ ಮರ. ಅವಳ ಮತ್ತು ಸಂಪಿಗೆ ಮರದ ಸಂಬಂಧ ಬಹು ಮನೋಜ್ಞವಾಗಿದೆ. ಸಂಪಿಗೆ ಮರವೇ ಅವಳ ಆತ್ಮೀಯ ಗೆಳತಿ. ರಾತ್ರಿಯೆಲ್ಲಾ ಅವಳು ಆ ಮರವನ್ನು ತಬ್ಬಿಕೊಂಡು ಅಳುತ್ತಿರುವ ವರ್ಣನೆಯನ್ನು ಓದುತ್ತಿದ್ದಂತೆ, ಎಂಥವರ ಹೃದಯವೂ ತಲ್ಲಣಿಸದಿರಲಾರದು! ಅವಳು ಒಂದು ರಾತ್ರಿ ರಾಗಿ ಬೀಸುತ್ತ, ಬೀಸುವ ಕಲ್ಲಿನ ಗೂಟ ಹಿಡಿದುಕೊಂಡೇ ಇದ್ದಕ್ಕಿದ್ದಂತೆ ಅಕಾಲಮರಣಕ್ಕೆ ತುತ್ತಾಗುತ್ತಾಳೆ. ತನ್ನ ಹೆತ್ತತಾಯಿಯ ಅಕಾಲ ಅಗಲುವಿಕೆಯಿಂದಾಗಿ ಕಥಾನಿರೂಪಕನಲ್ಲಿ ಮೂಡಿದ ದುಃಖದ ಆಳದಲ್ಲಿ ಓದುಗರೂ ಪಾಲುದಾರರಾಗುತ್ತಾರೆ.

ಹೀಗಿರುತ್ತ ಒಮ್ಮೆ ಮೈಸೂರಿನ ಮಹಾರಾಜರು ಹಳ್ಳಿಗೆ ಬರುತ್ತಾರೆ. ತಗ್ಗಿನವರು ಮಹಾರಾಜರ ಮನೋರಂಜನೆಗಾಗಿ ನಗಾರಿ ಪ್ರದರ್ಶನ ಮಾಡುತ್ತಾರೆ. ದೊದಿಯನೂ ಕಾಪೀರನೂ ಹೆಬ್ಬುಲಿಗಳಾಗಿ, ಮಹಾರಾಜರು ಬಹುವಾಗಿ ಮೆಚ್ಚುವಂತೆ ನರ್ತಿಸುತ್ತಾರೆ. ಆ ನರ್ತನ ಮಹಾರಾಜರಿಗೆ ನಿಜವಾದ ಹುಲಿಗಳ ನೆನಪನ್ನು ಕೊಡುವಷ್ಟು ಪರಿಣಾಮಕಾರಿಯಾಗಿತ್ತು. ಕೃಷ್ಣರಾಜರೂ ಸ್ಫೂರ್ತಿಗೊಂಡು ತಗ್ಗಿನವರೊಂದಿಗೆ ಕುಣಿದು ಆನಂದಪಡುತ್ತಾರೆ. ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ ತಗ್ಗಿನವರಿಗೆ ನದಿ ಬಯಲಿನ ಜಾಗವನ್ನು ಕೊಡಿಸುತ್ತಾರೆ. ತಗ್ಗಿನವರು ಬಲು ಶ್ರಮದಿಂದ ದುಡಿದು ಅಲ್ಲೊಂದು ಫಲವತ್ತಾದ ತೋಟವನ್ನು ಸೃಷ್ಟಿಸುತ್ತಾರೆ.

ಇದು ದಿಬ್ಬದ ಮನೆಯ ತಾತನ ಹೊಟ್ಟೆಕಿಚ್ಚಿಗೆ ಕಾರಣವಾಗುತ್ತದೆ. ತೋಟ ತನ್ನ ಕೈ ಬಿಟ್ಟ ದುಃಖ ಹೇಳಿಕೊಳ್ಳಲಾರದೆ ತನ್ನೊಳಗೇ ಏನೇನನ್ನೋ ಲೆಕ್ಕಿಸುತ್ತಾ ಒಂಟಿಯಾಗಿರಲು ಅವನು ಬಯಸುತ್ತಾನೆ. ತನ್ನ ಸಂಕಟವನ್ನು ಹಿತ್ತಲಿನ ಮರಗಿಡ-ಗಳೊಂದಿಗೆ ಹಂಚಿಕೊಳ್ಳುತ್ತಾನೆ. ಹಿರಿಯಜ್ಜಿಯ ಮೇಲೆ ವಿನಾಕಾರಣ ಸಿಟ್ಟು ಮಾಡುತ್ತಾನೆ. ಕೊಟ್ಟಿಗೆಯಲ್ಲಿದ್ದ ಮೂಕ ಪ್ರಾಣಿಗಳನ್ನು ಹಿಂಸಿಸುತ್ತಾನೆ. ಆದರೆ, ಆ ಸಮಯದಲ್ಲೆಲ್ಲ ದೊಡ್ಡಪ್ಪನ ತಲೆ ಬೇರೆ ರೀತಿಯಾಗಿಯೇ ಯೋಚಿಸುತ್ತಿರುತ್ತದೆ. ತಗ್ಗಿನವರು ತಮ್ಮ ಫಸಲನ್ನೆಲ್ಲಾ ಮೈಸೂರಿಗೆ ಕೊಂಡೊಯ್ಯುವ ಯೋಚನೆಯಲ್ಲಿರುತ್ತಾರೆ. ಅವರಿಗೆ ಮುಖಂಡ ಭೀಮಪ್ಪ ಹಾಗೂ ಸ್ವಾತಂತ್ರ್ಯ ಹೋರಾಟಗಾರ ದೊಡ್ಡಯ್ಯ. ಅಷ್ಟರಲ್ಲಿ

ದೊಡ್ಡಪ್ಪ, ಅರಮನೆಯ ಅಧಿಕಾರಿಗಳ ಕೈ ಬೆಚ್ಚಗೆ ಮಾಡಿ ಮಹಾರಾಜರು ತಗ್ಗಿನವರಿಗೆ ಕೊಟ್ಟ ಆಸ್ತಿಯನ್ನು ದಿಬ್ಬದ ಮನೆಯವರ ಹೆಸರಿಗೆ ಬರೆಸಿಕೊಂಡು ಬರುತ್ತಾನೆ. ಇದನ್ನು ಪ್ರತಿಭಟಿಸಿ ತಗ್ಗಿನ ಮನೆಯರು ದೊಡ್ಡಯ್ಯನ ಆದೇಶದಂತೆ ಉಪವಾಸ ಸತ್ಯಾಗ್ರಹ ನಡೆಸುತ್ತಾರೆ. ಅವರನ್ನೆಲ್ಲಾ ಪೊಲೀಸಿನವರು ಎತ್ತಿ ಹಾಕುತ್ತಾರೆ. ಭೀಮಪ್ಪ, ದೊಡ್ಡಯ್ಯ, ಕಾಪೀರ, ದೊದಿಯ ಎಲ್ಲರನ್ನೂ ಜೈಲಿಗೆ ಹಾಕಿ ಕೊಡಬಾರದ ಹಿಂಸೆ ಕೊಡುತ್ತಾರೆ. ದೊಡ್ಡಯ್ಯ ಹಾಗೂ ಭೀಮಪ್ಪ ಚಿತ್ರಹಿಂಸೆಗೆ ತಮ್ಮ ಜೀವ ಕೊಡುತ್ತಾರೆ. ಇದು ದಿಬ್ಬದ ಮನೆಯವರ ದಬ್ಬಾಳಿಕೆಗೊಂದು ಉದಾಹರಣೆ. ತಗ್ಗಿನವರ ಕೇರಿಯಲ್ಲೀಗ ಸ್ಮಶಾನ ಮೌನ. ಹೆಂಗಸರೆಲ್ಲ ಕಿನ್ನರ ಶಿಲೆಯ ಬೆಟ್ಟದಲ್ಲಿ ಅಡಗಿಬಿಡುತ್ತಾರೆ.

ದೊಡ್ಡಪ್ಪ, ತಾತನ ನಂತರದ ದಿಬ್ಬದ ಮನೆಯ ಹಿರಿಯ ತಲೆ. ಬಹಳ ಚಾಣಾಕ್ಷ ಆದರೆ ಅಷ್ಟೇ ಕ್ರೂರಿ. ಅವನ ಸಂಗಾತಿ ನಾಗ, ದೊಡ್ಡಪ್ಪನ ಕುಕೃತ್ಯಗಳಿಗೆಲ್ಲ ಸಮಾನ ಪಾಲುದಾರ. ಹಳ್ಳಿಯಲ್ಲಿ ಸುಗ್ಗಿ ಹಬ್ಬ ತುಂಬಾ ವಿಜೃಂಭಣೆಯಿಂದ ನಡೆಸುತ್ತಿದ್ದ ಹಬ್ಬ. ಆಗ ಸರೋವರಕ್ಕೆ ಒಂದು ನರಬಲಿ ಕೊಡಬೇಕೆಂಬ ಒಂದು ಅಮಾನುಷ ಸಂಪ್ರದಾಯ ಹಳ್ಳಿಯಲ್ಲಿ ನಡೆದು ಬಂದಿದೆ. ಕಾದಂಬರಿಯಲ್ಲಿ ಬರುವ ಈ ಒಂದು ನರಬಲಿಯ ವಿವರ ಎಂಥವರ ಗುಂಡಿಗೆಯನ್ನೂ ನಡುಗಿಸುತ್ತದೆ. ಒಂದು ಸುಗ್ಗಿ ಹಬ್ಬದ ದಿನದ ರಾತ್ರಿ ನಿರೂಪಕ ಸರೋವರದ ಬಳಿ ಒಂದು ಮರದ ಹಿಂದೆ ಕುಳಿತಿದ್ದಾಗ ಅಲ್ಲಿಗೆ ಕೆಲವರು ಒಬ್ಬ ಹುಡುಗನೊಂದಿಗೆ ಬರುವುದನ್ನು ನೋಡುತ್ತಾನೆ. ಅವರು ಸಮೀಪಿಸಿದಾಗಲೇ ಅವರ ಜೊತೆಗೆ ಬಂದ ಆ ತರುಣ, ಮಲ್ಲಿಯ ಮಗ ಹಾಗೂ ತನ್ನ ಪರಮಮಿತ್ರ, ಮದನನೆಂದು ಅವನಿಗೆ ತಿಳಿಯುವುದು. ಒಬ್ಬ ಕೆಲಸದವನು ಮಾರುದ್ದದ ಕತ್ತಿ ಹಿಡಿದದ್ದನ್ನು ನೋಡಿದಾಗ, ಅವರು ಮದನನನ್ನು ನರಬಲಿಗೆ ತಂದಿದ್ದಾರೆಂದು ಅವನ ಅರಿವಿಗೆ ಬರುತ್ತದೆ. ಮದನನಿಗೆ ಓಡಿ ಹೋಗು ಎಂದು ಕೂಗಿ ಹೇಳಬೇಕೆಂದೆನಿಸಿದರೂ ಅವನಿಗೆ ಧ್ವನಿಯೇ ಹೊರಡುವುದಿಲ್ಲ. ತನ್ನನ್ನು ರಕ್ಷಿಸುವಂತೆ ಮದನ ದೊಡ್ಡಪ್ಪನಲ್ಲಿ ಬೇಡಿಕೊಳ್ಳುತ್ತಾನೆ. ದೊಡ್ಡಪ್ಪ ಕೆಲಸಗಾರನಿಗೆ ಕೊಲ್ಲು ಎಂದು ಆದೇಶ ಕೊಟ್ಟಾಗಲೇ ಮುಗ್ಧ ಮದನನಿಗೆ ಅವೆಲ್ಲಾ ದೊಡ್ಡಪ್ಪನದೇ ಕುತಂತ್ರವೆಂಬ ಅರಿವಾಗುವುದು. ಮದನನ ಚೀತ್ಕಾರವನ್ನು ಕೇಳುವುದಂತೂ ನಿರೂಪಕನಿಗೆ ಅಸಾಧ್ಯವಾಗುತ್ತದೆ. ಅಲ್ಲಿ ಸೇರಿದವರೆಲ್ಲ ನರಬಲಿ ಫಲಿತವಾದ ಸಂತೋಷದಲ್ಲಿ ಶವದ ಸುತ್ತಲೂ ನರ್ತಿಸುತ್ತಾರೆ. ಶವವನ್ನು ಬಂದೂಕಿನಿಂದ ತಿವಿದಾಗ ದೊಡ್ಡಪ್ಪನಿಗೆ ಗೊತ್ತಾಗುತ್ತದೆ, ಅದು ಕಲ್ಲು, ಮದನನ ಶವವಲ್ಲ ಎಂದು. ಯಾವುದೋ ಮಾಯವೆಂಬಂತೆ ಮದನ ಅಲ್ಲಿಂದ ತಪ್ಪಿಸಿಕೊಳ್ಳುತ್ತಾನೆ. ಆ ರಾತ್ರಿಯೆಲ್ಲ ಜನರು ಅವನಿಗಾಗಿ ಎಲ್ಲ ಕಡೆ ಹುಡುಕಿದರೂ ಅವನು ಪತ್ತೆಯಾಗುವುದಿಲ್ಲ. ಸರೋವರಕ್ಕೆ ವರ್ಷವೂ ಸಿಗುವ ನರಬಲಿ ಸಿಗದೆ ತಾವು ಸರೋವರದ ಕೋಪಕ್ಕೆ ಗುರಿಯಾದೆವು – ಎಂದು ದೊಡ್ಡಪ್ಪ ವ್ಯಗ್ರನಾಗಿ ಮೂರು ನಾಲ್ಕು ದಿನ ಮನೆಗೇ ಬರುವುದಿಲ್ಲ. ಈ ಘಟನೆಯೊಂದೇ ಸಾಕು ದೊಡ್ಡಪ್ಪನ

ದುಷ್ಪವರ್ತನೆಯನ್ನು ವರ್ಣಿಸಲು. ಅವನ ಬಂದೂಕಿಗೆ ಅದೆಷ್ಟು ಅಸಹಾಯಕರು ಬಲಿಯಾಗಿದ್ದಾರೋ! ನಾಗ ಎಷ್ಟೊಂದು ಮುಗ್ಧ ಹೆಣ್ಣುಮಕ್ಕಳ ಬಾಳನ್ನು ದೊಡ್ಡಪ್ಪನ ಮೋಜಿಗಾಗಿ ಹಾಳು ಮಾಡಿದ್ದನೋ! ತೆಂಗು, ರಾಗಿಯ ಬೇಸಾಯ ಮಾಡುತ್ತಿದ್ದ ದೊಡ್ಡಪ್ಪನಿಗೆ ತೆಂಗಿನ ತೋಟದಿಂದ ಹೆಂಡ ಇಳಿಸುವುದು ಲಾಭದಾಯಕವೆನಿಸಿ ಹೆಂಡದ ವ್ಯಾಪಾರಕ್ಕೆ ತೊಡಗುತ್ತಾನೆ. ಅದು ತನ್ನ ಮೋಜಿನ ಜೀವನಕ್ಕೆ ನೆರವಾಗುವುದೆಂಬುದು ಅವನ ಹಂಬಲವಿರಬೇಕು. ಆದರೆ, ಮುಂದೆ ಬರುವ ಕಷ್ಟದ ದಿನಗಳಿಗೆ ನಾಂದಿಯೋ ಎಂಬಂತೆ ತೆಂಗಿನ ತೋಟ ಮೂರೇ ವರ್ಷಗಳಲ್ಲಿ ಬರಡಾಗುತ್ತದೆ.

ಇದೇ ಸಮಯದಲ್ಲಿ ಒಂದು ಹೆಸರಾಂತ ವಿದೇಶಿ ಉದ್ಯಮ ಸಂಸ್ಥೆ ಅಲ್ಲೊಂದು ಗಣಿ ಉದ್ಯಮ ಪ್ರಾರಂಭಿಸುತ್ತದೆ. ಊರಿನ ಆಳು ಮಕ್ಕಳೆಲ್ಲಾ ಈಗ ಗಣಿ ಕಾರ್ಮಿಕರು. ಅವರನ್ನೀಗ ಕುಡಿತದ ಕಬಂಧಬಾಹು ಆಲಂಗಿಸಿದೆ. ಜೂಜಾಟ ಅವರ ಮನೆಯಲ್ಲೀಗ ನೆಲೆಸಿದೆ. ಇವೆರಡರ ಹಿಡಿತವನ್ನು ಬಿಡಿಸಿ ಸ್ವತಂತ್ರರಾಗುವ ಶಕ್ತಿಯನ್ನು ಅವರು ಕಳೆದುಕೊಂಡಿದ್ದಾರೆ. ಮನಸ್ಸಿಗೆ, ಮೈಗೆ ಆಹ್ಲಾದ ಕೊಡುತ್ತಿದ್ದ ಜಲಪಾತ, ಗಣಿ ಉದ್ಯಮದಿಂದಾಗಿ ಕಲುಷಿತಗೊಂಡು ಕೆಂಪಾಗಿಹೋಗಿದೆ. ಜೀವಂತವಾಗಿ ಊರಿಗೆ ಜೀವ ಕೊಡುತ್ತಿದ್ದ ಸರೋವರ ಪರಿಸರ ನಾಶದಿಂದ ಬದುಕಿದ್ದೂ ಜೀವ ಕಳಕೊಂಡಂತಿದೆ. ಹಳ್ಳಿಯ ಸುಂದರ ಪರಿಸರವೆಲ್ಲ ನಾಶವಾಗುತ್ತದೆ.

ದೇಶಕ್ಕೀಗ ಸ್ವಾತಂತ್ರ್ಯ ಬಂದಿದೆ. ದೊಡ್ಡಪ್ಪನ ದುರ್ವರ್ತನೆಗಳೇ ಅವನನ್ನೀಗ ತಿನ್ನುತ್ತಿವೆ. ಕಂಡ ಕಂಡಲ್ಲಿ ಗುಂಡು ಹಾರಿಸುತ್ತಾ ಜನರನ್ನು ಹೆದರಿಕೆಯಿಂದ ತತ್ತರಿಸುವಂತೆ ಮಾಡುತ್ತಿದ್ದಾನೆ. ವಿದೇಶಿ ಕಂಪೆನಿ ಅವನಿಗೊಂದು ರಿವೊಲ್ವರ್ ಕೊಟ್ಟ ಮೇಲಂತೂ ಜನ ಅವನಿಗೆ ಇನ್ನಷ್ಟು ಹೆದರುತ್ತಿದ್ದಾರೆ. ಹೀಗಿರುತ್ತ, ಒಂದು ದಿನ, ಅವನೂ ನಾಗನೂ ಇದ್ದಕ್ಕಿದ್ದಂತೆ ಕಣ್ಮರೆಯಾಗುತ್ತಾರೆ. ಯಾರೋ ಅವರಿಬ್ಬರನ್ನೂ ಸೀಳಿ, ಅವರ ಅವಯವಗಳನ್ನು ಹದ್ದು, ಕಾಗೆ ಹಾಗೂ ನರಿಗಳಿಗೆ ಎಸೆಯುತ್ತಾರೆ. ದೌರ್ಜನ್ಯವೇ ತನ್ನ ಬದುಕಿನ ಗುರಿ ಎಂದು ತಿಳಿದಿದ್ದ ದೊಡ್ಡಪ್ಪನ ಬದುಕು ಹೀಗೆ ದೌರ್ಜನ್ಯಕ್ಕೊಳಗಾಗಿದ್ದುದು ಒಂದು ವಿಪರ್ಯಾಸವೇ! ಅವನ ಕೊಲೆಗಾರರಂತೂ ಕಡೆಯವರೆಗೂ ನಿಗೂಢರಾಗಿಯೇ ಉಳಿಯುತ್ತಾರೆ. ದೊಡ್ಡಪ್ಪನ ಕಾಲದ ನಂತರ ಮನೆತನವನ್ನು ಮುಂದುವರಿಸಿಕೊಂಡು ಹೋಗಲು ಕಥಾನಿರೂಪಕನ 'ಚಡ್ಡಿ ಹರುಕ' ಅಪ್ಪನನ್ನು (ಅಂದರೆ, ಕಿರಿಯವನನ್ನು) ಹುಡುಕಿ ತರಲು ಕಿರಿಯಜ್ಜಿ ಏರ್ಪಾಡು ಮಾಡುತ್ತಾಳೆ. ಆದರೆ, ವಿಲಾಸಪ್ರಿಯನಾಗಿದ್ದ ಅವನು – ತಾನು ಬಸವಿಯರೊಂದಿಗೆ ಸಂತೋಷವಾಗಿರುವೆ, ದೊಡ್ಡಪ್ಪನ ದುರಂತ ಮರಣಕ್ಕೂ, ತನಗೂ ಏನೂ ಸಂಬಂಧವಿಲ್ಲ –ಎಂದು ತಿಳಿಸುತ್ತಾನೆ. ಇದನ್ನೆಲ್ಲಾ ನೋಡಲಾರದೆ ತಾತ ಹಿಮಾಲಯಕ್ಕೆ ದೇಶಾಂತರ ಹೋಗಿಬಿಡುತ್ತಾನೆ.

ಈಗ ದಿಬ್ಬದ ಮನೆಯ ಕಾರುಭಾರವೆಲ್ಲಾ ಅಜ್ಜಿಯರದೇ. ನಾಯಿಯಂತೆಯೇ ತಿರುಗುತ್ತಿದ್ದ ದಿಬ್ಬದ ಕಿರಿಯವ ನಾನಾ ರೀತಿಯ ಖಾಯಿಲೆ ಸಂಪಾದಿಸಿ, ಕೊನೆಗೆ ಮನೆಗೆ ಬಂದು ಬೀಳುತ್ತಾನೆ. ನಾಯಿಯಂತೇ ಆಗಿದ್ದಾನೆ; ನಾಯಿಯಂತೇ ಬಟ್ಟಲನ್ನು ನೆಕ್ಕುತ್ತಾನೆ. ಇದ್ದಲ್ಲೇ ಮಲ–ಮೂತ್ರ ಮಾಡಿಕೊಳ್ಳುತ್ತಾನೆ. ದಿಬ್ಬದ ಮನೆಯ ಅಧಿಕಾರಕ್ಕೆ ಅರ್ಹರಾದವರ್‍ಯಾರೂ ಇಲ್ಲದಿರುವಾಗ, ಹಿರಿಯಜ್ಜಿ ನಿರೂಪಕನೇ ಆ ಪಟ್ಟಕ್ಕೆ ವಾರಸುದಾರನೆಂಬ ನಿರ್ಣಯಕ್ಕೆ ಬರುತ್ತಾಳೆ. ಅವನನ್ನು ಹುಡುಕಿ ತರಲು ಅಶ್ವಿನಿಯನ್ನು ಪಟ್ಟಣಕ್ಕೆ ಕಳುಹಿಸುತ್ತಾಳೆ. ಕೌಶಲ್ಯೆ ಎಂಬವಳೊಡನೆ ನಿರೂಪಕನ ಮದುವೆ ಏರ್ಪಡಿಸಿ, ದಿಬ್ಬದ ಮನೆಯ ವಂಶೋದ್ಧಾರ ಮಾಡುವ ಹಂಬಲ ಹಿರಿಯಜ್ಜಿಯದು. ನಿರೂಪಕನಿಗೆ ಮದುವೆಯಾಗುವ ಮನಸ್ಸಿದ್ದರೂ, ಜನ್ಮ ಕೊಟ್ಟ ತನ್ನ ತಂದೆಯ ಅತ್ಯಾಚಾರವನ್ನು ನೆನೆಸಿಕೊಂಡಾಗ, ಅವನಿಗೆ ಸಂಸಾರದಿಂದ ದೂರ ಪಲಾಯನ ಮಾಡಬೇಕೆನಿಸುತ್ತದೆ.

ಈ ಹೊತ್ತಿಗೆ 'ಉಳುವವನೇ ಹೊಲದೊಡೆಯ' ಎಂಬ ಕಾಯಿದೆ ಬಂದಿದೆ. ತಗ್ಗಿನ ಮಲ್ಲಿಯೂ ದಿಬ್ಬದ ಮನೆಯ ಮಕ್ಕಳಿಗೆಲ್ಲಾ ಪ್ರೀತಿಯ ಧಾರೆ ಎರೆದಿದ್ದಳು. ಅವಳಿಗಿದ್ದ ಒಬ್ಬನೇ ಮಗ ಚಿಕ್ಕಂದಿನಲ್ಲೇ ದೊಡ್ಡಪ್ಪನ ದುಷ್ಟವರ್ತನೆಯಿಂದ ತಪ್ಪಿಸಿಕೊಳ್ಳಲು ಊರಿಂದ ಓಡಿ ಹೋಗಿರುತ್ತಾನೆ. ಕಡೆಯವರೆಗೂ ಮಗ ಮದನನ ಮುಖ ನೋಡದೇ ಅದೇ ದುಃಖದಲ್ಲೇ ಮಲ್ಲಿ ತೀರಿಕೊಳ್ಳುತ್ತಾಳೆ. ದೊದಿಯ, ಕಾಪೀರ ಸೋತುಹೋಗಿದ್ದರೂ, ದಿಬ್ಬದ ಮನೆಯವರಿಂದಾದ ಅನ್ಯಾಯವನ್ನು ಅವರು ಮರೆತಿರಲಿಲ್ಲ. ತಗ್ಗಿನ ಮನೆಯವರು ದಿಬ್ಬದ ಮನೆಯವರನ್ನು ಕ್ಷಮಿಸುವ ಪರಿಸ್ಥಿತಿಯಲ್ಲಿ ಇರಲೇ ಇಲ್ಲ. ಒಂದು ರಾತ್ರಿ ತಗ್ಗಿನವರು ದಿಬ್ಬದ ಮನೆಗೆ ಲಗ್ಗೆ ಇಡುತ್ತಾರೆ. ಎಲ್ಲಾ ಜಮೀನಿನ ಕಾಗದ ಪತ್ರ ಕೊಡುವಂತೆ ಆದೇಶಿಸುತ್ತಾರೆ. ದೊಡ್ಡಪ್ಪ ಸತ್ತ ಸೂತಕದ ದಿನಗಳೇ ಇನ್ನೂ ಕಳೆದಿರಲಿಲ್ಲ. ಕಿರಿಯಜ್ಜಿಯ ಮೈ ಮೇಲೆ ದೊಡ್ಡಪ್ಪನೇ ಬಂದಂತೆ ಅವಳು ಸತ್ತರೂ ಬಾಗಿಲು ತೆಗೆಯುವುದಿಲ್ಲ ಎಂದು ಘರ್ಜಿಸುತ್ತಾಳೆ. ಕಾಪೀರ, ದೊದಿಯ ಈಗ ಸೇಡು ತೀರಿಸಿಕೊಳ್ಳಲು ತಯಾರಾಗಿಯೇ ಬಂದಿದ್ದಾರೆ. ಪೊಲೀಸು ಕೂಡಾ ತಗ್ಗಿನವರ ಕಡೆಯೇ. ಎಷ್ಟು ಸಮಜಾಯಿಸಿದರೂ ಕಿರಿಯಜ್ಜಿ ಬಾಗಿಲು ತೆಗೆಯಗೊಡುವುದಿಲ್ಲ. ತಗ್ಗಿನವರೆಲ್ಲಾ ದಿಬ್ಬದ ಮನೆಯ ಬಾಗಿಲೊಡೆದು ಬರುತ್ತಾರೆ. ಕಿರಿಯಜ್ಜಿಯನ್ನು ಕಲ್ಲಿನಿಂದ ಜಜ್ಜಿ ಸಾಯಿಸಿ ಹೆಬ್ಬಾಗಿಲಿಗೆ ಬೆಂಕಿ ಹಾಕಿ ಅವಳ ಶವವನ್ನು ಬೆಂಕಿಗೆ ಎಸೆದುಬಿಡುತ್ತಾರೆ. ಮನೆಯಲ್ಲಿದ್ದ, ಮಹಾರಾಜರ ಅಧಿಕಾರಿಗಳು ಕೊಟ್ಟ ಹಕ್ಕು ಪತ್ರ ಹಾಗೂ ಜಮೀನಿಗೆ ಸಂಬಂಧಪಟ್ಟ ಇತರ ಪತ್ರಗಳು ಎಷ್ಟೇ ಹುಡುಕಿದರೂ ಅವರಿಗೆ ಸಿಗುವುದಿಲ್ಲ. ಅವುಗಳನ್ನು ಹುಡುಕುವ ನೆಪದಲ್ಲಿ ಎಲ್ಲವನ್ನೂ ಲೂಟಿ ಮಾಡುತ್ತಾರೆ. ಕಡೆಗೂ ತಮಗೆ ನ್ಯಾಯ ದಕ್ಕಿತೆಂದು ಕೋಣವನ್ನು ಬಲಿಕೊಟ್ಟು ನಗಾರಿ ಬಡಿದು ಸಂಭ್ರಮಿಸುತ್ತಾರೆ. ಹಿರಿಯಜ್ಜಿ ತಮ್ಮ ವಂಶಕ್ಕೆ ಬಂದ ದುಃಸ್ಥಿತಿ ನೋಡಿ ದುಃಖಿಸುತ್ತಾಳೆ. ರೇಡಿಯೊ ಚಿಕ್ಕಪ್ಪ ತನಗೇನೂ ಸಂಬಂಧವೇ ಇಲ್ಲವೆಂಬಂತೆ ರೇಡಿಯೊ ಕೇಳಿಕೊಂಡು ಇರುತ್ತಾನೆ. ವೆಂಕಟಲಕ್ಷ್ಮಿ

ಮುರಿದ ರೆಕ್ಕೆಯನ್ನು ಜೋಡಿಸಿ ಹಾರಲು ತಯಾರಾಗಿದ್ದಾಳೆ. ಒಂದು ದಿನ ಅವಳು ತನ್ನ ಗಂಡನೊಂದಿಗೆ ಜಗಳ ಮಾಡಿ ಮೈಸೂರಿಗೆ ಕಾಲುನಡಿಗೆಯಲ್ಲೇ ಹೋಗಿಬಿಡುತ್ತಾಳೆ. ಆದರೆ, ಅವಳ ಗಂಡ, ರೇಡಿಯೊ ಚಿಕ್ಕಪ್ಪ, ಅವಳನ್ನು ನೆರಳಿನಂತೆ ಹಿಂಬಾಲಿಸುತ್ತಾನೆ. ಹಿರಿಯಜ್ಜಿ ಅಶ್ವಿನಿಯನ್ನು ಬಿಡಲಾರದೇ ಊಟ ತಿಂಡಿ ಬಿಟ್ಟು, ಒಂದು ದಿನ ನೇಣು ಹಾಕಿಕೊಂಡು ಪ್ರಾಣ ಕಳೆದುಕೊಳ್ಳುತ್ತಾಳೆ.

ತೆಂಗಿನ ತೋಟ ಏನು ಮಾಡಿದರೂ ಕೈಗೆ ಹತ್ತುತ್ತಿಲ್ಲ. ಯಾವುದೋ ದುಂಬಿಗಳು ಹಾರಿಬಂದು ತೋಟಗಳನ್ನು ಆವರಿಸಿಕೊಂಡಿದ್ದಾವೆ. ಕಿನ್ನರಶಿಲೆಗಳೆ ಎದ್ದು ಬಂದಂತೆ ಬಂದು ಮರಗಳ ತಿರುಳನ್ನು ತಿಂದು ಸರ್ವನಾಶ ಮಾಡಿದ್ದಾವೆ. ತಗ್ಗಿನವರು ತೋಟ ಮಾಡಲು ಮಾಡಿದ ಸಾಲ ತೀರಿಸಲಾರದೇ ಅದನ್ನು ಸುಲಭದ ಬೆಲೆಗೆ ಮಾರಿಬಿಡುತ್ತಾರೆ. ಇದಾದ ಮೂರು ವರ್ಷಗಳಲ್ಲಿ ತಗ್ಗಿನವರು ಅತಂತ್ರರಾಗಿಬಿಡುತ್ತಾರೆ. ಅದೇ ವೇಳೆಗೆ ಊರಿಗೆ ಬರಗಾಲ ಬಂದು ತಗ್ಗಿನವರು ಕಳ್ಳದಂಥೆಗೆ ಇಳಿದು, ವಿದೇಶಿ ಕಂಪೆನಿಯ ದಾಸರಾಗಿ ಹೋಗುತ್ತಾರೆ. ತಮ್ಮೆಲ್ಲ ಸಂಕಷ್ಟಗಳಿಗೆ ದಿಬ್ಬದ ಮನೆಯರೇ ಕಾರಣರೆಂದು ಅವರ ಮನಸ್ಸಿನಲ್ಲಿ ನೆಟ್ಟು ಹೋಗಿರುತ್ತದೆ. ಇಂಥ ಇಕ್ಕಟ್ಟಿನಲ್ಲೇ ತಗ್ಗಿನ ಮನೆಯವರಿಗೆ ಕಥಾನಿರೂಪಕನ ಮೇಲೆ ಏನೇನೋ ಅನುಮಾನಗಳೆದ್ದು ಅವನನ್ನು ಕೊಲ್ಲುವ ಸಂಚು ಹಾಕುತ್ತಾರೆ. ಅದಕ್ಕೆಲ್ಲಾ ಅಂಜಿಯೇ ಅವನು ಮೈಸೂರಿಗೆ ಓಡಿ ಹೋಗುತ್ತಾನೆ. ಮದುವೆಯಾಗಲಿಲ್ಲ, ವಂಶ ಬೆಳೆಸಲಿಲ್ಲ ಎಂದು ಹಿರಿಯಜ್ಜಿ ಅವನನ್ನೆಂದೂ ಕ್ಷಮಿಸುವುದಿಲ್ಲ.

ಕಥಾನಿರೂಪಕ ಮಲ್ಲಿಯ ಮಗ ಮದನನೊಂದಿಗೆ ಕಿನ್ನರ ಶಿಲೆಯ ಜಲಪಾತದ ಬಳಿ, ಸರೋವರದ ಬಳಿ ಹಾಗೂ ಬೆಟ್ಟ ಕಣಿವೆಗಳಲ್ಲೂ, ಹಕ್ಕಿಯಂತೆ ಹಾರುವುದನ್ನು ಕಲ್ಪಿಸಿಕೊಳ್ಳುತ್ತಾನೆ. ಅಂದರೆ, ಅವರಿಬ್ಬರೂ ದಿಬ್ಬದ ಮನೆಯವರ ದುಷ್ಟವರ್ತನೆಗಳಿಂದ ಪಾರಾಗಿ, ಸ್ವತಂತ್ರರಾಗಿ, ಹಕ್ಕಿಗಳಂತೆ ಹಾರುತ್ತಿದ್ದರು ಎಂಬ ಕಲ್ಪನೆ ಇಲ್ಲಿ ಮೂಡಿಬರುತ್ತದೆ.

**ಕೆಲವು ಅನಿಸಿಕೆಗಳು**

ತೊಟ್ಟಿಲಿನ ಮೊದಲ ಕೆಲವು ಅಧ್ಯಾಯಗಳು ತುಂಬಾ ನಿಧಾನವಾಗಿ ಓದಿಸಿಕೊಂಡು ಹೋಗುತ್ತವೆ. ಮೊದಲನೆಯ ಅಧ್ಯಾಯದಲ್ಲಿ ಲೇಖಕರು ಮದುವೆ ಯಿಲ್ಲದೇ ಹುಚ್ಚು ಬಿಡದು ಅಥವಾ ಮದುವೆಯಿಂದ ಮಾತ್ರ ಮೋಕ್ಷ ಎಂಬ ನಮ್ಮ ಸಮಾಜದ ಧೋರಣೆಯನ್ನು ಬಹು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಸ್ಥಿತಪ್ರಜ್ಞ ಕೇಶವಾನಂದ ಮೊದಲಿಂದಲೂ ಸಾಮಾಜಿಕ ವಿಷಯಗಳಲ್ಲಿ ಯಾವುದೇ ಆಸಕ್ತಿ ತೋರದಿದ್ದರೂ, ಅವನಿಗೆ ಮದುವೆ ಮಾಡುತ್ತಾರೆ. ಆದರೆ, ಕೋಮು ಗಲಾಟೆಯ ಫಲವಾಗಿ ಅವನ ರೇಡಿಯೋ ರಿಪೇರಿ ಅಂಗಡಿಗೆ ಬೆಂಕಿ ಬಿದ್ದು, ಅವನೂ ಆ ಬೆಂಕಿಯಲ್ಲಿ ಮೃತನಾದನೆಂಬ

ನಂಬಿಕೆ ಎಲ್ಲರ ಮನಸ್ಸಿನಲ್ಲಿ ಮೂಡಿರುತ್ತದೆ. ಆದರೆ, ಅವನು ಹೇಗೋ ಬೆಂಕಿಯಿಂದ ಪಾರಾಗಿ, ಮುಂದೆ ಸ್ವಾಮಿಯಾದನೆಂದು ತಿಳಿದುಬರುತ್ತದೆ. ವೆಂಕಟಲಕ್ಷ್ಮಿ ಅವನ ಕೈಹಿಡಿದು ಬಲಿಪಶುವಂತಾದರೂ, ಪರಿಸ್ಥಿತಿಯನ್ನು ಅವಳು ಧೈರ್ಯದಿಂದ ಎದುರಿಸಿ, ತನ್ನ ಕಾಲಮೇಲೆ ನಿಂತು, ತನ್ನ ವೃತ್ತಿಯಲ್ಲಿ ಉತ್ತುಂಗ ಸ್ಥಾನ ತಲುಪಿದ್ದನ್ನು ಲೇಖಕರು ಸಹಜವೆಂಬಂತೆ ನಿರೂಪಿಸಿದ್ದು ಒಂದು ಹೊಸತನ. ಇದೇ ಶೈಲಿಯಲ್ಲಿ ಭಾರತೀಯರಿಗಿರುವ ಇಂಗ್ಲಿಷ್ ಮೋಹ, ಬ್ರಾಹ್ಮಣರದೇ ಉತ್ತಮ ಕುಲವೆಂಬ ಧೋರಣೆಯ ಬಗ್ಗೆಯೂ ಚರ್ಚಿಸುತ್ತಾರೆ. ಇಂತಹ ಶೈಲಿಯೇ 'ತೊಟ್ಟಿಲ'ನ್ನು ನವೀನವಾಗಿಸಿವೆ.

ಕೇಶವಾನಂದನಂತೆಯೇ 'ಹಾ ಓ ಅಯ್ಯೋ'ನ ಪಾತ್ರವೂ ವೈಶಿಷ್ಟ್ಯಮಯ. ದಿನನಿತ್ಯ ಜೀವನದಲ್ಲಿ 'ಹಾ ಓ ಅಯ್ಯೋ'ನಂಥವರನ್ನು ನಾವು ನೋಡುತ್ತೇವೆ ಅಥವಾ ಗುರುತಿಸುತ್ತೇವೆ. ಅವನಂತೆ ಎಷ್ಟು ಜನ ತಮಗಾಗುವ ಅನ್ಯಾಯವನ್ನು ಗುರುತಿಸದೆಯೋ ಅಥವಾ ಗುರುತಿಸಿದರೂ ಗುರುತಿಸದಂತೆ ಇರುವವರು ಇದ್ದಾರಲ್ಲವೆ? ದಿಬ್ಬದ ಕುಟುಂಬದ ಮುದ್ದು ಕಂದ, ಅಶ್ವಿನಿ ಒಮ್ಮೆ ಕಾಯಿಲೆ ಬಿದ್ದಾಗ, ಅವಳ ಉಳಿವಿಗಾಗಿ ಕೂದಲನ್ನು ಗಂಗೆಗೆ ಕೊಡುತ್ತೇನೆಂದು ಹರಕೆ ಹೊತ್ತು, ಹರಕೆ ತೀರಿಸಲು ಹಾ ಓ ಅಯ್ಯೋನನ್ನು ಗಂಗೆಯ ತಟಕ್ಕೆ ಕಳುಹಿಸುವ ಸಂದರ್ಭದಲ್ಲಿ, ದಿಬ್ಬದ ಮನೆಯ ನಾಲಾಯಕರ ಜೀವಗಳಿಗಿಂತ ಹಾ ಓ ಅಯ್ಯೋನ ಉಪಕಾರಿ ಜೀವ ಕಡಿಮೆ ಬೆಲೆಯದು – ಎಂಬ ಕಟು ಸತ್ಯ ಓದುಗರನ್ನು ಕಾಡಿದರೆ ಆಶ್ಚರ್ಯವಿಲ್ಲ.

ಕಿನ್ನರಿಶಿಲೆಯ ವಿಷಯ ವಿವರಿಸುವಾಗಾಗಲೀ, ಜಲಪಾತ, ಸರೋವರ, ಸುಗ್ಗಿಯ ಹಬ್ಬದ ವರ್ಣನೆ ಮಾಡುವಾಗಲಾಗಲೀ ಲೇಖಕರು ನಮ್ಮನ್ನು ಆ ಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ, ಅಲ್ಲಿಯ ಪರಿಸರದಲ್ಲಿ ನಮ್ಮನ್ನು ಮೀಯಿಸುತ್ತಾರೆ. ದೊಡ್ಡಪ್ಪನ ದರ್ಪ, ಕ್ರೌರ್ಯ ಯಾರನ್ನಾದರೂ ನಡುಗಿಸುತ್ತದೆ. ನರಬಲಿಯ ಚರ್ಚೆ ಮೈ ಜುಮ್ಮೆನಿಸುತ್ತದೆ. ಕೊನೆಯವರೆಗೂ ನರಬಲಿಯಿಂದ ತಪ್ಪಿಸಿಕೊಂಡ ಪುಟ್ಟ ಮದನ ಏನಾದನೆಂಬ ಕುತೂಹಲ ಓದುಗನನ್ನು ಕಾಡುತ್ತದೆ. ಮಹಾಭಾರತವನ್ನು ಚೆನ್ನಾಗಿ ಓದಿ ಉಳಿದೆಲ್ಲರಿಗೂ ವಾಚಿಸುವ ಆತ ಮಹಾಕಾವ್ಯವನ್ನುಗಿಳಿಪಾಠವಾಗಿಸಿದನೇ ಹೊರತು ಅದರಿಂದ ಕಲಿತದ್ದು ಮಾತ್ರ ಸೊನ್ನೆ ಅಂತೆನಿಸಿ ನಾವು ದಿನನಿತ್ಯ ನೋಡುವ ಆಷಾಢಭೂತಿಗಳನ್ನು ನೆನಪಿಗೆ ತರುತ್ತಾನೆ.

ಮೂಕಿಯ ಪಾತ್ರವಂತೂ ದಿನನಿತ್ಯ ಹೆಣ್ಣಿಗಾಗುವ ಅತ್ಯಾಚಾರದ ನೈಜ ಚಿತ್ರ. ಸಂಪಿಗೆ ಮರ ಮತ್ತು ಮೂಕಿಯ ಸಂಬಂಧವನ್ನು ಚಿತ್ರಿಸುವಾಗ ಹೇಳಿದ್ದನ್ನೇ ಹೇಳುತ್ತಿದ್ದಾರೆ ಎಂಬ ಭಾವನೆ ಬಂದರೂ ಮೂಕಿಯ ಪಾತ್ರ ಓದುಗನ ಕಣ್ಣಲ್ಲಿ ಎರಡು ಹನಿ ಕಣ್ಣೀರು

ಹಾಕಿಸಿದರೆ ಸಹಜವೆನಿಸುತ್ತದೆ. ಸಂಪಿಗೆ ಮರವೇ ಮೂಕಿಗೆ ತಾಯಿಯಂತೆ ಆಸರೆ ಕೊಡುವುದನ್ನು ಓದುವಾಗ ನಿರ್ಭಾವಿಯೂ ಭಾವುಕನಾದಾನು. ಕಥಾನಿರೂಪಕನೇ ಮೂಕಿಯ ಮಗನೆಂದು ತಿಳಿದಾಗ ದಿಬ್ಬದ ಮನೆಯವರು ತಮ್ಮಿಂದಾದ ಅತ್ಯಾಚಾರಕ್ಕೆ ಪ್ರಾಯಶ್ಚಿತ್ತವೆಂಬಂತೆ ಅವನನ್ನು ಸಾಕಿದುದು ಒಂದು ರೀತಿಯಲ್ಲಿ ದಿಬ್ಬದ ಮನೆಯ ಹಿರಿತಲೆಗಳ ದೊಡ್ಡತನವನ್ನು ತೋರಿಸುತ್ತದೆ. ಹಿರಿತಲೆಗಳು ಮುಂದಿನ ಪೀಳಿಗೆಗೆ ಜೀವನದ ಮೌಲ್ಯವನ್ನು ಹೇಳಿಕೊಡುವಲ್ಲಿ ವಿಫಲರಾದರೆನ್ನುವ ಭಾವನೆ ಪುಸ್ತಕ ಓದುವಾಗಲೆಲ್ಲಾ ಬಂದೇ ಬರುತ್ತದೆ.

ಕಥಾನಿರೂಪಕ ನಾಲ್ಮಡಿ ಕೃಷ್ಣರಾಜ ಒಡೆಯರ ದೊಡ್ಡತನವನ್ನು ಹೇಳಿದಂತೆ ಅವರ ಸುತ್ತಲಿನ ಆಡಳಿತಶಾಹಿಗಳ ಸಣ್ಣತನ, ಹಾಗೆಯೇ ಕುಹಕತನವನ್ನೂ ಭ್ರಷ್ಟಾಚಾರವನ್ನೂ ಹೇಳುವಾಗ, ಈಗಿನ ಸಮಾಜ ಹೆಚ್ಚಿನ ಅಭಿವೃದ್ಧಿ ಸಾಧಿಸಲಿಲ್ಲ ಎಂಬ ನಗ್ನ ಸತ್ಯ ನಮ್ಮ ಮುಂದೆ ತೇಲುತ್ತದೆ. ಇದೇ ನಿಟ್ಟಿನಲ್ಲಿ ತಗ್ಗಿನವರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಳ್ಳುವ ದೊಡ್ಡಪ್ಪನ ಮೇಲೆ ಆಕ್ರೋಶ ಹುಟ್ಟುತ್ತದೆ. ಗಾಂಧೀಜಿಯ ಅನುಯಾಯಿಗಳ ಮೇಲೆ ದೇಶಕ್ಕೆ ಸ್ವಾತಂತ್ರ್ಯ ಬಂದಮೇಲೂ ನಡೆಯುತ್ತಿರುವ ಅತ್ಯಾಚಾರ ನೆನೆಸಿಕೊಂಡಾಗ ರಕ್ತ ಕುದಿಯುತ್ತದೆ. ಲೇಖಕ ಅದೇ ಉಸಿರಿನಲ್ಲಿ ನಿಸರ್ಗದ ಮೇಲೆ ನಡೆದ ಅತ್ಯಾಚಾರವನ್ನು ಮನ ಕಲಕುವಂತೆ ಹೇಳುವಾಗ ನ್ಯಾಯ – ಎಂದು? ಎಲ್ಲಿ? ಹೇಗೆ? – ಎಂಬ ಪ್ರಶ್ನೆಗಳ ಸರಮಾಲೆ ಓದುಗನನ್ನು ಕಾಡುತ್ತದೆ. ಅದಕ್ಕೆ ಉತ್ತರವೆಂಬಂತೆ ದೊಡ್ಡಪ್ಪನ ದಾರುಣ ಅಂತ್ಯ, ನಿರೂಪಕನ ನೀಚ ತಂದೆಯ ಕೊನೆಯ ದಿನಗಳು, ತಗ್ಗಿನ ಮನೆಯವರ ಏಳಿಗೆ, ದಿಬ್ಬದ ಮನೆಯವರ ಅವಸಾನ, ಇತ್ಯಾದಿ ಘಟನೆಗಳು ನಡೆದುಹೋಗುತ್ತವೆ. ತಗ್ಗಿನವರು ಏಳಿಗೆಯ ಬೆನ್ನಿನಲ್ಲೇ ದಿಬ್ಬದ ಮನೆಯವರಂತೆ ಅವರೂ ದುರ್ನಡತೆಗಳ ಹಾದಿ ಹಿಡಿದು ಅವಸಾನವಾಗಿದ್ದು ಒಂದು ವಿಪರ್ಯಾಸ!

'ತೊಟ್ಟಿಲು' ಕಾದಂಬರಿ ಯಾರೊಬ್ಬನ ಮೇಲೂ ಕೇಂದ್ರೀಕೃತವಾಗಿಲ್ಲ. ಒಂದು ಪಾತ್ರದಿಂದ ಇನ್ನೊಂದಕ್ಕೆ ಓದುಗನನ್ನು ಸ್ವಾರಸ್ಯವಾಗಿ ಕರೆದೊಯ್ಯುತ್ತದೆ. ಪ್ರತಿ ಪಾತ್ರವು ತನ್ನ ವ್ಯಕ್ತಿತ್ವಕ್ಕೆ ಮೋಸ ಮಾಡಿಲ್ಲ. ವೆಂಕಟಲಕ್ಷ್ಮಿ ಆಧುನಿಕ ಮಹಿಳೆಗೊಂದು ಉದಾಹರಣೆ. 'ಎತ್ತಣ ಮಾಮರ ಎತ್ತಣ ಕೋಗಿಲೆ' ಎಂಬಂತೆ ಹಳ್ಳಿಯ ಮುಗ್ಧ, ಅಸಹಾಯಕ ಹೆಣ್ಣು ತನ್ನತನವನ್ನು ಹುಡುಕುವಲ್ಲಿ ಯಶಸ್ವಿಯಾದದ್ದು ಪವಾಡವೇ! ಅಸಹಾಯಕರಿಗೆ ಅನ್ಯಾಯವೆಸಗಿ, ಕುಕೃತ್ಯಗಳಿಗೆ ರಾಯಭಾರಿಯಾಗಿ ಮೆರೆದವರು ಕೊನೆಯಲ್ಲಿ ವಿಧಿಯ ನ್ಯಾಯಕ್ಕೆ ತಲೆ ಬಾಗಿದಾಗ ಬರಿಯ ಭಲೇ ಹೇಳಿದರೆ ಸಾಲದು, ಜಯಭೇರಿಯ ನಗಾರಿಯನ್ನೇ ಬಾರಿಸಬೇಕು! ದಿಬ್ಬದ ಮನೆಯರ ಅತ್ಯಾಚಾರ, ಅಹಂಕಾರ, ದರ್ಪಗಳನ್ನೆಲ್ಲಾ ತನ್ನ ವಂಶವಾಹಿನಿಗೆ ಜೋಡಿಸಿ, ಆ ವಂಶವಾಹಿನಿ

ಮುಂದುವರಿಯಬಾರದೆಂಬ ನಿರ್ಣಯಕ್ಕೆ ಬಂದ ನಿರೂಪಕನನ್ನು ಅಭಿನಂದಿಸಲೇ ಬೇಕು! ಕಥೆಯಲ್ಲಿ ಮುಖ್ಯ ಪಾತ್ರಗಳಿಗೆಲ್ಲಾ ಒಂದು ತರಹದಲ್ಲಿ ಮುಕ್ತಾಯವಿದೆ ಆದರೆ ಮದನನ ಪಾತ್ರಕ್ಕೆ ಇಲ್ಲವೇ ಇಲ್ಲ. ಕಥಾನಿರೂಪಕನಿಗೂ ತಾಯಿಯಂತಿದ್ದ ಮದನನ ತಾಯಿ, ಮಲ್ಲಿ, ಮದನನಿಗಾಗಿ ಹಂಬಲಿಸುತ್ತಾ ತೀರಿಕೊಂಡಾಗ ಮದನನ ಪ್ರವೇಶ ಇನ್ನೇಕೆ ಎಂದು ಲೇಖಕರು ಯೋಚಿಸಿರಬಹುದೆ? ದೊಡ್ಡಪ್ಪ ತನ್ನನ್ನು ರಕ್ಷಿಸುವನೆಂದು ತಿಳಿದಿದ್ದಾಗ, ಆ ದೊಡ್ಡಪ್ಪನೇ ಅವನನ್ನು ಕೊಲೆಮಾಡಲು ಹೊರಟು, ಕೊನೆಯಲ್ಲಿ ಅವನೇ ಕೊಲೆಗೆ ಬಲಿಯಾದಾಗ, ಮದನನ ಪಾತ್ರವಿವರಣೆ ಇನ್ನೇಕೆ ಎಂದು ಲೇಖಕರು ತೀರ್ಮಾನಿಸಿರಬಹುದೆ?

**ಇನ್ನಷ್ಟು ಅನಿಸಿಕೆಗಳು:**

ಕಥೆ ನಮ್ಮನ್ನು ಸ್ವಾತಂತ್ರ್ಯ ಪೂರ್ವದಿಂದ ತುರ್ತು ಪರಿಸ್ಥಿತಿಯವರೆಗೆ ಕರೆದೊಯ್ಯುತ್ತದೆ. ಹಲವು ಬಾರಿ ಕಥಾವಸ್ತು ಹಿಂದು-ಮುಂದಾದ ಅನುಭವ ಸಾಮಾನ್ಯ ಓದುಗನಿಗೆ ಸಿಗುತ್ತದೆ. ಆದರೆ, ಇದು ಲೇಖಕರು ಬಳಸಿದ ಹೊಸ ತಂತ್ರ. ಲೇಖಕರು ಹಿರಿಯಜ್ಜಿಯ ಪೈಶಾಚಿಕ ವರ್ತನೆಯನ್ನು ವರ್ಣಿಸುವಾಗ ಕಾದಂಬರಿಯ ಉಳಿದ ಭಾಗಗಳಲ್ಲಿ ಕಂಡುಬರುವ ಹಿಡಿತ ತಪ್ಪಿತೆ? – ಎಂದೆನಿಸುತ್ತದೆ. ಈ ಕಾರಣದಿಂದಲೇ 'ಪ್ರಾಣಪಕ್ಷಿಯ ಲಾಲಿ' ಅಧ್ಯಾಯ ಓದಿಸಿಕೊಂಡು ಹೋಗುವಲ್ಲಿ ಸಹಾಯ ಮಾಡದಿದ್ದಲ್ಲಿ ಆಶ್ಚರ್ಯವೇನಿಲ್ಲ. 'ನಿಶೆಗತ್ತಲ ಏಕಾಂತ ಕೊಳಲು' ಎಂಬ ಅಧ್ಯಾಯ ಒಂದು ಅನನ್ಯ ಪ್ರಯೋಗವೆಂದು ಹೇಳಬಹುದು. ಇದೊಂದು ಗದ್ಯಕಾವ್ಯದಂತೆ ಇದೆ. ಎಂಟು ಪುಟಗಳ ಈ ಅಧ್ಯಾಯದ ಕೊನೆಯಲ್ಲಿ ಒಂದೇ ಒಂದು ಪೂರ್ಣವಿರಾಮ. ಇಡೀ ಕಾದಂಬರಿಯ ಸಾರಾಂಶವನ್ನು ಲೇಖಕರು ಇಂಥ ನಿರ್ದಿಷ್ಟವಲ್ಲದ ಜಾಗದಲ್ಲಿ ಏಕೆ ಬರೆದರೆಂದು ನನಗೆ ಅರ್ಥವಾಗಲಿಲ್ಲ. ಆದಾಗ್ಯೂ, ಕಾದಂಬರಿ 'ನವ್ಯತೆ'ಯನ್ನು ಪಡೆದು, ಓದಿಸಿಕೊಂಡು ಹೋಗುತ್ತದೆ. ಸಾಮಾಜಿಕ ಶೋಷಣೆಯ ಬಗ್ಗೆ ಕಳಕಳಿ ತಳೆದು, ಅದನ್ನು ವಿಮರ್ಶೆಗೆ ಗುರಿಪಡಿಸುವುದರಲ್ಲಿ ಕಾದಂಬರಿ ಯಶಸ್ಸು ಗಳಿಸಿದೆ ಎಂಬ ಭಾವನೆ ಓದುಗರಲ್ಲಿ ಮೂಡಿಸುತ್ತದೆ. ಒಮ್ಮೆ ಓದಲು ಪ್ರಾರಂಭಿಸಿದ ಮೇಲೆ ಮುಂದೇನು? ಮುಂದೇನು? – ಎಂಬ ಕುತೂಹಲವನ್ನು ನಮ್ಮಲ್ಲಿ ಕೆರಳಿಸುತ್ತದೆ.

ದಿಬ್ಬದ ಮನೆ ಸಾಕಷ್ಟು ಅನುಕೂಲಸ್ಥ ಮನೆತನದ ತುಂಬು ಕುಟುಂಬ. ಈ ಮನೆಯಲ್ಲಿ ಗಂಡಸರು ಎಷ್ಟು ಪ್ರಬಲರೋ ಅಷ್ಟೇ ಮುದುಕಿಯರೂ ಪ್ರಬಲರು. ದಿಬ್ಬದ ಮನೆಯ ಮಕ್ಕಳನ್ನೆಲ್ಲಾ ತೊಟ್ಟಿಲಾಡಿಸಿ ಬೆಳೆಸಿದವರೇ ಈ ಅಜ್ಜಿಯರು. ದಿಬ್ಬದ ಮನೆಯ ಪ್ರಾಬಲ್ಯವನ್ನು ತಗ್ಗಿನವರಿಗೆ ಇಳಿಸಲು ಬಹುಕಾಲ ಸಾಧ್ಯವೇ ಆಗುವುದಿಲ್ಲ. ಅವರು ಪ್ರಗತಿಯ ದಾರಿಯನ್ನು ತುಳಿಯುತ್ತಿದ್ದಂತೆ, ಅವರ ದಾರಿ ತಪ್ಪಿಸಲು ದಿಬ್ಬದ ಮನೆಯ ದೊಡ್ಡಪ್ಪ ಎಂದಿಗೂ ತಯಾರಿರುತ್ತಿದ್ದ. ತಗ್ಗಿನ ಮನೆಯವರನ್ನು ಶೋಷಣೆಗೆ

ಗುರಿಪಡಿಸಿದ್ದ ದಿಬ್ಬದ ಮನೆಯವರೇ ವಿದೇಶಿ ಸಂಸ್ಥೆಯ ಶೋಷಣೆಗೊಳಗಾದಾಗ, 'ಅಮ್ಮನಿಗೆ ಅಪ್ಪ ಹೊಡೆದರೆ, ಅಪ್ಪನಿಗೆ ಭೂತ ಹೊಡೆಯುತ್ತದೆ' ಎಂಬ ಗಾದೆಯ ನೆನಪು ಬರುತ್ತದೆ. ವಿದೇಶಿ ಸಂಸ್ಥೆಯ ಶೋಷಣೆಗೆ ಸಿಕ್ಕಿ ಇಡೀ ಹಳ್ಳಿ ತನ್ನೆಲ್ಲ ಸಂಪತ್ತನ್ನೂ, ಸೌಂದರ್ಯವನ್ನೂ ಕಳೆದುಕೊಳ್ಳುತ್ತದೆ. ಸುಲಭದಲ್ಲಿ ಹಣ ಗಳಿಸಬೇಕೆಂಬ ಅತ್ಯಾಸೆಗೆ ಇಡೀ ಹಳ್ಳಿಯೇ ಬಲಿಯಾಗುತ್ತದೆ. ಇದು ಜಾಗತೀಕರಣ ಮತ್ತು ಸುಧಾರೀಕರಣಗಳಿಂದ ಸಮಾಜ ಮತ್ತು ಪರಿಸರಗಳು ಅನುಭವಿಸಬೇಕಾದ ದುಷ್ಪರಿಣಾಮಗಳ ಮೇಲೆ ನಮ್ಮ ಗಮನ ಸೆಳೆದು, ಆ ಬಗ್ಗೆ ಯೋಚಿಸುವಂತೆ ಮಾಡುತ್ತದೆ. 'ಉಳುವವನೇ ಹೊಲದೊಡೆಯ' ಎಂಬ ಕಾಯಿದೆಯನ್ನು ತಗ್ಗಿನವರು ಬಳಸಿಕೊಂಡು, ಒಂದು ಕಾಲದಲ್ಲಿದ್ದ ದಿಬ್ಬದ ಮನೆಯ ದಬ್ಬಾಳಿಕೆಯನ್ನು ನಾಶ ಮಾಡುತ್ತಾರೆ. ಏರಿದವನು ಇಳಿಯಲೇಬೇಕೆಂಬ ಗಾದೆಯಂತೆ ತಗ್ಗಿನವರು ದಿಬ್ಬದ ಮನೆಯವರ ಪ್ರಾಬಲ್ಯವನ್ನು ಮುರಿಯುತ್ತಾರೆ. ಆದರೆ ಕೊನೆಯಲ್ಲಿ, ಕಷ್ಟಪಟ್ಟು ದಿಬ್ಬದ ಮನೆಯವರ ಶೋಷಣೆಯ ವಿರುದ್ಧ ಹೋರಾಡಿ ಅವರ ಪಾಲಿಗೆ ಬಂದ ಜಮೀನು ವಿದೇಶಿ ಸಂಸ್ಥೆಯ ಶೋಷಣೆಯಿಂದಾಗಿ ತಗ್ಗಿನವರ ಕೈತಪ್ಪಿಹೋಗುತ್ತದೆ. ಒಮ್ಮೆ ದಿಬ್ಬದ ಮನೆಯವರಿಗೆ ಗುಲಾಮರಾದ ಅವರು ಈಗ ವಿದೇಶಿ ಸಂಸ್ಥೆಗೆ, ಸಾರಾಯಿಗೆ ಗುಲಾಮರಾಗುತ್ತಾರೆ. ದಿಬ್ಬದ ಮನೆಯ ವಂಶೋದ್ಧಾರಕ, ಕಥಾನಿರೂಪಕ ವಂಶವನ್ನು ಉದ್ಧಾರ ಮಾಡುವ ಆಸಕ್ತಿಯನ್ನು ತೋರಿಸದೆ ದಿಬ್ಬದ ಮನೆಯ ತೊಟ್ಟಿಲನ್ನು ಬರಿದು ಮಾಡುತ್ತಾನೆ. ಇದು, ಈ ಕಾದಂಬರಿಯ 'ತೊಟ್ಟಿಲು' ಎಂಬ ಶೀರ್ಷಿಕೆಗೆ ವಿಶೇಷ ಅರ್ಥ ಕಲ್ಪಿಸಿಕೊಡುತ್ತದೆ. ಅಂತ್ಯದಲ್ಲಿ ದಿಬ್ಬದ ಮನೆಯ ತೊಟ್ಟಿಲು ಬರಿದಾಗಿ, ಅದನ್ನು ತೂಗುವವರೇ ಇಲ್ಲದಂತಾಗುತ್ತದೆ.

ಕಾದಂಬರಿಯಲ್ಲಿ ವಿವರಿಸಿದ ದಂತಕಥೆಯಲ್ಲಿ ಬರುವ ಕಿನ್ನರಿಯೊಬ್ಬಳು ಕೊಟ್ಟ ಶಾಪದ ಫಲವಾಗಿ, ದಿಬ್ಬದ ಮನೆಯವರಲ್ಲದೆ, ಇಡೀ ಹಳ್ಳಿಯೇ ನಾಶಕ್ಕೊಳಗಾದುದು, ಒಂದು ದುರಂತವೇ!

**ಕೃತಿ ವಿವರ :** ತೊಟ್ಟಿಲು, ಮೊಗಳ್ಳಿ ಗಣೇಶ್, ಅಂಕಿತ ಪುಸ್ತಕ, ಬೆಂಗಳೂರು ೨೦೦೪, ಪು. ೨೨೮

## ‘ದಿವ್ಯ’ದಲ್ಲಿ ಲೌಕಿಕ, ಅಲೌಕಿಕ ಅನುಭವಗಳ ಸಂಗಮ

–ಆಹಿತಾನಲ (ನಾಗ ಐತಾಳ); ಆರ್ಕೇಡಿಯಾ, ಕ್ಯಾಲಿಫೋರ್ನಿಯಾ

‘ದಿವ್ಯ ಎಂಬ ಶಬ್ದಕ್ಕೆ ಎರಡು ದಿಕ್ಕಿನ ಅರ್ಥದ ಛಾಯೆಗಳಿವೆ – ಒಂದು, ಪಣ–ಪರೀಕ್ಷೆ ಇತ್ಯಾದಿ ಸಂಘರ್ಷಗಳನ್ನು ಸೂಚಿಸುವಂಥದಾದರೆ, ಇನ್ನೊಂದು ಅಲೌಕಿಕದ ಸಾಕ್ಷಾತ್ಕಾರಗಳನ್ನು ಸೂಚಿವಂಥದು’ – ಹೀಗೆ ಕಾದಂಬರಿಗೆ ಬರೆದ ಬೆನ್ನುಡಿಯಲ್ಲಿ ಉಲ್ಲೇಖವಾಗಿದೆ. ಈ ‘ಅಲೌಕಿಕ ಸಾಕ್ಷಾತ್ಕಾರ’ವನ್ನೊಳಗೊಂಡ ಅರ್ಥವನ್ನೇ ‘ದಿವ್ಯ’ಕ್ಕೆ ನಾವು ಸಾಮಾನ್ಯವಾಗಿ ಬಳಸುತ್ತೇವೆ. ಹಾಗಾಗಿ ದಿವ್ಯ ಎಂದರೆ ನಾವು ಹೆಚ್ಚಾಗಿ ‘ಶ್ರೇಷ್ಠವಾದುದು’, ‘ಸುಂದರವಾದುದು’, ‘ಸ್ವರ್ಗೀಯ’, ‘ಶೋಭಾಯಮಾನ’ – ಇವೇ ಮುಂತಾದ ಅರ್ಥವನ್ನು ಕಲ್ಪಿಸುತ್ತೇವೆ. ಆದರೆ, ಆ ಶಬ್ದಕ್ಕೆ ‘ಕಠಿಣ ಪರೀಕ್ಷೆ/ಅಗ್ನಿ ಪರೀಕ್ಷೆ’ ಎಂಬ ಅರ್ಥವಿರುವುದನ್ನೂ ನಾವು ಗಮನಿಸಬೇಕಾಗಿದೆ. ‘ದಿವ್ಯ’ ಆ ಎರಡೂ ಅರ್ಥಗಳು ಸಂಗಮಿಸಿ ಸೃಷ್ಟಿಪಡಿಸಿದ ಕಾದಂಬರಿ ಎಂದು ಬೆನ್ನುಡಿಯಲ್ಲಿ ವ್ಯಕ್ತವಾಗಿದೆ. ಕಾದಂಬರಿ ಓದಿದ ಮೇಲೆ ಈ ವ್ಯಾಖ್ಯಾನವನ್ನು ಒಪ್ಪಿಕೊಳ್ಳುವಂತಾಗುತ್ತದೆ. ಇಲ್ಲಿ ಹಳತು–ಹೊಸತುಗಳ ಸಂಘರ್ಷಗಳ ಜೊತೆಯಲ್ಲೇ, ಅವುಗಳ ಸಂಗಮವನ್ನೂ ಕಾಣುತ್ತೇವೆ. ಹಾಗೆ ಸಂಗಮಿಸಿದಾಗ, ಅಲ್ಲಿ ‘ದಿವ್ಯ’ತೆ ಮೂಡಿಬರುವುದು ನಮ್ಮ ಗಮನಕ್ಕೆ ಬೀಳುತ್ತದೆ. ಅನಂತಮೂರ್ತಿಯವರು ಬೇಕೆಂತಲೇ ಮೇಲ್ನೋಟಕ್ಕೆ ವಿರುದ್ಧವಾಗಿ ಕಾಣಿಸುವ, ಈ ಶೀರ್ಷಿಕೆಯನ್ನು ಬಳಸಿಕೊಂಡಂತಿದೆ. ಅವರ ಮೊದಲ ಕಾದಂಬರಿ, ‘ಸಂಸ್ಕಾರ’ದಲ್ಲೂ, ‘ಸಂಸ್ಕಾರ’ ಎನ್ನುವ ಶಬ್ದ ಹಲವು ಅರ್ಥಗಳನ್ನು ಸೂಚಿಸುವುದನ್ನು ನಾವು ಗಮನಿಸಬೇಕು.

ಈ ಕಾದಂಬರಿಯನ್ನು ಮೊದಲಿಗೆ ಓದಿದಾಗ ನನ್ನಲ್ಲಿ ಮೂಡಿಬಂದ ಭಾವನೆಗಳನ್ನು, ನಂತರದ ಓದು ಬದಲಾಯಿಸಿತು. ಏನಿದು, ಈ ಕಾದಂಬರಿಯಲ್ಲಿ ಹೆಚ್ಚಿನ ಲೈಂಗಿಕತೆಯ ವರ್ಣನೆಯೇ ಜಾಸ್ತಿ; ಹಾದರ, ಸಂಸಾರದ ಹೊರಗಿನ ಲೈಂಗಿಕ ಸಂಬಂಧಗಳು, ಕೊಲೆ – ಎಂಬ ಇವೇ ಮೊದಲಾದ ಭಾವನೆಗಳು ನನ್ನನ್ನು ಮೊದಲ ಓದಿನಲ್ಲಿ

ಕಾಡಿತ್ತು. ಆದರೆ, ಕಾದಂಬರಿಯನ್ನು ಮತ್ತೆ-ಮತ್ತೆ ಓದಿದಂತೆ, ಅಲ್ಲಿ ಸುಪ್ತವಾಗಿ ಅಡಗಿ ಕುಳಿತ ಹಲವು ಸಂದೇಶಗಳ ಸ್ವರೂಪ ಗೋಚರವಾಗಿ, ಕತೆಯನ್ನು ಮೆಚ್ಚಿಕೊಳ್ಳುವಂತಾಯ್ತು. ಮೇಲ್ನೋಟಕ್ಕೆ ಸಾಮಾನ್ಯವಾಗಿ ಕಂಡ 'ದಿವ್ಯ', ಒಳನೋಟದ 'ದಿವ್ಯ'ವನ್ನು ಉದ್ದೀಪಿಸಿತು ಎಂದರೆ ಅತಿಶಯೋಕ್ತಿಯಾಗಲಾರದು ಎಂಬ ನಂಬಿಕೆ ನನ್ನದು.

**ಕಥಾಸಾರಾಂಶ:**

ಈ ಕಾದಂಬರಿಯಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಸಂಪ್ರದಾಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಂತಿದೆ. ಅಲ್ಲಿ ಬರುವ ಅಕ್ಕಯ್ಯ, ಗೌರಿ, ಗಂಗೆ, ಕೇಶವ, ಕೃಷ್ಣಶಾಸ್ತ್ರಿ ಮುಂತಾದವರು ಆಚರಿಸಿಕೊಂಡು ಬರುವ ಹಲವು ಸಂಪ್ರದಾಯ, ಆಚಾರಗಳು ನಮ್ಮ ಗಮನ ಸೆಳೆಯುತ್ತವೆ. ಮಲೆನಾಡ ದಯಿನಿ ಎಂಬ ಹಳ್ಳಿಯಲ್ಲಿ ಜೀವನ ಸಾಗಿಸುತ್ತಿರುವ ಜನರ ಒಂದು ಮುಗ್ಧ ಬದುಕಿನ ವರ್ಣನೆ ನಮ್ಮನ್ನು ಬಹುವಾಗಿ ಆಕರ್ಷಿಸುತ್ತದೆ. ಎಳೆಯ ವಯಸ್ಸಿನಲ್ಲೆ ಗಂಡನನ್ನು ಕಳೆದುಕೊಂಡು, ವಿಧವೆಯಾದ ಅಕ್ಕಯ್ಯ (ಅವಳ ನಿಜವಾದ ಹೆಸರು ಸಾವಿತ್ರಿ), ತಮ್ಮ, ಕೇಶವನ ಮನೆಯಲ್ಲಿ, ತನ್ನ ಸವತಿಯ ಮಕ್ಕಳಾದ ಗಂಗೆ-ಗೌರಿಯರ (ಸಾವಿತ್ರಿಗೆ ಮಕ್ಕಳಿರಲಿಲ್ಲ) ಜೊತೆಯಲ್ಲಿ ಜೀವನ ಸಾಗಿಸುತ್ತಿದ್ದಳು. ಚಿಕ್ಕ ವಯಸ್ಸಿನ ಗಂಗೆ-ಗೌರಿಯರು ಸುತ್ತಾಡುವ ಗುಡ್ಡ, ಕಾಡುಗಳು, ಅವರನ್ನು ಬಹುವಾಗಿ ಆಕರ್ಷಿಸಿದ ಹಲವು ಪ್ರಾಣಿಗಳು, ಅಲ್ಲಿನ ವನಸೌಂದರ್ಯ – ಇವೆಲ್ಲ ನಮ್ಮ ಗಮನವನ್ನೂ ಸೆಳೆಯುತ್ತವೆ. ದೇವನಹಳ್ಳಿಯ ಸಾಹುಕಾರರೂ, ರಾಜ್ಯದ ರಾಜಕಾರಣದಲ್ಲಿ ಬಹಳಷ್ಟು ವರ್ಚಸ್ಸುಳ್ಳ ಪ್ರತಿಭಾವಂತರೂ, ಗಾಂಧೀವಾದಿಗಳೂ ಆದ ಮಂಜಯ್ಯನವರ ಮನೆಯಲ್ಲಿ ಭೂವರಾಹನ ಪೂಜೆ ಮಾಡುತ್ತಿರುವ ಒಬ್ಬ ಪೂಜಾರಿ, ಕೇಶವ. ಅಷ್ಟೇ ಅಲ್ಲ, ಅವನೊಬ್ಬ ಊರ ಜನರಿಗೆ ನಾಟಿ ಔಷಧ ಕೊಡುವ ವೈದ್ಯ, ನಿಮಿತ್ಯ ಹೇಳುವ ಪಂಡಿತ, ತಾಳಮದ್ದಲೆಯಲ್ಲಿ ನಿಷ್ಣಾತ, ಯಕ್ಷಗಾನದಲ್ಲಿ ಆಸಕ್ತಿಯುಳ್ಳವ, ಉಡುಪಿ ಮಠದಲ್ಲಿ ಶಿಕ್ಷಣ ಪಡೆದ ಸಂಸ್ಕೃತ ಪಂಡಿತ – ಎಲ್ಲವೂ ಹೌದು. ವೇದ ಪಾರಾಯಣದಲ್ಲಿ ನುರಿತವನಾದರೂ, ಮನೆಯ ಕೊಟ್ಟಿಗೆಯಲ್ಲಿ ಕೆಲಸ ಮಾಡುವ ಅನ್ಯಜಾತಿಯ ಜಲಜಳ ಸೌಂದರ್ಯವನ್ನು ಮೆಚ್ಚಿ, ಮನಸ್ಸಿನಲ್ಲೇ ಅವಳ ಮೇಲೆ ಅನುರಕ್ತನಾಗುವಷ್ಟು ಮಹಾ ರಸಿಕತೆಯೂ ಅವನಲ್ಲಿ ಮನೆಮಾಡಿದೆ.

ಸಂಪ್ರದಾಯಸ್ಥಳಾದ ಅಕ್ಕಯ್ಯನಿಗೆ ಗಂಗೆ-ಗೌರಿಯರ 'ಗಂಡುಬೀರಿ' ಸ್ವೇಚ್ಛಾ ವರ್ತನೆ ಯೋಚನೆಗೀಡುಮಾಡುತ್ತದೆ. ಒಮ್ಮೆ ಕಾಡಿನಲ್ಲಿ ಸಿಕ್ಕಿದ ಒಂದು ವಿಚಿತ್ರ ಪ್ರಾಣಿಯನ್ನು ಆ ಅಕ್ಕ-ತಂಗಿಯರು ಮನೆಗೆ ತಂದು ಸಾಕುತ್ತಾರೆ. ಆದರೆ, ಕೆಲವು

ದಿನಗಳ ಮೇಲೆ ಅದು ತಪ್ಪಿಸಿಕೊಂಡು ಕಾಡಿಗೆ ಓಡಿಹೋದ ಪರಿಣಾಮವಾಗಿ, ಗಂಗೆ ಅದನ್ನು ತೀರ ಮನಸ್ಸಿಗೆ ಹಚ್ಚಿಕೊಂಡು ಹಾಸಿಗೆ ಹಿಡಿಯುತ್ತಾಳೆ. ಕೆಲವೇ ದಿನಗಳಲ್ಲಿ ಅವಳು ಸಾವನ್ನೂ ಅಪ್ಪುತ್ತಾಳೆ. ಇದು ಗೌರಿಯ ಮೇಲೆ ಅಪಾರ ಪರಿಣಾವನ್ನುಂಟುಮಾಡುತ್ತದೆ. ಕಾಡಿನಲ್ಲಿ ಸಿಕ್ಕಿದ ಒಂದು ಕರಿಯ ಬೆಕ್ಕು, ತೀರಿಹೋದ ತನ್ನ ತಂಗಿಯ ಮರುಜನ್ಮವೆಂದು ತಿಳಿದು, ಮನೆಯಿಂದ ಹಾಲನ್ನು ಕದ್ದು-ಮುಚ್ಚಿ ತಂದು ಆ ಬೆಕ್ಕಿಗೆ ಉಣಿಸುತ್ತಿರುತ್ತಾಳೆ. ತಂಗಿಯ ಸಾವು ಗೌರಿಯನ್ನು ಅಂತರ್ಮುಖಿಯಾಗುವಂತೆ ಮಾಡುತ್ತದೆ. ಯೌವನದ ಹೊಸಿಲಲ್ಲಿರುವ ಹಾಗೂ ಅಪ್ರತಿಮ ಸುಂದರಿಯೂ ಆದ ಗೌರಿ, ಏಕಾಂತವಾಗಿ ಕಾಡಿನಲ್ಲಿ ಸುತ್ತುತ್ತಿರುವುದು ಅಕ್ಕಯ್ಯನನ್ನು ಇನ್ನಷ್ಟು ಯೋಚನೆಗೆ ಗುರಿಮಾಡುತ್ತದೆ. ಬಚ್ಚಲ ಒಲೆಯ ಮುಂದೆ ಕುಳಿತು ಗತಿಸಿದ ತನ್ನ ತಂಗಿ ಗಂಗೆಯ ಜೊತೆ ಮಾತನಾಡುತ್ತಿರುವುದನ್ನು ಕಂಡು, ಅಕ್ಕಯ್ಯ ಸ್ವಲ್ಪ ಗಾಬರಿಯಾಗುತ್ತಾಳೆ. ಆದರೆ, ದಿನ ಕಳೆದಂತೆ, ಸೌಂದರ್ಯ ಹೆಚ್ಚುತ್ತಿದ್ದಂತೆ, ಗೌರಿಯಲ್ಲಿ ಒಂದು ಬಗೆಯ ದಿವ್ಯ ಕಳೆಯೂ ಹೆಚ್ಚುತ್ತಿರುತ್ತದೆ. ಕ್ರಮೇಣ ಊರ ಜನರು ಅವಳನ್ನು ಒಂದು ದೇವಿಯೆಂದೇ ಪರಿಗಣಿಸುತ್ತಾರೆ. ಅಸ್ವಸ್ಥ ಮಕ್ಕಳು ಅವಳ ಸ್ಪರ್ಶದಿಂದ ಗುಣವಾಗುತ್ತಾರೆಂಬಷ್ಟು ನಂಬಿಕೆ ಅವರಲ್ಲಿ ಬೆಳೆಯುತ್ತದೆ. ಅಂತೂ ಸ್ವೇಚ್ಛಾವರ್ತನೆಯಿಂದ ಬೆಳೆದ ಗೌರಿಯಲ್ಲಿ ಕ್ರಮೇಣ 'ದಿವ್ಯತೆ' ಮೂಡುವುದನ್ನು ನಾವು ಕಾಣುತ್ತೇವೆ. ಅವಳ ಅಂತರ್ಮುಖೀ ಸ್ವಭಾವ, ಅವಳು ಗಂಗೆಯೊಡನೆ ಸಂಭಾಷಣೆ ಮಾಡುತ್ತಿರುವುದು, ಕಾಡಿನ ಬೆಕ್ಕಿನಲ್ಲಿ ಅವಳು ಗಂಗೆಯನ್ನು ಗುರುತಿಸಿದುದು -ಇವೆಲ್ಲ ನನಗೆ ಒಂದು ರೀತಿಯಲ್ಲಿ ಕಾರಂತರ 'ಮೂಕಜ್ಜಿಯ ಕನಸು' ಕಾದಂಬರಿಯನ್ನು ನೆನಪಿಗೆ ತರುತ್ತದೆ. ಅಲ್ಲಿ ಮೂಕಾಂಬಿಕೆ ಅತೀಂದ್ರಿಯ ಗ್ರಹಣಶಕ್ತಿಯನ್ನು ಪಡೆದರೆ, ಇಲ್ಲಿ ಗೌರಿಯಲ್ಲಿ ದೇವತ್ವದ ವರ್ಚಸ್ಸು ಮೂಡಿಬರುತ್ತದೆ. ಅದರಿಂದಾಗಿ ಗೌರಿ ಎಲ್ಲರ ಗೌರವಕ್ಕೆ ಪಾತ್ರಳಾಗುತ್ತಾಳೆ. ದಯಿನಿಗೆ ಸಂಭಾವನೆಗೆಂದು ಬಂದ ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ಹೇಳುವುದಾದರೆ, 'ಈ ಬಾಲೆಯಲ್ಲಿ ಮಂಗಳಗೌರಿಯೇ ನೆಲೆಸಿದಂತೆ ಕಾಣುತ್ತದೆ.' ಅಂಥ ಮಂಗಳಗೌರಿಯ ದರ್ಶನವನ್ನೇ ಪಡೆದ ಅನುಭವವಾಯ್ತು ಅವರಿಗೆ, ಗೌರಿಯನ್ನು ಪ್ರಥಮ ಬಾರಿ ಕಂಡಾಗ. ಕೇಶವ ಆಗಾಗ್ಗೆ ಹೇಳುವ ಅಹಲ್ಯೆಯ ಕತೆ, ಪುರುವಿನ ಕತೆ, ವಿಶ್ವಾಮಿತ್ರನ ಕತೆ, ಶಕುಂತಲೆಯ ಕತೆ, ನಹುಷನ ಕತೆ – ಇವೇ ಮುಂತಾದ ಪುರಾಣ ಕತೆಗಳು, ಕುಮಾರವ್ಯಾಸನನ್ನು ಉಲ್ಲೇಖಿಸುತ್ತ ಅವನು ಮಾಡುವ ಅನೇಕ ಹರಿಕಥೆಗಳು, ಅವನು ಒದಗಿಸಿದ ಹಲವಾರು ಆಧುನಿಕ ಗ್ರಂಥಗಳು, ಗೌರಿಯ ಜೀವನದೃಷ್ಟಿಯನ್ನು ವಿಕಾಸಗೊಳಿಸಲು ಬಹಳಷ್ಟು ಸಹಾಯ ಮಾಡಿದ್ದುವು. ಕಾದಂಬರಿ ಹರಡುತ್ತ ಹೋದಂತೆ ಅವಳು ಅಂಥ ಗೌರವಕ್ಕೆ ಅರ್ಹಳಾದುದು ನಮ್ಮ ಗಮನಕ್ಕೆ ಬೀಳದೇ ಇರಲಾರದು.

ಮುಖ್ಯ ಕತೆಗೆ ಉಪಕತೆಯಂತಿದ್ದರೂ, ಕೆಲವು ಸನ್ನಿವೇಶಗಳು ಕಾದಂಬರಿಗೆ ವಿಶಿಷ್ಟತೆಯನ್ನು ಒದಗಿಸಿದೆ. ಹೊಲೆಯ ಜಾತಿಯವನಾದ ಕರಿಯನೆಂಬ ಯುವಕ, ಸ್ವಲ್ಪ ಮೇಲ್ಜಾತಿಯ ಜಲಜಳೊಡನೆ ಲೈಂಗಿಕ ಸಂಬಂಧ ಬೆಳೆಸಿ, ಜಲಜಳ ಗಂಡನಿಂದ ಕೊಲೆಗೆ ಗುರಿಯಾದ ಸಂಗತಿ ನಮ್ಮ ವೈಚಾರಿಕತೆಯನ್ನು ವಿಮರ್ಶೆಗೆ ಗುರಿಪಡಿಸುತ್ತದೆ. 'ಸಂಘರ್ಷ'ವೆಂಬ ಅರ್ಥ ಪಡೆಯುವ, 'ದಿವ್ಯ'ವೆಂಬ ಶೀರ್ಷಿಕೆಗೆ ಇದು ಅರ್ಥಪೂರ್ಣವಾಗಿದೆ. ಸಮಾಜ ಒಪ್ಪಿಕೊಂಡುಬಂದ ಕೆಲವು ಕಟುತರ ಕಟ್ಟುಕಟ್ಟಲೆಗಳನ್ನು (ಇಲ್ಲಿ ಮನುಷ್ಯ ಸ್ವಾಭಾವಿಕವಾದ ಲೈಂಗಿಕ ಪ್ರಚೋದನೆಗೆ ಜಾತಿ ತಾರತಮ್ಯ ಅಡ್ಡ ಬರುವುದು) ಒರೆ ಹಚ್ಚಿ ನೋಡಲು ಈ ಸನ್ನಿವೇಶ ಎಡೆಮಾಡಿಕೊಡುತ್ತದೆ.

ಎರಡನೆಯ ಭಾಗದಲ್ಲಿ ಸಾಹುಕಾರ ಮಂಜಯ್ಯನವರ ರಾಜಕೀಯ, ಅವರು ಮಗಳು ವಿಮಲಳನ್ನು ಬೆಳಸಿದ ರೀತಿ, ಇವೇ ಮೊದಲಾದ ವಿಷಯಗಳ ವಿವರಗಳಿವೆ. ಗಾಂಧೀವಾದಿಗಳಾದ ಪ್ರಗತಿಶೀಲ ಉದಾರಿಯಂತೆ ವರ್ತಿಸುತ್ತಿರುವ ಮಂಜಯ್ಯ, ಮಗಳನ್ನು ಹದಿನೇಳು ವರ್ಷ ತುಂಬುವುದರೊಳಗೇ ಮಂಗಳೂರಿನ ಶ್ರೀಮಂತರೊಬ್ಬರ ಮಗನಿಗೆ ಮದುವೆ ಮಾಡಿಕೊಟ್ಟಿದ್ದರು. ಆದರೆ, ಮದುವೆಯಾಗಿ ಒಂದು ವರ್ಷದೊಳಗೇ ಆ ಗಂಡ ತೀರಿಕೊಂಡ ಪರಿಣಾಮವಾಗಿ, ವಿಮಲ ತಂದೆಯ ಮನೆ ಸೇರಿಕೊಳ್ಳುತ್ತಾಳೆ. ಇನ್ನೂ ಎಳೆವಯಸ್ಸಿನ ವಿಮಲಳು ಮಂಜಯ್ಯನವರ ಕ್ರಿಶ್ಚನ್ ಡ್ರೈವರ್, ಮಿಂಗೇಲಿಯ ಜೊತೆ ಲೈಂಗಿಕ ಸಂಬಂಧ ಬೆಳೆಸುತ್ತಾಳೆ. ಸಮಾಜಕ್ಕೆ ಹೆದರಿ, ಮಿಂಗೇಲಿ ಅವಳನ್ನು ಗರ್ಭ ತೆಗೆಯುವಂತೆ ಒತ್ತಾಯಿಸಿದಾಗ, ಅವಳು ಒಪ್ಪದೆ ಗಂಡು ಶಿಶುವನ್ನು ಹಡೆದು, ಆ ಶಿಶುವನ್ನು ಅಕ್ಕಯ್ಯ-ಕೇಶವರ ಮನೆಯ ಬಚ್ಚಲಲ್ಲಿ ಗುಟ್ಟಾಗಿ ತಂದಿಟ್ಟು ಹೋಗುತ್ತಾಳೆ. ಮಗು ಅಕ್ಕಯ್ಯ-ಗೌರಿಯರ ಶುಶ್ರೂಷೆಯಲ್ಲಿ ಬೆಳೆಯುತ್ತಿರುತ್ತದೆ.

ಹೆಂಡತಿಯನ್ನು ಕಳೆದುಕೊಂಡ ಮಂಜಯ್ಯನವರ ಲೈಂಗಿಕ ಚಟುವಟಿಕೆಗೇನೂ ಕಡಿಮೆ ಇರಲಿಲ್ಲ. ಮಂಗಳೂರಿನಲ್ಲಿ ಮೀನಾಕ್ಷಿ ಎಂಬ ಎಳೆ ವಯಸ್ಸಿನವಳು ಅವರು ಇರಿಸಿಕೊಂಡವರಲ್ಲೊಬ್ಬಳು. ಅವಳಿಗೆ, ತಮ್ಮ ಮಂಗಳೂರಿನ ಹೆಂಚಿನ ಕಾರ್ಖಾನೆಯ ಮೆನೇಜರ್ ಜವಾಬ್ದಾರಿಯನ್ನೂ ವಹಿಸಿಕೊಟ್ಟಿದ್ದರು. ಆ ಸಂಬಂಧದ ಫಲವಾಗಿ, ಅವರಿಗೆ ವಿನೋದಿನಿ ಎಂಬ ಮಗಳೂ ಇದ್ದಳು. ಮಂಗಳೂರಿನ ಕುಟುಂಬವನ್ನು ಅವರು ಉದಾರತೆಯಿಂದ ನೋಡಿಕೊಳ್ಳುತ್ತಿದ್ದರು.

ಈ ಭಾಗದಲ್ಲೂ, ಸಂಪ್ರದಾಯಸಮ್ಮತ ವಿವಾಹದ ಹೊರಗೆ ಬೆಳೆಸಿದ ಲೈಂಗಿಕತೆಗೆ ಸಂಬಂಧಪಟ್ಟ ಒಂದು ಕೊಲೆಯ ವಿವರವಿದೆ. ತೀರ್ಥಹಳ್ಳಿಯ ಸಮೀಪದ ಹಳ್ಳಿಯೊಂದರ ಗಣಪಯ್ಯ ಎಂಬ ಸಾಹುಕಾರನ ಮಗಳು, ಸರಸ್ವತಿ, ತನ್ನ ಸ್ಕೂಲಿನ ಉಪಾಧ್ಯಾಯನಾದ, ಮೋಚಿ ಜಾತಿಗೆ ಸೇರಿದ, ದುರುಗಪ್ಪನೆಂಬವನೊಡನೆ ಲೈಂಗಿಕ ಸಂಬಂಧ ಬೆಳೆಸುತ್ತಾಳೆ.

ಮೊದಲಿಗೆ ಗುಟ್ಟಾಗಿದ್ದ ಈ ಸಂಬಂಧ ಕ್ರಮೇಣ ಬೆಳಕಿಗೆ ಬರುತ್ತದೆ. ಅಲ್ಲದೆ ಸರಸ್ವತಿ ಗರ್ಭವತಿಯೂ ಆಗುತ್ತಾಳೆ. ಅಚ್ಚ ಬ್ರಾಹ್ಮಣನಾದ ಗಣಪಯ್ಯ ಇದನ್ನು ಸಹಿಸಲಾರದೇ, ದುರುಗಪ್ಪ-ಸರಸ್ವತಿಯರು ಪಲಾಯನ ಮಾಡುವ ಹೊಂಚು ಹಾಕುತ್ತಿದ್ದಂತೆ, ದುರುಗಪ್ಪನ ಕೊಲೆ ಮಾಡಿ, ಪೊಲೀಸ್ ಮಹಜರಿನಲ್ಲಿ ಸಿಕ್ಕಿಬೀಳುತ್ತಾನೆ. ಅವನನ್ನು ಕೊಲೆಯ ಅಪವಾದದಿಂದ ತಪ್ಪಿಸಲು, ಮಂಜಯ್ಯ, ಕೊಲೆಯಾದ ದಿನ ಗಣಪಯ್ಯ ಊರಲ್ಲೇ ಇರಲಿಲ್ಲವೆಂದು ಸುಳ್ಳು ಸಾಕ್ಷಿ ಹೇಳುತ್ತಾರೆ. ಇದು ಅವರ ರಾಜಕೀಯ ಅವನತಿಗೆ ಕಾರಣವಾಗುತ್ತದೆ. ಇದರ ಜೊತೆಗೆ ಅವರನ್ನು, ಲೈಂಗಿಕ ಸ್ವೇಚ್ಛಾವರ್ತನೆಯ ಫಲವಾಗಿ ಪಡೆದುಕೊಂಡ ರೋಗಗಳೂ ಭಾದಿಸುತ್ತವೆ. ಕ್ರಮೇಣ ಅವರು ಹಾಸಿಗೆ ಹಿಡಿಯುತ್ತಾರೆ.

ಇತ್ತ, ಅಕ್ಕಯ್ಯ-ಗೌರಿಯರ ಶುಶ್ರೂಷೆಯಲ್ಲಿ ಬೆಳೆಯುತ್ತಿದ್ದ ತನ್ನ ಮಗು, ಚಂದುವನ್ನು ನೋಡಲು ವಿಮಲ ತವಕಪಟ್ಟು, ಅಕ್ಕಯ್ಯನ ಮನೆಗೆ ಬರುತ್ತಾಳೆ. ಆಗಲೇ ಚಂದುವಿನ ಜನ್ಮದಾತರ ವಿಚಾರ ಬೆಳಕಿಗೆ ಬಂದುದು. ಗೌರಿ, ಹಾಸಿಗೆ ಹಿಡಿದು ಸಾವನ್ನೆದುರಿಸುತ್ತಿರುವ ಮಂಜಯ್ಯನವರಿಗೆ ಈ ವಿಷಯವನ್ನು ತಿಳಿಸಲು ವಿಮಲಳನ್ನು ಒತ್ತಾಯಿಸಿದುದಲ್ಲದೇ, ಅವಳಿಗೆ ಆ ವಿಷಯದಲ್ಲಿ ಸಹಾಯವನ್ನೂ ಮಾಡುತ್ತಾಳೆ. ಚಂದುವನ್ನು ತನ್ನ ಮೊಮ್ಮಗನೆಂದು ಮಂಜಯ್ಯ ಸ್ವೀಕರಿಸುತ್ತಾರೆ.

ಮುಂದಿನ ಭಾಗದಲ್ಲಿ ಇಂಗ್ಲೆಂಡಲ್ಲಿ ವಿದ್ಯಾಭ್ಯಾಸ ಮುಗಿಸಿದ, ಮಂಜಯ್ಯನವರ ಮಗ, ಘನಶ್ಯಾಮನ ಪ್ರವೇಶವಾಗುತ್ತದೆ. ವಿದೇಶಿ ವಿದ್ಯಾಭ್ಯಾಸದ ಫಲವಾಗಿ, ಅವನಲ್ಲಿ ತೀವ್ರಗಾಮೀ ಸಿದ್ಧಾಂತಗಳು ಮನೆಮಾಡಿರುತ್ತವೆ. ದೇವನಹಳ್ಳಿಗೆ ವಾಪಾಸಾದ ಕೆಲವೇ ದಿನಗಳಲ್ಲಿ ಮಂಜಯ್ಯನವರು ತೀರಿಕೊಂಡ ಪರಿಣಾಮವಾಗಿ ಅವರ ಸಮಗ್ರ ಆಸ್ತಿಗೂ ಘನಶ್ಯಾಮ ವಾರಸುದಾರನಾಗುತ್ತಾನೆ. ಇದು ಅವನಿಗೆ ತನ್ನ ಹೊಸ-ಹೊಸ ಸಿದ್ಧಾಂತಗಳನ್ನು ಜಾರಿಗೆ ತರಲು ಅವಕಾಶ ಮಾಡಿಕೊಡುತ್ತದೆ. ಹಾಗಾಗಿ, ಮಂಗಳೂರಿನ ಹೆಂಚಿನ ಕಾರ್ಖಾನೆಯನ್ನು ಚಿಕ್ಕಮ್ಮ ಮೀನಾಕ್ಷಿಗೆ ಬಿಟ್ಟುಕೊಡುತ್ತಾನೆ. ಶಿವಮೊಗ್ಗದಲ್ಲಿರುವ ಪೆಟ್ರೋಲ್ ಬಂಕ್ ಮತ್ತು ಗರಾಜನ್ನು ವಿಮಲ-ಮಿಂಗೇಲರಿಗೆ ಬರೆದು ಕೊಡುತ್ತಾನೆ. ಉಳಿದ ಆಸ್ತಿಯನ್ನು ಒಂದು 'ಟ್ರಸ್ಟ್' ಆಗಿ ನಿರ್ಮಿಸಿ, ಸಮಾಜಕಲ್ಯಾಣಕ್ಕಾಗಿ ಉಪಯೋಗವಾಗುವಂತೆ ಮಾಡುತ್ತಾನೆ. ಪರಿಣಾಮವಾಗಿ, 'ಮಹಾ ಉದಾರಿ', 'ಸಮಾಜಸುಧಾರಕ' ಇತ್ಯಾದಿ ಗೌರವ ಅವನ ಪಾಲಿಗೆ ಬರುತ್ತದೆ. ಆದರೆ, ಆ ಉದಾರೀ ನಿಲುವಿನ ಹಿಂದೆ, ಅವನ ಸ್ವಾರ್ಥವನ್ನು ಕಾಣುತ್ತಾರೆ, ಕೃಷ್ಣಶಾಸ್ತ್ರಿಗಳು. 'ಅಪ್ಪನ ಮಗನೇ ಇವನು. ಈಗಿವನು ಮಾಡುತ್ತಿರುವ ಗೇಣಿಯ ತ್ಯಾಗವೂ ಮುಂದೆ ಇವನ ದೊಡ್ಡ ಆಸ್ತಿಯಾಗಿಬಿಡುತ್ತದೆ. ಕಳೆದುಕೊಂಡದ್ದಕ್ಕಿಂತ ಹೆಚ್ಚನ್ನು ಗಳಿಸುತ್ತಾನೆ; ಹಣವಾಗಿ ಹೋದದ್ದು ಅಧಿಕಾರವಾಗಿ ಹಿಂದಕ್ಕೆ ಬರುತ್ತದೆ.' ಎಂಬ ಅವರ ಮಾತಿನಲ್ಲಿ ಘನಶ್ಯಾಮನ ಉದ್ದೇಶಗಳು ವ್ಯಕ್ತವಾಗುತ್ತವೆ. ಅಪ್ಪನಿಗಿಂತಲೂ ಹಲವು ಹೆಜ್ಜೆ ಮುಂದಿಟ್ಟ

ರಾಜಕಾರಣಿಯಂತೆ ಅವನು ಕಾಣಿಸಿಕೊಳ್ಳುತ್ತಾನೆ. ದೇವನಹಳ್ಳಿ ಮನೆಯಲ್ಲಿ ಭೂವರಾಹ ವಿಗ್ರಹದ ಪೂಜೆ ನಿಲ್ಲುತ್ತದೆ; ಪೂಜಾರಿ ಕೇಶವನನ್ನು ಹೊಸದಾಗಿ ನಿರ್ಮಿಸಿದ, ತಾಳಮದ್ದಲೆ-ಯಕ್ಷಗಾನ ಅಕೆಡಮಿಯ ಸೆಕ್ರೆಟರಿಯಾಗಿ ಘನಶ್ಯಾಮ ನೇಮಕ ಮಾಡುತ್ತಾನೆ. ಭೂವರಾಹ ವಿಗ್ರಹ ಅವನ ಲಿವಿಂಗ್ ರೂಮ್‌ನಲ್ಲಿ ಒಂದು ಪ್ರದರ್ಶನದ ವಸ್ತುವಾಗಿ ನಿಲ್ಲುತ್ತದೆ. ಹೀಗೆ, ದೇವನಹಳ್ಳಿಯಲ್ಲಿ ಅವನು ವ್ಯಾಪಕ 'ಸುಧಾರಣೆ'ಗಳನ್ನು ಜಾರಿಗೆ ತರುತ್ತಾನೆ. ಇಷ್ಟೆಲ್ಲ ನಡೆಯುತ್ತಿರುವಂತೆ, ದೇವನಹಳ್ಳಿಯಲ್ಲಿ ನಡೆದ, ಇನ್ನೂ ಮಹತ್ತರವಾದ 'ಬದಲಾವಣೆ'ಗಳೆಂದರೆ, ಗೌರಿ ಘನಶ್ಯಾಮನನ್ನು ಮದುವೆಯಾದುದು; ಕೇಶವ ವಿನೋದಿನಿಯನ್ನು ವರಿಸಿದುದು. ಈ ಮದುವೆಗಳಿಗೆ ಪ್ರೇರಕರೆಂದರೆ, ಸಂಪ್ರದಾಯಸ್ಥರಾದ, ಕೃಷ್ಣಶಾಸ್ತ್ರಿಗಳು ಮತ್ತು ಅಕ್ಕಯ್ಯ – ಇವರೇ!

**'ದಿವ್ಯ'ದ ಪಾತ್ರವರ್ಗ:**

ಕಾದಂಬರಿಯಲ್ಲಿ ಬರುವ ಹಲವು ಪಾತ್ರಗಳು ಓದುಗರ ಗಮನ ಸೆಳೆಯುತ್ತವೆ. ಅಕ್ಕಯ್ಯನ ಪಾತ್ರವಂತೂ ಕಾದಂಬರಿಯಲ್ಲಿ ವಿಶಿಷ್ಟತೆ ಪಡೆದು ನಮ್ಮನ್ನು ಆಕರ್ಷಿಸುತ್ತದೆ. ಅವಳ ಪಾತ್ರ, ನನಗೆ ಕಾರಂತರ 'ಮರಳಿ ಮಣ್ಣಿಗೆ'ಯ ಪಾರೋತಿ ಪಾತ್ರವನ್ನು ನೆನೆಸಿಕೊಳ್ಳುವಂತೆ ಮಾಡಿತು. ಇಬ್ಬರದೂ ಉದಾರೀ ಮನಸ್ಸು, ಇಬ್ಬರೂ ಮಕ್ಕಳಿಲ್ಲದೇ 'ತಾಯಿ' ಎನಿಸಿಕೊಂಡವರು; ಅಂದರೆ, ತಾಯ್ತನ ಅವರ ಹೃದಯದಲ್ಲಿ ತುಂಬಿ ತುಳುಕಾಡುತ್ತಿದ್ದುದನ್ನು ನಾವು ಕಾಣಬಹುದು. ಸಂಪ್ರದಾಯಸ್ಥಳಾದರೂ, ಅಕ್ಕಯ್ಯ ಸಂಪ್ರದಾಯ ತನ್ನನ್ನು ಕೆಡಿಸದಂತೆ ನೋಡಿಕೊಂಡಿದ್ದಳು. ಅವಳು ಜಲಜ-ಕರಿಯರ ಸಂಬಂಧದಲ್ಲಿ ತಳೆದ ಉದಾರ ನಿಲುವು, ಇದಕ್ಕೆ ಸಾಕ್ಷಿಯಾಗಿ ನಿಂತಿದೆ. ಅವಳು ಆ ಸಂಬಂಧವನ್ನು ಒಪ್ಪಿರದಿದ್ದರೂ, ಬೆತ್ತಲೆಯಾಗಿ, ಅನ್ನ ನೀರಿಲ್ಲದೆ ಊರ ಜನರ ದುಷ್ಟವರ್ತನೆಯಿಂದ ತಪ್ಪಿಸಿಕೊಳ್ಳಲು ತಲೆಮರೆಸಿ ತಿರುಗುತ್ತಿದ್ದ ಜಲಜ, ಮನೆಯ ಹಿತ್ತಿಲಲ್ಲಿ ರಾತ್ರೆ ಗೋಚರಿಸಿಕೊಂಡಾಗ, ಅವಳಿಗೆ ಊಟ ಹಾಕಿ, ಅವಳನ್ನು ಆ ರಾತ್ರಿ ತನ್ನ ಮನೆಯಲ್ಲೇ ಮಲಗಲು ಹೇಳಿ, ಅವಳಿಗೆ ನೈತಿಕ ಬೆಂಬಲ ನೀಡುತ್ತಾಳೆ. ಇದು ಅವಳ ಔದಾರ್ಯದ ಜೊತೆಗೇ ವಿಶಾಲ ಮನೋಭಾವವನ್ನೂ ವ್ಯಕ್ತಪಡಿಸುತ್ತದೆ. ಅಂತೆಯೇ, ವಿಮಲ ತಾನು ಹೆತ್ತ ಮಗುವನ್ನು ಮನೆಯ ಬಚ್ಚಲಲ್ಲಿ ಬಿಟ್ಟು ಹೋದಾಗ, ಮಗುವಿನ ಜನ್ಮದಾತರಾರು? ಮಗುವಿನ ಜಾತಿ ಯಾವುದು? – ಎಂಬ ವಿವರಗಳು ತಿಳಿಯದಿದ್ದರೂ, ಅವ್ಯಾವುದನ್ನೂ ಲೆಕ್ಕಿಸದೆ, ಆ ಮಗುವನ್ನು 'ದೇವರ ಮಗು' ಎಂದು ಸ್ವೀಕರಿಸುವಷ್ಟು ವಿಶಾಲ ಮನೋಭಾವದವಳು, ಅವಳು. ಇಲ್ಲಿ ನನಗೆ ಎದ್ದು ಕಂಡುದು, ಅವಳ ಮನಸ್ಸಿನಲ್ಲಿ 'ಸರಿ-ತಪ್ಪು'ಗಳ ವಿಮರ್ಶೆಯಲ್ಲಿ, ಆ ಬಗ್ಗೆ ಅವಳ ಮನಸ್ಸಿನಲ್ಲಿ ನಡೆದ 'ಸಂಘರ್ಷ'ದಲ್ಲಿ, ವಿವೇಚನೆಯೇ ಗೆದ್ದು ಬಂದುದು. 'ಸಂಪ್ರದಾಯ' ಅವಳನ್ನು ಕುರುಡು ಮಾಡದೆ 'ವಿವೇಕ'ವೇ ಅವಳಿಗೆ ಆದರ್ಶವಾದುದು. ಆ ಗುಣ 'ದಿವ್ಯ'ವೆಂದೇ

ಹೇಳಬೇಕು! ಕೊನೆಯಲ್ಲಿ, ತಮ್ಮ ಕೇಶವ, ಸಾಹುಕಾರ ಮಂಜಯ್ಯನವರು ಮಂಗಳೂರಿನಲ್ಲಿ ಇರಿಸಿಕೊಂಡ, ಹಾಗೂ ಸಂಸಾರದ ಸಾಂಪ್ರದಾಯಿಕ ಕಟ್ಟಿನಿಂದ ಹೊರಗಿನ ಸಂಬಂಧ ಬೆಳೆಸಿಕೊಂಡ, ಮೀನಾಕ್ಷಿಯ ಮಗಳು, ವಿನೋದಿನಿಯನ್ನು ಮದುವೆಯಾಗುವುದಕ್ಕೂ ಪ್ರೇರಣೆ ಕೊಡುವಷ್ಟು ಅವಳ ಮನೋಭಾವ ವಿಶಾಲವಾಗಿತ್ತು! 'ದಿವ್ಯ'ವೆಂಬ ಶಬ್ದದ ವಿರುದ್ಧ ಅರ್ಥಗಳ ಸಂಗಮ, ಅಕ್ಕಯ್ಯನ ವ್ಯಕ್ತಿತ್ವದಲ್ಲಿ ಚೆನ್ನಾಗಿ ಮೂಡಿಬಂದಿದೆ.

ಕಥಾ ನಾಯಕಿಯಾಗಿ ನಮ್ಮ ಮನಸ್ಸನ್ನು ಸೆಳೆಯುವ ಗೌರಿಯ ಪಾತ್ರದಲ್ಲೂ 'ಸಂಘರ್ಷ' ಮತ್ತು 'ವಿವೇಚನೆ'ಗಳು ಮುಖಾಮುಖಿಯಾಗುವುದನ್ನು ನಾವು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಅವಳು ಬೆಳೆಯುತ್ತಿದ್ದಂತೆ, ಒಂದು ಬಗೆಯ ಅಲೌಕಿಕ ಪ್ರಜ್ಞೆ ಅವಳಲ್ಲಿ ಮೂಡುವುದನ್ನು ನಾವು ಗಮನಿಸುತ್ತೇವೆ. ಅನಂತಮೂರ್ತಿಯವರು ಅವಳಲ್ಲಿ ಈ ರೀತಿ ಅನುಭವ ಮೂಡಿಸುವುದರ ಕಾರಣವೇನಾದರೂ ಇದೆಯೆ? ಗೌರಿ ತನ್ನ ಜೀವನ ದೃಷ್ಟಿಯಲ್ಲಿ 'ಪರಿಪಕ್ವತೆ' ಪಡೆಯುವುದನ್ನು ಅದು ಸಂಕೇತಿಸುತ್ತದೆಯೆ? ಗಂಗೆಯ ನಿಧನ, ಅವಳಲ್ಲಿ ಆ ಅನುಭವ ಮೂಡಿಸುವಲ್ಲಿ ಬೇರೆ ಸಂಕೇತವೇನಾದರೂ ಇದ್ದೀತೆ? ಗಂಗೆಯ ಸಾವಿನ ಬಳಿಕ ತಂಗಿಯನ್ನು ಸಂಪರ್ಕಿಸುವ, ಅವಳೊಡನೆ ಸಂಭಾಷಿಸುವ, ಅವಳ ವಿಶಿಷ್ಟ ನಡಾವಳಿಕೆ, ಅದ್ಯಾಕೋ ಮೂಕಜ್ಜಿ ಕನಸಿನ ಮೂಕಾಂಬಿಕೆಯ ನೆನಪನ್ನು ನನಗೆ ತಂದಿತು. ಸಂಪ್ರದಾಯಸ್ಥ ಹಿನ್ನೆಲೆಯಲ್ಲಿ ಬೆಳೆದರೂ, ಹೊಲೆಯನಾದ ಕರಿಯನ ಮೇಲೆ ಅವಳಿಗೆ ಒಂದು ಬಗೆಯ ಒಲವು ಮೂಡಿರುತ್ತದೆ. ಅದು ಒಂದು ಲೌಕಿಕ ಸ್ವಭಾವದ ಆಕಾಂಕ್ಷೆ. ಆದರೆ ಅಲ್ಲೂ ಅಲೌಕಿಕತೆಯ ಛಾಯೆ ಇರುವುದನ್ನು ನಾವು ಗಮನಿಸಬಹುದು. ಕರಿಯ ಕೊಳಲು ಹಿಡಿದು ನಿಂತಾಗ ಅವಳ ಹೃದಯದಲ್ಲಿ ಬೆಳಗುತ್ತಿರುವುದು ಕೃಷ್ಣನ ದಿವ್ಯ ರೂಪ. ಅವನ ತಲೆಗೆ ನವಿಲುಗರಿಯನ್ನು ಸಿಕ್ಕಿಸಿ ಆ ರೂಪವನ್ನು ಇನ್ನಷ್ಟು ದಿವ್ಯವಾಗಿ ಅನುಭವಿಸುವ ಆಸೆ ಅವಳಿಗೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ಅವಳ ಮನಸ್ಸಿನಲ್ಲಿ ಲೌಕಿಕತೆ ಮತ್ತು ಅಲೌಕಿಕತೆಗಳು ಮುಖಾ-ಮುಖಿಯಾಗಿರುವುದನ್ನು. ಆ ದ್ವಂದ್ವದಲ್ಲಿ ಅಲೌಕಿಕತೆಯದೇ ಮೇಲುಗೈಯಾಯ್ತೆಂಬ ಭಾವ ನಮ್ಮಲ್ಲಿ ಮೂಡಿಬರುತ್ತದೆ.

ಕತೆಯು ಬಿಚ್ಚಿಕೊಳ್ಳುತ್ತಿದ್ದಂತೆ, ಗೌರಿಯ ವ್ಯಕ್ತಿತ್ವವೂ ಪರಿಪಕ್ವವಾಗುತ್ತಿರುವುದನ್ನು ನಾವು ಗಮನಿಸಬಹುದು. ದಯಿನಿಯ ಗುಡ್ಡ-ಕಾಡುಗಳಲ್ಲಿ ಸ್ವೇಚ್ಛಾಚಾರಿಯಾಗಿ ಸುತ್ತಾಡುವ ಗೌರಿಯಾಗಿ ಅವಳು ಉಳಿಯದೇ, ಜೀವನದಲ್ಲಿ ನಿಷ್ಠಾವಂತಳಾಗಿ ಬೆಳೆಯುತ್ತಿರುವುದನ್ನು ನಾವು ಕಾಣುತ್ತೇವೆ. ಕೇಶವ ಹೇಳುತ್ತಿರುವ ಭಾಗವತ ಕತೆಗಳು ಅವಳಿಗೆ ಮನರಂಜನೆ ಕೊಡುವುದರ ಜೊತೆಗೇ, ಹಲವು ಅನುಭವಗಳನ್ನೂ ಕೊಟ್ಟಿತ್ತು. ಹರಿಕಥೆ, ಪುರಾಣ ಕತೆಗಳು ಭಾರತೀಯ ಸಂಸ್ಕೃತಿಯ ತಳಪಾಯವೆನ್ನಬಹುದು. ಅವು ಗೌರಿಯನ್ನು ಸುಸಂಸ್ಕೃತಳನ್ನಾಗಿ ಮಾಡಿದ್ದವು. ಫಲವಾಗಿ, ತಾನು ಗಳಿಸಿದ ಅನುಭವಗಳನ್ನು

ಇತರರೊಡನೆ ಹಂಚಿಕೊಳ್ಳಲು ಗೌರಿಗೆ ಸಾಧ್ಯವಾಗುತ್ತದೆ. ಮಿಂಗೇಲಿಯಿಂದ ಗರ್ಭವತಿಯಾಗಿ, ಚಂದುವನ್ನು ಗುಟ್ಟಾಗಿ ಹಡೆದ ವಿಮಲ, ಆ ವಿಷಯವನ್ನು ತಂದೆಯಿಂದ ದೂರವಾಗಿಟ್ಟು, ಸಮಸ್ಯೆಯನ್ನು ಎದುರಿಸುವ ಧೈರ್ಯ ಕಳೆದುಕೊಂಡಾಗ, ಸೂಕ್ತ ಸಲಹೆಗಳನ್ನು ನೀಡಿದವಳು ಗೌರಿ. ಚಂದುವನ್ನು ಹೆತ್ತ ತಾಯಿಯೊಡನೆ ಒಂದುಗೂಡಿಸಲು ಅವಳ ಪ್ರಯತ್ನಗಳು ಕಡಿಮೆಯೇನಿರಲಿಲ್ಲ. ಅವು ಅವಳ ಪರಿಪಕ್ವತೆಗೆ ನಿದರ್ಶನವಾಗಿ ನಿಲ್ಲುತ್ತವೆ. ಘನಶ್ಯಾಮನೂ ಅವಳಿಂದ ಹಲವು ಉಪಯುಕ್ತ ಸಲಹೆಗಳನ್ನು ಪಡೆಯುತ್ತಾನೆ. ವಿನೋದಿನಿ, ವಿಮಲ, ಕೇಶವ – ಎಲ್ಲರೂ ಅವಳ ಈ ಗುಣವನ್ನು ಗುರುತಿಸಿ, ಪ್ರಯೋಜನಪಡೆಯುತ್ತಾರೆ. ಒಟ್ಟಿನಲ್ಲಿ, ಅವಳು ಈ ಕಾದಂಬರಿಯಲ್ಲಿ ಆದರ್ಶ ಮಹಿಳೆಯಾಗಿ ಓದುಗರ ಮನಸ್ಸನ್ನು ತಟ್ಟುತ್ತಾಳೆ. ಆದರೆ, ಕೊನೆಯಲ್ಲಿ ತನ್ನ ನಂಬಿಕೆಗಳಿಗೆ ಭಿನ್ನವಾದ ನಂಬಿಕೆಗಳನ್ನು ಹೊತ್ತ ಘನಶ್ಯಾಮನನ್ನು ಅವಳು ವರಿಸಲು ನಿರ್ಧರಿಸಿದುದು, ನಿಜಕ್ಕೂ ಆಶ್ಚರ್ಯವೆನಿಸುತ್ತದೆ. ಈ ನಿರ್ಣಯವನ್ನು ಅವಳು 'ಧುತ್' ಎಂದು ತೆಗೆದುಕೊಂಡ ಬಗೆ ಓದುಗರನ್ನು ಗೊಂದಲಕ್ಕಿಟ್ಟುಕೊಳ್ಳುವುದಂತೂ ನಿಜ!

ಕೇಶವ ಈ ಕಾದಂಬರಿಯಲ್ಲಿ ಬರಿಯ ಪೂಜೆ ಭಟ್ಟನಾಗದೇ, ಒಬ್ಬ ಸುಸಂಸ್ಕೃತನಾಗಿ ಕಾಣಿಸಿಕೊಳ್ಳುತ್ತಾನೆ. ಅವನು ಊರ ಜನರಿಗೆ ನಾಟಿ ಔಷಧ ಕೊಡುತ್ತಾನೆ; ನಿಮಿತ್ಯ ಹೇಳಿ ಅವರಿಗೆ ಮನಃಶಾಂತಿ ಒದಗಿಸುತ್ತಾನೆ; ತಾಳಮದ್ದಲೆಯಲ್ಲಿ ಭಾಗವಹಿಸುತ್ತಾನೆ; ಹರಿಕಥೆ, ಪುರಾಣ ಕತೆಗಳನ್ನು ಹೇಳಿ ಅವರಿಗೆ ಮನರಂಜನೆ ಒದಗಿಸುತ್ತಾನೆ, ಜೊತೆಯಲ್ಲಿ ಅವರಲ್ಲಿ ಭಾರತೀಯ ಸಂಸ್ಕೃತಿಯ ಪ್ರಜ್ಞೆಯನ್ನು ಕೆರಳಿಸುತ್ತಾನೆ. ಹೀಗೆ ಹಲವು ರೀತಿಯಲ್ಲಿ ಹಳ್ಳಿಯ ಜನರ ಬದುಕಿನಲ್ಲಿ ಭಾಗಿಯಾಗಿದ್ದಾನೆ. ಹಟ್ಟಿಯಲ್ಲಿ ಕೆಲಸ ಮಾಡುವ ಹಾಳೆ ಟೊಪ್ಪಿಯ ಜಲಜಳ 'ಸೇಳೆ'ಗೆ ಆಗಾಗ್ಗೆ ಮನಸೋತರೂ, ತನ್ನ ವಿವೇಕವನ್ನು ಅವನು ಕಳೆದುಕೊಂಡಿರಲಿಲ್ಲ. ಘನಶ್ಯಾಮ ಇಂಗ್ಲೆಂಡ್‌ನಿಂದ ಮರಳಿ, ದೇವನಹಳ್ಳಿ ಮನೆಯ ಆಸ್ತಿ–ಪಾಸ್ತಿಗಳ ವಹಿವಾಟುಗಳನ್ನು ವಹಿಸಿಕೊಂಡು, ಜಾರಿಗೆ ತಂದ ಹಲವು 'ಸುಧಾರಣೆ'ಗಳನ್ನು ಚಾಚೂ ಎನ್ನದೆ ಒಪ್ಪಿಕೊಳ್ಳುತ್ತಾನೆ. ಕೊನೆಯಲ್ಲಿ ಭೂವರಾಹ ವಿಗ್ರಹದ ಪೂಜಾರಿ, ಕೇಶವ ಭಟ್ಟ, ಘನಶ್ಯಾಮ ಸ್ಥಾಪಿಸಿದ ತಾಳಮದ್ದಲೆ ಕೇಂದ್ರ, ಸಂಸ್ಕೃತ ಮತ್ತು ರಿಲಿಜಿಯನ್ ಸಂಶೋಧನಾ ಕೇಂದ್ರಗಳ ಉಸ್ತುವಾರಿ ವಹಿಸಿಕೊಂಡು, ಮಿಸ್ಟರ್ ಕೇಶವ ಭಟ್ಟ, 'ಸಾಹುಕಾರ್ ಟ್ರಸ್ಟ್'ನ ಸೆಕ್ರೆಟರಿಯಾಗಿ ಮಾರ್ಪಡುತ್ತಾನೆ. ಆದರೆ, ಅವನು ಸಂಪ್ರದಾಯವನ್ನು ತ್ಯಜಿಸಿದನೆಂದೆ? ಸಂಪ್ರದಾಯ ಪ್ರಜ್ಞೆಯನ್ನು ಉಳಿಸಿಕೊಂಡೇ, ಅವನು 'ಬದಲಾವಣೆ'ಗಳಿಗೆ ಒಗ್ಗಿಕೊಳ್ಳುತ್ತಾನೆ ಎಂಬ ಭಾವನೆ ನಮ್ಮಲ್ಲಿ ಮೂಡಿಸುತ್ತಾನೆ. ಆದರೆ, ಅನಂತಮೂರ್ತಿಯವರು, ಕೇಶವನಲ್ಲಾದ 'ಬದಲಾವಣೆ'ಗಳನ್ನು 'ದಿಢೀರ್' ಎಂದು ವಿವರಿಸುವ ಬದಲು, ಸೂಕ್ತವಾಗಿ, ಹಂತ–ಹಂತದಲ್ಲಿ ವಿವರಿಸಿದ್ದರೆ ಚೆನ್ನಾಗಿರುತ್ತಿತ್ತೇನೋ ಎನಿಸಿತು, ನನಗೆ. ಈ ಹಠಾತ್

ಬದಲಾವಣೆ ತನ್ನ 'ಉದ್ದೇಶ'ವನ್ನು ಕಳೆದುಕೊಂಡಿತೋ ಎಂಬ ಅನುಮಾನವೂ ನನ್ನಲ್ಲಿ ಹುಟ್ಟಿತು. ಕೇಶವನಲ್ಲಾದ ಈ 'ಅವಸರ'ದ ಬದಲಾವಣೆ, 'ಸಂಸ್ಕಾರ'ದಲ್ಲಿ ಪ್ರಾಣೇಶಾಚಾರ್ಯ ಬದಲಾದುದನ್ನು ನೆನಪಿಗೆ ತರುತ್ತದೆ.

ಘನಶ್ಯಾಮನನ್ನು ಈ ಕಾದಂಬರಿಯಲ್ಲಿ ಒಬ್ಬ 'ಸುಧಾರಕ'ನನ್ನಾಗಿ ಚಿತ್ರಿಸಿದ್ದಾರೆ. ಇಂಗ್ಲೆಂಡ್‌ನಲ್ಲಿ ಶಿಕ್ಷಣ ಪಡೆದ ಅವನು, ತಂದೆಯ ಸಾವಿನ ಬಳಿಕ, ಶತಮಾನದಿಂದಲೂ ನಡೆಯುತ್ತಿದ್ದ ಭೂವರಾಹನ ಪೂಜೆಯನ್ನು ನಿಲ್ಲಿಸಿದಾಗ, ನಮ್ಮ ಮನಸ್ಸಿನಲ್ಲಿ ಅವನು ಸಂಪ್ರದಾಯದಲ್ಲಿ ನಂಬಿಕೆ ಕಳೆದುಕೊಂಡವನಂತೆ ಕಾಣಿಸಿಕೊಳ್ಳುತ್ತಾನೆ. ತಂದೆಗಿಂತಲೂ ಹೆಚ್ಚಿನ ನುರಿತ ರಾಜಕಾರಣವೂ ಅವನಲ್ಲಿದೆ. ಅವನ ಎಲ್ಲ ತ್ಯಾಗಗಳೂ ಮುಂದೆ ಯಶಸ್ಸು ಮತ್ತು ಅಧಿಕಾರಗಳನ್ನು ಪಡೆಯುವ ಉದ್ದೇಶಕ್ಕಾಗಿ ಎಂಬ ಭಾವನೆ ನಮ್ಮಲ್ಲಿ ಮೂಡಿಸುತ್ತದೆ. ಗೌರಿಯ ಪಾತ್ರ ಅವನಿಗೆ ಮಿಸ್ಟೀರಿಯಸ್ ಆಗಿ ಕಂಡಷ್ಟೂ, ಅವಳಲ್ಲಿ ಅವನ ಆಕರ್ಷಣೆ ಹೆಚ್ಚುತ್ತ ಹೋಗಿ, ಅಂತ್ಯದಲ್ಲಿ, ಅವನು ಗೌರಿಯನ್ನೇ ಮದುವೆಯಾಗುತ್ತಾನೆ. ಅವನು ಭೂವರಾಹನ ವಿಗ್ರಹವನ್ನು ಒಂದು ಪ್ರದರ್ಶನದ ವಸ್ತುವಾಗಿಟ್ಟದ್ದನ್ನು ನೋಡಿ, ಗೌರಿಯಲ್ಲದೆ, ವಿಮಲ, ವಿನೋದಿನಿಯರ ಅಸಮ್ಮತಿಗೂ ಪಾತ್ರನಾಗುತ್ತಾನೆ. ಮದುವೆಯ ನಂತರ, ಅವನಲ್ಲಿ ಸಂಪ್ರದಾಯದ ಬಗ್ಗೆ ಏನಾದರೂ ಬದಲಾವಣೆ ಕಂಡೀತೇ ಎಂಬುದು ಓದುಗರ ಊಹೆಗೆ ಬಿಟ್ಟಂತಿದೆ. ಘನಶ್ಯಾಮ ಸುಧಾರಿಸಬೇಕೆಂದಿದ್ದ 'ಕ್ಷೇತ್ರ'ದಲ್ಲೇ, ಗೌರಿ ದೇವಿಯಾಗಿ ಮೆರೆಯುತ್ತಾಳೆ ಎಂಬುದನ್ನಂತೂ ನಾವು ಖಂಡಿತ ಊಹಿಸಿಕೊಳ್ಳಬಹುದು. ಕೆಲವೊಮ್ಮೆ ಘನಶ್ಯಾಮನ ಪಾತ್ರ ನಮಗೆ 'ಕಾನೂರು ಹೆಗ್ಗಡತಿ'ಯ ಹೂವಯ್ಯನ ಪಾತ್ರದ ಜ್ಞಾಪಕ ತರುತ್ತದೆ.

ಮಂಜಯ್ಯ ಮೊದಲಿಗೆ ಒಬ್ಬ ಗಾಂಧೀವಾದದ ವಕ್ತಾರರಂತೆ ಕಂಡುಬಂದರೂ, ಕಾದಂಬರಿ ಹರಡುತ್ತ ಹೋದಂತೆ, ಅವರು ಒಬ್ಬ ವಿಷಯಲಂಪಟರಾಗಿಯೂ ಕಾಣಿಸುತ್ತಾರೆ. ರಾಜಕೀಯ ವಲಯದಲ್ಲೂ, ದೇವನಹಳ್ಳಿಯಲ್ಲೂ ವರ್ಚಸ್ಸುಳ್ಳ ಮಂಜಯ್ಯ, ಗಣಪಯ್ಯನೆಂಬ ಜಮೀನ್ದಾರನ ಬಗ್ಗೆ ಸುಳ್ಳು ಸಾಕ್ಷಿ ಹೇಳಿದಾಗ, ಎಲ್ಲ ವರ್ಚಸ್ಸನ್ನೂ ಕಳೆದುಕೊಂಡು, ರಾಜಕೀಯದಲ್ಲಿ ಹಿನ್ನಡೆ ಹಾಕುವಂತಾಗುತ್ತದೆ. ಸಾವು ಸಮೀಪಿಸುತ್ತಿದ್ದಂತೆ, ಹುಲಿಯಂತಿದ್ದ ಮಂಜಯ್ಯ ಆಡಿನಂತಾಗುವುದನ್ನು ನಾವು ಗಮನಿಸುತ್ತೇವೆ.

ಕೃಷ್ಣಶಾಸ್ತ್ರಿಯ ಪಾತ್ರ ಇಲ್ಲಿ ಒಂದು ವಿಶಿಷ್ಟತೆಯನ್ನು ಪಡೆದಿದೆ. ಸಂಭಾವನೆಗೆಂದು ದಯಿನಿಗೆ ಬಂದ ಶಾಸ್ತ್ರಿಗಳು, ಮುಂದೆ ದೇವನಹಳ್ಳಿಯ ವ್ಯವಸ್ಥೆ ಬದಲಾಗುವಲ್ಲಿ ಭಾಗಿಗಳಾಗುವುದನ್ನು ಕಾಣಬಹುದು. ಘನಶ್ಯಾಮ ಗೌರಿಯನ್ನು ಮದುವೆಯಾಗುವಲ್ಲೂ, ಕೇಶವ ವಿನೋದಿನಿಯನ್ನು ವರಿಸುವಲ್ಲೂ ಇವರ ಕೈವಾಡವಿರುವುದನ್ನು ಓದುಗರು ಗಮನಿಸಬಹುದು.

‘ದಿವ್ಯ’ ಸಾರುವ ಸಂದೇಶ:

‘ದಿವ್ಯ’ ಕಾದಂಬರಿಯನ್ನು ಓದುತ್ತಿದ್ದಂತೆ ನಮ್ಮ ಗಮನಕ್ಕೆ ಥಟ್ಟನೆ ಹೊಳೆಯದಿದ್ದರೂ (ಇದು ಕಾದಂಬರಿಯ ಒಂದು ಮೈನಸ್ ಪಾಯಿಂಟ್ ಎಂದರೂ ಸರಿಯೇ!) ಒಂದು ವಿಶಿಷ್ಟ ಸಂದೇಶ ಅಡಗಿ ಕುಳಿತಿರುವುದನ್ನು ಗಮನಿಸಬಹುದು. ಅಲ್ಲಿ ಹಳತು-ಹೊಸತುಗಳ ತಿಕ್ಕಾಟ ನಡೆಯುತ್ತಿದ್ದಂತೆಯೇ ಅವೆರಡೂ ಒಂದನ್ನೊಂದು ಸಂಗಮಿಸಿ, ‘ಸಂಧಾನ’ ಮಾಡಿಕೊಳ್ಳುವುದನ್ನೂ ನಾವು ಕಾಣಬಹುದು. ಒಂದೆಡೆ ಭಾರತೀಯ ಸಂಸ್ಕೃತಿಯ ಬುಡಕಟ್ಟೆಂದೇ ಪರಿಗಣಿಸಿದ ಸಂಪ್ರದಾಯ, ಇನ್ನೊಂದೆಡೆ ಅಲ್ಲಿನ ಹಲವಾರು ಗೊಡ್ಡು ಕಟ್ಟುಕಟ್ಟಳೆಗಳನ್ನು ಸುಧಾರಿಸುವ ಪ್ರಯತ್ನ – ಇವೆರಡರ ಸಂಘರ್ಷದಿಂದ, ಅವುಗಳನ್ನು ವಿಮರ್ಶೆಗೆ ಗುರಿಪಡಿಸಿದಾಗ, ಮೂಡಿಬರುವ ಹೊಸ ವ್ಯವಸ್ಥೆ. ಆ ವ್ಯವಸ್ಥೆಯನ್ನು ವರ್ಣಿಸಿದ ರೀತಿ ಕಾದಂಬರಿಯ ವೈಶಿಷ್ಟ್ಯವೆಂದು ಹೇಳಬಹುದು. ಕಾಲ ಕಳೆದಂತೆ ನಮ್ಮ ಬದುಕಿನಲ್ಲಿ ‘ಬದಲಾವಣೆ’ಯಾಗುತ್ತಿರುವುದು ಸಹಜ! ಈ ಬದಲಾವಣೆ ಕಾಲನ ನಿಯಮ. ಹೆಚ್ಚಿನ ಅರಿವಿಲ್ಲದೆ, ನಮ್ಮ ಹೃದಯದಲ್ಲಿ ನಡೆಯುತ್ತಿರುವ ಈ ಬದಲಾವಣೆಗಳಲ್ಲಿ ನಾವು ಭಾಗಿಗಳಾಗಿಯೇ ತೀರಬೇಕು; ಇಲ್ಲದಿದ್ದಲ್ಲಿ ಸಮಾಜದಲ್ಲಿ ನಾವು ಹಿಂದುಳಿಯುತ್ತೇವೆ. ಈ ಸಂದೇಶ ಬಹಳ ಸೂಕ್ಷ್ಮವಾಗಿ ಕಾದಂಬರಿಯಲ್ಲಿ ಮೂಡಿಬಂದಿದೆ. ಕಾಲನ ನಿಯಮಕ್ಕನುಸಾರವಾಗಿ ನಡೆಯುವ ‘ಸ್ವಯಂಪ್ರೇರಿತ’ ಬದಲಾವಣೆಗಳನ್ನು ಒಪ್ಪಿಕೊಂಡು ಅವುಗಳನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳುವುದು ಸುಲಭ. ಇಲ್ಲಿ ಘನಶ್ಯಾಮ ಜಾರಿಗೆ ತಂದ ‘ಸುಧಾರಣೆ’ಗಳು ಸಮಾಜದ ‘ಬದಲಾವಣೆ’ಗೆ ಕಾರಣವಾದರೂ, ಅವು ಹೊರಗಿನ ಪ್ರೇರಣೆಯಿಂದ ಪರಿಣಮಿಸಿದವು. ಹಾಗಾಗಿ, ಅವನ ಕೆಲವು ‘ಸುಧಾರಣೆ’ಗಳನ್ನು ಸಮ್ಮತಿಸುವಲ್ಲಿ ಸ್ವಲ್ಪ ಪ್ರತಿರೋಧವಿರುವುದು ಸಹಜವೇ! ಶತಮಾನದಿಂದಲೂ ನಡೆದು ಬಂದ ಭೂವರಾಹ ವಿಗ್ರಹದ ಪೂಜೆಯನ್ನು ನಿಲ್ಲಿಸಿದುದು ಸಂಪ್ರದಾಯಕ್ಕೇ ಕೊಡಲಿ ಕೊಟ್ಟಂತಾಗಿ ಕಂಡುಬಂದು, ಅದಕ್ಕೆ ಪ್ರತಿರೋಧ ಬಂದುದು ಇದಕ್ಕೊಂದು ಉದಾಹರಣೆಯಾಗಿ ನನಗೆ ಕಂಡುಬಂತು. ಅಂದರೆ, ‘ಬದಲಾವಣೆ’ ಮತ್ತು ‘ಸುಧಾರಣೆ’ – ಇವೆರಡರಲ್ಲಿರುವ ವ್ಯತ್ಯಾಸ ನನ್ನ ಪಾಲಿಗೆ ಅರಿವು ಮಾಡಿಕೊಟ್ಟಂತಾಯ್ತು.

ಇರಲಿ. ಹಿಂದೆ ಭೂವರಾಹ ಪೂಜಾರಿಯಾಗಿದ್ದಾಗ, ಹಳ್ಳಿಗರಿಗೆ ನಿಮಿತ್ಯ ಹೇಳಿಕೊಂಡಿದ್ದಾಗ, ಎಂದೂ ಕನ್ನಡಿ ನೋಡಿಕೊಳ್ಳದ ಬಾಳಗೆರೆ ಕೇಶವ, ಈಗ ಘನಶ್ಯಾಮ ನಿರ್ಮಿಸಿದ ‘ಟ್ರಸ್ಟ್’ನ ಸೆಕ್ರೆಟರಿಯಾಗಿ, ಮಿಸ್ಟರ್ ಕೇಶವ ಭಟ್ಟರೆಂದೆನಿಸಿಕೊಂಡು, ತನ್ನ ಸೆಕ್ರೆಟರಿ ಚೀಲದಲ್ಲಿ ಒಂದು ಕನ್ನಡಿಯನ್ನು ಒಯ್ಯುತ್ತಿದ್ದು, ಆಗಾಗ್ಗೆ ತನ್ನ ಮುಖವನ್ನು ನೋಡಿಕೊಳ್ಳುತ್ತಿದ್ದ – ಎಂಬಲ್ಲಿ, ಸಾಂಕೇತಿಕವಾಗಿ ಕಾದಂಬರಿಯಲ್ಲಿ ವರ್ಣಿಸಿದ

'ಬದಲಾವಣೆ'ಗಳು ವ್ಯಕ್ತವಾಗಿವೆ. ಅದು ಕಾದಂಬರಿಯಲ್ಲಿ ನಡೆಯುವ ಎಲ್ಲ 'ಬದಲಾವಣೆ'ಗಳಿಗೆ ಸಿಂಬಾಲಿಸಮ್ ಆಗಿ ನಿಂತಿದೆ ಎಂದರೂ ಸರಿಯೇ! ಎಂದೂ ತಿಳಿಯದ, ತನ್ನಲ್ಲಾದ ಬದಲಾವಣೆಗಳನ್ನು ಆ ಕನ್ನಡಿಯ ಮೂಲಕ ನೋಡಿಕೊಳ್ಳುತ್ತಿದ್ದಾನೆ ಎಂಬುದು ಇಲ್ಲಿ ಬಹು ಸೂಕ್ಷ್ಮವಾಗಿಯೂ, ಪರಿಣಾಮಕಾರಿಯಾಗಿಯೂ ವ್ಯಕ್ತವಾಗಿದೆ.

**ಮಲೆನಾಡ ವರ್ಣನೆ:**

ಕಾದಂಬರಿಯಲ್ಲಿ ವರ್ಣಿಸಿದ ಮಲೆನಾಡ ಸೌಂದರ್ಯ, ಅಲ್ಲಿಯ ಜನಜೀವನ, ಹಳ್ಳಿಗರ ನಂಬಿಕೆ ಮುಂತಾದುವುಗಳು ನಮ್ಮನ್ನು ಬಹಳವಾಗಿ ಆಕರ್ಷಿಸುತ್ತವೆ. ಗೌರಿ–ಗಂಗೆಯರು ಸುತ್ತಾಡುತ್ತಿರುವ ಕಾಡು, ಅಲ್ಲಿ ಸಂಚರಿಸುತ್ತಿದ್ದ ಪ್ರಾಣಿಗಳ ವರ್ಣನೆಗಳು ನಮ್ಮ ಕಣ್ಣಿಗೇ ಕಟ್ಟಿದಂತೆ ಭಾಸವಾಗುತ್ತವೆ. ಅಲ್ಲಿ ಗಂಗೆ–ಗೌರಿಯರು ಕಂಡ ನಾಯಿ ಮತ್ತಿತರ ಪ್ರಾಣಿಗಳ ಲೈಂಗಿಕ ಕೂಡುವಿಕೆಗೆ ಒಂದು ಬಗೆಯ ಅಲೌಕಿಕ ಅರ್ಥ ನೀಡಿದ ರೀತಿಯಂತೂ ಮೆಚ್ಚುವಂಥದ್ದೇ! ಮನುಷ್ಯ ಕಾಮುಕನಾದಾಗ ಪ್ರಾಣಿಯಂತೆ ವರ್ತಿಸುತ್ತಾನೆಂಬುದು ಇಲ್ಲಿ ಜಾಣತನದಲ್ಲಿ ವ್ಯಕ್ತವಾಗಿದೆ. ಈ ವ್ಯಾಖ್ಯಾನಕ್ಕೆ, ಅವರು (ಗಂಗೆ–ಗೌರಿಯರು) ಕೇಶವನಿಂದ ಕೇಳಿದ ಪುರಾಣ ಕತೆಗಳ ಪ್ರಭಾವ ಬಿದ್ದುದರಿಂದಲೇ ಆ ಲೌಕಿಕ ಸಂಗತಿಗೆ, ಒಂದು ಬಗೆಯ ಅಲೌಕಿಕ ಅರ್ಥವನ್ನು ಕಲ್ಪಿಸಿಕೊಟ್ಟಿದೆ.

ಮಲೆನಾಡ ನಡೆ–ನುಡಿಗಳೂ ಕಾದಂಬರಿಯಲ್ಲಿ ಬಹಳ ಚೆನ್ನಾಗಿ ಮೂಡಿ ಬಂದಿವೆ. ಅತಿಥಿ ಸತ್ಕಾರಕ್ಕೆ ಹೆಸರುವಾಸಿಯಾದ ಮಲೆನಾಡು ನಮ್ಮ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡುತ್ತದೆ. ಸಂಭಾವನೆಗೆಂದು ಬಂದ ಕೃಷ್ಣಶಾಸ್ತ್ರಿಯವರನ್ನು ಕೇಶವ ಮತ್ತು ಅವನ ಮನೆಯವರು ಸತ್ಕರಿಸಿದ ರೀತಿ ಎಂಥವರ ಮನವನ್ನೂ ತಟ್ಟುತ್ತದೆ. ಏಕಾದಶಿಯಂದು ಅವಲಕ್ಕಿಯನ್ನು ಕೆನೆಮೊಸರಿನಲ್ಲಿ ಕಲಸಿ, ಬಾಳೆ ಎಲೆಯ ತುದಿಯಲ್ಲಿ ಮಲೆನಾಡಿನ ಜನಪ್ರಿಯ ಮಿಡಿ ಉಪ್ಪಿನಕಾಯಿಯನ್ನಿರಿಸಿ ಮಾಡಿದ ಉಪಚಾರ ನಮ್ಮ ಹಸಿವನ್ನೂ ಕೆರಳಿಸುತ್ತದೆ. ದ್ವಾದಶಿಯಂದು ಕೋಡೊಲೆಯಲ್ಲಿ ಧಗಧಗ ಉರಿಯುತ್ತಿರುವ ಬೆಂಕಿಯೆಬ್ಬಿಸಿ, ಕಾವಲಿಯನ್ನು ಹದವಾಗಿ ಕಾಯಿಸಿ, ದೋಸೆ ಹೊಯ್ಯುತ್ತಿರುವಾಗ ಅದು ಮಾಡಿದ 'ಚೊಂಯ್' ಶಬ್ದ ನಮ್ಮ ಬಾಯಲ್ಲಿ ನೀರೂರಿಸುತ್ತದೆ. ಮಣೆಯ ಮೇಲೆ ಕುಳಿತು, ತುಪ್ಪ ಹಾಕಿ ಕಾಯಿಸಿದ ಬಿಸಿ–ಬಿಸಿ, ಗರಿ–ಗರಿ ದೋಸೆಗಳು ಬಾಳೆ ಎಲೆಯ ಮೇಲೆ ಒಂದಾದ ಮೇಲೊಂದು ಬೀಳುತ್ತಿದ್ದಂತೆ, ಅವನ್ನು ತೆಂಗಿನಕಾಯಿ ಚಟ್ನಿಯೊಡನೆ ಲೆಕ್ಕ ತಪ್ಪಿ ತಿನ್ನುತ್ತ, ಕೃಷ್ಣಶಾಸ್ತ್ರಿಗಳು ಅನುಭವಿಸುತ್ತಿರುವ ತೃಪ್ತಿಯಲ್ಲಿ ಓದುಗರೂ ಪಾಲುದಾರರೇ! ಮಲೆನಾಡಿನಲ್ಲಿ (ಅಂದಿನ ದಿವಸಗಳಲ್ಲಂತೂ) ಕಾಫಿ ತಯಾರಿಯೆಂದರೆ ಒಂದು ರಿಚುವಲ್ ಇದ್ದಹಾಗೆ. ಕಾಫಿ ಬೀಜವನ್ನು ಹುರಿಯುವುದರಿಂದ ಪ್ರಾರಂಭವಾಗಿ, ಅದನ್ನು ಪುಡಿಮಾಡಿ, ಬಿಸಿ ನೀರನ್ನು ಹೊಯ್ದು, ತೆಳು ಬಟ್ಟೆಯಲ್ಲಿ

ಅದನ್ನು ಸೋಸಿ, ಹಾಲು ಸಕ್ಕರೆ ಬೆರೆಸಿ, ಕೊನೆಯಲ್ಲಿ ಲೋಟದಲ್ಲಿ ನೊರೆ ತುಂಬಿದ ಕಾಫ಼ಿ ಬರುವಾಗ ಎಷ್ಟೋ ಸಮಯ ಕಳೆದಿರುತ್ತದೆ. ಆದರೆ, ಆ ಘಮ-ಘಮ, ಬಿಸಿ-ಬಿಸಿ, ಕಾಫ಼ಿ ಕುಡಿಯುತ್ತಿದ್ದಂತೆ, ಅದಕ್ಕಾಗಿ ಕಾದ ಸಮಯವೇನೂ ವ್ಯರ್ಥವಲ್ಲ - ಎಂದೆನಿಸಿದರೆ ಆಶ್ಚರ್ಯವಿಲ್ಲ.

ಮಲೆನಾಡಿನವರು ಸಂಬಂಧ ಬೆಳೆಸುವ ರೀತಿ ಮಲೆನಾಡಿನ 'ಅಳಿಯ'ನಾದ ನನ್ನನ್ನು ಬಹುವಾಗಿ ಆಕರ್ಷಿಸಿದೆ. ಕಾದಂಬರಿಯಲ್ಲಿ, ಕೃಷ್ಣಶಾಸ್ತ್ರಿಗಳು, ತನ್ನ ಮತ್ತು ಅಕ್ಕುವಿನ ಸಂಬಂಧವನ್ನು ಬಣ್ಣಿಸುವ ರೀತಿ ನೋಡಿ: ಅಕ್ಕಯ್ಯನ 'ಯಜಮಾನರ ಮೊದಲ ಹೆಂಡತಿಯ ಚಿಕ್ಕಪ್ಪನಿಗೆ ನನ್ನ ತಾಯಿಯ ಸೋದರಮಾವನ ಹೆಂಡತಿಯ ತಂಗಿಯನ್ನೇ ತಂದದ್ದು. ಋಣಾನುಬಂಧ ಹೇಗಿದೆ ನೋಡಿ...' ಎಂದು ಹೇಳುವಷ್ಟು ಅಕ್ಕಯ್ಯನನ್ನು ತನ್ನ ಸಂಬಂಧಿಯಾಗಿ ನೋಡುತ್ತಾರೆ, ಅವರು. ಇತರೆಡೆಯಲ್ಲಿ ಇಂಥ ಸಂಬಂಧಗಳು ಸಾಧ್ಯವಿಲ್ಲ. ಆದರೆ, ಮಲೆನಾಡಿನಲ್ಲಿ ಮಾತ್ರ ಇದು ನಂಟುತನವೇ! ಇದು ಮಲೆನಾಡಿನ ಜನರು ಬೆಳೆಸಿಕೊಂಡು ಬಂದ ಆತ್ಮೀಯತೆಗೊಂದು ನಿದರ್ಶನ.

ಅಲ್ಲದೆ, ಮಲೆನಾಡಿನ ಹಳ್ಳಿಗರನ್ನು ಖಾಯಿಲೆ-ಕಸಾಲೆಗಳು ಕಾಡಿದಾಗ, ದೈವದ ಮೇಲೆ ನಂಬಿಕೆಯಿಟ್ಟು, ನಿಮಿತ್ಯ ಕೇಳಿ, ಮನಃಶಾಂತಿ ಪಡೆಯುವುದೂ ಒಂದು ವಿಶೇಷವೇ! ಹೀಗೆ ಕಾದಂಬರಿಯಲ್ಲಿ ವರ್ಣಿಸಿದ ಮಲೆನಾಡಿನ ಅನೇಕ ನಡೆ-ನುಡಿಗಳು ನಮ್ಮನ್ನು ಆಕರ್ಷಿಸುತ್ತವೆ. ಕಾದಂಬರಿಗೆ ಬರೆದ ಮೊದಲ ಮಾತುಗಳಲ್ಲಿ ಅನಂತಮೂರ್ತಿಯವರು ಈ ರೀತಿ ಹೇಳಿದ್ದಾರೆ: '...ನಾನು ಇಂಗ್ಲೆಂಡಿನಲ್ಲಿ ವಿದ್ಯಾರ್ಥಿಯಾಗಿದ್ದಾಗ 'ಸಂಸ್ಕಾರ' ಕಾದಂಬರಿಯನ್ನು ಬರೆದದ್ದು. ಆಗ ಪರಸ್ಥಳದಲ್ಲಿದ್ದ ನನಗೆ, ಆ ಕಾಲದ ನನ್ನ ಕಾಣಿಕೆಗೆ, ನನ್ನ ಬಾಲ್ಯದ ನೆನಪುಗಳು ಜೀವಂತವಾಗಿ ಒದಗಿದಂತೆಯೇ, ಕಾಲದಲ್ಲಿ ಇನ್ನೂ ದೂರವಿರುವ ಈಗಿನ ನನಗೆ, ನನ್ನ ತೀರ್ಥಹಳ್ಳಿಯ ಪರಿಸರದ ಬಾಲ್ಯದ ನೆನಪುಗಳೂ, ಎಳೆ ವಯಸ್ಸಿನ ಶಿವಮೊಗ್ಗದ ನೆನಪುಗಳೂ ಹೊಸದಾದ ನನ್ನ ಈಚಿನ ಕಾಣುವಿಕೆಗೂ ಹಿಂದಿನಷ್ಟೇ ಸಮೃದ್ಧವೆನ್ನಿಸುವ ದ್ರವ್ಯವಾಗುವಂತೆ ಉಳಿದಿದೆ. ನನ್ನಲ್ಲಿ ಈಗಲೂ ಅಚ್ಚರಿಯನ್ನೂ ಹೊಸ ಅರ್ಥಗಳನ್ನೂ ಹುಟ್ಟಿಸುವ ಮಲೆನಾಡಿನ ಪರಿಸರಕ್ಕೆ ನಾನು ಋಣಿಯಾಗಿದ್ದೇನೆ.' ಇದು ತಮ್ಮ ಹುಟ್ಟೂರಿನ ಪರಿಸರದ ಮೇಲಿನ ಅವರ ಅಭಿಮಾನವನ್ನು ವ್ಯಕ್ತಪಡಿಸುತ್ತದೆ. ಕತೆಯಲ್ಲಿ ಅನಂತಮೂರ್ತಿಯವರು '...ತೀರ್ಥಹಳ್ಳಿಯ ಎಳ್ಳಮವಾಸ್ಯೆ ಜಾತ್ರೆಯಲ್ಲಿ ಟೆಂಟ್ ಸಿನೆಮಾದಲ್ಲಿ ಅಪ್ಪನಿಗೆ ಗೊತ್ತಾಗದಂತೆ ಹೋಗಿ ನೋಡಿದ ಅಮರ್ ಭೂಪಾಲಿಯಲ್ಲಿ ಕೇಳಿಸಿಕೊಂಡಿದ್ದ' 'ಘನಶ್ಯಾಮ ಸುಂದರಾ ಶ್ರೀಧರಾ....' ಎಂಬ ಹಾಡನ್ನು ಜ್ಞಾಪಿಸಿಕೊಂಡ ಸಂದರ್ಭ, ಅವರ 'ನೊಸ್ಟಾಲ್ಜಿಯ'ವನ್ನು ಕೆದಕಿ, ಅವರನ್ನು ಬಾಲ್ಯದಲ್ಲಿ ಬೆಳೆದ ತೀರ್ಥಹಳ್ಳಿಯ ಕಡೆಗೆ ಕೊಂಡೊಯ್ದಲ್ಲಿ ಸೋಜಿಗವಿಲ್ಲ! ಬೆಳೆದುಬಂದ ಪರಿಸರದ

ಮೇಲೆ ಅಭಿಮಾನವಿಟ್ಟು, ತಾವು ಬರೆದ ಕಾದಂಬರಿ–ಕತೆಗಳಲ್ಲಿ ಅದನ್ನು ನೆನೆಸಿ ಬರೆಯುವುದನ್ನು ಇತರ ಕಾದಂಬರಿಕಾರರಲ್ಲೂ ಕಾಣುತ್ತೇವೆ. ಕುವೆಂಪುರವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಮಲೆನಾಡ ವರ್ಣನೆ ಓದುಗರನ್ನು ಆ ಪರಿಸರಕ್ಕೇ ಕೊಂಡೊಯ್ಯುವ ಶಕ್ತಿ ಪಡೆದಿರುತ್ತದೆ. ಹಾಗೆಯೇ ಕಾರಂತರ 'ಮರಳಿ ಮಣ್ಣಿಗೆ'ಯಲ್ಲಿನ ಕರಾವಳಿಯ ಕೋಡಿಯ ವರ್ಣನೆ, 'ಬೆಟ್ಟದ ಜೀವ'ದಲ್ಲಿನ ಪ್ರಕೃತಿ ವರ್ಣನೆ ಓದುಗರ ಮನ ಸೆಳೆಯುವುದರಲ್ಲಿ ಸಂಶಯವಿಲ್ಲ. ಚಿತ್ತಾಲರ ಕೃತಿಗಳಲ್ಲೂ ಉತ್ತರ ಕನ್ನಡ ಜಿಲ್ಲೆಯ ವರ್ಣನೆ ಸಾಕಷ್ಟು ವಿಸ್ತಾರವಾಗಿದೆ. ಅದು ಅಭಿಮಾನವೂ ಹೌದು, ನೊಸ್ಟಾಲ್ಜಿಯವೂ ಹೌದು. ಈ ಕಾದಂಬರಿಯಲ್ಲೂ ಅಂಥ ಅನುಭವ ವ್ಯಕ್ತವಾಗಿದ್ದುದು ಮಾತ್ರವಲ್ಲ, ಅದರಲ್ಲಿ ನಾವೂ ಭಾಗಿಗಳಾಗುವಂಥ ಅನುಭವವನ್ನು ನಮ್ಮಲ್ಲಿ ಲೇಖಕರು ಮೂಡಿಸಿದ್ದಾರೆ.

'ದಿವ್ಯ' ಮತ್ತು ಅನಂತಮೂರ್ತಿಯವರ ಮೊದಲ ಜನಪ್ರಿಯ ಕಾದಂಬರಿ, 'ಸಂಸ್ಕಾರ' ('ಸಂಸ್ಕಾರ' ಅವರ ಶ್ರೇಷ್ಠ ಕಾದಂಬರಿಯೂ ಹೌದು) – ಇವೆರಡರಲ್ಲಿ ಕೆಲವು ಹೋಲಿಕೆಗಳು ನನಗೆ ಕಂಡು ಬಂದು, ಅವನ್ನು ಇಲ್ಲಿ ನಿಮ್ಮೊಡನೆ ಹಂಚಿಕೊಳ್ಳುತ್ತಿದ್ದೇನೆ. ಈ ಎರಡೂ ಕಾದಂಬರಿಗಳಲ್ಲಿ 'ಬದಲಾವಣೆ'ಗೆ ಪ್ರಾಮುಖ್ಯತೆ ಕೊಟ್ಟಂತಿದೆ. ಜಾತಿ ತಾರತಮ್ಯದ ಮೇಲೆ ಎರಡರಲ್ಲೂ ಸಾಕಷ್ಟು ಬೆಳಕು ಚೆಲ್ಲಿದೆ. ಆದರೆ, ಅವುಗಳನ್ನು ವಿಶ್ಲೇಷಿಸುವ ರೀತಿಯಲ್ಲಿ ಮಾತ್ರ ವ್ಯತ್ಯಾಸ ಕಂಡುಬರುತ್ತದೆ. 'ಸಂಸ್ಕಾರ'ದಲ್ಲಿ ಅನ್ಯ ಜಾತಿಯ ಸೂಳೆ, ಚಂದ್ರಿಯೊಡನೆ ಸಂಬಂಧ ಬೆಳೆಸಿದ ನಾರಣಪ್ಪ ತೀರಿಕೊಂಡಾಗ, ಅವನ ಅಂತ್ಯಕ್ರಿಯೆಗಳಿಗೆ ಸಂಬಂಧಪಟ್ಟ ವಿಚಾರಗಳು ಮುಖ್ಯ ಕಥಾವಸ್ತುವಾಗಿದೆ. ಆ ವಿಚಾರವಾಗಿ ಪ್ರಾಣೇಶಾಚಾರ್ಯನ ಮನಸ್ಸಿನಲ್ಲಿ ಉದ್ಭವಿಸಿದ ತಿಕ್ಕಾಟಗಳು, ಅವನಲ್ಲಿ ಆದ 'ಬದಲಾವಣೆ'ಯಲ್ಲಿ ಕೊನೆಗೊಳ್ಳುತ್ತದೆ. ಈ ಬದಲಾವಣೆಯ ಫಲವಾಗಿ, ಅವನು ಚಂದ್ರಿಯಲ್ಲೇ ಸಂಬಂಧ ಬೆಳೆಸುವಂತಾಗುತ್ತದೆ. ಯಾವ ಸಮಸ್ಯೆಯನ್ನು ಬಗೆಹರಿಸಲು ಹೊರಟಿದ್ದನೋ, ಆ ಸಮಸ್ಯೆಯೇ ಅವನನ್ನು 'ನುಂಗಿ'ದುದು ಒಂದು ವಿಪರ್ಯಾಸವೇ! ತನ್ನಲ್ಲಾದ ಬದಲಾವಣೆಯನ್ನು ಒಪ್ಪಿಕೊಂಡಾಗಲೇ ಅವನಲ್ಲಿ ಮೊದಲಿಗೆ ಮೂಡಿಬಂದ 'ಅಪರಾಧಿ' ಪ್ರಜ್ಞೆ ಅಳಿದು, ಅವನು ಪುನಃ ದೂರ್ವಾಸಪುರಕ್ಕೆ ಮರಳುವಂತಾಗುತ್ತದೆ. ಆದರೆ, 'ದಿವ್ಯ'ದಲ್ಲಿ ಈ ಬದಲಾವಣೆ ನಡೆಯುವ ರೀತಿಯೇ ಬೇರೆ. ಬದಲಾವಣೆಯಾಗಬೇಕೆಂಬ ಅರಿವು ಹಾಗೂ ಪ್ರೇರಣೆ, ಗೌರಿ, ಅಕ್ಕಯ್ಯ, ಕೇಶವ, ಮೊದಲಾದವರ ಹೃದಯದಲ್ಲೆಲ್ಲೋ ಅಡಗಿದ್ದಿತ್ತು. ಕಾಲ ಅದಕ್ಕೆ ಉತ್ತೇಜನ ನೀಡಿತ್ತು. ತಮ್ಮಲ್ಲಾದ ಬದಲಾವಣೆಗಳ ಪರಿಣಾಮವಾಗಿ, ಪ್ರಾಣೇಶಾಚಾರ್ಯನನ್ನು ಕಾಡಿದಂತೆ, ಅವರಲ್ಲಿ ಯಾವ ಅಪರಾಧಿ ಪ್ರಜ್ಞೆಯೂ ಕಾಡಿರಲಿಲ್ಲ. ಈ ಎರಡೂ ಕಾದಂಬರಿಗಳು ಲೌಕಿಕ ಮತ್ತು ಅಲೌಕಿಕ ಸಾಕ್ಷಾತ್ಕಾರಗಳಲ್ಲಿನ ಸಂಘರ್ಷಗಳನ್ನು

ವಿವರಿಸುತ್ತವೆ. 'ದಿವ್ಯ'ದಲ್ಲಿ ಈ ಸಂಘರ್ಷಗಳು ಸಂಗಮಿಸಿ, 'ವಿರುದ್ಧವೆಂದು ಕಾಣಿಸಿಕೊಳ್ಳುವ' ಆ ಶಬ್ದಕ್ಕೆ ಒಂದು ವಿಶೇಷ ಅರ್ಥ ಕಲ್ಪಿಸಿಕೊಟ್ಟಿದೆ.

'ದಿವ್ಯ'ದ ಮೊದಲನೆಯ ಭಾಗವಂತೂ ನನ್ನನ್ನು ವಿಶೇಷವಾಗಿ ಆಕರ್ಷಿಸಿತು. ಅಲ್ಲಿ ಮಲೆನಾಡ ಜನಜೀವನದ ಮನಮೆಚ್ಚುವ ವಿವರಗಳಿವೆ. ಕುಮಾರವ್ಯಾಸ, ಪುರಾಣದ ಕತೆಗಳ ವಿಶ್ಲೇಷಣೆ, ಅವುಗಳ ಹಿಂದೆ ಅಡಗಿರುವ ಭಾರತೀಯ ಸಮೃದ್ಧ ಸಂಸ್ಕೃತಿಯ ಅರಿವನ್ನೂ ನಮ್ಮಲ್ಲಿ ಮೂಡಿಸಿ, ಒಂದು ಬಗೆಯ ಅವ್ಯಕ್ತ ಹಿತವನ್ನು ನನಗೆ ಕೊಟ್ಟಿದೆ. ಕಾದಂಬರಿಯಲ್ಲಿ ಬರುವ ಎರಡು ದಾರುಣ ಕೊಲೆಗಳೂ ನಮ್ಮ ಸಮಾಜದಲ್ಲಿ ಬೆಳೆದು ಬಂದ ನ್ಯೂನತೆಯನ್ನು ವಿವೇಚಿಸಲು ದಾರಿಮಾಡಿ ಕೊಟ್ಟಿವೆ.

ಲೇಖನ ಮುಗಿಸುವ ಮುನ್ನ ಅನಂತಮೂರ್ತಿಯವರ ಬರವಣಿಗೆ ಶೈಲಿಯ ಮೇಲೆ ಒಂದೆರಡು ಮಾತುಗಳು. ಬರವಣಿಗೆಯಷ್ಟೇ ಅಲ್ಲದೆ, ಅದು ಅವರ ವ್ಯಕ್ತಿತ್ವದ ಮೇಲೂ ಬೆಳಕು ಚೆಲ್ಲುತ್ತದೆ. ಕಾದಂಬರಿಗೆ ಬರೆದ 'ಮೊದಲ ಮಾತು'ಗಳಲ್ಲಿ ಈ ಕಾದಂಬರಿ ಬರೆದ ಉದ್ದೇಶವನ್ನು ಅವರು ವ್ಯಕ್ತಪಡಿಸಿದಂತಿದೆ. 'ಕಾದಂಬರಿಯೊಂದನ್ನು ಬರೆಯುವುದೆಂದರೆ ಇಷ್ಟರವರೆಗೆ ವ್ಯಕ್ತವಾದದ್ದನ್ನೆಲ್ಲ ಬೆನ್ನಿಗಿಟ್ಟುಕೊಂಡೇ ಅಗೋಚರವಾದದ್ದಕ್ಕೆ, ಅವ್ಯಕ್ತಕ್ಕೆ ಕೈಚಾಚುವುದು. ನಮ್ಮ ಹಠದ ವೈಚಾರಿಕತೆಯನ್ನು ವಿಮರ್ಶೆಗೆ ಗುರಿಪಡಿಸಿ ಅನುಮಾನಿಸುವುದು. ನಮ್ಮೊಳಗಿನ ಪಿಸುಮಾತುಗಳಿಗೆ ಕಿವಿಕೊಟ್ಟು ಆಲಿಸುವುದು. ಅಂದರೆ, ಮನಸ್ಸಿಗೆ ಹಿತಕರವಾದ 'ಒಪಿನಿಯನ್'ಗಳನ್ನೂ, ಈ ಕಾಲದಲ್ಲಿ ಸುಲಭವಾಗಿ ಸಲ್ಲುವಂತೆ ತೋರುವ ಅಭಿಪ್ರಾಯಗಳನ್ನೂ, ನಮ್ಮ ಏಕಾಂತದಲ್ಲಿ ಮೀರುವ ಧೈರ್ಯಮಾಡದೆ ಇದು ಸಾಧ್ಯವಿಲ್ಲ...' ಎಂದು ಹೇಳಿಕೊಂಡಿದ್ದಾರೆ. 'ದಿವ್ಯ'ದಲ್ಲಿ ಇದು ಸಾಕಷ್ಟು ಸಾಧ್ಯವಾಗಿದೆ ಎಂದು ನನ್ನ ಅನಿಸಿಕೆ. ಇತ್ತೀಚಿನ ದಿನಗಳಲ್ಲಿ, ವಾದ-ವಿವಾದಗಳನ್ನು ಬೇಕೆಂತಲೇ ಕೆದಕಿ, ಪರಿಣಮಿಸಿದ ಪ್ರತಿಕ್ರಿಯೆಗಳನ್ನು ದೂರದಲ್ಲೆ ನಿಂತು ಆನಂದಿಸುವುದು ಅವರಿಗೆ ಮೋಜಾಗಿ ಕಂಡುಬರುವಂತಿದೆ. ಈ ಕಾದಂಬರಿಯೂ ಇದಕ್ಕೆ ಹೊರತಾಗಿಲ್ಲ. ಇಲ್ಲಿ ಹಲವಾರು ಸಾಮಾಜಿಕ ಸಂಘರ್ಷಗಳನ್ನು ಕೆದಕಿ, ಅವುಗಳನ್ನು ಒರೆಗೆ ಹಚ್ಚಿ ನೋಡುವ ಪ್ರಯತ್ನ ನಡೆದಿದೆ. ಪರಿಣಾಮವಾಗಿ ನಮ್ಮ ವಿವೇಚನಾ ಶಕ್ತಿಯನ್ನು ಹೆಚ್ಚಿಸಿದೆ ಎಂದು ಹೇಳಬಹುದು. ಘನಶ್ಯಾಮ ಜಾರಿಗೆ ತಂದ ಸುಧಾರಣೆಗಳು, ಅವನಿಗೆ ತಿಳಿದೋ, ತಿಳಿಯದೆಯೋ ಒಂದು ಆಸೆಬುರುಕ ಸಮಾಜಕ್ಕೆ ಕಾರಣವಾಗುತ್ತದೆ – ಎಂಬಲ್ಲಿ ನಮ್ಮೊಳಗೆ ನಡೆಯುವ ತರ್ಕಕ್ಕೆ ಹೊಸ ಅರ್ಥ ಮೂಡಿಸುವುದನ್ನು ಗಮನಿಸಬಹುದು. ಪೂಜೆ ಭಟ್ಟ ಕೇಶವ ಮತ್ತು ಜಾತಿ ವಿರೋಧಿ ಪುಟ್ಟೇ ಗೌಡ – ಇವರಿಬ್ಬರೊಳಗಿನ ಸ್ನೇಹವೂ ಈ ನಿಟ್ಟಿನಲ್ಲಿ ಅದೊಂದು ಬಗೆಯ ಹೊಸ ಅನುಭವವನ್ನು ಕೊಡುತ್ತದೆ. ಅಂದರೆ, ಭಿನ್ನಾಭಿಪ್ರಾಯಗಳ ಮಧ್ಯದಲ್ಲೇ ಸ್ನೇಹವೂ ಬೆಳೆಯಬಹುದು. ಒಬ್ಬನ ಭಿನ್ನಾಭಿಪ್ರಾಯವನ್ನು ಇನ್ನೊಬ್ಬ ಒಪ್ಪಿಕೊಂಡಲ್ಲಿ,

ಅವರಿಬ್ಬರೊಳಗೆ ಬೆಳೆದ ಸ್ನೇಹ ಆರೋಗ್ಯಕರ ಸಮಾಜದ ಬೆಳವಣಿಗೆಗೆ ಕಾರಣವಾಗುತ್ತದೆ. ಇಂಥ ವಿಚಾರಸರಣಿಗಳು ಅನಂತಮೂರ್ತಿಯವರಿಗೆ ಬಲು ಇಷ್ಟವಿದ್ದಂತೆ ಕಾಣುತ್ತದೆ. ಹಾಗಾಗಿ ಅಂಥ ವಾದಸರಣಿಗಳನ್ನು ಈ ಕಾದಂಬರಿಯಲ್ಲಿ ನಾವು ಕಾಣಬಹುದು. ಕೊನೆಯಲ್ಲಿ, ಈ ಕಾದಂಬರಿ ಅನಂತಮೂರ್ತಿಯವರ ವ್ಯಕ್ತಿತ್ವವನ್ನು ಬಿಂಬಿಸುತ್ತದೆಯೆ? ಸಂಪ್ರದಾಯ ಮತ್ತು ಕಾಲಕ್ಕನುಗುಣವಾಗಿ ನಡೆಯುತ್ತಿರುವ ಬದಲಾವಣೆಗಳ ವಿಚಾರವಾಗಿ ಅವರ ನಿಲುವೇನು? ಎಂಬ ಪ್ರಶ್ನೆಗಳಿಗೆ ಉತ್ತರ ಪರೋಕ್ಷವಾಗಿ ಯಾದರೂ, ಕಾದಂಬರಿಯಲ್ಲಿ ಬರುವ ಪಾತ್ರಗಳ ನಿಲುವಿನ ಮೂಲಕ ಸುಳಿವು ಸಿಗುತ್ತದೆ. ಸಂಪ್ರದಾಯಗಳ ಮೇಲೆ ಅನುಕಂಪವಿದ್ದೇ ಬದಲಾವಣೆಗಳನ್ನು ಅವರು ಸ್ವಾಗತಿಸುತ್ತಾರೆಂಬ ನಂಬಿಕೆ (ಅದನ್ನು ಅನುಮಾನವೆಂದು ಕರೆದರೂ ಕರೆಯಿರಿ!) ನನ್ನಲ್ಲಂತೂ ಮೂಡಿಸಿದೆ.

**ಕೃತಿ ವಿವರ:** ದಿವ್ಯ, ಯು.ಆರ್ ಅನಂತಮೂರ್ತಿ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೧, ಪು. ೧೮೪

*

# ಯಶವಂತ ಚಿತ್ತಾಲರ 'ಪುರುಷೋತ್ತಮ'

–ಮೀರಾ ಪಿ. ಆರ್. ವುಡ್ ಬ್ರಿಡ್ಜ್, ನ್ಯೂ ಜೆರ್ಸಿ

ಪ್ರಸ್ತುತ ನಾನು ವಿಮರ್ಶಿಸಲು ಆರಿಸಿಕೊಂಡ ಕಾದಂಬರಿ 'ಪುರುಷೋತ್ತಮ'ವನ್ನು ಚಿತ್ತಾಲರು ಬರೆದು ಪ್ರಕಟಿಸಿದ್ದು ೧೯೮೯ರಲ್ಲಿ. ಕಾದಂಬರಿಯಲ್ಲಿನ ಕಥೆ ನಡೆಯುವ ಕಾಲ ಅದಕ್ಕೂ ಬಹಳ ಹಿಂದಿನದು. ಕಾದಂಬರಿಯ ಮುನ್ನುಡಿಯಲ್ಲಿ ಚಿತ್ತಾಲರು ಹೇಳಿರುವಂತೆ, ಆಗಿನ್ನೂ ಮುಂಬಯಿಯ ಮಣ್ಣಿಗೆ ಚಿನ್ನದ ಬೆಲೆ ಬಂದಿರಲಿಲ್ಲ. ಆಗಿನ್ನೂ ಅದರ ಪೂರ್ವ ಚಿಹ್ನೆಗಳು ಕಾಣತೊಡಗಿದ್ದ ಕಾಲ. ಮುಂಬರುವ ಶಾಪಿಂಗ್ ಸೆಂಟರ್ ಯೋಜನೆಯೊಂದರ ಸಲುವಾಗಿ ಆ ಪ್ರದೇಶ ಮತ್ತು ಅಲ್ಲಿನ ದಿನನಿತ್ಯದ ಬದುಕಿನಲ್ಲಿ ಸಂಭವಿಸುವ ವಿಪ್ಲವಗಳು, ತನ್ನ ಮುತ್ತಜ್ಜ ಕಟ್ಟಿಸಿದ ಮನೆಯನ್ನು ಉಳಿಸಿಕೊಳ್ಳುವ ಕಥಾನಾಯಕನ ಹಂಬಲ ಕಥೆ ಬೆಳೆದ ಹಾಗೆಲ್ಲ, ವಿಕೃತಿಯ ಪ್ರತಿಮೆಯೇ ಆದ ಹಣವನ್ನು ನಿರಾಕರಿಸುವುದಕ್ಕಷ್ಟೇ ಅಲ್ಲದೆ, ಅಧಿಕಾರ ಬಲದಿಂದ, ಹಣದ ಬಲದಿಂದ ತಮ್ಮ ಕನಸನ್ನು ಇನ್ನೊಬ್ಬರ ಮೇಲೆ ಹೇರುವ ಅಹಂಕಾರವನ್ನು ಪ್ರತಿಭಟಿಸುವ ಕೆಚ್ಚಾಗಿ ಬೆಳೆಯುತ್ತದೆ. ಕಡೆಗೂ ಮನುಷ್ಯ ಚೇತನವೊಂದು ಇಂತಹ ವಿಕೃತಿಗಳನ್ನೆಲ್ಲ ಎದುರಿಸಿ, ಮಾನವೀಯ ಮೌಲ್ಯಗಳಿಗೆ ತೆರೆದುಕೊಳ್ಳುತ್ತಾ ಎತ್ತರಕ್ಕೇರುವ ಕಥೆ ಇದಾದ್ದರಿಂದ ಕಾಲ ದೇಶಗಳ ಗಡಿ ದಾಟುತ್ತಾ ಸಾರ್ವಕಾಲಿಕವಾಗಿ ಉಳಿಯುತ್ತದೆ.

ಮೊದಲ ಬಾರಿ ನಾನು 'ಪುರುಷೋತ್ತಮ' ಕಾದಂಬರಿಯನ್ನು ಓದಿದ್ದು ನನ್ನ ೧೬ ಅಥವಾ ೧೭ನೆಯ ವಯಸ್ಸಿನಲ್ಲಿ. ಆಗಿನ ನನ್ನ ಅರಿವು, ಅನುಭವದ ಮಿತಿಯಲ್ಲಿ ನನಗೆ ಕಾದಂಬರಿ ಓದಿ ಮುಗಿಸಿದ ಮೇಲೆ ಏನನ್ನಿಸಿತ್ತು ಎನ್ನುವುದು ಈಗ ನೆನೆಸಿಕೊಳ್ಳುವುದೂ ಅಸಾಧ್ಯವೆನಿಸುತ್ತಿದೆ. ಹಾಗೆ ನೋಡಿದರೆ ಆಗ ನಾನು ಓದಿದ ಕಥೆ, ಕವನ, ಕಾದಂಬರಿ ಅಥವಾ ಇನ್ಯಾವುದೇ ಬರಹ ಮತ್ತು ಆ ಬರಹ ಕುರಿತ ನನ್ನ ಅಂದಿನ ಅಭಿಪ್ರಾಯ ಎಲ್ಲೂ ದಾಖಲಾಗದ್ದಕ್ಕೇ ಅದು ಹೇಗಿದ್ದಿರಬಹುದೆಂಬ ನೆನಪೂ ಅಸ್ಪಷ್ಟವಾಗೇ ಉಳಿದಿದೆ. ಆದರೆ ನನ್ನ ಹದಿಹರಯದ ಆ ದಿನಗಳಲ್ಲಿ ಕನ್ನಡದ ಓದು

ನನ್ನೊಳಗೆ ವಿಸ್ತರಿಸುತ್ತಿದ್ದ ಅರಿವು ಮತ್ತು ಮೂಡಿಸುತ್ತಿದ್ದ ಅನುಭೂತಿಗಳು ನನ್ನೊಡನೆ ಹಾಗೇ ಉಳಿದು, ಬೆಳೆದದ್ದು ಮಾತ್ರ ಅದೊಂದು ರೀತಿಯ ವಿಸ್ಮಯ. ನಾವು ಬದುಕಿ, ಬಾಳುವ ಕಾಲ, ದೇಶ, ಪರಿಸ್ಥಿತಿಗಳ ಹಾಗೇ ಸಾಹಿತ್ಯವೂ ಕೂಡ ನಮ್ಮ ವ್ಯಕ್ತಿತ್ವದ ಭಾಗವಾಗಿ ನಮಗೇ ಗೊತ್ತಿಲ್ಲದೆ ನಮ್ಮನ್ನು ರೂಪಿಸುವ, ನಮ್ಮ ಅರಿವಿಗೇ ಬಂದಿರದ ನಮ್ಮದೇ ನಿಲುವು, ಒಲವುಗಳ ಪರಿಚಯ ಮಾಡಿಕೊಡುವ ಬಗೆ ನನಗೆ ಯಾವಾಗಲೂ ಅಚ್ಚರಿ ಹುಟ್ಟಿಸುವಂತಹುದು.

ಆಗ ನಾನು ಓದಿದ್ದ 'ಪುರುಷೋತ್ತಮ' ಕಾದಂಬರಿ ಕೂಡ ನನಗೆ ಈ ಬಗೆಯ ನನ್ನೊಳಗಿನದೇ ತಲ್ಲಣ, ಪ್ರಶ್ನೆ, ಉತ್ತರಗಳನ್ನು ಮುಖಾಮುಖಿಯಾಗಿಸಿದ್ದು ಮಾತ್ರ ನನಗೆ ನೆನಪಲ್ಲಿ ಉಳಿದಿದೆ. ಈಗ ಮತ್ತೆ ೧೮ ವರ್ಷಗಳ ನಂತರ ಓದಿದ ಅದೇ ಕಾದಂಬರಿ ನನ್ನ ಇವತ್ತಿನ ಅರಿವಿನಲ್ಲಿ, ನನ್ನ ಇಲ್ಲಿಯವರೆಗಿನ ಅನುಭವಗಳ ಹಿನ್ನೆಲೆಯಲ್ಲಿ ದಕ್ಕಿದ ಬಗೆ ಸ್ವಲ್ಪ ಭಿನ್ನವಾದರೂ, ವರ್ಷಗಳ ಹಿಂದೆ ಈ ಕಾದಂಬರಿ ಓದಿ ಮುಗಿಸಿದಾಗ ನನ್ನಲ್ಲಿ ಮೂಡಿದ್ದ ಅದೇ ಭಾವ ಈಗಲೂ ಹೆಚ್ಚು ಕಡಿಮೆ ಹಾಗೇ ಮೂಡಿದ್ದು ವಿಶೇಷವೆನಿಸಿತು.

ಜೀವವೊಂದು ತನ್ನ ಮೂಲದ ಪ್ರಶ್ನೆ ಹುಡುಕುತ್ತಲೇ, ಬದುಕಿನ ನಿಷ್ಠುರಗಳಲ್ಲಿ ಹಾಯುತ್ತಾ ಕಡೆಗೆ ತನ್ನ ಪ್ರಶ್ನೆಯಲ್ಲೂ, ಕಂಡುಕೊಳ್ಳಬಹುದಾದ ಉತ್ತರದಲ್ಲೂ ಇರುವ ಅಸಂಗತೆಯನ್ನು ಮನಗಾಣುತ್ತಾ, ಈ ಪ್ರಶ್ನೆ ಉತ್ತರಗಳನ್ನೆಲ್ಲ ಮೀರಿದ ಜೀವನಪ್ರೀತಿಯ ಕಡೆಗೆ ನಡೆಸುವ ಆರೋಹಣ ಈ ಕಾದಂಬರಿಯ ವಸ್ತು. ಭಯ, ಅನುಮಾನ, ಕ್ರೌರ್ಯ ತುಂಬಿದ ಜೀವನದಲ್ಲಿ, ಸಾಮಾಜಿಕ, ರಾಜಕೀಯ ದುರುದ್ದೇಶಗಳಿಗೆ ಗುರಿಯಾದರೂ ಮನುಷ್ಯ ಜೀವವೊಂದು ಮಾನವೀಯ ಮೌಲ್ಯಗಳಲ್ಲಿ ತಾನಿಟ್ಟ ನಂಬಿಕೆಯ ಮೂಲಕವೇ ಎಲ್ಲ ಹಿಂಸೆಗಳನ್ನೂ ಎದುರಿಸಿ ಇನ್ನಷ್ಟು ಜೀವನ್ಮುಖಿ ಯಾಗುವುದನ್ನು ನೋಡುವಾಗ, ಆ ಮೂಲಕ ಕಾದಂಬರಿಕಾರರಿಗೆ ಮನುಷ್ಯನ ಅಂತಃಸತ್ವದಲ್ಲಿರುವ ನಂಬಿಕೆಯ ಮೇಲೆ ಬೆರಗು ಮೂಡುತ್ತದೆ. ತಮ್ಮ ನಂಬಿಕೆಯನ್ನು ಚಿತ್ತಾಲರು ಪುರುಷೋತ್ತಮನ ಮೂಲಕ ಪ್ರತಿಪಾದಿಸಿರುವ ಬಗೆಯಿಂದಾಗಿ, ಸೃಜನಶೀಲ ಕ್ರಿಯೆಯಾದ ಸಾಹಿತ್ಯವು ಸಮಾಜಕ್ಕೆ, ಮನುಷ್ಯನ ನೈತಿಕ ತೊಳಲಾಟಗಳಿಗೆ ಸ್ಪಂದಿಸಬಲ್ಲ, ಸ್ಫೂರ್ತಿ ನೀಡಬಲ್ಲ ಅರ್ಥವಂತ ಜೀವಂತ ಕ್ರಿಯೆಯಾಗಿ ಕಾಣುತ್ತದೆ.

ಮೂಲದ ಪ್ರಶ್ನೆ ಕಾಡಿದ ಪುರುಷೋತ್ತಮ, ಮಂಜುನಾಥ ಇಬ್ಬರೂ ಅದರ ಉತ್ತರಕ್ಕಾಗಿ ಮಾಡುವ ಹುಡುಕಾಟ, ಅವರ ತಳಮಳಗಳೂ, ಕಡೆಗೆ ಕಂಡುಕೊಳ್ಳುವ ಅಥವಾ ಅವರಿಗೆ ದಕ್ಕುವ ಅಂತ್ಯಗಳಂತೂ ತೀರ ಭಿನ್ನ. ಕಾದಂಬರಿ ಓದಿ ಮುಗಿಸಿದ ಮೇಲೆ ನನ್ನನ್ನು ಕಾಡಿದ್ದು ಮಂಜುನಾಥನ ದುರಂತ ಅಂತ್ಯಕ್ಕೂ, ಪುರುಷೋತ್ತಮನಿಗೆ

ದಕ್ಕಿದ ಬದುಕಿನ ಅರ್ಥಪೂರ್ಣ ಸತ್ಯಕ್ಕೂ ಮೂಲ ಕಾರಣ ಇವರಿಬ್ಬರನ್ನೂ ಕಾಡಿದ ತಮ್ಮ ಹುಟ್ಟಿನ, ಇರುವಿಕೆಯ ಕುರಿತಾದ ಪ್ರಶ್ನೆಗಳೇ ಎನ್ನುವುದು. ಹೀಗಾಗಿ ಕಾದಂಬರಿಯ ಈ ಎರಡು ಮುಖ್ಯ ಪಾತ್ರಗಳ ನೆಲೆಯಲ್ಲಿ, ಇಡೀ ಕಾದಂಬರಿಯನ್ನೂ ಅದರ ಆಶಯವನ್ನೂ ಗುರುತಿಸುವ ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ. ಈ ಪ್ರಯತ್ನ ಕೇವಲ ನನ್ನ ಇಂದಿನ ಗ್ರಹಿಕೆಗೆ, ಅರಿವಿಗೆ ನಿಲುಕಿದ್ದು ಎಂಬ ಅರಿವಿನಲ್ಲೇ ನೀವೂ ಇದನ್ನು ಓದಿಕೊಳ್ಳಬೇಕೆಂದು ನಿಮ್ಮಲ್ಲೊಂದು ವಿನಂತಿ. ಇದರ ಜೊತೆಗೇ ನಾನು ಹೇಳಬಯಸುವ ಇನ್ನೊಂದು ಮಾತೂ ತುಂಬಾ ಮುಖ್ಯವಾದುದು ಎಂದು ಅನಿಸುತ್ತದೆ. ವಿಮರ್ಶಾ ಲೇಖನಗಳನ್ನು ಹೆಚ್ಚು ಓದಿಲ್ಲದ ನನಗೆ, ವಿಮರ್ಶೆಯ ಪರಿಭಾಷೆ ತೀರಾ ಹೊಸದು. ಹೀಗಾಗಿ ನನ್ನ ಈ ಲೇಖನದಲ್ಲಿ ವಿಮರ್ಶಾಪರಿಭಾಷೆಯಲ್ಲಿ ನಿರ್ದಿಷ್ಟ ಅರ್ಥ ಸೂಚಿಸಬಲ್ಲ ಪದಗಳ ಬಳಕೆ ಸರಿಯಾಗಿ ಆಗಿರುವ ಬಗ್ಗೆ ನನಗಿರುವ ಅನುಮಾನಗಳು ಹಾಗೇ ಉಳಿದಿವೆ.

ಈ ಬರಹ 'ವಿಮರ್ಶೆ' ಎನ್ನುವ ಹೆಸರಿನಲ್ಲಿ ನಾನು ಮಾಡುತ್ತಿರುವ ಮೊದಲ ಪ್ರಯತ್ನ. ನನ್ನ ನೆಚ್ಚಿನ ಬರಹಗಾರರಲ್ಲಿ ಒಬ್ಬರಾದ ಚಿತ್ತಾಲರು ತಮ್ಮ ಈ ಕಾದಂಬರಿಯ ಮುನ್ನುಡಿಯಲ್ಲಿ 'ನನ್ನ ಸೃಜನಶೀಲತೆಯ ಸರ್ವಸ್ವವನ್ನೂ ಧಾರೆಯೆರೆದು ಬರೆದಂತೆ ಬರೆದ ಕೃತಿ ಇದು' ಎಂದು ಹೇಳಿಕೊಂಡಿದ್ದಾರೆ. ವಿಮರ್ಶೆಯ ಅಗತ್ಯ ಒಂದು ಕೃತಿಗಾಗಲಿ, ಅದರ ಓದುಗರಿಗಾಗಲಿ ಇಲ್ಲ ಎಂದೇ ಹೆಚ್ಚೂ ಕಡಿಮೆ ನಂಬಿಕೊಂಡಿರುವ ನಾನು, ಹೀಗೆ ನನ್ನ ಪ್ರೀತಿಯ ಕಾದಂಬರಿಕಾರರೊಬ್ಬರು ತಮ್ಮ ಸೃಜನಶೀಲತೆಯನ್ನು ಧಾರೆಯೆರೆದು ಬರೆದಿರುವ ಕೃತಿಯನ್ನು ವಿಮರ್ಶಿಸುವ ಕೆಲಸಕ್ಕೆ ಕೈಹಚ್ಚಿದ ಸಾಹಸಕ್ಕೆ ಕಾರಣ ಮಾತ್ರ ಶುದ್ಧ ಪ್ರೀತಿ. ಈ ಕಾದಂಬರಿ ಮತ್ತು ಅದರ ಲೇಖಕ ಇಬ್ಬರ ಮೇಲೂ ನನಗಿರುವ ಪ್ರೀತಿ, ಗೌರವಗಳ ಜೊತೆಗೆ 'ಪುರುಷೋತ್ತಮ'ನನ್ನು ಮತ್ತೆ ಓದುವ, ಕಂಡಷ್ಟು ದಕ್ಕಿಸಿಕೊಂಡು ಅದಕ್ಕೆ ಒಂದು ಅಕ್ಷರ ರೂಪ ಕೊಡುವ ಪ್ರಯತ್ನವೇ ನನ್ನ ಈ ಸಾಹಸಕ್ಕಿದ್ದ ಆಕರ್ಷಣೆ. ಸಾಮಾನ್ಯ ಓದುಗಳಾಗಿ ನನಗೆ ಈ ಕಾದಂಬರಿ ಕಾಣಿಸಿದ ಬಗೆ ಮತ್ತು ನನಗೆ ದಕ್ಕಿದ ರೀತಿಯನ್ನು ತುಂಬಾ ಅನುಮಾನದಿಂದ, ಸಂಕೋಚದಿಂದ ನಾನಿಲ್ಲಿ ಬರೆಯಹೊರಟಿದ್ದೇನೆ.

ಮೊದಲಿಗೆ ಈ ಕಾದಂಬರಿಯಲ್ಲಿ ನಾನು ಗುರುತಿಸಿದ ಕೆಲವು ಮುಖ್ಯ ಅಂಶಗಳನ್ನು ಪಟ್ಟಿಯ ರೀತಿಯಲ್ಲಿ ಕೊಟ್ಟು ನಂತರ ಇಡೀ ಕಾದಂಬರಿಯನ್ನು ನಾನು ಗ್ರಹಿಸಿರುವಂತೆ ವಿವರಿಸುವ ಪ್ರಯತ್ನ ಮಾಡುತ್ತೇನೆ. 'ಪುರುಷೋತ್ತಮ'ದಲ್ಲಿ ನನಗೆ ಕಾಣಿಸಿದ, ಗುಂಗಾಗಿ ಉಳಿದು ಕಾಡಿದ ಕೆಲವು ಮುಖ್ಯ ಸಂಗತಿಗಳು ಇಲ್ಲಿವೆ:

೧. ಜೀವವೊಂದಕ್ಕೆ, ತನ್ನ ಮೂಲದ ಬಗ್ಗೆ, ಆ ಮೂಲಕವೇ ತಾನು ಕಂಡುಕೊಳ್ಳಬಲ್ಲ ತನ್ನ ಅಸ್ತಿತ್ವದ ಉದ್ದೇಶದ ಬಗ್ಗೆ ಮೂಡುವ ಪ್ರಶ್ನೆ

೨. ಈ ಪ್ರಶ್ನೆಗೆ ಉತ್ತರ ಹುಡುಕಾಡುತ್ತಲೇ ತಲುಪಬಹುದಾದ ಎತ್ತರಗಳ ಸಾಧ್ಯತೆ

೩. ಈ ಅನ್ವೇಷಣೆಯ ಹಾದಿಗಡ್ಡ ಬರುವ, ದಿಕ್ಕು ತಪ್ಪಿಸುವ ಜೀವನದ ನಿಷ್ಠುರ ಸಮಸ್ಯೆಗಳು

೪. ಹಣ ಮತ್ತು ಅಧಿಕಾರದ ರೂಪದಲ್ಲಿ ಈ ಅನ್ವೇಷಣೆಯ ದಿಕ್ಕು ತಪ್ಪಿಸಲು ಬರುವ ಅಹಂಕಾರವನ್ನು ಎದುರಿಸುವ, ಧಿಕ್ಕರಿಸುವ ಶಕ್ತಿಯ ಅಗತ್ಯ

೫. ಪುರುಷೋತ್ತಮನ ಪಾತ್ರ ತನ್ನ ನಿಲುವಿನಲ್ಲಿ ತೋರಿಸುವ ಈ ಅಸಾಧಾರಣ ಕೆಚ್ಚು

೬. 'ಇನ್ನು ಸಾಕು' ಎಂದು ಅನ್ನಿಸಿಬಿಡುವಷ್ಟು ಬಳಲಿಸಿಬಿಡುವ ಈ ವಿಕೃತಿಯ ವಿರುದ್ಧದ ಹೋರಾಟ

೭. ನೈತಿಕ, ಸಾಮಾಜಿಕ ತಲ್ಲಣಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತಲೇ ಉತ್ತರ ಹುಡುಕಿಕೊಳ್ಳಬೇಕಾದ ಅನಿವಾರ್ಯತೆ

೮. ಈ ಶಕ್ತಿಯನ್ನು ಮನುಷ್ಯನಿಗೆ ದಯಪಾಲಿಸುವ ಪ್ರೀತಿ ಮತ್ತು ಕರುಣೆ

೯. ಉತ್ತರಗಳ ಹುಡುಕಾಟವೇ ಪ್ರೀತಿಯ ಅನಂತ ಸಾಧ್ಯತೆಗಳನ್ನು ತೆರೆಯುತ್ತಾ ಹೋಗುವ ಬಗೆ, ಮತ್ತು

೧೦. ತನ್ನ ಬದುಕಲ್ಲಿ ಹೆಜ್ಜೆ ಹೆಜ್ಜೆಗೂ ಎದುರಾಗುವ ಕ್ರೌರ್ಯವನ್ನು ಎದುರಿಸುತ್ತಲೇ ಕಡೆಗೆ ಮನುಷ್ಯಜೀವದ ಅತಿ ಉನ್ನತ ಭಾವವಾದ ಪ್ರೀತಿ, ಕರುಣೆಗಳತ್ತ ಸಾಗಿ, ಧನ್ಯತೆ ಹುಟ್ಟಿಸಿಬಿಡುವ ಈ ಪಾತ್ರದ ಹುಡುಕಾಟದ ಹಾದಿ.

*

ಅರವತ್ತು ದಾಟಿದ ಮುದುಕ ಸಾಂತಯ್ಯ, ಕತ್ತಲು ತುಂಬಿದ ದೇವರ ಕೋಣೆಯಲ್ಲಿ, ತಾನು ಬಡಿದು ಕೊಂದಿದ್ದು ನಾಗರ ಹಾವೆಂದು ತಿಳಿದು ತಲ್ಲಣಿಸಿ, 'ಹೊತ್ತು ಕಂತುವ ವೇಳೆ ಬ್ರಹ್ಮ ಹತ್ಯೆ ಮಾಡಿ ಕೂತೆನಲ್ಲ' ಎಂದು ಹಲುಬುವಲ್ಲಿಂದ ಬಿಚ್ಚಿಕೊಳ್ಳುವ ಕಥೆ, ಆತನ ನಂತರದ ತಲೆಮಾರಿನುದ್ದಕ್ಕೂ ಉಳಿದ ಈ ಹತ್ಯೆಯ ನೆನಪು ಮತ್ತು ಸಂಭವಿಸಿದ ದುರಂತಗಳ ಸರಮಾಲೆಗೆ ಅದು ಹಾಕಿಕೊಂಡ ತಳಕು ಎರಡನ್ನೂ ಅಲ್ಲಲ್ಲಿ ಉಲ್ಲೇಖಿಸುತ್ತಲೇ ಸಾಗುತ್ತದೆ. ಮುಂದೆ ಇದೇ ಮನೆತನದ ಎರಡು ಕವಲುಗಳಾದ (ಅಥವಾ ಹಾಗಂದುಕೊಂಡ) ಪುರುಷೋತ್ತಮ ಮತ್ತು ಮಂಜುನಾಥರ ಜೀವನದಲ್ಲಿ ಒದಗಿ ಬರುವ ದುರ್ಭರ ಗಳಿಗೆಗಳಲ್ಲಿ ಒಂದಲ್ಲ ಒಂದು ಪಾತ್ರ, ಇದರ ಮೂಲಕಾರಣ ಅಂದಿನ ಹತ್ಯೆಯಿಂದ ಉಂಟಾದ ಮನೆತನಕ್ಕಂಟಿದ ಶಾಪವೇ ಇರಬಹುದೆಂದು ಮತ್ತೆ ಮತ್ತೆ ಕಳವಳಿಸುತ್ತಾ ಉಳಿಯುತ್ತವೆ. ಈ ಕಳವಳದಲ್ಲೇ, ಬದುಕು ಹಾಯಬೇಕಾದ

ತರ್ಕ ಮೀರಿದ ಕ್ರೌರ್ಯಗಳಲ್ಲಿ ಉತ್ತರ ಹುಡುಕಿಕೊಳ್ಳುವ ಹವಣಿಕೆಯೂ ಈ ಜೀವಗಳದ್ದಾಗಿರಬಹುದು. ಆದರೆ ಪುರುಷೋತ್ತಮ ಮತ್ತು ಮಂಜುನಾಥರ ಆಳದ ತಲ್ಲಣಗಳಿಗೆ ಎಂದೋ ನಡೆದ ಈ ಹತ್ಯೆಯ ದೋಷ ಉತ್ತರವಾಗಿ ಕಾಣದೆ, ಹುಡುಕಾಟದ ಹಾದಿ ಹಾಗೇ ಮುಂದುವರಿಯುತ್ತದೆ.

ಪುರುಷೋತ್ತಮನಿಗೆ ತನ್ನ ಮನೆತನದ ಇತಿಹಾಸವನ್ನು ತಿಳಿಯುವ ಅವಕಾಶ ಬರುವುದೇ ತಡವಾಗಿ. 'ಅವನ ತಾಯಿಯ ಸ್ಮೃತಿಯಲ್ಲಿ ಸುರುಳಿ ಸುತ್ತಿ, ಬಿಚ್ಚುವುದನ್ನೇ ಹಾದಿ ಕಾಯುತ್ತಾ ಮಲಗಿದ ಈ ಮನೆತನದ ಇತಿಹಾಸ' ಎಂದು ಕಾದಂಬರಿಕಾರರು ಹೇಳುವಾಗ ಅಲ್ಲಿ ಥಟ್ಟೆಂದು ಕತ್ತಲ ಕೋಣೆಯಲ್ಲಿ ಸುರುಳಿ ಸುತ್ತಿ ಮಲಗಿದ್ದ ಹಾವಿನ ನೆನಪೇ ಬರುತ್ತದೆ. ಹಾಗೆ ಸುರಳಿ ಸುತ್ತಿ ಮಲಗಿದ ಇತಿಹಾಸದ ನೆನಪು – ತನ್ನ ಮನೆತನದಲ್ಲಿ ನಡೆದುಹೋದ ಆತ್ಮಾಘಾತಗಳ ಪರಂಪರೆಯ ನೆನಪು ಮಗನ ಸದ್ಯದ ಮನಸ್ಥಿತಿಯಲ್ಲಿ ಎಲ್ಲಿ ಇನ್ನೊಂದು ಅನಾಹುತಕ್ಕೆ ದಾರಿ ಮಾಡಿಕೊಡುವುದೋ ಎಂಬ ಕಳವಳದಲ್ಲೇ ಪುರುಷೋತ್ತಮನ ತಾಯಿ ಸಾವಿತ್ರಿ ಈ ಇತಿಹಾಸವನ್ನು ಮಗನಿಗೆ ತಿಳಿಸಲು ಹಿಂಜರಿಯುತ್ತಲೇ ಉಳಿಯುತ್ತಾಳೆ. ಹಾಗೆ ನೋಡಿದರೆ, ಪುರುಷೋತ್ತಮನ ಮುತ್ತಜ್ಜನಾದ ಕೆಳಮನೆಯ ಅಪ್ಪಣ್ಣನ ಸಾಕುಮಗಳ ಮಗಳಾದರೂ ಸಾವಿತ್ರಿ ಹನೇಹಳ್ಳಿಯಲ್ಲಿರುವ ಅಪ್ಪಣ್ಣನ ದಾಯಾದಿ ಕುಟುಂಬವೊಂದಕ್ಕೆ ಸೇರಿದವಳೇ ಆದ ಕಾರಣ ಅವಳಿಗೆ ಈ ಹನೇಹಳ್ಳಿಯ ಮನೆತನದೊಂದಿಗೆ ಹುಟ್ಟಿನಿಂದಲೇ ಬಂದ ರಕ್ತಸಂಬಂಧವಿದೆ. ಆದರೆ ಕಾದಂಬರಿಯ ಕೊನೆಗೆ ತಿಳಿದು ಬರುವ ಹಾಗೆ ಸಾವಿತ್ರಿಯ ಸಾಕುಮಗನಾದ ಪುರುಷೋತ್ತಮನಿಗೆ, ಹನೇಹಳ್ಳಿಯ ಈ ಮನೆತನದೊಂದಿಗೆ ಅಸಲಿಗೆ ರಕ್ತಸಂಬಂಧವಿಲ್ಲ. ಹಾಗಿಲ್ಲದಿರುವುದು ಪುರುಷೋತ್ತಮನಿಗಾಗಲಿ, ಈ ಮನೆಗೆ ಸಂಬಂಧಪಟ್ಟವರಿಗೇ ಆಗಲಿ ತಿಳಿದೂ ಇಲ್ಲ. ತನಗೊಂದು ಮನೆಯಿದೆ, ಇತಿಹಾಸವಿದೆ ಎಂಬ ತಿಳುವಳಿಕೆ ಜೀವವೊಂದಕ್ಕೆ ಕಟ್ಟಿಕೊಡುವ ಭದ್ರತೆಯ ಜೊತೆಗೇ ಆ ಮನೆತನದ ಕ್ಲೇಶಗಳು ವ್ಯಕ್ತಿಯೊಬ್ಬನ ವ್ಯಕ್ತಿತ್ವವನ್ನು, ಬದುಕನ್ನು ರೂಪಿಸುವ ಅಥವಾ ವಿರೂಪಗೊಳಿಸುವ ಅನಾಹುತವೂ ಉಂಟು. ಪುರುಷೋತ್ತಮನಿಗೆ ತನಗೊಂದು ಇತಿಹಾಸವಿದೆ ಎಂದೆನಿಸುವ ಹಾಗೆ ಮಾಡುವ ಹವಣಿಕೆಯಲ್ಲೇ ಆ ಇತಿಹಾಸಕ್ಕೆ ಏನೇನೂ ಸಂಬಂಧವಿಲ್ಲದವನಾಗಿ ಅವನನ್ನು ಹನೇಹಳ್ಳಿಯ ಒಡನಾಟದಿಂದ ದೂರವಿಟ್ಟೇ ಬೆಳೆಸುವ ಹಂಬಲವೂ ಮುತ್ತಜ್ಜ ಮತ್ತು ಸಾವಿತ್ರಿಯರು ಪುರುಷೋತ್ತಮನ ಹುಟ್ಟಿನ ವಿವರಗಳನ್ನು ಗುಟ್ಟಾಗಿ ಇರಿಸುವುದರ ಕಾರಣ ಇರಬಹುದು.

ಹಾಗೆ ನೋಡಿದರೆ, ತನ್ನ ಮನೆತನದ ಇತಿಹಾಸ ತಿಳಿಯಬೇಕೆಂಬ ಆಸ್ಥೆ ಪ್ರಾರಂಭದಲ್ಲಿ ಪುರುಷೋತ್ತಮನಲ್ಲಿ ಕಾಣುವುದೂ ಇಲ್ಲ. ಇತಿಹಾಸದ ಬಗ್ಗೆ ಇರುವ ತಿಳುವಳಿಕೆ ವ್ಯಕ್ತಿಯೊಬ್ಬನ ಇವತ್ತನ್ನು ತಿಳಿಯಲು ನೆರವಾಗಬಹುದೇ ಹೊರತು ಇಂದಿನ ಕ್ರಿಯೆಯನ್ನು

ನಿರ್ಧರಿಸುವಲ್ಲಿ, ಇತಿಹಾಸದ ಪಾತ್ರ ಏನೂ ಇಲ್ಲ ಎಂಬುದೇ ಪುರುಷೋತ್ತಮನ ಅಭಿಪ್ರಾಯವಾಗಿರುತ್ತದೆ. ಈಗಲೇ ತಿಳಿಯಬೇಕು ಎಂಬ ಕುತೂಹಲವನ್ನು ಅವನೆಂದೂ ತೋರಿಸದಿದ್ದರೂ ತನ್ನ ಅಮ್ಮನಿಂದ ಮುಂದೊಂದು ದಿನ ತನ್ನ ಮನೆತನದ, ತನ್ನ ಇತಿಹಾಸ ತಿಳಿಯುತ್ತದೆ ಎಂಬ ಅರಿವು ಪುರುಷೋತ್ತಮನಿಗೆ ಇದೆ. ಆದಿ ಅಂತ್ಯಗಳೇ ಕಾಣದ ಈ ಕಾಲ ಅವಕಾಶಗಳ ಅನಂತ ಹರಹಿನಲ್ಲಿ ತನ್ನ ಸ್ಥಾನವನ್ನು ತಿಳಿಯಲು ಮನುಷ್ಯನಿಗೆ ತನ್ನ ಇತಿಹಾಸವನ್ನು ಅರಿಯುವ ಅಗತ್ಯವಿದೆ ಎಂಬುದು ಅವನ ನಂಬಿಕೆ.

ತನ್ನ ಹದಿನಾಲ್ಕನೆಯ ಹರಯದಲ್ಲಿ ಮೊದಲ ಬಾರಿಗೆ ತನ್ನ ಮುತ್ತಜ್ಜನ ಪೂರ್ವಿಕರ ಹನೇಹಳ್ಳಿಗೆ ಭೇಟಿಯಿತ್ತಾಗ ಪುರುಷೋತ್ತಮ ಅನುಭವಿಸಿದ ಹಲವು ಸಂಗತಿಗಳು ಅವನ ಸಂವೇದನೆಗಳ ಒಳತಿರುಳಾದ ಹಾಗೆ, ಇದಾಗಿ ಇಪ್ಪತ್ನಾಲ್ಕು ವರ್ಷದ ನಂತರ ಅವನು ಹನೇಹಳ್ಳಿಗಿತ್ತ ಎರಡನೆಯ ಭೇಟಿಯಲ್ಲಿ 'ಕಾಲ' ಎನ್ನುವುದು ಕೂಡ ಭೌತಿಕ ವಸ್ತು ಎನ್ನುವಷ್ಟು ನಿಷ್ಠುರವಾಗಿ ನಮ್ಮ ಮೇಲೆ ಪರಿಣಾಮ ಮಾಡಬಲ್ಲದು ಎಂಬುದು ಹೊಳೆಯುತ್ತದೆ. ಈ ನಂತರದ ಭೇಟಿಯಲ್ಲೇ ತನ್ನ ಮುತ್ತಜ್ಜನ ಡೈರಿಯೂ ದೊರೆತು, ಮನೆತನದ ಇತಿಹಾಸವನ್ನರಿಯುವ ಅವಕಾಶ ಬಂದಿರುತ್ತದೆ (ಡೈರಿಯನ್ನು ಪೂರ್ತಿಯಾಗಿ ಓದದಿದ್ದರೂ).

ಎರಡನೆಯ ಬಾರಿ ಪುರುಷೋತ್ತಮ ಹನೇಹಳ್ಳಿಗೆ ಕೊಡುವ ಭೇಟಿ, ಮಂಜುನಾಥ-ಶ್ರೀಧರರು ತನ್ನ ಮನೆಗಿತ್ತ ಭೇಟಿ ಮತ್ತು ಆ ಭೇಟಿ ತಂದ ಅನಿರೀಕ್ಷಿತ ಆಘಾತದ ನಂತರ. ಮುಂಚೆ ಎಂದೂ ಕಂಡಿರದ, ತಮ್ಮ ದಾಯಾದಿ ಎಂದು ಕೇಳಿ ಮಾತ್ರ ತಿಳಿದಿದ್ದ ಮಂಜುನಾಥ ಇದ್ದಕ್ಕಿದ್ದಂತೆ ತನ್ನ ಮನೆಗೆ ಬಂದು, 'ನಿನಗ್ಯಾರೂ ತಿಳಿಸಿರಲಾರರು, ನಿನ್ನಪ್ಪ ಕೊಲೆಯಾಗಿದ್ದ' ಎಂಬ ಸುದ್ದಿ ಕೊಟ್ಟು ಬಂದಷ್ಟೇ ತ್ವರೆಯಾಗಿ ಶ್ರೀಧರನೊಂದಿಗೆ ಹೊರಟುಹೋದ ನಂತರ. ಆದರೆ ಹನೇಹಳ್ಳಿಗಿತ್ತ ಈ ಭೇಟಿಯಲ್ಲಿ, ಬದುಕಿನ ನಿಗೂಢತೆಯ ಸಂಕೇತವಾಗಿ ತನ್ನ ಮನಸ್ಸಿನಲ್ಲಿ ಬೆಳೆಯತೊಡಗಿದ್ದ ಆವರೆಗಿನ ಹನೇಹಳ್ಳಿ, ವಾಸ್ತವವಾಗಿ ಬದಲಾದ ರೀತಿಗೆ ಮನಸ್ಸು ಕಳವಳಿಸಿ, ಹೋದಷ್ಟೇ ಶೀಘ್ರವಾಗಿ ತಾನು ತಿಳಿಯಲೆಂದು ಬಂದ ಮಾಹಿತಿಯ ಗೊಡವೆಗೇ ಹೋಗದೆ ಪುರುಷೋತ್ತಮ ಮುಂಬೈಗೆ ವಾಪಸ್ಸು ಬರುತ್ತಾನೆ. ಇದಕ್ಕೆ ಕಾರಣವಾದ 'ಕಾಲ' ತರುವ ಭೌತಿಕ ಬದಲಾವಣೆ ವ್ಯಕ್ತಿಯೊಬ್ಬನ ಒಂದು ಕಾಲದ ನೆನಪು ಕೊಟ್ಟ ತಿಳುವಳಿಕೆ ಮತ್ತು ಆ ತಿಳುವಳಿಕೆಯ ಮೂಲವನ್ನೇ ಅಣಕಿಸಿಬಿಡುವ, ಅಲ್ಲಾಡಿಸಿಬಿಡುವ ಬದುಕಿನ ಅನಿವಾರ್ಯ ಕ್ರೌರ್ಯವಾಗೇ ಕಾಣುತ್ತದೆ.

ಹನೇಹಳ್ಳಿಯಿಂದ ಹಿಂದಿರುಗಿದ ನಂತರ, ತನ್ನಪ್ಪ ಕೊಲೆಯಾಗಿ ಸತ್ತಿರಲಿಲ್ಲ, ಅದು ಆತ್ಮಹತ್ಯೆ ಎಂದು ತನ್ನ ಅಮ್ಮನಿಂದ ಪುರುಷೋತ್ತಮನಿಗೆ ತಿಳಿದುಬರುತ್ತದೆ.

ನಂತರ ಇದ್ದಕ್ಕಿದ್ದಂತೆ ಪುರುಷೋತ್ತಮನ ಮನೆಗೆ (ನಲವತ್ತು ವರ್ಷಗಳ ನಂತರ) ಬರುವ ಸದೂ ಮಾವ, ಅನೂಹ್ಯವಾದದ್ದರಲ್ಲಿ ವಿಶ್ವಾಸವೇ ಇಡದ ಮುತ್ತಜ್ಜನಿಗಿಂತ ಭಿನ್ನವಾದ ನೆಲೆಯಲ್ಲಿ ನಿಂತು ಬದುಕಿನ ನಿಜವಾದ ಅದ್ಭುತಗಳಿಗೆ ತೆರೆದುಕೊಳ್ಳುವ ಪರಿಯನ್ನು ಪುರುಷೋತ್ತಮನಿಗೆ ಪರಿಚಯಿಸಲೆಂದೇ ಬಂದ ಹಾಗೆ ಅನ್ನಿಸುವುದುಂಟು. 'ಈ ಬದುಕಿನಲ್ಲಿ ಎಲ್ಲವನ್ನೂ ಬುದ್ಧಿ-ತರ್ಕಗಳಿಂದಲೇ ತಿಳಿಯುವುದು ಶಕ್ಯವಿಲ್ಲವೋ, ಪುರುಷೋತ್ತಮ' ಎಂದು ಸದೂ ಮಾವ ಹೇಳುವ ಮಾತು ಕಾದಂಬರಿ ಮುಂದುವರೆದಂತೆಲ್ಲ ಎಲ್ಲ ಸಂದರ್ಭಗಳಲ್ಲೂ ಸುಪ್ತವಾಗಿ ಆಳದಲ್ಲಿ ಮಿಡಿಯುತ್ತಲೇ ಉಳಿಯುತ್ತದೆ. ಸದೂ ಮಾವ ತನ್ನ ಮನೆಗಿತ್ತ ಭೇಟಿಯ ನಂತರ ತೆರೆದುಕೊಳ್ಳುತ್ತಾ ಹೋಗುವ ತಾನಿರುವ ಜಾಗದಲ್ಲಿ ಮುಂದೆ ಬರಲಿರುವ 'ಶಾಪಿಂಗ್ ಸೆಂಟರ್'ನ ಯೋಜನೆ, ಈ ಯೋಜನೆಯಿಂದಾಗೇ ಮುಂದೆ ಬರಲಿರುವ ಲೆಕ್ಕವಿಲ್ಲದಷ್ಟು ನಿಷ್ಠುರಗಳಿಗೆ ಪುರುಷೋತ್ತಮನನ್ನು ಸಿದ್ಧಮಾಡಲಿಕ್ಕೆಂದೇ ಸದೂ ಮಾವ ಆಗ ಬಂದಿದ್ದು ಎನಿಸುವಂತೆ ಮಾಡುತ್ತದೆ. ಮುಂದೆ ನಡೆಯಲಿರುವ ಹಣದ ವಿರುದ್ಧ, ವ್ಯವಸ್ಥೆಯ ವಿರುದ್ಧ, ಅಹಂಕಾರದ ವಿರುದ್ಧದ ಪುರುಷೋತ್ತಮನ ಹೋರಾಟಕ್ಕೆ ನೈತಿಕ ಬೆಂಬಲವನ್ನು, ತನ್ನೊಳಗೇ ಇರುವ ಆ ಹೋರಾಟದ ಕೆಚ್ಚನ್ನೂ ಸದೂ ಮಾವ ನೇರವಾಗಿ ಹೇಳದೆಯೇ ಅರಿವಿಗೆ ತಂದುಕೊಟ್ಟಿರುತ್ತಾನೆ. ತನ್ನ ಮನೆತನದಲ್ಲಿ ಒಂದು ತುಂಡು ನೆಲಕ್ಕಾಗಿ ಹುಟ್ಟಿಕೊಂಡ ದಾಯಾದಿ ಗುಂಪುಗಳ ನಡುವಿನ ಬೆಚ್ಚಿಬೀಳಿಸುವ ಹಗೆತನ, ಅದನ್ನು ನಿಲ್ಲಿಸಲೆಂದೇ ಮದುವೆಯಾಗದೆ ಉಳಿದ ತನ್ನ ಮುತ್ತಜ್ಜನ ಪ್ರಯತ್ನ ಮೀರಿಯೂ ಹಗೆತನ ಹಾಗೇ ಉಳಿದದ್ದು, ಈಗ ಹಣದ ದೆಸೆಯಿಂದಾಗಿ ಅದು ಮುಂಬೈನವರೆಗೂ ಹರಿದು ಬರಬಹುದಾದ ಸಾಧ್ಯತೆ ಇರುವುದನ್ನೂ ಸದೂ ಮಾವ ಸಾವಿತ್ರಿಗೆ ತಿಳಿಸುವಾಗ ಪುರುಷೋತ್ತಮನಿಗೆ ಮಂಜುನಾಥ ತನ್ನ ಮನೆಗಿತ್ತ ಭೇಟಿಯ ಹಿಂದಿನ ಉದ್ದೇಶ ಅದೇ ಇರಬಹುದು ಎಂದೆನ್ನಿಸುತ್ತದೆ.

ಆದರೆ, ಪುರುಷೋತ್ತಮನ ಗ್ರಹಿಕೆಗೆ, ಅಷ್ಟೇ ಏಕೆ ಸ್ವತಃ ಮಂಜುನಾಥನ ಗ್ರಹಿಕೆಗೇ ಮೀರಿದ ಆಕರ್ಷಣೆಯೊಂದು ಆ ಮನೆಯನ್ನು ಕುರಿತಂತೆ ಮಂಜುನಾಥನಿಗಿರುತ್ತದೆ. ಆ ಆಕರ್ಷಣೆ ಕೇವಲ ದಾಯಾದಿ ಮತ್ಸರದಿಂದ ಬಂದಿದ್ದು ಎನ್ನುವ ತರ್ಕಕ್ಕೂ ಮೀರಿದ್ದಾಗಿರುತ್ತದೆ. ಶ್ರೀಧರನಿಗೆ ಕೇವಲ ಪುರುಷೋತ್ತಮನ ಮನೆ ತೋರಿಸುವ ಉದ್ದೇಶದಿಂದಷ್ಟೆ ಕರೆದುಕೊಂಡ ಮಂಜುನಾಥನಿಗಾದರೂ ಅಲ್ಲಿ ತಾನಾಡಿದ ಮಾತಿನ ಹಿಂದಿನ ಉದ್ದೇಶ ಏನಿರಬಹುದು ಎಂಬುದು ಅವನ ತಿಳಿವಿಗೂ ಮೀರಿದ್ದಾಗಿರುತ್ತದೆ. ತನ್ನಪ್ಪನ ಕೊಲೆಯ ಸುದ್ದಿ ತಿಳಿದು, ಪುರುಷೋತ್ತಮನೇ ಇನ್ನಷ್ಟು ವಿವರಗಳಿಗಾಗಿ ತನ್ನನ್ನು ಹುಡುಕಿಕೊಂಡು ಬರಬಹುದು ಎಂದುಕೊಂಡಿದ್ದ ಮಂಜುನಾಥನಿಗೆ ಹಾಗಾಗದಿದ್ದಾಗ ನಿರಾಶೆಯಾಗುತ್ತದೆ. ತನ್ನ ಮೂಲದ ಬಗ್ಗೆ ತಿಳಿಯಲಿಕ್ಕಾಗೇ

ಪುರುಷೋತ್ತಮನನ್ನು ತಾನು ಹಾಗೆ ಕೆಣಕಿರಬೇಕೆಂಬುದು ಕೂಡ ಮಂಜುನಾಥನ ಅರಿವಿಗೂ ಮೀರಿದ ಆಳದ ಕಳವಳವಾಗಿರಬಹುದು.

ಹನೇಹಳ್ಳಿಯ ತನ್ನ ಮನೆಯಲ್ಲಿ ಒಂದು ರೀತಿಯ ಪರಕೀಯಪ್ರಜ್ಞೆಯಲ್ಲೇ ಬೆಳೆದು, ದೊಡ್ಡವನಾದ ಮಂಜುನಾಥನಿಗೆ ತನ್ನ ಮನೆಯಲ್ಲೇ ಆಗಲಿ, ಕುಮಟೆಯ ಅಜ್ಜನ ಮನೆಯಲ್ಲೇ ಆಗಲಿ ತಾನು ಯಾರಿಗೂ ಸೇರದವನು ಎಂಬ ಭಾವನೆ. ತುಂಬಾ ಚಿಕ್ಕ ವಯಸ್ಸಿನಿಂದಲೇ 'ಈ ಜಗತ್ತಿನಲ್ಲಿ ನಾನು ಹುಟ್ಟಿದ್ದು ಹೇಗೆ, ಯಾರಿಂದ' ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಲೇ ಅದಕ್ಕೆ ಉತ್ತರ ಹುಡುಕುತ್ತಲೇ ಉಳಿದವನು. ಆದರೆ, 'ನಿನಗೆ ಒಳ್ಳೆಯ ದಿನಗಳನ್ನು ಕಾಣಿಸುವವರು ಮುಂಬಯಿಯಲ್ಲಿದ್ದಾರೆ, ಹೋಗಿ ಹುಡುಕು' ಎಂದು ತನ್ನ ಅಮ್ಮ ಹೇಳಿದಾಗ, ಮುಂಬಯಿಗೆ ಓಡಿಹೋಗುವ ವಿಚಾರ ಮನಸ್ಸಿಗೆ ಬಂದರೂ, ತಾನಲ್ಲಿ ಹುಡುಕುವುದು ಯಾರನ್ನು ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದುಕೊಳ್ಳುತ್ತದೆ. ಅಮ್ಮ ತಿಳಿಸಿದವರಲ್ಲಿ ಆಶ್ರಯ ಪಡೆಯಲಾರೆ, ಯಾರನ್ನೂ ಹುಡುಕಲಾರೆ ಎಂದು ನಿರ್ಧರಿಸಿಯೇ ಮುಂಬಯಿಗೆ ಬರುವ ಮಂಜುನಾಥನಲ್ಲಿ ತನ್ನ ಮೂಲವನ್ನು ತಿಳಿಯುವ ಹಂಬಲವಿದ್ದಂತೆಯೇ, ತಿಳಿದರೆ ಅದರಿಂದ ಇನ್ನೇನೋ ಅನಾಹುತವಾಗಬಹುದೆಂಬ ಭೀತಿಯೂ ಇದ್ದಿರಬಹುದು. ತನ್ನ ಮುತ್ತಜ್ಜನ ಮತ್ತು ತಾಯಿಯ ಪ್ರೀತಿಯಲ್ಲಿ ಬೆಳೆದು ಅರಳುತ್ತಿದ್ದ ಪುರುಷೋತ್ತಮನಿಗೆ ತನ್ನ ಮೂಲ ಏನೇ ಇದ್ದರೂ ಅದು ತಿಳಿದಾಗ ತಿಳಿಯಲಿ ಎಂಬ ನಿರಾಳತೆ ಇದೆ ಮತ್ತು ಈ ಧೋರಣೆಗೆ, ತನ್ನ ಮೂಲವೇನೇ ಇದ್ದರೂ ಅದರಿಂದ ತನ್ನ ಇಂದಿನ ವ್ಯಕ್ತಿತ್ವ ಮತ್ತು ನಿರ್ಧಾರಗಳು ಬದಲಾಗಲಾರದು ಎಂಬ ವಿಶ್ವಾಸವಿದೆ. ಆದರೆ, ಪ್ರೀತಿಗೆ ಎರವಾಗೇ ಬೆಳೆದ ಮಂಜುನಾಥನಿಗೆ ಈ ಧೈರ್ಯವಾಗಲೀ ನಿರಾಳತೆಯಾಗಲೀ ಇಲ್ಲ. ಮಂಜುನಾಥನ ಸ್ವಭಾವದಲ್ಲಿ ಕಾಣಿಸುವ ವಿವೇಕಶೂನ್ಯತೆಗೆ, ನಾಟಕೀಯತೆಗೆ ಈ ಭೀತಿಯೇ ಕಾರಣ ಎಂದು ತಿಳಿದಾಗ ಮಂಜುನಾಥನ ಮೇಲೆ ಅನುಕಂಪ ಉಕ್ಕುತ್ತದೆ. ಎಳೆತನದಲ್ಲಿ ಪ್ರೀತಿ, ಕರುಣೆಗಳಿಗೆ ಎರವಾದ ಜೀವವೊಂದು ಎಷ್ಟೇ ಸಾಹಸಿಯಾಗಿ, ಬದುಕಿನ ಏನೆಲ್ಲಾ ಕಷ್ಟಗಳಲ್ಲಿ ಹಾದು, ತಾನೇ ತನಗೊಂದು ನೆಲೆ ದೊರಕಿಸಿಕೊಂಡಾಗಲೂ ಆಳದಲ್ಲಿ ಉಳಿದೇಬಿಡುವ ದೊಡ್ಡ ಶೂನ್ಯವೊಂದರ ಭಾಗವಾಗಿ ನರಳುವುದನ್ನು ನೋಡುವಾಗ ಮನಸ್ಸು ಭಾರವಾಗುತ್ತದೆ.

ಹರಯದಲ್ಲಿ, ಹನೇಹಳ್ಳಿಯಿಂದ ತನ್ನ ಮನೆಯನ್ನು ಬಿಟ್ಟುಬರುವಾಗ ಹಳ್ಳಿಯ ಗಡಿಯಲ್ಲಿದ್ದ ಸುಂಕದ ಕಟ್ಟೆಯ ಮೇಲೆ ಕುಳಿತು ಗಳಗಳನೆ ಅತ್ತುಬಿಡುವ ಮಂಜುನಾಥನ ಮನಸ್ಸು, ಗೋಕರ್ಣಕ್ಕೆ ಬಂದು ಹುಬ್ಬಳ್ಳಿಗೆ ಹೋಗುವ ಬಸ್ ಹತ್ತಿ ಕುಳಿತುಕೊಳ್ಳುವಷ್ಟರಲ್ಲಿ, ತನ್ನ ಹುಟ್ಟಿದೂರನ್ನು ಹಿಂದೆ ಬಿಟ್ಟುಬಿಡಲು ಹಾತೊರೆದರೂ, ಬಸ್ಸಿನಲ್ಲಿ ಇದ್ದಕ್ಕಿದ್ದಂತೆ ಪ್ರತ್ಯಕ್ಷಳಾಗುವ ನಾಗಮ್ಮನ ಮಗಳು ನೀಲಾಳ ದೆಸೆಯಿಂದಾಗಿ ಮಂಜುನಾಥ ಇನ್ನ್ಯಾವತ್ತೂ

ಹನೇಹಳ್ಳಿಗೆ ಹಿಂದಿರುಗಲಾರದಂಥಾ ಪರಿಸ್ಥಿತಿ ಹುಟ್ಟಿಬಿಡುತ್ತದೆ. ಮುಂಬೈಗೆ ಬಂದು, ಶ್ರೀಧರನಿದ್ದ ಹೊಟೇಲಿನಲ್ಲಿ ಕೆಲಸಕ್ಕೆ ಸೇರಿ, ನಂತರ ಅದನ್ನು ಬಿಟ್ಟು ಕರೀಂಖಾನನ ಗುಂಪಿಗೆ ಸೇರಿ, ಅಲ್ಲಿ ಸೇರಿದ ಎರಡೇ ವರ್ಷಕ್ಕೆ ಆ ದಂಧೆಯಿಂದ ತಪ್ಪಿಸಿಕೊಂಡು ಬಂದು, ಮತ್ತೆ ಶ್ರೀಧರನ ರೆಸ್ಟೋರೆಂಟಿನಲ್ಲಿ ಕೆಲಸಕ್ಕೆ ಸೇರಿರುತ್ತಾನೆ. ನಂತರ ನಾಥಾನಿ ಆಂಡ್ ಕಂಪನಿಯ ಪರಿಚಯವಾಗಿ ಅಲ್ಲಿ ಸೇರಿ, ಹಲವು ವರ್ಷಗಳ ನಂತರ ಶ್ರೀಧರನೊಂದಿಗೆ ಸೇರಿ ತಮ್ಮದೇ 'ಮಹಾಮಾಯ' ಸಂಸ್ಥೆಯನ್ನು ಆರಂಭಿಸಿರುತ್ತಾನೆ. ಕರೀಂಖಾನನ ಟೋಳಿಯಿಂದ ತಪ್ಪಿಸಿಕೊಂಡು ಬಂದ ದಿನಗಳಲ್ಲಿ ಒಮ್ಮೆ ಶ್ರೀಧರನೊಂದಿಗೆ ಹೋಗಿ ಬಾಯಕ್ಕನನ್ನು ಕಾಣುವ ಮಂಜುನಾಥನಿಗೆ, ಬಾಯಕ್ಕ ತೋರಿಸಿದ ಅನಾದರಕ್ಕೆ ಕಾರಣ ಅವನಿಗೆಂದು ಹನೇಹಳ್ಳಿಯ ತನ್ನ ಮನೆಯಿಂದ ಬಂದ ಪತ್ರದಿಂದಾಗಿರುತ್ತದೆ. ಪತ್ರದಲ್ಲಿದ್ದ ತನ್ನ ಮೇಲಿನ ಆರೋಪಗಳನ್ನು ನೋಡಿದಾಗ ಮಂಜುನಾಥನಿಗೆ ಇನ್ನು ತನ್ನ ಪಾಲಿಗೆ ಯಾರೂ ಇಲ್ಲ ಅನ್ನಿಸಿ, ಆ ನಂತರವೆಲ್ಲ ಹಗಲೂ ರಾತ್ರಿ ದುಡಿಯುತ್ತಾ ಹಣ ಮಾಡುವುದರಲ್ಲಿ ತೊಡಗಿ, ನಂತರ ಹಾಗೆ ಹಣ ಮಾಡುವುದರಲ್ಲೇ ಬೇಸರ ಬಂದು, ಈಗ ಆ ಮನೆಯನ್ನು ಕೊಂಡು ತನ್ನದಾಗಿಸಿಕೊಳ್ಳುವ ಹಂಬಲ, ತನಗಾಗುವ ಮಕ್ಕಳು ಅಲ್ಲೇ ಹುಟ್ಟಬೇಕೆಂಬ ಮತ್ತು ಹಾಗಾಗುವುದರಲ್ಲೇ ತನ್ನ ಸಾರ್ಥಕತೆ ಎಂಬ ಭಾವ ಬಂದುಬಿಟ್ಟಿರುತ್ತದೆ.

ಮೆಟ್ರಿಕ್‌ವರೆಗಿನ ಶಿಕ್ಷಣವನ್ನೂ ಪೂರ್ಣಗೊಳಿಸದ ಮಂಜುನಾಥ ನಾಲ್ವತ್ತು ಮುಟ್ಟುವುದರೊಳಗೇ ಲಕ್ಷಾಧೀಶನಾದರೂ, ತನ್ನ ಆಳದಲ್ಲಿ ಮಿಡಿಯುವ ಶೂನ್ಯಭಾವದಿಂದ ತಪ್ಪಿಸಿಕೊಳ್ಳಲು ಆಗುವುದೇ ಇಲ್ಲ. ತಾನೇ ತನ್ನ ದಾರಿಯನ್ನು ಹುಡುಕಿಕೊಳ್ಳುತ್ತಾ, ಕಂಡುಕೊಳ್ಳುತ್ತಾ ಹಣ ಮಾಡಿ ಶ್ರೀಮಂತನಾಗುವುದೇ ತನ್ನ ಸಾರ್ಥಕತೆ ಎಂದು ನಂಬಿದ್ದ ಮಂಜುನಾಥನಿಗೆ, ತಾನು ಹೀಗೆ ಹಣ ಮಾಡಿದ್ದೇ ಆ ಮನೆಯನ್ನು ಕೊಂಡುಕೊಳ್ಳಲಿಕ್ಕಾಗಿ ಎನಿಸಿಬಿಡುತ್ತದೆ. ತನಗಾಗುವ ಮಕ್ಕಳು ಅಲ್ಲೇ ಹುಟ್ಟಬೇಕು ಎನ್ನುವ ವಿವೇಕಶೂನ್ಯ ಆಸೆಯೊಂದು ಅವನನ್ನು ಆವರಿಸಿಕೊಂಡುಬಿಡುತ್ತದೆ. ಈ ಆಸೆ ಒಂದು ಹಠವಾಗಿ ಅವನನ್ನೂ ಅವನ ಸುತ್ತಲಿನವರನ್ನೂ ಘಾಸಿಗೊಳಿಸುವಷ್ಟು ತೀವ್ರವಾಗುವುದಕ್ಕೂ ಅವನೊಳಗಿನ ಶೂನ್ಯವೇ ಕಾರಣ.

ಹಿಂದೆ ತಾನು ಕೆಲಸ ಮಾಡುತ್ತಿದ್ದ ನಾಥಾನಿ ಆಂಡ್ ಕಂಪನಿಯ ನಾಥಾನಿಯವರೇ ತನ್ನ ಏಜೆಂಟರಾಗಿ, ಆ ಮನೆಯನ್ನು ತನಗೆ ಕೊಡಿಸಿಕೊಡಬೇಕು ಎಂಬ ಬೇಡಿಕೆಯನ್ನು ಹಿರಿಯ ನಾಥಾನಿಯವರಲ್ಲಿ ಮಂಜುನಾಥ ಇಟ್ಟಾಗ ಅದನ್ನವರು ಸಂತೋಷದಿಂದಲೇ ಒಪ್ಪಿಕೊಂಡಿರುತ್ತಾರೆ. ಆದರೆ ನಂತರ ಬೆಳೆಯುವ ನಾಥಾನಿ ಕಂಪನಿಯ ಶಾಪಿಂಗ್ ಕಾಂಪ್ಲೆಕ್ಸ್ ಯೋಜನೆಯಲ್ಲಿ, ಕಾಂಪ್ಲೆಕ್ಸ್‌ನ ಗಡಿಯಲ್ಲೇ ಇರುವ ಮನೆ ಅದಾದ್ದರಿಂದ ನಾಥಾನಿ ಮತ್ತು ಕಂಪನಿಯವರಿಗೇ ಆ ಮನೆ ಕೊಳ್ಳುವ ಹಕ್ಕು ಬರುತ್ತದೆ. ಈ

ಸಂಗತಿಯನ್ನು ವೆಂಕಟದಾಸುವಿನಿಂದ ತಿಳಿದ ವಡಾಳಾ ಮಠದ ಸ್ವಾಮಿಗಳು, ಮಠಕ್ಕೆ ನಡೆದುಕೊಳ್ಳುವ ಮಂಜುನಾಥನನ್ನು ಕರೆಸಿಕೊಂಡು, ತಮ್ಮ ಸಮಾಜಕ್ಕೆ ಸೇರಿದವರೊಬ್ಬರಿಗೆ ಸೇರಿದ, ಪಿತ್ರಾರ್ಜಿತವಾದ ಆ ಸುಂದರ ಮನೆ ಹಣದ ದೆಸೆಯಿಂದಾಗಿ ಸಿಂಧಿ ಕಂಟ್ರಾಕ್ಟರ್ ಒಬ್ಬನ ಪಾಲಾಗುವುದನ್ನು ತಡೆಯಬೇಕೆಂಬ ಜವಾಬ್ದಾರಿ ವಹಿಸುತ್ತಾರೆ. 'ಪ್ರಯತ್ನಿಸುತ್ತೇನೆ' ಎಂದು ತಿಳಿಸಿ, ಸ್ವಾಮಿಗಳ ಕಾವಿಯ ಬಗೆಗೆ ವಿಲಕ್ಷಣ ಆಕರ್ಷಣೆಯನ್ನನುಭವಿಸುತ್ತ, ಮಠದಿಂದ ಹೊರಬೀಳುವ ಮಂಜುನಾಥನಿಗೆ ನಂತರ, ವೆಂಕಟದಾಸುವಿನೊಂದಿಗೆ ಸ್ವಾಮಿಗಳು ಶಾಮೀಲಾಗಿದ್ದಾರೆ ಎಂದು ತಿಳಿದದ್ದೇ ಕಾವಿಯ ಕುರಿತ ಆಕರ್ಷಣೆ ಮಾಯವಾಗುತ್ತದೆ. ವೆಂಕಟದಾಸು ಈ ಜಾಗವನ್ನು ಕೊಳ್ಳುವ ಕೆಲಸಕ್ಕೆ ರಿಯಲ್ ಎಸ್ಟೇಟ್ ದಲ್ಲಾಳಿಗಳಾದ ಅಹೂಜಾರನ್ನು ನೇಮಿಸಿಕೊಂಡಿರುತ್ತಾನೆ. ಹೀಗೆ ಆ ಮನೆಯನ್ನು ಕೊಂಡುಕೊಳ್ಳಬೇಕೆಂಬ ಹಲವರ ಹಲವು ಬೇರೆ ಬೇರೆ ಆಕರ್ಷಣೆಗಳ ಮೊತ್ತವಾಗಿಬಿಡುವ ಆ ಮನೆಯ ಸುತ್ತ ಹಬ್ಬಿಕೊಳ್ಳುವ ಕಥೆಗಳು, ತೆರೆದುಕೊಳ್ಳುವ ಆಮಿಷಗಳು, ರೂಪುಗೊಳ್ಳುವ ಸಂಚುಗಳು, ಮನುಷ್ಯನ ವಿಕೃತಿಗಳನ್ನೆಲ್ಲ ಹತ್ತು ಹಲವು ರೂಪದಲ್ಲಿ ಕಾದಂಬರಿಯು ಪೂರಾ ಅನಾವರಣಗೊಳಿಸುತ್ತಾ ಸಾಗುತ್ತದೆ.

ತನ್ನ ಗಂಡನ ಬಗ್ಗೆ ಅವರಿವರಿಂದ ಕೇಳಿ ತಿಳಿದ ಅರ್ಧಂಬರ್ಧ ಕಥೆಗಳಿಂದ ಯಾವತ್ತೂ ತಲೆಕೆಡಿಸಿಕೊಳ್ಳದ ಮಂಜುನಾಥನ ಹೆಂಡತಿ ಕಮಲಾವತಿಗೆ ಗಂಡನ ಬಗ್ಗೆ ಮಮತೆಯಿದೆ. ಅವನ ಸಣ್ಣ ಪುಟ್ಟ ದೋಷಗಳನ್ನೂ ಕ್ಷಮಿಸಿಬಿಡುವ ಮೃದು ಭಾವನೆ ಇದೆ. ಆದರೆ ಮದುವೆಯಾಗಿ ಎರಡು ವರ್ಷಗಳಾದರೂ ಮಕ್ಕಳಾಗದ ಹಾಗೆ ನಿರೋಧ ಸಾಧನವನ್ನು ಉಪಯೋಗಿಸುವ ಗಂಡನ ಉದ್ದೇಶದ ಬಗ್ಗೆ ಸಹಮತವಿಲ್ಲ. ತನಗೆ ಮಗುವಾಗಬೇಕೆಂಬ ಆಸೆಯ ಜೊತೆಗೆ ಬರುವ ಮಗು ತಮಗೆಲ್ಲ ಶುಭ ತರುವುದೆಂಬ ವಿಶ್ವಾಸ ಅವಳಿಗಿದೆ. ತನ್ನ ಯೋಜನೆಗಳನ್ನು ಮೀರಿಯೂ ಹೆಂಡತಿ ಗರ್ಭಿಣಿಯಾಗಿದ್ದು ತಿಳಿದಾಗ ಮಂಜುನಾಥನಿಗೆ ಬಂದ ಕ್ರೋಧವನ್ನು ಕಮಲಾವತಿ ಪ್ರತಿಭಟಿಸಿದಾಗ, ಅವನಿಗೆ ಇದ್ದಕ್ಕಿದ್ದಂತೆ ತಾನು ಅಸಹಾಯನಾದೆ ಎನಿಸುತ್ತದೆ. ಆ ಗಳಿಗೆಯಲ್ಲೇ ತನ್ನ ಗಂಡನ ಮೇಲೆ ಕರುಣೆ ಉಕ್ಕಿದಂತಾದ ಕಮಲಾವತಿ, ಈ ಕ್ಲೇಶದ ಮೂಲವನ್ನು ತಿಳಿಯುವ ಇಚ್ಛೆ ವ್ಯಕ್ತಪಡಿಸಿದಾಗ ಮಂಜುನಾಥನಿಗೆ ಮೊದಲ ಬಾರಿಗೆ ತನ್ನ ಹೆಂಡತಿಗೆ ತನ್ನ ಕುರಿತು ಎಲ್ಲವನ್ನೂ ಹೇಳಿಬಿಡುವ ಮನಸ್ಸಾಗುತ್ತದೆ. ಬರಲಿರುವ ಜೀವ ತನ್ನ ಕಳವಳಕ್ಕೆ ಕಾರಣವಾದ ತನ್ನೊಳಗಿನ ಶೂನ್ಯವನ್ನು ತುಂಬಬಲ್ಲ ಸಾಧ್ಯತೆಯ ಅರಿವಿರುವುದರಿಂದಲೇ, ಮಂಜುನಾಥನಿಗೆ ಹಾಗೆ ತೆರೆದುಕೊಳ್ಳುವ ಅಪೇಕ್ಷೆ ಬರಲು ಕಾರಣವಿರಬಹುದು. ತನಗಾಗುವ ಮಗು ಪುರುಷೋತ್ತಮನಿರುವ, ತನ್ನನ್ನು ವಿಲಕ್ಷಣವಾಗಿ ಆಕರ್ಷಿಸಿರುವ ಆ ಮನೆಯಲ್ಲೇ ಆಗಬೇಕೆಂದು ಬಯಸಿದ ಮಂಜುನಾಥ ಆ ಮಗುವೇ ಕಾರಣವಾಗಿ, ಹೆಂಡತಿಗೆ ತೆರೆದುಕೊಳ್ಳುತ್ತಾ ಹೋದಂತೆಲ್ಲ ಮೃದುವಾಗುವುದು,

ಅವನೊಳಗಿನ ವಿರುದ್ಧ ಗುಣಧರ್ಮಗಳ ಪರಿಚಯವನ್ನು ಓದುಗರಿಗೆ ಮಾಡಿಸುತ್ತದೆ.

ಮನೆಯನ್ನು ಕೊಳ್ಳುವ ತನ್ನ ನಿರ್ಧಾರವನ್ನು ಬಿಟ್ಟುಕೊಟ್ಟಂದು ರಾತ್ರಿ ಎಂದಿನಂತಲ್ಲದೆ ಮಂಜುನಾಥನಿಗೆ ಬರುವ ಗಡದ್ದು ನಿದ್ದೆ, ನಂತರದ ಮುಂಜಾವಿನಲ್ಲಿ ಬಾಲ್ಕನಿಯಿಂದ ಕಾಣುವ ಬೆಳಕಿನಲ್ಲಿ ಹೊಳೆಯುತ್ತಿರುವ ಗುಡ್ಡ ಮತ್ತು ಅದರ ಬದಿಯ ಕಟ್ಟಡಗಳನ್ನೆಲ್ಲ ಪ್ರೀತಿಯಿಂದ ನೋಡುತ್ತಾ ನಿಲ್ಲುವ ಮುಂಜುನಾಥನ ಲಹರಿಯನ್ನು ನೋಡಿದಾಗ, ಅವನ ಪಾಲಿಗೆ ಅದುವರೆಗೂ ತನ್ನ ಹಕ್ಕಿನ, ತಾನು ದೊರಕಿಸಿಕೊಳ್ಳಲೇಬೇಕಾದ ಯಾವುದೋ ರಹಸ್ಯವೊಂದರ ಸಂಕೇತವಾಗಿ ಕಾಣುತ್ತಿದ್ದ ಆ ಮನೆಯ ಕುರಿತಾದ ಭಾವನೆಯಿಂದ ಬಿಡುಗಡೆ ಹೊಂದುತ್ತಿರುವ ಹಾಗೆ ಅನಿಸುತ್ತದೆ. ಅದೇ ಸಮಯದಲ್ಲಿ ತನಗೆ ಈ ಮೊದಲೂ ಅನ್ನಿಸಿದ ಪುರುಷೋತ್ತಮ ಮತ್ತು ಸಾವಿತ್ರಿಯ ಕುರಿತಾದ ಮೃದು ಧೋರಣೆ ಮತ್ತು ಉನ್ನತವೆನಿಸಿದ ಅವರ ವ್ಯಕ್ತಿತ್ವದ ಕುರಿತು ತನಗೆ ಇರುವ ಗೌರವ ಭಾವನೆಯನ್ನೂ ಮಂಜುನಾಥ ಹೆಂಡತಿಯೊಡನೆ ಮಾತಾಡುವಾಗ ಗುರುತಿಸಿಕೊಳ್ಳತೊಡಗುತ್ತಾನೆ.

ಮಂಜುನಾಥನಿಗೆ ತನ್ನ ಬಾಲ್ಕನಿಯಿಂದ ಕಾಣುವ ಕಣಿವೆ, ಅದರಾಚೆಯ ಗುಡ್ಡ, ಗುಡ್ಡದ ಒಂದು ಬದಿಯ ಇಳಿಜಾರಿನಲ್ಲಿ ಕಾಣುವ ಕಟ್ಟಡಗಳು, ಗುಡ್ಡದ ಬುಡದಲ್ಲಿ 'ತಾಡ್‌ದೇವ್ ರೋಡ್'ನಲ್ಲಿನ ಜನ ಮತ್ತು ವಾಹನಗಳ ಓಡಾಟ ಎಲ್ಲವನ್ನೂ ನೋಡುತ್ತಾ ನಿಲ್ಲುವುದು ಇಷ್ಟದ ಕೆಲಸ. ಬೇರೆ ಬೇರೆ ಸಂದರ್ಭಗಳಲ್ಲಿ, ಬೇರೆ ಬೇರೆ ಬೆಳಕಲ್ಲಿ ಬೆಳಗುವ, ಹೊಳೆಯುವ, ವಿಷಾದ ತುಂಬಿಸುವ, ಭಯ ಹುಟ್ಟಿಸುವ ಕಣಿವೆ ಮತ್ತು ಅದರಾಚೆ ದೂರದಲ್ಲಿ ಕಾಣುವ ಗುಡ್ಡದ ಬಗ್ಗೆ ಅವನಿಗಿರುವ ಆಕರ್ಷಣೆ, ಅವನ ಆಗಿನ ಮನೋಭಾವವನ್ನೂ ಸೂಚಿಸುತ್ತದೆ. ಹಾಗೆ ಮಂಜುನಾಥನಿಗೆ ಕಾಣಿಸುವ ಗುಡ್ಡ, ಕಣಿವೆಗಳು ಎದುರಲ್ಲಿ ಕಂಡರೂ ದೂರವೇ ಉಳಿದು ವಿಸ್ಮಯವಾಗಿ, ಏಕಕಾಲಕ್ಕೆ ಭಯ ಮತ್ತು ಆಕರ್ಷಣೆಗಳೆರಡರ ಸಂಗಮವೂ ಆಗಿ ತೋರುವ ಸತ್ಯದ ಪ್ರತಿಮೆಯಾಗಿ ಕಾದಂಬರಿಯಲ್ಲಿ ಬಂದಿರಬಹುದೆಂದು ನನ್ನ ಅನುಮಾನ.

ಮೂರ್ಖತನದೊಂದಿಗೇ ದುಷ್ಟತನವನ್ನೂ ಮೈಗೂಡಿಸಿಕೊಂಡ ವೆಂಕಟದಾಸು, ಮಂಜುನಾಥನ ತೇಜೋವಧೆ ಮಾಡಲೆಂದು ಆಯೋಜಿಸಿದ ಚಹದ ಪಾರ್ಟಿಯಲ್ಲಿ ಮಂಜುನಾಥ ಮತ್ತು ಪುರುಷೋತ್ತಮರು ಮತ್ತೆ ಸಂಧಿಸುತ್ತಾರೆ. ಒಂದೇ ಕುಟುಂಬಕ್ಕೆ ಸೇರಿದ್ದೂ ಪರಸ್ಪರ ದೂರವೇ ಉಳಿದಿದ್ದ ಇವರನ್ನೆಲ್ಲ ಒಂದೆಡೆ ಸೇರುವಂತೆ ಮಾಡುವುದೇ ಈ ಪಾರ್ಟಿಯ ಉದ್ದೇಶವೆಂದು ವೆಂಕಟದಾಸು ಬಾಯಲ್ಲಿ ಹೇಳಿದರೂ ಅವನ ಉದ್ದೇಶವೇನೆಂದು ಅಲ್ಲಿದ್ದವರೆಲ್ಲರಿಗಿಂತ ಮಂಜುನಾಥನಿಗೇ ಚೆನ್ನಾಗಿ ತಿಳಿದಿರುತ್ತದೆ. ಪುರುಷೋತ್ತಮನಿಗೆ ಮಂಜುನಾಥ ತನ್ನ ಮನೆಯಲ್ಲಿ ಈ ಹಿಂದೆ ಕಂಡದ್ದಕ್ಕಿಂತ

ಸಂಪೂರ್ಣ ಬೇರೆಯೇ ಆಗಿ ಕಾಣಿಸುತ್ತ ಅಚ್ಚರಿ ಹುಟ್ಟಿಸಿದ ಹಾಗೇ, ಈ ಚಹಾ ಕೂಟದ ತುಂಬೆಲ್ಲ ಸಂಭವಿಸುವ ಅನಿರೀಕ್ಷಿತ ಅಚ್ಚರಿಗಳು ಕಥೆಯಲ್ಲಿ ಮುಂದೆ ಬರುವ ಹಲವು ಘಟನೆಗಳಿಗೆ ನಾಂದಿ ಹಾಡುತ್ತವೆ. ನೆರೆದವರ ಮುಂದೆ ತನ್ನ ಶ್ರೀಮಂತಿಕೆಯ ಡೌಲನ್ನು ಪ್ರದರ್ಶಿಸುವುದರ ಜೊತೆಗೆ ಮಂಜುನಾಥನ ಚಾರಿತ್ರ್ಯಹರಣ ಮಾಡಬೇಕೆಂದು ಯೋಜಿಸಿದ ವೆಂಕಟದಾಸುವಿನ ಎಲ್ಲ ಹವಣಿಕೆಗಳನ್ನೂ ಮೀರಿ, ಈ ಚಹಾ ಕೂಟವು ಒಂದರ್ಥದಲ್ಲಿ ಈ ಕುಟುಂಬವನ್ನು ಹತ್ತಿರವಾಗಿಸುವ ಚೋದ್ಯ, ಕಾದಂಬರಿಕಾರರ ಜಾಣ್ಮೆಗೂ ನಿದರ್ಶನವಾಗಿದೆ. ಹೊರಗೆ ಪ್ರಖರವಾದ ಬೆಳಕಿರುವಾಗಲೂ ಪರದೆ ಹಾಕಿ ಮನೆಯ ಒಳಗನ್ನು ಮಬ್ಬುಗತ್ತಲಾಗಿಸಿ, ಝುಗಮಗಿಸುವ ಷ್ಯಾಂಡೆಲಿಯರ್ ಹಾಕಿ ಬೆಳಕು ಮಾಡುವ ವೆಂಕಟದಾಸುವಿನ ಚಿತ್ರ ಅವನ ವ್ಯಕ್ತಿತ್ವವನ್ನು ಕಟ್ಟಿಕೊಡುವ ಬಗೆ ನನಗೆ ಅದ್ಭುತವೆನಿಸಿತು. 'ಈ ಹಾಲೇ ಹಾಗೆ. ಪರದೆ ತೆಗೆದರೆ ಬಿಸಿಲು, ಹಾಕಿದರೆ ಕತ್ತಲೆ' ಎನ್ನುವ ವೆಂಕಟದಾಸುವಿನ ಸುತ್ತ ಅವನೇ ಚೆಲ್ಲಿಕೊಂಡ ಕತ್ತಲು ಅವನ ಸುಳ್ಳುತನದ ಹಾಗೇ ಅಂಜುಬುರುಕುತನವನ್ನೂ ಸೂಚಿಸುತ್ತದೆ.

ಇಪ್ಪತ್ತು ವರ್ಷಗಳ ಹಿಂದೆ ಪುರುಷೋತ್ತಮ ಮೊದಲಬಾರಿಗೆ, ಮಂಜುನಾಥ ಕಡೆಯ ಬಾರಿಗೆ ನೋಡಿದ್ದ ಸೀತೆಯ ಮರುಪ್ರವೇಶ ಕಥೆಯಲ್ಲಿ ಆಗುತ್ತಿದ್ದಂತೆ, ಅದು ಪರಸ್ಪರ ವಿರುದ್ಧ ಧ್ರುವಗಳ ಹಾಗೆ ಕಾಣಿಸುವ ಈ ಇಬ್ಬರನ್ನೂ ಒಟ್ಟಾಗಿಸಿದ ಹಾಗೆ ಕಾಣುತ್ತದೆ. ಅಣ್ಣ ತಮ್ಮಂದಿರೋ, ದಾಯಾದಿಗಳೋ ಇರಬೇಕೆಂದು ಬಗೆದ ಈ ಇಬ್ಬರಿಗೂ ಅಂತಹುದೊಂದು ಸಂಬಂಧವೇನೂ ಇರಲಾರದೇನೋ ಎನ್ನುವ ವಿಷಯದ ಸುಳಿವೂ ಹತ್ತತೊಡಗುತ್ತದೆ. ಸೀತೆಯ ಪ್ರವೇಶದ ನಂತರ ಅದುವರೆಗೂ ಬಿಸಿಯಾಗಲಿಕ್ಕೆ ಒಲೆಯ ಮೇಲಿಟ್ಟ ನೀರು ಒಮ್ಮೆಗೇ ಕುದಿಯುವ ಬಿಂದುವಿಗೆ ಮುಟ್ಟಿ ಕುದಿಯತೊಡಗಿದ ಹಾಗೆ, ಆ ಮನೆಯ ಮತ್ತು ಮನೆಗೆ ಸಂಬಂಧಿಸಿದವರ ಬದುಕು ಅತ್ಯಂತ ನಾಟಕೀಯವಾಗಿ ಬದಲಾಗತೊಡಗುತ್ತದೆ. ಸೀತೆಯ ಹೆಸರಿಗೆ ಅಂಟಿದ್ದ ಕಳಂಕಗಳ ಸುದ್ದಿ ಏನೇ ಇದ್ದರೂ ಆಕೆ ಮಂಜುನಾಥನ ಸ್ವಂತ ತಂಗಿ ಎಂದೇ ನಂಬಿರುವ ತುಮ್ಮದ್ರಕ್ಕ ಮತ್ತು ಕಮಲಾವತಿಯರು ಸೀತೆ ತಮ್ಮ ಮನೆಯಲ್ಲಿ ಉಳಿಯಬಾರೆಂಬ ವಿಷಯದಲ್ಲಿ ತಾಳುವ ಕಠಿಣ ನಿಲುವು ಮಾತ್ರ ಈ ಪಾತ್ರಗಳ ಸಹಜ ಸ್ವಭಾವಕ್ಕೆ ಮೀರಿದ್ದಾಗಿ ಕಾಣುತ್ತದೆ. ಈ ನಿಲುವೇ ಮೂಲವಾಗಿ ಸೀತೆ ಮುಂದೆ ಮಾಡಿಕೊಳ್ಳುವ ಆತ್ಮಹತ್ಯೆಗೂ ಮತ್ತೆ ಸೀತೆಯ ಬಾಲ್ಯದಲ್ಲಿ ಅವಳು ಬೆಳೆದಿರಬಹುದಾದ ಪರಿಸರ, ಪರಿಸ್ಥಿತಿಗಳು ಅವಳ ಜೊತೆಗೇ ಉಳಿದು ಕಾಡಿಸಿರಬಹುದಾದದ್ದೇ ಕಾರಣವೂ ಇರಬಹುದು.

ಸೀತೆಯ ದುರ್ಮರಣ, ಹುಟ್ಟುವಾಗಲೇ ಸತ್ತ ಮಂಜುನಾಥನ ಮಗು, ರಾಮ ನಾಥಾನಿ ಮತ್ತು ಮಂಜುನಾಥರ ಭೀಕರ ಕೊಲೆ ಎಲ್ಲವನ್ನೂ ಓದುತ್ತಾ ಓದುತ್ತಾ ಸ್ವತಃ ಪುರುಷೋತ್ತಮನಿಗೆ ಅನ್ನಿಸಿದಂತೆ, ಮನೆಯನ್ನು ಮಾರಲಾರೆ ಎಂಬ ಹಠದಿಂದ

ಪುರುಷೋತ್ತಮ ಸಾಧಿಸಿದ್ದಾದರೂ ಏನು ಎಂಬ ಪ್ರಶ್ನೆ ಓದುಗರನ್ನೂ ಕಾಡಿಸುತ್ತದೆ. ಈ ತನಕ ಕಥೆಯಲ್ಲಿ ಆಗೀಗ ಅವರಿವರ ಮಾತುಗಳಲ್ಲಿ, ಸಂದರ್ಭಗಳಲ್ಲಿ ಸುಳಿಯುತ್ತಲೇ ಉಳಿದ ಸದೂ ಮಾವ (ಆಗೀಗ ಕಥೆಯಲ್ಲಿ ಉಲ್ಲೇಖಗೊಳ್ಳುವ ಜೋಪಡಿಬಾಬಾ ಸದೂ ಮಾವನೇ ಆಗಿರಬೇಕೆಂಬ ಅನುಮಾನ ಅಷ್ಟರಲ್ಲಿ ಓದುಗರದಾಗಿರುತ್ತದೆ) ಮತ್ತೆ ಕಾದಂಬರಿಯ ಕೊನೆಯಲ್ಲಿ ಈ ಪ್ರಶ್ನೆಗೆ ಉತ್ತರಿಸಲೆಂದೇ ಅಥವಾ ಎಲ್ಲ ಮನುಷ್ಯರ ಜೀವನದಲ್ಲೂ ತರ್ಕ ಮೀರಿ ಸಂಭವಿಸುವ ಇಂಥಾ ಹಿಂಸೆಗಳಿಗೂ, ತೆಗೆದುಕೊಳ್ಳಲೇ ಬೇಕಾದ ನಿಷ್ಠುರ ನಿಲುವುಗಳಿಗೂ ಹಾಗೆ ಸಂಬಂಧ ಕಲ್ಪಿಸುವುದು ಕೂಡ ಕೇವಲ ಅಹಂಕಾರದ ನೆಲೆಯದ್ದು ಎಂಬುದನ್ನು ಪುರುಷೋತ್ತಮನಿಗೆ ತಿಳಿಸಲೆಂದೇ ಬಂದ ಹಾಗನ್ನಿಸುತ್ತದೆ. ಇಡೀ ಕಥೆಯ ಉದ್ದಕ್ಕೂ ತಂಗಾಳಿಯ ಹಾಗೆ, ಮುದ್ದು ಕಿರುತೊರೆಯ ಹಾಗೆ ಸುಳಿಯುವ ಸರಸ್ವತಿ ತನ್ನ ಮುಗ್ಧತೆಯ ಜೊತೆಗೇ ವಯಸ್ಸಿಗೆ ಮೀರಿದ ತಿಳುವಳಿಕೆ ತನ್ನದೆಂಬುದನ್ನು ತನ್ನ ನಡವಳಿಕೆಯಲ್ಲಿ ತೋರುವ ಬಗೆ ಅಪೂರ್ವವಾದುದು. ಸದೂ ಮಾವನ ಜಾಣ್ಮೆ, ಪ್ರಬುದ್ಧತೆ, ಹೃದಯವೈಶಾಲ್ಯಕ್ಕೂ, ಸರಸ್ವತಿಯ ಮುಗ್ಧ ನಡವಳಿಕೆಯಲ್ಲಿ ಕಾಣುವ ಅವಳ ಸಹಜ ಜಾಣ್ಮೆಗೂ ಸತ್ತ ಬದುಕಿಗೆ ಮತ್ತೆ ಚೈತನ್ಯ ಊಡುವ ಸಾಮರ್ಥ್ಯವಿದೆ. ಬಾಲ್ಯದಲ್ಲಿ ಎಲ್ಲರ ಹೃದಯದಲ್ಲೂ ಇದ್ದು ಬೆಳೆದಂತೆಲ್ಲ ಕಳೆದುಹೋಗುವ ಈ ಮನುಷ್ಯ ಸಹಜ ಪ್ರೇಮ, ಇಂಥ ಪ್ರೇಮದ ಒಡನಾಟದಿಂದ ಮುರುಟಿದ ಬದುಕುಗಳೂ ಮತ್ತೆ ಅರಳಿಕೊಳ್ಳುವ ಪರಿ ಕಾದಂಬರಿಕಾರರಿಗೆ ಮಾನವೀಯ ಮೌಲ್ಯಗಳಲ್ಲಿ ಇರುವ ವಿಶ್ವಾಸದ ಕುರುಹಾಗಿದೆ. ಚಿತ್ತಾಲರ ಬರಹಗಳನ್ನು ಓದುವಾಗ ಮತ್ತು ಓದಿದ ನಂತರ ನನ್ನನ್ನು ತಟ್ಟುವುದು ಅವರ ಈ ವಿಶ್ವಾಸವೇ.

ಇನ್ನು ಚಿತ್ತಾಲರ ಬರಹಗಳಲ್ಲಿ ಅವರು ಬಳಸುವ ಉತ್ತರ ಕರ್ನಾಟಕದ ಹನೇಹಳ್ಳಿಯ, ನಿರ್ದಿಷ್ಟ ಸಾಮಾಜಿಕ ಪರಿಸರದ ಭಾಷೆ, ಆ ಪರಿಸರದ್ದೇ ಆದ ವಿಶಿಷ್ಟವೆನ್ನಿಸುವ ಪದಗಳ ಬಳಕೆ ಮತ್ತು ಸರಳ ಸುಂದರ ಶೈಲಿ ಆಪ್ತವೆನಿಸುತ್ತವೆ. ಕಥೆ ನಡೆಯುವ ಪರಿಸರ ಮತ್ತು ಕಥೆಯ ಪಾತ್ರಗಳ ಮೂಲ ಪ್ರಾಂತ್ಯದ ಭಾಷೆಯ ಬಳಕೆ, ಆ ಪಾತ್ರಗಳನ್ನು ಹೆಚ್ಚು ಜೀವಂತವಾಗಿ ಸಹಜವಾಗಿ ಓದುಗರು ಒಪ್ಪಿಕೊಳ್ಳುತ್ತಾ ತಮ್ಮನ್ನು ತಾವು ಕಥೆಗೆ ತೆರೆದುಕೊಳ್ಳುವಂತೆ ಮಾಡುತ್ತದೆ.

ಈ ಕಾದಂಬರಿಯ ಕೆಲವು ಅಧ್ಯಾಯಗಳ ಕೊನೆಯಲ್ಲಿ, ಮುಂದೆ ಕಥೆಯಲ್ಲಿ ಬರಬಹುದಾದ ತಿರುವುಗಳನ್ನು ಕಾದಂಬರಿಕಾರರು ಸೂಚ್ಯವಾಗಿಯೋ, ಉದ್ಗಾರದ ರೂಪದಲ್ಲಿಯೋ ಸೂಚಿಸಿರುವುದಕ್ಕೆ ಮಾತ್ರ ನನ್ನ ಆಕ್ಷೇಪಣೆಯಿದೆ. ಈ ತರಹದ ಸೂಚನೆಗಳಿಲ್ಲದೆ ಕಥೆ ಮುಂದುವರಿದಂತೆಲ್ಲ, ಸಂಭವಿಸುವ ಎಲ್ಲ ಆಕಸ್ಮಿಕಗಳೂ, ಮುಖ್ಯ ತಿರುವುಗಳೂ ಓದುಗನ ಮುಂದೆ ಧುತ್ತೆಂದು ಪ್ರಕಟವಾದಾಗ ಕಥೆಯ ಓಟ

ಮತ್ತು ಅದಕ್ಕೆ ಓದುಗ ತೆರೆದುಕೊಳ್ಳುವ ಬಗೆ ಎರಡೂ ಹೆಚ್ಚು ಸಹಜವಾಗಿರಬಲ್ಲದು ಎನ್ನುವುದು ನನ್ನ ನಮ್ರ ಅನಿಸಿಕೆಯಾದರೂ, ಕಾದಂಬರಿ ಮುಂದುವರಿದ ಹಾಗೆ ಅಪ್ರಯತ್ನವಾಗಿ ಓದುಗರು ಮತ್ತೆ ಅದರೊಳಗೆ ಒಂದಾಗಿಬಿಡುವಂತೆ ಬರೆಯುವ ನೈಪುಣ್ಯ ಚಿತ್ತಾಲರದು ಎನ್ನುವುದು ಕೂಡ ಸತ್ಯ.

೫೭೭ ಪುಟಗಳಷ್ಟು ವಿಸ್ತಾರವಾದ ಈ ಕಾದಂಬರಿಯೊಳಗಿನ ಎಲ್ಲ ಪಾತ್ರಗಳನ್ನೂ ಪ್ರಸಂಗಗಳನ್ನೂ, ಕಾದಂಬರಿಯ ನಿರೂಪಣಾ ತಂತ್ರ ಅಥವಾ ಬಂಧವನ್ನೂ ನನ್ನ ಈ ಪುಟ್ಟ ಬರಹದಲ್ಲಿ ನಾನು ವಿವರಿಸುವ, ವಿಮರ್ಶಿಸುವ ಕೆಲಸಕ್ಕೆ ಕೈಹಾಕಿಲ್ಲ. ಇಡೀ ಕಾದಂಬರಿಯ ಆಶಯ ಮತ್ತು ಓದುಗರಿಗೆ ಅದು ನೀಡಬಹುದಾದ ಅನುಭವದ ಕುರಿತು ನನಗನ್ನಿಸಿದ್ದನ್ನಷ್ಟೇ ನಾನಿಲ್ಲಿ ಹೇಳುವ ಪ್ರಯತ್ನ ಮಾಡಿದ್ದೇನೆ.

*

**ಕಾದಂಬರಿಕಾರರ ಕುರಿತು:**

೧೯೨೮ ಆಗಸ್ಟ್ ೩ರಂದು ಉತ್ತರ ಕರ್ನಾಟಕ ಜಿಲ್ಲೆಯ ಹನೇಹಳ್ಳಿಯಲ್ಲಿ ಜನಿಸಿದ ಯಶವಂತ ಚಿತ್ತಾಲರು, ಕನ್ನಡದ ಅನನ್ಯ ಕಥೆಗಾರರಾಗಿ, ಕಾದಂಬರಿಕಾರರಾಗಿ ಪ್ರಸಿದ್ಧರಾದರೂ ಹಲವಾರು ಪ್ರಬಂಧಗಳನ್ನೂ ವಿಮರ್ಶೆಗಳನ್ನೂ ಬರೆದಿದ್ದಾರೆ. ಅವರ ಅನೇಕ ಕಥೆಗಳಲ್ಲಿ, ಕಾದಂಬರಿಗಳಲ್ಲಿ ತಮ್ಮ ಹುಟ್ಟೂರಾದ ಹನೇಹಳ್ಳಿಯ ಭೌತಿಕ ವಿವರಗಳೂ ಹನೇಹಳ್ಳಿಯವೇ ಆದ ಪಾತ್ರಗಳೂ ದಟ್ಟವಾಗಿ ಬರುವ ಹಾಗೇ ಮಹಾನಗರವೊಂದರ ಸಂಕೀರ್ಣತೆಯಲ್ಲಿ, ಅನಿಶ್ಚಿತತೆ, ಸಂದಿಗ್ಧತೆಯಲ್ಲಿ ಸಿಕ್ಕಿಹಾಕಿಕೊಂಡು ನರಳುವ ಮನುಷ್ಯ ಚೇತನವೊಂದರ ನಿರಂತರ ಅನ್ವೇಷಣೆಯೂ ಮತ್ತೆ ಮತ್ತೆ ಬಂದಿದೆ. ತಮ್ಮ ಬರಹಗಳಲ್ಲಿ ಮನುಷ್ಯನ ವರ್ತನೆಯ ಬಗ್ಗೆ, ಆ ವರ್ತನೆಯ ಮೂಲದ ಬಗ್ಗೆ ಮತ್ತು ಎಂಥ ದುರ್ಭರ ಸನ್ನಿವೇಶಗಳಲ್ಲೂ ಭರವಸೆ ತುಂಬಿಸಿಕೊಡು ಹಾಯುವ ಅಥವಾ ಹಾಯಬೇಕಾದ ಮನುಷ್ಯನ ಅನಿವಾರ್ಯತೆಯ ಬಗ್ಗೆ ಬರೆಯುವ ಚಿತ್ತಾಲರ ಮುಖ್ಯ ಕಾಳಜಿ ಮಾನವೀಯ ಮೌಲ್ಯಗಳ ಕುರಿತಾಗಿದೆ. ವ್ಯಕ್ತಿಯೊಬ್ಬನ ವೈಯಕ್ತಿಕ ಒಳತೋಟಗಳ ಹಾಗೇ ಅವನ ಸಾಮಾಜಿಕ, ರಾಜಕೀಯ ಸಂಘರ್ಷಗಳ ಬಗ್ಗೆಯೂ ಚಿತ್ತಾಲರು ಹರಿಸುವ ಒಳನೋಟ ಮತ್ತು ಅದನ್ನು ಅವರು ಭಾಷೆಯಲ್ಲಿ ರೂಪಿಸುವ ಬಗೆ ಅನನ್ಯವಾದುದು. ಮುಂಬಯಿಯಲ್ಲಿದ್ದು ನಿರಂತರವಾಗಿ ಕನ್ನಡದಲ್ಲಿ ಬರೆಯುತ್ತಲೇ ಉಳಿದ ಚಿತ್ತಾಲರು ತಮ್ಮ ಓದುಗರಿಗೂ, ಕನ್ನಡ ಭಾಷೆಗೂ ಕೊಟ್ಟ ಕೊಡುಗೆಗಳು, ಕಲ್ಪಿಸಿದ ಹೊಸ ಆಯಾಮಗಳೂ ಎಣೆ ಇಲ್ಲದ್ದು.

ಇಂಗ್ಲಿಷ್ ಸೇರಿದಂತೆ ಹಲವಾರು ಭಾರತೀಯ ಭಾಷೆಗಳಿಗೆ ಚಿತ್ತಾಲರ ಹಲವು ಕೃತಿಗಳು ಅನುವಾದಗೊಂಡಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯಿಂದ ಹಿಡಿದು ಕಳೆದ ವರ್ಷದ ಪಂಪ ಪ್ರಶಸ್ತಿಯವರೆಗೆ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಶೇಷ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ನಿರಂಜನ ಪ್ರಶಸ್ತಿ ಸೇರಿದಂತೆ ಹಲವಾರು ಪ್ರಶಸ್ತಿಗಳು ಚಿತ್ತಾಲರ ಸಾಹಿತ್ಯ ಕೃಷಿಗೆ ಲಭಿಸಿವೆ.

**ಕೃತಿ ವಿವರ :** ಪುರುಷೋತ್ತಮ, ಯಶವಂತ ಚಿತ್ತಾಲ, ಗೀತಾ ಬುಕ್ ಹೌಸ್, ಮೈಸೂರು ೧೯೯೦ (೨ನೇ ಮುದ್ರಣ ೧೯೯೫), ಪು. ೫೭೨

# ‘ಬಯಲು-ಬಸಿರು’ವಿನ ನಡುವೆ ಮುಗಿಯದ ‘ಕನಸುಮೇಲೋಗರ’

–ಮೈ. ಶ್ರೀ. ನಟರಾಜ, ಪೊಟೋಮೆಕ್, ಮೇರಿಲ್ಯಾಂಡ್

**ಪೀಠಿಕೆ**

ಸಾಹಿತ್ಯ ಭಂಡಾರ ೨೦೦೫ರಲ್ಲಿ ಪ್ರಕಟಿಸಿದ ಕಾದಂಬರಿ ‘ಬಯಲು-ಬಸಿರು’ ಕೃತಿಯನ್ನು ಕೈಗೆತ್ತಿಕೊಂಡಾಗ ಹೂವಿನಷ್ಟು ಹಗುರವಾದ ಈ ಪುಸ್ತಕ ಹೊರನೋಟಕ್ಕೆ ಅತಿ ಸಾಧಾರಣವೆನ್ನಿಸಿತು. ಹಾಳೆಗಳ ಉದ್ದಗಲವೂ ಸರಾಸರಿಗಿಂತ ಚಿಕ್ಕವು. ಕಥಾಭಾಗವಿರುವ ಒಟ್ಟು ಪುಟಗಳ ಸಂಖ್ಯೆ ನೂರು. ಮುನ್ನುಡಿಯಿಲ್ಲ, ಲೇಖಕರ ಪರಿಚಯವಿಲ್ಲ. ಬೆನ್ನಿನ ಮೇಲೆ ಬರೆದ ಒಂದು ಸಣ್ಣ ಸಾರಾಂಶವನ್ನು ಬಿಟ್ಟರೆ ಮತ್ತ್ಯಾವ ಹಿನ್ನೆಲೆಯೂ ಇಲ್ಲ. ಲೇಖಕರ ಬಗ್ಗೆ ಗೊತ್ತಿಲ್ಲದವರಿಗೆ ತಲೆ-ಬುಡ ಗೊತ್ತಾಗುವಂತಿಲ್ಲ. ಇಲ್ಲಿ ಅಧ್ಯಾಯಗಳ ವಿಂಗಡನೆಯಿಲ್ಲ. ಇಡೀ ಕಾದಂಬರಿ (ಇದು ಕಾದಂಬರಿಯೇ ಅಲ್ಲವೇ ಎಂಬ ಪ್ರಶ್ನೆಯೂ ತಲೆ ಎತ್ತುತ್ತದೆ) ಒಂದು ‘ಕನಸುಮೇಲೋಗರ’. ಅಂದರೆ, ಹಲವು ಕನಸುಗಳ, ಹಲವು ನಿಶ್ಶಬ್ದ ಸಂವಾದಗಳ ಸಹಾಯದಿಂದ ಬೆಸೆದುಕೊಳ್ಳುವ ಘಟನೆಗಳ ಹಂದರ. ‘ನವ್ಯ’ದ ಶೈಲಿ ಎಂದು ಕೆಲವರು ಹೇಳುತ್ತಾರೆ, ‘ಅಸಂಗತ’ ಜಾತಿಯದೆಂದೂ ಕೆಲವರು ಹೇಳುತ್ತಾರೆ. ಆದರೆ ಅಷ್ಟು ಸುಲಭವಾಗಿ ‘ಇದು ಇಂಥದ್ದು’ ಎಂಬ ವರ್ಗೀಕರಣಕ್ಕೆ ಸಲ್ಲುವುದಿಲ್ಲ. ಸರಳವಾಗಿ ವಿಂಗಡಿಸಲ್ಪಡುವ ಜಾತಿಗೆ ಸೇರಿದ್ದಲ್ಲ ಈ ಕೃತಿ. ಆದರೆ ಇದರದ್ದೇ ಒಂದು ವಿಶಿಷ್ಟ ವರ್ಗ ಎಂದು ತಿಳಿಯಲು ಹೆಚ್ಚು ಸಮಯ ಹಿಡಿಯುವುದಿಲ್ಲ. ಗಂಭೀರವಾಗಿ ಓದಿ ಜೀರ್ಣಿಸಿಕೊಳ್ಳಬೇಕಾದ ಪುಸ್ತಕಗಳಲ್ಲಿ ಇದೂ ಒಂದು.

ನನ್ನ ಬರಹಕ್ಕೆ ಬೇಕೆಂತಲೇ ಸಣ್ಣ (ತೆಳುವಾದ) ಕಾದಂಬರಿಯನ್ನೇ ಆಯ್ದುಕೊಳ್ಳಬೇಕೆಂದು ಹೊರಟ ನನಗೆ ಅಚ್ಚರಿಯೇ ಕಾದಿತ್ತು! ಈ ಕಾದಂಬರಿಯನ್ನು ಬರೆದವರ ಹೆಸರು ‘ಕುಸುಮಾಕರ ದೇವರಗೆಣ್ಣೂರು’ ಎಂದು ಪುಸ್ತಕದ ಮೇಲೆ

ಅಚ್ಚಾಗಿದೆ. ಕನ್ನಡ ಭಾಷೆಯಲ್ಲಿ ಅಚ್ಚಾಗುತ್ತಿರುವ ಎಲ್ಲಾ ಪುಸ್ತಕಗಳ ಮತ್ತು ಅವುಗಳನ್ನು ಬರೆದವರ ಪರಿಚಯ ಕನ್ನಡನಾಡಿನಲ್ಲಿರುವ ಸಾಹಿತ್ಯೋತ್ಸಾಹಿಗಳಿಗೇ ಇಲ್ಲದಿರುವಾಗ, ಅಮೆರಿಕದಲ್ಲಿ ದಶಕಗಳನ್ನು ಕಳೆದಿರುವ ನಮ್ಮಂಥವರ ಪಾಡೇನು? ಸಾಹಿತ್ಯದ ಬಗ್ಗೆ ನಾವು ಎಷ್ಟೇ ಉತ್ಸಾಹವುಳ್ಳವರಾಗಿದ್ದಾಗ್ಯೂ, ಇತ್ತೀಚಿನ ಬೆಳವಣಿಗೆಯ ಸಂಪೂರ್ಣ ಪರಿಚಯ ನಮಗಿರುವುದು ಸಾಧ್ಯವಿಲ್ಲ. ಇದನ್ನು ಒಂದು ಮಿತಿ ಎಂದು ಹೇಳುತ್ತಿದ್ದೇನೆಯೇ ಹೊರತು ಅದನ್ನು ನೆಪವಾಗಿ ಒಡ್ಡುತ್ತಿಲ್ಲ. ಸತ್ಯಾಂಶವೇನೆಂದರೆ, 'ಕುಸುಮಾಕರ ದೇವರಗೆಣ್ಣೂರು' ಎಂಬುದು ಇವರ ಕಾವ್ಯನಾಮ, ಇವರ ನಿಜನಾಮ 'ವಸಂತ ಅನಂತ ದಿವಾಣಜಿ' ಎಂಬ ವಿಷಯ ಕೂಡ ನನಗೆ ತಿಳಿದಿರಲಿಲ್ಲ! ಯಾರಿವರು? ಎಲ್ಲಿಯವರು? ಇವರ ಕೊಡುಗೆ ಏನು?– ಮುಂತಾದ ಪ್ರಶ್ನೆಗಳು ತಕ್ಷಣ ನನ್ನನ್ನು ಕಾಡಲಾರಂಭಿಸಿದವು. 'ಇದ್ದಕ್ಕಿದ್ದಂತೆ ಇಂಥಾ ಒಂದು ಕಥೆಗಾರಿಕೆಯನ್ನು ಒಬ್ಬ ಲೇಖಕ ಪ್ರದರ್ಶಿಸುವುದು ದುಸ್ಸಾಧ್ಯ' ಎಂಬುದು ಪುಸ್ತಕವನ್ನೋದಿದ ಕೂಡಲೆ ನನ್ನ ಮನಸ್ಸಿನಲ್ಲಿ ಬಂದ ಪ್ರತಿಕ್ರಿಯೆ. ಇವರು ಇನ್ನೂ ಬರೆದಿರಬೇಕು, ಇವರು ಜಗತ್ತಿನ ಸಾಹಿತ್ಯವನ್ನು ಓದಿಕೊಂಡವರೇ ಇರಬೇಕು ಎಂದು ನನಗೆ ಅನ್ನಿಸುವುದಕ್ಕೆ 'ಬಯಲು–ಬಸಿರು' ಕಾದಂಬರಿಯ ಒಂದೇ ಒಂದು ಓದು ಸಾಕಾಗಿತ್ತು.

ಅಷ್ಟರಲ್ಲಿ, ಬೆಂಗಳೂರಿನ ಅಭಿನವದ ರವಿಕುಮಾರರೊಂದಿಗೆ ನಡೆಸಿದ 'ಇ-ಸಂವಹನ'ದಲ್ಲಿ ನನಗೆ ಮತ್ತೊಂದು ಮುಖ್ಯವಾದ ವಿಷಯ ತಿಳಿಯಿತು. ಅದೇನೆಂದರೆ, 'ಶ್ರೀ ಎಚ್. ಎಸ್. ರಾಘವೇಂದ್ರರಾಯರ ಸಂಪಾದಕತ್ವದಲ್ಲಿ ಕುಸುಮಾಕರರ ಜೀವನ ಮತ್ತು ಸಾಹಿತ್ಯವನ್ನು ಕುರಿತ 'ಅವಗಾಹ' ಎಂಬ ಪುಸ್ತಕ ಇತ್ತೀಚೆಗೆ (ಸಾಹಿತ್ಯ ಭಂಡಾರ, ೨೦೦೮) ಪ್ರಕಟವಾಗಿದೆ' ಎಂಬುದೇ ಆಗಿತ್ತು. 'ಅವಗಾಹ'ದ ವಿಷಯವನ್ನು ನನ್ನ 'ಅವಗಾಹನೆ'ಗೆ ತಂದಿದ್ದೇ ಅಲ್ಲದೆ, ರವಿಕುಮಾರ್ ಆ ಪುಸ್ತಕವನ್ನೂ ಕೂಡಲೇ ನನಗೆ ತಲುಪಿಸಿ ಉಪಕರಿಸಿದರು. ಈ ಪುಸ್ತಕ, 'ಬಯಲು–ಬಸಿರು'ಗಿಂತ ಕನಿಷ್ಠಪಕ್ಷ ಐದಾರು ಪಟ್ಟು ದೊಡ್ಡದು! ಪುಟ್ಟದೊಂದು ಪುಸ್ತಕವನ್ನೋದಿ ಪುಟ್ಟದೊಂದು ಲೇಖನವನ್ನು ಬರೆದು 'ಕೈತೊಳೆದುಕೊಳ್ಳಲು' ಹೊರಟ ನನಗೆ ತಕ್ಕ ಶಾಸ್ತಿಯಾಯಿತು! ಅವಗಾಹವನ್ನು ಕೂಲಂಕಷವಾಗಿ ಓದಿ ಮತ್ತೊಮ್ಮೆ 'ಬಯಲು–ಬಸಿರ'ನ್ನೂ ಓದಿದ ಮೇಲೆ ಈ ಲೇಖನ ಬರೆಯುವ ದುಸ್ಸಾಹಸಕ್ಕೆ ಕೈಹಾಕಿದ್ದೇನೆ. ಇದೊಂದು ರೀತಿಯಲ್ಲಿ ಅನುಕೂಲವೇ ಆಯಿತು, ನಾನು ಚಕ್ರವನ್ನು ಮತ್ತೆ ಕಂಡುಹಿಡಿಯುವ ಅಗತ್ಯವಿಲ್ಲವಾಯಿತು. ಆದ್ದರಿಂದ, ಈಗಾಗಲೇ ಪ್ರಕಟವಾಗಿರುವ ಅಭಿಪ್ರಾಯಗಳನ್ನು ಧಾರಾಳವಾಗಿ ಉಪಯೋಗಿಸಿಕೊಳ್ಳುವುದರ ಜೊತೆಗೆ ಒಂದಿಷ್ಟನ್ನು ಇಲ್ಲಿ ನಮೂದಿಸುವುದು ಉಪಯುಕ್ತವಷ್ಟೇ ಅಲ್ಲ, ಅಗತ್ಯ ಕೂಡ ಎಂಬ ನಂಬಿಕೆಯುಳ್ಳವನಾಗಿದ್ದೇನೆ. ಕಾದಂಬರಿಯ ಬಗ್ಗೆ ಚರ್ಚಿಸುವ ಮುನ್ನ ಕುಸುಮಾಕರರ ಬಗ್ಗೆ ಒಂದೆರಡು ಮಾತುಗಳು ಇಲ್ಲಿ ನಮ್ಮ ಪೀಠಿಕೆಗೆ ಪ್ರಸ್ತುತ.

**ದಿವಾಣಜಿ ಅವರ ಜೀವನ ಮತ್ತು ಸಾಹಿತ್ಯ**

ಇವರ ಸಂಕ್ಷಿಪ್ತ ಪರಿಚಯ ಈ ರೀತಿ ಇದೆ: ಕನ್ನಡ ಕಾದಂಬರಿಕಾರ ಕುಸುಮಾಕರ ದೇವರಗೆಣ್ಣೂರು ಬಿಜಾಪುರ ಜಿಲ್ಲೆಯ ದೇವರಗೆಣ್ಣೂರಿನವರು. ಅವರ ಮೂಲ ಹೆಸರು ವಸಂತ ಅನಂತ ದಿವಾಣಜಿ. (ಅವರಿಗೀಗ ೭೭+ ವಯಸ್ಸು.) ನವ್ಯದ ಕಾಲಘಟ್ಟದಲ್ಲಿ ಬರೆಯಲು ಶುರು ಮಾಡಿದ ಇವರು ಯು. ಆರ್. ಅನಂತಮೂರ್ತಿ ಮತ್ತು ಪಿ. ಲಂಕೇಶರ ಸಮಕಾಲೀನರು. ಕನ್ನಡ ಸಾಹಿತ್ಯದ ಅಕಡೆಮಿಕ್ ವಲಯದ ಮಟ್ಟಿಗೆ ಅಜ್ಞಾತ ಲೇಖಕರಂತೆ ಬದುಕಿದ ಕುಸುಮಾಕರರು 'ನಾಲ್ಕನೆಯ ಆಯಾಮ' 'ನಿರಿಂದ್ರಿಯ'ಗಳಂತಹ ಉತ್ತಮ ಕಾದಂಬರಿಗಳನ್ನು ಬರೆದವರು. ಬೇಂದ್ರೆಯವರ ಆಪ್ತ ಒಡನಾಟದಲ್ಲಿದ್ದ ಅವರು ಸೊಲ್ಲಾಪುರದ ದಯಾನಂದ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸ ಮಾಡಿದರು. ರಂ. ಶ್ರೀ. ಮುಗಳಿಯವರ ಮಾರ್ಗದರ್ಶನದಲ್ಲಿ ಪುರಂದರದಾಸರ ಬಗ್ಗೆ ಸಂಶೋಧನೆ ಮಾಡಿದರು. ಎಷ್ಟೋ ಆಂಗ್ಲ ಅಧ್ಯಾಪಕರು ಸಹ ಓದಲಾರದಷ್ಟು ಪಶ್ಚಿಮದ ಸಾಹಿತ್ಯವನ್ನು ಓದಿಕೊಂಡಿರುವ ಕುಸುಮಾಕರ ಅವರು ಒಬ್ಬ ದಾರ್ಶನಿಕ ಚಿಂತಕ... (ರಹಮತ್ ತರೀಕೆರೆ ಅವರು ಕುಸುಮಾಕರರೊಂದಿಗೆ ನಡೆಸಿದ ಸಂದರ್ಶನದ ಪೀಠಿಕೆಯಿಂದ).

ಅವರ ಬಗ್ಗೆ ಮತ್ತಷ್ಟು ವಿವರಗಳು ಹೀಗಿವೆ: ಕುಸುಮಾಕರರ ಸಾಹಿತ್ಯ ಕೃಷಿ ವಿಪುಲವಾಗಿಲ್ಲದಿದ್ದರೂ ವೈವಿಧ್ಯಪೂರ್ಣವಾಗಿದೆ. ಅವರ ಮೊದಲ ಪ್ರಕಟಿತ ಕೃತಿ 'ಸ್ವಪ್ನನೌಕೆ' ಎಂಬ ಕವನ ಸಂಕಲನ ೧೯೫೪ರಲ್ಲಿ ಹೊರಬಂದಿತು. ಅನಂತರ ಅವರು ಹೊರಳಿದುದು ಕಾದಂಬರಿ ಕ್ಷೇತ್ರಕ್ಕೆ. ಇವರ ಪ್ರಕಟವಾದ ಕಾದಂಬರಿಗಳು ಐದು: 'ಮುಗಿಯದ ಕತೆ' (೧೯೬೫), 'ನಾಲ್ಕನೆಯ ಆಯಾಮ' (೧೯೬೬), 'ನಿರಿಂದ್ರಿಯ' (೧೯೯೩), 'ಪರಿಘ' (೧೯೯೫) ಮತ್ತು 'ಬಯಲು-ಬಸಿರು' (೨೦೦೫). ಪುರಂದರ ದಾಸರ ಬದುಕು ಹಾಗು ಕೃತಿಗಳನ್ನು ಕುರಿತ ಸಂಶೋಧನ ಕೃತಿ ಅವರು ಪೂನಾ ವಿಶ್ವವಿದ್ಯಾನಿಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ 'ಪ್ರಸಾದಯೋಗ' ಎಂಬ ಹೆಸರಿನಲ್ಲಿ ೧೯೭೫ರಲ್ಲಿ ಪ್ರಕಟವಾಯಿತು. ಗಂಗಾಧರ ಗಾಡಗೀಳರ ಮರಾಠೀ ಕಾದಂಬರಿಯ ಕನ್ನಡ ಅನುವಾದ 'ದುರ್ದಮ್ಯ' (೧೯೯೮) ಮತ್ತು ಬೇಂದ್ರೆಯವರನ್ನು ಕುರಿತು ಅವರು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಮಾಡಿದ ಭಾಷಣದ ಲಿಖಿತರೂಪ 'ಗಾಳಿ ಹೆಜ್ಜೆ ಹಿಡಿದ ಸುಗಂಧ' (೨೦೦೧) ಅವರ ಇತರ ಕೃತಿಗಳು. ಇವುಗಳಲ್ಲಿ ಅವರ 'ಸ್ವಪ್ನನೌಕೆ', 'ನಾಲ್ಕನೆಯ ಆಯಾಮ' ಮತ್ತು 'ನಿರಿಂದ್ರಿಯ' ಈ ಕೃತಿಗಳಿಗೆ ಕ್ರಮವಾಗಿ, ಕರ್ನಾಟಕ ಸರ್ಕಾರದ ಮತ್ತು ಕರ್ನಾಟಕ ಸಾಹಿತ್ಯ ಅಕಾಡಮಿಯ ಕೃತಿ-ಪ್ರಶಸ್ತಿಗಳು ಸಂದಿವೆ; ಮತ್ತು ಕರ್ನಾಟಕ ಸಾಹಿತ್ಯ ಅಕಾಡಮಿಯ ಗೌರವ ಪ್ರಶಸ್ತಿ ೨೦೦೫ರಲ್ಲಿ ಸಂದಿತು. ('ಕುಸುಮಾಕರ ದೇವರಗೆಣ್ಣೂರರ ಸಾಹಿತ್ಯ: ಒಂದು ಸಮೀಕ್ಷೆ' ಸಿ. ಎನ್. ರಾಮಚಂದ್ರನ್ ಅವರಿಂದ.)

ಸುಮಾರು ಐವತ್ತು ಲೇಖನಗಳಿರುವ 'ಅವಗಾಹ' ಎಂಬ ಪುಸ್ತಕ ಕನ್ನಡದ ಈ ಸಮರ್ಥ ಬರಹಗಾರರ ಸಾಹಿತ್ಯಕ್ಕೆ ಒಂದು ಕನ್ನಡಿ ಇದ್ದಂತಿದೆ. ಇಷ್ಟೆಲ್ಲಾ ಕೊಡುಗೆಯನ್ನಿತ್ತಿರುವ ಶ್ರೀಯುತರ ಬಗ್ಗೆ ಏನೇನೂ ಕೇಳಿರಲಿಲ್ಲವಲ್ಲ ಎಂದು ನೋವಾಯಿತು. 'ಅವಗಾಹ' ಪುಸ್ತಕದಲ್ಲಿ ಓದಿದ ಒಂದು ಸಾಲು ಹೀಗಿದೆ 'ಕರ್ನಾಟಕವು ಏಕೀಕರಣವನ್ನು ಹೊಂದಿದ್ದರೂ ಬೆಳಗಾವಿಯಲ್ಲಿ ಪ್ರಕಟವಾದ ಕತೆ, ಕವನ, ನಾಟಕ, ಕಾದಂಬರಿ ದಕ್ಷಿಣ ಕನ್ನಡ, ಹಾಸನ, ಕೋಲಾರ ಸೇರಲು ದಶಕಗಳೇ ಬೇಕು' (ಡಾ. ಜಿ. ಬಿ. ಹರೀಶ್). ಹೀಗಿರುವಲ್ಲಿ ಕರ್ನಾಟಕದ ಎಲ್ಲಾ ಭಾಗಗಳನ್ನು ಇನ್ನೂ ತಲುಪಿರದ ಒಬ್ಬ ಲೇಖಕ ಅಮೆರಿಕದ ಕನ್ನಡ ಓದುಗರನ್ನು ಇನ್ನೂ ತಲುಪದೇ ಇರುವುದು ಅಚ್ಚರಿಯ ಮಾತೇನಲ್ಲ. ಕರ್ನಾಟಕದಿಂದ ಹೊರಗೆ ಸೊಲ್ಲಾಪುರದಲ್ಲಿ ತಮ್ಮ ವೃತ್ತಿ ಜೀವನವನ್ನು ಕಳೆದ ಈ ಬರಹಗಾರರು ಹೆಚ್ಚಿನ ಜನರ ದೃಷ್ಟಿಗೆ ಗೋಚರವಾಗದೇ ಹೋದದ್ದರಲ್ಲಿಯೂ ಅಚ್ಚರಿಯೇನಿಲ್ಲ. ಹೊರಗೇ ಉಳಿದರೂ, ಇವರ ಪುಸ್ತಕಗಳಿಗೆ ಪ್ರಶಸ್ತಿಗಳು ದೊರೆತಿರುವುದು ಒಂದು ಅಚ್ಚರಿಯ (ಮತ್ತು ಸಂತಸದ) ಸಂಗತಿ. ಪ್ರಶಸ್ತಿಗಳು ದೊರೆತರೂ ಓದುಗರಿಂದ ಮತ್ತು ಸಾಹಿತಿ-ವಿಮರ್ಶಕರಿಂದ ದೊರಕಬೇಕಾದ ಜನಪ್ರಿಯತೆ ಮತ್ತು ಮಾನ್ಯತೆ ದೊರಕಿಲ್ಲವೆಂಬುದು ವಿಷಾದದ ಸಂಗತಿ. ಕುಸುಮಾಕರರೂ ಕೂಡ ಈ ವಿಷಯವನ್ನು ಗಣನೆಗೆ ತೆಗೆದುಕೊಂಡಂತೆ ಕಾಣುವುದಿಲ್ಲ. ಅವರಲ್ಲಿರುವ ದಾರ್ಶನಿಕ ಹೇಳುವ ಪ್ರಕಾರ, 'ಆಕಾಶದಲ್ಲಿ ಲೆಕ್ಕವಿಲ್ಲದಷ್ಟು ತಾರೆಗಳಿವೆ. ಜನರು ತಲೆಯೆತ್ತಿ ನೋಡಿದಾಗ ಎಲ್ಲ ನಕ್ಷತ್ರಗಳನ್ನೂ ಗಮನಿಸಲು ಸಾಧ್ಯವೇ? ಗುರುತಿಸಲ್ಪಡಲಿ ಬಿಡಲಿ, ನಕ್ಷತ್ರಗಳು ಹೊಳೆಯುತ್ತಲೇ ಇರುತ್ತವೆ!'

**ಬಯಲು-ಬಸಿರು'ವಿನ ಕಥೆ**

ಈ ಕಾದಂಬರಿಯ ಕಥೆಯನ್ನು ಹೇಳುವುದು ಸ್ವಲ್ಪ ಕಷ್ಟದ ಮಾತು. ಏಕೆಂದರೆ, ಇಲ್ಲಿ ಒಂದು ಸಣ್ಣ ಕಥೆಗೆ ಬೇಕಾದಷ್ಟು ಕಥೆಯಿದೆ, ಆದರೆ ಇದು ಅಸಾಮಾನ್ಯ ಕಥೆಯಾದ್ದರಿಂದ ಮನಸ್ಸಿನಲ್ಲೇ ನೀಳ್ಗತೆಯಾಗಿ, ಬೃಹದ್ಕಥೆಯಾಗಿ ಬೆಳೆಯುವ ಶಕ್ತಿಯನ್ನು ಹೊಂದಿದೆ. ಇದು ಯಾರೊಬ್ಬರ ಕಥೆ ಬೇಕಾದರೂ ಆಗಬಹುದು, ಎಲ್ಲಿ ಬೇಕಾದರೂ ನಡೆಯಬಹುದು. ಆದರೆ ಈ ಕಥೆಯ ನಾಯಕ ಅಮೆರಿಕದಿಂದ ಭಾರತಕ್ಕೆ ಬಂದು ಆಧ್ಯಾತ್ಮಿಕ ಹುಡುಕಾಟದಲ್ಲಿ ಸಿಕ್ಕಿಕೊಂಡವ. ನಾರ್ಮನ್ ಎಂಬಾತ ಭಾರತದಲ್ಲಿ ತಾತ್ವಿಕನೆಲೆಯನ್ನು ಹುಡುಕಲು ಹಲವು ಕಾರಣಗಳಿರುತ್ತವೆ. ಒಂದು, ತನ್ನ ದೇಶದ ಮೌಲ್ಯಗಳಾಗಲೀ ತನ್ನ ಸಮಾಜದ ಮಾನವೀಯ ಸಂಬಂಧಗಳೇ ಆಗಲೀ ಅವನಿಗೆ ಆಂತರಿಕ ಸುಭದ್ರತೆಯನ್ನು ಒದಗಿಸುವಲ್ಲಿ ವಿಫಲವಾಗಿವೆ. ಮತ್ತೊಂದು, ಅವನ ಕೌಟುಂಬಿಕ ಹಿನ್ನೆಲೆಯಲ್ಲಿರುವ ಅಸೌಹಾರ್ದ. ಅವನ ಬಾಲ್ಯ ಅಂತಹ ಸೌಖ್ಯದ್ದೇನೂ ಅಲ್ಲ. ತಂದೆ ತಾಯಿಗಳಲ್ಲಿ ವಿರಸ. ನಾರ್ಮನ್ ತಂದೆ, ತನ್ನ ಹೆಂಡತಿಯನ್ನು ಬಿಟ್ಟು

ಬೇರೆ ಹೆಣ್ಣಿನೊಂದಿಗೆ ಹೋಗಲು ಕಾರಣ ಆತನ ಅತೃಪ್ತ ಕಾಮ. ವಯಸ್ಸಿಗೆ ಸಹಜವಾಗಿ ದೇಹಸೌಂದರ್ಯವನ್ನು ಕಳೆದುಕೊಂಡಿದ್ದ ಹೆಂಡತಿಯೊಂದಿಗೆ ವಿಚ್ಛೇದನ ಪಡೆದು ಬೇರೊಂದು ತರುಣಿಯಲ್ಲಿ ತನ್ನ ತೃಷೆಯನ್ನು ನೀಗಿಸಿಕೊಳ್ಳಲು ಹೊರಟ ತಂದೆಯ ಬಗ್ಗೆ ಇವನಿಗೆ ಅಸಹ್ಯವುಂಟಾಗುತ್ತದೆ. ಅಮೆರಿಕಾ ಮತ್ತು ರಷ್ಯಾಗಳ ನಡುವಣ ಸ್ಪರ್ಧಾತ್ಮಕ ರಾಜಕೀಯದಿಂದ ಉಂಟಾಗುವ ಯುದ್ಧಭಯ ಕೂಡ ಅವನ ಆಂತರಿಕ ಅಭದ್ರತೆಗೆ ಕಾರಣವಾಗುತ್ತದೆ. ಅದರ ಜೊತೆಗೆ ಅಮೆರಿಕದಲ್ಲಿ ಬಹುಕಾಲ ಚಾಲತಿಯಲ್ಲಿದ್ದ ವರ್ಣದ್ವೇಷ ಕೂಡ ನಾರ್ಮನ್ ಮನಸ್ಸಿನಲ್ಲಿ ಭಯವನ್ನುಂಟು ಮಾಡುತ್ತದೆ. ಇವೆಲ್ಲಾ ಕಾರಣಗಳಿಂದ ಅವನು ಮನಶ್ಶಾಂತಿಗಾಗಿ ಹಲವಾರು ಸಾಧು-ಸಂತರ ಮಾರ್ಗಗಳನ್ನು ಅಭ್ಯಸಿಸಿ ಕೊನೆಗೆ ಆ ಎಲ್ಲ ತತ್ವಗಳ ತಾಯ್ನಾಡಾದ ಭಾರತವನ್ನು ಹುಡುಕಿಕೊಂಡು ಬರುತ್ತಾನೆ.

ಭಾರತದಲ್ಲಿಯಾದರೂ ಅವನಿಗೆ ಎಲ್ಲಾ ಪ್ರಶ್ನೆಗಳಿಗೂ ಉತ್ತರಗಳು ಸುಲಭವಾಗಿ ಸಿಕ್ಕುತ್ತವೆಯೆ? ಭಾರತವೆಂದರೆ ಅದೊಂದು ಗೊಂದಲಗಳ ನಾಡು. ನೂರಾರು ಮತಗಳು, ನೂರಾರು ಪಂಥಗಳು, ಲೆಕ್ಕವಿಲ್ಲದಷ್ಟು ಸಾಧು-ಸಂತರು, ಬಾಬಾಗಳು, ಸ್ವಾಮಿಗಳು. ಅವರಲ್ಲಿ ಸಾಚಾ ಎಷ್ಟೋ, ಖೋಟಾ ಎಷ್ಟೋ, ಯಾರು ಬಲ್ಲವರು? ಮನುಷ್ಯ ಏನನ್ನು ಹುಡುಕುತ್ತಾನೆ? ಏತಕ್ಕಾಗಿ ಹುಡುಕುತ್ತಾನೆ? ಇದು ಅನಾದಿಕಾಲದಿಂದ ಮನೋವಿಜ್ಞಾನಿಗಳನ್ನು ಕಾಡಿರುವ ಪ್ರಶ್ನೆ. ಯಾವ ತುಮುಲವೂ ಇಲ್ಲದೇ ಬದುಕಲು ಸಾಧ್ಯವಿಲ್ಲವೆ? ಇರುವುದನ್ನೆಲ್ಲ ಬಿಟ್ಟು ಇಲ್ಲದೇ ಇರುವುದನ್ನು ಹುಡುಕುತ್ತಾ ಅದನ್ನೇ ಜೀವನವೆಂದುಕೊಳ್ಳುವುದು ಇಡೀ ಮಾನವಜನಾಂಗದ ಕಥೆಯಲ್ಲವೆ? ಅಂತೂ ನಾರ್ಮನ್ ಗುರುವಿಂದ ಗುರುವಿಗೆ ಹಾರುತ್ತ, ನಾನಾ ತತ್ವಗಳ ಸಾರವನ್ನು ಹೀರುತ್ತ, ಪೊಳ್ಳಾದುದನ್ನೆಲ್ಲ ನಿರಾಕರಿಸುತ್ತ ಕೊನೆಗೆ ಒಬ್ಬ ಸ್ವಾಮಿಯನ್ನು ತನ್ನ ಗುರುವೆಂದು ಒಪ್ಪಿಕೊಳ್ಳುತ್ತಾನೆ. ಈ ಗುರು ಇವನನ್ನು ಅಷ್ಟು ಸುಲಭವಾಗಿ ಒಲಿಯುವ ಆಸಾಮಿಯಲ್ಲ. ನಾರ್ಮನ್‌ನನ್ನು ಪರೀಕ್ಷಿಸಿ, ಮೊದಲು ನಿರಾಕರಿಸಿ ಕೊನೆಗೆ ಆಶ್ರಯ ಕೊಡುತ್ತಾನೆ. ಅವನಿಗೆ ಜ್ಞಾನೋದಯವಾಗುವಂತೆ ಮಾಡುತ್ತಾನೆ. ಗುರು ಮಾರ್ಗದರ್ಶನ ಮಾಡಬಲ್ಲನಷ್ಟೇ, ಮಿಕ್ಕದ್ದನ್ನು ಶಿಷ್ಯ ಸಾಧಿಸಬೇಕು. ಇಷ್ಟೆಲ್ಲ ಹಿನ್ನೆಲೆಯನ್ನೂ ನಾರ್ಮನ್‌ಗೆ ಬೀಳುವ ಕನಸುಗಳು, ಅವನ ಕನವರಿಕೆಗಳಿಂದ ಮತ್ತು ಹಿನ್ನೋಟ(ಫ್ಲ್ಯಾಶ್ ಬ್ಯಾಕ್)ಗಳಿಂದ ಅರ್ಥೈಸಬೇಕು. ಇಲ್ಲಿ ನಡೆಯುವುದೆಲ್ಲ ಮಾನಸಿಕ ಚರ್ಚೆಗಳಾದ್ದರಿಂದ ಕಥೆಯ ಬೆಳವಣಿಗೆ ಕೂಡ ಓದುಗನ ಊಹಾಶಕ್ತಿಯನ್ನು ಕೆಣಕುತ್ತಾ, ತಿಣುಕಿಸುತ್ತಾ ಸಾಗುತ್ತದೆ. ಹೀಗಾಗಿ ಕಥೆಯ ಸ್ಥೂಲರೂಪ ಒಂದೇ ಇದ್ದರೂ ಸೂಕ್ಷ್ಮ ಪದರಗಳ ವಿವರ ಸಂಕೀರ್ಣವಾಗುತ್ತದೆ.

ನಾರ್ಮನ್‌ನನ್ನು ಒಂದು ನೆಲಮಾಳಿಗೆಯಲ್ಲಿ ಯಾವ ಮಾನವಸಂಪರ್ಕವೂ ಇಲ್ಲದಂತೆ ಕೂಡಿ ಅವನನ್ನು ಮತ್ತೆ ತಾಯ ಗರ್ಭದೊಳಕ್ಕೆ ತಳ್ಳಿ ಆತ್ಮಾನ್ವೇಷಣೆಗೆ

ಅವಕಾಶ ಮಾಡಿಕೊಡುವುದಷ್ಟೇ ಗುರುವಿನ ಕೆಲಸ. ಅಲ್ಲಿ ಅವನು ನಿರಂತರವಾಗಿ ತನ್ನ ಇಡೀ ಜೀವನವನ್ನು ತಾನೇ ಸಾಕ್ಷಿಯಾಗಿ ಅರ್ಥೈಸಿಕೊಳ್ಳುತ್ತಾನೆ. ನೆಲಮಾಳಿಗೆಯಿಂದ ಹೊರಬಂದಾಗ ಅವನು 'ಅನಿಕೇತಾನಂದ' ಆಗಿರುತ್ತಾನೆ (ಓ ನನ್ನ ಚೇತನ, ಆಗು ನೀ ಅನಿಕೇತನ! ಈ ಹೆಸರಿನಲ್ಲಿ, ತಾನೊಬ್ಬ 'ಮುಕ್ತ, ಸರ್ವತಂತ್ರ– ಸ್ವತಂತ್ರ'ನಾಗಬೇಕೆಂಬ ಅವನ ಮನಸ್ಸಿನ ಹಂಬಲದ ಸೂಚನೆಯಿದ್ದರೂ ಅವನೊಬ್ಬ ಮನೆ–ಮಠವಿಲ್ಲದ ತಬ್ಬಲಿ ಎಂಬ ವಿಡಂಬನೆಯೂ ಇದ್ದಂತೆ ತೋರುತ್ತದೆ!). ಸಂದರ್ಭಗಳ ಜೋಡಣೆಯಿಂದ ಇವನು ಒಬ್ಬ ದೊಡ್ಡ ಸ್ವಾಮಿಯಾಗುತ್ತಾನೆ. ಈ ಸ್ವಾಮಿ ಅನಿಕೇತಾನಂದನ ಹೆಸರಿನಲ್ಲಿ ಇವನ ಪ್ರಮುಖ ಶಿಷ್ಯ 'ವಿನಯಾನಂದ' ಎಂಬ ಪ್ರಚಂಡ ಸ್ವಾಮಿಯ ಉಗಮವಾಗುತ್ತದೆ (ಈ ಹೆಸರಿನಲ್ಲೂ ಒಂದು ಗುಪ್ತ ಸಂದೇಶ ಇದ್ದಂತಿದೆ, ಈ ವಿನಯಾನಂದ 'ಅತಿವಿನಯದ ಧೂರ್ತ'ನೋ ಎಂಬ ಅನುಮಾನ ಹುಟ್ಟುವಂತೆ ಅವನ ಪಾತ್ರವನ್ನು ಬೆಳೆಸಲಾಗಿದೆ). ಗುರುವಿನ ಹೆಸರಿನ ವರ್ಚಸ್ಸಿನಿಂದ ವಿನಯಾನಂದ ತನ್ನ ಗುರುವಿನ ಆಶ್ರಮವನ್ನು ಜಗತ್ತಿನಲ್ಲೇ ಒಂದು ದೊಡ್ಡ ಗುರುಕುಲವನ್ನಾಗಿ ಬೆಳೆಸುತ್ತಾನೆ. ಕೊನೆಗೆ ತನ್ನ ಶಿಷ್ಯನ ಚಾಣಾಕ್ಷತನದಿಂದ ಅನಿಕೇತಾನಂದನು ಬುದ್ಧನ ಅವತಾರನಾಗಿ ಬೆಳೆಯುತ್ತಾನೆ. ಇವನ ಆಶ್ರಮ ಮಾಡದ ಕೆಲಸವಿಲ್ಲ. ಬೆಳೆಸದ ಸಂಸ್ಥೆಯಿಲ್ಲ. ಹಣದ ಹೊಳೆ ಹರಿಯುತ್ತದೆ. ಬೋಧಿಸತ್ವನ ಪಟ್ಟವನ್ನು ಪಡೆದ ಅನಿಕೇತಾನಂದ ಈಗ 'ಬಸಿರಿ'ನಲ್ಲಿದ್ದಾನೋ 'ಬಯಲಿ'ನಲ್ಲಿದ್ದಾನೋ ಅವನಿಗೇ ಗೊತ್ತಿಲ್ಲದಂಥ ಪರಿಸ್ಥಿತಿ ಉಂಟಾಗುತ್ತದೆ. 'ತಾನು ಅನುಭವಿಸುತ್ತಿರುವುದೆಲ್ಲ ನಿಜವೇ, ತಾನು ನಿಜವಾಗಿಯೂ ಅವತಾರ ಪುರುಷನೆ?' ಎಂಬ ಪ್ರಶ್ನೆ ಅವನನ್ನು ತಿನ್ನುತ್ತದೆ. ಶಿಷ್ಯ ತನ್ನನ್ನು ಕಬಳಿಸಿಬಿಟ್ಟನೇ? ತನ್ನ 'ಖರ್ಚಿ'ನಲ್ಲಿ ಅವನು ಬೆಳೆದು ತ್ರಿವಿಕ್ರಮನಾಗುತ್ತಿದ್ದಾನೆಯೆ? ಎಂಬ ಪ್ರಶ್ನೆಗೆ ಅವನ ಬಳಿ ಉತ್ತರವಿಲ್ಲವಾಗುತ್ತದೆ.

ಈ ವೇಳೆಗೆ ಪಶ್ಚಿಮದ ಆಧುನಿಕ ಮಾನವನು ಸೌಧಗಳನ್ನು ಕೆಡವದೇ ಮನುಷ್ಯರನ್ನು ಮಾತ್ರ ನಿರ್ಮೂಲ ಮಾಡಬಹುದಾದ ಮಾರಕಾಸ್ತ್ರವನ್ನು ಕಂಡುಹಿಡಿಯುತ್ತಾನೆ. ತನ್ಮೂಲಕ ಮಾನವಕೋಟಿ ಸುರಕ್ಷಿತವಾಗಿದೆಯೆಂದು ಬಗೆಯುತ್ತಾನೆ. ತೊಟ್ಟಿಲು ಕ್ಷೇಮವಾಗಿದೆ ಎಂದು ಸಾರುವ ಯುದ್ಧಕೋರರ ಈ ವಿಡಂಬನೆಯಿಂದ ಅನಿಕೇತಾನಂದ ನಡುಗುತ್ತಾನೆ. ತೊಟ್ಟಿಲು ಕ್ಷೇಮವಾದರೆ ಸಾಕೆ, ಅದರೊಳಗಿನ ಶಿಶುವೂ ಕ್ಷೇಮವಾಗಿರಬೇಡವೆ? ಈ ಪ್ರಶ್ನೆಯ ಹುಡುಕಾಟದಲ್ಲಿ ಕಾದಂಬರಿ ಕೊನೆಗಾಣುತ್ತದೆ. ಈ ಕತೆಯನ್ನು ಅರ್ಥೈಸಿಕೊಳ್ಳಲು (ಲೇಖಕರೇ ಬರೆದಿರುವ?) ಬೆನ್ನುಡಿಯ ಈ ವಾಕ್ಯಗಳ ಹಿನ್ನೆಲೆಯಲ್ಲಿ ಯತ್ನಿಸಬೇಕಷ್ಟೆ: 'ಮನುಷ್ಯ ಅಂದಿನಿಂದಲೂ ಬಯಲು ಹಾಗು ಬಸಿರು ಇವುಗಳ ದ್ವಂದ್ವವನ್ನು ಅನುಭವಿಸುತ್ತ ಬಂದಿದ್ದಾನೆ. ಬಯಲು ನಿರಾಶ್ರಯದ ಅನುಭವವನ್ನು ತಂದುಕೊಟ್ಟರೆ, ಬಸಿರು ಅವನಿಗೆ ಆಶ್ರಯದ ಸುರಕ್ಷಿತತೆಯ ಅನುಭವವನ್ನು ತಂದುಕೊಟ್ಟಿದೆ. ಮಾನವನ

ಇತಿಹಾಸವೆಂದರೆ, ಅವನು ಈ ಬಯಲು ಹಾಗೂ ಬಸಿರು ಇವುಗಳ ಜೊತೆ ಆಡಿದ ಕಣ್ಣು ಮುಚ್ಚಾಲೆ ಎಂದು ಹೇಳಬಹುದು. ಧೀಮಂತ ಒಬ್ಬ ತನ್ನ ಕಲ್ಪನೆಯಲ್ಲಿ ಒಂದು ಮನೆಯನ್ನು ಕಟ್ಟುತ್ತಾನೆ. ಆ ಮನೆ ಮಾನವನಿಗೆ ತಾಯಿಯ ಬಸಿರಿನ ಹಾಗೆ ರಕ್ಷೆಯನ್ನು ನೀಡುತ್ತದೆ. ಆದರೆ ಅದು ಬಹಳ ಕಾಲ ನಿಲ್ಲುವುದಿಲ್ಲ. ಬೇರೊಂದು ವಿಚಾರಧಾರೆ ಬಂದು ಈ ರಕ್ಷಾಕವಚವನ್ನು ನಾಶಮಾಡುತ್ತದೆ. ಆಗ ಮನುಷ್ಯ ಮತ್ತೆ ಬಯಲಲ್ಲಿ ಭಯಗ್ರಸ್ತನಾಗುತ್ತಾನೆ. ಇದರ ಇತಿಹಾಸ ಇಲ್ಲಿ ಕಲಾತ್ಮಕವಾಗಿ ಚಿತ್ರಿತವಾಗಿದೆ'.

**ಇದು ಕಾದಂಬರಿಯೆ?**

ಬಯಲು-ಬಸಿರನ್ನು ಓದಿದಾಗ ನನ್ನ ಮನಸ್ಸಿನಲ್ಲಿ ಎದ್ದ ಮೊದಲ ಪ್ರಶ್ನೆ ಎಂದರೆ ಇದೇ – 'ಇದು ಕಾದಂಬರಿಯೆ?' ಅವಗಾಹ ಓದಿದ ಮೇಲೆ, ಇದೇ ಪ್ರಶ್ನೆ ಇತರರನ್ನೂ ಕಾಡಿರಬಹುದು ಎಂಬುದಕ್ಕೆ ಒಂದಿಷ್ಟು ನಿದರ್ಶನಗಳು ದೊರೆತವು. ಹೆಚ್ಚಿನ ವಿಮರ್ಶಕರಲ್ಲಿ ಮತ್ತು ಸಹ-ಕಾದಂಬರಿಕಾರರಲ್ಲಿ ಕುಸುಮಾಕರರ ಕಥನತಂತ್ರ ಮತ್ತು ಕೌಶಲಕ್ಕೆ ಮಾರುಹೋದವರೇ ಹೆಚ್ಚು. ಇಲ್ಲಿರುವ 'ಮಾಂಟಾಜ್' ತಂತ್ರ (ಹಲವು ಚಿತ್ರಗಳನ್ನು ಒಂದರ ಮೇಲೊಂದು, ಒಂದರ ಪಕ್ಕ ಒಂದು, ಒಂದರ ಸುತ್ತ ಒಂದರಂತೆ ಕತ್ತರಿಸಿ-ಅಂಟಿಸಿ ಉಂಟುಮಾಡುವ ಚಿತ್ರ- 'ಕಲಾಜ್' ಇದ್ದಹಾಗೆ, ಘಟನೆಗಳ ಸುತ್ತ ಘಟನೆಗಳನ್ನು ಹೆಣೆದು ಒಟ್ಟಾರೆ ಒಂದು ಜಾಲವನ್ನು ಸೃಷ್ಟಿಸುವ ಪರಿ), ಬೆರಗುಗೊಳಿಸುವಂಥದ್ದು. ಪುಸ್ತಕದಲ್ಲಿ ಪ್ರತಿ ಪುಟದಲ್ಲೂ ಉದ್ಧರಿಸಬಹುದಾದ ತಾತ್ವಿಕ ಮಾತುಗಳು ಬರುತ್ತವೆ, ಅವನ್ನೆಲ್ಲಾ ಮತ್ತೆ ಹೇಳುವುದು ಕಷ್ಟ. ಅವುಗಳನ್ನು ಮತ್ತೆ ಹೇಳದೆ ಅವುಗಳನ್ನು ಚರ್ಚಿಸುವುದು ಇನ್ನೂ ಕಷ್ಟ. ಅವಗಾಹದಲ್ಲೋದಿದ ಹಲವಾರು ಲೇಖನಗಳಲ್ಲಿ ವ್ಯಕ್ತವಾಗಿರುವ ಪ್ರತಿಕ್ರಿಯೆಗಳಿಂದ ಕೆಲವನ್ನು ಆಯ್ದು (ಸಂಪೂರ್ಣರೂಪದಲ್ಲಲ್ಲ, ಸಾರಾಂಶರೂಪದಲ್ಲಿ) ಪ್ರಾತಿನಿಧಿಕವಾಗಿ ಪ್ರಸ್ತುತಪಡಿಸ-ಬಯಸುತ್ತೇನೆ. ಇತರರ ಅಭಿಪ್ರಾಯಗಳನ್ನು ಇಲ್ಲಿ ಪುನಃ ಬರೆಯುವುದರಲ್ಲಿ ಏನು ಸಾರ್ಥಕ್ಯವಿದೆ ಎಂಬ ಪ್ರಶ್ನೆ ಓದುಗರನ್ನು ಕಾಡುವುದು ಸಹಜ. ಆದರೆ ಇದು ನನ್ನ ವೈಯಕ್ತಿಕ ದೃಷ್ಟಿಯಿಂದ ಅಗತ್ಯವೆನಿಸುತ್ತಿದೆ. ಮೊದಲಿಗೆ: ಈ ಲೇಖಕರ ಬಗ್ಗೆ ಮತ್ತು ಅವರ ಬರಹದ ಬಗ್ಗೆ ಹತ್ತಾರು ಜನರು ಸುದೀರ್ಘ ಜಿಜ್ಞಾಸೆ ನಡೆಸಿರುವುದನ್ನು ಗಣನೆಗೆ ತೆಗೆದುಕೊಳ್ಳದೇ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ಸರಿಯಲ್ಲ ಎಂಬುದು ನನ್ನ ನಂಬಿಕೆ. 'ಅವಗಾಹ' ಪುಸ್ತಕವನ್ನು ನಾನು ಓದುವ ಅವಕಾಶವೇ ಸಿಕ್ಕಿಲ್ಲದೆ ಹೋಗಿದ್ದರೆ, ನನಗೆ ಯಾವ ಗೊಂದಲವೂ ಇರುತ್ತಿರಲಿಲ್ಲ. ಆದರೆ ಪ್ರಕಟವಾಗಿರುವ ಎಲ್ಲಾ ಅಭಿಪ್ರಾಯಗಳನ್ನೂ ಸಾರಾಸಗಟು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಜಾಯಮಾನವೂ ನನ್ನದಲ್ಲವಾದ್ದರಿಂದ ನನ್ನ ಮನಸ್ಸಿನ ಪ್ರತಿಕ್ರಿಯೆಯನ್ನು ಬದಲಾಯಿಸಿಕೊಳ್ಳುವ ಪ್ರಸಂಗ ಬರಲಿಲ್ಲ ಎಂಬುದನ್ನೂ ನಿಮ್ಮೊಂದಿಗೆ ಹಂಚಿಕೊಳ್ಳುತ್ತೇನೆ. ಹಾಗಾಗಿ ಈವರೆಗೆ ಪ್ರಕಟವಾಗಿರುವ ಅಭಿಪ್ರಾಯಗಳ

ಸಾರಾಂಶವನ್ನು ಧೈರ್ಯವಾಗಿ ಈಗ ಓದುಗರ ಮುಂದಿಡುತ್ತೇನೆ.

೧. ಇಲ್ಲಿನ ಕೇಂದ್ರ ಕಾಳಜಿಯೆಂದರೆ 'ಶೋಧ' – ಆಧುನಿಕ ನಚಿಕೇತ ಅಥವಾ ಆಧುನಿಕ ಗೌತಮ ಬೆಳಕಿಗಾಗಿ ಭಾರತದಲ್ಲಿ ಕೈಗೊಳ್ಳುವ ಶೋಧ; ಯಾವುದು ಬೆಳಕು ಮತ್ತು ಯಾವುದು ಬೆಳಕಿನ ಭ್ರಮೆ ಎಂದೇ ಅರಿಯಲಾಗದ ತೊಳಲಾಟ; ಹೆಜ್ಜೆಗುರುತುಗಳಿಲ್ಲದ ಮಾರ್ಗದಲ್ಲಿ ನಡೆಯುವಾಗಿನ ಭೀತಿ-ಸಂಕಟ. ಪ್ರಾಯಃ, ದಿವಾಣಜಿಯವರ ಅತ್ಯಂತ ಮಹತ್ವಪೂರ್ಣ ಕೃತಿ ಈ ಬಯಲು-ಬಸಿರು ಎಂದು ಹೇಳಿದರೆ ತಪ್ಪಾಗುವುದಿಲ್ಲವೇನೋ! (ಸಿ. ಎನ್. ರಾಮಚಂದ್ರನ್)

೨. ಅಮೆರಿಕಾದಿಂದ ಹೊರಟ ನಾರ್ಮನ್ ನಡೆಯುವುದೆಲ್ಲಾ ಚಕ್ರಗತಿಯಲ್ಲಿಯೇ. ಅವನದು ನಿಂತಲ್ಲಿಯೇ ಇರುವ ನಡಿಗೆ. ಆದ್ದರಿಂದಲೇ ಅವನಿಗೆ ಬಿಡುಗಡೆಯಿರುವಂತೆ ಕಂಡರೂ ಇಲ್ಲ. ಈ ಆಶ್ರಮವನ್ನು ಬಿಟ್ಟನಂತರ ಅವನು ಅಂತಹುದೇ ಇನ್ನೊಂದು ಕಡೆಗೆ ಹೋಗುವ ಸಾಧ್ಯತೆಯೇ ಹೆಚ್ಚು. ಒಮ್ಮೆ ಬಯಲಿಗೆ ಬಂದ ಮೇಲೆ ಬಸಿರು ಸಿಗುವುದಿಲ್ಲ. ಅವನಿಗೆ, ಅವನಂತಹ ಲಕ್ಷಾಂತರ ಜನರಿಗೆ ಸುಭದ್ರತೆಯು ಮರೀಚಿಕೆಯೇ ಸರಿ... ಮನುಷ್ಯನ ಅಸಹಾಯಕತೆಯೇ ದಿವಾಣಜಿಯವರ (ಇನ್ನೊಂದು) ಮುಖ್ಯವಾದ ವಸ್ತು. (ಎಚ್. ಎಸ್. ರಾಘವೇಂದ್ರ ರಾವ್)

೩. ಮನುಷ್ಯನ ನಿರಂತರ ಹೋರಾಟ, ಆ ಹೋರಾಟಕ್ಕೆ ಕಾಲೋಚಿತವಾಗಿ ಅಡ್ಡನಿಲ್ಲುವ ವ್ಯವಸ್ಥೆಗಳು, ಇವುಗಳ ನಡುವಿನ ತೀವ್ರ ಸಂಘರ್ಷವೇ ಕುಸುಮಾಕರರ ತಾತ್ವಿಕ ನೆಲೆಗಳಾಗಿವೆ. ಇದೀಗ ಪ್ರಕಟವಾಗುತ್ತಿರುವ 'ಬಯಲು-ಬಸಿರು' ಕಾದಂಬರಿಯನ್ನು ನಾವು ಗಮನಿಸಿದರೂ, ಅಮೆರಿಕದಿಂದ ಬಂದು ಭಾರತದಲ್ಲಿ ತನ್ನ ಪೊಳ್ಳನ್ನು ಎಲ್ಲ ನೆಲೆಗಳಲ್ಲಿ ತುಂಬಿಕೊಳ್ಳಲೆತ್ನಿಸುವ ನಾರ್ಮನ್, ಮನುಷ್ಯನ, ವ್ಯಕ್ತಿಗಳ ಹೋರಾಟದ ಭೀಕರತೆಯ, ತಳಮಳತೆಯ, ಪ್ರತಿನಿಧಿಯಾಗುತ್ತಾನೆಯೇ ವಿನಃ ಪೂರ್ವ-ಪಶ್ಚಿಮಗಳ ಪರಿಕಲ್ಪನೆಯ ನೆಪದಲ್ಲಿ ತನ್ನ 'ಚಲನ-ಹೀನ' ಸ್ಥಿತಿಯ ಪ್ರಚ್ಛನ್ನ ಸಮರ್ಥನೆಯಾಗುವುದಿಲ್ಲ. (ಆನಂದ ಝುಂಜರವಾಡ)

೪. ಒಂದು ರೀತಿಯಲ್ಲಿ ಈ ಕಾದಂಬರಿಯು ಕಾದಂಬರಿಕಾರರ ಹಿಂದಿನ ಎಲ್ಲ ಕಾದಂಬರಿಗಳಿಗಿಂತ ಭಿನ್ನವೂ, ಮುಂದುವರಿದುದೂ, ಮಹತ್ವಾಕಾಂಕ್ಷೆಯದೂ ಆಗಿದೆ. ಹಿಂದಿನ ಕಾದಂಬರಿಗಳಲ್ಲಿ ಕಾಣದ ಒಂದು ಸಂದೇಶ ಇಲ್ಲಿ ವ್ಯಕ್ತವಾಗುತ್ತದೆ. ಅದು ಜೀವನಕ್ಕೆ ಸಂಬಂಧಿಸಿದ್ದಾಗಿದೆ. ಅಂದರೆ ಇಲ್ಲೂ ಕೂಡ ಪೊಳ್ಳು ಮತ್ತು ಗಟ್ಟಿತನಗಳ ನಡುವಿನ ಸಂಘರ್ಷ, ಅದು ಆಧ್ಯಾತ್ಮಿಕಕ್ಕೆ ಸಂಬಂಧಿಸಿದ್ದು ಕಂಡುಬರುತ್ತದೆ. ಹಾಗೆಯೇ ಆಧ್ಯಾತ್ಮ ಕೂಡ ಕಮರ್ಶಿಯಲ್ ಆಗುವ ಪರಿಯನ್ನೂ ಇದು ಚಿತ್ರಿಸುತ್ತದೆ. (ಸುರೇಶ ಪಾಟೀಲ)

೫. ಕುಸುಮಾಕರರ ಕಾದಂಬರಿಗಳ ಬಹುಪಾಲು ಅರ್ಥ ಅಡಗಿರುವುದು ಅಲ್ಲಿನ ಕನಸುಗಳಲ್ಲಿ. ಇವು ಕಥಾನಾಯಕರ ಅತೃಪ್ತಿಯ ಮೊತ್ತಗಳೂ ಹೌದು, ಮತ್ತು ಅಡಗುತಾಣಗಳೂ ಹೌದು... ಅವರ ಎಲ್ಲ ಕಾದಂಬರಿಗಳಲ್ಲಿರುವ ತಾಂತ್ರಿಕ ನೈಪುಣ್ಯ ಬೆರಗುಗೊಳಿಸುವಂಥದ್ದು. ವಾಸ್ತವಮಾರ್ಗ, ಕನಸಿನ ಮಾರ್ಗ, ಮನಶ್ಶಾಸ್ತ್ರೀಯ ಮಾರ್ಗ, ಮತ್ತು ಸಾಂಕೇತಿಕ ಮಾರ್ಗ ಇಂಥ ಹಲವಾರು ಮಾದರಿಗಳು ಕಾದಂಬರಿಯ ಶೈಲಿಯಲ್ಲಿ ಮಿಳಿತಗೊಂಡಿವೆ... ಕಾದಂಬರಿಯೊಳಗಿನ ಬದುಕು ಭಾರತೀಯ ಜೀವನ ಕ್ರಮದ ಸಂವೇದನೆಗಳಿಂದ ಕೂಡಿದ್ದರೆ, ಬಂಧ ಮಾತ್ರ ಪಾಶ್ಚಾತ್ಯ ಓದಿನ ಫಲವಾಗಿದೆಯೇನೋ. (ವಿಕ್ರಮ ವಿಸಾಜಿ)

೬. ಕೃತಿ ಎಲ್ಲವೂ ತಾನಾಗದೇ ಓದುಗರಿಗೆ ಬಹಳಷ್ಟನ್ನು ಬಿಟ್ಟುಕೊಡುವ ವಿನೂತನ ಪ್ರಯತ್ನವಿದು... ಅವರ ನಾಯಕರು ಅತೃಪ್ತಿ, ಕೀಳರಿಮೆಗಳಿಂದ ಬಳಲುತ್ತಾರೆ. ಪೂರ್ಣತೆಯತ್ತ ಕೈಚಾಚಲು ವಿಫಲ ಪ್ರಯತ್ನ ಮಾಡುತ್ತಾರೆ. ಆದರೆ ಇದಕ್ಕೆ ಪ್ರತಿಯಾಗಿ ಪೂರ್ಣತೆ ಏನು ಎಂಬುದನ್ನು ಕುಸುಮಾಕರರ ಕೃತಿಗಳು ಹುಡುಕುವ ಪ್ರಯತ್ನವನ್ನೂ ಮಾಡುವುದಿಲ್ಲ. (ಎನ್. ಎಸ್. ಶ್ರೀಧರಮೂರ್ತಿ)

೭. ಇದನ್ನು ಕಾದಂಬರಿ ಎಂದು ಕರೆಯಲು ಸ್ವಲ್ಪ ಹಿಂಜರಿಯಬೇಕಾಗುತ್ತದೆ. ಇದೊಂದು ಬಗೆಯ ಭಾರತದ ಸಂತ ಸಮುದಾಯದ ವಿಶ್ಲೇಷಣೆ. 'ಸಂತ' ಶಬ್ದಕ್ಕೆ ಯತಿ, ಮುನಿ, ವಿರಾಗಿ ಮುಂತಾಗಿ ಅರ್ಥಗಳಿವೆ. ಆದರೆ, ಇಂಗ್ಲೀಷಿನಲ್ಲಿರುವ 'ಗಾಡ್‌ಮನ್' ಎಂಬ ಶಬ್ದಕ್ಕೆ ಸಮಾನವಾಗುವುದಿಲ್ಲ. ಭಾರತದಲ್ಲಿ ಈಗ ಈ 'ಗಾಡ್‌ಮನ್'ಗಳ ವ್ಯಾಪ್ತಿ, ಪ್ರಭಾವ ಪರಿಣಾಮಗಳು ಅಗಾಧವಾಗಿ ಬೆಳೆಯುತ್ತಿವೆ. ಈ ಪರಿಸ್ಥಿತಿಯನ್ನು ವಿಶ್ಲೇಷಿಸುವ ಒಂದು ಸಮಾಜಶಾಸ್ತ್ರ ಸಂಬಂಧವಾದ ವ್ಯಾಸಂಗ ಎಂದು ಕರೆಯಬಹುದು. (ಜಿ. ವೆಂಕಟಸುಬ್ಬಯ್ಯ)

೮. ರಿಕ್ತ ಬದುಕಿನ ದುರಂತ ಹಾಗೂ ಅದರಿಂದ ಪಾರಾಗಲು ಈ ದುರಂತಕ್ಕೊಳಗಾದ ವ್ಯಕ್ತಿಗಳು ಕೈಕೊಳ್ಳುವ ವ್ಯರ್ಥ ಉಪಾಯಗಳು ಈ ಎಲ್ಲ (ಕುಸುಮಾಕರರ) ಕೃತಿಗಳ ವಸ್ತು... 'ಬಯಲು' ಹಾಗೂ 'ಬಸಿರು' ಇವೆರಡಕ್ಕೂ ಸಾಂಕೇತಿಕ ಅರ್ಥವಂತಿಕೆ ಇದೆ... ಈ ದೃಷ್ಟಿಯಿಂದ ನಾರ್ಮನ್-ಅನಿಕೇತಾನಂದ ಇಡೀ ಮಾನವತೆಯ ಪ್ರತಿನಿಧಿ ಆಗುತ್ತಾನೆ... ತಮ್ಮ ಕಾದಂಬರಿಯನ್ನು 'ಹೊಚ್ಚ ಹೊಸ ಮಗುವಿನ ಬೆರಗುಗಣ್ಣುಗಳಿಂದ ನೋಡಬೇಕು' ಎಂದು ಕಾದಂಬರಿಕಾರರು ಓದುಗರನ್ನು ಕುರಿತು ಹೇಳುತ್ತಾರೆ. ಆದರೆ ಬದುಕಿನ ಬಗ್ಗೆ ನಮಗಿರುವ ತಿಳುವಳಿಕೆಯನ್ನು, ಪ್ರಶ್ನೆಗಳನ್ನು, ಚಿಂತನೆಗಳನ್ನು ಮರೆತು ಕಾದಂಬರಿಯನ್ನು ಓದಿದರೆ ಯಾವ ಲಾಭವೂ ಆಗಲಾರದು. ಏಕೆಂದರೆ ಅವರೇ ಸೂಚಿಸುವ ಹಾಗೆ 'ಬಸಿರು' ಬಯಲು'ಗಳ ದ್ವಂದ್ವ

ಮಾನವನ ಅಸ್ತಿತ್ವವನ್ನು ವ್ಯಾಖ್ಯಾನಿಸುವ ಮೂಲ ತತ್ವ. ತಾತ್ವಿಕ ದೃಷ್ಟಿಗೆ ಮಾತ್ರ ಇದು ಅರ್ಥವಾಗಬಲ್ಲದು. (ಜಿ.ಎಸ್. ಆಮೂರ)

೯. ವಿಜ್ಞಾನವು ಪ್ರಗತಿಯನ್ನು ಸಾಧಿಸಿದಷ್ಟೂ, ಅದು ಮಾನವಕೇಂದ್ರಿತವಾಗುತ್ತ, ಅವನ ವಿನಾಶದೆಡೆಗೇ ಮತ್ತೂ ಮತ್ತೂ ಹೊರಳಿ ನಿಲ್ಲುವ ವಿಚಿತ್ರ, ಇತಿಹಾಸಕ್ಕೆ ಮುಖಾಮುಖಿಯಾಗುವ, ಜಗತ್ತಿನಲ್ಲಿ ಕೊನೆಗೆ ಉಳಿಯುವುದೇನು, ಎಂಬ ಪ್ರಶ್ನೆಯನ್ನು ಬೌದ್ಧಿಕವಾಗಿ ವಿಶ್ಲೇಷಿಸುವ, ಪ್ರಶ್ನಿಸುವ ಸಾಹಸವನ್ನು ಈ ಕಾದಂಬರಿಯಲ್ಲಿ ನಡೆಸಲಾಗಿದೆ. ಎಲ್ಲ ಆದಿ-ವ್ಯಾಧಿಗಳಿಗೆ ಆಧ್ಯಾತ್ಮವೊಂದು ಪರಿಹಾರವೆಂದು ನಂಬಿಕೊಂಡು ಬಂದ ಭಾರತವು, ಧಾರ್ಮಿಕ ಏಜೆಂಟರಿಂದ ತುಂಬಿಕೊಂಡು ಅತ್ತ ಬಯಲೂ ಆಗದೆ ಇತ್ತ ಬಸಿರೂ ಎನಿಸದೆ, ತ್ರಿಶಂಕು ಸ್ಥಿತಿಯಲ್ಲಿ ಆಧುನಿಕ ಮಾನವನ ಬದುಕನ್ನು ಅತಂತ್ರಗೊಳಿಸುವ ಪರಿ ಭಯದ್ದಾದರೂ ಅತಿ ವಾಸ್ತವವೆಂಬ ಕಟುಸತ್ಯವನ್ನು ಇಲ್ಲಿ ಶೋಧಿಸುವ ಯತ್ನ ನಡೆದಿದೆ. ಇದು ಈ ಕಿರುಗಾದಂಬರಿಯ ತಂತ್ರ ವಿನ್ಯಾಸದ ಹೊಸತನವೂ ಹೌದು. (ಸುನೀತಾ ಶೆಟ್ಟಿ)

೧೦. ಒಟ್ಟಿನಲ್ಲಿ, 'ಬಯಲು-ಬಸಿರು' ಒಂದು ಪ್ರಬುದ್ಧವಾದ, ವೈಚಾರಿಕ ಸಂಘರ್ಷಗಳಿಗೆ ಚಾಲನೆಯನ್ನು ನೀಡುವ ಕೃತಿಯಾಗಿದೆ. ಕೆಲವೊಮ್ಮೆ ಕಲಾವಂತಿಕೆಯು ಮಸುಕಾಗುತ್ತದೇನೋ ಎನ್ನುವ ಆತಂಕಕ್ಕೆ ಎಡೆ ಕೊಡುವಷ್ಟು ಪ್ರಖರವಾದ ವಿಚಾರಗಳು ಇಲ್ಲಿ ಸಾಂದ್ರಗೊಳ್ಳುತ್ತವೆ. (ತಾಳ್ತಜೆ ವಸಂತಕುಮಾರ್)

೧೧. ಲೇಖಕರ ದೃಷ್ಟಿಕೋನ, ಆಧುನಿಕವೇ, ಅಸ್ತಿತ್ವವಾದಿಯದೇ, ಆಸ್ತಿಕವಾದದಿಂದ ಪ್ರೇರಿತವಾದದ್ದೇ ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ. ಎಲ್ಲ ರೀತಿಯ ತರ್ಕ ಮತ್ತು ವಿಚಾರಗಳನ್ನು ನಿರಾಕರಿಸುವ, ಪ್ರಶ್ನಿಸುವ ಧಾಟಿಯಲ್ಲಿರುವ ಕಾದಂಬರಿ ಕೊನೆಗೂ ತನ್ನದೇ ಆದ ತರ್ಕವೊಂದನ್ನು, ವಿಚಾರ-ಪ್ರಣಾಲಿಯನ್ನು ಓದುಗನ ಮನಸ್ಸಿನಲ್ಲಿ ಹುಟ್ಟುಹಾಕುತ್ತದೆ. (ಕೆ. ಸತ್ಯನಾರಾಯಣ)

೧೨. 'ಬಯಲು-ಬಸಿರು' ವ್ಯಕ್ತಿಯೊಬ್ಬನ ವೈಯಕ್ತಿಕ ಒದ್ದಾಟದ ವರ್ತುಲದಲ್ಲಿ ಸುತ್ತುವುದಿಲ್ಲ. ಈ ಮಿತಿ ಮೀರಿ ನಮ್ಮ ಈ ಹೊತ್ತಿನ ನಾಗರಿಕ ಸಮಾಜದ ತಲ್ಲಣಗಳನ್ನು ಒಳಗೊಳ್ಳಲು ಯತ್ನಿಸುತ್ತದೆ... ಈ ಕಾರಣದಿಂದ ಈ ಕಾದಂಬರಿ ಗ್ಲೋಬಲ್ ಆದುದು... ಆದರೆ ಇಲ್ಲಿ ಜಾಗತಿಕ ವಿದ್ಯಮಾನಗಳು ಸ್ಥಳೀಯ ಅನುಭವಲೋಕದ ಭಿತ್ತಿಯಿಲ್ಲದೇ ವಿಚಾರರೂಪಿಯಾಗಿಯೇ ಮಂಡನೆಗೊಳ್ಳುತ್ತವೆ. ಈ ಅರ್ಥದಲ್ಲಿ ಇದು ಸಮಸ್ತ ಮಾನವ ಜನಾಂಗಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಒಳಗೊಂಡ 'ರಾಜಕೀಯ' ಕೃತಿ. (ರಹಮತ್ ತರೀಕೆರೆ)

೧೩. ಬಯಲು-ಬಸಿರು ಕಾದಂಬರಿಯನ್ನು ಸಂಕ್ಷೇಪವಾಗಿ ಹೇಳುವುದಾಗಲಿ, ಅದರ ಆಶಯಗಳನ್ನು ಖಚಿತವಾಗಿ ಹೀಗೆಯೇ ಎಂದು ಪಟ್ಟಿ ಮಾಡುವುದಾಗಲಿ ಅಷ್ಟು ಸುಲಭದ ಕೆಲಸವಲ್ಲ... ನಿಜವಾಗಿ ಆತ್ಮೋನ್ನತಿಯನ್ನು ಸಾಧಿಸಲು ಪ್ರಯತ್ನಿಸಿದ ಪ್ರತಿಯೊಬ್ಬನ ಕತೆಯಾಗಿದೆ. (ಜಿ.ಎನ್. ಉಪಾಧ್ಯ)

೧೪. ಪರಿಶುದ್ಧ ಓದುಗರಾಗಿ ಕೃತಿಯ ರಸಾಸ್ವಾದವನ್ನು ಉತ್ಕಟವಾಗಿ ಅನುಭವಿಸಿದರೆ, ಈ ಕಾದಂಬರಿಯ ರಚನೆಯಲ್ಲಿರುವ ವಿಚಿತ್ರ ಸಂಕೀರ್ಣತೆಯ ಯಾವುದೇ ಸಣ್ಣ-ಪುಟ್ಟ ದೋಷಗಳು ಓದುಗರನ್ನು ತಟ್ಟಲಾರವೇನೋ. (ಸುನಂದಾ ಪ್ರಕಾಶ ಕಡಮೆ)

೧೫. ಇದನ್ನು ಕಾದಂಬರಿ ಎಂದು ಭಾವಿಸಬೇಕೆ ಎಂಬ ಬಗೆಗೆ ನಾನು ಖಚಿತವಾಗಿ ಹೇಳಲಾರೆ. ಅನುಭವವನ್ನು ಮೂರ್ತ ಸ್ವರೂಪಗಳಲ್ಲಿ ರಸ ಹುಟ್ಟಿಸುತ್ತ ಸೃಷ್ಟಿಸಿಕೊಡದ ಬರಹವು ವಿದ್ವದ್‌ಗ್ರಂಥವಾಗಬಹುದು; ಸಾಹಿತ್ಯವಾಗುವುದಿಲ್ಲ. ಎಷ್ಟೋ ಲೇಖಕರು ವಿದ್ವತ್ ವಿಷಯವನ್ನು ಸಾಹಿತ್ಯದ ಆಕಾರದಲ್ಲಿ ಬರೆಯುತ್ತಾರೆ. ಪ್ಲೇಟೋ ಸಂವಾದದ ರೂಪದಲ್ಲಿ ತತ್ತ್ವವನ್ನು ಬರೆದಂತೆ. ನಿಮಗೂ ಇಂಥದೇ ಉದ್ದೇಶವೆಂದು ಭಾವಿಸುತ್ತೇನೆ. ಈ ಹಿಂದೆ ಕೆಲವು ಉತ್ತಮ ಕಾದಂಬರಿಗಳನ್ನು ಬರೆದವರಾದುದರಿಂದ ನಿಮ್ಮ ಈ ಕೃತಿಯೂ ಒಂದು ಕಾದಂಬರಿ ಎಂಬ ನಿರೀಕ್ಷೆಯನ್ನಿಟ್ಟುಕೊಂಡು ಓದುವುದು ವಾಚಕನಿಗೆ ಸಹಜವಾಗಿರುತ್ತದೆ. ಅವನಿಗೆ ಗ್ರಂಥದ ಸ್ವರೂಪವನ್ನು ಮೊದಲೇ ವಿವರಿಸುವುದು ಸೂಕ್ತವೇನೋ! (ಎಸ್. ಎಲ್. ಭೈರಪ್ಪನವರು ಕುಸುಮಾಕರರಿಗೆ ಬರೆದ ಪತ್ರದಿಂದ)

೧೬. 'ಮೌನ, ಬಹಿರಂಗ ಮೌನವಾದರೆ ಸಾಲದು. ಅದು ಮಾನಸಿಕ ಮೌನವಾಗಿಯೂ ಇರಬೇಕು' - ಎನ್ನುವ ಪಯಣವೇ ಈ ಕಾದಂಬರಿಯ ಉದ್ದೇಶ. ಇದನ್ನು ಕಾದಂಬರಿ ಎನ್ನಲೂ ಮನಸ್ಸಾಗುತ್ತಿಲ್ಲ. ಇದೊಂದು ಭಿನ್ನ ಬಗೆಯ ಟ್ರಾವಲಾಗ್ ಅಥವಾ ಪ್ರವಾಸ ಕಥನ ಅನಿಸುತ್ತಿದೆ. ಆದರೆ ಇನ್ನೊಂದು ಮಜಾ ಸವಾಲಿದೆ. ಏನೆಂದರೆ, ಈ ಶಬ್ದ ಸ್ಪರ್ಶಗಳ ಲೋಕದಿಂದ ಮೌನದೆಡೆಗಿನ ಒಳಪಯಣವನ್ನು ನೀವು ಶಬ್ದಗಳನ್ನು ಬಳಸಿಯೇ ಮನಗಾಣಬೇಕಾಗಿದೆ! ಮತ್ತು ನಮಗೂ ಮನಗಾಣಿಸಬೇಕಾಗಿದೆ! ಶಬ್ದ ಅರ್ಥಹೀನ ಎನ್ನುವುದನ್ನು ಶಬ್ದದಲ್ಲಿಯೇ ಅಭಿನಯಿಸಿ ತೋರಿಸುವ ಪ್ರಾರಬ್ಧ ಇದು. ನೀವೇ ಹೇಳಿದಂತೆ 'ಕಿವಿಗಳನ್ನು ನಂಬದಿದ್ದರೂ ಇಲ್ಲಿ ಕಣ್ಣುಗಳನ್ನಂತೂ ನಂಬಲೇಬೇಕು!' ಇನ್ನು ಅಕ್ಷರಗಳನ್ನು? ಶಬ್ದಗಳನ್ನು? ಅಸಾಹಿತ್ಯಿಕವನ್ನು ಸಾಹಿತ್ಯಕ್ಕೆ ತರುವ ವಿನಮ್ರ ಸಾಹಸ ಇದು. (ಜಯಂತ ಕಾಯ್ಕಿಣಿ ಕುಸುಮಾಕರರಿಗೆ ಬರೆದ ಪತ್ರದಿಂದ)

ನನಗೇನೆನ್ನಿಸಿತು?

ಇಂತಹದೊಂದು ಕಾದಂಬರಿಯನ್ನು ಕನ್ನಡದಲ್ಲಿ ನಾನು ಓದಿಯೇ ಇರಲಿಲ್ಲ. 'ಹಳದಿ ಮೀನು' ಓದಿದ್ದು ನೆನಪಾಯಿತಾದರೂ ಅದರಲ್ಲಿದ್ದ ವಿವರಗಳು ಈಗ ಮನಸ್ಸಿನಿಂದ ಮಾಯವಾಗಿವೆ. ಆ ಕಾದಂಬರಿಯನ್ನೋದಿದಾಗ ಕೂಡ ಹಲವಾರು ಚಿಂತನೆಗಳು ಒಂದರ ಮೇಲೊಂದರಂತೆ ಒಳಮನಸ್ಸನ್ನು ನುಗ್ಗಿ ಆವರಿಸಿ ಸಾಕಷ್ಟು ಗೊಂದಲವನ್ನಂತೂ ಉಂಟುಮಾಡಿದ್ದವು ಎಂಬಂಶ ಮಸುಕುಮಸುಕಾಗಿ ನೆನಪಿನಲ್ಲಿದೆ. ಆದರೆ, 'ಬಯಲು-ಬಸಿರು'ವಿನ ಕಥೆ, ಭಾಷೆ, ಮತ್ತು ತಂತ್ರಗಳು ಗೊಂದಲವನ್ನುಂಟು ಮಾಡದಿದ್ದರೂ ಭ್ರಮೆಯನ್ನಂತೂ ಹಿಡಿಸುತ್ತವೆ! ಗಮನವಿಟ್ಟು ಓದಿದ ಯಾರೇ ಆದರೂ ಇದನ್ನು ನಾನಾ ರೀತಿ ಅರ್ಥೈಸಿಕೊಳ್ಳಲು ಸಾಧ್ಯ. ಅವರವರ ಹಿನ್ನೆಲೆ ಅವರವರ ಅರ್ಥಕ್ಕೆ ಕಾರಣವಾಗುತ್ತದೆ. ಇಲ್ಲಿ ಬರುವ ಬಯಲು, ಬಸಿರು ಮನುಷ್ಯನ ಮನಸ್ಸಿನ ಕಲ್ಪನೆ. ನೆಲಮಾಳಿಗೆಯಲ್ಲಿ ಕಣ್ಮುಚ್ಚಿ ಕುಳಿತಾಗ, ಮನುಷ್ಯ ಸಂಪರ್ಕವನ್ನು ಕಡಿದುಕೊಂಡಾಗ, ಪ್ರತಿಯೊಬ್ಬ ಬುದ್ಧಿಜೀವಿಯೂ ಬಯಲಿನಿಂದ ಬಸಿರಿಗೆ, ಬಸಿರಿನಿಂದ ಬಯಲಿಗೆ ಓಡಾಡಿ ಯಾವುದು ನೆಲೆ ಎಂಬ ಪ್ರಶ್ನೆಗೆ ಉತ್ತರ ಹುಡುಕುತ್ತ ಮತ್ತಷ್ಟು ಸಂಕಟಪಡುತ್ತಾನೆ. ಆ ಸಂಘರ್ಷಕ್ಕೆ ಕೊನೆಯಿಲ್ಲ. ಕೊನೆ ಬಂದಿತೆಂದರೆ, ಅದೇ ಮೃತ್ಯು. ಆದ್ದರಿಂದ ಈ ಹುಡುಕಾಟ ನಿರಂತರವಾಗಿ ನಡೆಯುತ್ತಲೇ ಇರಬೇಕು.

ಅವಗಾಹದಲ್ಲಿ ಪ್ರಕಟವಾಗಿರುವ, ಮೇಲೆ ಸಾರಾಂಶರೂಪದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಲ್ಲಿ 'ಬಯಲು-ಬಸಿರು' ಕಾದಂಬರಿಯೇ ಅಲ್ಲವೇ ಎಂಬ ಪ್ರಶ್ನೆಯನ್ನು, ಕೆಲವರು ಸೂಚ್ಯವಾಗಿ ಮತ್ತೆ ಕೆಲವರು ವಾಚ್ಯವಾಗೇ ಎತ್ತಿದ್ದಾರೆ ಎಂಬುದನ್ನು ಓದುಗರು ಗಮನಿಸಿರಬಹುದು. ಅಮೆರಿಕದಲ್ಲಿ ರಿಯಲ್ ಎಸ್ಟೇಟ್ ಖರೀದಿಸುವಾಗ, ಮನೆ ನಗರದ ಯಾವ ಭಾಗದಲ್ಲಿದೆ ಎಂಬುದರ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಲು ಉಪಯೋಗಿಸುವ ಮಾತು ಎಲ್ಲರಿಗೂ ತಿಳಿದದ್ದೇ: 'ಮನೆ ಕೊಳ್ಳುವಾಗ ಗಮನಿಸಬೇಕಾದ ಮೂರು ಮುಖ್ಯ ಅಂಶಗಳಾವುವು?' ಎಂದರೆ, 'ಲೊಕೇಶನ್, ಲೊಕೇಶನ್, ಲೊಕೇಶನ್' (ವಿಳಾಸ, ವಿಳಾಸ, ವಿಳಾಸ) ಎಂಬ ಜವಾಬು ಬರುತ್ತದೆ. ಅದೇ ರೀತಿ, 'ಕಾದಂಬರಿಯ ಮೂರು ಮುಖ್ಯ ಲಕ್ಷಣಗಳಾವುವು?' ಎಂದರೆ, 'ಕಾನ್‌ಫ್ಲಿಕ್ಟ್, ಕಾನ್‌ಫ್ಲಿಕ್ಟ್, ಕಾನ್‌ಫ್ಲಿಕ್ಟ್' (ಸಂಘರ್ಷ, ಸಂಘರ್ಷ, ಸಂಘರ್ಷ) ಎಂಬ ಉತ್ತರ ಸಿಕ್ಕುತ್ತದೆ. ಈ ದೃಷ್ಟಿಯಿಂದ ನೋಡಿದಾಗ, 'ಬಯಲು-ಬಸಿರು' ಖಂಡಿತವಾಗಿಯೂ ಕಾದಂಬರಿಯ ಗುಂಪಿಗೆ ಸೇರುತ್ತದೆ. ಆದರೆ, ಸರಾಸರಿ ಓದುಗರು ಬಯಸುವ 'ಕಥೆ', 'ವರ್ಣನೆಗಳು', 'ಘಟನೆಗಳು', 'ವ್ಯಕ್ತಿಚಿತ್ರಣ'ಗಳು ಇಲ್ಲಿ ಸಿಕ್ಕುವುದಿಲ್ಲ. ಓದಿದ ಒಬ್ಬೊಬ್ಬರಿಗೂ ಒಂದೊಂದು ರೀತಿಯ ಅನುಭವವನ್ನು ಕೊಡುವ ಶಕ್ತಿ ಒಂದು ದೃಷ್ಟಿಯಿಂದ ಉತ್ತಮ ಗುಣವೆನಿಸಿದರೂ, ಇನ್ನೊಂದು ದೃಷ್ಟಿಯಿಂದ ದೌರ್ಬಲ್ಯವೂ ಆಗಬಹುದು. ಉದಾಹರಣೆಗೆ, ಸೋವಿಯತ್

ಒಕ್ಕೂಟ ಕುಸಿದು ಬೀಳುವ ಸಂದರ್ಭದಲ್ಲಿ ಕಥೆ ಪ್ರಾರಂಭವಾಗುವುದರಲ್ಲಿ ಏನು ವೈಶಿಷ್ಟ್ಯ ಇದೆ? ಕಥಾನಾಯಕ ನಾರ್ಮನ್, ಅಮೆರಿಕನ್ ಆಗಿರುವುದರ ಔಚಿತ್ಯವೇನು? (ಅಷ್ಟಕ್ಕೂ 'ಕಥಾನಾಯಕ' ಎಂಬ ಪರಿಕಲ್ಪನೆಯನ್ನೇ ಕುಸುಮಾಕರರು ಒಪ್ಪುವುದಿಲ್ಲ.) ಭಾರತದ ವಿಭಜನೆಯ ಸಂದರ್ಭದಲ್ಲೇ ಕಥೆ ಪ್ರಾರಂಭವಾಗಿದ್ದರೂ ಯಾವ ವ್ಯತ್ಯಾಸವೂ ಆಗುತ್ತಿರಲಿಲ್ಲವೇನೊ? (ಅಮೆರಿಕಾ-ರಷ್ಯಾಗಳ ನಡುವೆ ನಡೆಯುವ ಸ್ಪರ್ಧೆ ಮತ್ತು ಪರಸ್ಪರ ಭಯ, ಸಂಶಯ ಇವೆಲ್ಲಾ ಭಾರತ-ಪಾಕಿಸ್ತಾನಗಳ ನಡುವೆಯೂ ಇದ್ದೇ ಇವೆಯಲ್ಲ!) ನಾರ್ಮನ್ ಬದಲು ನಾರಾಯಣ ಎಂಬುವವ ಭಾರತದಿಂದ ಅಮೆರಿಕಕ್ಕೆ ಹೋಗಿ ನಾರ್ಮನ್ ಪಡೆದ ಅನುಭವಗಳನ್ನೇ ಪಡೆಯಲು ಸಾಧ್ಯವಿತ್ತು. ಏಕೆಂದರೆ, ಸ್ವಾಮಿಗಳು, ಬಾಬಾಗಳು ಇಲ್ಲೂ ಇದ್ದಾರೆ, ಅಲ್ಲೂ ಇದ್ದಾರೆ. ಆಧ್ಯಾತ್ಮಿಕದ ದೊಂಬರಾಟ ಭಾರತದ್ದಾದರೆ, ವ್ಯಾಪಾರೀ ಮನೋಭಾವದ ಗಿಮಿಕ್‌ಗಳೆಲ್ಲಾ ಅಮೆರಿಕದ್ದು. ಇವೆರಡರ ಸಮ್ಮಿಳನದಿಂದುಂಟಾದ ಕಮರ್ಶಿಯಲ್ ಆಧ್ಯಾತ್ಮ ಎಲ್ಲೆಲ್ಲೂ ತಾಂಡವವಾಡುತ್ತಿದೆಯಲ್ಲ. ಭೌಗೋಳಿಕ ಮಿತಿಗಳನ್ನೆಲ್ಲಾ ಮೀರಿ, ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶಗಳನ್ನು ಜಾಗತೀಕರಿಸಿಬಿಟ್ಟರೆ ಸಾಕೆ? 'ಮನುಷ್ಯ ಮೂಲಭೂತವಾಗಿ ಒಬ್ಬನೇ, ಅವನ ಮೂಲಭೂತ ನೋವು ನಲಿವುಗಳೆಲ್ಲ ಒಂದೇ' ಎಂಬ ಪ್ರಮೇಯವೇ ಒಂದು ಸರಳೀಕರಣ ಎಂದು ನನಗೆ ಅನ್ನಿಸುತ್ತದೆ. ಬೌದ್ಧಿಕ ಮಟ್ಟದಲ್ಲಿ ಒಪ್ಪಬಹುದಾದ ಹಲವಾರು ವಾದಗಳು, ತರ್ಕಗಳು ವ್ಯಾವಹಾರಿಕ ಜಗತ್ತಿನಲ್ಲಿ ಧೂಳೀಪಟವಾಗುತ್ತವೆ.

ಮತ್ತಷ್ಟು 'ಗುಣ-ದೋಷ'ಗಳು ಕಾದಂಬರಿಯ ತುಂಬ ತುಂಬಿಕೊಂಡಿವೆ. ಅವೇನೆಂದರೆ, ಸ್ವಲ್ಪ ಅತಿ ಎನಿಸುವ ತಂತ್ರ, ಅತಿಯಾದ ಕನಸುಗಳು, ಅತಿಯಾದ ಮಾನಸಿಕ ಚರ್ಚೆಗಳು, ಅತಿಯಾದ ಉಪಕತೆಗಳು, ಇತ್ಯಾದಿ. ಇವು ಓದುಗರನ್ನು ರಂಜಿಸುವುದರ ಜೊತೆಗೆ ಭ್ರಮಾಲೋಕಕ್ಕೆ ಒಯ್ಯುತ್ತವೆ. ಕುಸುಮಾಕರರ ಸಾಹಿತ್ಯದ ಬಗ್ಗೆ ಬರೆಯುತ್ತಾ ಶಾಂತಿನಾಥ ದೇಸಾಯಿ ಅವರು ಹೇಳುವ ಈ ಮಾತನ್ನು ಗಮನಿಸಬೇಕು: 'ಇಂಥ ಶೈಲಿಯಲ್ಲಿಯ ತಿಳಿಗಟ್ಟಿನ ತಾಟಸ್ಥ್ಯ ಬೆರಗುಗೊಳಿಸುವಂತಹದು. ಅದರಲ್ಲಿ ವಿಡಂಬನೆಯಿಲ್ಲ, ಭಾವುಕತೆಯಿಲ್ಲ; ಕಥಾನಾಯಕನಲ್ಲಿ ತಾದಾತ್ಮ್ಯವಿಲ್ಲ, ಅವನ ಬಗ್ಗೆ ಸಿಟ್ಟಿಲ್ಲ, ಅಸಹನೆಯಿಲ್ಲ. ಇಂಥ ತಾಟಸ್ಥ್ಯ ಅನಾಯಾಸವಾಗಿ ಬರುವ ವಿಷಯವಲ್ಲ; ಅನುಭವವನ್ನು ಅರಗಿಸಿ, ಅದನ್ನು ತಿಳಿದುಕೊಂಡು, ಜಯಿಸಿ, ಅದರಿಂದ ಮುಕ್ತನಾಗಿ, ಸ್ವಲ್ಪ ದೂರ ಕೈಯಲ್ಲಿ ಹಿಡಿದು ಅತ್ತಿತ್ತ ತಿರುಗಿಸಿ, ಇದು ಹೀಗೆ, ಇದು ಹೀಗೆ ಎಂದು ಹೇಳಬೇಕಾದರೆ ಅದಕ್ಕೆ ಮನಸ್ಸು ಸಾಕಷ್ಟು ಪಕ್ವವಾಗಿರಬೇಕು. ಕುಸುಮಾಕರರಲ್ಲಿ ಈ ಪಕ್ವತೆ, ಈ ಪರಿಣತಿಯಿದೆ – ಎಂಬುದು ಅತ್ಯಂತ ಸಮಾಧಾನದ ಸಂಗತಿ'. ಕುಸುಮಾಕರರ 'ನಾಲ್ಕನೇ ಆಯಾಮ' ಕಾದಂಬರಿಯ ಬಗ್ಗೆ ಬರೆಯುತ್ತ ಈ ರೀತಿ ತಮ್ಮ ಅಭಿಪ್ರಾಯವನ್ನು ದೇಸಾಯರು ವ್ಯಕ್ತಪಡಿಸಿದ್ದಾರೆ: 'ಇದರಲ್ಲಿ ಕೌಟುಂಬಿಕ ಸಂಬಂಧಗಳ ನಿರೂಪಣೆ,

ಸಮಾಜದ ಕೆಲವು ಅಂಗಗಳ ನಿರೂಪಣೆ ಚೆನ್ನಾಗಿ ಬಂದಿವೆಯಾದರೂ, ಜೀವನದ ಬಗ್ಗೆ ಆಳವಾದ ದರ್ಶನ ಎಲ್ಲಿಯೂ - ಅಸ್ಪಷ್ಟವಾಗಿಯಾದರೂ - ಗೋಚರವಾಗುವುದಿಲ್ಲ, ಅವ್ಯಕ್ತವಾಗಿ ಮನಸ್ಸಿಗೆ ಮುಟ್ಟುವುದಿಲ್ಲ.' ದೇಸಾಯರ ಟೀಕೆಗೆ ಪ್ರತಿಕ್ರಿಯೆಯೋ ಎಂಬಂತೆ, ಅಂದರೆ - 'ತಾತ್ವಿಕ ಆಯಾಮದ ಕೊರತೆ'ಯನ್ನು ಹೋಗಲಾಡಿಸಲೋ ಎಂಬಂತೆ - ಬಯಲು-ಬಸಿರಿನ ತುಂಬ ತಾತ್ವಿಕತೆ ಮತ್ತು ದರ್ಶನಗಳನ್ನು (ಸ್ವಲ್ಪ ಅತಿ ಎನ್ನಿಸುವಷ್ಟು) ಬಲಾತ್ಕಾರವಾಗಿ ತುರುಕಿದ್ದಾರೆಯೇ ಎಂಬ ಪ್ರಶ್ನೆ ನನ್ನನ್ನು ಕಾಡಿತು. ಇದಕ್ಕೆ ಕಾರಣ, ಪ್ರಾಯಶಃ, ಈ ಕಾದಂಬರಿಯ ವಸ್ತು ಕುಸುಮಾಕರರ ಮನಸ್ಸನ್ನು ಅವರ ಜೀವನದ ಬಹುದೀರ್ಘ ಕಾಲ ಪೀಡಿಸಿರುವಂತೆ ಕಾಣುತ್ತದೆ. ಅವರೇ ಹೇಳಿರುವಂತೆ, '...ಆದರೆ, ಈ 'ಬಯಲು-ಬಸಿರು' ಮೂವತ್ತು ನಲವತ್ತು ವರ್ಷ ತಲೆಯಲ್ಲಿತ್ತು. ಕೊನೆಗೆ ಒಂದು ದಿನ ಆಕಾರ ತಳೆಯಿತು. ಕೃತಿ ಆಕಾರ ತಳೆಯಬೇಕಾದರೆ ಒಂದು ಇಮೇಜ್ - ಪ್ರತಿಮೆ ಬೇಕಾಗ್ತದೆ.' (ಎಚ್. ಎಸ್. ರಾಘವೇಂದ್ರ ರಾವ್ ನಡೆಸಿದ ಸಂದರ್ಶನದಿಂದ.) ಹಾಗಾಗಿ, ಅವರ ಜೀವನದ ಇಡೀ ಓದಿನ ಸಾರಾಂಶವನ್ನೇ ಈ ಕೃತಿಯಲ್ಲಿ ಭಟ್ಟಿಯಿಳಿಸಲು ಯತ್ನಿಸಿರುವ ಮಹತ್ವಾಕಾಕ್ಷೆಯೇ ಈ ಕೃತಿಯ ಉರುಳೂ ಆಗಿರಬಹುದೇ ಎಂಬ ಪ್ರಶ್ನೆ ನನ್ನನ್ನು ಕಾಡಿತು.

ಅಮೆರಿಕದ ಸರಾಸರಿ ಸಂಸಾರಗಳ ಬಗ್ಗೆ ಮತ್ತು ಸರಾಸರಿ ಅಮೆರಿಕನ್ನರ ಬಗ್ಗೆ ಸಹ ಕುಸುಮಾಕರರ ಕಲ್ಪನೆಗಳಲ್ಲಿ ಸರಳೀಕರಣವಿದೆ ಎನ್ನಬಹುದು. ನಾರ್ಮನ್ನನ ತಂದೆತಾಯಿಗಳ ಜೀವನದ ಹಲವು ವಿವರಗಳ ಪ್ರಕಾರ (ಕಾದಂಬರಿಯ ಪುಟ ೩೫-೩೬), ಭಾರತದಿಂದ ಬಂದ 'ಕಾಮಸೂತ್ರ', ಜೆಸ್ಸಿ ಮತ್ತು ಕಸಿನ್ಸ್ (ನಾರ್ಮನ್ನನ ತಂದೆತಾಯಿಗಳು) ಇವರ ವಿರಸಕ್ಕೆ ನಾಂದಿಯಾಗುತ್ತದೆ. ಕಸಿನ್ಸ್‌ಗೆ ಬೇಕಾಗಿದ್ದ ಕಾಮಕೇಳಿಯನ್ನು ಪೂರೈಸಲು ಜೆಸ್ಸಿ ಸಿದ್ಧಳಿರಲಿಲ್ಲವೋ, ಅಥವಾ ರಸವನ್ನು ಹಿಂಡಿ ಹೀರಿದಮೇಲೆ ಇನ್ನು ಹಿಪ್ಪೆ-ಸಿಪ್ಪೆಗಳಿಂದೇನು ಪ್ರಯೋಜನ ಎಂಬ ಮನೋವ್ಯಾಪಾರ ಅವನದಾಗಿತ್ತೊ? ಕಸಿನ್ಸ್ ತನಗೆ ಬೇಕಾಗಿದ್ದನ್ನು ಹುಡುಕಿಕೊಂಡು ಹೆಂಡತಿ ಮಕ್ಕಳನ್ನು ತ್ಯಜಿಸಿ ಹೋಗುತ್ತಾನೆ. ಮಗ ನಾರ್ಮನ್ ದೊಡ್ಡವನಾಗಿದ್ದಾನೆ, ಅವನ ದಾರಿ ಅವನಿಗೆ ಎಂದು ಯೋಚಿಸಿ, ಗಂಡನ ಬಗ್ಗೆ ಕೋಪ, ನಿರಾಸೆ ಮತ್ತು ತಿರಸ್ಕಾರಗಳು ಉಂಟಾಗಿ, ಜೀವನದಲ್ಲಿ ನಿರಾಸೆ ಹೊಂದಿ ಅಂತರರಾಷ್ಟ್ರೀಯ ಬುದ್ಧ-ಧ್ಯಾನ ಸಂಸ್ಥೆಯೊಂದಕ್ಕೆ ಸೇರಿಕೊಳ್ಳುತ್ತಾಳೆ. ನಾರ್ಮನ್ ಜೀವನದಲ್ಲಿ ಜಿಗುಪ್ಸೆಹೊಂದಲು ಇದೇ ಕಾರಣ. ತಾನು ಅಮೆರಿಕದಲ್ಲೇ ಉಳಿದರೆ ಮತ್ತೆ ಅದೇ ಡೇಟಿಂಗು, ಮದುವೆ, ವಿಚ್ಛೇದನಗಳ ಮುಗಿಯದ ಸರಪಳಿಯಲ್ಲಿ ಸಿಕ್ಕಿ ತೊಳಲಬೇಕಾಗುತ್ತದೆ. ಇವೇ ಮುಂತಾದ ಕಾರಣಗಳಿಂದ ತನ್ನ ಸಮಸ್ಯೆಗೆ ಪರಿಹಾರ ಹುಡುಕುತ್ತಾ ಭಾರತಕ್ಕೆ ಬರುತ್ತಾನೆ.

ಈ ಹಿನ್ನೆಲೆಯಿಂದ ಬಂದ ನಾರ್ಮನ್ ತನ್ನ ಬಾಲ್ಯದ ಕಹಿಗಳ 'ಬ್ಯಾಗೇಜಿನ' ಭಾರವನ್ನು ಸ್ವಲ್ಪ ಅತಿಯಾಗಿಯೇ ಹೊರುತ್ತಾನೆ. ಇಷ್ಟೇ ಸಾಲದೋ ಎಂಬಂತೆ, ಪ್ರತಿಯೊಬ್ಬ ಅಮೆರಿಕನ್ನನೂ ರಷ್ಯದ ಬಾಂಬಿಗೆ ಹೆದರಿ ನಿದ್ರೆಗೆಡುತ್ತಾನೇನೋ ಎಂಬ ಭ್ರಮೆಯನ್ನು ನಾರ್ಮನ್ ಪಾತ್ರ ಉಂಟುಮಾಡುತ್ತದೆ. ಕ್ಯಾಪಿಟಲಿಸಮ್ ಮತ್ತು ಕಮ್ಯೂನಿಸಮ್‌ಗಳ ಸಂಘರ್ಷ ಇವನ ಮೇಲೆ ಎಷ್ಟು ಪ್ರಭಾವ ಬೀರಿತ್ತೋ ಅಷ್ಟೇ ಅಮೆರಿಕದ ವರ್ಣದ್ವೇಷ ಸಹ ಪ್ರಭಾವ ಬೀರಿರುತ್ತದೆ. ನಾರ್ಮನ್ನನ ದೃಷ್ಟಿಯಲ್ಲಿ, ಅಮೆರಿಕದ ಪ್ರತಿ ಕರಿಬಣ್ಣದವನೂ 'ಮಾಲ್ಕಮ್ ಮೇನಿಯಾ' 'ಮಾರ್ಟಿನ್ ಮೇನಿಯಾ'ಗಳ ನಡುವೆ ತುಲನಾತ್ಮಕ ಜಿಜ್ಞಾಸೆ ನಡೆಸಿ, ಮಾನಸಿಕ ಯಾತನೆ ಪಟ್ಟು ಕೊನೆಗೆ ಮಾಲ್ಕಮ್ ಬೋಧಿಸುವ ಹಿಂಸೆ ಮತ್ತು ಸೇಡಿನ ಮಾರ್ಗವನ್ನೇ ಅನುಸರಿಸಿಬಿಡುತ್ತಾನೇನೋ ಎಂಬ ಭಯ. ಈ ಕಾದಂಬರಿಯಲ್ಲಿ ಬರುವ ಈ ಮೇನಿಯಾಗಳ ಭಯವೂ ಒಂದು ರೀತಿಯ ಮೇನಿಯಾ ಎಂದು ನನಗನ್ನಿಸುತ್ತದೆ. ಕಾದಂಬರಿಯು ಉಪಯೋಗಿಸಿ ಕೊಂಡಿರುವ ತಂತ್ರದ ಕಾರಣದಿಂದ, ನಾರ್ಮನ್ ಇಲ್ಲಿ ಒಬ್ಬ ಭಯಗ್ರಸ್ತ, ಸಂಶಯಗ್ರಸ್ತ, ಮತ್ತು ವ್ಯಾಧಿಗ್ರಸ್ತನೂ ಇರಬಹುದೆಂಬ ಅನುಮಾನವನ್ನುಂಟು ಮಾಡುತ್ತಾನೆ (ಇವನಿಗೆ ಬೀಳುವ ಒಂದು ಕನಸಿನಲ್ಲಿ ಮೂಗು-ಬಾಯಿಗಳಿಂದ ಸುರಿಯುವ ರಕ್ತ, ಇವನಿಗೆ ಏಯ್ಡ್ಸ್ ರೋಗ ಬಂದಿತ್ತೋ ಅಥವಾ ಆ ರೋಗ ತನಗೆ ಬಂದುಬಿಡಬಹುದೆಂಬ ಅತೀವ ಹೆದರಿಕೆಯಿಂದ ಅವನು ನರಳುತ್ತಿದ್ದನೋ, ಅಥವಾ, ಇಡೀ ಮಾನವಕುಲ ಏಯ್ಡ್ಸ್ ಖಾಯಿಲೆಯ ಬಗ್ಗೆ ತತ್ತರಿಸುತ್ತಿರುವುದರ ಸೂಚನೆಯೋ ಹೇಳುವುದು ಕಷ್ಟ). ಒಟ್ಟಿನಲ್ಲಿ, ತೇಲುಬೇರಿನ, ಕೀಳರಿಮೆಯ, ಕಿಮ್‌ಕರ್ತವ್ಯಮೂಢನಾದ ಊಹಾಪ್ರಪಂಚದ ಪ್ರಾತಿನಿಧಿಕ ಅಂತರರಾಷ್ಟ್ರೀಯ 'ವ್ಯಕ್ತಿ'ಯಾಗೇ ಓದುಗರ ಮನಸ್ಸಿನಲ್ಲಿ ನಾರ್ಮನ್ ಉಳಿಯುತ್ತಾನೆಯೇ ಹೊರತು ರಕ್ತ-ಮಾಂಸಗಳಿಂದ ಕೂಡಿದ ರಾಗ-ದ್ವೇಷಗಳಿಂದ ನರಳುವ ಮನುಷ್ಯನಾಗಿ ಮೈದಳೆಯುವುದಿಲ್ಲ. ಭಾರತೀಯ ಪಾತ್ರಗಳಾಗಿ ಬರುವ ಶ್ರೀಮಂತ ಜಲೋಟ-ದಂಪತಿಗಳು ನಂಬಲು ಕಷ್ಟವಾಗುವಂಥ ಪಾತ್ರಗಳಾಗಿಬಿಟ್ಟಿವೆ. ಪರದೇಶಿಯಾದ ನಾರ್ಮನ್ನನ್ನು ಸಾಕುಮಗನೆಂದು ಸ್ವಾಗತಿಸಿ ಅವನಿಗೆ ಬೇಕಾದ್ದನ್ನು ಕೊಟ್ಟು ಮನೆಯಲ್ಲಿಟ್ಟುಕೊಳ್ಳುವಂಥಾ ಕಲ್ಪನೆಗಳು ಅಸಹಜವೆನ್ನಿಸುತ್ತವೆ. ಅಮೆರಿಕದ ಸಂಸಾರಗಳಲ್ಲಿ ಪ್ರೀತಿ-ಪ್ರೇಮ-ವಾತ್ಸಲ್ಯಗಳ ಬಂಧನವೇ ಇಲ್ಲವೇನೋ ಎಂದು ಚಿತ್ರಿಸುವುದು ಎಷ್ಟು ಸತ್ಯಕ್ಕೆ ದೂರವೋ, ಭಾರತೀಯರಲ್ಲಿ ಪರಕೀಯರನ್ನೂ ಮನೆಯವರಂತೆ ನೋಡಿಕೊಳ್ಳುವ ಹೃದಯವೈಶಾಲ್ಯವಿದೆಯೆಂದು ಚಿತ್ರಿಸುವುದೂ ಅಷ್ಟೇ ಸತ್ಯಕ್ಕೆ ದೂರವಾಗುತ್ತದೆ. ಆದರೆ, ಈ ಎಲ್ಲ ಇತಿ-ಮಿತಿಗಳು ಈ ಕಾದಂಬರಿಯ ಮುಖ್ಯಧ್ಯೇಯಗಳಿಗೆ ಯಾವ ಭಂಗವನ್ನೂ ತರುವುದಿಲ್ಲ. ಅದಕ್ಕೆ ಕಾರಣ, ಸುತ್ತಲಿನ ಯಾವ ಪಾತ್ರಗಳೂ ನಾಯಕನ ಮನಸ್ಸಿನ ಸಂಘರ್ಷವನ್ನು

ಬಗೆಹರಿಸುವುದಿಲ್ಲ. ಕುಸುಮಾಕರರು ಹೇಳ ಹೊರಟಿರುವುದು ಅವನ ಮನಸ್ಸಿನೊಳಗಿನ ಭಯಂಕರ ಹೊಡೆದಾಟವನ್ನು ಮತ್ತು ತುಮುಲವನ್ನು. ಅವನ ಸಮಸ್ಯೆಗೆ ಪರಿಹಾರವೇ ಇಲ್ಲವೆಂಬ ಸತ್ಯವನ್ನು ಸಾರುವುದೇ ಅವರ ಉದ್ದೇಶ, ಮಿಕ್ಕದ್ದೆಲ್ಲ ಗೌಣ.

**ಸಮಾರೋಪ**

'ಬಯಲು-ಬಸಿರು' ಕಾದಂಬರಿಯನ್ನೋದಿ ನನ್ನ ಮನಸ್ಸಿನಲ್ಲಿ ಒಂದು ಹೊಸ ಅನುಭವವಾಯಿತು. ಈ ಅವಕಾಶಕ್ಕಾಗಿ ನಾನು ಕನ್ನಡ ಸಾಹಿತ್ಯ ರಂಗಕ್ಕೆ ಋಣಿ. ಓದಿದ ನಂತರ ಉಂಟಾದ ಪ್ರತಿಕ್ರಿಯೆ ಮತ್ತು ಅನಿಸಿಕೆಗಳನ್ನು ಹಂಚಿಕೊಳ್ಳುವುದನ್ನು ಬಿಟ್ಟು, ಇತರ ಅನೇಕ ವಿಮರ್ಶಕರು, ಸಹೃದಯರು ಈಗಾಗಲೇ ವ್ಯಕ್ತಪಡಿಸಿರದ ಹೊಸ ವಿಚಾರಗಳನ್ನೇನೂ ನಾನು ಮಂಡಿಸುತ್ತಿಲ್ಲ. ಆದರೆ, ಈವರೆಗೆ ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ಓದಿ ನನ್ನ ಅರಿವನ್ನು ಅಭಿವೃದ್ಧಿಗೊಳಿಸಿಕೊಂಡಿದ್ದೇನೆ. ದೇಸಾಯಿ ಅವರು ಅವಗಾಹದಲ್ಲಿ ಒಂದು ಕಡೆ ಹೇಳಿದ್ದಾರೆ: 'ಅರ್ಥಪೂರ್ಣತೆ ಕಥೆಯ ತಂತ್ರದಿಂದ, ಕಥೆಯ ಶಿಲ್ಪದಿಂದ, ಕಥೆಯ ಭಾಷೆಯಿಂದ, ಕಥೆಯೊಳಗೆ ಅವ್ಯಕ್ತವಾದ ರೀತಿಯಲ್ಲಿ ಅಡಗಿದ ಜೀವನದರ್ಶನದಿಂದ ಹೊರಹೊಮ್ಮುತ್ತದೆ – ನಮ್ಮ ಮನಸ್ಸನ್ನು ತನ್ನಿಂದ ತಾನೇ ಮುಟ್ಟುತ್ತದೆ'. ಅವರ ಪ್ರಕಾರ ಕೆಲವು ಕಥೆಗಳು ಓದಿದಾಗ 'ಆಹ್' ಎಂಬ ಉದ್ಗಾರವನ್ನೂ ಮತ್ತೆ ಕೆಲವು 'ವಾಹ್' ಎಂಬ ಉದ್ಗಾರವನ್ನೂ ಹೊರಡಿಸುತ್ತವೆ. ಉದಾಹರಣೆಯಾಗಿ, ಅವರು ಅನಂತಮೂರ್ತಿಯವರ ಸಂಸ್ಕಾರವನ್ನು 'ಆಹ್' ಎಂಬ ಉದ್ಗಾರ ಹೊರಡಿಸುವ ಕಾದಂಬರಿಯೆಂದೂ, ಕುಸುಮಾಕರರ ನಾಲ್ಕನೆಯ ಆಯಾಮ 'ವಾಹ್' ಎಂಬ ಉದ್ಗಾರ ಹೊರಡಿಸುವ ಕಾದಂಬರಿಯೆಂದೂ ಉಲ್ಲೇಖಿಸಿದ್ದಾರೆ. ಮೌಲ್ಯಗಳ ನಿಷ್ಠುರ, ಜ್ವಲಂತ ಅನ್ವೇಷಣೆಯಿಲ್ಲದೇ 'ಆಹ್' ಎಂಬ ಉದ್ಗಾರ ಹೊರಡಿಸುವ ಸಾಮರ್ಥ್ಯ ಕಾದಂಬರಿಗೆ ಬರುವುದಿಲ್ಲ ಎಂಬ ಸೂಚನೆಯನ್ನೂ ಕೊಟ್ಟಿದ್ದಾರೆ. 'ಬಯಲು-ಬಸಿರು' ಓದಿದವರಲ್ಲಿ ಬಹಳಷ್ಟು ಮಂದಿ ವಿಮರ್ಶಕರು 'ವಾಹ್' ಎಂದಿದ್ದಾರೆ, ಕೆಲವರಾದರೂ 'ಆಹ್' ಅಂದಿದ್ದಾರೆ. ನಾನೂ ಕೂಡ ಸಂಸ್ಕಾರವನ್ನೋದಿದಾಗ 'ಆಹ್' ಎಂದಿದ್ದೆ. 'ಬಯಲು-ಬಸಿರು'ವಿನಂಥಾ ಒಂದು ಕಾದಂಬರಿಯನ್ನು ಆಗ ನಾನು ಓದಿದ್ದರೆ 'ಆಹ್' ಎಂಬ ಉದ್ಗಾರವನ್ನೇ ತೆಗೆಯುತ್ತಿದ್ದೆ ಅನಿಸುತ್ತಿದೆ. ಆದರೆ, ಈಗ? 'ಆಹ್' ಅನ್ನಬೇಕೋ 'ವಾಹ್' ಅನ್ನಬೇಕೋ ತಿಳಿಯದವನಾಗಿದ್ದೇನೆ. ಕುಸುಮಾಕರರ ಇತರ ಪುಸ್ತಕಗಳನ್ನೂ ಓದಬೇಕೆಂಬ ಆಸೆಯಂತೂ ಮನದಲ್ಲಿ ಮೂಡಿದೆ! ಸ್ವಲ್ಪ ತಡವಾಗಿಯಾದರೂ ಈ ಒಂದು ಶೈಲಿಯ ಪರಿಚಯವಾಯಿತಲ್ಲ ಎಂಬ ಸಮಾಧಾನವೂ ಆಗಿದೆ.

ಕುಸುಮಾಕರರು ತಮ್ಮ ಸಾಹಿತ್ಯದ ಮೂಲಕ ಓದುಗರಿಗೆ ಯಾವ ಸಂದೇಶವನ್ನೂ ಪ್ರಜ್ಞಾಪೂರ್ವಕವಾಗಿ ಕೊಡಲು ಯತ್ನಿಸದಿದ್ದರೂ, ಅಲ್ಲಲ್ಲಿ ಬರುವ ಹೇಳಿಕೆಗಳೇ ಅಮೋಘವಾದ ಸಂದೇಶಗಳಂತೆ ಅನಿಸುತ್ತವೆ. ಪುಟಪುಟದಲ್ಲೂ ಪುಟಿದಾಡುವ 'ಮಹಾವಾಕ್ಯ'ಗಳಿವೆ! ಅವನ್ನೆಲ್ಲಾ ಪುನಃ ಉದ್ಧರಿಸುವ ಅಗತ್ಯವಿಲ್ಲ. ಕಾದಂಬರಿಯನ್ನು ಓದುವಾಗ ಸವಿಯಬೇಕಾದವು ಅವು. ಅವರ ಮಂಡನೆಗಳ ಸಾರವೇನೆಂದರೆ, 'ನಾವು ಅಣುಯುಗದಲ್ಲಿ ಬದುಕುತ್ತಿದ್ದರೂ ಮಾನಸಿಕವಾಗಿ, ಭಾವುಕವಾಗಿ ನಾವು ಇನ್ನೂ ಶಿಲಾಯುಗದಲ್ಲಿಯೇ ಬಾಳುತ್ತಿದ್ದೇವೆ. ಪ್ರತಿಯೊಬ್ಬನೂ ತಾನೇ ನಿರ್ಮಿಸಿದ ಕಾರಾಗೃಹದಿಂದ ತಾನೇ ಹೊರಗೆ ಬರಬೇಕು. ಯಾರೂ ಯಾರಿಗೂ ಸ್ವಾತಂತ್ರ್ಯವನ್ನು ಕೊಡಲಾರರು'. ಪಾಶ್ಚಿಮಾತ್ಯ ಸಾಹಿತ್ಯ ಮತ್ತು ತತ್ವಗಳಿಂದ ಅವರು ಎಷ್ಟೇ ಪ್ರಭಾವಿತರಾಗಿದ್ದಾಗ್ಯೂ, ಅವರು ಪ್ರತಿಪಾದಿಸುವ ಸತ್ಯ, ಪೌರಸ್ತ್ಯ ದರ್ಶನಗಳಲ್ಲೂ ಧಾರಾಳವಾಗಿ ಕಂಡುಬರುತ್ತದೆ. ಕೊನೆಯಲ್ಲಿ ನನಗೆ ಸ್ವಾಮೀ ದಯಾನಂದ ಸರಸ್ವತಿಯವರು ಬರೆದ ಒಂದು ಲೇಖನದ ನೆನಪಾಯಿತು – 'ಸಮಸ್ಯೆಯೂ ನೀನೆ, ಪರಿಹಾರವೂ ನೀನೆ!', 'ನಮ್ಮ ನಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ನಾವೇ ಕಂಡುಹಿಡಿದುಕೊಳ್ಳಬೇಕು' ಎಂಬ ಪೌರಸ್ತ್ಯ ತಿಳಿವನ್ನು ಕೂಡ ಇವರ ಮುಖ್ಯಪಾತ್ರ ಪ್ರತಿನಿಧಿಸುತ್ತದೆ ಎಂದು ನನಗೆ ಅನ್ನಿಸಿತು. 'ನಾಗಪೆಡೆಯ ನೆರಳಲ್ಲಿ ಇರುವ ಕಪ್ಪೆಯು ತೆರದಿ ಕೂಗಿ ಬೇಡಿದರದು ನೀರಾಗಬಹುದುಂಟೆ?' ಎಂಬ ದಾಸವಾಣಿ ಕಾದಂಬರಿಯ ಉದ್ದಕ್ಕೂ ಕೇಳಿಬರುತ್ತದೆ!

**ಕೃತಿ ವಿವರ:** ಬಯಲು–ಬಸಿರು, ಕುಸುಮಾಕರ ದೇವರಗೆಣ್ಣೂರು, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೫, ಪು.೧೧೧

**ಆಧಾರ**

ಅವಗಾಹ (ಕುಸುಮಾಕರ ದೇವರಗೆಣ್ಣೂರು: ಅವಲೋಕನ, ಅಧ್ಯಯನ), ಸಂ. ಎಚ್.ಎಸ್. ರಾಘವೇಂದ್ರ ರಾವ್, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೮, ಪು. ೪೧೬

## ಪ್ರಸನ್ನರ ‘ಬಾಲಗೋಪಾಲ’ನತ್ತ ಒಂದು ಇಣುಕುನೋಟ

–ಮಾಲಾ ರಾವ್, ಸನ್ನಿವೇಲ್, ಕ್ಯಾಲಿಫೋರ್ನಿಯಾ

ಪ್ರಸನ್ನ ನಮ್ಮ ದೇಶದ ಹಿರಿಯ ರಂಗತಜ್ಞರಲ್ಲೊಬ್ಬರು (೧೯೫೧–). ನ್ಯಾಶನಲ್ ಸ್ಕೂಲ್ ಆಫ್ ಡ್ರಾಮದಿಂದ ಪದವಿ ಪಡೆದ ಇವರು ‘ಸಮುದಾಯ’ವೆಂಬ ಸಂಸ್ಥೆಯನ್ನು ಎಪ್ಪತ್ತರ ದಶಕದಲ್ಲಿ ಹುಟ್ಟು ಹಾಕಿ ಕನ್ನಡ ರಂಗಭೂಮಿಗೆ ಸೃಜನಾತ್ಮಕ ತಿರುವು ಕೊಟ್ಟರು. ನ್ಯಾಶನಲ್ ಸ್ಕೂಲ್ ಆಫ್ ಡ್ರಾಮಗಾಗಿ ಹಲವಾರು ನಾಟಕಗಳನ್ನು ನಿರ್ದೇಶಿಸಿರುವ ಪ್ರಸನ್ನರಿಗೆ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯೂ ಸಂದಿದೆ. ನೀನಾಸಂ, ರಂಗಮಂಡಲ, ರಂಗಾಯಣದಂಥ ಉತ್ತಮ ಸಂಸ್ಥೆಗಳ ಹಿಂದೆ ಪ್ರಸನ್ನರ ಪರಿಶ್ರಮ ಇದೆ. ಪ್ರಸ್ತುತ ಹೆಗ್ಗೋಡಿನಲ್ಲಿರುವ ಪ್ರಸನ್ನ ಅವರು ಕನ್ನಡದಲ್ಲಿ ರಚಿಸಿರುವ ನಾಟಕಗಳಲ್ಲಿ ಕೆಲವು– ಹದ್ದು ಮೀರಿದ ಹಾದಿ, ದಂಗೆಯ ಮುಂಚಿನ ದಿನಗಳು, ಜಂಗಮದ ಬದುಕು, ಒಂದು ಲೋಕದ ಕಥೆ, ಮಹಿಮಾಪುರ, ಉಲಿ. ‘ದೇಸಿ ಜೀವನ ಪದ್ಧತಿ’ ಅವರ ಸೃಜನೇತರ ಸಾಹಿತ್ಯ ಕೃತಿ. ‘ನೌಟಂಕಿ’ ಪ್ರಸನ್ನರ ಮೊದಲ ಕಾದಂಬರಿ. ‘ಬಾಲಗೋಪಾಲ’ ಪ್ರಸನ್ನರ ಎರಡನೆಯ ಕಾದಂಬರಿ. ಪ್ರಸನ್ನರು ಸುಮಾರು ಇಪ್ಪತ್ತೈದು ವರ್ಷ ಧ್ಯಾನಿಸಿ ಬರೆದಿರುವ ಈ ಕೃತಿ ಹಲವು ಆಯಾಮಗಳನ್ನೊಳಗೊಂಡು ವಿಶಿಷ್ಟವಾಗಿದೆ. ಈ ಕಾದಂಬರಿಯಲ್ಲಿ ನಾನು ಮೆಚ್ಚಿದ ಮೂರು ಮುಖ್ಯ ಪಾತ್ರಗಳ ಬಗೆಗೆ ಇಲ್ಲಿ ಸ್ಥೂಲವಾಗಿ ಹೇಳಬಯಸುತ್ತೇನೆ.

**ಕಥಾಸಾರಾಂಶ:**

ಕಥೆಯ ಸೂತ್ರಧಾರನೂ ಸಂಪಾದಕನೂ ಆದ ಬಲ್ಲಾಳನೆಂಬವನಿಗೆ ತುಮರಿ ಎಂಬ ಊರಿಗೆ ನಾಟಕ ಮಾಡಿಸಲು ಹೋದಾಗ ಸುಂದರ ವಿಧವೆ ಪರಿಮಳಳ ಅಚಾನಕ್ ಪರಿಚಯವಾಗುತ್ತದೆ. ಬರಹಗಾರನಾದ ಬಲ್ಲಾಳನ ಕವಿತೆಗಳನ್ನು ಓದಿ ನಾಟಕಗಳನ್ನು ನೋಡಿಬಲ್ಲ ಪರಿಮಳ ಹತ್ತು ವರುಷದ ಹಿಂದೆ ಇಲ್ಲವಾದ ತನ್ನ ಪತಿಯ ಹಸ್ತಪ್ರತಿಯೊಂದನ್ನು ಕೊಟ್ಟು ಅಭಿಪ್ರಾಯ ಹೇಳುವಂತೆ ಕೇಳುತ್ತಾಳೆ. ಅದು

ಅವಳ, ಅವಳಿಗೆ ತಂದೆ ಗೊತ್ತು ಮಾಡಿದ್ದ ವರನ ಮತ್ತು ಅವಳನ್ನು ಮೋಹಿಸಿದವನ ಕಥೆ. ತನ್ನೆಲ್ಲಾ ಫ್ಯಾಂಟಸಿಯೊಂದಿಗೆ ಕಥೆ ಬಲ್ಲಾಳನ ಮುಂದೆ ಬಿಚ್ಚಿಕೊಳ್ಳುತ್ತದೆ.

ಒಂದು ಕಾಲದಲ್ಲಿ ಪ್ರಶಾಂತತೆಗೆ ಪ್ರತೀಕವಾಗಿದ್ದ ಈಗ ವಿಪರೀತ ಆಧುನಿಕವಾಗಿ ಬೆಳೆದುಬಿಟ್ಟಿರುವ ಆ ಊರಿನಲ್ಲಿ ರಾಯರದೂ ಅವರ ಮಗಳು ಪರಿಮಳ ಅಲಿಯಾಸ್ ಪಮ್ಮಿಯದೂ ವಾಸ. ರಾಯರಿಗೆ ಪತ್ನಿ ವಿಯೋಗವಾಗಿದೆ. ಮಗಳಿಗೆ ಗಂಡು ಹುಡುಕಲು ಅಳಸಿಂಗಶರ್ಮನೆಂಬ ಕಂಪ್ಯೂಟರ್ ಯುಗದ ಬ್ರೋಕರ್ ಹತ್ತಿರ ಹೋದಾಗ ಅವನು ಆರಿಸಿ ತೋರಿಸುವ ವರನನ್ನು ರಾಯರು ಮಗಳಿಗೆ ಗೊತ್ತು ಮಾಡುತ್ತಾರೆ. ಮೂಲತಃ ನಾಚಿಕೆಯ ಸ್ವಭಾವದ ವರ ಏಳು ಅಡಿ ಒಂಬತ್ತು ಇಂಚು ಎತ್ತರದವನು. ವರನಿಗೆ ಆಟವೆಂದರೆ ಬೇಟೆ ಮತ್ತು ಹವ್ಯಾಸವೆಂದರೆ ಅಂತರ್ಧಾನವಾಗುವುದು. ಹಗಲು ಮಲಗುವುದು ಇರುಳು ಹೊರಡುವುದು ವರನ ಅಭ್ಯಾಸ. ಸದಾ ಬಣ್ಣದ ಮೋಡಗಳು ಆಕಾಶದಲ್ಲಿ ಕವಿದುಕೊಂಡಿರುವುದು, ದಿನವೂ ಭೂಕಂಪವಾಗುವುದು, ಹಾಗೆ ಭೂಕಂಪವಾದಾಗ ಮನೆಗಳ ಗೋಡೆಗಳಲ್ಲೆಲ್ಲಾ ಬಿರುಕಾಗಿ, ಆ ಬಿರುಕುಗಳಲ್ಲೆಲ್ಲಾ ಸಾವಿರ ಕಾಲಿನ ಬಣ್ಣ ಬಣ್ಣದ ಹುಳುಗಳು ಸೇರಿಕೊಂಡು, ರಾತ್ರಿ ಅವುಗಳು ಹೊರಬಂದು ಮಲಗಿದ ಮಕ್ಕಳ ಕಿವಿಯಲ್ಲಿ ಹರಿದು ಹೋಗಿ ಗೂಡು ಕಟ್ಟಿ ಮೊಟ್ಟೆ ಇಡುವ ಪರಿಪಾಠ ಆ ಊರಲ್ಲಿ. ಬಣ್ಣದ ಮೋಡಗಳು ದಿನವೂ ಸಂಜೆ ಸುರಿಸುವ ಬಿಳಿಪುಡಿಯನ್ನು ಸೇವಿಸಿ ಆಕಾಶದಲ್ಲಿ ಹಾರುತ್ತಾ ತರುಣಿಯರ ಕನಸಿನಲ್ಲಿ ಇಳಿಯುವುದು ಊರಿನ ತರುಣರು ಮಾಡಿಕೊಳ್ಳುವ ದುರಭ್ಯಾಸ. ಹಾಗೆ ಪಮ್ಮಿಯ ಕನಸಲ್ಲಿ ಮನಸಲ್ಲಿ ಇಳಿದು ಅವಳನ್ನು ಮೋಹಿಸಿದವನು ಶ್ರೀಕಾಂತ.

ಪಮ್ಮಿಯೂ ಸೊಗಸುಗಾರನಾದ ಮಾತುಗಾರನಾದ ಶ್ರೀಕಾಂತನ ಮಾತಿನ ಜಾಲಕ್ಕೆ ಮರುಳಾಗಿ ಹೋಗುತ್ತಾಳೆ. ಇತ್ತ ನಯ ನಾಜೂಕು ಅರಿಯದ ವರನು ಇವಳನ್ನು ಮೊದಲ ಬಾರಿ ನೋಡಬಂದಾಗ ಮುಜುಗರದಿಂದ ವಿಪರೀತ ಬೆಳೆದು, ಅವಳ ರೂಮಿನ ಕಿಟಕಿಯಲ್ಲಿ ಇಣುಕಿ ಇಲ್ಲದ ಅನಾಹುತ ಮಾಡಿಕೊಳ್ಳುತ್ತಾನೆ. ಒರಟನಾದ ವರನು ಪಮ್ಮಿಯನ್ನು ಪ್ರೀತಿಸಲಾರಂಭಿಸುತ್ತಾನೆ, ಅವಳಿಗಾಗಿ ಹಂಬಲಿಸು ತ್ತಾನೆ. ನಂತರ ಅವನು ಅವಳಿಗೆ ಪತ್ರ ಬರೆದು ಕ್ಷಮೆ ಯಾಚಿಸಿ, ಅವಳನ್ನು ಒಲಿಸಿಕೊಳ್ಳುವ ಪ್ರಯತ್ನವಾಗಿ ವಿಹಾರ ಕರೆದೊಯ್ದರೂ ವರನ ಮಿತಿ ಮೀರಿದ ಸೌಜನ್ಯದಿಂದಾಗಿ ಅವನು ಅವಳ ಮನವನ್ನು ಗೆಲ್ಲುವುದರಲ್ಲಿ ವಿಫಲನಾಗುತ್ತಾನೆ. ಇತ್ತ ಶ್ರೀಕಾಂತನನ್ನು ಛೀಮಾರಿ ಹಾಕಿ ಓಡಿಸಿಬಿಡುತ್ತೇನೆ ಎಂದು ಹಠತೊಟ್ಟು ಕೂತಿದ್ದ ಪಮ್ಮಿಯೂ ಅವನ ಮಾತುಗಾರಿಕೆಗೆ ಮನಸೋತು ಹುಡುಗಾಟದಿಂದ ಅವನನ್ನು ಸ್ಪರ್ಶಿಸಿ ಅವನಿಗೆ ವಾಸನಾಮಯವಾದ ದೇಹ ಬಂದುಬಿಡುತ್ತದೆ. ಈ ಬೆಳವಣಿಗೆಯಿಂದಾದ ದುರಂತದ ಮುಂದುವರಿಕೆಯೋ ಎಂಬಂತೆ ಹರೆಯದ ಅವರಿಬ್ಬರೂ ಕೂಡಿ ಮತ್ತೊಂದು

ಅನಾಹುತ ಮಾಡಿಕೊಳ್ಳುತ್ತಾರೆ. ಭಾರವಾದ ದೇಹದೊಂದಿಗೆ ಹಾರಲಾಗದ ಶ್ರೀಕಾಂತ ತನ್ನ ಮನೆಗೆ ಹೋಗದಿರುವಂತೆ ಹಠಮಾಡುವ ಪಮ್ಮಿ ಅವನನ್ನು ತನ್ನ ರೂಮಿನ ಕಪಾಟಿನಲ್ಲಿಟ್ಟು ಸಾಕಲಾರಂಭಿಸುತ್ತಾಳೆ.

ಇತ್ತ ಪಮ್ಮಿಯಿಂದ ತಿರಸ್ಕೃತಗೊಂಡ ವರನು ತನ್ನ ವಿಕಾರವನ್ನೆಲ್ಲಾ ಕಕ್ಕಿಕೊಂಡು ತನ್ನ ಗವಿಯಲ್ಲಿ ಮಲಗಿ ದೀರ್ಘ ನಿದ್ರೆಗೆ ಜಾರುತ್ತಾನೆ. ಅವನ ಬೃಹತ್ ದೇಹ ಸ್ವಲ್ಪ ಸ್ವಲ್ಪವೇ ಕರಗುತ್ತಾ ಬಂದು ಕೊನೆಗೆ ಇಲ್ಲವಾಗಿಬಿಡುತ್ತಾನೆ. ಆದರೆ, ಗವೀಶ್ವರಸ್ವಾಮಿಯಾಗಿ ಜನರಿಂದ ಪೂಜೆಗೊಳ್ಳುತ್ತಾನೆ. ಪಮ್ಮಿಯ ರೂಮಿನಲ್ಲಿ ತನ್ನ ಹದಿಮೂರು ದಿನಗಳ ವಾಸ್ತವ್ಯದ, ಅವಳೊಂದಿಗಿನ ತನ್ನ ಶಾಕಲಾಟದ ಬದುಕಿನ ಕಥೆಯನ್ನು ಶ್ರೀಕಾಂತ ಬರೆದಿಡುತ್ತಾನೆ, ನಂತರ ಹದಿಮೂರನೆಯ ದಿನ ಕಾಣದಾಗಿ ಬಿಡುತ್ತಾನೆ.

ಇದೆಲ್ಲಾ ನಡೆದು ಹತ್ತು ವರ್ಷವಾಗಿದೆ. ಪಮ್ಮಿಯೂ ರಾಯರೂ ಹಳ್ಕೆರೆ ಎಂಬ ಗ್ರಾಮದಲ್ಲಿ ತೋಟ ಕೊಂಡು ನೆಲೆಸಿದ್ದಾರೆ. ಪಮ್ಮಿ-ಶ್ರೀಕಾಂತರ ಮಗ ಗೋಪಾಲನೇ ಅವರಿಬ್ಬರಿಗೂ ಭರವಸೆ. ಓದುಗರಿಗೆ ಈ ಕಥೆ ಹೇಳುವ ಬಲ್ಲಾಳ, 'ನಾಟಕ ಮಾಡಿಸಲು ಬಂದವನು ನಾನು, ಈ ಊರಿಗೆ ಕೊಟ್ಟಿದ್ದೆಷ್ಟು ಪಡೆದಿದ್ದೆಷ್ಟು' ಎಂದು ಆಲೋಚಿಸುತ್ತಾ ಮರಳುತ್ತಾನೆ.

## ಮೂರು ಮುಖ್ಯ ಪಾತ್ರಗಳು:

**ಪಮ್ಮಿ ಯಾನೆ ಪರಿಮಳ:**

ಸೂತ್ರಧಾರ ಬಲ್ಲಾಳನ ಕಣ್ಣಿಗೆ ಮೊದಲ ಭೇಟಿಯಲ್ಲಿ ಪರಿಮಳ ಕಾಣುವುದು ಪ್ರಶಾಂತ ಸಾಗರದಂತೆ ಶಾಂತವಾಗಿ ಹಾಗೂ ನಿಗೂಢವಾಗಿ. ಆದರೆ ಸಾಗರದಾಳದಲ್ಲಿ ಜ್ವಾಲಾಮುಖಿಯೇ ಇತ್ತು, ಇದೆ ಎಂದು ಬಲ್ಲಾಳನಿಗೂ ಓದುಗನಿಗೂ ಗೊತ್ತಾಗುವುದು ಕಥೆ ಪೂರ್ತಿಯಾಗಿ ಅನಾವರಣವಾದ ನಂತರವೇ. 'ಪತಿ ಬದುಕಿಲ್ಲ ಎಂದು ಹೇಳುವಾಗ ಮಾತಿನಲ್ಲಿ ವಿಷಾದದ ಛಾಯೆಯಾಗಲೀ ದೈನ್ಯತೆಯ ಭಾವವಾಗಲೀ ಇರಲಿಲ್ಲ, ಶಾಂತವಾಗಿ ಹೇಳಬೇಕಾದ್ದನ್ನು ಹೇಳಿದಳು' ಎನ್ನುವ ಬಲ್ಲಾಳನ ಮಾತನ್ನು ಸುಮ್ಮನೆ ಓದಿಕೊಂಡು ಮುಂದಕ್ಕೆ ಹೋದರೂ ಕೊನೆಯಲ್ಲಿ 'ತೂಕದ ಹೆಣ್ಣು ಅನ್ನಿಸಿತು' ಅಂತ ಬಲ್ಲಾಳನಿಗೆ ಅನ್ನಿಸಿದ ಹಾಗೆ ಓದುಗನಿಗೂ ಅನ್ನಿಸುವುದು ಸುಳ್ಳಲ್ಲ. ಮಿಕ್ಕವರೆಲ್ಲಾ ಬೆಂಗಳೂರಿಗೆ ಓಡಿ ಹೋದರೆ, ಹಳ್ಳಿಗೆ ಬಂದು ಬದುಕಿ ಜಯಿಸಿದವಳು ಪರಿಮಳ. ಅವಳು ಗೆದ್ದಿದ್ದು ಕೇವಲ ಹಳ್ಳಿಗರ ಮನಸ್ಸನ್ನಲ್ಲ, ಇಡೀ ಜೀವನವನ್ನ- ಹಳೆಯದೆಲ್ಲವನ್ನೂ ಹೊಸದಾಗಿ ಒಗ್ಗಿಸಿಕೊಂಡು ತನ್ನದಾಗಿಸಿಕೊಂಡು ಛಂದವಾಗಿ ಬದುಕಿ!

ತಾಯಿ ಇಲ್ಲದ ಹತ್ತೊಂಬತ್ತರ ಹುಡುಗಿ ಪರಿಮಳ, ತಂದೆಗೆ ಮುದ್ದಿನ ಮಗಳು. ತಾಯಿಯ ಅನುಪಸ್ಥಿತಿಯಲ್ಲಿ ಮನೆಯನ್ನು ಸಮರ್ಥವಾಗಿ ನಡೆಸುತ್ತಿದ್ದವಳು. ಅಪ್ರತಿಮ ಸುಂದರಿಯಾದ ಅವಳ ರೂಪು, ಕೆಲಸಗಳಲ್ಲಿ ಅವಳ ಅಚ್ಚುಕಟ್ಟುಗಳನ್ನು ನೋಡಿದ ಶ್ರೀಕಾಂತ ಅವಳಿಗಾಗಿ ಹಾರುತ್ತಾ ಅವಳ ಮನೆಯನ್ನೂ, ಮನವನ್ನೂ, ಕನಸನ್ನೂ ಪ್ರವೇಶಿಸುವನು. ಪರಿಮಳೆಯೂ ಸೊಗಸುಗಾರನಾದ ಮಾತುಗಾರನಾದ ಅವನ ತುಂಟಾಟಕ್ಕೆ ಮನಸೋತುಬಿಡುವಳು–ತನಗೆ ಈಗಾಗಲೇ ಮದುವೆ ಗೊತ್ತಾಗಿದೆ, ಛತ್ರ ಬುಕ್ಕಾಗಿದೆ, ಲಗ್ನ ಪತ್ರಿಕೆ ರೆಡಿಯಾಗಿದೆ, ವರ ಕಾಯುತ್ತಿದ್ದಾನೆ, ಎಂದೆಲ್ಲಾ ಗೊತ್ತಿದ್ದರೂ! ಅಲ್ಲಿಂದ ಪರಿಮಳೆಯ ಬದುಕಿನಲ್ಲಿ ವಿಧಿಯ ಆಟ ಶುರುವಾಗುತ್ತದೆ. ಆಧುನಿಕತೆಯ ಕುರುಡು ಓಟದಲ್ಲಿ ಸಿಲುಕಿ ಮಹತ್ವಾಕಾಂಕ್ಷಿಯಾಗಿ ರಾಕ್ಷಸರೂಪಿಯಾದ ಆದರೆ ನಾಚಿಕೆಯ ಸ್ವಭಾವದ, ಅವಳನ್ನು ಪರಿಪೂರ್ಣತೆಯ ಸಂಕೇತವಾಗಿ ಕಾಣುವ ವರನ ಪ್ರೀತಿಯನ್ನು ಗಳಿಸಿಕೊಳ್ಳಲೋ ಅಥವಾ ಕಾಡುವ, ಕಚಗುಳಿ ಇಡುವ, ಮುದ್ದು ಮುದ್ದು ಮಾತಾಡುವ, ಮನಸಳೆದು ಬಿಟ್ಟಿರುವ ಮೋಹನಾಂಗ ಶ್ರೀಕಾಂತನನ್ನು ಉಳಿಸಿಕೊಳ್ಳಲೋ ಎಂಬ ದ್ವಂದ್ವ ಅವಳನ್ನು ಕಾಡಲಾರಂಭಿಸುತ್ತದೆ. ತನ್ನ ಪ್ರೇಮಕ್ಕಾಗಿ ಬೇಡುವ ಕಾಡುವ ಈ ಇಬ್ಬರ ಮಧ್ಯೆ ನಲುಗಿ ಹೋಗುತ್ತಾಳೆ ಪಮ್ಮಿ.

ನಾನು ಒಂಟಿ ನಾನು ಒಂಟಿ ಎಂಬ ಪಮ್ಮಿಯ ಸೂಚ್ಯವಾದ ಮಾತಿಗೆ ದನಿಗೂಡಿಸುವ ಶ್ರೀಕಾಂತನೆಂಬ ಮೋಹನಾಂಗನು ಅವಳ ಕನಸಿನಲ್ಲಿ ಪ್ರವೇಶಿಸಿ ಎಲ್ಲೆಂದರಲ್ಲಿ ಅವಳ ಸರಿಸಮ ನಡೆದು ನಗುಮೊಗದಿಂದ ಮೋಹಿಸಿ, ಏಳು ಸಮುದ್ರ ಏಳು ಕೋಟೆ ಏಳು ದ್ವಾರಗಳನ್ನು ದಾಟಿ ಅವಳನ್ನು ಅಪಹರಿಸಲೆಂದೇ ಅವತರಿಸಿದ ರಾಕ್ಷಸನನ್ನು ಸಂಹರಿಸಿ ಅವಳನ್ನು ಗೆದ್ದುಬಿಡುವನು. ಕನಸಲ್ಲಿ ಬಂದು ಮೋಹಿಸಿದ ಸುಂದರನ ಗುಂಗಲ್ಲೇ ಬೆಳಗ್ಗೆ ಏಳುವ ಅವಳ ಮನೆಗೆ ವರನು ಅಂದು ಮೊದಲ ಬಾರಿ ಬರುವವನಿದ್ದನು. ತನ್ನ ಮಿತಿಮೀರಿದ ಮುಜುಗರದಿಂದಾಗಿ ದೈಹಿಕವಾಗಿ ಬೆಳೆಯಲಾರಂಭಿಸುವ ವರನನ್ನು ಅಕಸ್ಮಾತ್ ಕಿಟಕಿಯಲ್ಲಿ ನೋಡಿದಾಗ ಅವಳಿಗೆ ಕಂಡದ್ದು ಕಿಟಕಿಯ ಅಷ್ಟೂ ಜಾಗವನ್ನು ಆವರಿಸಿ ಸರಳುಗಳಾಚೆಯಿಂದ ಒಳಗಿಣುಕುತ್ತಿದ್ದ ಕರಿಯ ರಾಕ್ಷಸ ಮುಖ! ಆ ಮುಖ ನೋಡಿ ತಿಳಿವು ತಪ್ಪಿ ಬೀಳುವಳು ಪಮ್ಮಿ.

ತನ್ನಿಂದ ಆದ ಗೊಂದಲವನ್ನು ಸರಿಪಡಿಸಬೇಕೆಂದು ಆಹೊತ್ತಿಗಾಗಲೇ ಅವಳ ಪ್ರೇಮದಲ್ಲಿ ಸಿಲುಕಿದ್ದ, ಅವಳನ್ನು ಹೂವಿನಂತೆ ಕಾಪಾಡಬೇಕೆಂಬ ಮಹದಾಸೆಯಿದ್ದ ವರನು ಪತ್ರ ಬರೆಯುತ್ತಾನೆ. ಪತ್ರದುದ್ದಕ್ಕೂ ಪದೇ ಪದೇ ಹಿಂದಿನ ಬಾರಿ ಆದ ಅನಾಹುತಕ್ಕೆ ಕ್ಷಮೆ ಕೇಳಿರುತ್ತಾನೆ. ಅದು ಅವಳ ಜೀವನದ ಮೊದಲ ಪ್ರೇಮ ಪತ್ರ! ಪಮ್ಮಿ ಪತ್ರವನ್ನು ತೀವ್ರ ಆಸಕ್ತಿಯಿಂದ ೨-೩ ಬಾರಿ ಓದುತ್ತಾಳೆ. ಅದರಲ್ಲಿ ಪ್ರೀತಿಯ ಸೂಚನೆಗಾಗಿ ತಡಕಾಡುತ್ತಾಳೆ. ಒಂಟಿತನದ ಮಾತುಗಳು, ಹೊಗಳಿಕೆಯ ನುಡಿಗಳಿಗಾಗಿ

ಹುಡುಕುತ್ತಾಳೆ. ಹೋಗಲಿ, ಆತನ ಕೈಬರಹದಲ್ಲಾದರೂ ಅವನ ವ್ಯಕ್ತಿತ್ವ ಕಾಣಬಹುದೋ ಎಂದು ಅರಸುತ್ತಾಳೆ. ವರನಿಗೆ ನಾಜೂಕು ಬಾರದು. ಕೋರ್ಟುಗಳಲ್ಲಿ ಮಹಜರುಗಳಿಗೆ ಬಳಸಬಹುದಾದ ಭಾಷೆ ಬಳಸಿ ಬರೆದ ಇಡೀ ಪತ್ರವನ್ನು ಅವನು ಟೈಪ್ ಮಾಡಿ ಕಳುಹಿಸಿರುತ್ತಾನೆ (ಇ-ಮೈಲ್‌ನಲ್ಲಿ ಪ್ರೇಮ ಯಾಚಿಸುವ ಆಧುನಿಕ ತರುಣರೇ ಎಚ್ಚರಿಕೆ!). ಆದರೆ, ವರನ ಉತ್ಕಟ ಪ್ರೀತಿಯು ಅವಳ ಅರಿವಿಗೆ ಬಾರದೆ ಹೋಗಿದ್ದು ವಿಧಿಯ ಆಟ! ಅವನು ನಿಜವಾಗಿ ಅವಳನ್ನು ಪ್ರೀತಿಸಿದ್ದನು, ಅವಳಿಗಾಗಿ ಹುಚ್ಚನಾಗಿ ಹೋಗಿದ್ದನು, ಅವಳ ಸಲುವಾಗಿ ಬದಲಾಗಲು ಸಿದ್ಧವಿದ್ದನು. ಎಲ್ಲಕ್ಕಿಂತ ಮಿಗಿಲಾಗಿ, ಅವನು ಒಬ್ಬ ಸಭ್ಯ ಮನುಷ್ಯನಿದ್ದನು. ಆದರೆ, ಆತನ ಸಂವಹನ ಕಲೆಯು ತೀರಾ ಅಸಮರ್ಥವಾಗಿತ್ತು. ಇಂಥ ವರನಿಗೆ ಪಮ್ಮಿ ದಕ್ಕದೇ ಹೋಗಿದ್ದು ಅವಳ ದುರಂತ. ತನ್ನ ಅಪ್ಪನ ಮುಗ್ಧತೆ ಕಂಡು ಪ್ರೀತಿ ಉಕ್ಕಿಬಂದು ಗೊಳ್ಳನೆ ನಕ್ಕುಬಿಡಬಹುದಾದ ಪಮ್ಮಿಗೆ ವರನ ಮುಗ್ಧತೆ ಕಂಡು ಪ್ರೀತಿ ಉಕ್ಕುವ ಎಲ್ಲಾ ಸಾಧ್ಯತೆಗಳಿದ್ದವು. ಆದರೆ ವಿಧಿ ಅವಳ ಬದುಕಲ್ಲಿ ತಂದು ನಿಲ್ಲಿಸಿದ ಘಟನಾವಳಿಗಳು ಅದಕ್ಕೆ ಆಸ್ಪದ ಕೊಡದೆಹೋದವು.

ಪಮ್ಮಿ ಪ್ರಾಮಾಣಿಕವಾಗಿ ವರನನ್ನು ಇಷ್ಟಪಡುವ ಪ್ರಯತ್ನ ಮಾಡಿದಳು. ಮೊದಲ ನೋಟದಲ್ಲೇ ಅವನ ಆಕೃತಿ ವಿಪರೀತ ಎನ್ನಿಸಿದರೂ ಅವಳಿಗೆ ಹಿಡಿಸಿತ್ತು. ಅವನ ಒಳವ್ಯಕ್ತಿತ್ವವೂ ಅಷ್ಟೇ ಭಿನ್ನವಾಗಿದೆಯೇ ಎಂದು ಕಂಡುಕೊಳ್ಳುವ ಆಸೆಯಿಂದಲೇ ಅವನೊಂದಿಗೆ ವಿಹಾರ ಹೊರಡಲು ಸಿದ್ಧಳಾದಳೇ ವಿನಃ ತಂದೆಯ ಬಲವಂತದಿಂದ ಅಲ್ಲ. ಸಾಧ್ಯವಾಗುವುದಾದರೆ ಅವನಲ್ಲಿ ಅನುರಕ್ತಳಾಗಲು ಸಿದ್ಧಳಿದ್ದೇ ಅವಳು ವರನೊಂದಿಗೆ ಹೊರಟಿದ್ದು. ಅಂದಿನ ವಿಹಾರದ ಬಗ್ಗೆ ಅವಳಿಗೆ ಮೋಹಕ ನಿರೀಕ್ಷೆ ಇತ್ತು. ವಿಹಾರದ ನಡುವೆ ಅವನು ಮುತ್ತಿಡುತ್ತೇನೆ ಎಂದು ಹಠ ಮಾಡಿದರೆ ಒಪ್ಪಿಕೊಂಡುಬಿಡುತ್ತೇನೆ ಎಂದು ಮನಸ್ಸಿನಲ್ಲಿ ಅಂದುಕೊಂಡು, ಹಲವಾರು ಬಾರಿ ಯೋಚಿಸಿ, ಮೈ ಬಿಸಿ ಮಾಡಿಕೊಂಡಿದ್ದಳು. ಆದರೆ ವರನಿಗೆ ನಾಚಿಕೆ. ಆತ ಪಮ್ಮಿಯ ಕೈ ಹಿಡಿಯುವಷ್ಟು ಸಹಿತ ಮುಂದುವರಿಯಲಿಲ್ಲ. ಅವನು ಸಭ್ಯನೂ ಪ್ರಾಮಾಣಿಕನೂ ಮುಗ್ಧನೂ ಆಗಿ, ಪಮ್ಮಿಯ ಕಣ್ಣಲ್ಲಿ ಕಣ್ಣಿಟ್ಟು ಸಹ ನೋಡಲಿಲ್ಲ. ಅವಳನ್ನು ಒಮ್ಮೆಯೂ ತಾಕಲಿಲ್ಲ. ವರನ ಸಂಕೋಚವು ಅವಳಿಗೆ ಅತಿ ಎನ್ನಿಸುತ್ತದೆ. ಪಮ್ಮಿ ನಯನಾವತಿ ನದಿಯಲ್ಲಿ ಕಾಣುವ ನೇರಳೆ ಬಣ್ಣದ ಹೂಗಳು, ಮತ್ತದರ ಅತಂತ್ರ ಸ್ಥಿತಿ ಇಂದಿನ ಆಧುನಿಕರ ಜೀವನದ ರೂಪಕವಾಗಿ ಕಾಣಬರುತ್ತದೆ. ಪಮ್ಮಿ ಪ್ರಶ್ನಿಸುತ್ತಾಳೆ– 'ಬದುಕೆಂದರೆ ಅಷ್ಟೇಯೆ? ಅವಸರವಾಗಿ ಹೂ ಬಿಟ್ಟು ತೇಲಿದರಾಯಿತೆ? (ವರ ಬಹಳ ಅವಸರದವನು) ನೆಲೆ ಬೇಡವೆ? ನೆನಪು ಬೇಡವೆ?' ತಲೆಬುಡ ಇಲ್ಲದಿದ್ದರೂ 'ಹೂ ಅಂದವಾಗಿ ಅರಳಿದೆ ಅಲ್ಲವೇ' ಎನ್ನುತ್ತಾಳೆ.

ವರನ ಜೊತೆ ವಿಹಾರ ಹೋಗಿಬಂದ ರಾತ್ರಿ ತನ್ನ ಮನ ದೋಚಿದ ಸುಂದರನಿಗಾಗಿ ಕಾಯುತ್ತಾಳೆ ಪಮ್ಮಿ. ಅವ ಬಂದೇ ಬರುತ್ತಾನೆಂಬ ನಂಬಿಕೆಯಿಂದ, 'ಬರಲಿ! ಬೈದು ತರಾಟೆಗೆ ತೆಗೆದುಕೊಳ್ಳುತ್ತೇನೆ. ಇನ್ನೆಂದೂ ನನ್ನ ಕನಸಲ್ಲಿ ಬರಬೇಡವೆಂದು ಕಡ್ಡಿ ತುಂಡು ಮಾಡಿದಂತೆ ಹೇಳುತ್ತೇನೆ' ಎಂಬ ಗಟ್ಟಿ ನಿರ್ಧಾರ ತೆಗೆದುಕೊಂಡು ಕೂತಿದ್ದಳವಳು. ಅವನು ಜಾಸ್ತಿ ಕಾಯಿಸದೇ ಬಂದುಬಿಟ್ಟಿದ್ದಿದ್ದರೆ ಹಾಗೆಯೇ ಮಾಡುತ್ತಿದ್ದಳೇನೋ! ತನ್ನೆಲ್ಲಾ ಏಕಾಗ್ರತೆಯಿಂದ ಅವಳು ಜಗಳದ ತಯಾರಿ ನಡೆಸಿದ್ದಳು. ಅವನು ಅವಳನ್ನು ಕಾಯಿಸಿ ಕಾಯಿಸಿ ಬಂದ. ಅದೂ ಹೇಗೆ ಬಂದ? ಆಗ ತಾನೇ ಅರಳುವ ಮೊಗ್ಗಿನಂತೆ... ಮಿನುಗುವ ಚುಕ್ಕೆಯಂತೆ... ಮೊದಲು ಮೊಗ್ಗು ಅರಳುವ ಕ್ರಿಯೆಯಂತೆ ಆರಂಭವಾಗಿದ್ದು ಕೊನೆಗೆ ಚುಕ್ಕೆಯೊಂದು ಅರಳಿ ಅರಳುತ್ತಿರುವ ಚುಕ್ಕೆಯೇ ಮನುಷ್ಯನ ರೂಪ ತಾಳಿ ಅವಳ ಎದುರಿಗೆ ತೇಲಿ ಬಂತು (ವರನನ್ನು ಅವಳು ಕಾಣುವ ದೃಶ್ಯಕ್ಕೂ ಇದಕ್ಕೂ ವ್ಯತ್ಯಾಸ ಗಮನಿಸಿ). ಅವನು ರೂಪುಗೊಳ್ಳುವ ಆ ಅನುಪಮ ಘಟನೆಗೆ ಅವಳು ಸಾಕ್ಷಿಯಾಗಿದ್ದಳು. ಸಾಕಲ್ಲವೇ ಇಷ್ಟು ರಮ್ಯತೆ ಹತ್ತೊಂಬತ್ತರ ಹುಡುಗಿ ಮೈಮರೆಯಲು?

'ಯಂತ್ರಗಳು ಸೋಮಾರಿಗಳಲ್ಲ. ಅವು ದುಡ್ಡು ತಿಂದು ಓಡಿ ಹೋಗುವುದಿಲ್ಲ. ಮನುಷ್ಯರಿಗಿಂತ ಯಂತ್ರಗಳೇ ಹೆಚ್ಚು ನಂಬಿಕೆಗೆ ಅರ್ಹ' ಎಂಬ ನಿಲುವಿನ ಒರಟು ಮನುಷ್ಯನನ್ನು ಕನಸಲ್ಲಿ ತೇಲಿ ಬರುವ, ನಾಟಕದ ಪಾತ್ರದಂತೆ ರೊಮ್ಯಾಂಟಿಕ್ ಆಗಿ ಮಾತಾಡುವ, ಬೆಳಕಿನ ಕೆಂಪು ಮೂಡುವಾಗ ಮುತ್ತು ಬೇಕೆಂದು ಪೀಡಿಸುವ ಸುಂದರಾಂಗನಿಗೆ ಹೋಲಿಸಿಯೋ ಹೋಲಿಸದೆಯೋ ಪಕ್ಕಕ್ಕೆ ಸರಿಸಿಬಿಡುತ್ತಾಳೆ ಪರಿಮಳ. ಅವನು ತನ್ನೆದುರೇ ರೂಪುಗೊಂಡ ಪ್ರಕ್ರಿಯೆಯನ್ನು ತನ್ನೆರಡು ಕಣ್ಣುಗಳಲ್ಲಿ ಸೆರೆಹಿಡಿಯುವ ಉತ್ಸಾಹದಲ್ಲಿ, ಸಂಭ್ರಮದಲ್ಲಿ ಅವಳ ಸಿಟ್ಟು-ಸೆಡವು, ವಾದ-ವಿವಾದ ಎಲ್ಲವೂ ಹಿಂದಾಗಿ ಹೋದವು. ಅವಳಲ್ಲುಳಿದದ್ದು ಮುಗ್ಧವಾದ ಸಂಭ್ರಮ ಮತ್ತು ಅಪರಿಮಿತ ಸಂತೋಷ ಮಾತ್ರ. ತೇಲುವ ಅವನನ್ನು ನೋಡುತ್ತಾ ನೋಡುತ್ತಾ ಲೋಕವನ್ನೇ ಮರೆತು ಬಿಟ್ಟಳು ಪರಿಮಳ. ಬೇಸಿಗೆಯ ತಂಗಾಳಿ ಅವನನ್ನು ತರಗೆಲೆಯಂತೆ ತೂರಿ ತಲೆಕೆಳಗು ಮಾಡುತ್ತಿರುವಾಗ ಮೊದಮೊದಲು ಅವನನ್ನು ನೋಡಿ ನಕ್ಕವಳು ಕೊನೆಗೆ ಅವನನ್ನು ಹಿಡಿದು ಭದ್ರವಾಗಿ ಭೂಮಿಗೆ ಊರಿದಳು. ಅವಳು ಮುಗ್ಧತನದಲ್ಲಿ ಕೈಗೊಂಡ ಕೆಲಸದ ಪರಿಣಾಮ ಮಾತ್ರ ಭಯಂಕರ. ಈ ಸಂಕರದಿಂದ ಅವಳಷ್ಟೇ ನಿಜವಾಗಿ ವಾಸನಾಮಯನಾಗಿ ಕಲ್ಲಿನಲ್ಲಿ ಕಡೆದಷ್ಟೇ ನಿಖರವಾಗಿ ರೂಪುಗೊಂಡನು ಶ್ರೀಕಾಂತ. ಹೆದರಬೇಡ ಎಂದು ಹೇಳುತ್ತಲೇ, ತಾನು ಹೆದರುತ್ತಲೇ ಎಲ್ಲವನ್ನೂ ಮೀರಿದವನಂತೆ ಅವಳನ್ನು ಕೂಡಿದನು. ಇದರಲ್ಲಿ ಕಾಲು ಭಾಗದಷ್ಟೂ ಧೈರ್ಯ ವರನಿಗೆ ಇರದಿದ್ದುದು ದುರಂತವಲ್ಲದೆ ಇನ್ನೇನು? ವರ ಆಕಾಶದಲ್ಲಿ ಹಾರಿಬಂದ ಬೀಡಾಡಿಯಲ್ಲ, ಅವಳಪ್ಪ ನಿಶ್ಚಯಿಸಿದ್ದ, ಅವಳು ಒಪ್ಪಿದ್ದ ಹುಡುಗ!

ಶ್ರೀಕಾಂತನನ್ನು ಕೂಡಿದ ಮೇಲೆ ತನ್ನ ನೈತಿಕ ಅಧಃಪತನ ಅವಳನ್ನು ಬಹುವಾಗಿ ನೋಯಿಸಿತು. ಯಾವುದೇ ಭಾರತೀಯ ಹುಡುಗಿಯನ್ನಾದರೂ ಇಂಥದ್ದು ನೋಯಿಸುವುದೇ. ಆದರೆ ಅವಳು ಜೀವನವಿಡೀ ನೋಯುತ್ತಾ ಕೂಡಲಿಲ್ಲ. ಹೇಡಿಯಂತೆ ಆತ್ಮಹತ್ಯೆ ಮಾಡಿಕೊಳ್ಳಲಿಲ್ಲ. ನೋವು ನಿರಾಸೆಗಳನ್ನು ಕೊಡವಿ ಎದ್ದು ಬದುಕನ್ನು ಎದುರಿಸಿದಳು. ಅದು ಪಮ್ಮಿಯ ಪಾತ್ರದ ನಿಜ ಸತ್ವ. ಕೇವಲ ೧೯ ವರ್ಷದ ಹುಡುಗಿ ಅವಳು ತನ್ನನ್ನು ಸಂಭಾಳಿಸಿಕೊಂಡದ್ದಲ್ಲದೇ ಅವನನ್ನೂ ಸಮಾಧಾನ ಮಾಡಿದಳು. ತನ್ನ ಬದುಕಿನ ಗತಿಯನ್ನೇ ಬದಲಿಸಬಲ್ಲ ನಿರ್ಧಾರ ಕೈಗೊಂಡಳು. ಹತ್ತೊಂಬತ್ತರ ಹುಡುಗಿಗೆ ಆ ಹೊತ್ತು ಎಷ್ಟು ಲೋಕಜ್ಞಾನವಿತ್ತೋ ಅಷ್ಟೇ ಅವಳ ನೆರವಿಗೆ ಬಂದದ್ದು. ಅಲ್ಲದೇ ಅವಳಿಗೆ ಸಮಯವಾದರೂ ಇದ್ದಿದ್ದು ಎಷ್ಟು? 'ನೀನೀಗ ಎಲ್ಲಿಗೂ ಹೋಗಬೇಕಾದ್ದಿಲ್ಲ. ನನ್ನ ಮದುವೆಯಾಯಿತು ಎಂದೇ ತಿಳಿಯುತ್ತೇನೆ. ಮದುವೆಯಾದಾಗ ಚಿಂತಿಸಲಿಕ್ಕೇನಿದೆ ಹೇಳು, ಸಂತೋಷಪಡುವುದು ಬಿಟ್ಟು?' ಎಂದು ನಗುವ ಪರಿಮಳ ಮುಂದೆ ತಾನು ಗಟ್ಟಿ ವ್ಯಕ್ತಿತ್ವವಾಗಿ ರೂಪುಗೊಳ್ಳಲಿರುವ ಸೂಚನೆ ನೀಡುತ್ತಾಳೆ! 'ನನಗೆ ಮತ್ತೊಂದು ಮದುವೆಯಾಗಬೇಕಿತ್ತು. ಅದಕ್ಕಿಂತ ಮೊದಲೇ ಇದು ಆಯಿತು. ಖಾಸಗಿಯಾಗಿ ಆಯಿತು; ಅಷ್ಟೇ ವ್ಯತ್ಯಾಸ...' ಎಂದು ನಿಜವಾದ ಧೈರ್ಯವಿಲ್ಲದೆ, ಧೈರ್ಯ ತಂದುಕೊಳ್ಳುವುದಾಗಿ ನಿರ್ಧರಿಸಿ ಅವಳು ತತ್ವದ ಮಾತುಗಳನ್ನಾಡುತ್ತಾಳೆ! ಹೀಗೆ ಸುಖದ ಮಾತಾಡುತ್ತಲೇ ಸಂಕಟಪಡುತ್ತಾಳೆ. 'ನನಗದು ಅನಾಹುತವಲ್ಲ, ನನ್ನ ನಿಯತಿ' ಎನ್ನುತ್ತಾಳೆ. 'ನೀನು ನನ್ನ ಹೊಣೆ' ಎಂದು ಅವಳ ಜೀವನದ ಬಹು ದೊಡ್ಡ ಹೊಣೆಯನ್ನು ಖಾಲಿ ಬೀಳಬಹುದಾದ ತನ್ನ ಹಣೆಯಲ್ಲಿ ತಾನೇ ಬರೆದುಕೊಳ್ಳುತ್ತಾಳೆ. ಅವಳು ಹಠ ಮಾಡದೆ ಅವನನ್ನು ಬಿಟ್ಟಿದ್ದರೆ ಇಬ್ಬರೂ ಉಳಿದುಕೊಳ್ಳುತ್ತಿದ್ದರೇನೋ. ವಾದ ಮಾಡಲಾರದಷ್ಟು ಬಳಲಿದ್ದ ಶ್ರೀಕಾಂತನಿಗೆ ಅವಳ ಆರೈಕೆ, ಮುದ್ದು, ಮೈದಡವುವುದು ಬೇಕಾಗಿತ್ತು. ಕೊನೆಗೂ ಅವನ ದೌರ್ಬಲ್ಯವೇ ಮೇಲುಗೈ ಸಾಧಿಸಿ ಅವಳು ಹೇಳಿದ್ದಕ್ಕೆಲ್ಲಾ ಒಪ್ಪಿಕೊಂಡು ಅಲ್ಲೇ ಉಳಿದನು; ಅನಾಹುತ ಮಾಡಿಕೊಂಡನು.

ಕುಟ್ಟಿ ಮಾಸ್ತರರ 'ನೀನು ಧೈರ್ಯವಂತೆ ತಾಯಿ, ಸರಿಯಾದುದನ್ನೇ ಮಾಡುತ್ತೀಯ. ಹೋಗಿ ಬಾ' ಎಂಬ ಮಾತನ್ನೇ ಕವಚದಂತೆ ಧರಿಸಿಕೊಂಡು ಶ್ರೀಕಾಂತನ ಮನೆಗೆ ಬಂದರೆ ಅಲ್ಲಿ ಮತ್ತೊಂದು ಆಘಾತವಾಗುತ್ತದೆ ಅವಳಿಗೆ. ಅದು ಅವಳ ತಂದೆಯ ಪರಮಾಪ್ತ ಸ್ನೇಹಿತ ಮೂರ್ತಿಯವರ ಮನೆ! ಲಂಗ ಹಾಕುವ ಚೋಟು ಹುಡುಗಿ ಇವರ ಮನೆಗೆ ಬಂದಿದ್ದು, ಈಗಲೂ ಅದೇ ಮನೆ; ಏನೂ ಬದಲಾಗಿಲ್ಲ. 'ಆದರೂ ಎಲ್ಲಾ ಬದಲಾಗಿ ಹೋಯಿತೇ?' ಎಂದು ಮರುಗುತ್ತಾಳೆ. ತಾನು ಆ ಮನೆಯ ಸೊಸೆ. ಹಾಗೆಂದು ಹೇಳಿಕೊಳ್ಳುವಂತಿಲ್ಲ. ಮೊದಲ ಬಾರಿ ಸೊಸೆಯಾಗಿ ಮನೆಯ ಬಳಿ ಬರುತ್ತಲೇ ಗಂಡನಾದ ವ್ಯಕ್ತಿ ಸತ್ತು ಬಿದ್ದಿದ್ದಾನೆ. ಪಕ್ಕದ ಮನೆಯ ಮುದುಕಿ ತನ್ನ

ಅನುಕಂಪದ ಪರಧಿಯೊಳಗೆ ಇವಳನ್ನು ಸೇರಿಸಿಕೊಂಡು 'ಚಿನ್ನದಂಥ ಹುಡುಗ... ಸಾಯುವಂಥಾ ವಯಸ್ಸೇ' ಎನ್ನುತ್ತಾ, 'ನೀನು ಯಾರು? ಅವರಿಗೆ ಸಂಬಂಧವೇನೂ?' ಎಂದು ಕೇಳಿದಾಗ ಎಂಥವರಿಗೂ ಎದೆ ಒಡೆಯಬಹುದಾದ ಈ ಘಳಿಗೆಯನ್ನು ಪರಿಮಳ ಗಟ್ಟಿ ಮನಸ್ಸಿನಿಂದ ನಿಭಾಯಿಸುತ್ತಾಳೆ. ವಾಪಸು ಬರುವಾಗ, ತಾನು ಹುಟ್ಟಿ ಬೆಳೆದ ಸಂಸ್ಕಾರ ಅವಳನ್ನು ಗುಡಿಗೆ ಹೋಗದಂತೆ ತಡೆದರೂ ದೇವರ ದಯೆಯನ್ನು ಬೇಡಿ ತನ್ನ ಮುಂದಿನ ಹಾದಿ ನಿರ್ಧರಿಸಿಕೊಂಡು ಹೂ ಮಾರುವ ಮುದುಕಿಯತ್ತ ನಡೆದು ಅರ್ಧ ಮೊಳ ಹೂ ತೆಗೆದುಕೊಂಡು ತಲೆಗೆ ಸಿಕ್ಕಿಸಿಕೊಳ್ಳುತ್ತಾಳೆ! ಪಮ್ಮಿ ಸಂಪ್ರದಾಯದ ಪರಧಿ ಮೀರುವುದು ಹೀಗೆ... ದುಃಖದ ಭಾರದಿಂದ ಜರ್ಝರಿತ ಳಾಗಿದ್ದರೂ ಮನಸ್ಸು ಹಗುರ ಮಾಡಿಕೊಂಡು ಹೊಸ ಬದುಕಿಗೆ ಸಿದ್ಧಳಾಗುತ್ತಾಳೆ.

ಮನೆಯಲ್ಲಿ ಅಪ್ಪನನ್ನು ಮತ್ತು ಅವನನ್ನು– ಇಬ್ಬರನ್ನು ಸಂಭಾಳಿಸಬೇಕಾದ ಹೊಣೆ ಅವಳಿಗಿತ್ತು. ಜ್ವರದಿಂದ ನರಳುತ್ತಿದ್ದ ಅವನಿಗೆ ಮೆತ್ತನೆಯ ಅನ್ನ ಮಾಡಬೇಕಿತ್ತು. ಅವನು ಹೊರಬಂದಾಗ ಸಿಡಿಮಿಡಿಗೊಳ್ಳದೆ ನಗುಮೊಗದಿಂದ ಅವನನ್ನು ಮಾತಾಡಿಸಬೇಕಿತ್ತು. ಜೊತೆಗೆ ಅಪ್ಪನ ಜವಾಬ್ದಾರಿ ಬೇರೆ. ಅವರಿನ್ನೂ ಮೂರ್ತಿಯ ಮನೆಯಲ್ಲಾದ ದುರಂತದಿಂದ ಹೊರಬಂದಿರಲಿಲ್ಲ. ಅವರನ್ನು ಸಂಭಾಳಿಸಿ ಸಂತೈಸ ಬೇಕಿತ್ತು. ಜೊತೆಗೆ ಮೂರ್ತಿಯ ಮಗ ತಮ್ಮ ಮನೆಯಲ್ಲೇ ಅಡಗಿಕೊಂಡಿದ್ದಾನೆಂಬ ಸತ್ಯವನ್ನು ಅಪ್ಪನಿಂದ ಮತ್ತು ಸಮಾಜದಿಂದ ಬಚ್ಚಿಡಬೇಕಾಗಿತ್ತು. ಇಷ್ಟೆಲ್ಲವನ್ನೂ ಅವಳು ನಿಭಾಯಿಸುತ್ತಾ ಎಲ್ಲರನ್ನೂ ಸಂತೈಸುತ್ತಾ ಕೆಲವೇ ದಿನಗಳ ಅಂತರದಲ್ಲಿ ಜವಾಬ್ದಾರಿಯುತ ಹೆಂಗಸಾಗಿ ಬೆಳೆಯುತ್ತಾಳೆ. ತನ್ನ ಗುಪ್ತ ಪ್ರಣಯದ ಬಗ್ಗೆ ಅವಳಿಗೆ ಆತಂಕವಿತ್ತು, ನಿಜ; ಜೊತೆಗೆ ಆಕರ್ಷಣೆಯೂ ಇತ್ತು. 'ಇಂಥಾ ಇಕ್ಕಟ್ಟಿನ ಪರಿಸ್ಥಿತಿಯ, ದುರಂತಗಳ ನಡುವೆಯೂ ಮನುಷ್ಯರು ಬದುಕಬಲ್ಲರು, ಸಾಕಷ್ಟು ಚೆನ್ನಾಗಿಯೇ ಬದುಕಬಲ್ಲರು' ಎಂದು ಎನ್ನಿಸುವ ಹಾಗೆ ನಿರ್ವಹಿಸಿದಳು ಅವಳು. ಹೊಸ ಸಂಸಾರ ನಡೆಸುವ ಗೃಹಿಣಿಯ ಸಂಭ್ರಮ ಹಾಗೂ ಆತಂಕ ಎರಡನ್ನೂ ಒಟ್ಟಾಗಿ ಅನುಭವಿಸುತ್ತಾ ಅವನನ್ನು ಕಪಾಟಿನಲ್ಲಿಟ್ಟು ಸಾಕಿದಳು ಪರಿಮಳ. ಅವಳೇ ಹೇಳಿಕೊಳ್ಳುವಂತೆ ಅವನ ಭಾಷೆ ಇಷ್ಟವಾಯಿತು ಅವಳಿಗೆ– 'ನಿನ್ನ ಮಾತಿನ ಬಲೆಗೆ ಬಿದ್ದುಬಿಟ್ಟೆ. ಹೆಸರು ಕೇಳಲಿಲ್ಲ, ಅಡ್ರೆಸ್ ಕೇಳಲಿಲ್ಲ, ಯಾವೂರ ದಾಸಯ್ಯ ನೀನು ಅಂತ ಕೇಳಲಿಲ್ಲ. ಬರೀ ಕೇಳಿಸಿಕೊಂಡೆ ಅಷ್ಟೇ...' ಎನ್ನುತ್ತಾಳೆ. ಅಲ್ಮೇರಾದ ಹೊರಗೆ ಅವನಿಗೆ ಲಭ್ಯವಿರುವ ಒಂದೆರಡು ಘಳಿಗೆಗಳನ್ನು ವಿನೋದದಿಂದ ತುಂಬಬೇಕು, ಅವನ ಮನಸ್ಸನ್ನು ಮುದಗೊಳಿಸಬೇಕೆಂದು ದಿನವೆಲ್ಲಾ ಯೋಜನೆ ಹಾಕುತ್ತಾಳೆ. ಚಂಚಲೆಯಂತೆ ಆಡುತ್ತಾಳೆ, ವೈಯ್ಯಾರ ಮಾಡುತ್ತಾಳೆ. ನಾಲ್ಕು ಗೋಡೆಗಳ ನಡುವೆ, ಆ ರೂಮಿನಲ್ಲಿ ಸದ್ದು ಮಾಡುವಂತಿಲ್ಲ, ಹಾಡುವಂತಿಲ್ಲ, ಆಡುವಂತಿಲ್ಲ, ತಿರುಗಾಡುವಂತಿಲ್ಲ, ಜೋರಾಗಿ ನಗುವಂತಿಲ್ಲ. ಆದರೂ, ಇದ್ದುದರಲ್ಲೇ ಸಂತೋಷಪಡುವುದು ಹೇಗೆ ಅಂತ ತಲೆ ಕೆಡಿಸಿಕೊಳ್ಳುತಾಳೆ.

ವರನು ಹೇಳಿದ ಒಂದು ಮಾತಿನ ಹಿಂದಿನ ಧ್ವನಿ ಅವಳಿಗೆ ಅರ್ಥವಾಗುವುದು ಕಾಲಮಿಂಚಿ ಹೋದಮೇಲೆ. ನಂತರ ಅವಳೇ ಹೇಳುತ್ತಾಳೆ, 'ಒಂದೇ ಒಂದು ಮಾತು. ಹಿಂದಿಲ್ಲ ಮುಂದಿಲ್ಲ. ಜೊತೆ ಮಲಗು ಬಾ ಅಂದರೆ ಏನರ್ಥ? ಆಯ್ಕೆ ಮಾಡಿಕೋ ಅಂತ ತಾನೆ? ಅವನು ನನ್ನನ್ನು ಎಚ್ಚರಿಸಿದ್ದ. ನಾನು ತಿಳಿಯಲಾರದೇ ಹೋದೆ. ಆದರೆ ಅವನು ಹಾಗೆ ಹೇಳಿದಾಗ ನೋವಾಗಿತ್ತು, ವಿಪರೀತ ನೋವಾಗಿತ್ತು.' ಎನ್ನುವ ಅವಳು ಆ ಕಾಲಕ್ಕೆ ಅವನಿಗೂ ಯಾವುದೋ ಕಾರಣದಿಂದ ಆಗಿರಬಹುದಾದ ನೋವೇ ಅವನ ಬಾಯಲ್ಲಿ ಇಂಥಾ ಮಾತು ಆಡಿಸಿದ್ದಿರಬಹುದೆಂದು ಅರಿಯಲಾರದೇ ಹೋದಳು. ಮಾರನೆಯ ದಿನ ಕುಟ್ಟಿ ಮಾಸ್ತರೂ ವರ ಹೇಳಿದ್ದನ್ನೇ ಹೇಳುವರು– 'ಆಯ್ಕೆ ಮಾಡಿಕೋ'. ಆದರೆ, ಅಷ್ಟೊತ್ತಿಗೆ ವರನು 'ಜಗತ್ತಿಗೇ ಮುಖ ತಿರುಗಿಸಿ ಮಲಗಿ ಬಿಟ್ಟಿದ್ದಾನೆ' ಎಂದು ಅವಳೆಂದಾಗ ಶ್ರೀಕಾಂತ, 'ಬಿಡು, ಕೊನೆಗೆ ನೀನೇ ಗೆದ್ದೆಯಲ್ಲ' ಎನ್ನುತ್ತಾನೆ. ಯಾರೇನೇ ಹೇಳಿದರೂ ಅವಳಿಗೆ ಅಷ್ಟೊತ್ತಿಗೆ ತಿಳಿದಿದೆ ಮತ್ತು ಹೇಳುತ್ತಾಳೆ, 'ಇಲ್ಲಾ ಅವನೇ ಗೆದ್ದ' ಪದೇ ಪದೇ ಅನುಮಾನಪಡುವ ತನ್ನ ರಾಮನನ್ನು ರಮಿಸುತ್ತಾ 'ರಾಮನಿಗೇ ಇರಲಿಲ್ಲ ರಾವಣನ ಸಭ್ಯತೆ' ಅಂತ ಅರಿವಾಗುವಷ್ಟರಲ್ಲಿ ವರನು ಮುಖ ತಿರುಗಿಸಿ ಗುಹೆಗೆ ನಡೆದುಬಿಟ್ಟಿರುತ್ತಾನೆ.

ಶ್ರೀಕಾಂತನಿಗೆ ಅವನು ಕೇಳಿದ ಅಪರಕರ್ಮದ ಪುಸ್ತಕಗಳನ್ನು ತಂದುಕೊಡುವ ಪರಿಮಳ, ಅವನ ನಿರ್ಗಮನದ ಘಳಿಗೆಯನ್ನು ಕಾಯುತ್ತಿದ್ದಾಳೆ. ಆದರೂ ಅವಳಿಗೆ ಏನೋ ಭರವಸೆ. ಹಾಗಾಗಿ ಅವಳು ಒಳ್ಳೆಯದಕ್ಕಾಗಿ ಕಾಯುತ್ತಿದ್ದಾಳೆ, ಕೆಟ್ಟದ್ದಕ್ಕೆ ಸಿದ್ಧಳಾಗಿದ್ದಾಳೆ. ಅವನೇನೂ ಅವನ ನಿರ್ಗಮನದ ಬಗ್ಗೆ ಹೇಳದಿದ್ದರೂ ಅವಳಿಗೇ ಅನುಮಾನಗಳಿವೆ. ಅವನೋ ಬದುಕನ್ನು ಬಂಗಾರದಂತೆ ತೂಗಿ ಜಿಪುಣತನದಿಂದ ಬಳಸುತ್ತಿದ್ದಾನೆ. ಅವನಿಗೆ ತನ್ನ ಮಿತಿ ಈಗ ಗೊತ್ತಿದೆ. ಮುಂಚೆಯೇ ಈ ಬುದ್ಧಿ ಇದ್ದಿದ್ದರೆ! ತನ್ನ ಬದುಕಿನುದ್ದಕ್ಕೂ ಚಾಚಿಕೊಳ್ಳಬಹುದಾದ ವ್ಯರ್ಥವ್ಯದ ಕೆಲ ಕ್ಷಣಗಳ ಮುಂಚೆಯೂ 'ತಾನು ಸ್ವರ್ಗದ ಬಾಗಿಲಲ್ಲಿ ನಿಂತಿದ್ದೇನೆ, ಮುಂದಡಿಯಿಟ್ಟರೆ ಸಾಕು, ಒಳ ದಾಟಿಬಿಡುತ್ತೇನೆ' ಎಂದು ತಿಳಿದಿದ್ದವಳು 'ನೇರ ಪ್ರಪಾತಕ್ಕೆ ಬಿದ್ದೆ' ಎಂದು ನಂತರ ಬಲ್ಲಾಳನಿಗೆ ಹೇಳಿ ನಗುತ್ತಾಳೆ. 'ಮಲಗು, ನಿನ್ನ ತಟ್ಟಿ ಮಲಗಿಸುವೆ' ಎಂದು ಅವನು ಅಂದಾಗ, 'ನೀನು ಮಲಗು, ನಿನಗೆ ಆಯಾಸವಾಗಿರುವುದು' ಎನ್ನುತ್ತಾಳವಳು. 'ಇಲ್ಲ. ಆಯಾಸ ಪರಿಹಾರವಾಯಿತು, ಹಗುರವಾದೆ ನಾನು.' ಎನ್ನುತ್ತಾನೆ ಶ್ರೀಕಾಂತ. ಮುಂದೆಂದೋ ಆ ರಾತ್ರಿಯ ಪ್ರಸಂಗವನ್ನು ಬಲ್ಲಾಳನೆದುರಿಗೆ ಹೇಳುವಾಗ ಪರಿಮಳ ನುಡಿವ ಮಾತುಗಳು ಅವಳ ವ್ಯಕ್ತಿತ್ವದ ಸಾರವನ್ನೇ ನಮ್ಮೆದುರು ಮೂಡಿಸಿಬಿಡುತ್ತವೆ. 'ಅವನು ಆ ರಾತ್ರೆ ಹೂವಿನಂತೆ ನನ್ನನ್ನು ಹಿಡಿದಿದ್ದ. ನಾನು ಅವನಿಗಾಗಿ ಪ್ರಾರ್ಥಿಸಿದ್ದೆ– ದೇವರೇ ಇವನು ಇನ್ನಷ್ಟು ಹಗುರಾಗಿ ಹಾರಿ ಹೋಗಬಾರದೇ... ಆ ಕ್ಷಣದಲ್ಲಿ ನನಗೆ

ಏನನ್ನೇ ಆಗಲಿ ಕಳೆದುಕೊಳ್ಳುವ ಚಿಂತೆಯಾಗಲಿಲ್ಲ. ಅವನು ಸಂತೋಷವಾಗಿದ್ದರೆ ಸಾಕು ಎಂಬ ಏಕೈಕ ಯೋಚನೆ ನನ್ನನ್ನು ಆವರಿಸಿತ್ತು.' ಎನ್ನುವ ಅವಳು 'ತಾನು ಒಂಟಿಯಾದರೂ ತನ್ನ ಮಗುವು ಅಪ್ಪನಿಲ್ಲದೇ ಬೆಳೆದರೂ ತನ್ನ ತಂದೆ ತನ್ನನ್ನು ಮನೆಯಿಂದ ಹೊರ ಹಾಕಿದರೂ ಚಿಂತೆಯಿಲ್ಲ, ಅವನಿಗಾಗಿ ನಾನು ಎಲ್ಲವನ್ನೂ ಸಹಿಸಿಕೊಳ್ಳಬಲ್ಲೆ' ಎಂದು ಯೋಚಿಸುತ್ತಾಳೆ. ಇದು ಅನುಪಮವಾದ ಪಕ್ವಪ್ರೇಮವಲ್ಲದೆ ಇನ್ನೇನು?

'ನಾನು ಅಳಲಿಲ್ಲ. ತಲೆ ಬಡಿದುಕೊಳ್ಳಲಿಲ್ಲ. ಅಥವಾ ಬಳೆಗಳನ್ನು ಚಚ್ಚಿಕೊಳ್ಳಲಿಲ್ಲ. ಏಕೆಂದರೆ ವೈಧವ್ಯ ಬಂದಿದ್ದು ನನಗೆ ಮಾತ್ರ ತಿಳಿದಿತ್ತು, ಲೋಕಕ್ಕೆ ತಿಳಿದಿರಲಿಲ್ಲ. ಲೋಕಕ್ಕೆ ಅವನ ಅಸ್ತಿತ್ವವೇ ತಿಳಿದಿರಲಿಲ್ಲ. ಯಾರೆದುರಿಗೆ ಅಳಲಿ, ಹೇಳಿ. ನಂಬ್ತಾರಾದರೂ ಯಾರು? ದುಃಖಿಸಲಿಕ್ಕೂ ಸಾಧ್ಯವಾಗದಂತಹ ನಿಷ್ಕ್ರಿಯ ಸ್ಥಿತಿ ಅದು' ಎಂದು ನಿರುಂಬಳವಾಗಿ ವಿವರಿಸುವ ಪರಿಮಳಳ ಬಗ್ಗೆ ಓದುಗನಿಗೆ ಗೌರವ ಇಮ್ಮಡಿಯಾಗುತ್ತದೆ. 'ಏನೆಲ್ಲಾ ಎಷ್ಟೆಲ್ಲಾ ಬಾರಿ ಹೇಳಿಕೊಂಡು ನಾನು ಸಿದ್ಧತೆ ಮಾಡಿಕೊಂಡಿದ್ದರೂ ಕಡೆಗೊಮ್ಮೆ ನಿಜವಾಗಿ ಕಳಕೊಂಡಾಗ ಆಗೋ ನೋವು ಎಲ್ಲ ಸಿದ್ಧತೆಯನ್ನೂ ತಲೆಕೆಳಗು ಮಾಡಿ ಹೃದಯ ಹಿಂಡಿಬಿಡುತ್ತೆ' ಎನ್ನುವ ಪರಿಮಳ, ತನ್ನ ಅಂದಿನ ಸ್ಥಿತಿಯನ್ನು ಅರ್ಧ ತೆರೆದು ಅರ್ಧ ಮುಚ್ಚಿದ್ದ ಮನೆಬಾಗಿಲಿಗೂ ಅರ್ಧ ಹೊಸ್ತಿಲಿನಾಚೆ ಅರ್ಧ ಮನೆಯೊಳಗೆ ಇದ್ದ ತನ್ನ ಸ್ಥಿತಿಯ ಪ್ರತೀಕವೆಂದು ಹೇಳಿಕೊಳ್ಳುತ್ತಾಳೆ. ಹಾಗೆಂದು ವರನಂತಾಗಲೀ ಶ್ರೀಕಾಂತನಂತಾಗಲೀ ಅವಳು ಬದುಕನ್ನು ತಿರಸ್ಕರಿಸುವುದಿಲ್ಲ. 'ಗಟ್ಟಿ ಬದುಕುವುದೇ ಗುಟ್ಟು ಬಲ್ಲಾಳರೇ' ಎನ್ನುವ ಅವಳು ಆ ಗುಟ್ಟನ್ನು ಅರಿತಿರುತ್ತಾಳಾದ್ದರಿಂದ ಅಷ್ಟು ಚಂದ ಬದುಕುತ್ತಾಳೆ. ಹಾಗಾಗಿಯೇ ಅವಳ ಮನೆಯ ಅಟ್ಟದಲ್ಲಿ ಹೊಗೆ ಹಿಡಿದು ಕಪ್ಪಗಾದ ಹಲಗೆಯ ಮಧ್ಯೆ ಸೇರಿಸಿದ್ದ ತೊಟ್ಟಿಲು ಕಟ್ಟುವ ಎರಡು ಬಳೆಗಳು ಬದುಕಿನ ಮುಂದುವರಿಕೆ ಮಾತ್ರವೇ ಜೀವನದ ಅರ್ಥ ಎಂದು ಪರಿಮಳ ಹೇಳಿದ ಮಾತನ್ನು ಪ್ರತಿಧ್ವನಿಸುವಂತೆ ಬಲ್ಲಾಳನಿಗೆ ಕಾಣುತ್ತವೆ.

**ಶ್ರೀಕಾಂತ:**

ಬಣ್ಣದ ಮೋಡದಿಂದ ಕಂಗೊಳಿಸುವ ಆಧುನಿಕ ನಗರದಲ್ಲಿ ಬೀಳುವ ಪುಡಿಯ ಮಳೆಯ ಪ್ರಭಾವಕ್ಕೆ ಒಳಗಾಗುವ ಯುವಕರ ಪ್ರತಿನಿಧಿಯಂತೆ ಕಾಣುತ್ತಾನೆ ಹದಿನೆಂಟು ವರ್ಷದ ಶ್ರೀಕಾಂತ; ಪರಿಮಳಳ ತಂದೆ ವೆಂಕಟಕೃಷ್ಣರಾಯರ ಬಾಲ್ಯಕಾಲದ ಸ್ನೇಹಿತ, ಪರಮಾಪ್ತ ಶ್ರೀನಿವಾಸಮೂರ್ತಿಗಳ ಮಗ. ಹಾಗೆಂದು ಪಮ್ಮಿಗೂ ಓದುಗನಿಗೂ ತಿಳಿಯುವುದು ಆಗಬಾರದ ದುರಂತ ಆಗಿ ಹೋದಮೇಲೆಯೇ. ಪುಡಿಯ ಪ್ರಭಾವದಿಂದ ರಾತ್ರಿಯಲ್ಲಿ ಆಕಾಶದಲ್ಲಿ ಹಾರುತ್ತಾ ತರುಣಿಯರ ಕನಸಿನಲ್ಲಿ ಪ್ರವೇಶಿಸುತ್ತಾ ಸಾಮಾಜಿಕ

ಸ್ವಾಸ್ಥ್ಯಕ್ಕೆ ಸವಾಲು ಹಾಕುವಂತಿದ್ದ ಯುವಕರಲ್ಲೊಬ್ಬನು ಇವ. ಕಥಾನಾಯಕಿಯ ಮನೆಯ ಅಚ್ಚುಕಟ್ಟು ಮತ್ತು ಮನೆಯೊಡತಿಯ ಅಸಾಮಾನ್ಯ ಸೌಂದರ್ಯ ಈ ಯುವಕನನ್ನು ಮತ್ತೆ ಮತ್ತೆ ಬರುವಂತೆ ಮಾಡಿದ್ದವು ಎಂದು ಮೇಲ್ನೋಟಕ್ಕೆ ಅನ್ನಿಸಿದರೂ ಪಮ್ಮಿಯ ಬಗ್ಗೆ ಶ್ರೀಕಾಂತನಿಗಿರುವ ಸೆಳೆತ ಇಂದು ನಿನ್ನೆಯದಲ್ಲ. ಅವನೇ ಹೇಳುವಂತೆ, ಪಮ್ಮಿ ಚೋಟು ಲಂಗವನ್ನು ಧರಿಸುವ ಹುಡುಗಿಯಾದಾಗಿನಿಂದ ಶ್ರೀಕಾಂತ ಅವಳನ್ನು ನೋಡಿ ಮೆಚ್ಚಿಕೊಂಡಿದ್ದಾನೆ. ಅದೇನು ಬರೀ ಮೆಚ್ಚುಗೆಯೋ ಅಥವಾ ಅವನಮ್ಮನ ಅಸೂಯೆ ತುಂಬಿದ ಉದ್ಗಾರಗಳು ಆ ಪುಟ್ಟ ಹುಡುಗನ ತಲೆಯಲ್ಲಿ ಮೂಡಿಸಿದ ಹಲವು ಭಾವನೆಗಳ ಕೋಲಾಹಲದ ಹಾಲಾಹಲದ ಪ್ರಭಾವವೋ ಹೇಳುವುದು ಕಷ್ಟ. ಒಮ್ಮೆ ಅವನೇ ಪಮ್ಮಿಯ ಬಳಿ ಹೇಳುತ್ತಾನೆ, 'ಮೂರ್ತಿಗಳ ಮಗನಾಗದೇಹೋಗಿದ್ದರೆ ನಾನು ನಿನ್ನ ಕನಸಿನಲ್ಲಿ ಬರುತ್ತಲೇ ಇರಲಿಲ್ಲ. ನನ್ನ ಮನೆಯವರಿಗೆ, ಅದರಲ್ಲೂ ಅಮ್ಮನಿಗೆ ನಿನ್ನ ಮನೆತನವೆಂಬುದು ಬಹು ದೊಡ್ಡ ಆದರ್ಶ. ಅಮ್ಮ ಇಡೀದಿನ ಇತ್ತಲೇ ಬೊಟ್ಟು ಮಾಡಿರುತ್ತಿದ್ದಳು– ಅವರನ್ನು ನೋಡು, ಅವರ ಕಾರನ್ನು ನೋಡು... ಅವರ ಮಗಳ ಚಂದದ ಲಂಗವನ್ನು ನೋಡು... ಅವರ ಮನೆಯ ನಾಯಿಯ ಬಾಲವನ್ನು ನೋಡು– ಅಂತ ಅಸೂಯೆಪಡುತ್ತಿದ್ದಳು ಅಮ್ಮ.' ಹೀಗೆ ತನ್ನ ತಾಯಿಯಿಂದಲೇ ಪರೋಕ್ಷವಾಗಿ ಕೀಳರಿಮೆಗೆ ಒಳಗಾಗುವ ಮಗು ಮುಂದೆ ಅನಾಹುತವನ್ನು ತಂದುಕೊಂಡಿದ್ದರಲ್ಲಿ ಅಚ್ಚರಿಯೇನಿದೆ?

ಶ್ರೀಕಾಂತ ಸೊಗಸುಗಾರ, ಹೊಗಳುಭಟ್ಟ. ಮುಗ್ಧ ತರುಣಿಯ ಮನಸೆಳೆಯಬಲ್ಲ ಎಲ್ಲಾ ಗುಣಗಳು ಅವನಿಗಿವೆ. ಅವನು ನಾಟಕೀಯವಾಗಿ ಮಾತಾಡಬಲ್ಲ. ತರುಣಿಯೊಬ್ಬಳಿಗೆ ಕಚಗುಳಿಯಾಗುವಂತೆ ತುಂಟತನದಿಂದ ಕಿಚಾಯಿಸಿ ಗೋಳುಹೊಯ್ದುಕೊಂಡು ಅವಳ ಕೆನ್ನೆ ಕೆಂಪೇರಿಸಬಲ್ಲ. ಹಾಗೆಂದು ಅವನು ಲಂಪಟನಲ್ಲ; ಪಮ್ಮಿ ಬಟ್ಟೆ ಬದಲಿಸುವಾಗ ಕಣ್ಮುಚ್ಚಿಕೊಳ್ಳುವ, ಎರಡು ಇಡೀ ರಾತ್ರಿ ಅವಳನ್ನು ಬರಿದೇ ನೋಡುತ್ತಾ ನಿಲ್ಲುವ ಸಂಯಮವಿದೆ ಅವನಿಗೆ. ತನ್ನನ್ನು ತಾನು ಸುಕೃತ ಪ್ರೇಮಿ ಎಂದು ಕರೆದುಕೊಳ್ಳುವ ಅವನ ಮಾತು ಸುಳ್ಳೇನಲ್ಲ. 'ನಾನು ಒಂಟಿ, ನಾನು ಒಂಟಿ' ಎಂಬ ಪಮ್ಮಿಯ ಮಾತಿಗೆ ಅವನಿಗೂ 'ನಾನೂ ಒಂಟಿ, ನಾನೂ ಒಂಟಿ' ಎನ್ನಿಸುತ್ತೆ. ಬಹುಶಃ ಇಂಥಾ ಒಂಟಿತನವೇ ಬಾಳಿನಲ್ಲಿ ಗುರಿ ಕಾಣದ ಎಲ್ಲಾ ಯುವಕರಂತೆ ಇವನೂ ಪುಡಿ ಸೇವಿಸಿ ಅಲೆದಾಡುವಂತೆ ಮಾಡಿರಬೇಕು. ಆದರೆ ಅವನು ಅಪ್ಪಟ ಪ್ರೇಮಿ ಎಂಬುದರಲ್ಲಿ ಎರಡು ಮಾತಿಲ್ಲ. ಬೆಳದಿಂಗಳಿನಲ್ಲಿ, ಕರಿದಿಂಗಳಿನಲ್ಲಿ, ಮಳೆಯಲ್ಲಿ, ಬಿಸಿಲಲ್ಲಿ, ಇಬ್ಬನಿಯ ಮಂಪರಿನಲ್ಲಿ... ಎಲ್ಲೆಂದರಲ್ಲಿ ಅವಳಿಗೆ ಸರಿ ಸಮಾನವಾಗಿ ನಡೆದು ನಗುಮೊಗದಿಂದ ಮೋಹಿಸಿ ಮರುಳು ಮಾಡುವ ಅವನು ನಿಜ ಪ್ರೇಮಿಯಲ್ಲದೇ ಮತ್ತೇನು? ಏಳು ಸಮುದ್ರ ಏಳು ಕೋಟೆ ಏಳು ದ್ವಾರಗಳನ್ನು ದಾಟಿದನು. ಅವಳನ್ನು ಅಪಹರಿಸಲೆಂದೇ ಅವತರಿಸಿದ

ರಾಕ್ಷಸನನ್ನು ಸಂಹರಿಸಿ ಅವಳನ್ನು ರಕ್ಷಿಸುವನು. ಆದರೂ ಅವರು ಕೈ-ಕೈ ಹಿಡಿಯದೆ, ಮೈ ಮುಟ್ಟದೆ ಕನಸೆಂಬ ಮಾಧ್ಯಮದ ಮೂಲಕವೇ ಅಲೆದಾಟವಾಡುತ್ತಾರೆ.

ಮರುದಿನ ಕೂಡಾ ಅವಳನ್ನು ನೋಡುತ್ತಾ ನಿಂತೇ ಹೊತ್ತು ಕಳೆಯುವನು ಶ್ರೀಕಾಂತ. ಅಂದು ಅವಳ ಕನಸಿನ ಮುಂದುವರಿಕೆಯಂತೆ ಎಚ್ಚರದಲ್ಲೂ ಅವಳೆದುರು ನಿಂತಾಗ ಅವಳು ಅವನಿಂದ ಆಘಾತವೇನೂ ಹೊಂದುವುದಿಲ್ಲ. ಬದಲಿಗೆ ನಸು ನಕ್ಕು ಉತ್ತೇಜಿಸುತ್ತಾಳೆ. ಅವನ ಮುಖಚಹರೆ ಅವಳಿಗಿಷ್ಟವಾಗುತ್ತದೆ. ಅವನ ಮನಸ್ಸನ್ನು ನೋಯಿಸಲು ಇಷ್ಟವಾಗುವುದಿಲ್ಲ. ಅವನ ಮಾತಿನ ಧಾಟಿ, ತನ್ನ ಕೆನ್ನೆ ರಂಗೇರಿಸುವ ತುಂಟತನ, ಗೋಳುಹೊಯ್ದುಕೊಳ್ಳುವಿಕೆ, ಹುಸಿಯಾದ ಹಠ- ಎಲ್ಲಾ ಇಷ್ಟವಾಗುತ್ತಾ ಹೋಗುತ್ತದೆ. 'ನಾನು ನಿನ್ನ ಪ್ರಿಯಕರ, ಪ್ರೀತಿಸುವ ಸಲುವಾಗಿ ನಾನಿಲ್ಲಿಗೆ ಬಂದಿದ್ದೇನೆ. ಪ್ರೀತಿಯೆಂಬುದು ಅವಿರತವಾದುದು, ಅನಂತವಾದುದು... ನನಗೆ ಇಡಿಯಾಗಿ ಸಿಗಬೇಕು ನೀನು' ಎಂದು ಹಠ ಹೂಡುತ್ತಾನೆ. 'ನಿನ್ನ ಹೃದಯ ಮಿಡಿತ ಎಣಿಸಿದ್ದೇನೆ, ನಗುವಿನ ಆಳ ಅಳೆದಿದ್ದೇನೆ, ನೆನಪಿನ ಗಾಳ ಹಾಕಿ ಕನಸಲ್ಲಿ ಅಂಡಲೆದಿದ್ದೇನೆ' ಎಂದೆಲ್ಲಾ ಮಾತಾಡಿ ಅವಳ ಮನಗೆಲ್ಲಲು ಪ್ರಯತ್ನಿಸುವನು. ಪಮ್ಮಿಯು ಮಂದಸ್ಮಿತದಿಂದ 'ನನಗೆ ಮದುವೆ ಗೊತ್ತಾಗಿದೆ' ಎಂದು ಅವನ ತುಟಿಗಳ ಆಕ್ರಮಣವನ್ನು ತಡೆಯುವ ಅಭಿನಯ ಮಾಡುತ್ತಾ ಆದರೆ ನರ್ತಕಿಯ ಆಕರ್ಷಕ ಮುದ್ರೆಯನ್ನು ತಿಳಿದೇ ತೋರುತ್ತಾ ಅವನನ್ನು ತಡೆಯುವ ಯತ್ನ ಮಾಡುವಳು. ಆಗವನು ಅವಳ ಮೈಯ ಬಿಸಿಗೆ ನಿಧಾನವಾಗಿ ಕರಗುತ್ತಾ ಕೊನೆಗೆ ಬರಿ ಕಣ್ಣು ಬಾಯಿ ಮಾತ್ರವೇ ಆಗಿ ಉಳಿದವನು, ಮುತ್ತಿಡುತ್ತೇನೆಂದು ಹಠ ಹಿಡಿಯುವನು. ಅವಳು ಬೇಕು ಎನ್ನದೆ, ಬೇಡ ಎನ್ನದೆ ಕಾಡಿ, ಕಡೆಗವನು ಪೂರ್ತಿ ಕರಗಿಬಿಡುವ ಮುನ್ನ ಮನಕರಗಿ ಅವನ ತುಟಿಗಳನ್ನು ತನ್ನ ತುಟಿಗೆ ತಾಕಿಸಿಕೊಂಡಳು. ಹೀಗವರು ಚುಂಬಿಸಿದಾಗ ಮೂಡಲು ಕೆಂಪಾಗಿ ಮತ್ತೊಂದು ದಿನ ಶುರುವಾಗುವುದು.

ಪಮ್ಮಿ, ತಾನು ವರನ ಜೊತೆ ವಿಹಾರ ಹೋಗಿಬಂದ ರಾತ್ರಿ ಅವನನ್ನು ಬೈದು ತರಾಟೆಗೆ ತೆಗೆದುಕೊಳ್ಳುವ ಹಠತೊಟ್ಟು ಕಾಯುವಳು. ಇನ್ನೆಂದೂ ನನ್ನ ಕನಸಲ್ಲಿ ಬರಬೇಡವೆಂದು ಕಡ್ಡಿ ತುಂಡು ಮಾಡಿದಂತೆ ಹೇಳುತ್ತೇನೆಂಬ ಗಟ್ಟಿ ನಿರ್ಧಾರ ತೆಗೆದುಕೊಂಡು 'ಬರಲಿ ಅವನು, ಛೀಮಾರಿ ಹಾಕಿ ಆಚೆಗಟ್ಟುತ್ತೇನೆ' ಎಂದೂ ಗಟ್ಟಿ ನಿರ್ಧರಿಸಿದ್ದಳು. ಅವನು ಜಾಸ್ತಿ ಕಾಯಿಸದೇ ಬಂದುಬಿಟ್ಟಿದ್ದಿದ್ದರೆ ಕಥೆಯೇ ಬೇರೆಯಾಗಿಬಿಡುತ್ತಿತ್ತೇನೋ. ತನ್ನೆಲ್ಲಾ ಏಕಾಗ್ರತೆಯಿಂದ ಜಗಳದ ತಯಾರಿ ನಡೆಸಿದ್ದ ಅವಳಿಗೆ ಕಾದೂ ಕಾದೂ ಬೇಸರವಾಗಿರುವಾಗ, ಮೊದಲು ಮೊಗ್ಗು ಅರಳುವ ಕ್ರಿಯೆಯಂತೆ ಆಹ್ಲಾದಕರವಾಗಿ ತೇಲಿ ಬಂದ ಶ್ರೀಕಾಂತ, ಅರಳುತ್ತಿರುವ ಚುಕ್ಕೆಯೇ ಮನುಷ್ಯನ ರೂಪ ತಾಳಿ ಅವಳ ಎದುರಿಗೆ ತೇಲಿ ಬಂದಿತೋ ಎನ್ನುವಂತೆ ತೋರಿ

ಅವಳ ಮನವನ್ನಪಹರಿಸಿಬಿಟ್ಟನು. ಅವನು ರೂಪುಗೊಳ್ಳುವ ಆ ಅನುಪಮ ಘಟನೆಗೆ ಸಾಕ್ಷಿಯಾದ ಅವಳು ಮೈ ಮರೆತು ಹೋದದ್ದರಲ್ಲಿ ಅಚ್ಚರಿ ಏನಿದೆ? ಅಪೂರ್ವವಾದದ್ದು ತನ್ನ ಕಣ್ಣೆದುರಿಗೆ ಘಟಿಸಿದ ಸಂಭ್ರಮದಲ್ಲಿ ಅವಳ ಸಿಟ್ಟು, ವಾದ-ವಿವಾದ ಎಲ್ಲವೂ ಓಂದಾಗಿಹೋದವು. ಹತ್ತೊಂಬತ್ತರ ಆ ಮುಗ್ಧೆಯು ತೇಲುವ ಅವನನ್ನು ನೋಡುತ್ತಾ ನೋಡುತ್ತಾ ಲೋಕವನ್ನೇ ಮರೆತುಬಿಟ್ಟಳು.

ಬೇಸಿಗೆಯ ತಂಗಾಳಿ ಅವನನ್ನು ತರಗೆಲೆಯಂತೆ ತೂರಿ ತಲೆಕೆಳಗು ಮಾಡುತ್ತಿರುವಾಗ ತಾನೂ ಅವನನ್ನು ಉಫ್ ಅಂತ ಊದಿ ಆನಂದಿಸುತ್ತಿದ್ದ ಪಮ್ಮಿಯ ಉತ್ಸಾಹವನ್ನು ಕಂಡು ಸಿಟ್ಟು ಮಾಡುವುದು ಸಾಧ್ಯವೇ ಇಲ್ಲದೆ ಅಸಹಾಯಕನಂತೆ ಹಲ್ಲು ಕಿರಿಯುತ್ತಿದ್ದ ಶ್ರೀಕಾಂತ. Perfect ingredients for a perfect disaster! ನಕ್ಕೂ ನಕ್ಕೂ ಪಕ್ಕೆ ನೋವು ಬಂತೆಂದು ಸ್ವಲ್ಪ ಆಟ ಬದಲಾಯಿಸಲು ಹೋದ ಅವಳು, ಅವರಿಬ್ಬರ ಜೀವನವು ರಿಪೇರಿಯೇ ಆಗದಿರುವಷ್ಟು ಬದಲಾಯಿಸಿಬಿಟ್ಟಳು! ಅವನ ಹತ್ತಿರ ಬಂದು ಎತ್ತರದಲ್ಲಿ ತೂಗುತ್ತಿದ್ದ ಅವನನ್ನು ಹಿಡಿದು ಭದ್ರವಾಗಿ ಭೂಮಿಗೂರಿದಳು. ಅವಳು ಮುಗ್ಧತನದಲ್ಲಿ ಕೈಗೊಂಡ ಕೆಲಸದ ಪರಿಣಾಮ ಮಾತ್ರ ಭಯಂಕರ. ಈ ಸಂಕರದಿಂದ ಅವಳಷ್ಟೇ ನಿಜವಾಗಿ ವಾಸನಾಮಯನಾಗಿ ಕಲ್ಲಿನಲ್ಲಿ ಕಡೆದಷ್ಟು ನಿಖರವಾಗಿ ರೂಪುಗೊಂಡನು. ಹೆದರಬೇಡ ಎಂದು ಹೇಳುತ್ತಲೇ, ತಾನು ಹೆದರುತ್ತಲೇ ಎಲ್ಲವನ್ನೂ ಮೀರಿದವನಂತೆ ಅವಳನ್ನು ಕೂಡಿದನು!

ನಡೆಯುವಾಗ ನಿಂತಾಗ ಭಾರದ ಅನುಭವವಾದರೂ ಮರು ಬೆಳಗ್ಗೆ ಹಾರಲು ಯತ್ನಿಸಿ ಸೋಲುತ್ತಾನೆ ಶ್ರೀಕಾಂತ. ಹಾರಲು ಮತ್ತೆ ಮತ್ತೆ ಪ್ರಯತ್ನಿಸಿ ವಿಫಲನಾಗಿ ಕಣ್ಣಿಗೆ ರಾಚುವಂತಿದ್ದ ಸತ್ಯವನ್ನು ಅರಗಿಸಿಕೊಳ್ಳಲಾಗದೆ, ಅವಮಾನ ಸೋಲುಗಳಿಂದ ಬಳಲಿ ಅಳಲಾರಂಭಿಸುತ್ತಾನವನು. ಕನಿಕರದಿಂದ ಅವನ ಮೈದಡವಿ ಸಮಾಧಾನ ಮಾಡಲು ಯತ್ನಿಸಿದವಳಿಗೆ ತನಗಿಂತ ಜಾಸ್ತಿ ಕಳಕೊಂಡವನು ಅವನು ಅನ್ನಿಸುತ್ತದೆ. ಇಲ್ಲಿ ಯಾರು ಜಾಸ್ತಿ ಕಳಕೊಂಡವರೆಂದು ಹೇಗೆ ಹೇಳುವುದು? ತಪ್ಪು ಇಬ್ಬರಲ್ಲೂ ಇತ್ತು. ಶ್ರೀಕಾಂತ ಜೀವವನ್ನೇ ಕಳಕೊಂಡರೆ ಅವಳು ಜೀವನವನ್ನೇ ಕಳಕೊಂಡಳು. ಆಘಾತಗೊಂಡಿದ್ದವನಿಗೆ ಸಾಂತ್ವನ ಬೇಕಿತ್ತು. ಅದನ್ನು ಪಮ್ಮಿ ಕೊಟ್ಟಳು. ಅವರ ಮನಸ್ಸುಗಳು ಪರಸ್ಪರ ದುಃಖ ಹಂಚಿಕೊಂಡಿದ್ದರಿಂದ ಮೃದುವಾಗಿ ಮತ್ತೆ ಅಂಟಿಕೊಂಡವು. ಅವನು ಹೇಗಾದರೂ ಮಾಡಿ ಹಾರಿಯೋ ಜಾರಿಯೋ ಅಥವಾ ಕೊನೆಗೆ ತೆವಳಿಯೋ ಮತ್ತೆ ಮನೆ ತಲುಪಬೇಕೆಂದು ಪ್ರಯತ್ನಪಟ್ಟನು. ಹಾಗೊಂದು ರೀತಿ ಅವನು ಹೊರಟುಬಿಟ್ಟಿದ್ದರೆ ಚೆನ್ನಿತ್ತೋ ಏನೋ. ಆದರೆ ಪರಿಮಳ ಒಪ್ಪದೆ ಹಠ ಮಾಡಿದಳು. 'ನೀನೀಗ ಎಲ್ಲಿಯೂ ಹೋಗಬೇಕಾದ್ದಿಲ್ಲ, ಇಲ್ಲೇ ಇರು. ನಿನ್ನನ್ನು ನನ್ನ ಕಪಾಟಿನಲ್ಲಿಟ್ಟು ಸಾಕುತ್ತೇನೆ.' ಎಂಬ ಮಹತ್ವದ ನಿರ್ಧಾರವನ್ನು ಏಕಪಕ್ಷೀಯವಾಗಿ

ಕೈಗೊಂಡು, 'ನೀನು ನನ್ನ ಹೊಣೆ' ಎಂದು ಅವನನ್ನು ಬಂಧಿಸಿಬಿಟ್ಟಳು. ಅವನ ತಲೆ ಗಿಮ್ಮೆನ್ನುತ್ತಿತ್ತು. ಬಾಯಿ ಬಿಗಿಯುತ್ತಿತ್ತು. ಅವನು ವಾದ ಮಾಡಲಾರದಷ್ಟು ಬಳಲಿದ್ದನು. ಅವನಿಗಾಕ್ಷಣದಲ್ಲಿ ಅವಳು ಬೇಕಿತ್ತು. ಅವಳು ಮೈದಡವುವುದು, ಮುದ್ದು ಮಾಡುವುದು, ಮಗುವಂತೆ ಆದರಿಸಿ ಆರೈಕೆ ಮಾಡುವುದು ಬೇಕಿತ್ತು. ಅವನ ಈ ದೌರ್ಬಲ್ಯ ಮೇಲುಗೈ ಸಾಧಿಸಿ ಅವಳು ಹೇಳಿದ್ದಕ್ಕೆಲ್ಲಾ ಒಪ್ಪಿಕೊಂಡು ಅಲ್ಲೇ ಉಳಿದು ಅನಾಹುತ ಮಾಡಿಕೊಂಡನು.

ಶ್ರೀಕಾಂತ ತನ್ನ ದೇಹ ಸಂಸ್ಕಾರದ ವಿವರಗಳನ್ನು ರೂಮಿನ ಬಾಗಿಲಿಗೆ ಕಿವಿ ಹಚ್ಚಿ ಕೇಳಿಸಿಕೊಂಡನು. ತನ್ನದೇ ದೇಹ ಸಂಸ್ಕಾರದ ವಿವರಗಳನ್ನು ಕಿವಿಯಾರೆ ಕೇಳಿಸಿಕೊಳ್ಳುವುದೆಷ್ಟು ಸಂಕಟದ ವಿಷಯ. ಅದೂ ಶ್ರೀಕಾಂತನಂಥಾ ಕೇವಲ ಹದಿನೆಂಟರ ಅಪಕ್ವ ವಯಸ್ಸಿನ ಹುಡುಗನಿಗೆ! ಮೂರ್ತಿಗಳ ಮನೆಗೆ ಹೋಗಿಬಂದ ಮೇಲೆ ಪಮ್ಮಿ ಅವನಿಗೆ ಬೇಸರವಾಗುವುದೆಂದು ಎಲ್ಲಾ ವಿವರವನ್ನೂ ಹೇಳಿರಲಿಲ್ಲ. ರಾಯರು ಮಾತ್ರ ಎಲ್ಲವನ್ನೂ ಮಗಳಿಗೆ ಸಾಂಗವಾಗಿ ಹೇಳಿದರು. ರಾಯರು ಸ್ನೇಹಿತನ ಮನೆಯ ದುರಂತದ ಕಥೆಯನ್ನು ಕರುಣಾಜನಕವಾಗಿ ನಿರೂಪಿಸುತ್ತಿದ್ದರೆ ತಾನು ಕೇಳಿಸಿಕೊಳ್ಳುತ್ತಿರುವುದು ತನ್ನದೇ ಕಥೆ ಎಂಬ ಅರಿವು ಬಂದಾಗ ನಡುಗಿಹೋದನು ಶ್ರೀಕಾಂತ. 'ಹೌದು! ತಾನು ಸತ್ತಿದ್ದೇನೆ. ಅಪ್ಪ ಅಮ್ಮ ಇದ್ದ ಒಬ್ಬನೇ ಮಗನನ್ನು ಕಳೆದುಕೊಂಡು ಅಳುತ್ತಿದ್ದಾರೆ' ಎಂದು ದುಃಖಿಸುವನು. ತಾನೀಗ ಚಟಾಕು ಬೂದಿ ಹಾಗೂ ಇಜ್ಜಲಿನ ಚೂರು ಮಾತ್ರವೇ ಎಂಬ ಸತ್ಯ ಗೊತ್ತಾದಾಗ ದಂಗುಬಡಿದು ಹೋದನು. ಪರಿಮಳ ಅವನನ್ನು ಸಂತೈಸುವಳು. ಅಲ್ಮೇರಾದಲ್ಲಿ ಕೂತು ಅಭ್ಯಾಸವಿಲ್ಲದವನು ಬಿಳಿಚಿಕೊಂಡುಬಿಡುವನು. ಬೀಗದ ಕೈ ಕಿಂಡಿಯಿಂದ ಉಸಿರೆಳೆದೂ ಎಳೆದೂ ಬಳಲುವನು. ಜ್ವರವೂ ಬಂದ ಹಾಗಾಗುವುದು. ಬೆಕ್ಕಿನ ಬೋಗುಣಿಯಲ್ಲಿ ಪರಿಮಳ ಕಲಸಿ ತಂದುದನ್ನೇ ಆದಷ್ಟು ತಿಂದು, ತಿರುಗಿ ನುಸಿಗುಳಿಗೆಯ ವಾಸನೆಯ ಅಲ್ಮೇರಾದಲ್ಲಿ ಅಡಗುವನು. ಅವನು ಪಮ್ಮಿಯ ರೂಮಿನಲ್ಲಿ ವಾಸಮಾಡಲು ಶುರುಮಾಡಿ ನಾಲ್ಕು ದಿನಗಳಷ್ಟರಲ್ಲಿ ತನ್ನ ಸಾವನ್ನು ಅರಗಿಸಿಕೊಳ್ಳುವ ಮಟ್ಟಕ್ಕೆ ಸಮತೋಲನ ಸಾಧಿಸುವನು. ಅಪ್ಪ ಮನೆಯಲ್ಲಿಲ್ಲವೆಂದು ಮಳೆಬಂದು ನಿಂತ ಒಂದು ಶುಭ್ರ ಸಂಜೆ ಪಮ್ಮಿ ಅವನನ್ನು ತಾರಸಿಯ ಮೇಲೆ ಕರೆದೊಯ್ಯುವಳು. ಆಗ ತಾನು ಚಿಕ್ಕಂದಿನಲ್ಲಿ ಕಂಡ ಚೋಟುಲಂಗದ ಪಮ್ಮಿಯ ಬಗ್ಗೆ ಅವಳಿಗೆ ಹೇಳುವನು.

'ನೀನು ಸತ್ತಿಲ್ಲ, ಅವಸ್ಥಾಂತರ ಹೊಂದಿದ್ದೀಯ; ಚಿಟ್ಟೆಯಂತೆ. ಹುಳದ ರೂಪ ಕಳಚಿ ಚಿಟ್ಟೆಯಾಗಿ ಹಾರಿ ನನ್ನ ಹತ್ತಿರ ಬಂದಿದ್ದೀಯ' ಎಂದು ಪಮ್ಮಿ ಹೇಳಿದಾಗ ಅವನು ಹೇಳುತ್ತಾನೆ, 'ನಾನು ಚಿಟ್ಟೆಯಲ್ಲ, ಗೆದ್ದಲು. ನನ್ನಮಟ್ಟಿಗೆ ಹುಟ್ಟು ಸಾವು ಎರಡೂ ಒಟ್ಟಿಗೆ ಘಟಿಸಿಬಿಟ್ಟಿವೆ. ಹದಿನೆಂಟು ವರ್ಷದ ನನ್ನ ಬದುಕು ಸತ್ತಿದೆ. ಈ

ಬದುಕು ಬಂಧಿಯಾಗಿದೆ. ಇದು ಬಿಡುಗಡೆಯಾಗಬೇಕು. ನಿನಗೆ ಬೇಸರವಾಗುತ್ತದೆ, ನೋವಾಗುತ್ತದೆ. ಆದರೂ ಬಿಡುಗಡೆಯಾಗಬೇಕು. ಇದು ನನ್ನ ನಿಯತಿ' ಎನ್ನುತ್ತಾನೆ. ಚಿಕ್ಕಂದಿನಲ್ಲಿ ಕೇಳಿದ ಗರುಡ ಪುರಾಣದ ವಿವರಗಳನ್ನು ಅವಳಿಗೆ ಹೇಳುತ್ತಾನೆ. 'ಹದಿಮೂರು ದಿನಗಳಲ್ಲಿ ಮೊಣಕೈಯಷ್ಟಿದ್ದ ಜೀವ ಹೆಬ್ಬೆರಳಿನ ಗಾತ್ರವಾಗಿ ಬಿಡುಗಡೆ ಆಗುತ್ತದೆ. ಮನೆಯಲ್ಲಿ ಕರ್ಮ ಮಾಡುತ್ತಿದ್ದಾರೆ. ನನ್ನ ಪ್ರೇತವು ವ್ಯರ್ಥವಾಗಿ ಅಂಡಲೆಯದೆ, ಹಿಂದಿರುಗದೆ, ಮುಂದೆ ಹೋಗಲೀ ಎಂದು ಮಾಡ್ತಿದ್ದಾರೆ. ಅಪ್ಪನ ಆಶಯ, ಅಮ್ಮನ ಆಶಯ, ಮನೆತನದ ಆಶಯ, ಎಲ್ಲವೂ ಅದೇ ಆಗಿದೆ. ನಿನ್ನದೂ ಅದೇ ಆಗಬೇಕು' ಎನ್ನುತ್ತಾನೆ. 'ನಾನು ಪ್ರೇತವೆಂದು ಎನಿಸಿಲ್ಲ. ಆದರೆ ಜೀವದ ಬೆಲೆ ತಿಳಿದಿದೆ' ಎನ್ನುವ ಶ್ರೀಕಾಂತ, 'ಈ ಮೊದಲು ತಿಳಿದಿರಲಿಲ್ಲ. ಬರೇ ಜೀವಿಸಿದ್ದೆ; ಬೆಲೆ ತಿಳಿದಿರಲಿಲ್ಲ. ನಾನು ಉಸಿರಿಗೆ ಹಾತೊರೆಯುತ್ತೇನೆ. ಬರೀ ಉಸಿರಿಗೇ ಏನು, ಊಟಕ್ಕಾಗಿ, ನಿನ್ನೊಂದಿಗೆ ಮಲಗಲು ಹಾತೊರೆಯುತ್ತೇನೆ' ಎಂದು ಒಪ್ಪಿಕೊಳ್ಳುತ್ತಾನೆ. ಬದುಕಿನ ಬೆಲೆ ತಿಳಿಯಲು ಇಷ್ಟು ದೊಡ್ಡ ದುರಂತವಾಗಬೇಕಿತ್ತೆ?

ಈ ದುರಂತಕ್ಕೆ ಅವನಮ್ಮ, ಈ ಸಮಾಜ, ಎಲ್ಲಾ ಕಾರಣರು ಎನಿಸುತ್ತದೆ ನನಗೆ. ಮಕ್ಕಳನ್ನು ಸಹಜವಾಗಿರಲಿಕ್ಕೆ ಬಿಡಬೇಕು, ಸರಳವಾಗಿರಲಿಕ್ಕೆ ಬಿಡಬೇಕು. ಇತ್ತ ಕಡೆಯಿಂದ ಮಗ ಸಾಫ್ಟ್‌ವೇರ್ ಇಂಜಿನಿಯರ್ ಆಗಲಿಲ್ಲ ಅಂತ ಕೊರಗುವುದು, ಅತ್ತ ಕಡೆಯಿಂದ ಅಪ್ಪ ಹಾಕಿಟ್ಟ ಆಲದ ಮರಕ್ಕೆ ಜೋತು ಬೀಳಲಿ ಅಂತ ಬಯಸುವುದು ಯಾಕೆ ಎಂಬುದು ಅವನ ಅಸಹನೆ. ಪೋಷಕರು ಮಕ್ಕಳ ಮೇಲೆ ಈ ರೀತಿಯ ಒತ್ತಡಗಳನ್ನು ಹೇರುವುದು ಸಾಮಾನ್ಯವಾಗಿರುವ ಈ ದಿನಗಳಲ್ಲಿ ಇಂಥ ಒತ್ತಡಗಳು ಮಕ್ಕಳಿಗೆ ತರಬಹುದಾದ ಇಬ್ಬಂದಿಯನ್ನೂ ಅದರ ಘೋರ ಪರಿಣಾಮಗಳನ್ನೂ ಲೇಖಕರು ಅಂಥದ್ದೊಂದು ಇಬ್ಬಂದಿತನದ ಕೂಸು ಈ ಶ್ರೀಕಾಂತನ ಮೂಲಕ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

'ತಾನೂ ಸಹಿತ ಪಮ್ಮಿಯ ಸೆರಗಲ್ಲಿ ಬಿಗಿದ ಕಲ್ಲು, ಅಷ್ಟೇ! ಹೆಣಕ್ಕೆ ಹೊದಿಸಿದ ಗಂಜಿ ತೆಗೆಯದ ಬಟ್ಟೆಯಲ್ಲಿ ಕಟ್ಟಿದ ಕಲ್ಲಿನಂತೆ' ಎಂದು ಅರಿವಾದಾಗ ಶ್ರೀಕಾಂತನಲ್ಲಿ ಬಿಡುಗಡೆಯ ಆಕಾಂಕ್ಷೆ ತೀವ್ರವಾಗುತ್ತದೆ. 'ಸಂಸಾರ ಮಾಡಿಯೂ ಸಂಸಾರದಿಂದ ಪ್ರತ್ಯೇಕಗೊಳ್ಳಬೇಕು. ಪ್ರೀತಿಸಿದರೂ ಪ್ರೀತಿಯಿಂದ ಪ್ರತ್ಯೇಕಗೊಳ್ಳಬೇಕು. ಹಸಿವು, ನೀರಡಿಕೆ, ಬಯಕೆ... ಎಲ್ಲವನ್ನೂ ಸವಿದೂ ಎಲ್ಲದರಿಂದ ಪ್ರತ್ಯೇಕಗೊಳ್ಳಬೇಕು. ಕಡೆಗೊಮ್ಮೆ ಉಸಿರಿನಿಂದಲೇ ಪ್ರತ್ಯೇಕಗೊಂಡು ಮರೆಯಾಗಬೇಕು. ಈ ಬದುಕಿನಿಂದ ಬಿಡುಗಡೆ ಪಡೆಯದೇ ಹೋದರೆ ಇದ್ದರೂ ಇಲ್ಲದಂತಾಗಿ ಬದುಕಬೇಕಾಗುತ್ತದೆ. ಕೂಡದು! ಖಂಡಿತಾ ಕೂಡದು' ಎಂದು ನಿರ್ಧರಿಸುತ್ತಾನೆ. ಮೊದಮೊದಲು ಪಮ್ಮಿ ತಂದುಕೊಟ್ಟ ಪುಸ್ತಕಗಳನ್ನು ಓದುವಾಗ ಆತಂಕಕ್ಕೆ, ಸಾವಿನ ಹೆದರಿಕೆಗೆ ಪಕ್ಕಾಗಿ ವಿಚಿತ್ರ ನೋವು

ದೇಹವೆಲ್ಲಾ ಆವರಿಸಿ ಮರಗಟ್ಟಿದಂತೆ ಆಗುತ್ತಿದ್ದವನು, ನಂತರ ಹೆದರಿಕೆ ಹಿಮ್ಮೆಟ್ಟಿಸಿ ತಾನು ಓದುತ್ತಿರುವುದು ತನಗೆ ಸಂಬಂಧಿಸಿದ್ದೇ ಅಲ್ಲವೆಂಬ ಸಮತೋಲ ಸಾಧಿಸುತ್ತಾನೆ. ಜ್ಞಾನವೆಂಬುದು ಸಾವಿಗಿಂತ ಗೂಢವಾಗಿ, ಬದುಕಿಗಿಂತ ಆಕರ್ಷಕವಾಗಿ ಅವನಿಗಾಗ ಕಾಣತೊಡಗಿತು. 'ತಮ್ಮ ಬಾಳಿನ ಸಮತೋಲನವೆಂಬುದು ಗುಲಗಂಜಿ ತೂಕದ್ದು. ಯಾವುದು ಎತ್ತ ಎಳೆದರೂ ಯಾರಿಗೋ ಅನ್ಯಾಯವಾಗುತ್ತದೆ. ತಾನು ಮತ್ತೊಂದು ದೇಹ ಧರಿಸಿಕೊಂಡು ಇದೇ ನಗರದಲ್ಲಿ ಜೀವಿಸಿರುವೆನೆಂದು ತಿಳಿದರೆ ಅಪ್ಪ ಅಮ್ಮನಿಗೆ ನೋವಾಗುತ್ತದೆ, ಮಾವನಿಗೆ ನೋವಾಗುತ್ತದೆ. ಹಾಗೆಂದು ದೇಹ ತ್ಯಾಗ ಮಾಡಿದರೆ ದೇಹ ಧರಿಸಿರುವವಳಿಗೆ ನೋವಾಗುತ್ತದೆ. ಹೌದು! ಇವಳನ್ನು ಸಿದ್ಧಮಾಡಬೇಕು. ಇಲ್ಲ! ಏನನ್ನೂ ಹೇಳುವುದಿಲ್ಲ... ಅವಳೇ ಎಲ್ಲವನ್ನೂ ತಿಳಿದುಕೊಳ್ಳಲಿ' ಎಂದು ಕೊನೆಗೆ ನಿರ್ಧರಿಸುತ್ತಾನೆ. ಹದಿಮೂರನೆಯ ರಾತ್ರಿ ಕಳೆಯುವಷ್ಟರಲ್ಲಿ ಕಾಡಿನ ಹಕ್ಕಿಯಂತೆ ಹಾರಿ ಮರೆಯಾಗಿ ಹೋಗುತ್ತಾನೆ.

**ವರ:**

ಏಳು ಅಡಿ ಒಂಬತ್ತು ಇಂಚು ಅಂದಾಜು ಎತ್ತರದ ಅತಿಮಾನವನಂಥಾ ವರನ ಬಗ್ಗೆ ಏನೆಂದು ಹೇಳುವುದು? ವರನಿಗೆ ಆಟವೆಂದರೆ ಬೇಟೆ, ಮತ್ತು ಹವ್ಯಾಸವೆಂದರೆ ಅಂತರ್ಧಾನವಾಗುವುದು. ಹಗಲು ಮಲಗುವುದು, ಇರುಳು ಹೊರಡುವುದು ವರನ ಅಭ್ಯಾಸ. ಇಂಥವನು, ಕಂಪ್ಯೂಟರನ್ನು ಆಧರಿಸಿದ ಅಳಸಿಂಗ ಶರ್ಮನೆಂಬ ಬ್ರೋಕರನಿಂದ ಪರಿಮಳೆಗೆ ಹೊಂದಿಸಲ್ಪಟ್ಟ ವರ. 'ನಿಮಗೆ ತಾಳ್ಮೆ ಇಲ್ಲ. ಯಾವುದರಲ್ಲೂ ನಂಬಿಕೆ ಇಲ್ಲ. 'ಮುನ್ನುಗ್ಗಿ ಹೋಗದಿದ್ದರೆ ಕೊರಮರು ಬದುಕಲಿಕ್ಕೆ ಬಿಡುವುದಿಲ್ಲ' ಎಂಬುದು ನಿಮ್ಮ ಗಾಯತ್ರಿ ಮಂತ್ರ. ಸಿಟ್ಟು ಕಡಿಮೆ ಮಾಡಿಕೊಳ್ಳಬೇಕು ನೀವು. ಮಹತ್ವಾಕಾಂಕ್ಷೆ ಕಡಿಮೆ ಮಾಡಿಕೊಳ್ಳಬೇಕು' ಎನ್ನುತ್ತಾನೆ ಬ್ರೋಕರ್. ವರ ಅಂಥಾ ಮಾತುಗಳನ್ನು ಸಹಿಸಿಕೊಳ್ಳಬಲ್ಲವನಾಗಿದ್ದ. ಅವನಿಗೆ ಅಹಂಕಾರವಿರಲಿಲ್ಲ. ಆದರೆ ಮುನ್ನುಗ್ಗಿ ಹೋಗುವ ಬಗ್ಗೆ ಇದ್ದ ಒತ್ತಾಸೆ ಹಾಗೂ ವ್ಯವಸ್ಥೆಯ ಬಗ್ಗೆ ಇದ್ದ ತೀವ್ರತರವಾದ ಅಸಹನೆ ಎರಡೂ ಸೇರಿಕೊಂಡು ವರನನ್ನು ರಾಕ್ಷಸನನ್ನಾಗಿಸಿತ್ತು.(ಆಂಗ್ರೀ ಯಂಗ್ ಮ್ಯಾನ್?). 'ಕೆಲಸಗಳು ಆಗಬೇಕು, ಬೇಗ ಆಗಬೇಕು. ಕೈಗಾರಿಕೆ ಬೆಳೆಯಬೇಕು. ದೇಶ ಬೆಳೆಯಬೇಕು. ಯಾರೂ ಸಹಿತ ಬಿಟ್ಟಿ ಕೂಳು ಕತ್ತರಿಸಬಾರದು. ಸೋಮಾರಿಗಳಿಗೆ ಯಾವುದೇ ರೀತಿಯ ಸಹನೆ ತೋರಿಸಬಾರದು' ಇದು ಅವನ ಸಿದ್ಧಾಂತ. ಮಹತ್ವಾಕಾಂಕ್ಷೆ ಮತ್ತು ಅವಸರ ಪ್ರವೃತ್ತಿ ಅವನನ್ನು ಮುತ್ತಿಕೊಂಡಾಗ ಅವನು ದೈಹಿಕವಾಗಿಯೇ ಬೆಳೆಯುತ್ತಿದ್ದ. ಮಿಕ್ಕವರನ್ನು ಹಿಮ್ಮೆಟ್ಟಿಸಿ ಮುಂದುವರೆಯಬೇಕೆಂಬ ಗುಣ (ದೋಷ?) ಅವನನ್ನು ಆವರಿಸುತ್ತಿತ್ತು. ಮಾತುಗಳೂ ಕತ್ತಿಯ ಅಲುಗಿನಷ್ಟು ನಿಖರವಾಗಿ, ಕಣ್ಣುಗಳು ಕೆಂಡದಂತೆ ಹೊಳೆಯುತ್ತಾ, ಎದುರಾಳಿಯ ಮೇಲೆರಗುತ್ತಿದ್ದವು. ಅವನಿಗೆ ತಾನು ಅಸಹಜವಾಗಿ

ಬೆಳೆಯುತ್ತಿದ್ದುದರ ಲಾಭದ ಅರಿವಿತ್ತು. ಆದರೆ, ಈ ಲಾಭಕ್ಕಾಗಿಯೇ ಅವನು ಜಿದ್ದಾಜಿದ್ದಿಗೆ ಇಳಿಯುತ್ತಿದ್ದ ಅಂದರೆ ತಪ್ಪಾಗುತ್ತದೆ. ಸ್ಪರ್ಧಾತ್ಮಕ ಮನೋಭಾವ ಎಂಬುದು ಚಿಕ್ಕಂದಿನಿಂದ ಅವನು ರೂಢಿಸಿಕೊಂಡು ಬಂದ ಸಂಸ್ಕಾರವಾಗಿತ್ತು. ಹುಲಿ-ಸಿಂಹಗಳು ಮರಿಗೆ ಬೇಟೆ ಕಲಿಸುತ್ತವಲ್ಲ, ಹಾಗೆ ಅವನಿಗೂ ಬೇಟೆಯ ತರಬೇತಿಯು ಚಿಕ್ಕಂದಿನಲ್ಲೇ ಆಗಿತ್ತು. ಇಂದಿನ ಆಧುನಿಕ ಸಮಾಜದ ವಿವೇಚನಾರಹಿತ ರ‍್ಯಾಟ್‌ರೇಸ್‌ಗೆ ತಮ್ಮ ತಂದೆ ತಾಯಿಗಳಿಂದಲೇ ತಳ್ಳಲ್ಪಡುವ ಮಕ್ಕಳೂ ವರನಂತೆಯೇ ಆಗುವರೆಂಬುದರಲ್ಲಿ ಏನಾದರೂ ಸಂದೇಹವಿದೆಯೆ?

ಆದರೆ ಅವನಿಗೆ ಇನ್ನೊಂದು ಮುಖವೂ ಇತ್ತು; ಅದು ಪಮ್ಮಿ ಕಾಣದೇ ಹೋದ ಮುಖ! ಅದು ಮಗುವಿನಂತಿರಲು ಬಯಸುತ್ತಿದ್ದ ಮುಖ! 'ಪ್ರೀತಿಸಿದರೆ ಅಹಂಕಾರ ಇಳಿಯುತ್ತದೆ' ಎಂದು ಅವನು ಯೋಚಿಸಿದ್ದನು. ತನ್ನ ಬೃಹದಾಕಾರವನ್ನು ಕಂಡು ನಾಚುತ್ತಿದ್ದನವನು. ತನ್ನ ದೇಹವು ಅಂಕೆ ಮೀರಿ ಬೆಳೆಯಬಲ್ಲದು ಎಂಬ ಸಂಗತಿಯು ಅವನಿಗೆ ಮುಜುಗರ ತರಿಸುತ್ತಿತ್ತು. ಅವನ ವ್ಯಾವಹಾರಿಕ ಮುಖ ಇದರಿಂದ ಲಾಭ ಮಾಡಿಕೊಂಡರೆ ಸಹಜ ಮುಖ ಇದರಿಂದ ಮುಜುಗರಕ್ಕೊಳಗಾಗುತ್ತಿತ್ತು! 'ಏಳೂಮುಕ್ಕಾಲಡಿಗಳ ತಾನೆಲ್ಲಿ, ಮುಗ್ಧತೆ ಎಲ್ಲಿ' ಎಂದುಕೊಂಡು ದೇಹದ ಆಕಾರಕ್ಕೆ ಮನಸ್ಸನ್ನೂ ಒಗ್ಗಿಸಿಕೊಂಡು ಸಿನಿಕನಂತೆ ವರ್ತಿಸುತ್ತಿದ್ದನು. ಆದರೆ, ಪಮ್ಮಿಯ ಮುಖ ಕಂಡಮೇಲೆ ಬದಲಾಗಬೇಕೆಂಬ ಬಯಕೆಯು ಅವನಲ್ಲಿ ಹೆಚ್ಚಾಗತೊಡಗಿತು. ಅವನು ಮದುವೆಯ ಬಗ್ಗೆ ಯೋಚನೆ ಮಾಡಿದ್ದೂ ಬದಲಾಗಬೇಕೆಂಬ ಅಭಿಲಾಷೆಯಿಂದಲೇ. ತನ್ನ ಮಿತಿಮೀರಿದ ಬೆಳವಣಿಗೆಯನ್ನು ಹತ್ತಿಕ್ಕಿಕೊಳ್ಳಬೇಕು, ತಾನೂ ಇತರರಂತೆ ಆಗಬೇಕು ಎನಿಸತೊಡಗಿತು. ಆದರೆ, ಹೇಗೆ ಹತ್ತಿಕ್ಕುವುದು ಹುಟ್ಟು ಗುಣವನ್ನು?

ವರ ಮೂಲತಃ ನಾಚಿಕೆಯ ಮನುಷ್ಯ. ಅವನಿಗೆ ಮುಜುಗರವಾದಾಗಲೆಲ್ಲಾ ಮಿತಿಮೀರಿ ಬೆಳೆಯತೊಡಗುವ ತನ್ನ ಮೈಯನ್ನು ಬೈದುಕೊಳ್ಳುತ್ತಲೇ ಪರಿಮಳೆಯ ರೂಮಿನ ಕಿಟಕಿಯಲ್ಲಿ ಇಣುಕಿನೋಡಿ ತನ್ನ ಬದುಕಿನ ಬಹುದೊಡ್ಡ ಅನಾಹುತ ಮಾಡಿಕೊಂಡನು. ಅವಳನ್ನು ನೋಡಬಂದಾಗ ಆತಂಕದಿಂದ ಒದ್ದಾಡಿ, ಮುದ್ದಾದ ಲಾನನ್ನು ಹಾಳುಗೆಡಹುವುದು ಬೇಡ ಎಂದು ನಿಂತಲ್ಲೇ ನಿಂತುಕೊಂಡ ಮೃದುಹೃದಯಿ ಅವನು. ಅನಾಹುತದ ಬಳಿಕ, ಪಮ್ಮಿಯ ಮನೆಯಿಂದ ಅವಸರವಾಗಿ ವಾಪಸ್ಸಾಗುವನು. ಮೊದಲು ಖಾಲಿ ಖಾಲಿ ಎನ್ನಿಸಿದ ಮನಸ್ಥಿತಿಯು ಕ್ರಮೇಣ ವಿಷಾದಯೋಗಕ್ಕೆ ತಿರುಗುವುದು. ಮುಜುಗರ ಕಳೆದಾಗ 'ಹೌದು! ತಾನು ವಿರಹಿ!' ಎಂದು ಅವನಿಗೆ ನಿಧಾನವಾಗಿ ಅರಿವಾಗುವುದು. ತಾನು ಪ್ರೇಮದಲ್ಲಿ ಸಿಲುಕಿದ್ದು ತಿಳಿವಿಗೆ ಬರುವುದು! ಅವನು ನಾಜೂಕು ಅರಿಯನು. ಬದುಕೆಲ್ಲಾ ಎದುರಾಳಿಯನ್ನು ಎದುರಿಸುವುದರಲ್ಲೇ ಕಳೆದಿದ್ದ ಆತನ ಮನಸ್ಸು ಪ್ರೇಮದಂಥ ಸೂಕ್ಷ್ಮ ಸಂವೇದನೆಯನ್ನು ಒಪ್ಪಿಕೊಳ್ಳಲಿಕ್ಕೆ

ಸಿದ್ಧವಿರಲಿಲ್ಲ. ಆದರೆ ಅವನ ನೆನಪಿನಲ್ಲಿದ್ದ ಮಿಕ್ಕೆಲ್ಲಾ ಸಂಗತಿಗಳನ್ನೂ ಅಳಿಸಿಹಾಕಿ ಅವುಗಳ ಜಾಗವನ್ನು ಆಕ್ರಮಿಸಿ ನಿಂತಿತ್ತು ಕಿಟಕಿಯಲ್ಲಿ ಅವನು ಕಂಡಿದ್ದ ಆ ಮುದ್ದುಮುಖ!

ವರನನ್ನು ಮಂತ್ರಮುಗ್ಧವಾಗಿಸಿದ, ಅವನಿಗೇ ಆಶ್ಚರ್ಯವೆನಿಸುವಂಥ ಬದಲಾವಣೆಗಳನ್ನು ಅವನಲ್ಲಿ ತಂದ ಆ ಮುಖ ಎಲ್ಲ ಗೋಜಲುಗಳ, ಅವಾಂತರಗಳ ನಡುವೆಯೂ ಅವನ ಮನ ಮುದಗೊಳಿಸತೊಡಗಿತ್ತು. ಅವನ ಮನಸ್ಸು ಕ್ಷಣ ಮಾತ್ರ ಕಂಡು ಮರೆಯಾದ ಅವಳ ಮುಖ ನೆನೆದಾಗಲೆಲ್ಲಾ ಅವನನ್ನಾವರಿಸಿದ ಸಂಕಟವು ಮರೆಯಾಗಿ ಮನಃಸ್ಥಿತಿಯು ಸುಖಕ್ಕೆ ತಿರುಗುತ್ತಿತ್ತು. ಅವನು ಅವಳನ್ನು ಪ್ರೀತಿಸಲಾರಂಭಿಸಿದ್ದನು. ಅವಳನ್ನು ಪಡೆಯಲೇಬೇಕೆಂದು ಅವಳಿಗೆ ಪತ್ರ ಬರೆದನು. ಪತ್ರದುದ್ದಕ್ಕೂ ಪದೇ ಪದೇ ಹಿಂದಿನ ಬಾರಿ ಆದ ಅನಾಹುತಕ್ಕೆ ಕ್ಷಮೆ ಕೇಳಿದನು. ತನ್ನ ಜೀವನದಲ್ಲಿ ಮೊದಲ ಬಾರಿಗೆ ಅವಳಲ್ಲಿ ಏನನ್ನೋ ಚರ್ಚಿಸಬೇಕೆನ್ನಿಸುತ್ತದೆಯೆಂದು ತಿಳಿಸಿದನು. ಅವನಿಗನಿಸಿದ 'ಆ ಏನನ್ನೋ' ಪ್ರೇಮವೇ ಸರಿ.

ಆದರೆ, ಪಾಪ! ವರನ ಸಭ್ಯತೆ ಹಾಗೂ ನಾಗರಿಕಪ್ರಜ್ಞೆಯೇ ಅವನ ಪ್ರೀತಿಗೆ ತೊಡಕಾಗಿ ಹೋಯಿತು. ಅವನದ್ದು ಇತರರಿಗಿಂತ ಭಿನ್ನವಾದ ಅಭಿರುಚಿ. ನಾಜೂಕಿನ ಟೆರಲಿನ್ ಪ್ಯಾಂಟಿನ ಬದಲಿಗೆ ಖಾಕಿ ಪ್ಯಾಂಟು, ಉಲ್ಲನ್ ಕೋಟಿನ ಬದಲಿಗೆ ನೀಲಿ ಡೆನಿಮ್ಮಿನ ಚಿಂದಿ ಜಾಕೆಟ್ಟು ತೊಡುವವ. ಮಿಲಿಟರಿ ಸಾಮಾನಿನ ಅಂಗಡಿಯಿಂದ ಷೂ ಕೊಂಡು ಧರಿಸಿ ಒರಟೊರಟಾದ ಇಮೇಜ್ ತಂದುಕೊಂಡವನು ಅವನು. ಈ ಒರಟು ಇಮೇಜು ಮೇಲ್ವರ್ಗದ ಅವನ ಭಾಷೆಗೆ ಹೊಂದಿಕೊಳ್ಳದೇ ಎದುರಿರುವವರಿಗೆ ಗಲಿಬಿಲಿಯಾಗುವುದು ಅವನಿಗೆ ವ್ಯವಹಾರದಲ್ಲಿ ಲಾಭ ತಂದರೂ ಇದರಿಂದ ಅವನಿಗೆ ಒಳಗೊಳಗೇ ಸಂತೋಷವಿದ್ದರೂ ಅದೇ ಕಾರಣಕ್ಕಾಗಿ ಅವನು ಅವಳ ದೃಷ್ಟಿಯಲ್ಲಿ ಸೋತುಹೋದನು! ವರ ಅಪ್ಪಟ ಆಧುನಿಕ ಮನುಷ್ಯ. ಕಂದಾಚಾರದಲ್ಲಿ ನಂಬಿಕೆ ಇರಲಿಲ್ಲ. ಅವನಿಗೆ ಜಾತಿಗಳು, ಮಠಗಳು, ಕೋಮುಗಳು, ಇತ್ಯಾದಿ ಹಳೆಯ ಕಾಲದ ಸಂಸ್ಥೆಗಳಲ್ಲಿ ನಂಬಿಕೆ ಇರಲಿಲ್ಲ. ಮಂತ್ರಿಗಳು, ಪೊಲೀಸರು, ಅಧಿಕಾರಿಗಳು, ಮಠಾಧಿಪತಿಗಳ ಹಾಗೂ ರಾಜಕೀಯ ಪಕ್ಷಗಳ ಬಗ್ಗೆಯೂ ಕೂಡಾ ನಂಬಿಕೆ ಇರಲಿಲ್ಲ. ಆದರೆ, ಅಸಹನೆ ಇತ್ತು. ಅಸಹನೆ ರಾಕ್ಷಸ ಗುಣವೆ? ಪರಿಮಳಳಿಗೆ ಅವನ ದೈತ್ಯ ದೇಹದೊಳಗಿರಬಹುದಾದ ಮುಗ್ಧ ಹೃದಯ ಕಾಣಲಿಲ್ಲ. ಅವನನ್ನು ಅವಳು ತಪ್ಪಾಗಿ ಗ್ರಹಿಸಿದಳು.

ವಿಹಾರದ ಬಗ್ಗೆ ರಮ್ಯ ನಿರೀಕ್ಷೆ ಇರಿಸಿಕೊಂಡು, 'ನಡುವೆ ಅವನು ಮುತ್ತಿಡುತ್ತೇನೆ ಅಂತ ಹಠ ಮಾಡಿದರೆ ಒಪ್ಪಿಕೊಂಡುಬಿಡುತ್ತೇನೆ' ಎಂದು ಮನಸ್ಸಿನಲ್ಲಿ ಅಂದುಕೊಂಡು ಹಲವಾರು ಬಾರಿ ಯೋಚಿಸಿ ಮೈಬಿಸಿ ಮಾಡಿಕೊಂಡಿದ್ದ ಪಮ್ಮಿ, ವರ ನಾಚಿಕೆಯಿಂದ

ಅಂತಹ ಯಾವ ಬೇಡಿಕೆಯನ್ನೂ ಅವಳ ಮುಂದಿಡದಾಗ ನಿರಾಸೆಗೊಂಡಳು. ಅವನು ಪಮ್ಮಿಯ ಕೈ ಹಿಡಿಯುವಷ್ಟು ಸಹಿತ ಮುಂದುವರಿಯಲಿಲ್ಲ. ಸಭ್ಯನೂ ಪ್ರಾಮಾಣಿಕನೂ ಮುಗ್ಧನೂ ಆಗಬೇಕೆಂಬ ಅವನ ಆಕಾಂಕ್ಷೆಯೇ ಅವನ ಪ್ರೀತಿಯನ್ನು ಸೋಲಿಸಿಬಿಟ್ಟಿತು. ಪಮ್ಮಿಯ ಕಣ್ಣಲ್ಲಿ ಕಣ್ಣಿಟ್ಟು ನೋಡುವುದಾಗಲೀ ಆವಳನ್ನು ತಾಕುವುದಾಗಲೀ ಸಾಧ್ಯವೇ ಇದ್ದಿಲ್ಲ ಅವನಿಗೆ. ಮಾಯಾಲೋಕದ ಕಿನ್ನರನಂತೆ ತೇಲಿ ತೇಲಿ ತನ್ನೆದುರು ಪ್ರತ್ಯಕ್ಷನಾಗುವ ಸುಂದರಾಂಗನೊಡನೆ ವರನನ್ನು ಹೋಲಿಸಿಯೋ ಏನೋ ಪಮ್ಮಿ ನಿರುತ್ಸಾಹಗೊಂಡುಬಿಟ್ಟದ್ದು ವರನ ದುರಾದೃಷ್ಟ. ಆದರೆ ಖಂಡಿತಾ ಅವನ ತಪ್ಪಲ್ಲ. ಅವಳು ಅವನಿಗೆ ಪರಿಪೂರ್ಣತೆಯ ಸಂಕೇತವಾಗಿದ್ದಳು. ಅಷ್ಟೊಂದು ಪರಿಪೂರ್ಣವಾದವಳನ್ನು ಹಸಿಹಸಿಯಾಗಿ ಕೈ ಹಿಡಿಯುವುದು, ಅವಳನ್ನು ಕಾಮನೆಯ ಕಣ್ಣಿಂದ ನೋಡುವುದು; ಛೆ! ಸಾಧ್ಯವೇ ಇರಲಿಲ್ಲ ಅವನಿಗೆ. ಅವನ ಹಾದಿ ಬಳಸಿನದಾಗಿತ್ತು. ಅವನ ಪ್ರಯತ್ನವು ಪೂಜ್ಯವಾಗಿತ್ತು. ಆದರೆ ವರನ ಸಂಕೋಚವು ಅವಳಿಗೆ ಅತಿ ಅನ್ನಿಸಿತ್ತು. ನಾಟಕೀಯವಾಗಿ ಸೊಂಟದ ಮೇಲೆ ಕೈಯಿಟ್ಟು ಕಚಗುಳಿಯಂತೆ ಮಾತಾಡಿ ನಗಿಸುವ ಮೋಹನಾಂಗನ ಮುಂದೆ ಅತಿ ಸಭ್ಯನಾದ ವರನು ಈ ಹತ್ತೊಂಬತ್ತರ ಹುಡುಗಿಗೆ ಪೇಲವವಾಗಿ ಕಾಣಿಸಿಬಿಟ್ಟನು. 'ಯಂತ್ರಗಳು ಸೋಮಾರಿಗಳಲ್ಲ, ಅವು ದುಡ್ಡು ತಿಂದು ಓಡಿಹೋಗುವುದಿಲ್ಲ' ಎಂದೆಲ್ಲಾ ತನ್ನ ತಾತ್ವಿಕ ನಿಲುವುಗಳ ಬಗ್ಗೆ ಕೊರೆಯುವ ಮನುಷ್ಯ, ಪ್ರೇಮದಂಥ ಬಿಸಿಭಾವನೆ ಮೂಡಿಸುವಲ್ಲಿ ವಿಫಲನಾದನು. 'ಯಂತ್ರಗಳಷ್ಟು ಮನುಷ್ಯರು ವಿಶ್ವಾಸಾರ್ಹರಲ್ಲ' ಎನ್ನುವ ವರನು, ತನಗೆ ಮೃದುತ್ವ ಕೊಡೆಂದು ಬೇಡಬೇಕಾಗಿ ಬಂದದ್ದು ಮಾತ್ರ ಮನುಷ್ಯರನ್ನೇ!

ವರನಿಗೆ ಪಮ್ಮಿಯೊಂದು ನಾಜೂಕು ವಿಸ್ಮಯ. ರೆಸ್ಟೋರೆಂಟಿನಲ್ಲಿ ಅವಳು ತಿನ್ನುವ ಪರಿಯಿಂದಲೇ ಅವನು ಮಂತ್ರಮುಗ್ಧನಾಗಿ ಹೋಗಿದ್ದನು. ಮನುಷ್ಯರು ಈ ಪರಿ ನಾಜೂಕಾಗಿರುತ್ತಾರೆಯೇ? ಪುಟ್ಟ ಹಕ್ಕಿಯ ಹಾಗಿರುವ ಅವಳನ್ನು ಕಂಡರೆ ದೈತ್ಯ ದೇಹದ ಅವನಿಗೆ ಹೆದರಿಕೆ. ಪ್ರೀತಿಸಿದರೆ ಅಹಂಕಾರ ಇಳಿಯುತ್ತದೆ ಎಂದು ಅವನು ಯೋಚಿಸಿದ್ದನು. ಪರಿಮಳಳಿಗೆ ಅವನ ಒರಟು ದೇಹದೊಳಗಿರಬಹುದಾದ ಮೃದು ಹೃದಯ ಕಾಣಲಿಲ್ಲ. ಅವನನ್ನು ತಪ್ಪಾಗಿ ಅರ್ಥೈಸಿಬಿಟ್ಟಳು. ಅವನನ್ನು ಇಷ್ಟಪಡುವ ಪ್ರಯತ್ನ ಮಾಡಿದಳಾದರೂ ವರನ ಸಂಕೋಚವು ಅವಳಿಗೆ ಅತಿ ಎನಿಸಿತ್ತು. 'ಅವಳನ್ನು ಕಾಪಾಡಬೇಕು, ಬಿಸಿಲು ಗಾಳಿ ತಾಕದಂತೆ ಜೋಪಾನ ಮಾಡಬೇಕು' ಎಂದೆಲ್ಲಾ ಅವಳ ಮೇಲಿನ ಪ್ರೇಮದಿಂದ ಬಡಬಡಿಸುತ್ತಿದ್ದ ಅವನ ದೈನ್ಯತೆ ಅವಳನ್ನು ರೇಗಿಸಿತು. ಅವನ ಸ್ಪರ್ಶ ಅಸಹ್ಯ ಎನಿಸತೊಡಗಿತು. ವರನಿಗೆ ಅವಳನ್ನು ಮುದ್ದಿಸಬೇಕು ಎನಿಸುತ್ತಿತ್ತು. ಹೀಗೆ ದೈನ್ಯತೆಯಿಂದ ಗರಬಡಿದು ನಿಂತಿರುವ ಬದಲು ಮುದ್ದಿಸಿಬಿಟ್ಟಿದ್ದರೆ ಅವನು ಗೆದ್ದುಬಿಟ್ಟಿರುತ್ತಿದ್ದನು. ಕೇವಲ ಮಾತಾಡಿ ಮುಖ ಹಿಂಡಿಕೊಂಡು ಅವನು

ಸೋತುಹೋದನು. ಅವನು ಕೈ ಹಿಡಿದುಕೊಂಡಾಗ ಯಾರಾದರೂ ನೋಡಿಯಾರು ಎಂದು ಮುಜುಗರಪಟ್ಟ ಪಮ್ಮಿ ನಂತರ ತಾನವನನ್ನು ಪ್ರೋತ್ಸಾಹಿಸಬೇಕಾಗಿತ್ತೆ ಎಂದು ಯೋಚಿಸಿ ಟ್ರಕ್‌ನ ಬಳಿಗೆ ಹೋಗಿ ಕೈ ಚಾಚಿ, 'ಪ್ಲೀಸ್' ಅಂದಳಾದರೂ, ಮೇಲೆಳೆದುಕೊಂಡಾಗ ಅವನು ಚುಂಬಿಸಿದರೆ ಚುಂಬಿಸಲಿ ಎಂದು ಬಯಸಿದಳಾದರೂ ಅಷ್ಟೊತ್ತಿಗೆ ಎಲ್ಲಾ ಮಾನವ ಪ್ರಯತ್ನವನ್ನೂ ಮೀರಿ ವರನು ಮುರುಟಿ ಹೋಗಿದ್ದನು. ಅವರಿಬ್ಬರ ಮುಖಗಳು ಹತ್ತಿರ ಬಂದಿದ್ದರೂ ಚುಂಬಿಸಲಾರದೇ ಹೋದನು. ಪಮ್ಮಿ ಮನೆಯಿಂದ ದೂರಕ್ಕೇ ಟ್ರಕ್ ನಿಲ್ಲಿಸಿರೆಂದಾಗ ಅವನಾಗಲೇ ಹಾಗೆ ಮಾಡುವುದೆಂದು ನಿರ್ಧರಿಸಿದ್ದರೂ ಅವಳ ಒರಟುತನಕ್ಕೆ ಅವನು ನೊಂದುಕೊಂಡನು. ತನ್ನ ತಪ್ಪು ಅರಿತು ಅವಳು, 'ಮನೆಗೆ ಬನ್ನಿ' ಎಂದಾಗ ಅವನಿಗೆ ಅವಳ ಕರೆಯಲ್ಲಿ ಸೌಜನ್ಯ ಕಾಣಿಸಿತೇ ವಿನಃ ಸೆಳೆತ ಕಾಣಲಿಲ್ಲ.

ಕೆಳವರ್ಗದ ಕುಡುಕರ ಸ್ವಾರ್ಥ, ಸಣ್ಣತನ ಎಲ್ಲದರ ಅರಿವಿದ್ದರೂ ಅವರು ಏನನ್ನೂ ಬಚ್ಚಿಡದ ನೇರವಂತರೆಂದೂ, ಮೇಲ್ವರ್ಗದಲ್ಲಿ ಕಾಣುವ ಗುಮ್ಮನಗುಸುಕತನವು ಇವರಲ್ಲಿ ಕಾಣುವುದಿಲ್ಲ ಎಂದೂ, ಅವರಲ್ಲಿ ಆಪ್ತತೆ ಕಂಡುಕೊಳ್ಳುವ ವರ ರಾಕ್ಷಸ ಹೇಗಾದಾನು? ಆದರೆ, 'ಕುಡುಕರ ಒರಟು ವಾಸನೆಗೆ ಹೊಂದಿಕೊಂಡ ನನಗೆ ನವಿರಾದ ಪರಿಮಳಗಳು, ಸಭ್ಯ ನಾಗರಿಕತೆ ದಕ್ಕೀತಾದರೂ ಹೇಗೆ? ಹೂಗಳು ನಲುಗದಂತೆ ಹಿಡಿಯಬಲ್ಲವೇ ನನ್ನೀ ಕೈಗಳು?' ಎಂದು ಆತಂಕಪಡುವ ವರನು ಅವಳನ್ನು ಗಾಳಿ ಬಿಸಿಲುಗಳಿಂದ ಕೂಡಾ ಕಾಪಾಡಬೇಕೆಂದು ಆಶಿಸಿದವನು. ಅವಳೆಷ್ಟು ನಾಜೂಕೆಂದು ಅಚ್ಚರಿಪಡುತ್ತಲೇ ಉಳಿದವನು. ಶ್ರೀಕಾಂತನ ಹಠ, ಮುನ್ನುಗ್ಗುವ ಪ್ರವೃತ್ತಿ ಇವನಲ್ಲಿಲ್ಲ. ಆ ಕಾರಣಕ್ಕಾಗಿಯೇ ಅವನು ಪಮ್ಮಿಯನ್ನು ಕಳೆದುಕೊಂಡನೆ?

ಪರಿಶುದ್ಧ ಪ್ರೇಮದ ಗುಂಗಿನಲ್ಲಿದ್ದವನಿಗೆ ಬೀದಿ ಗಿರಾಕಿಗಳ, ಸೇಲ್ಸ್‌ಮೆನ್ನಿನ ನಿರ್ಲಜ್ಜ ಮಾತುಗಳು ಅಸಹ್ಯ ತರಿಸಿ, ತನಗೆ ಮೃದುತ್ವ ಕೊಡೆಂದು ಮನದಲ್ಲೇ ಬೇಡಿಕೊಳ್ಳುತ್ತಾ ಅವಳಿಗೆ ಫೋನ್ ಮಾಡಿದವನಿಗೆ ತನ್ನದೇ ಚಿಂತೆಗಳ ಸುಳಿಯಲ್ಲಿ ಸಿಕ್ಕಿಕೊಂಡು ಗಲಿಬಿಲಿಗೊಂಡಿದ್ದ ಪಮ್ಮಿಯ ಭಾವರಹಿತ ದನಿ ಮತ್ತಷ್ಟು ಮತಿಗೆಡಿಸಿತು. ಹತಾಶನಾದ ಅವನು ತನ್ನ ಆರ್ದ್ರತೆ ಕಳೆದುಕೊಂಡು ಅವನ ಮತ್ತೊಂದು ಮುಖ ಜಾಗ್ರತವಾಗಿಬಿಟ್ಟಿತು. ಸಾರಾಯಿ ಅಂಗಡಿಯ ಮುಂದೆ ಅಷ್ಟು ಹೊತ್ತೂ ಕಂಡಿದ್ದ ವ್ಯಾವಹಾರಿಕ ರತಿ, ಮಾಧುರ್ಯವಿರದ ದಾಂಪತ್ಯ, ಕೊಚ್ಚೆಯಲ್ಲಿ ಮಲಗಿದ್ದ ದೇಹಗಳು ಅವನ ಒರಟುತನವನ್ನು ಮೀಟಿ ಮಾತಾಡಿಸಿದವು. ತಾನು ಆಡಬೇಕೆಂದಿದ್ದ ಮಾತನ್ನು ತೀರಾ ಸರಳೀಕರಿಸಿ ಅವನಿಂದ ಆಡಬಾರದ ಮಾತು ಆಡಿಸಿದವು. ಪ್ರೀತಿ, ಪ್ರೇಮ, ವಿರಹ, ಇತ್ಯಾದಿ ಇತ್ಯಾದಿ ಎಲ್ಲವನ್ನೂ ಗುಡಿಸಿ ಹಾಕಿ, ನೇರವಾಗಿ ಅವನು 'ನನ್ನ ಜೊತೆ ಮಲಗು ಬಾ' ಎಂದು ಕರೆದನು! ಶ್ರೀಕಾಂತ ಅದೇ ಹೊತ್ತಿಗೆ ಮಾಡಿದ್ದು ಅದನ್ನೇ. ಅವನು ಕಾವ್ಯಮಯವಾದ ಮಾತುಗಳಿಂದ ಅವಳನ್ನು ಒಲಿಸಿದ್ದನು, ಅಷ್ಟೇ.

ಪಮ್ಮಿಯ ಭಾವರಾಹಿತ್ಯವನ್ನು ವರನು ತಿರಸ್ಕಾರವೆಂದೇ ಎಣಿಸಿದನು. ಅವಳ ತಿರಸ್ಕಾರವನ್ನು ಅವನು ಸಹಿಸಲಾರದೇ ಹೋದನು. ವರನು ಸರಿರಾತ್ರಿ ಫೋನ್ ಮಾಡಿ 'ನನ್ನ ಜೊತೆ ಮಲಗು ಬಾ' ಅಂದಾಗ ಒಂದು ಪಕ್ಷ ಅವಳು ಒಪ್ಪಿಬಿಟ್ಟಿದ್ದರೆ, ಅಥವಾ ಒಪ್ಪುವುದು ಸಾಧ್ಯವಿದ್ದಿದ್ದರೆ, ಕಗ್ಗಂಟಾಗಿರುವ ಈ ಸಮಾಜವು ಒಪ್ಪಬಲ್ಲಂಥ ವಾತಾವರಣವನ್ನು ಸೃಷ್ಟಿಸಿರುತ್ತಿದ್ದರೆ, ವರನು ಖಂಡಿತವಾಗಿ ವಧುವಿನ ಪ್ರೀತಿ ಗಳಿಸಿಕೊಂಡಿರುತ್ತಿದ್ದನು. ಆದರೆ ಹಾಗಾಗಲಿಲ್ಲ. ಹಾಗಾಗಲು ಸಾಧ್ಯವೂ ಇರಲಿಲ್ಲ.

ವರನು ಸರಳವಾಗಿ ಸಹಜವಾಗಿ ಅಭಿವ್ಯಕ್ತಿಸಿದ್ದ ಆ ನುಡಿಗಳ ಹಿಂದೆ ನಿಜವಾದ ಪ್ರೀತಿ ಇತ್ತು, ಕಾಳಜಿ ಇತ್ತು. ಎಲ್ಲಕ್ಕಿಂತ ಮಿಗಿಲಾಗಿ ಅವಳ ಒಟ್ಟು ವ್ಯಕ್ತಿತ್ವದ ಬಗ್ಗೆ ಗೌರವವಿತ್ತು. ನನಗೆ ಕೊಡೆಂದು ಬೇಡುವುದು ನಾವು ನಮಗಿಂತ ಮಹಾನ್ ಎಂದು ಭಾವಿಸಿಕೊಂಡಿರುವವರ ಬಳಿ ತಾನೆ? ಆದರೆ ಅವಳಿಗದು ಅರ್ಥವಾಗದೇ ಹೋಯಿತು. ಅವನ ಭಾಷೆಯ ತೊಡಕಿನಿಂದ ಬಳಲಿದಳು ಅವಳು, ಅಥವಾ ವಿಧಿಯ ಆಟಕ್ಕೆ ಸಿಲುಕಿದಳೆ? ವರನದ್ದೂ ತಪ್ಪಿತ್ತು. ಅವನ ನುಡಿಯಲ್ಲಿ ತಪ್ಪಿರಲಿಲ್ಲ, ಆದರೆ ನುಡಿದ ರೀತಿಯಲ್ಲಿ, ನುಡಿದ ಸಂದರ್ಭದಲ್ಲಿ ಪ್ರಾಯಶಃ ತಪ್ಪಿತ್ತು. ಅವನ ಉದ್ವೇಗ ಅವನಿಂದ ಈ ಕೆಲಸ ಮಾಡಿಸಿತೆಂಬುದನ್ನು ನೆನಪಿಡಬೇಕು, ಉದ್ವೇಗ ಅವನ ಹುಟ್ಟುಗುಣ! ಅಶ್ಲೀಲವಾಗಿ ಮತ್ತು ಹೇಸಿಗೆಯಾಗಿ ಕೇಳಿಸಿದ ಅವನ ನುಡಿಗಳು ನಿಜವಾಗಿ ಅಶ್ಲೀಲವಾದದ್ದೆ? ಆತುರದ್ದು ಎನ್ನಬಹುದೇನೊ? ವರನು ಈ ಆಧುನಿಕ ಸಮಾಜದ ಎಲ್ಲಾ ಗೋಜಲುಗಳನ್ನು ಮೀರಿ ಸಹಜತೆಗೆ ಮರಳಲು ತಹತಹಿಸುತ್ತಿದ್ದವನು. ಅದಕ್ಕೇ ಅಷ್ಟು ನೇರವಾಗಿ ಸರಳವಾಗಿ ಪ್ರೀತಿ ವ್ಯಕ್ತಪಡಿಸಿದ್ದು. ಅಷ್ಟು ಸರಳವಾಗಿ ಪ್ರೀತಿಯನ್ನು ವ್ಯಕ್ತಪಡಿಸಿ ಅದನ್ನು ಪಡೆಯುವುದು ಸಾಧ್ಯವಿಲ್ಲವೆ? ನಾವು ಹಕ್ಕಿ ಪಕ್ಷಿ ಮೃಗಗಳಂತಿದ್ದಿದ್ದರೆ ಸಾಧ್ಯವಾಗಬಹುದಾಗಿತ್ತೇನೋ! ಆದರೆ ನಾವು ಹಕ್ಕಿ ಪಕ್ಷಿ ಮೃಗಗಳಂತಿಲ್ಲವಲ್ಲ? ನಮ್ಮದು ತೀರಾ ಸಂಕೀರ್ಣವಾದ ಅನಗತ್ಯವಾದ ಸುತ್ತು ಬಳಸಿನ ಪ್ರಕ್ರಿಯೆಯನ್ನು ಆದರಿಸುವ ನಾಗರಿಕ ಸಮಾಜ!

ಅಂದು ಅವನಂತರಂಗದಲ್ಲಿ ಮಹಾನ್ ಯುದ್ಧ ನಡೆದಿತ್ತು. ಅವನಲ್ಲಿದ್ದ ರಾಕ್ಷಸನಿಗೆ ಮರ್ಮಾಂತಕ ಪೆಟ್ಟು ಬಿದ್ದಿತ್ತು. ಅದು ಕೊನೆಯುಸಿರೆಳೆವ ಮೊದಲು ವಿಕಾರವಾಗಿ ಒರಲುತ್ತ, ವಿಹ್ವಲವಾಗಿ ನರಳುತ್ತಾ ವರನನ್ನು ಘಾಸಿಗೊಳಿಸಿತ್ತು. ರಾತ್ರಿಯೆಲ್ಲಾ ದೊಂಬಿ ಎಬ್ಬಿಸಿ ಮನೆಗೆ ಬಂದಾಗ, ಆ ಶುಭ್ರ ಬೆಳಗಿನಲ್ಲಿ ಸಾರಿಸಿ ರಂಗೋಲೆ ಇಡುತ್ತಿದ್ದ ಮುನಿಯಮ್ಮನನ್ನು ಕಂಡನು. ಅವನಿಗೂ (ಶ್ರೀಕಾಂತನ ಹಾಗೆಯೇ) ಸಾಂತ್ವನ ಬೇಕಿತ್ತು. ಅದಕ್ಕೇ ಮುನಿಯಮ್ಮನನ್ನು ತನ್ನೊಂದಿಗೆ ಮಲಗು ಬಾ ಎಂದು ಕರೆದನು. ಅವನೆಲ್ಲಾ ಸಿಟ್ಟು, ಅಶಾಂತಿ, ಅತೃಪ್ತಿ, ಎಲ್ಲವೂ ಲಾವಾರಸದಂತೆ ಹೊರಬಂದು, ತನ್ನೊಳಗಿನ ನರಕವನ್ನೆಲ್ಲಾ ಕಕ್ಕಿ ಹೊರಹಾಕಿ ವರನು ಮನುಷ್ಯನಾದನು. ಮುನಿಯಮ್ಮ ತಾಯಿಯಂತೆ ಮಮತೆ ತೋರಿದಳು. ಅಮ್ಮನನ್ನು ಮಗುವು ಅಪ್ಪಿಕೊಂಡಂತೆ ಮುನಿಯಮ್ಮನನ್ನು

ಅಪ್ಪಿಕೊಂಡು ನಿದ್ದೆಹೋದ ಅವನ ಬೆರಳುಗಳು ಮಗುವಿನ ಕೈ ಬೆರಳುಗಳಂತೆ ಮೃದುವಾಗಿದ್ದವು, ಅವನ ಒಳಗೆಲ್ಲಾ ಮೃದುವಾದಂತೆ. ಬಳ್ಳಿಯಿಂದ ಬಿಡಿಸಿಕೊಳ್ಳುವ ಮರದಂತೆ, ನಿದ್ರಿಸಿದ ಮಗುವಿನಿಂದ ಬಿಡಿಸಿಕೊಳ್ಳುವ ತಾಯಿಯಂತೆ (ಮರದಿಂದ ಬಿಡಿಸಿಕೊಳ್ಳುವ ಮರದಂತಲ್ಲ) ಮೇಲೇಳುವವಳು ಮುನಿಯಮ್ಮ. ಅಂದು ನಿದ್ರಿಸಿದ ವರ ನಿದ್ದೆ ಮಾಡುತ್ತಲೇ ಉಳಿದನು. ಗರ್ಭದಲ್ಲಿನ ಶಿಶುವಿನಷ್ಟು ಮುಗ್ಧವಾಗಿ, ಅಸಹಾಯಕವಾಗಿ, ಯಾವುದೇ ಭೌತಿಕ ಸಂಗತಿಗಳಿಂದಲೂ ವಿಚಲಿತನಾಗದೆ ಅವನು ನಿದ್ರಿಸಿದನು. ಮುನಿಯಮ್ಮನಿಗೆ ಥೇಟ್ ರಾಜಕುಮಾರನಂತೆ, ಅಂಥ ಅಮೋಘ ನಿದ್ರೆ ಮಾಡುತ್ತಿದ್ದವನನ್ನು ನೋಡಬಂದು ಅಲ್ಲಿ ನೆರೆದವರಿಗೆ ಮುಗ್ಧ ಗೊಮ್ಮಟನಂತೆ, ಸಕಲ ಜನರಿಗೆ ಪವಾಡದ ಗವಿಸ್ವಾಮಿಯಂತೆ ಕಂಡು, ದೈಹಿಕವಾಗಿ ಕರಗುತ್ತಾ ದೈವಿಕವಾಗಿ ಬೆಳೆಯುತ್ತಾ ಬೆಳೆಸಲ್ಪಡುತ್ತಾ ಹೋದ ವರನು ಕೊನೆಗೊಂದು ದಿನ ಇಲ್ಲವಾದನು.

ಇದು 'ಬಾಲಗೋಪಾಲ'ದ ಸಮಗ್ರ ವಿಮರ್ಶೆ ಅಲ್ಲ. ಹಲವು ಆಯಾಮ ಗಳನ್ನೊಳಗೊಂಡ, ಸಂಕೀರ್ಣವಾದ ಇಂತಹ ರಚನೆಗಳು ಒಂದೇ ಲೇಖನದ ತೆಕ್ಕೆಗೆ ಸಿಗುವುದೆಂಬ ಭ್ರಮೆ ಕೂಡ ಇಟ್ಟುಕೊಳ್ಳಲಾರೆ. ಇದು ಈ ಕೃತಿಯ ಬಗೆಗೊಂದು ಇಣುಕುನೋಟವಷ್ಟೇ.

**ಕೃತಿ ವಿವರ:** ಬಾಲಗೋಪಾಲ, ಪ್ರಸನ್ನ, ಒಂಟಿಧ್ವನಿ ಪ್ರಕಾಶನ, ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು, ೨೦೦೮, ಪು. ೩೦೦

## ‘ಮಂದ್ರ’ದಲ್ಲಿ ಕಲೆ ಮತ್ತು ಕಾಮ

–ಎಚ್. ಎ. ರಂಗಾಚಾರ್, ಇಂಗ್ಲಿಷ್ ಟೌನ್, ನ್ಯೂ ಜೆರ್ಸಿ

‘ಮಂದ್ರ’ ಡಾ. ಎಸ್.ಎಲ್. ಭೈರಪ್ಪನವರ ಸುಪ್ರಸಿದ್ಧ ಕಾದಂಬರಿ. ಅದರ ಕುರಿತು ಕೆಲವು ಆಲೋಚನೆಗಳನ್ನು ಈ ಲೇಖನದಲ್ಲಿ ನಿಮ್ಮ ಮುಂದಿಡುತ್ತೇನೆ. ಡಾ. ಭೈರಪ್ಪನವರು ಅಗ್ರಗಣ್ಯ ಕಾದಂಬರಿಕಾರರು ಮತ್ತು ನನ್ನ ಮಿತ್ರರು. ಅದರಿಂದ ಈ ಅಪಾಯಕರ ಕೆಲಸದಲ್ಲಿ ತೊಡಗುವುದು ಸರಿಯೆ ಎಂಬ ಶಂಕೆ ನನ್ನ ಮನಸ್ಸಿನಲ್ಲಿ ಮೂಡಿಬರುತ್ತಿದೆಯೆಂದು ಪ್ರಾರಂಭದಲ್ಲಿಯೇ ತಿಳಿಸಿಬಿಡುತ್ತೇನೆ.

ಅವರು ೨೭ಕ್ಕಿಂತ ಹೆಚ್ಚು ಕಾದಂಬರಿಗಳನ್ನೂ ಮತ್ತು ಇತರ ಗದ್ಯಕೃತಿಗಳನ್ನೂ ಬರೆದಿದ್ದಾರೆ. ಅವುಗಳಲ್ಲಿ ಮಂದ್ರ ೫೯೬ ಪುಟಗಳ ಒಂದು ದೀರ್ಘ ಕಾದಂಬರಿ. ಇಪ್ಪತ್ತೊಂದನೆಯ ಶತಮಾನದ ಹೊಸ ಕಾದಂಬರಿಗಳಲ್ಲಿ ಇದು ಅತಿ ಪುರಸ್ಕೃತ ಕೃತಿಯೆನಿಸಿಕೊಂಡಿದೆ. ಇಂಗ್ಲಿಷಿನಲ್ಲಿ ಮತ್ತು ಭಾರತದ ಇತರ ಭಾಷೆಗಳಲ್ಲಿ ಭಾಷಾಂತರಗೊಂಡಿದೆ. ೨೦೦೫ರಲ್ಲಿ ಮೊದಲನೆಯ ಮುದ್ರಣ ಕಂಡ ಈ ಕೃತಿ ಈಗ ೮ ಮುದ್ರಣಗಳನ್ನು ದಾಟಿ ಬಹಳ ಜನಪ್ರಿಯತೆಯನ್ನು ಪಡೆದುಕೊಂಡಿದೆ. ಬೇಕಾದಷ್ಟು ವಿಮರ್ಶೆಗಳು ಇದರ ಬಗ್ಗೆ ಈಗಾಗಲೇ ಪ್ರಕಟವಾಗಿವೆ. ಈ ಲೇಖನ ಮಂದ್ರದ ವಿಮರ್ಶೆಯಲ್ಲ; ಪ್ರಬಂಧ ಶೈಲಿಯಲ್ಲಿ ಬರೆಯುತ್ತಿದ್ದೇನೆ.

ಮಂದ್ರ ಮೊಟ್ಟಮೊದಲು ಪ್ರಕಟವಾದಾಗ ನಾನು ಕನ್ನಡ ಸಾಹಿತ್ಯದಲ್ಲಿ ಅತಿ ಮುಂದಾಳು ಬರಹಗಾರರೊಬ್ಬರನ್ನು ‘ಅದನ್ನು ಓದಿದಿರಾ, ಹೇಗಿದೆ’ಯೆಂದು ಪ್ರಶ್ನಿಸಿದಾಗ ಅವರು ‘ಚೆನ್ನಾಗಿದೆ. ಅದು ಉತ್ತರದ ಹಿಂದೂಸ್ತಾನೀ ಸಂಗೀತ ಮತ್ತು ಸಂಗೀತಗಾರರ ಜೀವನದ ಕತೆ. ನನಗೆ ಆ ಸಂಗೀತ ಅಷ್ಟು ತಿಳಿಯದು. ಕತೆ ಬಹಳ ಆಧುನಿಕ ರೀತಿಯದು’ ಎಂದು ಸ್ವಲ್ಪ ಜೋಪಾನವಾಗಿ ಅನುಮೋದನೆ ಕೊಟ್ಟಿದ್ದು ನೆನಪು. ನಾನು ಮಂದ್ರವನ್ನು ಓದಿದ್ದು ಆಮೇಲೆ. ನನಗೆ ಕರ್ನಾಟಕ ಸಂಗೀತಕ್ಕಿಂತ ಉತ್ತರಾದಿ ಸಂಗೀತವೇ ಹೆಚ್ಚು ಪ್ರಿಯ. ಅದರಲ್ಲಿ ಸಿತಾರ್ ನುಡಿಸುವುದನ್ನು ಕಲಿಯುವುದರ

ಮೂಲಕ ಒಂದಿಷ್ಟು ಶಾಸ್ತ್ರದ ಪರಿಚಯವೂ ಆಗಿದೆ. ಮುಖ್ಯ ಸಮ್ ಹಿಡಿಯುವುದೆಂದರೇನು, ಕೆಲವು ದೀರ್ಘ ಆವರ್ತಗಳನಂತರ ಅದನ್ನು ಸರಿಯಾಗಿ ಹಿಡಿದು 'ವಾಹ್' ಎನಿಸಿಕೊಳ್ಳುವುದು ಎಷ್ಟು ಕಷ್ಟ ಎಂದು ಗೊತ್ತಾಗಿದೆ. ನಾನು ಮೊದಲ ಬಾರಿಗೆ ಮಂದ್ರ ಓದಿದಾಗ ಅದರಲ್ಲಿ ನನ್ನ ಮನಸ್ಸಿಗೆ ಒತ್ತಿ ಒತ್ತಿ ಕಂಡ ಸಂಗತಿಯೆಂದರೆ ಕಥಾನಾಯಕನ ಅತಿ ನಿರರ್ಗಳ ಕಾಮುಕಪ್ರವೃತ್ತಿ. ಅದರ ನಿಜವಾದ ವೈಶಿಷ್ಟ್ಯವೆನಿಸಿದ ಸಂಗೀತ ಸಂಬಂಧಿತ ವರ್ಣನೆಯ ಸುಂದರ ಪ್ರಸಂಗಗಳಲ್ಲ. ಮೊದಲ ಬಾರಿಯ ಓದಿಗೆ ಈ ಉದ್ದವಾದ ಕತೆಯ ಕೊನೆ ಮುಟ್ಟಲು ನನಗೆ ಕಷ್ಟವಾಯಿತು. ಆದರೂ ಛಲದಿಂದ ಓದಿ ಮುಗಿಸಿದೆ. ಎರಡನೆಯ ಓದಿಗೆ ಅದರ ಕಲಾ ಸೌಂದರ್ಯ ಮತ್ತು ಬೋಧೆಯು ಮನಗಂಡಿತು. ಆಹ್, ಎಂಥ ಅದ್ಭುತವಾದ ಕೃತಿಯೆನಿಸಿತು.

ಮೊದಲ ಬಾರಿ ಓದಿದಾಗ ನನ್ನ ಕೆಲವು ಸಾಹಿತ್ಯಪ್ರೇಮಿ ವಲಯದ ಗೆಳೆಯರನ್ನು ಮಂದ್ರದ ಕುರಿತು ಅವರ ಪ್ರತಿಕ್ರಿಯೆಯೇನೆಂದು ಕೇಳಿ ಪರೀಕ್ಷಿಸಿದೆ. ಅವರಲ್ಲಿ ಕೆಲವರು ಅದನ್ನು ಓದಲು ಪ್ರಾರಂಭಿಸಿ ಮುಗಿಸಲಾರದೇ ಹೋದದ್ದು ತಿಳಿಯಿತು. ಕಾರಣ, ಇದು ಕೇವಲ ಅನಿಯತ ಸಂಭೋಗ ಸಂಗತಿಗಳ ಮಾಲೆಯಂತಿರುವ ಒಂದು ಕತೆಯೆಂಬ ಅಭಿಪ್ರಾಯ ಅವರಲ್ಲಿ ಹುಟ್ಟಿದ್ದು. ಕೆಲವು ಓದುಗರು ಇದು ಒಂದು ಅನೈತಿಕ ಮತ್ತು ಅಧಾರ್ಮಿಕ ಕತೆಯೆಂಬ ನಿರ್ಧಾರಕ್ಕೆ ಬಂದಿದ್ದರು. ಅಂತಹ ನಡತೆಗಳನ್ನು ಕತೆಯಲ್ಲಿ ಕೂಡ ಓದಿ ಸಹಿಸಲಾರದ ಪ್ರಕೃತಿಯುಳ್ಳವರು ಅವರು. ನನ್ನ ನಿಕಟ ಮಿತ್ರವಲಯದಲ್ಲಿ, ಅದರಲ್ಲೂ ಹೆಂಗಸರಲ್ಲಿ, ಈ ಬಗೆಯ ಪ್ರತಿಕ್ರಿಯೆ ಕಂಡುಬಂದುದರಲ್ಲಿ ಆಶ್ಚರ್ಯವೇನೂ ಇಲ್ಲ. ಅವರಲ್ಲಿ ಬಹು ಪಾಲು ಜನ ದಕ್ಷಿಣಾದಿ ಸಂಗೀತ ಪಕ್ಷಪಾತಿಗಳು. ಉತ್ತರಾದಿ ಸಂಗೀತ ರುಚಿ ಹತ್ತದವರು. ಮಂದ್ರದ ಮುಖ್ಯ ಕಥಾಧಾರೆಯಾದ ಉತ್ತರಾದಿ ಸಂಗೀತದ ಸೌಂದರ್ಯಪ್ರಸಂಗಗಳು ಅವರಿಗೆ ನಿಲುಕುವಂತೆ ಸಿಗಲಿಲ್ಲ. ಅದರಿಂದ ಅದರ ಕಥಾಪಾತ್ರಗಳ ಲೈಂಗಿಕ ಕ್ರಿಯಾಸರಪಳಿಯು ಅವರ ಮನಸ್ಸಿಗೆ ರಾಚುವಂತೆ ಬಡಿದವು. ಈ ಕಾದಂಬರಿಯ ಎಂಟು ಮುದ್ರಣಗಳನ್ನು ಕೊಂಡು ಓದಿರುವ ಅನೇಕರಿಗೆ ಈ ಮಟ್ಟದ ಅನುಭವವುಂಟಾಗಿರಬಹುದೆಂದು ನನ್ನ ಊಹೆ. ಈಗ ಕರ್ನಾಟಕದಲ್ಲಿ ಉತ್ತರಾದಿ ಸಂಗೀತದ ಪ್ರಭಾವ ಹೆಚ್ಚುತ್ತಿದೆ. ಅದರ ಆಸ್ವಾದಸುಖ ಬಲ್ಲ ಜನತೆಯ ಸಂಖ್ಯೆ ಬೆಳೆಯುತ್ತಿದೆ. ಆದರೂ ಇದು ನಿಜವಿರಬಹುದು.

ಅನೈತಿಕ, ಅಧಾರ್ಮಿಕವೆಂಬ ತೀರ್ಪೀಯುವ ಓದುಗರ ಜೊತೆಗೆ ಸಂಗೀತ ಮತ್ತು ನೃತ್ಯ ಕಲೆಗಳಲ್ಲಿ ಅಗ್ರಗಣ್ಯರಾದ ಕಲಾವಿದರ ಜೀವನದ ಸ್ವಾರಸ್ಯಕರ ಗುಟ್ಟು ಸಂಗತಿಗಳನ್ನು ಬಲ್ಲ ಕೆಲವು ಜನರು 'ಇದೇನು ಮಹಾ. ಈ ಕಲೆಗಳಲ್ಲಿ ಮುಂದಕ್ಕೆ ಬರಬೇಕಾದರೆ ಈ ಬಗೆಯ ಗುರುದಕ್ಷಿಣೆ ತೆರಲೇಬೇಕಾಗುತ್ತೆ' ಎಂದು ಹುಬ್ಬೇರಿಸುವವರೂ

ಇದ್ದಾರೆ. ಅವರ ಕಲಾಭಿಮಾನ ಇಂತಹ ಕೆಟ್ಟ ನಡತೆಗಳನ್ನು ಅನಿವಾರ್ಯವೆಂದು ಮನ್ನಿಸಿಬಿಡುತ್ತದೆ. ಕೆಲವು ಓದುಗರು ಈ ಕಾದಂಬರಿಯನ್ನು ಅದರ ಮಸಾಲೆ-ಲವಣದ ಪೂರೆಗೋಸ್ಕರ ಇಷ್ಟಪಡುತ್ತಾರೆ. ಇರಲಿ. ಈ ಲೇಖನದಲ್ಲಿ ಮಂದ್ರದ ಎರಡು ಮುಖ್ಯಧಾರೆಗಳಾದ ಗಾಯನಕಲೆ ಮತ್ತು ಕಾಮಗಳ ನಡುವೆ ಇರುವ ನೈಸರ್ಗಿಕ ಸಂಬಂಧದ ಬಗ್ಗೆ ಸ್ವಲ್ಪ ವಿಚಾರಮಾಡುತ್ತೇನೆ.

ಮಾನವಜಾತಿಯ ವಿಕಾಸದಲ್ಲಿ ಭಾಷೆಯ ಉಗಮವಾಗುವುದಕ್ಕಿಂತ ಮುಂಚಿತವಾಗಿಯೇ ಗಾನಶಕ್ತಿಯು ಉತ್ಪನ್ನವಾಗಿರಬೇಕೆಂದು ಹೇಳುವುದಕ್ಕೆ ಸಾಕಷ್ಟು ಆಧಾರಗಳಿವೆ. ಮೊದಲು ಒಂದು ಸ್ವರವನ್ನು ಅವಿಚ್ಛಿನ್ನವಾಗಿ ದೀರ್ಘಕಾಲ ಹಿಡಿಯುವುದಕ್ಕೆ ಬೇಕಾಗುವ ಕಂಠ ಪ್ರದೇಶದ ಬದಲಾವಣೆಗಳು ಕಾಣಿಸಿಕೊಂಡವು. ಮುಖ್ಯವಾಗಿ ಮಾನವ ಪ್ರಾಣಿಯ ಕುತ್ತಿಗೆಯಲ್ಲಿ ಕಂಠವು (larynx) ಇತರೆ ಪ್ರಾಣಿಗಳಲ್ಲಿರುವ ಸ್ಥಾನಕ್ಕಿಂತ ಕೆಳಗೆ ಇಳಿಯಿತು. ಸುಮಾರು ಮೂರು ಸಪ್ತಕದಲ್ಲಿ ಏಳು ವಿಭಿನ್ನ ಸ್ವರಗಳನ್ನು ಹೊರಡಿಸುವ ಸಾಮರ್ಥ್ಯ ಬೆಳೆಯಿತು. ಈ ಬದಲಾವಣೆಗಳು ಮೊದಲು ಆಕಸ್ಮಿಕವಾಗಿ ತಲೆದೋರಿ ಆಮೇಲೆ ಸ್ತ್ರೀಪುರುಷರ ಪರಸ್ಪರ ಕಾಮಾಕರ್ಷಣೆಯಿಂದ ವಿಕಸಿತವಾಯಿತೆಂದು ಎವಲ್ಯೂಷನ್ ಜೀವಶಾಸ್ತ್ರಜ್ಞರ ಅಭಿಪ್ರಾಯ. ಇದು ತೋಳ, ನಾಯಿ, ತಿಮಿಂಗಿಲ ಮುಂತಾದ ಇನ್ನೂ ಕೆಲವು ಪ್ರಾಣಿಗಳಲ್ಲಿ ತೋರಿಬರುತ್ತದೆ. ಆದರೆ, ನಮ್ಮ ತೀರ ಹತ್ತಿರದ ಪ್ರಾಣಿವರ್ಗದ ಚಿಂಪಾಂಜಿಗಳಲ್ಲಿಲ್ಲ. ನವಿಲು ಮುಂತಾದ ಹಕ್ಕಿಗಳಲ್ಲಿ ಬಣ್ಣಬಣ್ಣದ ಪುಕ್ಕಗಳು ಇದೇ ತರಹ ಹೆಣ್ಣುಹಕ್ಕಿಯನ್ನು ಆಕರ್ಷಿಸುವ ಕಾರಣದಿಂದಲೇ ವಿಕಸಿತವಾಗಿದೆಯಂತೆ. ಹೀಗೆ ಬಣ್ಣಬಣ್ಣದ ಪುಕ್ಕಗಳನ್ನು ಬೆಳೆಸಿಕೊಳ್ಳುವುದು ಗಂಡು ನವಿಲಿಗೆ ಹೆಚ್ಚು ಕಷ್ಟಕೊಡುವ ಸಂಗತಿಯಾದರೂ, ಅದರಿಂದ ಅದರ ಜೀವಕ್ಕೆ ಅಪಾಯಕರವಾದ ಸನ್ನಿವೇಶಗಳು ಒದಗಿಬರುವ ಸಂಭವಗಳು ಅಧಿಕವಾಗುವುದಾದರೂ, ಹೆಣ್ಣುಹಕ್ಕಿಗಳ ಆಕರ್ಷಣದ ಬಲದಿಂದ ಅದು ವಿಕಸಿತವಾಗಿದೆಯಂತೆ. ಈ ಸಿದ್ಧಾಂತಕ್ಕೆ ಲೈಂಗಿಕ ಆಕರ್ಷಜನಿತ ವಿಕಾಸವೆಂದು (evolution by sexual attraction) ಹೆಸರು. ಕೆಲವು ಮಾನವಶಾಸ್ತ್ರಜ್ಞರು (anthropologists) ಮನುಷ್ಯರಲ್ಲಿ ಕಲೆಗಳು, ಭಾಷೆ ಮತ್ತು ಭಾಷೆಯ ಆಧಾರದ ಮೇಲೆ ಬೆಳೆದಿರುವ ಸುವಿಸ್ತೃತ ಸಮಾಜದ ಪ್ರತಿಯೊಂದು ಅಂಗವೂ ಇಂತಹ ಲೈಂಗಿಕ ಆಕರ್ಷಜನಿತ ವಿಕಾಸದ ಫಲವೆಂದು ಹೇಳುತ್ತಾರೆ. ಏನೇ ಇರಲಿ, ಗಾಯನ ಮತ್ತು ನೃತ್ಯಕಲೆಗಳು ಈ ಕಾರಣಕ್ಕಾಗಿ ಹುಟ್ಟಿವೆಯೆಂದು ಸುಲಭವಾಗಿಯೇ ಒಪ್ಪಿಕೊಳ್ಳಬಹುದು.

ಇವು ಸುಮಾರು ೪೦೦೦೦ ವರ್ಷಗಳಿಗಿಂತ ಹಿಂದೆ ಹುಟ್ಟಿದವು. ಆಗ ಮಾನವನಿಗೆ ಇನ್ನೂ ಮಾತನಾಡುವ ಮತ್ತು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಬಂದಿರಲಿಲ್ಲ. ಇನ್ನೂ ಅವನ ಮಿದುಳಿನಲ್ಲಿ ಭಾಷಾಕೇಂದ್ರಗಳು ಉತ್ಪನ್ನವಾಗಿರಲಿಲ್ಲ. ಸ್ತ್ರೀಯರು

ಮತ್ತು ಪುರುಷರು ಪರಸ್ಪರ ಆಕರ್ಷಿಸಿ ಕೂಡುವುದಕ್ಕೆ ಮೊದಲು ವಿವಿಧ ಸ್ವರಗಳಲ್ಲಿ ಕೂಗುತ್ತಾ ನರ್ತಿಸುತ್ತಾ ಪ್ರಾಯಶಃ ಹಕ್ಕಿಗಳಂತೆ ವರ್ತಿಸುತ್ತಿದ್ದರೆಂದು ಊಹೆ. ಫಲ, ಈ ಕಲೆಗಳು ಕಾಮಜನಕ ಮತ್ತು ವರ್ಧಕಗುಣಗಳನ್ನು ಹೊಂದಿವೆ.

ಕಂಠಸುಶ್ರಾವ್ಯತೆ ಮಾನವರಲ್ಲಿ ಹರೆಯದ ವರ್ಷಗಳಲ್ಲಿ ಫಲಿಸಿ ಪ್ರಾಯ ಕಳೆದ ಮೇಲೆ ಇತರ ದೈಹಿಕ ಬಲಗಳಂತೆಯೇ ಕಳೆದುಹೋಗುವುದು ಅವುಗಳ ಲೈಂಗಿಕ ಸಂಬಂಧವನ್ನು ತೋರಿಸುತ್ತದೆ.

ಅಲ್ಲದೆ ಲೈಂಗಿಕ ಆಕರ್ಷಜನಿತ ವಿಕಾಸ ಮಾನವನ ಇಂದಿನ ಅತಿ ಜಟಿಲ ಸಮಾಜದ ನಿರ್ಮಾತೃವೂ ಆಗಿದೆ. ಮಾನವನ ಅತಿಶಯಗುಣವಾದ ವಿಪುಲ ಸಾಮರ್ಥ್ಯಗಳನ್ನು ಹೊಂದಿರುವ ಮಿದುಳು ಗರ್ಭದಲ್ಲಿಯೇ ಸಂಪೂರ್ಣವಾಗಿ ಬೆಳೆಯಲು ಅಸಾಧ್ಯವಾಗಿ, ಶಿಶುವು ಹುಟ್ಟಿದಾಗ ಸುಮಾರು ಶೇಕಡ ಅರವತ್ತರಷ್ಟು ಮಾತ್ರ ಇರುತ್ತದೆ. ಶಿಶು ಅತ್ಯಂತ ಅಸಹಾಯ ಸ್ಥಿತಿಯಲ್ಲಿರುತ್ತದೆ. ಮಿದುಳು ಪೂರ್ತಿ ಬೆಳೆಯುವುದು ಸುಮಾರು ಹದಿನಾರನೆಯ ವರ್ಷದ ಹೊತ್ತಿಗೆ. ಅಂತಹ ಶಿಶುವನ್ನು ಬೆಳೆಸಿ ಸ್ವತಃ ಜೀವನ ನಡೆಸುವ ಸ್ಥಿತಿಗೆ ತರಲು ಈಗಿನ ಕಾಲದಲ್ಲಿ ಸುಮಾರು ಇಪ್ಪತ್ತು ವರ್ಷಗಳಾದರೂ ಬೇಕಾಗುತ್ತದೆ. ಇದು ಆ ಶಿಶುವಿನ ತಾಯಿಯೊಬ್ಬಳಿಗೇ ಅತಿ ಕಷ್ಟದ ಭಾರವಾಗುತ್ತದೆ. ಶಿಶುವಿಗೆ ತಂದೆಯ ಪೋಷಣೆಯೂ ಅತ್ಯವಶ್ಯಕವಾಗಿದೆ. ಅದರಿಂದ, ಮೊದಲು ಬರಿ ಕಾಮಾಕರ್ಷಣೆಯಾಗಿದ್ದ ಎಳೆತ ಒಲವು ರೂಪ ತಾಳಿ ತಾಯಿತಂದೆಯರಿಬ್ಬರೂ ದೀರ್ಘಕಾಲ ಒಟ್ಟಿಗೆ ಇರುವುದು ಜಾರಿಗೆ ಬಂದು ದಾಂಪತ್ಯವೆನಿಸಿಕೊಂಡು ಮದುವೆ ಮುಂತಾದ ವ್ಯವಸ್ಥೆಗಳು ಹುಟ್ಟಿಕೊಂಡಿವೆ. ಇವು ನಮ್ಮ ಸಮಾಜದ ತಳಪಾಯಗಳು. ಗಂಡು ಹೆಣ್ಣುಗಳ ನಡುವೆ ಇದ್ದ ಸ್ವತಂತ್ರ ತಾತ್ಕಾಲಿಕ ಆಕರ್ಷಣೆ ಈಗ ದಾಂಪತ್ಯ ವಿಧೇಯತೆಯ ನಿರ್ಬಂಧದಲ್ಲಿ ಸಿಕ್ಕಿಬಿದ್ದು ಸಂಪೂರ್ಣವಾಗಿ ನಶಿಸಿಹೋಗಿದೆ. ಇಬ್ಬರಿಗೂ ಒಬ್ಬರನ್ನು ಬಿಟ್ಟು ಇನ್ನೊಬ್ಬರನ್ನು ಸಮಯ ಬಂದಂತೆ ಆರಿಸಿಕೊಳ್ಳುವುದು, ತ್ಯಜಿಸುವುದು ಈಗ ಅಧರ್ಮವಾಗಿ ಪರಿಣಮಿಸಿದೆ. ಸಮಾಜ ನಮ್ಮ ಪಶು ಶಕ್ತಿಯಂತಿದ್ದ ಕಾಮಾಕರ್ಷಣವನ್ನು ಪಳಗಿಸಿ, ಗಂಡು ಹೆಣ್ಣುಗಳನ್ನು ಗಂಡ ಹೆಂಡತಿಯರನ್ನಾಗಿಸಿ ಧಾರ್ಮಿಕ ವ್ಯವಸ್ಥೆಯ ಪಂಜರದ ಗಿಳಿಗಳಂತೆ ಮಾಡಿಬಿಟ್ಟಿದೆ. ಈ ವ್ಯವಸ್ಥೆ ಹೆಂಗಸರಿಗೆ ಕ್ಷೇಮ, ರಕ್ಷಣೆ ಮತ್ತು ಸೌಖ್ಯ ತಂದಿದ್ದರೂ ಅವರು ವ್ಯಭಿಚರಿಸಿದರೆ ಬಹಳ ಕಠಿಣತೆಯ ಕಳಂಕ ಬರುತ್ತದೆ. ಗಂಡಸಿಗೆ ಅವನ ಸ್ವಾಭಾವಿಕ ಬಹುಸ್ತ್ರೀ-ಸಂಭೋಗ-ಪ್ರವೃತ್ತಿಗೆ ಕಡಿವಾಣ ಹಾಕಿದಂತಾಗಿದೆ. ಆದರೆ ನಮ್ಮ ಈಗಿನ ಸಮಾಜ ನಮ್ಮ ಉಳಿವಿಗೆ ಅತ್ಯಂತ ಆವಶ್ಯಕ. ಅದರ ರಕ್ಷಣೆ-ಪೋಷಣೆಗಳಿಲ್ಲದೆ ಆಧುನಿಕ ಮಾನವನು ಸ್ವಲ್ಪಕಾಲವೂ ಉಳಿಯಲಾರ. ಕಲೆಗಾರರು ಸಮಾಜದ ದಾಂಪತ್ಯ ನಿಯಮಗಳನ್ನು ಬಹಳ ಸಡಿಲವಾಗಿ ಪಾಲಿಸುತ್ತಾರೆ. ಏಕೆಂದರೆ, ಈ ಕ್ಷೇತ್ರಗಳಲ್ಲಿರುವವರು ಪ್ರತಿಷ್ಠಾಪಿತ ನಿಯಮಗಳನ್ನು

ಮುರಿದೇ ಸೃಷ್ಟಿಶೀಲ ಕೃತಿಗಳನ್ನು ನಿರ್ಮಾಣಮಾಡಿ ಪ್ರಸಿದ್ಧಿಗೆ ಬರುವುದು. ಅದು ಧೈರ್ಯ ಮತ್ತು ಸಾಹಸಗಳ ಕೆಲಸ. ಕೆಲವರಿಗೆ ಮಾತ್ರ ಸಾಧ್ಯ. ಅಂತಹವರು ದಾಂಪತ್ಯದ ಕಟ್ಟುಪಾಡುಗಳನ್ನು ಮುರಿದರೂ ಅವರು ಸಮಾಜಕ್ಕೆ ತರುವ ಸಂಸ್ಕೃತಿ ಮತ್ತು ಆನಂದದ ಸಲುವಾಗಿ ಅವರಿಗೆ ಅದರ ಕಳಂಕ ಅಷ್ಟಾಗಿ ತಟ್ಟುವುದಿಲ್ಲ. ಮಂದ್ರದ ಕತೆಯಲ್ಲಿ ಇದೇ ಪ್ರಧಾನ ವಸ್ತು.

ಸಂಗೀತ ಮಾನವರ ಮನಸ್ಸನ್ನು ಮುಗ್ಧಗೊಳಿಸಿ, ಅದರ ಬಿಗಿತಗಳನ್ನು ಸಡಿಲಗೊಳಿಸುವ ಅದ್ಭುತ ಕಲೆ. ಅದು ಹೇಗೆ ಈ ಪ್ರಭಾವ ಬೀರುತ್ತದೆ ಎನ್ನುವುದು ಒಂದು ತಿಳಿಯಹೇಳಲು ಸಾಧ್ಯವಲ್ಲದ ಒಗಟು. ಅದರಲ್ಲಿ ಕಿವಿಗೆ ಬಿದ್ದ ಶಬ್ದಪುಂಜಗಳು ಸಾಮಾನ್ಯವಾಗಿ ಭಾಷಾರ್ಥಗಳನ್ನು ಗ್ರಹಿಸುವ ಧೀಕೇಂದ್ರಗಳನ್ನು ಪ್ರವೇಶಿಸದೇ ನೇರವಾಗಿ ರಾಗಾವೇಶಗಳ ಉತ್ಪಾದನೆಯ ಕೇಂದ್ರಗಳ ಕಡೆಗೆ ಧಾವಿಸುತ್ತವೆ. ಆಗ ಭಾಷೆಯಲ್ಲಿ ಅಭಿವ್ಯಕ್ತಿಪಡಿಸಲಾಗದ, ರಹಸ್ಯಗರ್ಭಿತ ಸೌಂದರ್ಯಗಳ ಅನುಭವವಾಗುತ್ತದೆ. ಹಾಡುಗಾರನೂ ಶ್ರೋತೃಗಳೂ ಒಂದೇಕಾಲದಲ್ಲಿ ಒಟ್ಟಿಗೆ ರಾಗಾವಿಷ್ಟ ರಸೋಲ್ಲಾಸದ ಪ್ರವಾಹದಲ್ಲಿ ಮುಳುಗುತ್ತಾರೆ. ಆ ಅಪೂರ್ವ ಸುಖ ಕೊಡುವ ಕಲೆಯದು. ಇಲ್ಲಿ ಆ ಸುಖ ಕೊಡುವ ಕಲೆಗಾರನೂ ಅದನ್ನು ಅದೇ ಕ್ಷಣದಲ್ಲಿ ಪಡೆದು ಸುಖಪಡುವ ಶ್ರೋತೃವೂ ಒಂದು ರೀತಿಯ ಸುರತ ವ್ಯಾಪಾರದಲ್ಲಿ ತೊಡಗಿರುವಂತೆ ಎಂದು ಹೇಳಿದರೆ ದಯವಿಟ್ಟು ತಪ್ಪು ತಿಳಿಯಬೇಡಿ. ಸಂಗೀತಕ್ಕೂ ಕಾಮಕ್ಕೂ ಈ ಬಗೆಯ ನರಗ್ರಂಥಿಜನ್ಯ ಮಾನಸಿಕ (neuro-psychological) ಸಂಬಂಧವಿರಬಹುದೆಂದು ಸೂಚಿಸಲು ಪ್ರಯತ್ನಪಡುತ್ತಿದ್ದೇನೆ. ಸಂಗೀತಗಾರನು ಒಂದು ರಾಗವನ್ನು ಸಾಂಗವಾಗಿ ಬೆಳೆಸುವ ಕ್ರಮವನ್ನು ನೋಡಿ. ಮೊದಲು ಆಲಾಪದ ರಾಗಸೌಂದರ್ಯ ನಿರೂಪಣೆಯ ಅನಿಯತ ಚಲನವಲನಗಳು, ಆಮೇಲೆ ವಿಲಂಬಿತ ಲಯದಲ್ಲಿ ವಿಹರಿಸಿ ಮನಸ್ಸನ್ನು ಸಡಿಲಿಸುವುದು, ಅನಂತರ ಮಧ್ಯಲಯದಲ್ಲಿ ಉತ್ಸುಕತೆಯ ಬಿಗಿತವನ್ನು ಪ್ರಾರಂಭಿಸುವುದು ಮತ್ತು ಕಡೆಗೆ ದ್ರುತಲಯದಲ್ಲಿ ಅದನ್ನು ತಡೆಯಲಾರದಂತಹ ಮಟ್ಟಕ್ಕೊಯ್ಯುವುದು, ಅಲ್ಲಿಂದ ಒಮ್ಮೆಗೇ ಜಿಗಿದು ಅಂತಿಮ ಬಿಡುಗಡೆ ಪಡೆಯುವುದು– ಈ ಕ್ರಮವು ಸಂಗೀತದಲ್ಲೂ ಸುರತಕ್ರಿಯೆಯಲ್ಲೂ ಸಮವಾಗಿದೆಯಲ್ಲವೆ?

ಸಂಗೀತದಿಂದ ದಿವ್ಯ ಭಾವನೆಗಳೂ ಭಕ್ತಿರಸೋತ್ಪಾದನೆಯೂ ಆಗುತ್ತದೆಯಲ್ಲಾ ಎಂದು ನೀವು ಇದಿರು–ಪ್ರಶ್ನೆ ಹಾಕಬಹುದು. ಅದು ಭಜನೆಗಳ ಅಥವಾ ಕೀರ್ತನೆಗಳ ಸಾಹಿತ್ಯದ ಭಾಷಾರ್ಥಗಳಿಂದ ಹುಟ್ಟಿದ್ದು. ಅಂದರೆ, ಭಾಷಾರ್ಥಗ್ರಾಹಕ ಧೀಕೇಂದ್ರಗಳ ಪರಿಣಾಮ. ಅವುಗಳ ಪ್ರಭಾವದಿಂದ ಇನ್ನೊಂದು ಮಟ್ಟದ ಭಾವಪರವಶತೆ ಮತ್ತು ಸುಖ ಉಂಟಾಗುತ್ತದೆ, ನಿಜ. ಭಕ್ತಿ ರಸಜನನಕ್ಕೆ ಅದು ಬೇಕಾದುದು. ಮಂದ್ರದಲ್ಲಿ ಮೋಹನ್‌ಲಾಲ್ ತನ್ನ ತಾರುಣ್ಯದಲ್ಲಿ ಓಂಕಾರನಾಥರ ಆಶ್ರಮದಲ್ಲಿ ಬೆಳೆಯುತ್ತಿದ್ದಾಗ

'ಭಕ್ತಿಯಿಲ್ಲದ ಸಂಗೀತದಿಂದ ಏನು ಪ್ರಯೋಜನ?' ಎಂಬ ಪ್ರಶ್ನೆ ಏಳುತ್ತದೆ. ಆಗ ಸ್ವಭಾವತಃ ಲೌಕಿಕ ಪ್ರವೃತ್ತಿಯ ಅವನು ಇತರೇ ಸಮಪ್ರವೃತ್ತಿಯವರ ಬುದ್ಧಿವಾದಗಳನ್ನು ಒಪ್ಪಿಕೊಂಡು 'ಬರೀ ಭಜನೆಗಳ ಸಂಗೀತ ಸಂಪೂರ್ಣ ಸಂಗೀತವೇ ಅಲ್ಲ' ಎಂಬ ತನ್ನ ಸ್ವಭಾವಕ್ಕನುಗುಣವಾದ ಸತ್ಯವನ್ನು ಕಾಣುತ್ತಾನೆ. ಆಗ ತನ್ನ ಜೀವನಧ್ಯೇಯವಾದ ಶುದ್ಧಸಂಗೀತವನ್ನು ಕಲಿಯಲು ಆ ಆಶ್ರಮ ಬಿಟ್ಟು ಪಲಾಯನ ಮಾಡುತ್ತಾನೆ. ನನಗೆ ಅವನ ನಿರ್ಧಾರ ಸರಿಯೆನ್ನಿಸುತ್ತದೆ. ನಮ್ಮ ದೇಶದಲ್ಲಿ ಕಲೆಗಳನ್ನು ಧಾರ್ಮಿಕತೆ ಹರಡುವ ಒಂದು ಉಪಕರಣ ಮಾಡಿಕೊಂಡುಬಿಟ್ಟಿರುವುದು ನಿಜವಾಗಲೂ ವಿಷಾದದ ಸಂಗತಿ. ಇದರಿಂದ ಉತ್ತಮ ಮಟ್ಟದ ಕಲಾಸೃಷ್ಟಿಗೆ ಬೇಕಾದ ಸ್ವಾತಂತ್ರ್ಯ ಕುಂದಿಹೋಗಿದೆ. ಕಲೆಯಲ್ಲಿ ತೆರೆದು ತೋರಿಸಬೇಕಾದ ಮಾನವನ ವಾಸ್ತವ ಸ್ವಭಾವಗಳನ್ನು, ಅಂತಃಪ್ರೇರಣೆಗಳನ್ನು ಯಥಾತಥಾ ಅಭಿವ್ಯಂಜಿಸಲಾಗುವುದಿಲ್ಲ. ಈ ಬಗೆಯ ಹಾನಿಕರ ಸ್ಥಿತಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ, ದಕ್ಷಿಣಾದಿ ಸಂಗೀತದಲ್ಲಿ ಮತ್ತು ಭರತನಾಟ್ಯದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

ಉತ್ತರಾದಿ ಸಂಗೀತದ ಪರಿಸ್ಥಿತಿ ಈ ವಿಷಯದಲ್ಲಿ ಇನ್ನೂ ಹೀಗಾಗದೇ ಸ್ವಲ್ಪಮಟ್ಟಿಗೆ ಉಳಿದುಕೊಂಡಿದೆಯೆಂದು ನನ್ನ ಭಾವನೆ. ಅದರಲ್ಲಿ ಮಂದ್ರ ಸಪ್ತಕಕ್ಕೆ ಸಾಕಷ್ಟು ಮನ್ನಣೆ ಕೊಡುತ್ತಾರೆ. ಉತ್ತಮ ಗಾಯಕರು ತಮ್ಮ ಮಂದ್ರಷಡ್ಜವನ್ನು ಬಹಳ ಶ್ರಮದಿಂದ ವ್ಯವಸಾಯ ಮಾಡಿಕೊಂಡು ತಮ್ಮ ಗಾಯನದಲ್ಲಿ ಉಚಿತವಾಗಿ ಪ್ರಯೋಗಿಸುತ್ತಾರೆ. ರಾಗವನ್ನು ಸಾವಕಾಶವಾಗಿ ಆಲಾಪ, ವಿಲಂಬಿತ, ಮಧ್ಯ ಮತ್ತು ದ್ರುತಲಯಗಳ ಕಡೆ ಒಂದು ನಿಯತ ಕ್ರಮದಲ್ಲಿ ಬೆಳೆಸಿ ಝಾಲಾ ಮುಂತಾದ ಸ್ವರ ವರಸೆ ನಡೆಸಿ ಕಡೆಯಲ್ಲಿ ಮತ್ತೆ ಮಂದ್ರ ಷಡ್ಜದಲ್ಲಿ ಮುಕ್ತಾಯ ಮಾಡುತ್ತಾರೆ. ಈ ಕ್ರಮದ ಮೊದಮೊದಲಿನ ಭಾಗಗಳು ಹೆಚ್ಚಾಗಿ ಸಂಗೀತ ಪ್ರಧಾನವಾಗಿದ್ದು, ಭಾಷಾರ್ಥಗಳಿಂದ ಬಹುಪಾಲು ಮುಕ್ತವಾಗಿರುತ್ತವೆ, ಮಿದುಳಿನ ಧೀಕೇಂದ್ರವನ್ನು ಹಾಯದೇ ನೇರವಾಗಿ ರಾಗೋತ್ಪತ್ತಿಗೆ ತೊಡಗುತ್ತವೆ. ಈ ಕ್ರಮ ಮನಸ್ಸು ಅಂತರ್ಮುಖಿಯಾಗಲು, ಸದ್ಯದ ನೂರು ಚಿಂತೆಗಳ ಹೊರೆಯನ್ನು ಮರೆಯಲು, ಮತ್ತು ರಾಗದ ಉತ್ಕಟ ಸುಖ ಪಡೆಯಲು ಸಹಕಾರಿಯಾಗುತ್ತದೆ. ಖಯಾಲುಗಳ ಸಾಲುಗಳು ಪುನರಾವರ್ತಿಸುತ್ತವೆ ನಿಜ. ಆದರೆ ಅವು ಮುಖ್ಯವಾಗಿ ಅರ್ಥವಾಹಕಗಳಾಗಿರುವುದಿಲ್ಲ. ಸ್ವರ ಮತ್ತು ತಾಳವಾಹಕಗಳಾಗಿದ್ದು ಶುದ್ಧಸಂಗೀತದ ಅವಿಭಾಜ್ಯ ಅಂಗದಂತೆ ಹೊಂದಿಕೊಂಡುಬಿಡುತ್ತವೆ. ಸಂಗೀತವನ್ನು ಬಿಟ್ಟು ಅರ್ಥವನ್ನರಸಿಕೊಂಡು ಹೋಗುವವರಿಗೆ ಅದು ನೀರಸವಾಗಿ ಕಾಣುತ್ತವೆ, ನಿಜ. ಆದರೆ ಶುದ್ಧ ಸಂಗೀತದ ಆನಂದಕ್ಕೆ ಕುಂದು ಬರುವುದಿಲ್ಲ. ಇದು ಮುಘಲರ ಕಾಲದಲ್ಲಿ ಪಡೆದ ಬೆಳೆವಣಿಗೆಯ ಫಲ. ಬೇಕಾದಷ್ಟು ಪ್ರಣಯ, ಚಾಟೂಕ್ತಿ, ಮತ್ತಿತರ ರಮ್ಯ ಸಾಂಸಾರಿಕ ಗಾನವಸ್ತುಗಳು ಇನ್ನೂ ಉಪಯೋಗದಲ್ಲಿವೆ. ಈಚೆಗೆ ಇದರಲ್ಲಿಯೂ

ಓಂಕಾರ, ದೈವಸ್ತುತಿ, ಮುಂತಾದ ಚಳುವಳಿಗಳು ಕಾಣಿಸಿಕೊಳ್ಳುತ್ತಿವೆ. ಇನ್ನು ಮುಂದಕ್ಕೆ ಹೇಗೆ ಬೆಳೆಯುತ್ತದೆಯೋ ಯಾರು ಬಲ್ಲರು?

ಉತ್ತರಾದಿ ಸಂಗೀತದಲ್ಲಿ ಘರಾನಾಗಳ ಪ್ರಾಶಸ್ತ್ಯ ಮತ್ತು ಅವುಗಳ ವಿವಿಧ ಶೈಲಿ ಸಂಪ್ರದಾಯಗಳ ಅಭ್ಯಾಸ-ಶಿಕ್ಷಣಗಳ ವ್ಯವಸ್ಥೆಯಲ್ಲಿ ಅತಿಮುಖ್ಯವಾದ ಗುರು-ಶಿಷ್ಯ ಪರಂಪರೆಯ ಕುರಿತು ಇಲ್ಲಿ ಸ್ವಲ್ಪ ಹೇಳಲೇಬೇಕು. ಏಕೆಂದರೆ, ಎಲ್ಲಿ ಗುರುವು ಮಹಾಖ್ಯಾತಿವಂತನಾಗಿರುತ್ತಾನೋ ಅವನಲ್ಲಿಗೆ ಶಿಷ್ಯ-ಶಿಷ್ಯೆಯರು, (ಅದರಲ್ಲೂ ಶಿಷ್ಯೆಯರು) ಅವನ ಕಲೆಗೆ ಮಾರುಹೋಗಿ, ಅದನ್ನು ಕಲಿಯಲು ಅವನನ್ನು ಮುತ್ತಿಕೊಂಡು ಬರುತ್ತಾರೆ. ಈ ಶಿಷ್ಯ(ಶಿಷ್ಯೆ) ಪರಂಪರೆಯವರು ತಾವು ಭವಿಷ್ಯದಲ್ಲಿ ಕಚೇರಿಗಳನ್ನು ಕೊಟ್ಟು ಹಾಡುವಾಗ ತಮ್ಮ ಘರಾನಾ ಮತ್ತು ಗುರುಗಳ ಹೆಸರು ಹೇಳಿ ಕೃತಜ್ಞತೆ ಮತ್ತು ಗೌರವ ಸಲ್ಲಿಸುವುದು ಕಡ್ಡಾಯವಾದ ಲೋಕ ಮರ್ಯಾದೆಯಾಗಿದೆ. ಗುರು ಹೀಗೆ ತನ್ನ ವಿಶಿಷ್ಟ ಶೈಲಿಯನ್ನು ಮುಂದಕ್ಕೆ ಬೆಳೆಸಿ ಬಹಳ ಕಾಲ ತನ್ನ ಹೆಸರನ್ನುಳಿಸಿಕೊಳ್ಳುತ್ತಾನೆ. ಶಿಷ್ಯ-ಶಿಷ್ಯೆಯರನ್ನು ಒಪ್ಪಿಕೊಳ್ಳುವುದಕ್ಕೆ ಒಂದು ಸ್ವೀಕಾರಕರ್ಮವೇ ಇದೆ. ಅವರ ಕೈಗೆ ಕಂಕಣ ಕಟ್ಟಿ ದೇವರ ಸಾನ್ನಿಧ್ಯದಲ್ಲಿ ಈತನೇ ನನ್ನ ಗುರುವೆಂದು ವಿಧೇಯತೆಯ ಪ್ರಮಾಣ ಪಡೆಯುತ್ತಾನೆ. ಇದರಿಂದ ಗುರುಶಿಷ್ಯ ಸಂಬಂಧ ಒಂದು ಮದುವೆಯ ಸಂಬಂಧವನ್ನೇ ಹೋಲುತ್ತದೆ. ಇದು ಶಿಷ್ಯೆಯರಿಗೂ ಅನ್ವಯಿಸುತ್ತದೆ. ಬಹು ಶಿಷ್ಯೆಯರಿರುವ ಸಂದರ್ಭಗಳಲ್ಲಿ ಗುರು ತನ್ನ ಸಂಪೂರ್ಣ ಕೌಶಲ್ಯವನ್ನು ಆರಿಸಿದ ಕೆಲವರಿಗೆ ಮಾತ್ರ ಧಾರೆಯೆರೆದು ಕೊಡಲು ಸಾಧ್ಯವಾಗುತ್ತದೆ. ಅಂತಹವರು ಆತನೊಡನೆ ಆತ್ಮೀಯ ಸಂಬಂಧ ಬೆಳೆಸುವವರಾಗುತ್ತಾರೆ. ಗುರುವಿನ ಭಾವಗಳಿಗೆ ಮತ್ತು ಅವುಗಳ ಬೆಳವಣಿಗೆಗೆ ಅನುಕೂಲವಾಗುವಂತೆ ಆತನ ಹಿಡಿತಕ್ಕೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವ ಸ್ವಭಾವವುಳ್ಳವರಾಗಿರುತ್ತಾರೆ. ಇದು ವ್ಯಭಿಚಾರ/ಕಾಮಸಂಬಂಧಕ್ಕೆ ಹೇಳಿಮಾಡಿಸಿದಂತಹ ಅವಕಾಶಗಳನ್ನು ಒದಗಿಸುತ್ತದೆ. ಇಲ್ಲಿ ಉತ್ತಮ ಕಲೆಯ ನಿರ್ಮಾಣಕ್ಕೆ ಮತ್ತು ಅದರ ಸಂಪ್ರದಾಯವನ್ನು ಮುಂದುವರಿಸುವುದಕ್ಕೆ ಯಾವುದು ಅವಶ್ಯಕವೆನಿಸುವುದೊ ಅದು ಗೃಹಸ್ಥ ಜೀವನಮೌಲ್ಯಗಳನ್ನು ಎತ್ತಿ ಹಿಡಿಯುವ ಸಮಾಜದೃಷ್ಟಿಯಿಂದ ಧರ್ಮಬಾಹಿರವೆನಿಸುತ್ತದೆ. ಅದಕ್ಕೇ ಏನೊ, ನಮ್ಮ ಪ್ರಾಚೀನ ಧರ್ಮಶಾಸ್ತ್ರದಲ್ಲಿ ಈ ವ್ಯವಹಾರ ಸತ್ಯವನ್ನು ಪರಿಗಣಿಸಿ, ರಂಗಸ್ಥಳದ ಕಲೆಗಳಾದ ಸಂಗೀತ, ನೃತ್ಯ-ನಾಟಕಾದಿಗಳಲ್ಲಿ ತೊಡಗಿರುವವರಿಗೆ, ಕವಿಗಳಿಗೆ, ವೇಶ್ಯೆಯರಿಗೆ, ರಾಜರಿಗೆ, ಈ ಬಗೆಯ ಕಾಮಸಂಬಂಧಗಳುಂಟಾಗುವುದನ್ನು ಅರಿತು ಬೇರೆ ಮರ್ಯಾದೆಯನ್ನೇ ಕೊಡುತ್ತಿದ್ದರು. ಈಗಿನ ಸಮಾಜದಲ್ಲಿ ಇದು ಕಲೆಯ ದೃಷ್ಟಿಯಿಂದ ಎಷ್ಟು ಸ್ವಾಭಾವಿಕವಾಗಿ ಕಂಡುಬರುತ್ತದೆಯೋ, ಆ ಶಿಷ್ಯಶಿಷ್ಯೆಯರ ಭವಿಷ್ಯದ ಸಾಮಾಜಿಕ ಜೀವನದ ದೃಷ್ಟಿಯಿಂದ ಅಷ್ಟೇ ಹಾನಿಕರವಾಗಿ ಪರಿಣಮಿಸುತ್ತದೆ. ಹೇಯಾಚಾರದ

ಕಳಂಕ ಮತ್ತು ಅಪರಾಧಭಾವ ಅಂಟುತ್ತದೆ. ಮಂದ್ರದ ಕಥಾವಸ್ತು ಮುಖ್ಯತಃ ಈ ವಿಷಯವನ್ನು ಕುರಿತದ್ದೇ ಆಗಿದೆ.

ಈ ವಿಷಯವನ್ನೆತ್ತಿ ನನ್ನ ಕೆಲವು ಮಿತ್ರರ ಜೊತೆ ಚರ್ಚೆ ಮಾಡಿದಾಗ ಅವರು ಈ ಹೇಯಾಚಾರಕ್ಕಿಳಿಯದೇ ಉತ್ತಮ ಸಂಗೀತವನ್ನು ಪರಂಪರಾಗತ ಮಾಡಲು ಅಸಾಧ್ಯವೆ?– ಎಂಬ ಸವಾಲ್ ಎಸೆದರು. ಅಸಾಧ್ಯ ಎಂದು ಹೇಳಲು ಅಸಾಧ್ಯವೆಂದು ಒಪ್ಪಿಕೊಂಡೆ. ಆದರೆ ಆ ಬಗೆಯ ಸಂಯಮವನ್ನು ಪ್ರತಿಯೊಬ್ಬ ಉತ್ತಮಸ್ತರದ ಕಲಾವಿದನಿಂದ ನಿರೀಕ್ಷೆಮಾಡುವುದು ಮೂರ್ಖತನವೆಂದು ನನ್ನ ಅಭಿಪ್ರಾಯವನ್ನು ತಿಳಿಸಿದೆ.

ಮೋಹನ್‌ಲಾಲ್ ಎಂಬ ಹಿಂದೂಸ್ತಾನೀ ಸಂಗೀತದ ಗಾಯಕನೊಬ್ಬನ ಜೀವನಕತೆಯೇ ಮಂದ್ರದ ಮುಖ್ಯವಸ್ತು. ಕತೆ ನೇರವಾಗಿ ಹರಿಯದೇ, ವಂಕಿವಂಕಿಯಾಗಿ, ನೆನಪುಗಳ ಸುರುಳಿಗಳ ರೂಪದಲ್ಲಿ, ವರ್ತಮಾನಭೂತಗಳ ವ್ಯತಿಕರಣ ವಿಧಾನಗಳ ಸ್ವಾರಸ್ಯದಿಂದ ಸಾಗುತ್ತದೆ. ಈತನೇ ಕಥಾನಾಯಕನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಇವನಿಗೆ ಯಾವ ಧೀರೋದಾತ್ತ ಗುಣಗಳೂ ಇಲ್ಲ. ವಾಸ್ತವತೆ ತುಂಬಿದ ಒಬ್ಬ ಸರಿಯಾದ ವಿದ್ಯಾಭ್ಯಾಸವಿಲ್ಲದ, ಸಾಧಾರಣ ವ್ಯವಹಾರಜ್ಞಾನವೂ ಇಲ್ಲದ ಒರಟ. ಅತಿಕಾಮುಕತೆ ಇವನ ದೊಡ್ಡ ದೌರ್ಬಲ್ಯ. ಆದರೆ ಗಾನಕಲೆಯಲ್ಲಿ ಅನುಪಮಸಾಮರ್ಥ್ಯ ಇವನದು. ಅತ್ಯುತ್ತಮ ಸಂಗೀತಗಾರ ಮತ್ತು ಗುರು ಎಂದು ಬಹಳ ಪ್ರಸಿದ್ಧಿ ಪಡೆಯುತ್ತಾನೆ. ಭಾರತದ ಸಂಗೀತಗಾರರು ಕನಸು ಕಾಣುವ ತಾನ್‌ಸೇನ್ ಪ್ರಶಸ್ತಿಯನ್ನು ಗಳಿಸುತ್ತಾನೆ. ಆದರೆ ಇವನ ಜೀವನ ಗಜಿಬಿಜಿ. ಸ್ವಯಂಕೃತ ಕಷ್ಟಗಳ ಮುಳ್ಳುಪೊದೆ. ಡೊಂಕು ಮಂಕು. ಕತೆಯ ಪ್ರಾರಂಭದಲ್ಲೇ ಇವನ ಮಾತಿನ ಉದಾಹರಣೆಯನ್ನು 'ಕತ್ತೆ ಲೌಡಿ' ಮುಂತಾದ ಪದಗಳ ಬಳಕೆಯ ಮೂಲಕ ಕಾದಂಬರಿಕಾರರು ಸೂಚಿಸುತ್ತಾರೆ. ಓದುಗರಾದ ನಾವು ಸಾಮಾನ್ಯವಾಗಿ ಕಥಾನಾಯಕನೊಡನೆ ಸಮೀಕರಿಸಿಕೊಂಡು ಅವನ ದೃಷ್ಟಿಯಿಂದ ಕಾದಂಬರಿಯನ್ನು ಓದುತ್ತೇವಲ್ಲವೆ? ಮಂದ್ರದಲ್ಲಿ ಅದು ಅಸಾಧ್ಯ. ಅವನಿಂದ ದೂರ ನಿಂತು ಪರಿಶೀಲಿಸುವ ಹಾಗೆ ಆಗುವಂತೆ ಕಾದಂಬರಿಕಾರರು ನೋಡಿಕೊಂಡಿದ್ದಾರೆ.

ಮೋಹನ್‌ಲಾಲ್ ಹರಿದ್ವಾರದಲ್ಲಿ, ಒಬ್ಬ ಬಡವೆ, ಮನೆ ಕೆಲಸಮಾಡಿಕೊಂಡು ತನ್ನ ಮಕ್ಕಳನ್ನು ಸಾಕಲು ಬವಣೆ ಪಡುತ್ತಿದ್ದ ವಿಧವೆಯ ಮಗ. ಕೇವಲ ಓದಿ ಬರೆಯುವಷ್ಟು ಮಾತ್ರ ಅವನ ವಿದ್ಯಾಭ್ಯಾಸ. ಅವನಿಗೆ ಹುಟ್ಟುಗುಣವಾಗಿ ಬಂದದ್ದೆಂದರೆ ಅತಿ ಮಧುರವಾಗಿ ಹಾಡುವ ಕಂಠ ಮತ್ತು ಉತ್ತಮ ಮಟ್ಟದ ಸ್ವರ ಜ್ಞಾನ. ಹರಿದ್ವಾರದಲ್ಲಿ ಗಂಗಾನದಿಯ ತೀರದಲ್ಲಿ ಬೆಳಿಗ್ಗೆ ಸಂಜೆ, ಅವನು ಭಜನೆಗಳನ್ನು ಹಾಡುತ್ತಾ ಕೂಡುವನು. ಅಲ್ಲಿಗೆ ಬರುವ ಯಾತ್ರಿಕರು ಅವನ ಹಾಡುಗಾರಿಕೆಗೆ ಆಕರ್ಷಿತರಾಗಿ ಅವನ ಸುತ್ತ

ನಿಂತು ಕೇಳಿ ಅವನ ಮುಂದೆ ಹಾಸಿರುವ ಕಂಬಳಿಯ ಮೇಲೆ ಚಿಲ್ಲರೆ ಕಾಸಿನ ಭಿಕ್ಷೆ ಹಾಕುತ್ತಾರೆ. ಹುಡುಗ ಮೋಹನ್‌ಲಾಲ್ ಅದನ್ನು ಆರಿಸಿಕೊಂಡು ಹೋಗಿ ಅಮ್ಮನಿಗೆ ಕೊಟ್ಟು ಅವಳ ಸಂಪಾದನೆಗೆ ನೆರವಾಗುತ್ತಾನೆ. ಹೀಗೆ ಜೀವನ ಸಾಗುತ್ತಿದ್ದಾಗ ಅದೃಷ್ಟವಶಾತ್ ಓಂಕಾರನಾಥ್ ಎಂಬ ಒಬ್ಬ ಸಾಧು ತಾನು ನಡೆಸುತ್ತಿದ್ದ ಬಾಲಾಶ್ರಮಕ್ಕೆ ಅವನನ್ನು ಸೇರಿಸಿಕೊಂಡು ಅವನಮ್ಮನ ಭಾರ ಕಮ್ಮಿಮಾಡುತ್ತಾನೆ. ಅವನಿಗೆ ಅಲ್ಲಿ ಸಂಗೀತಶಾಸ್ತ್ರದ ಪ್ರಾರಂಭಿಕ ಶಿಕ್ಷಾಪ್ರದಾನ ಮಾಡಿ ತಾನು ಆಶ್ರಮದ ಸಲುವಾಗಿ ಚಂದಾ ಎತ್ತಲು ಹೋಗುತ್ತಿದ್ದ ದಾನಿಗಳ ಮನೆಗಳಲ್ಲಿ ತನ್ನ ಜೊತೆ ಹಾಡುವ ಅವಕಾಶವನ್ನು ಮಾಡಿಕೊಡುತ್ತಾನೆ. ಹುಡುಗ ಹೀಗೆ ಆ ಸಾತ್ವಿಕ ಆಶ್ರಮದಲ್ಲಿ ಭಜನೆ-ಗೀತಗಳ ವಾತಾವರಣದಲ್ಲಿ ಬೆಳೆದರೂ ಅವನಿಗೆ ಧಾರ್ಮಿಕ ಭಾವನೆಗಳು ಸ್ವಲ್ಪವೂ ಅಂಟದೇ ಅವನ ಮನಸ್ಸು ಸಂಪೂರ್ಣವಾಗಿ ಸಂಗೀತದಿಂದ ಮಾತ್ರ ತುಂಬಿಕೊಂಡಿತ್ತು. ದೊಡ್ಡ ಗಾಯಕನಾಗಿ ಎಲ್ಲೆಲ್ಲೂ ಕಛೇರಿಗಳನ್ನು ಕೊಟ್ಟು ಹೆಸರು ಗಳಿಸುವ ಕನಸು ಅವನಲ್ಲಿ ಬೆಳೆಯಿತು.

ಅವನು ತನ್ನ ಕನಸನ್ನು ನನಸು ಮಾಡಿಕೊಳ್ಳಲು, ಆಶ್ರಮದಿಂದ ತಪ್ಪಿಸಿಕೊಂಡು, ತನಗೆ ಶಾಸ್ತ್ರೀಯವಾಗಿ ಸಂಗೀತ ಕಲಿಸುವ ಗುರುವನ್ನರಸಿಕೊಂಡು ಹೊರಟನು. ಮತ್ತೆ ಅದೃಷ್ಟವು ಅವನಿಗೆ ಒಲಿಯಿತು. ಅದೇ ಸಮಯದಲ್ಲಿ ನರ್ಮದಾ ನದಿಯ ತೀರದ ಒಂದು ಸಣ್ಣರಾಜ್ಯದ ರಾಜನೊಬ್ಬ ಒಳ್ಳೆಯ ಸ್ವರಜ್ಞಾನ ಮತ್ತು ಸುಶ್ರಾವ್ಯ ಕಂಠವುಳ್ಳ ಶಿಷ್ಯನನ್ನು ಹುಡುಕುತ್ತಿದ್ದನು. ಅವನು ಚೆನ್ನಾಗಿ ಸಂಗೀತದ ವಿದ್ಯಾಭ್ಯಾಸ ಮಾಡಿದವನು. ಅವನು ಮೋಹನ್‌ಲಾಲನನ್ನು ಮೆಚ್ಚಿ ತನ್ನ ಶಿಷ್ಯನಾಗಿ ಸ್ವೀಕರಿಸಿ ಅವನಿಗೆ ಬೇಕಾದ ವಾದ್ಯಾದಿ ಸರ್ವಾನುಕೂಲಗಳನ್ನೂ ಮಾಡಿಕೊಡುತ್ತಾನೆ. ತನ್ನದೇ ಆದ ಒಂದು ಒಳ್ಳೆಯ ತಂಬೂರಿಯನ್ನು ಅನುಗ್ರಹದೊಡನೆ ದಾನಕೊಟ್ಟು ಬಹಳ ಉತ್ತಮಮಟ್ಟದ ಸಂಗೀತದ ಶಿಕ್ಷೆಯನ್ನು ಎರೆದುಕೊಡುತ್ತಾನೆ. ನರ್ಮದಾನದಿಯ ತೀರದ ಶಿವದೇವಾಲಯವೊಂದರಲ್ಲಿ ವಾಸಿಸುತ್ತಾ ಚಿತ್ರಪುರ್ ಘರಾನ ಎಂದು ಹೆಸರಿಸಬಹುದಾದ ಶಾಸ್ತ್ರೀಯ ಸಂಗೀತಶೈಲಿಯನ್ನು ಶಿಷ್ಯ ಮೋಹನ್‌ಲಾಲ್ ಕಂಠಗತ ಮಾಡಿಕೊಂಡನು. ಗುರು ಅನಿರೀಕ್ಷಿತವಾಗಿ ತೀರಿಕೊಂಡ ಬಳಿಕ ಮೋಹನ್‌ಲಾಲ್ ಅಲ್ಲಿಂದ ಮುಂಬಯಿಗೆ ಹೋಗಿ ಅಲ್ಲಿ ತನ್ನ ಸಂಗೀತದ ಕಸುಬನ್ನು ಪ್ರಾರಂಭಿಸುತ್ತಾನೆ. ಅಲ್ಲಿ ಸುಮಾರು ಇಪ್ಪತ್ತು ವರ್ಷ ಅಲ್ಲಿ ಇಲ್ಲಿ ಆಗಾಗ ಕಛೇರಿಗಳಲ್ಲಿ ಅವಕಾಶ ಸಿಕ್ಕಿದಾಗ ಹಾಡುತ್ತಾ, ಸಣ್ಣ ಮಕ್ಕಳಿಗೆ ಪಾಠ ಹೇಳಿಕೊಡುತ್ತಾ, ಬಡತನದಲ್ಲಿ ಹೆಣಗುತ್ತಾ, ಮುಂಬಯಿಯ ಸಂಗೀತಪ್ರಪಂಚದಲ್ಲಿ ಪಕ್ಕವಾದ್ಯದವರು ಮತ್ತು ಇತರ ಮಿತ್ರರುಗಳನ್ನು ಪಡೆದುಕೊಳ್ಳುತ್ತಾ, ಕ್ರಮೇಣ ಪ್ರಸಿದ್ಧಿಯ ಮೆಟ್ಟಲುಗಳನ್ನು ಏರುತ್ತಾನೆ. ಅವನ ವರಮಾನ

ಮೊದಮೊದಲು ನೂರು ರೂಪಾಯಿಗಳ ಮಟ್ಟದಲ್ಲಿದ್ದು, ಅವನಿಗೆ ಅರವತ್ತರ ವಯಸ್ಸು ಬರುವ ಹೊತ್ತಿಗೆ ಸಾವಿರ, ಲಕ್ಷ, ಆಮೇಲೆ ದಶಲಕ್ಷಗಳವರೆಗೆ ಬೆಳೆಯುತ್ತಾ ಹೋಗುತ್ತದೆ. ಆಗ ಅವನಿಗೆ ಎಲ್ಲಾ ಸಂಗೀತಗಾರರೂ ಪಡೆಯಲು ಹಾತೊರೆಯುವ ಅಮೆರಿಕಾ ಪ್ರವಾಸ ಮಾಡುವ ಅಪೂರ್ವ ಸುಯೋಗವೂ ದೊರಕುತ್ತದೆ. ಅಮೆರಿಕದಲ್ಲಿ ಅವನು ಕೊಟ್ಟ ಕಛೇರಿಗಳು ಮತ್ತು ವರ್ಕ್‌ಷಾಪುಗಳಿಂದ ಅವನಿಗೆ ಬಹಳ ಕೀರ್ತಿ ಮತ್ತು ಧನಪ್ರಾಪ್ತಿಯುಂಟಾಗುತ್ತವೆ. ಅವನ ಸಂಗೀತ ಪಾಠಶಾಲೆ ಮುಂಬಯಿಯಲ್ಲಿ ಬಹಳ ಪ್ರಸಿದ್ಧಿಯ ಶಾಲೆಯಾಗುತ್ತದೆ. ಅವನಿಗೆ ಅಗಣಿತ ಉತ್ತಮಕುಲದ ಹೆಣ್ಣುಗಳು ಶಿಷ್ಯೆಯರಾಗಿ ಲಭ್ಯರಾಗುತ್ತಾರೆ. ಅವನಿಗೆ ಭಾರತದ ಅತ್ಯುನ್ನತ ಸಂಗೀತ ಪ್ರಶಸ್ತಿಯಾದ ತಾನ್‌ಸೇನ್ ಪ್ರಶಸ್ತಿ ಗೌರವವೂ ಲಭಿಸುತ್ತದೆ.

ಅವನಿಗೆ ಹಣಕಾಸಿನ ಅರಿವಾಗಲಿ ಆಸಕ್ತಿಯಾಗಲಿ ಸುತರಾಂ ಇರಲಿಲ್ಲ. ಅವನಿಗೆ ಜೀವನದಲ್ಲಿ ತೊಂದರೆಗೆ ಸಿಕ್ಕಿಕೊಳ್ಳದೇ ಬದುಕು ಸಾಗಿಸುವಷ್ಟು ವ್ಯವಹಾರಜ್ಞಾನ ಕೂಡ ಇರಲಿಲ್ಲ. ಅವನ ಜೀವನದ ಮುಖ್ಯ ಧ್ಯೇಯ ತಾನು ಹಿಂದೂಸ್ಥಾನದ ಅತ್ಯುತ್ತಮ ಗಾಯಕನಾಗಬೇಕು ಎಂಬುದು ಮಾತ್ರ. ಸಂಗೀತ ರಸಿಕರ ಸಭೆಯಲ್ಲಿ ಹಾಡಿ ಅವರು ಸುಪ್ರೀತರಾದರೆ ತಾನು ಪರಮಾನಂದ ಪಡುತ್ತಿದ್ದ. ಶಿಷ್ಯ–ಶಿಷ್ಯೆಯರು ತನ್ನ ಹೆಸರು ಹೇಳಿ ಅದು ಭವಿಷ್ಯದಲ್ಲಿ ಬಹಳ ಕಾಲ ಮೆರೆಯಬೇಕು ಮತ್ತು ತನ್ನದೇ ಆದ ಚಿತ್ರಪುರ್ ಘರಾನ ಎಂಬುದನ್ನು ಪ್ರತಿಷ್ಠಾಪನೆ ಮಾಡಬೇಕೆಂಬುದು ಅವನ ಹಂಬಲವಾಗಿತ್ತು.

ಯಥೇಚ್ಛವಾದಷ್ಟು ಸಂಪಾದನೆ, ಗೌರವ, ಕಾಮ ಭೋಗ ಮತ್ತು ಪ್ರಶಂಸೆಗಳು ದೊರಕಿದರೂ ಅವನ ಜೀವನ ದುಃಖ ಮತ್ತು ದಾರಿದ್ರ್ಯದ ಹೊಲಸುಗುಪ್ಪೆಯಂತಾಗುತ್ತದೆ. ಎಪ್ಪತ್ತರ ವಯಸ್ಸಿನಲ್ಲಿ ಅವನ ಜೀವನಾಡಿಯಂತಿದ್ದ ಕಂಠ ಸಾಮರ್ಥ್ಯ ಮತ್ತು ರಾಗಕಲ್ಪನೆಗಳ ಕೌಶಲ್ಯಗಳು ಒಮ್ಮೆಗೇ ಇಳಿಮುಖವಾಗುತ್ತವೆ. ಆಳವಾದ ಖಿನ್ನತೆ ಅವನನ್ನು ಮುತ್ತುತ್ತದೆ. ನನ್ನ ಹೆಸರು ಹೇಳಲು ತಾನು ಮಕ್ಕಳನ್ನು ಪ್ರೀತಿಯಿಂದ ಸಾಕಲಿಲ್ಲ; ಮೊದಲಿನ ಮಗನಿಗೆ ನಾನು ಅವನ ತಂದೆಯೆಂದೇ ಗೊತ್ತಿಲ್ಲ, ನನಗೂ ಅವನ ಗುರುತು ಸಿಗಲಿಲ್ಲ. ನನ್ನ ಸಂಗೀತದ ಹೆಸರನ್ನು ಹೇಳುವ ಶಿಷ್ಯಶಿಷ್ಯೆಯರನ್ನು ತಯಾರಿಸಲಿಲ್ಲ. ನಾನು ರಾಜಗುರುವಿನಿಂದ ಪ್ರೀತಿಯಿಂದ ಪಡೆದ ತಂಬೂರಿಯನ್ನು ಕೂಡ ಅಡವಿಟ್ಟು ಕಳೆದುಕೊಂಡೆ. ಚಿತ್ರಪುರ್ ಘರಾನ ಶೈಲಿಯ ಹೆಸರು ಉಳಿಸಲಿಲ್ಲ. ಏನೇನೂ ಸಾಧಿಸದೇ ಹೋದೆನಲ್ಲಾ ಎಂದು ಅತೀವ ಖಿನ್ನತೆಯ ಶೋಕ ಅನುಭವಿಸುತ್ತಾನೆ.

ಎಪ್ಪತ್ತರ ದಶಕದ ಕೊನೆಯ ವಯಸ್ಸಿನಲ್ಲಿ ಅವನ ಕಂಠ ಸಾಮರ್ಥ್ಯ ಮತ್ತು ಸ್ವರ ಕೌಶಲಗಳು ಕುಗ್ಗಿ ಕೈ ಬಿಡುತ್ತವೆ. ಬಹಳ ಪ್ರಸಿದ್ಧಿಯ ಎತ್ತರದಿಂದ ಬೀಳುವ ರಭಸದ ಅಧಃಪತನ ಅವನನ್ನು ಕಂಗಾಲು ಮಾಡುತ್ತದೆ. ಈಗ ಅವನನ್ನು ಕೇಳುವವರು ಯಾರೂ ಇಲ್ಲ. ಏನು ಸಾಧಿಸಿದೆನೆಂದು ಕುಳಿತು ಯೋಚಿಸುತ್ತಾನೆ. ಆಗ, ಏನೂ ಇಲ್ಲ, ಸೊನ್ನೆಯೆಂಬ ಕಟು ಸತ್ಯ ಕಾಣಿಸುತ್ತದೆ. ಆ ನಿರ್ವಿಣ್ಣ ಮನಸ್ಥಿತಿಯಲ್ಲಿ ಮಂದ್ರ ಷಡ್ಜ ಸ್ವರವನ್ನು ಹಿಡಿಯಲು ಪ್ರಯತ್ನ ಮಾಡುತ್ತಾನೆ. ಅದು ಅಸಾಧ್ಯವಾಗುತ್ತದೆ. ಆಗ ಅವನ ಗೋಳು ಹೇಳತೀರದ್ದು. ಮಂದ್ರ ಷಡ್ಜ ಎಲ್ಲಾ ರಾಗವಿಶೇಷಗಳಿಂದ ವಿಮುಕ್ತ ನಿರ್ವಾಣ ಸ್ಥಿತಿಯನ್ನು ಸಂಕೇತಿಸುತ್ತದೆ. ರಾಗಪ್ರಪಂಚದಲ್ಲಿ ಮುಳುಗಿ ಬದುಕಿದ ಅವನಿಗೆ ಅದು ಹೇಗೆ ನಿಲುಕಬೇಕು?

ಅಷ್ಟು ಅದೃಷ್ಟವಂತ, ಒಳ್ಳೆಯ ಗಾಯಕ, ಒಳ್ಳೆಯ ಗುರುವಿನಿಂದ ಅನುಗ್ರಹ ಪಡೆದವನು, ಅಷ್ಟು ಹಣ ಸಂಪಾದಿಸಿದವನು ಯಾಕೆ ಕಡೆಗೆ ಏನನ್ನೂ ಸಾಧಿಸಲಿಲ್ಲ ಎಂದು ಕಣ್ಣೀರಿಡುವ ಪರಿಸ್ಥಿತಿಗೆ ಬಂದನೆನ್ನುವುದಕ್ಕೆ ಕಾರಣ ಅವನನ್ನು ಜೀವನದುದ್ದಕ್ಕೂ ಕಾಡಿದ ಕಾಮಸುಖದ ಅತ್ಯಾಸೆ, ವ್ಯವಹಾರಜ್ಞಾನವಿಲ್ಲದ ಅವ್ಯವಸ್ಥೆಯ ಜೀವನ ಮತ್ತು ಒರಟು ಸ್ವಭಾವ. ಮೋಹನ್‌ಲಾಲ್ ಚಿತ್ರಪುರದ ಶಿವಾಲಯದ ಬದಿಗಿದ್ದ ಕೋಣೆಯಲ್ಲಿ ವಾಸವಿದ್ದುಕೊಂಡು ರಾಜನಿಂದ ಪಾಠ ಹೇಳಿಸಿಕೊಳ್ಳುತ್ತಿದ್ದಾಗ ಅವನಿಗೆ ಮೊದಲ ಸಂಭೋಗಾನುಭವವಾಗಿದ್ದು. ಆಗ ಅವನಿಗೆ ಎಳೆಯ ಪ್ರಾಯದ ವಯಸ್ಸಾಗಿತ್ತು. ಆ ಕಾಲದಲ್ಲಿ ಉಂಟಾಗುವ ಉತ್ಕಟ ಕಾಮ; ದಾಹ ಅನುಭವಿಸಿರುವ ಎಲ್ಲರಿಗೂ ಗೊತ್ತು. ಅದರಿಂದ ಅವನು ಹುಚ್ಚನಂತಾಗಿಬಿಟ್ಟಿದ್ದಾಗ ಒಂದು ದಿನ ತನ್ನ ಊಟ ತರುವ ಕೆಲಸದ ಹೆಂಗಸು ಚುನ್ನಿಯನ್ನು ಭಯದಿಂದ ನಡುಗುವ ತುಟಿಗಳಿಂದ ಬೇಡಿಕೊಳ್ಳುತ್ತಾನೆ. ಅವಳಿಗೆ ಬೇಕಾದ್ದೂ ಅದೇಯೆ. ಏಕೆಂದರೆ ಅವಳಿಗೆ ಮದುವೆಯಾಗಿ ಸಾಕಷ್ಟು ವರ್ಷಗಳಾಗಿದ್ದರೂ ಮಕ್ಕಳಾಗಿರಲಿಲ್ಲ. ಅವಳಿಗೆ ಮಕ್ಕಳು ಬೇಕಾಗಿದ್ದವು. ಅವಳು ನಗುತ್ತಾ ಅವನನ್ನು ಒಪ್ಪಿಕೊಳ್ಳುತ್ತಾಳೆ. ಈ ಪರಸ್ಪರ ಅವಶ್ಯಕತೆಗಳನ್ನು ಪೂರೈಸುವ ಸುಮಧುರ ಸಂಬಂಧ ಚಿತ್ರಪುರದ ರಾಜರ ನಿಧನವಾಗಿ ಮೋಹನ್‌ಲಾಲ್ ಅಲ್ಲಿಂದ ಮುಂಬಯಿಗೆ ಹೋಗಿ ಅಲ್ಲಿ ಸಂಗೀತದ ಜೀವನೋಪಾಯದಲ್ಲಿ ತೊಡಗುವವರೆಗೂ ಅವಿಚ್ಛಿನ್ನವಾಗಿ ಬೆಳೆಯಿತು. ಈ ಸಂಬಂಧದ ದೆಸೆಯಿಂದ ಕಾಮದಾಹದ ಮನೋವಿಕಲತೆಯಿಂದ ಮುಕ್ತನಾಗಿ ಅವನಿಗೆ ರಾಜಗುರುವಿನ ವಿದ್ಯೆಯನ್ನು ಏಕಾಗ್ರಚಿತ್ತದಿಂದ ಸಂಪೂರ್ಣವಾಗಿ ಕಲಿತುಕೊಳ್ಳುವಂತಾಯಿತು. ಚುನ್ನಿಗೆ ಬೇಕಾದ ಒಂದು ಗಂಡು ಮಗು ಹುಟ್ಟಿತು.

ಈ ಬೋಣಿ ಅನುಭವದಿಂದ ಅವನಿಗೆ ಸಂಭೋಗಸುಖದಿಂದ ಬರುವ ಮನಃಶಾಂತಿಯ ಅಭ್ಯಾಸವಾಯಿತು. ಅದರ ನೆರವಿಲ್ಲದೇ ಉತ್ತಮ ರಾಗ ಕಲ್ಪನೆಗೆ ಬೇಕಾದ ಏಕಾಗ್ರಚಿತ್ತ ಬರುತ್ತಿರಲಿಲ್ಲ. ಸಂಗೀತ ಕಲಾಭ್ಯಾಸದಲ್ಲಿ ಉನ್ನತಸ್ತರಗಳಿಗೆ

ಮುಂದುವರಿಯುವುದು ಅಸಾಧ್ಯವಾಯಿತು. ಕಾಮತೃಪ್ತಿ ಮತ್ತು ಕಲಾಕೌಶಲಗಳ ನಡುವೆ ಇರುವ ಇಂತಹ ಅನಿರ್ವಚನೀಯ ಸಂಬಂಧದ ಒತ್ತಡ ಇಲ್ಲಿಂದ ಮುಂದಕ್ಕೆ ಅವನ ಜೀವನವನ್ನೇ ಸಂಪೂರ್ಣವಾಗಿ ವಿರೂಪಿಸಿಬಿಡುತ್ತದೆ.

ಅವನು ಮೊದಲು ಕಾಮದಾಹದ ಸಮಸ್ಯೆಯಿಂದ ಪಾರಾಗಲು ಒಂದೆರಡು ಬಾರಿ ವೇಶ್ಯಾವಾಟಿಕೆಯ ಬೀದಿಗಳಲ್ಲಿ ಸುತ್ತಾಡುತ್ತಾನೆ. ಆಗ ಶಾಸ್ತ್ರೀಯ ಸಂಗೀತವನ್ನು ಸ್ವಲ್ಪಮಟ್ಟಿಗೆ ಅಭ್ಯಾಸ ಮಾಡಿದ್ದ ಜವಹರ್ ಬಾಯಿ ಎಂಬ ವೇಶ್ಯೆಯೊಬ್ಬಳ ಮನೆಗೆ ಹೋಗುತ್ತಾನೆ. ಅವಳಿಗೆ ಒಂದು ರಾಗದ ವಿಶದ ಮತ್ತು ಸುಂದರ ಪರಿಚಯ ಪಾಠ ಮಾಡಿಕೊಟ್ಟು ಅದರ ಬೆಲೆಗೆ ಅಲ್ಲಿಯೇ ಒಂದು ರಾತ್ರಿ ಕಳೆಯುತ್ತಾನೆ. ಆದಾದಮೇಲೆ, ಅವಳು ಅವನಿಗೆ ವೇಶ್ಯೆಯರ ಸಹವಾಸದಿಂದ ಸಂಭವಿಸಬಹುದಾದ ಜಾಡ್ಯಗಳ ಬಗ್ಗೆ ಎಚ್ಚರಿಕೆ ಕೊಟ್ಟಾಗ, ಆ ಕಡೆ ಹೋಗುವುದನ್ನು ನಿಲ್ಲಿಸುತ್ತಾನೆ. ತಾನ್‌ಸೇನ್ ಪ್ರಶಸ್ತಿ ಜಯಿಸಿದ ಮೇಲೆ ಜಯಪುರದಲ್ಲಿ ಒಂದು ಸಂಗೀತಕಛೇರಿಯಲ್ಲಿ ಅವಳನ್ನು ಮತ್ತೆ ಸಂಧಿಸುತ್ತಾನೆ. ಈ ಜವಹರ್ ಬಾಯಿ ಪ್ರಸಂಗ ಮಂದ್ರದ ದೀರ್ಘ ಕತೆಯಲ್ಲಿ ಅತಿ ಸುಂದರವಾದ ವಿಷ್ಕಂಭಕ. ಸಂಗೀತಪ್ರೇಮಿಗಳ ಹೃದಯದಲ್ಲಿ ಪರಸ್ಪರ ಮೈತ್ರಿ ಗೌರವಗಳನ್ನುಂಟುಮಾಡುವ ರಸಬಿಂದುಗಳು–ಇಲ್ಲಿ ಬಹಳ ನಾಜೂಕಿನಿಂದ ಚಿತ್ರಿತವಾಗಿವೆ.

ಅದಾದಮೇಲೆ ತನ್ನ ನೆರೆಹೊರೆಯವರ ಬುದ್ಧಿವಾದವನ್ನು ಒಪ್ಪಿಕೊಂಡು ತನ್ನ ಊರಾದ ಹರಿದ್ವಾರದ ಕಡೆಯ ಹಳ್ಳಿಯ ಹುಡುಗಿ ರಾಮ್ ಕುಮಾರಿಯನ್ನು ಮದುವೆಮಾಡಿಕೊಂಡು ಬಂದು ಅವಳೊಡನೆ ಮುಂಬಯಿಯ ಬೋರಿವಿಲಿಯಲ್ಲಿ ಸಂಸಾರ ಶುರುಮಾಡುತ್ತಾನೆ. ಇದೊಂದೇ ಅವನು ಶಾಸ್ತ್ರೀಯವಾಗಿ ಮಾಡಿಕೊಂಡ ಮದುವೆ. ಅವಳಲ್ಲಿ ಅವನಿಗೆ ಎರಡು ಮಕ್ಕಳು ಹುಟ್ಟುತ್ತವೆ. ರಾಮ್ ಕುಮಾರಿ ಶುದ್ಧ ಹಳ್ಳಿಯ ಹುಡುಗಿ. ತುಂಬಾ ಬಡತನದಲ್ಲಿ ಬೆಳೆದವಳು. ಗಂಡ, ದೇವರು, ತನ್ನ ಮನೆ, ಸಂಸಾರ ನಿಭಾಯಿಸುವುದು ಇಷ್ಟೇ ಅವಳ ಪ್ರಪಂಚ. ಅವಳಿಗೆ ತನ್ನ ಗಂಡನ ಮುಖ್ಯ ಕಸುಬಾಗಿದ್ದ ಸಂಗೀತದ ಗಂಧ ಕೂಡ ಇರಲಿಲ್ಲ. ರಸಿಕತೆ ಸೊನ್ನೆ. ಮೋಹನ್ ಲಾಲನಿಗೆ ಅವಳಿಂದ ಕಾಮದಾಹ ಶಮನವಾಗಿ, ಅವನು ಸಂಗೀತ ಕಛೇರಿಗಳಲ್ಲಿ ಸಣ್ಣ ಸಂಭಾವನೆಗಳ ಸ್ತರದಿಂದ ಹೆಚ್ಚು ಹೆಚ್ಚು ಸಂಪಾದನೆಯ ಕಡೆಗೆ ಏರಲು ಸಾಕಷ್ಟು ಮನಃಶಾಂತಿ ತಾತ್ಕಾಲಿಕವಾಗಿ ದೊರಕಿತು. ಮೋಹನ್‌ಲಾಲ್ ಆಗ ಒಂದು ಸಂಗೀತಪಾಠ ಹೇಳಿಕೊಡುವ ಪ್ರಸಿದ್ಧ ಸ್ಕೂಲಿನಲ್ಲಿ ಮೇಲು ದರ್ಜೆಯ ಮಾಸ್ತರನಾದ. ಅದು ಮುಂಬಯಿಯ ಮಧ್ಯಮ ವರ್ಗ ಮತ್ತು ಉತ್ತಮವರ್ಗದ ಮನೆಗಳ ವಿದ್ಯಾರ್ಥಿನಿಯರು ತಂಡ ತಂಡವಾಗಿ ಬರುತ್ತಿದ್ದ ಶಾಲೆ. ಅಲ್ಲಿ ಮೋಹನ್‌ಲಾಲ್ ಕೈಯಲ್ಲಿ ಪಾಠ ಹೇಳಿಸಿಕೊಳ್ಳುವುದಕ್ಕೆ ವಿದ್ಯಾರ್ಥಿನಿಯರಲ್ಲಿ ತುಂಬಾ ಬೇಡಿಕೆ ಹುಟ್ಟಿ ಬೆಳೆಯಿತು.

ಅವರ ಮನೆಗಳಿಗೆ ಹೋಗಿ ಪ್ರತ್ಯೇಕವಾಗಿ ಎರಡು ಮೂರು ಘಂಟೆಗಳ ಕಾಲ ಖಾಸಗಿ ಪಾಠ ಹೇಳಿಕೊಡುವುದು, ಇತ್ಯಾದಿ ಅವಕಾಶಗಳು ಉಂಟಾದವು.

ಸಂಗೀತ ಕಾಮವರ್ಧಕ ಕಲೆಯೆಂದು ಹಿಂದೆಯೇ ಹೇಳಿದ್ದೇನೆ. ಸಂಗೀತಗಾರರು ರಸಿಕರೆಂದರೆ ಅದೂ ಅಷ್ಟೇ ನಿಜವಾದ ಮಾತು. ಮೋಹನ್‌ಲಾಲ್ ಉತ್ತಮ ಮಟ್ಟದ ಸಂಗೀತಗಾರ. ರಸಿಕತೆ ಅವನಿಗೆ ಹುಟ್ಟುಗುಣವಾಗಿ ಲಭಿಸಿತ್ತು ಮತ್ತು ಸಂಗೀತವನ್ನು ಶಾಸ್ತ್ರೀಯವಾಗಿ ಕಲಿತಿದ್ದರಿಂದ ಅದು ಅವನಲ್ಲಿ ಪರಿಪಕ್ವವಾಗಿತ್ತು. ಅವನು ಒಳ್ಳೆಯ ಮಾಸ್ತರನೆಂದು ಹೆಸರು ಗಳಿಸಿಕೊಂಡ ಮೇಲೆ ಅವನ ಪಟ್ಟ ಶಿಷ್ಯೆಯರಾಗಲು ಬಯಸುವ ಉತ್ತಮವರ್ಗದ ಪ್ರಾಯದ ಹುಡುಗಿಯರು ಮುಂಬಯಿಯಲ್ಲಿ ತುಂಬಿದ್ದರು. ಮುಂಬಯಿಯ ಇಂತಹ ಶಾಲೆಗಳಲ್ಲಿ ಸಂಗೀತ ಪಾಠ ಹೇಳುವ ಮಾಸ್ತರುಗಳಲ್ಲಿ ಬಹು ಪಾಲು ಜನ ತಮ್ಮ ಶಿಷ್ಯೆಯರ ಸಂಗಡ ಕಾಮಸಂಬಂಧ ಬೆಳೆಸಿಕೊಂಡಿದ್ದಾರೆಂದು ತಿಳಿದುಕೊಳ್ಳಲು ಮೋಹನ್ ಲಾಲನಿಗೆ ಬಹಳ ದಿನಗಳೇನೂ ಬೇಕಾಗಲಿಲ್ಲ. ಇಂತಹ ಸುದ್ದಿಗಳು ಕಸುಬಿನಲ್ಲಿರುವ ಎಲ್ಲರಿಗೂ ತಿಳಿದ ಗುಟ್ಟು. ಅಲ್ಲದೆ, ಅವನ ರಸಿಕತೆಗೆ ರಾಮ್ ಕುಮಾರಿಯ ಹಾಸಿಗೆಯಲ್ಲಿ ಏನೇನೂ ಜಾಗವಿರಲಿಲ್ಲ.

ಶಾಸ್ತ್ರೀಯವಾಗಿ ಸಂಗೀತವನ್ನು ಕಲಿಯಲು ಉತ್ಸಾಹವಿರುವ ಎಳೆಪ್ರಾಯದ ರಸಿಕ ಶಿಷ್ಯೆ, ತಾನು ಹೇಳಿದಂತೆ ಮಾಡುವ ವಿಧೇಯಳು; ಅವಳೊಡನೆ ಒಟ್ಟಿಗೆ ಎರಡು ಮೂರು ಘಂಟೆಗಳ ನಿಯತವಾದ ಪಾಠದ ಸಮಯಗಳು; ಅವಳೊಡನೆ ಯಮನ್ ಕಲ್ಯಾಣ್, ಬೆಹಾಗ್, ಖಮ್ಮಾಚ್, ಭೂಪಾಲೀ, ಶುದ್ಧ ಕಲ್ಯಾಣ್ ಮುಂತಾದ ಉಲ್ಲಾಸ ತರುವಂತಹ ರಾಗಗಳ ನವಿರು ರಸಬಿಂದುಗಳ ಪರಿಮಾರ್ಗಣದ ಸುಖವನ್ನನುಭವಿಸಿವುದು– ಈ ಅವಕಾಶಗಳು ಮತ್ತೆ ಮತ್ತೆ ಒದಗಿ ಬಂದರೆ ಬ್ರಹ್ಮನು ಕೂಡ ಬ್ರಹ್ಮಚರ್ಯವನ್ನು ಪಾಲಿಸಲಾರನೆಂದು ನನಗನ್ನಿಸುತ್ತದೆ. ಇಂತಹ ಪ್ರಲೋಭನ ಸನ್ನಿವೇಶದಲ್ಲಿ ಅವನಿಗೆ ಚಂಪಳು ತಗುಲಿಕೊಂಡಳು. ಅವಳು ಅವನ ಮನೆ ಪಾಠದ ಶಿಷ್ಯೆ. ಅವಳು ರಾಗಗಳನ್ನು ಬೇಗ ಕಲಿತು ಅವುಗಳ ಭಿನ್ನ ಭಿನ್ನ ಗುಣಗಳನ್ನು ಗ್ರಹಿಸುವುದರಲ್ಲಿ ತನ್ನ ಚುರುಕು ಬುದ್ಧಿಯನ್ನು ಪ್ರದರ್ಶಿಸಿ ಅವನ ಮೆಚ್ಚಿನ ಶಿಷ್ಯೆಯಾದಳು. ಅದನ್ನು ರಸಿಕತೆಯೆಂದು ಭ್ರಮಿಸಿ ಅವಳೊಡನೆ ಮದುವೆ ಮಾಡಿಕೊಳ್ಳುತ್ತೇನೆಂದು ಮಾತುಕೊಟ್ಟು ದೇಹಸಂಬಂಧಕ್ಕೆ ಒಪ್ಪಿಗೆ ಪಡೆಯುತ್ತಾನೆ. ರಾಮ್ ಕುಮಾರಿಯನ್ನು ವಿಚ್ಛೇದಿಸಬೇಕೆಂದು ಅವಳು ಕಂಡಿಷನ್ ಹಾಕುತ್ತಾಳೆ. ಅವಳೊಡನೆ ರಿಜಿಸ್ಟರ್ಡ್ ಮದುವೆ ಮಾಡಿಕೊಳ್ಳಲೇ ಬೇಕಾಯಿತು. ಆದರೆ ರಾಮ್ ಕುಮಾರಿಯಿಂದ ವಿಚ್ಛೇದನ ಪಡೆಯುವುದಕ್ಕಾಗಲಿಲ್ಲ. ಹೀಗೆ ಎರಡು ಸಂಸಾರಗಳನ್ನು ಸ್ವಲ್ಪ ದಿನ ನಡೆಯಿಸಿದ.

ವ್ಯವಹಾರಗಳಲ್ಲಿ ಶುದ್ಧ ದಡ್ಡನಾದುದರಿಂದ ಚಂಪಾ ಅವನ ಮೇಲೆ ಅಧಿಕಾರ ಮಾಡಲು ತೊಡಗುತ್ತಾಳೆ. ಅವಳಿಗೆ ಸಂಗೀತದಲ್ಲಿ ನಿಜವಾದ ಆಸಕ್ತಿಯಾಗಲಿ ರಸಿಕತೆಯಾಗಲಿ ಇರಲಿಲ್ಲ. ಬಹಳ ಲೌಕಿಕ ಪ್ರವೃತ್ತಿಯ ಹೆಂಗಸು. ಅವನು ಸಂಪಾದಿಸಿದ ಹಣವನ್ನೆಲ್ಲಾ ಅವಳು ತನ್ನ ವಶಕ್ಕೆ ತೆಗೆದುಕೊಂಡುಬಿಡುತ್ತಾಳೆ. ಬ್ಯಾಂಕಿನಲ್ಲಿ ಆ ಹಣವೆಲ್ಲಾ ಚಂಪಾಳ ಹೆಸರಿನಲ್ಲಿದ್ದು ಮೋಹನ್‌ಲಾಲ್‌ಗೆ ಅದರ ಉಪಯೋಗ ದೊರಕುವುದಿಲ್ಲ. ಮುಂಬಯಿಯಲ್ಲಿ ಒಂದು ಫ್ಲ್ಯಾಟ್ ಕೊಂಡುಕೊಂಡು ಅವನು ಅವಳ ಜೊತೆ ವಾಸವಿರುತ್ತಾನೆ. ಅವನು ಹೋಗಿ ಬರುವುದರ ಮೇಲೆ ಅವಳು ನಿಗಾ ಇಟ್ಟುಕೊಂಡಿರುತ್ತಾಳೆ. ಅವನ ಕಛೇರಿಗಳ ಹಾಡುಗಳನ್ನು ಅವನ ಅನುಮತಿಯಿಲ್ಲದೇ ತನಗೆ ಇಷ್ಟಬಂದಂತೆ ಕಲಸಿ ರೆಕಾರ್ಡ್ ಮಾಡಿಸಿ ಸಿ.ಡಿ.ಗಳನ್ನು ಪ್ರಕಟಿಸುತ್ತಾಳೆ. ಮೋಹನ್‌ಲಾಲ್‌ಗೆ ತಾನು ಸಂಪಾದಿಸಿದ ಹಣವಿದ್ದರೂ ಉಪಯೋಗಕ್ಕೆ ಪುಡಿಗಾಸೂ ಸಿಗದಂತೆ ಮಾಡುತ್ತಾಳೆ. ಕಛೇರಿಗಳ ವ್ಯವಸ್ಥೆಗಳಲ್ಲಿ ಅವಳು ಅವನ ಮತ್ತು ಸಭಿಕರ ಕೇಳಿಕೆಗಳ ಮಧ್ಯೆ ಬಂದು ವಿರಸಗೊಳಿಸಿ ಅವನಿಗೆ ತೃಪ್ತಿಯಾಗುವಷ್ಟು ಹಾಡಲು ಬಿಡದೆ ಕಛೇರಿಗಳನ್ನು ಮುಕ್ತಾಯಪಡಿಸುವುದು–ಹೀಗೆಲ್ಲಾ ವರ್ತಿಸುತ್ತಾಳೆ. ಮೋಹನ್‌ಲಾಲ್ ಹೇಗಾದರೂ ಅವಳ ಹಿಡಿತದಿಂದ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನ ಪಡುತ್ತಾನೆ. ಅದೃಷ್ಟ ಮತ್ತೆ ಒಂದು ಅವಕಾಶ ಒದಗಿಸುತ್ತದೆ.

ನರ್ತಕಿ ಮನೋಹರಿ ಅವನನ್ನು ಹುಡುಕಿಕೊಂಡು ಬರುತ್ತಾಳೆ. ಅವಳ ಪ್ರಶಂಸೆಗೆ ಮತ್ತು ಅವನಿಗೆ ಪರಿಚಯವಿಲ್ಲದ ಕಲೆಯಾದ ಅವಳ ನರ್ತನದ ಪ್ರದರ್ಶನಕ್ಕೆ ತಾತ್ಕಾಲಿಕವಾಗಿ ಮಾರುಹೋಗಿ ಯಾರಿಗೂ ಹೇಳದೇ ಕೇಳದೇ ಅವಳೊಡನೆ ದೆಹಲಿಗೆ ಹೊರಟುಬಿಡುತ್ತಾನೆ. ಅವಳೊಂದಿಗಿನ ಮೊದಲನೆಯ ಭೇಟಿಯಲ್ಲೇ ಸಂಭೋಗವಾಗುತ್ತದೆ. ಅವಳು ಅದಕ್ಕೆ ಸಿದ್ಧಳಾಗಿ ಬಂದಿದ್ದಳಾದ್ದರಿಂದ ಅವಳು ಈ ಬಗೆಯ ಕಲಾಸಂಪ್ರದಾಯಕ್ಕೆ ಪಳಗಿದ ಕೈಯಾಗಿದ್ದಳೆಂದು ತಿಳಿಯುತ್ತದೆ. ಅವಳಿಗೆ ಬೇಕಾದ್ದು ತನ್ನ ನರ್ತನ ಸಮಾರಂಭಗಳಲ್ಲಿ ಮತ್ತು ನೃತ್ಯ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಮೋಹನ್ ಲಾಲನ ಪ್ರಸಿದ್ಧ ಸಂಗೀತದ ನೆರವು. ಚಂಪಾಳ ಮೇಲೆ ರೋಸಿಹೋಗಿದ್ದ ಆ ದಡ್ಡ ಈಗ ಮನೋಹರಿಯ ಬೋನಿನಲ್ಲಿ ಬೀಳುತ್ತಾನೆ. ದೆಹಲಿ ಅವನಿಗೆ ಅಪರಿಚಿತ ನಗರ. ಅಲ್ಲಿ ಸಂಗೀತಕ್ಕೆ ಮುಂಬಯಿಯಲ್ಲಿರುವ ಸ್ಥಾನ–ಮರ್ಯಾದೆಯಿರುವಂತೆ ಅವನಿಗೆ ಕಾಣಿಸಲಿಲ್ಲ. ಮನೋಹರಿಯ ನೃತ್ಯ ಪಾಠಶಾಲೆಯ ಒಂದು ಮರೆಯಾದ ಕೋಣೆಯಲ್ಲಿ ಅವನಿಗೆ ಇರಲು ವಸತಿ ಮಾಡಿಕೊಡುತ್ತಾಳೆ. ಪರಸ್ಪರ ಬೇಕಾದಾಗಲೆಲ್ಲ ಅವಳು ಅವನೊಡನೆ ಹಾಸಿಗೆಗೆ ಬರುತ್ತಾಳೆ. ಆದರೆ ಎಲ್ಲಾ ಗುಟ್ಟು ಗುಟ್ಟು. ಅವಳಿಗೆ ಸೋಹನ್ ಲಾಲ್ ಎಂಬ ಅತಿ ಮುದುಕ ಮತ್ತು ರೋಗಗ್ರಸ್ತ ಪತಿಯಿರುವುದೂ ಮತ್ತು ಇನ್ನೊಬ್ಬ ಧನಿಕ ವೈಶ್ಯ ಪಾಲನಿರುವುದೂ ಕ್ರಮೇಣ ತಿಳಿದುಬರುತ್ತದೆ. ಮನೋಹರಿ

ಕೊಡುವ ಪ್ರಸಿದ್ಧ ನೃತ್ಯ ಸಮಾರಂಭಗಳಲ್ಲಿ ಇವನು ಸಹಾಯಕನಾಗಿ ವಾದ್ಯವೃಂದದ ಜೊತೆ ರಂಗಸ್ಥಳದ ಒಂದು ಪಕ್ಕದಲ್ಲಿ ಕೂರುತ್ತಾನೆ. ಇವನು ಎಷ್ಟು ರಸಿಕತೆಯಿಂದ ಹಾಡಿದರೂ ಸಭಿಕರು ಅದಕ್ಕೆ ವಾಹ್ ಎನ್ನುವುದಿಲ್ಲ. ಸಂಗೀತಕ್ಕೂ ನೃತ್ಯಕ್ಕೂ ಕಲಾತ್ಮಕವಾಗಿ ಇರುವ ವೈಶಿಷ್ಟ್ಯ ಯೋಗ್ಯತೆಗಳು ಸ್ಪಷ್ಟವಾಗುತ್ತವೆ. ನೃತ್ಯದ ಬಗ್ಗೆ ಅವನಿಗೆ ಇದ್ದ ಆಕರ್ಷಣೆ ಇಳಿಮುಖವಾಗುತ್ತದೆ. ಅತಿಪವಿತ್ರವೆಂದು ಭಾವಿಸಿದ್ದ ಮತ್ತು ಶ್ರಮಪಟ್ಟು ಸಂಪಾದಿಸಿಕೊಂಡ ತನ್ನ ಕಲೆಯನ್ನು ಒಂದು ಮೂಲೆಯಲ್ಲಿ ಕೂರಿಸಿ ಸೇವಕನಂತೆ ನಡೆಸಿಕೊಳ್ಳುವ ಈ ಪರಿಸ್ಥಿತಿ ಅವನಿಗೆ ಸಹಿಸಲಾರದಾಗುತ್ತದೆ. ಇದಲ್ಲದೆ ಯಾವಾಗಲೂ ತನ್ನ ನೃತ್ಯಶಾಲೆಯ ಅಭಿವೃದ್ಧಿಯ ಮೇಲೆಯೇ ಗುರಿಯಿಟ್ಟುಕೊಂಡಿದ್ದ ಮನೋಹರಿ ಇನ್ನೊಬ್ಬ ಎಳೆ ಪ್ರಾಯದ ನರ್ತಕನನ್ನು ಹಿಡಿದುಕೊಂಡು ಬಂದು ಅವನೊಡನೆಯೂ ರಮಿಸಲು ತೊಡಗುತ್ತಾಳೆ. ನಿರರ್ಗಳ ಕಾಮವು ಮೋಹನ್ ಲಾಲನಿಗೆ ಎಷ್ಟು ಮಾಮೂಲಾಗಿತ್ತೋ ಮನೋಹರಿಗೂ ಅಷ್ಟೇ ಮಾಮೂಲಾಗಿತ್ತು. ಅದು ಇಬ್ಬರಿಗೂ ತಮ್ಮ ತಮ್ಮ ಕಲೆಯ ಅಭ್ಯಾಸಕ್ಕಾಗಿಯೇ ಅಥವಾ ಅದರ ನೆಪಕ್ಕಾಗಿಯೇ ಬೇಕಾಗಿತ್ತು. ಕಾಮೋಪಭೋಗದಲ್ಲಿ ಅವನು ವಾದಿಯಾದರೆ ಅವಳು ಸಂವಾದಿ. ಉಪಪತಿಗಳ ಉಪಟಳದ ಎಲೆ ಮರೆಯ ಕಾಯಿ ಜೀವನ ಅವನಿಗೆ ಸಹಿಸದಾಗಿ, ಮನೋಹರಿಯೊಡನೆ ಜಗಳ ಕಾದು ದೆಹಲಿಯಿಂದ ಮುಂಬಯಿಗೆ ಪಲಾಯನ ಮಾಡುತ್ತಾನೆ. ಅಲ್ಲಿ ತನ್ನ ನೆಚ್ಚಿನ ಹಿಂದಿನ ಸಾಥಿಗಳ ಸಹಾಯದಿಂದ ಕಡಿದುಹೋದ ತನ್ನ ಜೀವನದ ಎಳೆಗಳನ್ನು ಮತ್ತೆ ಕೂಡಿಸಿಕೊಂಡು ಮುಂದುವರಿಯುತ್ತಾನೆ. ಆಗ ಅವನು ಐವತ್ತರ ವಯಸ್ಸನ್ನು ದಾಟಿರುತ್ತಾನೆ.

ಆಗ ಮಂದ್ರದ ಮುಖ್ಯ ಸ್ತ್ರೀಪಾತ್ರಧಾರಿಣಿ (ನಾಯಕಿ?) ಮಧುಮಿತಾ ಮೋಹನ್ ಲಾಲನ ಸಂಗೀತ ಪಾಠಶಾಲೆಗೆ ಬಂದು ಸೇರಿಕೊಳ್ಳುತ್ತಾಳೆ. ಮಧು ಷಾ ಕಾಲೇಜು ಮುಗಿಸಿದ ತರುಣಿ. ಸಂಗೀತದ ಕ್ಲಾಸುಗಳಲ್ಲಿ ಹೆಚ್ಚು ಪ್ರಶಂಸೆ ಗಳಿಸಿ, ಅದರಲ್ಲಿ ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲದಿಂದ ಮೋಹನ್ ಲಾಲನ ಸಂಗೀತ ವಿದ್ಯಾಲಯಕ್ಕೆ ಸೇರಿಕೊಳ್ಳುತ್ತಾಳೆ. ಅವನು ಆಗ ಮುಂಬಯಿಯ ಅತಿ ಪ್ರಖ್ಯಾತ ಗಾಯಕನಾಗಿರುತ್ತಾನೆ. ಅವನ ಸುಮಧುರ ಕಂಠ ಮತ್ತು ಅನುಪಮ ಸ್ವರಸಾಧನೆಗಳ ಗಾಯನ ಅವಳನ್ನು ಅವನ ಕಡೆಗೆ ಬಲವಾಗಿ ಸೆಳೆಯುತ್ತವೆ. ಅವನ ಪ್ರಥಮ ಶಿಷ್ಯೆಯಾಗಬೇಕು ಎಂದು ಆಸೆಪಡುತ್ತಾಳೆ. ಅವಳಿಗೆ ತಂದೆಯಿಲ್ಲ. ಅವರದು ಮುಂಬಯಿಯ ಒಂದು ಧನಿಕ ವೈಶ್ಯ ಕುಟುಂಬ. ಅಣ್ಣನ ಮೆಚ್ಚು ತಂಗಿ. ಅವಳ ಆಸೆಗಳನ್ನೆಲ್ಲಾ ಅವನು ಪೂರೈಸುತ್ತಾನೆ. ಮೋಹನ್‌ಲಾಲ್ ಅವಳ ಕಂಠ ಮತ್ತು ಹಾಡುಗಾರಿಕೆಯನ್ನು ಪರೀಕ್ಷಿಸಿ ಒಪ್ಪಿ, ಅವಳನ್ನು ವಿಧಿಪೂರ್ವಕವಾಗಿ, ಕಂಕಣ ಕಟ್ಟಿ ಶಿಷ್ಯೆ ಮಾಡಿಕೊಳ್ಳುತ್ತಾನೆ. ಅವಳು ಅನುಕೂಲಸ್ಥರ ಮನೆಯ ಹುಡುಗಿ, ಅವಳೊಡನೆ ತಾನು ನಡೆದುಕೊಳ್ಳುವ ವರ್ತನೆ

ಗುಟ್ಟಾಗಿರುತ್ತದೆಯೆಂದು ಅವನ ಲೆಕ್ಕಾಚಾರ. ಅವಳು ಅಪ್ರಗಲ್ಭೆ. ಸಂಗೀತ ಮಾಸ್ತರರ ಮೇಲೆ ಅಪಾರ ಭಕ್ತಿ ಗೌರವಗಳನ್ನಿಟ್ಟುಕೊಂಡಿರುತ್ತಾಳೆ. ಶುದ್ಧಕಲ್ಯಾಣ್ ರಾಗದ ಪಾಠದ ಮೊದಲ ಒಂದೆರಡು ಪಾಠಗಳ ಸ್ವರಪ್ರಸ್ತಾರಗಳನ್ನು ಅವನದೇ ಆದ ವಿಶಿಷ್ಟ ರೀತಿಯಲ್ಲಿ ಬೋಧಿಸಿ, ಅವಳು ಬಹಳ ಖುಷಿಯಿಂದಿರುವಾಗ ತನ್ನ ಮಾಮೂಲಿ ಲೈನನ್ನು ಅವಳ ಕಡೆಗೆ ಸರಳಿನಂತೆ ಎಸೆಯುತ್ತಾನೆ. 'ನಾನು ನನ್ನಲ್ಲಿರುವುದನ್ನು ಬಿಚ್ಚಿ ಬಿಚ್ಚಿ ಹೇಗೆ ನಿನಗೆ ಕೊಡುತ್ತೇನೆಯೋ ನೀನೂ ಹಾಗೆಯೇ ನಿನ್ನಲ್ಲಿರುವುದನ್ನು ನನಗೆ ಕೊಡಬೇಕು' ಎಂದು. ಇದನ್ನು ಒಂದೆರಡು ಮೂರು ಸಲ ಹೇಳಿ ತನ್ನ ಇಂಗಿತ ಸ್ಪಷ್ಟಪಡಿಸುತ್ತಾನೆ. ಈ ಮೋಹನ್‌ಲಾಲ್ ಚುನ್ನಿಯನ್ನು ಮೊದಲ ಬಾರಿಗೆ ನಡುಕು ಧ್ವನಿಯಿಂದ ಬೇಡಿಕೊಂಡ ಮೋಹನ್‌ಲಾಲ್ ಅಲ್ಲ. ಇವ ಈಗ ಮುಂಬಯಿಯ ಸಂಗೀತ ವಿದ್ಯಾವ್ಯಾಪಾರದ ಪ್ರಪಂಚದಲ್ಲಿ ಇಪ್ಪತ್ತು ವರ್ಷ ಪಳಗಿದ್ದ. ಅನೇಕ ಸ್ತ್ರೀಯರ ಸಂಭೋಗಸುಖವನ್ನು ಸುಲಭವಾಗಿ ಪಡೆದು ಸ್ತ್ರೀಯರ ವಿಷಯದಲ್ಲಿ ಅವರು ಬರಿ ಭೋಗವಸ್ತು ಎಂಬ ನಿಲುವಿಗೆ ಬಂದಿದ್ದ. ಅವನು ವಾಸ್ತವದಲ್ಲಿ ಅವಿದ್ಯಾವಂತ. ಸಂಗೀತದಲ್ಲಿ ಮಾತ್ರ ಬುದ್ಧಿಯಿತ್ತೇ ವಿನಾ ಬೇರೆಲ್ಲಾ ವಿಷಯದಲ್ಲೂ ದಡ್ಡ ಮತ್ತು ಈಗ ಒರಟನೂ ಆಗಿದ್ದನೆನ್ನಬಹುದು.

ಆದರೆ ಮಂದ್ರದ ಕತೆ ಹೇಳುವ ಡೊಂಕು ಡೊಂಕು ವಿಧಾನದಲ್ಲಿ, ಕತೆಯ ಮುಂಭಾಗದಲ್ಲಿಯೇ, ಮೋಹನ್ ಲಾಲನ ಬಾಲ್ಯ, ವಿದ್ಯಾಭ್ಯಾಸಗಳ ವಿವರಗಳು ನಮಗೆ ಇನ್ನೂ ತಿಳಿಯದಿದ್ದಾಗ ಈ ಪ್ರಸಂಗ ಓದುಗರಿಗೆ ಇದಿರಾಗುತ್ತದೆ. ಅದರಿಂದ ಓದುಗರ ಮನಸ್ಸಿನಲ್ಲಾಗುವ ಪರಿಣಾಮ ತೀವ್ರ ಅನೈತಿಕ ಮತ್ತು ಭರ್ತ್ಸನೀಯ ನಡತೆಯಿದೆಂಬ ಭಾವನೆ. ಅದು ಕಾದಂಬರಿಯ ಕೊನೆಯವರೆಗೂ ಉಳಿದು ಮೋಹನ್‌ಲಾಲ್ ಮೇಲೆ ಯಾವ ಸಮಯದಲ್ಲೂ ಅನುಕಂಪ ಸಹಾನುಭೂತಿಗಳು ಓದುಗರಿಗೆ ಬರುವುದಿಲ್ಲ. ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ಎಲ್ಲವನ್ನೂ ಸಾಂಗವಾಗಿ ಸಂಶೋಧಿಸಿ, ಸಂಪೂರ್ಣ ಆಯೋಜನೆಯಿಂದ ಪಾತ್ರ ಮತ್ತು ಪ್ರಸಂಗಗಳ ರಚನೆ ಮಾಡುತ್ತಾರೆ. ಸರಿಯಾದ ಸಂಯೋಜನೆಯಿಲ್ಲದೇ ಅನಿರೀಕ್ಷಿತಗಳು ಆಗಲು ಬಿಡುವುದಿಲ್ಲ. ಆದ್ದರಿಂದ ಓದುಗರಲ್ಲಿ ಆಗುವ ಪ್ರಥಮ ಪ್ರತಿಕ್ರಿಯೆ ಅವರ ವಿವಕ್ಷಾಯೋಜಿತ ಇಚ್ಛೆಯೆಂದು ಬಗೆದಿದ್ದೇನೆ.

ಮಧು ಷಾ ಈ ಪ್ರಶ್ನೆಗೆ ತತ್ತರಿಸುತ್ತಾಳೆ. ಅವಳು ಮೋಹನ್‌ಲಾಲನ ಸಂಗೀತಕ್ಕೆ ಮಾರುಹೋಗಿದ್ದಳೇ ವಿನಾ ಅವನನ್ನು ಕಂಡರೆ ಒಂದು ಬಗೆಯ ಭಯ ಮತ್ತು ಹೇಸಿಗೆ ಪಡುತ್ತಿದ್ದಳು. ಐದು ದಶಕದ ಸಾಧಾರಣ ರೂಪಿನ ಬಡಕಲು ಮೈ ಅವನದು. ಉದುರುತ್ತಿರುವ ನರೆಗೂದಲಿಗೆ ಹಚ್ಚಿದ ಕರಿ ಬಣ್ಣ. ತಂಬಾಕು ಜಗಿದ ದುರ್ಬಲ ಹಲ್ಲುಗಳು ನಕ್ಕಾಗ ಅಸಹ್ಯವೆನಿಸುತ್ತಿದ್ದವು. ಅವಳೊಲ್ಲೆಯೆಂದಾಗ 'ನಾನು ಬಲವಂತ

ಮಾಡುವುದಿಲ್ಲ' ಎನ್ನುತ್ತಾನೆ. ಆದರೆ, ಅವಳಿಗೆ ಪ್ರತ್ಯೇಕ ಪಾಠ ಹೇಳುವುದನ್ನು ನಿಲ್ಲಿಸುತ್ತಾನೆ. ಇದು ನಿಜವಾಗಲೂ ಭರ್ತ್ಸನೀಯ ನಡತೆ. ಹಾಗನ್ನಿಸಿದರೂ ಇಲ್ಲಿ ಇನ್ನೊಂದು ಕಾರಣವೂ ಇರಬಹುದೆನಿಸುತ್ತದೆ. ಅದೇನೆಂದರೆ ಅವನು ಅವಳನ್ನು ತನ್ನ ಪಟ್ಟಶಿಷ್ಯೆ ಮಾಡಿಕೊಳ್ಳಬೇಕೆಂದು ಮನಸ್ಸು ಮಾಡಿದ್ದ. ಅದಕ್ಕಾಗಿ ಅವಳು ಅವನಿಗೆ ಸಂಪೂರ್ಣ ಅವನವಳಾಗಿ ವಶ್ಯಳಾಗಬೇಕಿತ್ತು. ಇಲ್ಲದಿದ್ದರೆ ಸಂಪೂರ್ಣ ವಿದ್ಯಾಪ್ರದಾನ ಅಸಾಧ್ಯ. ಅವಳ ಮೇಲೆ ಅಂತಹ ಅಧಿಕಾರ ಪಡೆಯುವುದಕ್ಕಾಗಿ ಅವನು ಹಾಗೆ ಮಾಡಿದನೆ?

ಮಧು ಅಳುತ್ತಾಳೆ. ಮದುವೆಯಾದ ಪತಿಗಲ್ಲದೇ ಬೇರೆ ಯಾರಿಗೂ ತನ್ನ ದೇಹವನ್ನು ಒಪ್ಪಿಸುವುದು ಪಾಪಕೃತ್ಯವೆಂದು ಅವಳು ಬೆಳೆದ ಮನೆಯ ಸಂಸ್ಕೃತಿಯ ಒತ್ತಾಯ ಅವಳನ್ನು ಬಿಗಿಹಿಡಿದಿತ್ತು. ಒಂದು ತಿಂಗಳು ಪಾಠಕ್ಕೆ ಹೋಗದೇ ಮನೆಯಲ್ಲೇ ಅಭ್ಯಾಸ ಮಾಡಿಕೊಂಡು ಕಾಲ ತಳ್ಳುತ್ತಾಳೆ. ಆದರೆ ಏನೇನೂ ಚೆನ್ನಾಗಿ ಹಾಡಲು ಬಾರದ ತನ್ನ ಸಹಾಭ್ಯಾಸಿಯೊಬ್ಬಳು ಒಂದು ಸಭೆಯಲ್ಲಿ ಮೋಹನ್‌ಲಾಲ್‌ಗೆ ಸಮವಾಗಿ ಕೂತು ಜೊತೆ ಕೊಟ್ಟಿದ್ದನ್ನು ನೋಡಿ, ಈರ್ಷ್ಯೆ ಅವಳ ಮನಸ್ಸನ್ನು ಒಡೆದು ಚೂರು ಮಾಡಿತು. ಅವಳು ಗುರುವಿಗೆ ಬೇಕಾಗ್ದನ್ನು ಕೊಟ್ಟಿದ್ದಳು ಎಂದು ಅವಳಿಗೆ ತಿಳಿದಿತ್ತು. ನಾನು ಈ ಗುರುವಿನಿಂದ ಸಂಗೀತ ಕಲಿಯಲೇಬೇಕೆಂಬ ಹಠ ಅವಳ ಮನಸ್ಸನ್ನು ಆಕ್ರಮಿಸಿ ಅವಳ ನೀತಿಬಲವನ್ನು ಸೋಲಿಸುತ್ತದೆ. 'ಗಾಯನ ಕಲೆಗಾಗಿ ನಾನು ಈ ಗಾಂಧರ್ವ ವಿವಾಹ ಮಾಡಿಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ' ಎಂಬ ಸಮಾಧಾನವನ್ನು ತನಗೇ ಹೇಳಿಕೊಂಡು, ಯಾರಿಗೂ ತಿಳಿಸದೇ ಗುರುವಿಗೆ ತಾನಾಗಿಯೇ ಸಮರ್ಪಿಸಿಕೊಂಡುಬಿಡುತ್ತಾಳೆ. ಇಲ್ಲಿ ಕಲೆಯ ಮೋಹ ಮತ್ತು ಆಕರ್ಷಣೆ ಸ್ತ್ರೀಯರಿಗೆ ಎಷ್ಟು ಬಲವಾಗಿರುತ್ತದೆಯೆಂಬುದು ಪ್ರತ್ಯಕ್ಷವಾಗುತ್ತದೆ. ಅದನ್ನು ಕಂಡು ಆಶ್ಚರ್ಯವಾಗುತ್ತದೆ. ಅದನ್ನು ಸಮಾಜದ ಕಟ್ಟುಪಾಡುಗಳು ಬಹುಪಾಲು ತಡೆಯಲಾರವು. ಮಧು ಮುಂದಿನ ಕೆಲವು ವರ್ಷಗಳಲ್ಲಿ ಮೋಹನ್ ಲಾಲನ ಪಟ್ಟಶಿಷ್ಯೆಯಾಗಿ ಪ್ರಸಿದ್ಧಿಗೆ ಬರುತ್ತಾಳೆ. ಅವನ ಜೊತೆ ಎಲ್ಲಾ ಕಛೇರಿಗಳಲ್ಲೂ ಕೂತು ಅವನಿಗೆ ಸಾಥ್ ಕೊಡುತ್ತಾಳೆ. ಅವಳ ಹೆಸರು ಮುಂಬಯಿಯಲ್ಲಿ ಎಲ್ಲೆಲ್ಲೂ ಹರಡುತ್ತದೆ.

ಆಮೇಲೆ ಒಂದು ದಿನ ವಿಕ್ರಮ್ ಎನ್ನುವ ಸಾಫ್ಟ್‌ವೇರ್ ಇಂಜಿನಿಯರೊಬ್ಬನನ್ನು ಮದುವೆಯಾಗಿ ಅಮೆರಿಕಾಕ್ಕೆ ಬಂದು ಲಾಸ್ ಗೇಟೋಸಿನಲ್ಲಿ ಒಂದು ದೊಡ್ಡಮನೆಯಲ್ಲಿ ವಾಸಮಾಡುತ್ತಾಳೆ. ಮೋಹನ್ ಲಾಲನಿಗೆ ಇದಕ್ಕಾಗಿ ಅವಳ ಮೇಲೆ ಕೋಪ ಬರುತ್ತದೆ. ಏಕೆಂದರೆ, ಗೃಹಸ್ಥಾಶ್ರಮ ಕಲೆಗಾರಿಕೆಗೆ ಶತ್ರು. ಅಡುಗೆ ಮಾಡುವುದು, ಮಕ್ಕಳು ಹೆತ್ತು ಸಾಕುವುದು ಇದರಲ್ಲಿ ಕಲೆಗಾರಿಕೆಗೆ ಸ್ಥಾನವೆಲ್ಲಿ? ಅವಳಲ್ಲಿ ಅವನು ಸುರಿದ ವಿದ್ಯೆ ನಾಶವಾಯಿತೆಂದೇ ಲೆಕ್ಕ. ಹೀಗೆ ಬಹಳ ಅಸಮಾಧಾನದಿಂದ ಇರುವಾಗ, ಅವನಿಗೆ ಅರವತ್ತು ತುಂಬುವ ವರ್ಷ, ಅಮೆರಿಕಾಕ್ಕೆ ಬಂದು ಅಲ್ಲಿ ಕಛೇರಿ ನಡೆಸಿ ಅಲ್ಲಿಯವರಿಗೆಲ್ಲ

ಸಂಗೀತದ ಆನಂದವನ್ನು ಕೊಡಬೇಕೆಂದು, ಕ್ಯಾಲಿಫ಼ೋರ್ನಿಯಾದಿಂದ ಮಧುವಿನ ಗಂಡ ವಿಕ್ರಮನಿಂದ ಬಹಳ ವಿನಯ ತುಂಬಿದ ಭಾಷೆಯಲ್ಲಿ ಆಹ್ವಾನ ಬರುತ್ತದೆ. ಅವನು ತನ್ನ ಶಿಷ್ಯೆಯೊಡನೆ ಮತ್ತೆ ಸಂಧಿಸುವ ಈ ಸದವಕಾಶವನ್ನು ತಪ್ಪಿಸಿಕೊಳ್ಳದೇ ಅಮೆರಿಕಕ್ಕೆ ಹೊರಟು ಬಂದು ಮಧುಮಿತಳ ಮನೆಯಲ್ಲೇ ಅತಿಥಿಯಾಗಿ ಇರುತ್ತಾನೆ.

ಆದರೆ ಅಲ್ಲಿ ಅವನು ಮಿತಿಮೀರಿ ಕೆಟ್ಟದಾಗಿ ವರ್ತಿಸುತ್ತಾನೆ. ಬಂದೊಡನೆ ತನಗೆ ಮಧುವಿನೊಡನೆ ಏಕಾಂತದಲ್ಲಿ ಸಮಯ ದೊರೆತಾಗಲೆಲ್ಲ ತನಗೆ ಅವಳ ಮೇಲೆ ಸ್ವಾಮ್ಯವಿದೆ, ಅದು ಅವಳ ಗಂಡನದಕ್ಕಿಂತ ಮೊದಲಿನದು ಮತ್ತು ಬಲಯುತವಾದುದು ಎಂದು ತೋರಿಸಲೆತ್ನಿಸುತ್ತಾನೆ. ಅವಳ ಜೊತೆ ಹಾಸಿಗೆ ಸೇರಬೇಕೆಂದು ಬಲಾತ್ಕರಿಸುತ್ತಾನೆ. ಪರುಷವಾದ ಮಾತುಗಳ ಪ್ರಯೋಗ, ಎಳೆಯ ಪ್ರಾಯದ ಹುಡುಗರು ಮಾಡುವ ಹಠವಾಡುತ್ತಾನೆ. ಅವಳು ಅವನೊಡನೆ ದೇಹ ಸಂಬಂಧ ಮಾಡಲು ನಿರಾಕರಿಸಿ ಅವನ ಪಾದಸ್ಪರ್ಶ ಮಾಡಿ ಕೋಣೆಯಿಂದ ಹೊರಬಂದಾಗ ಗಾಂಧರ್ವ ವಿವಾಹವಾಗಿದೆಯೆಂದು ನೀನೇ ಹೇಳಿದೆಯಲ್ಲ ಎಂದು ಪ್ರತಿ ಹೇಳುತ್ತಾನೆ. ಅವಳು ಒಪ್ಪದಿದ್ದರೆ ಸಂಗೀತದ ಕಛೇರಿಯಲ್ಲಿ ಭಾಗವಹಿಸುವುದಿಲ್ಲ ಎಂದು ಮನೆ ಬಿಟ್ಟು ಹೋಗಿ ರಂಪ ಮಾಡಿ ಅವಳ ಮನಸ್ಸನ್ನೂ ಮತ್ತು ಚಾರಿತ್ರ್ಯವನ್ನೂ ಮತ್ತೆ ಮುರಿಯುತ್ತಾನೆ. ಒಂದು ಮನೆಗೆ ಅತಿಥಿಯಾಗಿ ಬಂದವನು ಹೀಗೆ ವರ್ತಿಸುವುದು ಎಲ್ಲಿಯೂ ಕಾಣಸಿಗದ ಅಸಹ್ಯ ವರ್ತನೆ. ಮೋಹನ್‌ಲಾಲ್ ಸ್ವಭಾವತಃ ಎಂತಹ ಅವಿವೇಕಿ ಮತ್ತು ಒರಟು ಮನುಷ್ಯ ಎಂದು ಎತ್ತಿ ತೋರಿಸಲು ಈ ಪ್ರಸಂಗದ ಉದ್ದೇಶವೆಂದು ಭಾವಿಸಿದ್ದೇನೆ. ಬೀಭತ್ಸರಸವೇ ಇದರ ಪರಿಣಾಮ.

ಸಂಗೀತ ಕಛೇರಿ ಯೋಜನೆಯಂತೆ ನಡೆದು, ಅದರಲ್ಲಿ ಮೋಹನ್ ಲಾಲನ ಸಾಥಿಯಾಗಿ ಹಾಡಿ ಆ ಸಮಾರಂಭ ಯಶಸ್ವಿಯಾಗಿ ನಡೆಯಲೋಸುಗ ಅವಳು ಮತ್ತೆ ಅವನ ಹಾಸಿಗೆಗೆ ಹೋಗುತ್ತಾಳೆ. ಹಾಗೆ ರಾಜಿ ಆದಮೇಲೆ ಅವನು ಅವಳಿಗೆ ಆ ಸಮಾರಂಭದಲ್ಲಿ ಹಾಡುವ ಎಲ್ಲಾ ರಾಗಗಳನ್ನೂ ಒಟ್ಟಿಗೆ ಏಕಾಂತದಲ್ಲಿ ಕುಳಿತು ಅತಿ ವಿಶದವಾಗಿ ವಿವರಿಸಿ ಘಂಟೆಗಟ್ಟಲೆ ಅಭ್ಯಾಸ ಮಾಡಿಸುತ್ತಾನೆ. ಅದರಿಂದ ಅವಳಿಗೆ ಅಪರಿಮಿತ ಆನಂದ ಮತ್ತು ತೃಪ್ತಿ ಸಿಗುತ್ತದೆ. ಅವಳು ಅಮೆರಿಕಕ್ಕೆ ಬಂದ ಮೇಲೆ ಅಭ್ಯಾಸವಿಲ್ಲದೆ ಮತ್ತು ಪದೇ ಪದೇ ರಂಗಸ್ಥಳದ ಮೇಲೆ ಹಾಡುವ ಅವಕಾಶವಿಲ್ಲದೇ ಅವಳ ಗಾನಕಲೆ ಮಾಸಲಾಗಿ ಮರೆಯಾಗಿಬಿಟ್ಟಂತೆ ಆಗಿತ್ತು. ಈಗ ಅದು ಸಂಜೀವಿತವಾಯಿತು. ಅವರಿಬ್ಬರೂ ಆ ಸಭೆಯಲ್ಲಿ ಬಹಳ ಕಾಂತಿಕೌಶಲಗಳಿಂದ ಹಾಡುತ್ತಾರೆ. ಅಮೆರಿಕದ ಹಿಂದೂಸ್ತಾನಿ ಸಂಗೀತ ರಸಿಕರಿಗೆಲ್ಲಾ ಮರೆಯಲಾಗದ ಸುಖಾನುಭವವಾಯಿತು. ಮಧುಮಿತ, ತಮ್ಮ ನಡುವೆಯೇ ಇರುವವಳು ಸಂಗೀತ ಪ್ರಪಂಚದ ಅತಿ ಕಾಂತಿಯುತ ತಾರೆಯೆಂದು ಹೆಸರು ಪಡೆದು ಬೀಗಿದಳು. ವಿಕ್ರಮ

ಹೆಮ್ಮೆ ತುಂಬಿದವನಾದ. ಮೋಹನ್‌ಲಾಲ್ ಕ್ಯಾಲಿಫ಼ೋರ್ನಿಯಾದಿಂದ ನ್ಯೂಯಾರ್ಕ್‌ಗೆ ಹೋಗಿ ಅಲ್ಲಿ ಒಂದು ಸಂಗೀತ ಕಾರ್ಯಾಗಾರದಲ್ಲಿ ಒಂದು ವಾರದಷ್ಟು ಕಾಲ ಬಂದವರಿಗೆಲ್ಲಾ ಹಿಂದೂಸ್ತಾನೀ ಸಂಗೀತದ ಪರಿಚಯ ಮಾಡಿಕೊಡುವುದೆಂದು ಇನ್ನೊಂದು ಆಹ್ವಾನ ಬರುತ್ತದೆ. ಅಲ್ಲಿಯೇ ಅವನು ಲಾರೆನ್ನಳನ್ನು ಸಂಧಿಸಿದ್ದು. ಅವನು ಅವಳ ಜೊತೆಯಲ್ಲಿಯೂ ಸಂಭೋಗಸಂಬಂಧ ಬೆಳೆಸುತ್ತಾನೆ. ಅವಳಿಗೆ ಭೂಪಾಲಿ ರಾಗದ ಹೆಸರಿಟ್ಟು ಕರೆಯುತ್ತಾನೆ. ಅವಳಿಗೆ ಕಾರ್ಯಾಗಾರದಲ್ಲಿ ಬಹಳ ಪುರಸ್ಕಾರ ದೊರೆಯುವಂತೆ ನೋಡಿಕೊಳ್ಳುತ್ತಾನೆ. ಅವಳಿಗೆ ಧನಸಹಾಯ ಬೇಕಾದಾಗ ತನ್ನ ಸಂಭಾವನೆಯಿಂದ ಎರಡು ಸಾವಿರ ಡಾಲರುಗಳನ್ನು ಕೇಳಿದೊಡನೇ ಕೊಟ್ಟುಬಿಡುತ್ತಾನೆ. ಆದರೆ ಅವಳು ಮುಂಬಯಿಗೆ ಬಂದು ಅವನ ಬಳಿ ಶಿಷ್ಯೆಯಾಗಿ ಸಂಗೀತ ಕಲಿಯತೊಡಗಿದಾಗ, ಅವಳು ಚುರುಕಾದವಳಲ್ಲ, ಸಂಸ್ಕಾರವಿಲ್ಲದರಿಂದಲೋ ಏನೋ, ತನ್ನ ವಿದ್ಯೆಗೆ ಪಾತ್ರಳಲ್ಲವೆಂದು ತಿಳಿದಾಗ ಅವಳನ್ನು ಬಹಳ ಒರಟುತನದಿಂದ ಕೆನ್ನೆಗೆ ಹೊಡೆದು ಕಳುಹಿಸುತ್ತಾನೆ.

ಮೋಹನ್‌ಲಾಲ್ ಭಾರತಕ್ಕೆ ಹಿಂತಿರುಗಿದ ಮೇಲೆ, ಆ ಸಂಗೀತ ಸಮಾರಂಭದ ಉತ್ಕರ್ಷಸಮಯ ಕಳೆದ ಬಳಿಕ ಮಧುಮಿತಳ ಜೀವನ ಬಹಳ ಬೇಗ ಖಿನ್ನತೆಯ ಜಾಡು ಹಿಡಿಯುತ್ತದೆ. ಅಮೆರಿಕದ ಜೀವನ ಸುಖವಿದ್ದರೂ, ಬಹಳ ಸುಸಂಸ್ಕೃತ ಮತ್ತು ಸಾಧುಪುರುಷನಾದ ವಿಕ್ರಮ್ ಗಂಡನಾಗಿದ್ದರೂ, ಅವನು ಅತ್ಯಂತ ಸಂಗೀತ ಪ್ರೇಮಿಯಾಗಿದ್ದರೂ, ಅವಳಿಗೆ ಮನಶ್ಶಾಂತಿ ಇಲ್ಲದಾಗುತ್ತದೆ. ಅವಳಿಗೆ ದಿನವೂ ಸಂಗೀತದಲ್ಲಿ ಮುಳುಗಿರಬೇಕು, ಅದರಲ್ಲೂ ಮೋಹನ್ ಲಾಲನ ಜೊತೆ ಹಾಡುತ್ತಿರಬೇಕು ಎಂಬ ಆಸೆಗಳು ಕಾಡತೊಡಗುತ್ತವೆ. ಅಲ್ಲದೇ ತಾನು ವಿಕ್ರಮ್‌ಗೆ ದ್ರೋಹಮಾಡಿದ್ದೇನೆಂಬ ತಪ್ಪಿತಸ್ಥ ಭಾವ ಅವಳನ್ನು ಮುತ್ತಿಕೊಳ್ಳುತ್ತದೆ. ತಾನು ಕಲುಷಿತೆಯಾಗಿದ್ದೇನೆನಿಸುತ್ತದೆ. ಅವನ ಬಳಿ ಪತ್ನಿಯಂತೆ ಇರುವುದು ಕಷ್ಟವಾಗುತ್ತದೆ. ವಿಕ್ರಮ್ ತನ್ನ ಕೆಲಸದ ಪ್ರಯುಕ್ತ ಬೇರೆ ಬೇರೆ ಊರುಗಳಿಗೆ ಹೋಗಿಬಿಡುತ್ತಿದ್ದ. ಆಗ ಅವಳು ಒಂಟಿಯಾಗಿ ಖಿನ್ನತೆಯಿಂದ ಮುದುಡಿಕೊಂಡು ಕೂರುತ್ತಿದ್ದಳು. ಒಂದು ದಿನ ಈ ಜೀವನವನ್ನು ಸಹಿಸಲಾರದೆ, ಒಂದು ಕಾಗದದಲ್ಲಿ ಮೋಹನ್ ಲಾಲನ ಜೊತೆ ಹಿಂದೆ ಆದ ಮತ್ತು ಈ ಬಾರಿ ಆದ ಸಂಬಂಧವನ್ನು ಅವನಿಗೆ ತಿಳಿಸಿ, ತಾನು ಇನ್ನು ಅವನ ಹೆಂಡತಿ ಯಾಗಿರಲು ಅರ್ಹಳಲ್ಲವೆಂದು ಹೇಳಿ, ಕ್ಯಾಲಿಫ಼ೋರ್ನಿಯಾವನ್ನು ಬಿಟ್ಟು ಮುಂಬಯಿಗೆ ಬಂದುಬಿಡುತ್ತಾಳೆ. ಅಲ್ಲಿಂದ ಮೋಹನ್‌ಲಾಲ್‌ನ ಬಳಿಗೆ ಹೋಗಿ ಅವನಿಗೆ ವಿಷಯವನ್ನೆಲ್ಲಾ ಹೇಳಿ ಮತ್ತೆ ಅವನ ಶಿಷ್ಯೆಯಾಗಲು ಪ್ರಯತ್ನಮಾಡುತ್ತಾಳೆ. ಆದರೆ ಅವನು ಅವಳನ್ನು ನಿರಾಕರಿಸುತ್ತಾನೆ. ಅವಳು ಅಮೆರಿಕದಲ್ಲಿ ಆದ ಸಂಗತಿಗಳನ್ನು ವಿಕ್ರಮನಿಗೆ ಕಾಗದದಲ್ಲಿ ಬರೆದು ತಿಳಿಸಿದ್ದಕ್ಕಾಗಿ ಬಹಳ ಕೋಪಗೊಂಡು ಕೆನ್ನೆಗೆ ಬಾರಿಸುತ್ತಾನೆ. ಈ ಅರವತ್ತರ

ವಯಸ್ಸಿನಲ್ಲಿ ಹೀಗೆ ರೇಗುವುದು, ಹೆಂಗಸರನ್ನು ಹೊಡೆಯುವುದು ಆ ಒರಟನಿಗೆ ವಾಡಿಕೆಯಾಗಿಹೋಗಿತ್ತು. ಕಾಮಾತ್ ಕ್ರೋಧೋಭಿಜಾಯತೇ, ಗೀತಾವಾಕ್ಯ! ಆಗ ಅವನು ತನ್ನ ಕೀರ್ತಿಸ್ಥಾನದಿಂದ ಇಳಿಮುಖದ ದಾರಿ ಹಿಡಿದಿದ್ದ. ಬಲು ಬೇಗ ಕೋಪ ಎಲ್ಲರ ಮೇಲೂ.

ಮಧುಮಿತಾ ಆಗ ಮುಂಬಯಿಯ ಹೊರಗೆ ಒಂದು ಸಣ್ಣ ಊರಿನ ಬಳಿ ಒಂದೆರಡು ಎಕರೆ ಭೂಮಿಯನ್ನು ಕೊಂಡುಕೊಂಡು ಒಂದು ಮನೆ ಮತ್ತು ಅದರ ಸುತ್ತ ತೋಟವನ್ನು ಮಾಡಿಸಿಕೊಂಡು ವಾಸಮಾಡುತ್ತಾಳೆ. ಅಲ್ಲಿ ತನಗೆ ಆಗಲೇ ಪಾಠವಾಗಿರುವ ರಾಗಗಳನ್ನು, ಮೋಹನ್‌ಲಾಲ್ ಹೇಳಿಕೊಟ್ಟ ಶೈಲಿಯಲ್ಲೇ ನಿರಂತರ ಅಭ್ಯಾಸಮಾಡುತ್ತಾಳೆ. ಅವನ ಹಾಡುಗಳ ರೆಕಾರ್ಡ್‌ಗಳನ್ನು ಕೊಂಡು ತಂದು ಅವುಗಳ ಅನುಸಾರವಾಗಿಯೇ ಹಾಡಿ ಕಲಿಯುತ್ತಾಳೆ. ಹೀಗೆ ಕೆಲವು ವರ್ಷಗಳುರುಳುತ್ತವೆ. ಆಗಾಗ ಮೋಹನ್ ಲಾಲನ ನೆಚ್ಚಿನ ಸಾಥಿ, ಹಾರ್ಮೋನಿಯಂ ಬಾರಿಸುವ ಟಿಪ್ನಿಸ್ ಅವಳಲ್ಲಿಗೆ ಬಂದು ಸಾಥ್ ಕೊಡುತ್ತಾನೆ. ಹೀಗೆ ಒಂದು ದಿನ ಅವಳ ಗಾಯನ ಬಹಳ ಉತ್ತಮಮಟ್ಟಕ್ಕೆ ಮುಟ್ಟಿ ಅವಳು ಮೋಹನ್ ಲಾಲನನ್ನೂ ಮೀರಿ ಮುಂದೆ ನಡೆದಿದ್ದಾಳೆಂದು ಗ್ರಹಿಸಿ, ಅವಳದೇ ಒಂದು ಪ್ರತ್ಯೇಕ ಗಾಯನ ಸಮಾರಂಭದ ಏರ್ಪಾಡು ಮಾಡಿಸುತ್ತಾನೆ. ಅದು ಬಹಳ ಯಶಸ್ವಿಯಾಗುತ್ತದೆ. ಮಧುಮಿತಾ ಮುಂಬಯಿಯ ಸಂಗೀತಲೋಕದ ಹೊಸ ತಾರೆಯಾಗಿ ಉದಿಸುತ್ತಾಳೆ.

ಮಂದ್ರ ಬಹಳ ದೊಡ್ಡ ಕಾದಂಬರಿ. ಅದು ಅನೇಕ ಪಾತ್ರಗಳ ಕತೆಯ ಒಂದು ಮಹಾಸ್ರೋತ. ಈ ಹಿಂದೆ ಸಂಕ್ಷೇಪ ಮಾಡಿರುವ ಕತೆ ಅದರ ಬೆನ್ನೆಲುಬಿನಂತಿರುವ ಮುಖ್ಯ ಪಾತ್ರಗಳದು. ಇಲ್ಲಿ ಅದರ ಸಹಾಯಕ ಪಾತ್ರಗಳಲ್ಲಿ ಒಂದೆರಡನ್ನು ಪರಿಶೀಲಿಸುತ್ತೇನೆ. ಮುಂಬಯಿಯ ಬಹಳ ಪ್ರಸಿದ್ಧ ಸಂಗೀತಾಭಿಮಾನಿ ಮತ್ತು ಪ್ರಮುಖ ವಕೀಲ ಗೋರೆ ಸಾಹಬ್ ಮೊದಲು ನೆನಪಿಗೆ ಬರುತ್ತಾನೆ. ಅವನು ಎಲ್ಲಾ ಹಿಂದುಸ್ತಾನಿ ಸಂಗೀತಗಾರರ ಎಲ್ಲಾ ರೆಕಾರ್ಡುಗಳನ್ನೂ ಸಂಗ್ರಹಿಸಿ ಒಂದು ಲೈಬ್ರರಿ ಮಾಡಿರುತ್ತಾನೆ. ಅವನು ಬಹಳ ಉದಾರಿ. ಕಷ್ಟದಲ್ಲಿರುವವರ ಬಗ್ಗೆ ಕನಿಕರಪಟ್ಟು ಸಹಾಯಮಾಡುತ್ತಾನೆ. ಧರ್ಮಭೀರು. ಮೋಹನ್‌ಲಾಲ್ ರಾಮ್ ಕುಮಾರಿಯನ್ನು ತ್ಯಜಿಸಿಬಿಟ್ಟು ಚಂಪಾಳೊಡನೆ ಇರುವಾಗ ಗೋರೆ ಸಾಹಬ್ ಮನೆಯಲ್ಲಿ ಅವಳನ್ನು ಅಡುಗೆಕೆಲಸಕ್ಕೆ ಇಟ್ಟುಕೊಂಡು ಸಹಾಯಮಾಡುತ್ತಾನೆ. ಬಹಳ ರುಚಿರುಚಿಯಾಗಿ ಅಡುಗೆಮಾಡಿ ಹಾಕುತ್ತಾಳೆ. ಗೋರೆ ಸಾಹಬ್‌ಗೆ ಆ ದಿನಗಳಲ್ಲಿ ಒಂಟಿ ರಾಮ್ ಕುಮಾರಿಯ ಮೇಲೆ ಆಸೆ ಆಗುತ್ತದೆ. ಲಭ್ಯಳಾದ ಹೆಂಗಸಿನ ಕಡೆಗೆ ಯಾವ ಗಂಡಸರ ಇಚ್ಛೆ ಹರಿಯದೇ ಇರುತ್ತದೆ? ಅದನ್ನು ಅವನು ಅವಳಿಗೆ ಸೂಚ್ಯವಾಗಿ ತಿಳಿಸಿಯೂ ತಿಳಿಸುತ್ತಾನೆ. ಅವಳು ತನ್ನ ಸ್ವಭಾವದ ಪ್ರಕಾರ ತನ್ನ ದೇವರಿಗೆ ನಮಸ್ಕಾರ ಮಾಡಿ ಕೇಳಿ, ಅನುಮತಿ ಪಡೆದುಕೊಂಡು

ಬಂದು ಗೋರೆ ಸಾಹಬನಿಗೆ ಒಪ್ಪಿಸಿಕೊಳ್ಳುತ್ತಾಳೆ. ಆದರೆ ಅವನು ವಿಷಯವನ್ನು ವಿಚಿಂತಿಸಿ ತನ್ನನ್ನು ಸಂಯಮದಿಂದ ತಡೆದುಕೊಳ್ಳುತ್ತಾನೆ. ಅವಳು ಅವನೊಡನೆ ಏಕಾಂತದಲ್ಲಿದ್ದಾಗ ಅವನ ಕಾಲಿಗೆ ತನ್ನ ಕೆನ್ನೆಗಳನ್ನಿರಿಸಿ ಕಣ್ಣೀರು ಸುರಿಸುತ್ತಾಳೆ. ಈ ವಿಚಿತ್ರ ವರ್ತನೆ ರಾಮ್ ಕುಮಾರಿಯ ಅಪ್ರಗಲ್ಭ ವ್ಯಕ್ತಿತ್ವವನ್ನು ಅತ್ಯಂತ ಸುಂದರವಾಗಿ ತೋರಿಸುತ್ತದೆ.

ನನಗೆ ಬಹಳ ಇಷ್ಟವಾದ ಇನ್ನೊಂದು ಪಾತ್ರ ವಿಕ್ರಮನದು. ಇವನಿಗೆ ಮಧುಮಿತಳ ಬಗ್ಗೆ ಎಲ್ಲವೂ ಅವಳು ಕಾಗದದಲ್ಲಿ ಬರೆದು ತಿಳಿಸುವುದಕ್ಕೆ ಮುಂಚೆಯೇ ಗೊತ್ತಿತ್ತು ಎಂದು ನನ್ನ ಅಭಿಪ್ರಾಯ. ಏಕೆಂದರೆ ಇವನೇನೂ ಪೆದ್ದನಲ್ಲ. ಮದುವೆಗೆ ಮುಂಚೆಯೇ ಇವಳು ಮೋಹನ್ ಲಾಲನ ಪಟ್ಟಶಿಷ್ಯೆಯೆಂದೂ ಅಂತಹವರು ಅದಕ್ಕೆ ಗುರುದಕ್ಷಿಣೆ ಕೊಟ್ಟಿರುತ್ತಾರೆಂದೂ ತಿಳಿದಿತ್ತು. ಮೋಹನ್‌ಲಾಲ್ ತಾನು ಮಾಡುತ್ತಿರುವುದು ಯಾರಿಗೂ ತಿಳಿಯದು ಎಂದುಕೊಂಡಿದ್ದರೂ ಅದು ಮುಂಬಯಿಯ ಸಂಗೀತವರ್ತುಲದಲ್ಲಿ ಎಲ್ಲರಿಗೂ ತಿಳಿದ ಚಾಡಿ ಸುದ್ದಿಯಾಗಿತ್ತು. ಅವಳು ಮದುವೆಯಾಗಿ ತನ್ನೊಡನೆ ಅಮೆರಿಕಕ್ಕೆ ಬಂದು ಸಂಸಾರ ಮಾಡಲು ತೊಡಗಿದೊಡನೆಯೇ ಅವಳು ಕನ್ಯೆಯಲ್ಲ ಎಂಬುದು ಖಚಿತವಾಗಿರುತ್ತದೆ. ಅವಳು ಯಾವಾಗಲೂ ಸಂಗೀತ ಮತ್ತು ತನ್ನ ಗುರುವಿನ ನೆನಪುಗಳಲ್ಲಿ ಮಗ್ನಳಾಗಿರುತ್ತಿದ್ದಳು. ಬಂದ ಸ್ವಲ್ಪ ದಿನಗಳಲ್ಲೇ ಮೋಹನ್ ಲಾಲನನ್ನು ಕರೆಸಿಕೊಳ್ಳುವುದರಲ್ಲಿ ಉತ್ಸಾಹದಿಂದ ಉದ್ಯುಕ್ತಳಾದಳು. ಅವನು ಬಂದಾಗ ಕೆಲಸದ ಭರದಲ್ಲಿದ್ದಾಗ ಅವರಿಬ್ಬರೂ ಏಕಾಂತದಲ್ಲಿರುವ ಸಮಯಗಳನ್ನು ಅವನೇ ಉಂಟುಮಾಡಿಕೊಟ್ಟಂತೆ ಆಯಿತು. ಆದರೂ ಅಂತಹ ಪ್ರಲೋಭನಪೂರ್ಣ ಸನ್ನಿವೇಶಗಳಲ್ಲಿ ಅವಳು ತನ್ನ ಪಾತಿವ್ರತ್ಯವನ್ನು ಮುರಿಯುವುದಿಲ್ಲವೆಂದು ಅವನು ನೆಚ್ಚುತ್ತಾನೆ. ಅವನ ಆ ಪ್ರೀತಿ ಮತ್ತು ದೃಢವಿಶ್ವಾಸಗಳು ಬಹಳ ಮೆಚ್ಚುವಂಥವು. ಆದರೆ ಅದು ತುಸು ಅವಾಸ್ತವವೆನ್ನಿಸುತ್ತದೆ. ಅಥವಾ ಅವನು ಕಾಮಸಂಬಂಧ ಸ್ವಾತಂತ್ರ್ಯದ ವಿಷಯದಲ್ಲಿ ಸ್ತ್ರೀಯರೂ ಪುರುಷರೂ ಸರಿಸಮಾನರೆನ್ನುವ ಅತ್ಯುದಾರ ಬುದ್ಧಿಯವನೇನೋ. ಈತನ ಪರಮ ಸೌಜನ್ಯ, ಶಾಂತ ಸ್ವಭಾವ, ಮತ್ತು ಮೋಹನ್ ಲಾಲನ ಬಗ್ಗೆ ವ್ಯಕ್ತಪಡಿಸಿದ ಅನನ್ಯ ಭಕ್ತಿಗೌರವಗಳು ಒಂದು ಒಗಟಾಗಿ ನಿಲ್ಲುತ್ತವೆ. ಅವನೇನಾದರೂ ಕ್ಲೀಬನೆ ಎನ್ನುವ ಸಂದೇಹ ಬರುತ್ತದೆ.

ಟಿಪ್ನಿಸ್ ಪಾತ್ರವೂ ಬಹಳ ಮೋಹಕವಾದುದು. ಒಳ್ಳೆಯ ನೆಚ್ಚಿನ ಗೆಳೆಯ. ಸ್ವತಃ ತಬಲಾ ಬಾರಿಸುವ ಬಡವನಾದರೂ ಯಾವಾಗಲೂ ಕಷ್ಟಪರಿಸ್ಥಿತಿಗೆ ಸಿಕ್ಕಿಕೊಳ್ಳದೇ ಮೋಹನ್ ಲಾಲನಿಗೂ ಮಧುಮಿತಳಿಗೂ ಹಿತಹೇಳುವ ಮತ್ತು ಸಹಾಯಕ್ಕೆ ಬರುವ ಸಜ್ಜನ ಮಿತ್ರ. ನಾನು ಕಂಡಿರುವ ಪಕ್ಕವಾದ್ಯಕಾರರೆಲ್ಲ ಬಹುಶಃ ಸಜ್ಜನ ಪ್ರವೃತ್ತಿಯವರು, ಮತ್ತು ಬಹಳ ನಿಗರ್ವಿಗಳು. ನಮ್ಮ ಸಂಗೀತ ಕಛೇರಿಗಳಲ್ಲಿ ಪ್ರಮುಖ ಗಾಯಕರಿಗೇ

ಎಲ್ಲಾ ಪ್ರಶಂಸೆಗಳೂ ಸಲ್ಲುತ್ತವೆಯಾದ್ದರಿಂದ ಅವರ ಪ್ರತಿಷ್ಠೆ ಮತ್ತು ಅದಕ್ಕೆ ತಕ್ಕ ಗರ್ವ ಅವರಲ್ಲಿ ಹುಟ್ಟಿ ಅವರನ್ನು ಕೇಡಿನ ಕಡೆಗೆ ಒಯ್ಯುವ ಸಂದರ್ಭವುಂಟು. ಆದರೆ, ಪಕ್ಕವಾದ್ಯದವರು ಗಾಯಕರ ಸಂಗೀತಕ್ಕೆ ಹೊಂದಿಕೊಂಡು ತಮ್ಮ ಕಲೆಯನ್ನು ಪ್ರಯೋಗಿಸಿ ಒಟ್ಟು ಅನುಭವವನ್ನು ಸುಶೋಭಿತಗೊಳಿಸುವುದರಲ್ಲಿ ಪರಿಣತರಾಗಿರುತ್ತಾರೆ. ಅದರಿಂದ ಅದೇ ಸಂಗೀತಕಲೆ ಅವರನ್ನು ಕಲ್ಯಾಣಮಿತ್ರರಂತೆ ಮಾಡುತ್ತದೆ.

ಈ ಕತೆಯಲ್ಲಿ ಏಳು ಸ್ತ್ರೀಪಾತ್ರಗಳು ಮೋಹನ್ ಲಾಲನ ಜೀವನದ ಆಸರೆಯಲ್ಲಿ ಬೆಳೆಯುತ್ತವೆ. ಅವು ಚುನ್ನಿ, ಜವಹರ್ ಬಾಯಿ, ರಾಮ್ ಕುಮಾರಿ, ಚಂಪಾ, ಮನೋಹರಿ, ಮಧುಮಿತಾ ಮತ್ತು ಲಾರೆನ್. ಈ ಪಾತ್ರಗಳನ್ನು ಒಂದು ಸಪ್ತಕದ ಸ್ವರಗಳಂತೆ ಭಾವಿಸಬಹುದು. ಅವುಗಳಲ್ಲಿ ಒಂದೊಂದಕ್ಕೂ ಸಪ್ತಕದ ಸ್ವರಗಳಿಗಿರು ವಂತೆಯೇ ಬೇರೆ ಬೇರೆ ರಾಗೋತ್ಪಾದನಗುಣಗಳು ಕಂಡುಬರುವಂತೆ ಭೈರಪ್ಪನವರು ಚಿತ್ರಿಸಿದ್ದಾರೆ. ಕೆಲವೆಡೆ ಈ ಹೆಂಗಸರನ್ನು ಮೋಹನ್‌ಲಾಲ್ ರಾಗರಾಗಿನಿಯರಿಗೆ ಹೋಲಿಸಿ ಅವುಗಳ ಹೆಸರಿನಿಂದಲೇ ಸಂಕೇತಿಸುತ್ತಾನೆ. ಮಧುಮಿತಳನ್ನು ಶುದ್ಧಕಲ್ಯಾಣ್, ಲಾರೆನ್‌ಳನ್ನು ಭೂಪಾಲಿ (ಅವಳ ಕಣ್ಣುಗಳು ಗಾಂಧಾರ, ಧೈವತಗಳಂತೆ ಹೊಳೆಯುತ್ತಿದ್ದವಂತೆ)– ಹೀಗೆ ಅವರ ಅಂಕಿತಗಳು. ಮೋಹನ್ ಲಾಲನ ಸಂಗೀತಜೀವನದ ರಾಗ ಈ ಸ್ವರಗಳ ಮಣೆಯ ಮೇಲೆ ಆರೋಹಣ ಅವರೋಹಣ ಕ್ರಿಯೆಗಳನ್ನು ನಡೆಸಿ ಸಾಗಿ ಹರಿಯುತ್ತದೆ. ಓಂಕಾರನಾಥನ ಭಜನೆಗಳ ಭಕ್ತಿರಸ, ಚಿತ್ರಪುರದ ನರ್ಮದಾತೀರದ ಸುಂದರ ಕಾನನಗಳ ಮಧ್ಯೆ ರಹಸ್ಯವಾಗಿ ಶಿವಾಲಯದಲ್ಲಿ ಬೆಳೆಯುವ ಮೋಹನ್ ಲಾಲನ ಅನುಪಮ ಸಂಗೀತ ಪ್ರತಿಭೆ, ಚುನ್ನಿಯ ಮಧುರ ಶೃಂಗಾರ, ಜವಹರ್ ಬಾಯಿಯ ಮುದ್ದಾದ ವಿಷ್ಕಂಭಕ, ರಾಂ ಕುಮಾರಿಯ ಯಾವ ಕಷ್ಟ ಬಂದರೂ ಎದುರಿಸುವ ಗ್ರಾಮೀಣ ಘಟ್ಟಿತನ, ಸಾಂಸಾರಿಕ ನೈತಿಕಬಲ ಮತ್ತು ಹಠ, ಚಂಪಾಳ ಕತ್ತು ಹಿಸುಕುವ ಬಿಗಿಮುಷ್ಠಿಯ ವರ್ತಕ ಮನೋಭಾವ ಮತ್ತು ಮನೋಹರಿಯ ಲೌಕಿಕ, ನಿರರ್ಗಳ ಕಾಮುಕತೆ, ಮಧುಮಿತಳ ಜೀವನದಲ್ಲಿ ನಡೆದ ಕಲಾಕರ್ಷಣೆ ನೈತಿಕತೆಯ ಘರ್ಷಣೆಗಳ ವಿಷಾದ, ಮೋಹನ್ ಲಾಲನ ಜಿಗುಪ್ಸೆ ತರುವ ಅತಿಕಾಮುಕತೆ, ಅವನತಿ, ಮತ್ತು ಮಧುಮಿತಳ ಸ್ವಾವಲಂಬನ–ಸ್ವಾಧ್ಯಾಯಗಳ ಏಳ್ಗೆಯಿಂದ ಶಾಂತರಸದಲ್ಲಿ ಸಮಾಪ್ತಿಗೊಳ್ಳುತ್ತದೆ.

ಇಷ್ಟು ಜನ ಹೆಂಗಸರೊಡನೆ ಅನೈತಿಕ ಕಾಮಸಂಬಂಧಗಳ ಈ ದೊಡ್ಡ ಕತೆ ಯಾಕೆ ಬರೆದರು, ಅದನ್ನು ನಾವು ಯಾಕೆ ಓದಬೇಕು ಎಂದು ಕೆಲವರು ನನ್ನನ್ನು ಕೇಳಿದ್ದಾರೆ. ಈ ಪ್ರಶ್ನೆಗೆ ನನ್ನ ಉತ್ತರವಿಷ್ಟೆ. ಮಂದ್ರ ಮುಖ್ಯತಃ ಮೋಹನ್ ಲಾಲನಂತಹ ಪರಮೋತ್ತಮ ಶ್ರೇಣಿಯ ಸಂಗೀತಗಾರನೊಬ್ಬನ ಜೀವನ ಮತ್ತು ಅಂತಹವರ ಕಲೆ ಹೇಗೆ ಬೆಳೆಯುತ್ತದೆ ಎಂಬುದರ ಕತೆ. ಅದು ಏಳು ದಶಕದ ಅವಧಿಯ ಕತೆ. ಈ

ಕತೆಯಲ್ಲಿ ಸಂಗೀತ ಕಲೆ ಪ್ರಥಮ ಮುಖ್ಯ ವಸ್ತು. ಅದನ್ನು ಭೈರಪ್ಪನವರು ಬಹಳ ಸಮರ್ಥವಾಗಿ, ಸುಂದರವಾಗಿ, ಹಿಂದೆ ಬೇರಾವ ಕನ್ನಡ ಕಾದಂಬರಿಯಲ್ಲೂ ಕಾಣದಂತಹ ರೀತಿಯಲ್ಲಿ ಚಿತ್ರಿಸಿದ್ದಾರೆ. ಈ ಮುಖ್ಯ ಕತೆಯ ಹೆಮ್ಮರದ ಸುತ್ತ ಆ ಕಲೆಯ ಮಾಲೀಕನ ವಿವೇಕರಹಿತ ವ್ಯಭಿಚಾರ ಪ್ರಸಂಗಗಳು ಮುಳ್ಳುಬಳ್ಳಿಗಳಂತೆ ಸುತ್ತಿಕೊಂಡಿವೆ. ಅವಕ್ಕೂ ಪ್ರಮುಖ ಸ್ಥಾನವಿದ್ದೇ ಇದೆ. ಅದರ ಕತೆಯನ್ನು ಹೇಳದಿದ್ದರೆ ಸಂಗೀತದ ಕತೆಯನ್ನು ಹೇಳಲಿಕ್ಕಾಗುವುದಿಲ್ಲ ಎಂದು. ನನಗೆ ಈ ಕತೆಯಲ್ಲಿ ಸಿಕ್ಕಿದ್ದು ಭಗವಾನ್ ಬುದ್ಧದೇವನ ಬೋಧೆಯ ನಾಲ್ಕು ಆರ್ಯಸತ್ಯದ 'ದುರ್ವಾರ ದುಃಖಬಹುಲೋ ನನು ಜೀವಲೋಕಃ' ಎಂಬ ಪ್ರಥಮಪಾಠದ ಅತಿಕಲಾಪೂರ್ಣ ನಿರೂಪಣೆ. ಪ್ರಿಯವಿಯೋಗ, ಅಪ್ರಿಯ ಸಂಯೋಗ, ಜರಾದುಃಖ, ರಾಗ, ಕ್ರೋಧ, ಲೋಭ, ಮಾತ್ಸರ್ಯ- ಮಾನವ ಜೀವನದ ಎಲ್ಲ ದೌರ್ಬಲ್ಯ ಬಂಧನಗಳ ಅನುಪಮ ಉದಾಹರಣೆಗಳನ್ನು ಈ ಕತೆಯಲ್ಲಿ ನಾವು ಕಾಣುತ್ತೇವೆ. ಈ ನಿರೂಪಣೆಯಲ್ಲಿ ಕಥನಸೌಂದರ್ಯ ಮತ್ತು ಋಜುವಾಸ್ತವತೆಗಳು ಜೊತೆಜೊತೆಯಾಗಿ ನಿಂತಿವೆ. ಓದುವುದಕ್ಕೆ ತುಂಬಾ ಕಾಲ ಹಿಡಿದರೂ ಅದರಿಂದ ಸಿಗುವ ಆನಂದ ಮತ್ತು ಬೋಧೆ ಅನರ್ಘ್ಯವಾದುದು. ಇದನ್ನು ಓದಿದ ಮೇಲೆ ಇದರಲ್ಲಿ ಬರುವ ಎಲ್ಲ ಪಾತ್ರಗಳ ಮೇಲೂ, ಮೋಹನ್ ಲಾಲನ ಮೇಲೂ ಸಹ, ನನಗೆ ಸಾನುಕ್ರೋಶಾನು ಕಂಪಗಳುಂಟಾದವು. ಭೈರಪ್ಪನವರ ಮಂದ್ರ ಎಲ್ಲರೂ ಓದಬೇಕಾದ ಅದ್ಭುತ ಕಾದಂಬರಿಯೇ ಸರಿ.

**ಕೃತಿ ವಿವರ :** ಮಂದ್ರ, ಎಸ್.ಎಲ್. ಭೈರಪ್ಪ, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೨ (೫ನೇ ಮುದ್ರಣ ೨೦೦೮), ಪು. ೫೯೬

# ನೆನಪುಗಳ ದರ್ಪಣಲೋಕ: 'ಮತ್ತೊಬ್ಬನ ಆತ್ಮಚರಿತ್ರೆ'

–ಡಾ. ಟಿ. ಎನ್. ಕೃಷ್ಣರಾಜು, ರಾಕ್‌ವಿಲ್, ಮೇರಿಲ್ಯಾಂಡ್

'ಇದು ಏನು ಅಂದರೆ, ಕತೆಯಲ್ಲ, ಕಾದಂಬರಿ. ...ಇದು, ಅದೂ ಹೌದು, ಇದೂ ಹೌದು ಎಂಬಂತೆ ಕಾಣಿಸುತ್ತದೆ. ತೀರ ಹತ್ತಿರದಿಂದ ದಿಟ್ಟಿಸಿದಾಗ, ಅದೂ ಅಲ್ಲ, ಇದೂ ಅಲ್ಲ, ಎಂದು ಅನಿಸಿದರೂ ಅನಿಸುತ್ತದೆ...' ಜಿ. ಬಿ. ಜೋಶಿ, 'ಮತ್ತೊಬ್ಬನ ಆತ್ಮಚರಿತ್ರೆ' ಮುನ್ನುಡಿಯಲ್ಲಿ.

೧

ಪಾಸ್‌ಪೋರ್ಟ್‌ನಲ್ಲಿ ಅವರು ಅತ್ತಿಪತ ಕೃಷ್ಣಸ್ವಾಮಿ ರಾಮಾನುಜನ್. ಮನೆಯವರಿಗೆ ರಾಮು. ಕನ್ನಡ ಸಾಹಿತ್ಯಲೋಕಕ್ಕೆ, ನನ್ನಂತಹ ಮಿತ್ರರಿಗೆ ರಾಮಾನುಜನ್. ಪಾಶ್ಚಾತ್ಯದೇಶದ ಗುರುತಿನವರಿಗೆ ರಾಮನ್. ಹುಟ್ಟಿ ಬೆಳೆದದ್ದು ಮೈಸೂರು. ಕಲಿತು ಪಾಠ ಹೇಳಿದ್ದು ಮತ್ತು ಜೀವನ ನಡೆಸಿದ್ದು, ಕರ್ನಾಟಕ, ಪುಣೆ, ಚಿಕಾಗೋ, ಮಿನೆಸೋಟ, ಮಿಚಿಗನ್, ಲಂಡನ್ ಮತ್ತು ಆಕ್ಸ್‌ಫರ್ಡ್. ಅಡುಗೆಮನೆಯಲ್ಲಿ ಮಾತನಾಡಿದ ಭಾಷೆ ತಮಿಳು. ಮಹಡಿಯಮೇಲೆ, ಅಪ್ಪನೊಡನೆ ಇಂಗ್ಲಿಷು. ಹೊರಗಡೆ ಕನ್ನಡ. ಬರಹ, ಕನ್ನಡ, ತಮಿಳು ಮತ್ತು ಇಂಗ್ಲೀಷು ಭಾಷೆಗಳಲ್ಲಿ. ಸಾಹಿತ್ಯಲೋಕಕ್ಕೆ ಇವರ ಕೊಡುಗೆ, ಉದ್ದಾಮ ಪಾಂಡಿತ್ಯದ, ಪ್ರೋಲಿಫ್ಲಿಕ್ ಸಾಹಿತ್ಯ ಮತ್ತು ವಿಚಾರ ಭಂಡಾರ. ಇಂತಹ ಬಹುಮುಖ ಪ್ರತಿಭೆಯ, ಸರಿಸಾಟಿ ಇಲ್ಲದ ಎ. ಕೆ. ರಾಮಾನುಜನ್ ಇಡೀ ವಿಶ್ವಸಾಹಿತ್ಯ ಲೋಕಕ್ಕೆ ಭಾರತದ ಅಮೂಲ್ಯ ಉಡುಗೊರೆ.

ಇಂದು ದಕ್ಷಿಣ ಭಾರತದ ಪುರಾತನ ಮತ್ತು ಮಧ್ಯಯುಗದ ಸಾಹಿತ್ಯಗಳ ಬಗ್ಗೆ ಪ್ರಪಂಚದ ಸಾಹಿತ್ಯ ಚರಿತ್ರೆಯಲ್ಲಿ ಮಾಹಿತಿಯಿರಲು ಮುಖ್ಯ ಕಾರಣ, ಎ. ಕೆ. ರಾಮಾನುಜನ್ ಮತ್ತು ಅವರ ಬರಹಗಳು. ಅವರ ಅನೇಕ ಪುಸ್ತಕಗಳನ್ನು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನವರು ಹೊರತಂದರು. ಅವುಗಳಲ್ಲಿ ಮುಖ್ಯವಾದವು: ಪುರಾತನ ತಮಿಳಿನಿಂದ ಅನುವಾದಿಸಿದ 'ದಿ ಇಂಟೀರಿಯರ್ ಲ್ಯಾನ್ಡ್‌ಸ್ಕೇಪ್' (೧೯೬೭), 'ಹಿಂಸ್

ಫಾರ್ ದಿ ಡ್ರೌನಿಂಗ್' (೧೯೮೧) ಮತ್ತು 'ಪೋಯಿಂಸ್ ಆಫ್ ಲವ್ ಎಂಡ್ ವಾರ್' (೧೯೮೫); ಕನ್ನಡ ಶರಣ ಸಾಹಿತ್ಯದಿಂದ ಅನುವಾದಿಸಿದ 'ಸ್ಪೀಕಿಂಗ್ ಆಫ್ ಶಿವ' (೧೯೭೩); ಭಾರತದ ಇಪ್ಪತ್ತೆರಡು ಭಾಷೆಗಳಿಂದ ಸಂಪಾದಿಸಿದ ಜಾನಪದ ಕತೆಗಳ ಸಂಗ್ರಹ, 'ಫೋಕ್‌ಟೇಲ್ಸ್ ಫ್ರಂ ಇಂಡಿಯ' (೧೯೯೧); ಮತ್ತು ಯು. ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯ ಇಂಗ್ಲಿಷು ಅನುವಾದ 'ಸಂಸ್ಕಾರ: ಎ ರೈಟ್ ಫಾರ್ ಎ ಡೆಡ್ ಮ್ಯಾನ್' (೧೯೭೬).

ಇದಲ್ಲದೇ, ೧೯೯೩ರಲ್ಲಿ ರಾಮಾನುಜನ್ ತೀರಿಕೊಂಡ ಮೇಲೆ, ಅವರ ಹಲವಾರು ಸ್ನೇಹಿತರು ಮತ್ತು ಸಾಹಿತ್ಯ ಪ್ರೇಮಿಗಳು ಸಂಪಾದಿಸಿ ಪ್ರಕಟಿಸಿದ ಸಂಗ್ರಹ ಗ್ರಂಥಗಳು: 'ದಿ ಫ್ಲವರಿಂಗ್ ಟ್ರೀ ಎಂಡ್ ಅದರ್ ಓರಲ್ ಟೇಲ್ಸ್ ಫ್ರಂ ಇಂಡಿಯ' (೧೯೯೭); ಮತ್ತು 'ಕಲೆಕ್ಟೆಡ್ ಎಸ್ಸೇಸ್' (೧೯೯೯).

ಎ. ಕೆ. ರಾಮಾನುಜನ್‌ರ ವಿಶ್ವಖ್ಯಾತಿ ಅವರ ಅನುವಾದ ಸಾಹಿತ್ಯದಿಂದ. ಆದರೆ, ಅವರು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಅತ್ಯುತ್ತಮ ಕ್ರಿಯಾತ್ಮಕ ರಚನೆಗಳನ್ನು ಕೊಟ್ಟಿದ್ದಾರೆ ಅಂತ ಬಹಳ ಜನರಿಗೆ ತಿಳಿಯದು. ಅವರು ಇಂಗ್ಲಿಷಿನಲ್ಲಿ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸಿದರು: 'ದಿ ಸ್ಟ್ರೈಡರ್' (೧೯೬೬); 'ರಿಲೇಷನ್ಸ್' (೧೯೭೧); 'ಸೆಲೆಕ್ಟೆಡ್ ಪೋಯಂಸ್' (೧೯೭೬); ಮತ್ತು, 'ಸೆಕೆಂಡ್ ಸೈಟ್' (೧೯೮೬). ಮರಣೋತ್ತರ ಪ್ರಕಟಿತವಾದ ಸಂಗ್ರಹಿತ ಗ್ರಂಥಗಳು: 'ಕಲೆಕ್ಟೆಡ್ ಪೋಯಂಸ್' (೧೯೯೫); 'ಅನ್‌ಕಲೆಕ್ಟೆಡ್ ಪೋಯಂಸ್ ಎಂಡ್ ಪ್ರೋಸ್' (೨೦೦೦); ಮತ್ತು 'ದಿ ಆಕ್ಸ್‌ಫರ್ಡ್ ಇಂಡಿಯ ರಾಮಾನುಜನ್' (೨೦೦೪).

ರಾಮಾನುಜನ್ ಇಂಗ್ಲಿಷ್‌ನಲ್ಲಿ ಬರೆದ ಸಾಹಿತ್ಯ ವ್ಯಾಪ್ತಿಗೆ ಹೋಲಿಸಿದರೆ, ಅವರು ಕನ್ನಡದಲ್ಲಿ ಬರೆದದ್ದು ಕಡಿಮೆ: ಒಂದು ಕಿರು ಪ್ರಬಂಧದ ಪುಸ್ತಕ ('ಗಾದೆಗಳು,' ೧೯೫೫); ಒಂದು ಇಂಗ್ಲಿಷು ಕಾದಂಬರಿಯ ಅನುವಾದ ('ಹಳದಿ ಮೀನು,' ಮಾಲಿ-ರಾಮಾನುಜನ್, ೧೯೬೬), ಮೂರು ಕವನ ಸಂಕಲನಗಳು ('ಹೊಕ್ಕುಳಲ್ಲಿ ಹೂವಿಲ್ಲ' ೧೯೬೯; 'ಮತ್ತು ಇತರ ಪದ್ಯಗಳು' ೧೯೭೭; 'ಕುಂಟೋಬಿಲ್ಲೆ' ೧೯೯೦), ಎರಡು ರೇಡಿಯೋ ನಾಟಕಗಳು, ನಾಲ್ಕಾರು ಸಣ್ಣಕತೆಗಳು (ಅವುಗಳಲ್ಲಿ ಅದ್ಭುತವಾದುದು 'ಅಣ್ಣಯ್ಯನ ಮಾನವ ಶಾಸ್ತ್ರ' ಎಂಬ ಕತೆ) ಹಾಗೂ ಒಂದು ಕಿರು ಕಾದಂಬರಿ ('ಮತ್ತೊಬ್ಬನ ಆತ್ಮಚರಿತ್ರೆ' ೧೯೭೭).

ಸಂಖ್ಯೆಯಲ್ಲಿ ಕಡಿಮೆಯಾದರೂ, ಕನ್ನಡ ಸಾಹಿತ್ಯರಂಗದ ಮೇಲೆ ರಾಮನುಜನ್‌ರ ಬರಹಗಳ ಪ್ರಭಾವ ಮಹತ್ತರ. ಅವರ ಭಾಷೆ ಕೊಪ್ಪರಿಗೆಯಲ್ಲಿ ಕುದಿಯುವ ಎಣ್ಣೆಯಂತೆ ಸಿಮರುವುದಿಲ್ಲ. ಅದು ರಕ್ತದ ಹಾಗೆ, ಉಗುರು ಬೆಚ್ಚಗಿನಷ್ಟೇ ಬಿಸಿ. ಕಾಫ್ಕಾ, ಕಾಮು

ಮುಂತಾದವರ ಬರಹಗಳನ್ನು ನೆನಪಿಗೆ ತರುವ, ಉದ್ವೇಗರಹಿತ ಆಡು ಭಾಷೆ, ಮಾಮೂಲಿ ಅನ್ನಿಸಿ ಮೋಸ ಮಾಡುತ್ತದೆ. ಒಮ್ಮೆ ಓದಿದರೆ ಮರೆಯಲಾಗದಂತಹಾ ಬೆರಗು ತರಿಸುವ ಮೋಡಿಲೋಕವನ್ನೇ ಸೃಷ್ಟಿಸಿಬಿಡುತ್ತಾರೆ. ಹೀಗೆ ಬರೆಯುವ ಸಾಧ್ಯತೆ ರಾಮಾನುಜನ್‌ರ ಮೊದಲು ಕನ್ನಡ ಕಾವ್ಯದಲ್ಲಿ ಇದ್ದದ್ದು ಕಡಿಮೆ. ಹಾಗಾಗಿ, ರಾಮಾನುಜನ್‌ರ ಕಾವ್ಯ ಪದ್ಧತಿ ಆಧುನಿಕ ಕನ್ನಡದಲ್ಲಿ ಹೊಸ ಕಾವ್ಯ ಸಂಪ್ರದಾಯಕ್ಕೆ ನಾಂದಿಯಾಯಿತು.

ನನ್ನ ಮಟ್ಟಿಗೆ, 'ಮತ್ತೊಬ್ಬನ ಆತ್ಮಚರಿತ್ರೆ' ಒಂದು ಅನನ್ಯ ಮಣಿರತ್ನ. ವಿಷಾದವೆಂದರೆ, ಕನ್ನಡ ಸಾಹಿತ್ಯಲೋಕದಲ್ಲಿ ಈ ಕಿರು ಕಾದಂಬರಿಯ ಬಗ್ಗೆ ಆಳವಾದ ವಿಮರ್ಶೆ ಮತ್ತು ಚರ್ಚೆಗಳು ಬರಲಿಲ್ಲ. ಮನೋಹರ ಗ್ರಂಥ ಮಾಲೆ ಪ್ರಕಟಿಸಿದ ಈ ಕಾದಂಬರಿ ಈಗ 'ಔಟ್ ಆಫ್ ಪ್ರಿಂಟ್' ಆಗಿ ಅದು ಸುಲಭವಾಗಿ ಸಿಗುವುದೂ ಇಲ್ಲ.

೨

'ಮತ್ತೊಬ್ಬನ ಆತ್ಮಚರಿತ್ರೆ' ಶೀರ್ಷಿಕೆಯೇ ಕುತೂಹಲವನ್ನು ಕೆದರಿಸುತ್ತದೆ. ಇದು ಕಾದಂಬರಿಯೆ? ಆತ್ಮಚರಿತ್ರೆಯೆ? ರಾಮಾನುಜನ್‌ರ ಆತ್ಮಚರಿತ್ರೆಯಾದರೆ, ಅದು 'ಮತ್ತೊಬ್ಬನದ್ದು' ಹೇಗಾಯಿತು? ಮತ್ತೊಬ್ಬನ 'ಆತ್ಮ' ಚರಿತ್ರೆಯನ್ನು ರಾಮಾನುಜನ್ ಹೇಗೆ ಬರೆದರು? ಓದುತ್ತಾ ಹೋದಂತೆ, ಇದು ಮತ್ಯಾರದ್ದೋ ಆತ್ಮಚರಿತ್ರೆ ಅಲ್ಲ, ನಮ್ಮ ನಿಮ್ಮ 'ಆತ್ಮ' ಚರಿತ್ರೆಯೂ ಹೌದು ಎನಿಸುತ್ತದೆ. ಉಬ್ಬು ತಗ್ಗಿನ (ಕಾನ್ಕೇವ್, ಕಾನ್ವೆಕ್ಸ್) ಕನ್ನಡಿಗಳ ಮುಂದೆ ನಿಂತು ನೋಡಿದಾಗ ಕೊನೆಯಿಲ್ಲದ ಕ್ಷಿತಿಜದವರೆಗೂ ತೋರುವ ನಮ್ಮದೇ ಪ್ರತಿಬಿಂಬಗಳ ವಿಕಟ ರೂಪವನ್ನು ನೋಡುವ ಅಸಂಗತ ಅನುಭವದಂತೆ, ಈ ಕಾದಂಬರಿಯನ್ನು ಓದುವಾಗ ಇದು ಯಾರ ಕತೆ ಎನ್ನುವುದನ್ನು ಮರೆತು, ಇದರಲ್ಲಿ ನಮ್ಮನ್ನು ನಾವೇ ಹುಡುಕತೊಡಗುತ್ತೇವೆ.

ನಾನು ಎಂದರೆ ಯಾರು? ಮತ್ತೊಬ್ಬನಲ್ಲಿಯೂ ನಾನಿದ್ದರೆ, ನನ್ನಲ್ಲಿಯೂ ಮತ್ತೊಬ್ಬನಿಲ್ಲವೆ? ನಮ್ಮ ಹಿಂದೆ ನೆರಳಿನಂತೆ ಹಿಂಬಾಲಿಸುವ ಈ ಮತ್ತೊಬ್ಬನ ಬಂಧನದಿಂದ ಪಾರಾಗುವುದು ಸಾಧ್ಯವೆ? ಹೀಗೆ, ಸ್ವಂತ ಮತ್ತು ಸ್ವಂತದ ಅವಳಿ-ಜವಳಿಯಾದ ಮತ್ತೊಂದು ಐಡೆಂಟಿಟಿಗಳ ಘರ್ಷಣೆ, ದ್ವಂದ್ವ, ಜಿಜ್ಞಾಸೆ ಕಾದಂಬರಿಯ ಜೀವಬಿಂದು.

ಕತೆಯ ನಾಯಕ ಕೆ. ಕೆ. ರಾಮಾನುಜನ್. ಈತ ಅಮೆರಿಕಾದಲ್ಲಿ, ಸದ್ಯಕ್ಕೆ ಅಯೋವಾದ ಒಂದು ಸಣ್ಣ ಕಾಲೇಜಿನಲ್ಲಿ ಚರಿತ್ರೆಯ ಪ್ರಾಧ್ಯಾಪಕ. ಇಪ್ಪತ್ತು ವರ್ಷಗಳ ಹಿಂದೆ ಇವನು ಅಪ್ಪನೊಟ್ಟಿಗೆ ಮದರಾಸಿಗೆ ಹೋದ ಮೂರು ನಾಲ್ಕು ದಿನಗಳ ಕಥನ ಈ ಕಾದಂಬರಿಯ ಹೊರ ಆವರಣ. ಮದರಾಸಿನಲ್ಲಿ ಮರಣ ಶಯ್ಯೆಯಲ್ಲಿ ಮಲಗಿದ್ದ

ಚಿಕ್ಕಪ್ಪನನ್ನು ನೋಡಲು ಇವರಿಬ್ಬರೂ ಹೋಗಿಬರುತ್ತಾರೆ. ಆ ದಿನಗಳ ನೆನಪುಗಳು ಈಗ, ಹತ್ತು ಸಾವಿರ ಮೈಲಿ ದೂರದ ಪರಕೀಯ ಪರಿಸರದಲ್ಲಿ ಮರುಕಳಿಸುತ್ತವೆ. ಈ 'ನೆನಪಿನ ದೆವ್ವಗಳನ್ನು' ಬಿಡಿಸಬೇಕಾದರೆ ಬರೆಯಬೇಕು ಎಂದುಕೊಳ್ಳುತ್ತಾನೆ. ಚರಿತ್ರೆಯ ಪ್ರಾಧ್ಯಾಪಕನಾದ ತನಗೆ 'ಇಂಥಾದ್ದೆಲ್ಲಾ ಬರೆದು ಅಭ್ಯಾಸವಿಲ್ಲ, ಅದೂ ಕನ್ನಡದಲ್ಲಿ' ಎಂಬ ಹಿಂಜರಿಕೆ ಬೇರೆ.

ಆಗ ಅವನಿಗೆ ಚಿಕಾಗೋದ ಒಂದು ಪುಸ್ತಕದಂಗಡಿಯಲ್ಲಿ ಮತ್ತೊಬ್ಬ ಕನ್ನಡಿಗನ ಆಕಸ್ಮಿಕ ಭೇಟಿಯಾಗುತ್ತದೆ. ಆ ಮತ್ತೊಬ್ಬ, ಕಾಲೇಜಿನಲ್ಲಿ ಕನ್ನಡ, ತಮಿಳು ಹೇಳಿಕೊಡುವ ಒಬ್ಬ 'ಮೈನರ್' ಕವಿ. ಆತನ ಹೆಸರೂ 'ರಾಮಾನುಜನ್' ಆದರೆ ಅದು 'ಎ.ಕೆ. ರಾಮಾನುಜನ್.' ತನಗೂ ಈ ಪರಕೀಯನಿಗೂ ಇರುವ ವ್ಯತ್ಯಾಸ ಒಂದು ಇನಿಷಿಯಲ್ ಮಾತ್ರ ಎಂದು ಇವನಿಗೆ ಮುಜಗರ. ಹೀಗೆ, ಆರಂಭದಲ್ಲೇ ಕಥಾನಾಯಕ ಮತ್ತು ಕತೆಗಾರ, ಅವಳಿ-ಜವಳಿ ಸಹೋದರರಂತೆ, ಪ್ರತಿಬಿಂಬಗಳಂತೆ ನಮ್ಮೆದುರಿಗೆ ಪ್ರತ್ಯಕ್ಷರಾಗಿ ಕಾದಂಬರಿಯುದ್ದಕ್ಕೂ ವ್ಯಕ್ತವಾಗುತ್ತಾರೆ.

ಕವಿ ಎ.ಕೆ.ರಾ 'ಕನ್ನಡದಲ್ಲಿ ಏನಾದರೂ ಬರೆಯಿರಿ' ಎಂದು ಕೆ.ಕೆ.ರಾನನ್ನು ಪ್ರೋತ್ಸಾಹಿಸುತ್ತಾನೆ. ಆಗ ಕೆ.ಕೆ.ರಾ 'ನನಗೂ ಬರೀಬೇಕು ಬರೀಬೇಕು ಅನ್ನಿಸುತ್ತೆ, ಕಾರಣ ಸಿಕ್ಕಿರಲಿಲ್ಲ. ಆತ್ಮಕತೆ ಒಂದೇ ನನಗೆ ಗೊತ್ತಿರುವ ಕತೆ,' ಎಂದಾಗ, ಎ.ಕೆ.ರಾ, 'ಎಲ್ಲರಿಗೂ ಇರೋ ಕತೆ ಅದೊಂದೇ. ಕೆಲವರು ಅದನ್ನು ಕತೆ ಎಂದು ಬರೀತಾರೆ, ಕೆಲವರು ಆತ್ಮಕತೆ ಅಂತಾರೆ. ಅಷ್ಟೆ. ನೀವು ಚರಿತ್ರೆ ಓದಿದವರು, ಹೇಳಿಕೊಡಬೇಕೆ. ಮುಖ ಮೂತಿ ನೋಡದೆ ಬರೆದುಬಿಡಿ' ಎಂದು ಉತ್ಸಾಹಿಸುತ್ತಾರೆ. ಬರೆದು ಕಳಿಸಿದರೆ ತಿದ್ದಿಕೊಡುತ್ತೀರಾ ಎಂದು ಕೆ.ಕೆ.ರಾ ಕೇಳಲು, 'ಓ, ಖಂಡಿತ. ತಿದ್ದೋದೇನಿದೆ? ಆನೆ ಹೋದದ್ದೇ ದಾರಿ, ಕನ್ನಡಿಗ ಬರೆದದ್ದೇ ಕನ್ನಡ, ಅಲ್ಲವೆ?' ಎಂಬ ಚುಟುಕ ಬಿಟ್ಟು ಹುರಿದುಂಬಿಸುತ್ತಾನೆ.

ಹೀಗೆ ಶುರುವಾಗುವ ಕತೆಗಾರ ಮತ್ತು ಕಥಾನಾಯಕನ ಒಪ್ಪಂದ ಕಾದಂಬರಿಯ ಬೆನ್ನೆಲುಬು. ತನ್ನ ಹೆಸರಿನ ಮತ್ತೊಬ್ಬನನ್ನು ಕಂಡು ಕೆ.ಕೆ.ರಾ ಕಸಿವಿಸಿಗೊಂಡರೂ, ಎ.ಕೆ.ರಾನ ಪ್ರೋತ್ಸಾಹದಿಂದ ಆತ್ಮಚರಿತ್ರೆಯನ್ನು ಪುಟಗಟ್ಟಲೆ ಬರೆದು, ತಿದ್ದಲು ಕವಿ ಎ.ಕೆ.ರಾಗೆ ಕಳುಹಿಸುತ್ತಾನೆ. ಕಥಾನಾಯಕನ 'ಆತ್ಮ' ಚರಿತ್ರೆಯನ್ನು ಸೂತ್ರಧಾರ ಕವಿ ಟೀಕೆ ವಿವರಣೆಗಳ ಮೂಲಕ 'ತಿದ್ದಿ' ತನ್ನದೇ ಪದ್ಯ, ಚುಟುಕು ಟಿಪ್ಪಣಿಗಳನ್ನೂ ಸೇರಿಸಿ ಉತ್ತರಿಸುತ್ತಾನೆ.

ಕಾದಂಬರಿಯ ಉದ್ದಕ್ಕೂ, ಕೆ.ಕೆ.ರಾ ಮತ್ತು ಎ.ಕೆ.ರಾ ಪತ್ರಗಳ ಮೂಲಕ, ಆತ್ಮೀಯ ಮಿತ್ರರಂತೆ, ಒಬ್ಬರನ್ನೊಬ್ಬರು ಚುಡಾಯಿಸಿ, ಪ್ರೀತಿಯಿಂದ ತೀಡುತ್ತಾರೆ.

ಕತೆಗಾರ ಮತ್ತು ಕಥಾನಾಯಕರ ನಡುವಿನ ಈ ಚಕಮಕಿ, ಎಕ್ಸ್‌ಛೇಂಜ್, ಬರೇ ಹಾಸ್ಯಕ್ಕಾಗಿ ಅಲ್ಲ ಎಂದು ನಮಗೆ ತಕ್ಷಣ ತಿಳಿಯುತ್ತದೆ. ನಾಯಕ ಮತ್ತು ಬರಹಗಾರ ಒಂದೇ ಆಗಿಬಿಟ್ಟರು ಎನಿಸುವ ಮರು ಕ್ಷಣಕ್ಕೇ, ಇವರಿಬ್ಬರೂ ಬೇರೆ ಬೇರೆ ಎಂಬ ಅನಿಸಿಕೆಯೂ ಜತೆಜತೆಗೇ ಬರುತ್ತದೆ. ಸಂಸ್ಕೃತ ನಾಟಕಗಳಲ್ಲಿ ನಾಟಕಕರ್ತ ಸೂತ್ರಧಾರನೂ ಆಗಿ, ನಂತರ ನಾಟಕದ ಮುಖ್ಯ ಪಾತ್ರವನ್ನೂ ವಹಿಸಿ ನಟಿಸುವ ಹಾಗೆ.

ತಮ್ಮ ಭಾಷೆಯ ಧೋರಣೆಯ ಬಗ್ಗೆ, ಕಾದಂಬರಿಯ ಮೊದಲಲ್ಲೇ ಎ.ಕೆ.ರಾ. ಕೆ.ಕೆ.ರಾನಿಗೆ ಹೇಳುವ ಬುದ್ಧಿಮಾತನ್ನು ನೋಡಿ: '[ನಿಮ್ಮಂಥವರೇ] ಬರೀಬೇಕು. ಸಾಹಿತಿ ಸಾಹಿತಿ ಅಂದುಕೊಂಡು ತುಂಬ ಕೃತಕವಾಗಿ ಬರೀತಾರೆ. ನೋಡಿ, ಪದ್ಯ ಪದ್ಯ ಇದ್ದ ಹಾಗಿರಬಾರದು, ನಾಟಕ ನಾಟಕೀಯವಾಗಬಾರದು. ಬರೀತ ಬರೀತ ಕನ್ನಡ ಕುದುರುತ್ತೆ, ಬರೆದುಬಿಡಿ.' (ಪುಟ ೪–೫). ಕಾದಂಬರಿಯುದ್ದಕ್ಕೂ, ನಮಗೆ ತಿಳಿದ ಎ.ಕೆ. ರಾಮಾನುಜನ್ ಕಾದಂಬರಿಯ ಎ.ಕೆ.ರಾ ಕಥಾನಾಯಕ ಕೆ.ಕೆ.ರಾನಿಗೆ ಕೊಡುವ ಬುದ್ಧಿವಾದವನ್ನು ಬಹಳ ಚೆನ್ನಾಗಿ ಪರಿಪಾಲಿಸಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

ಕೆ.ಕೆ.ರಾ ಮತ್ತು ಅವನ ತಂದೆ, ಮರಣ ಶಯ್ಯೆಯಲ್ಲಿ ನರಳುತ್ತಿದ್ದ ಅತ್ತಿಂಬೇರು ಮಾವನನ್ನು (ಅಂದರೆ, ಕೆ.ಕೆ.ರಾನ ತಂದೆಯ ತಂಗಿಯ ಗಂಡನನ್ನು) ನೋಡಲು ಮದರಾಸಿನ ಜಾರ್ಜ್‌ಟೌನ್‌ಗೆ ಹೊಗುತ್ತಾರೆ. ಆ ಮೂರುದಿನಗಳ ಅನುಭವಗಳನ್ನು ಹದಿನೇಳು ವರ್ಷದ ಕೆ.ಕೆ.ರಾ ತನ್ನ ಕ್ಯಾಮರಾ ಕಣ್ಣುಗಳಿಂದ ಸೆರೆಹಿಡಿಯುತ್ತಾನೆ. ಅವನು ಮೈಸೂರು ಬಿಟ್ಟು ದೂರದೂರಿಗೆ ಹೋದದ್ದು ಅದೇ ಮೊದಲು. ಅಪ್ಪನೊಂದಿಗೆ ಹೋದದ್ದು ಅದೇ ಕಡೆಯೂ ಆಗುತ್ತದೆ. ಆ ಪ್ರಯಾಣದ ಕಡೆಯ ದಿನ ಅವನಿಗೆ ತನ್ನ ಅಪ್ಪನ ಜೀವನದ ನಿಲುವು ಅರಿವಾಗುವ ರೀತಿ ಓದುಗರನ್ನು ಸೆರೆ ಹಿಡಿಯುತ್ತದೆ.

ಮದರಾಸಿನಲ್ಲಿ ಅಪ್ಪ–ಮಗ ಪುರಸವಾಕ್ಕಂನಲ್ಲಿದ್ದ ತಂದೆಯ ಅಣ್ಣನ ಮಗಳು ಅಮೃತಳ ಮನೆಯಲ್ಲಿ ಇಳಿದುಕೊಳ್ಳುತ್ತಾರೆ. ಒಂದುದಿನ ರಾಮು ಮತ್ತು ಅವನ ಅಪ್ಪ ಹೈಕೋರ್ಟಿಗೆ ಹೋಗಿ ಒಬ್ಬ ಲಾಯರ್‌ನ್ನು ನೋಡುತ್ತಾರೆ. ಅದು ಯಾಕೆಂದು ಬಾಲಕ ಕೆ.ಕೆ.ರಾಗೆ ಆಗ ಗೊತ್ತಾಗುವುದಿಲ್ಲ. ಒಡಹುಟ್ಟಿದವರ ಆಸ್ತಿಯ ಬಗ್ಗೆ ಜಗಳ ಅಂತ ಎಷ್ಟೋ ವರ್ಷಗಳ ನಂತರ ಅವನಿಗೆ ತಿಳಿಯುತ್ತದೆ. ಮತ್ತೊಂದು ರಾತ್ರಿ ಇವರು ತಿರುವೆಲ್ಲಿಕೇಣಿಯಲ್ಲಿ ಇವನ ಅಪ್ಪ ಹುಟ್ಟಿ ಬೆಳೆದ ಹಳೆಯ ಮನೆಗೆ ಊಟಕ್ಕೆ ಹೋಗುತ್ತಾರೆ. ಹಲವಾರು ರಕ್ತಸಂಬಂಧಿಗಳ ಬದುಕಿನ ಹಿನ್ನೆಲೆ, ಅವರ ಮಾತುಕತೆ ಮತ್ತು ಜೀವನ ಧೋರಣೆ ನಮಗೆ ಯುವಕ ಕೆ.ಕೆ.ರಾನ ಮೂಲಕ ತಿಳಿಯುತ್ತವೆ. ಆ ಸಂಸಾರ ಸಂಬಂಧಗಳು ತಂದಿಡುವ ತೊಡಕಿನ ಆಳ, ಕೊಡುವ ಪ್ರೀತಿಯ ಕಾವು ನಮ್ಮ ನಿಮ್ಮ ಬದುಕಿನ ಕಥನವೂ ಹೌದು ಎನ್ನಿಸುತ್ತದೆ.

ಈ ಹೊರವಲಯದ ಕತೆಯೊಳಗೆ ಅನೇಕ ಉಪಕತೆಗಳು ಸೇರಿವೆ. ಯಾರು ಯಾರಿಗೋ ಹೇಳಿದ ಕತೆಗಳನ್ನು ನಮಗೆ ಇನ್ಯಾರ ಮುಖಾಂತರವೋ ತಿಳಿಸುವ ರೀತಿ ಮಹಾಭಾರತದ ನಿರೂಪಣೆಯ ನೆನಪು ತರುತ್ತದೆ. ನಮ್ಮ ಮುಂದೆ ಕೆ.ಕೆ.ರಾ ಬಿಚ್ಚಿಡುವ ಲೋಕವಂತೂ ಅಪೂರ್ವ: ಮದರಾಸಿನ ರಿಕ್ಷಾ ಸವಾರಿ, ಮೈಸೂರಿನ ಟಾಂಗಾ, ಮಧುರೆಯಲ್ಲಿ ಬಸ್ಸಿಗೆ ಹತ್ತಿದ ಕುಷ್ಠರೋಗಿಯ ಪಾಡು, ವರ್ಜೀನಿಯಾದಲ್ಲಿ ಸಂಪೂರ್ಣ ನೆನಪನ್ನು ಕಳೆದುಕೊಂಡಿದ್ದ ಮುದುಕರೊಬ್ಬರು ಮುಗಿಸುತ್ತಿದ್ದ ಜಿಗ್ಸಾಪಜ಼ಲ್, ಚಿಕಾಗೋದಲ್ಲಿ ಹಿಂದಿ ಕವಿಯೊಬ್ಬನ ಪರಕೀಯ ಪ್ರಜ್ಞೆಯ ಅವಸ್ಥೆ, ಪುರಸುವಾಕ್ಕಂನ ಕಕ್ಕಸ್ಸು ಮತ್ತು ಝಾಡಮಾಲಿಗಳ ವಿವರಣೆ– ಇವೆಲ್ಲಾ ನಮಗೆ ಎಂದೆಂದಿಗೂ ಮರೆಯಲಾಗದ ದೃಶ್ಯಗಳು (ಇತ್ತೀಚೆಗೆ ನಾನು 'ಸ್ಲಂ ಡಾಗ್ ಮಿಲಿಯನೇರ್' ಸಿನಿಮಾ ನೋಡಿದೆ; ಅದರಲ್ಲಿ ಅಮಿತಾಬ್ ಬಚ್ಚನ್‌ನನ್ನು ನೋಡುವ ಆತುರದಲ್ಲಿ ಒಬ್ಬ ಹುಡುಗ ಲ್ಯಾಟ್ರಿನ್‌ಗೆ ಹಾರಿದ ದೃಶ್ಯ ನನಗೆ 'ಮತ್ತೊಬ್ಬನ ಆತ್ಮ ಚರಿತ್ರೆ'ಯಲ್ಲಿ ಬರುವ ಪುರಸವಾಕ್ಕಂ ಲ್ಯಾಟ್ರೀನ್ ನೆನಪು ತಂದಿತು!).

ಆ ಅನುಭವಗಳ ಕಥನದಲ್ಲಿ ಎಲ್ಲೂ ಅತಿರೇಕವಿಲ್ಲ. ಇವು ಸೆಂಟಿಮೆಂಟಲ್ ನಾಸ್ಟಾಲ್ಜಿಯ ಅಲ್ಲ. ಬಾಲ್ಯದಲ್ಲಿ ಘೋರ ಕಷ್ಟಗಳನ್ನು ಅನುಭವಿಸಿದ್ದ ಜಾರ್ಜ್‌ಟೌನ್‌ನ ಚಿಕ್ಕತ್ತೆಯ ನೋವು ನಮ್ಮನ್ನು ತಟ್ಟುತ್ತದೆ. ಆದರೆ, ಈಗ, ಅದೇ ಅತ್ತೆ ವಯಸ್ಸಾದ ವೃದ್ಧೆ. ಕತ್ತಲೆ ಕೋಣೆಯಲ್ಲಿ ಥಣ ಥಣಿಸುವ ಅವರ ಮುಖ ಮೂಗು ಕಿವಿ ಕುತ್ತಿಗೆಯಲ್ಲಿ ತುಂಬಿದ ಭಾರದ ವಜ್ರದ ಒಡವೆಗಳನ್ನೂ ಕೆ.ಕೆ.ರಾ ನೆನಪಿಸಿಕೊಳ್ಳುತ್ತಾನೆ. ಮದರಾಸಿನ ಉರಿಬಿಸಿಲಿನಲ್ಲಿ ಮೈಬೆವರು ಸುರಿಸುತ್ತಾ ರಿಕ್ಷಾ ಎಳೆದ ರಿಕ್ಷಾವಾಲ, 'ಐದು ಮೈಲು ರಕ್ತ ಬಸಿದುಕೊಂಡು ಹೊತ್ತುಕೊಂಡು ಬಂದವನು,' ಒಂದು ರುಪಾಯಿಗೆ ಅಪ್ಪನ ಹತ್ತಿರ ಚೌಕಾಸಿ ಮಾಡುತ್ತಾನೆ. ಇದು ಕೆ.ಕೆ.ರಾನ (ಮತ್ತು ನಮ್ಮ) ಮನವನ್ನು ಕಲಕುತ್ತದೆ. ಆದರೆ, ಅದೇ ರಿಕ್ಷಾವಾಲ ಬಡಪಾಯಿ ಅಂತ ನಮ್ಮ ಮರುಕಕ್ಕೆ ಪಾತ್ರನಾದವನು, ಮರುದಿನ ಮಾರ್ಕೆಟ್ಟಿನ ಹತ್ತಿರ, ಸಿಪ್ಪೆ ಸುಲಿದ ಇಡೀ ಬಾಳೇ ಹಣ್ಣನ್ನು ಅಶ್ಲೀಲವಾಗಿ ಬಾಯೊಳಗಿಟ್ಟು ತೆಗೆಯುತ್ತಾ ಎದುರಿಗೆ ನಿಂತಿದ್ದ ಹೆಣ್ಣುಮುಡಿಯ ಖೋಜಾ ಒಬ್ಬನನ್ನು ಚುಡಾಯಿಸುತ್ತಾನೆ (ಪುಟ ೪೬). ಇದನ್ನು ನೋಡಿದ ಕೆ.ಕೆ.ರಾಗೆ ತಾನೇ ಪೆದ್ದ ಎನಿಸುತ್ತದೆ. ಅತ್ತೆ ಮನೆಯಲ್ಲಿದ್ದ ಕಕ್ಕಸ್ಸು, ಅದನ್ನು ತೊಳೆಯಲು ಬರುವ ಝಾಡಮಾಲಿ ಹೆಂಗಸು, ಇಂತಹಾ ಬೀಭತ್ಸ ಚಿತ್ರಗಳ ಕಠೋರ ಅನುಭವಗಳು ಕೆ.ಕೆ.ರಾನನ್ನು ಹೇಗೆ ಕೆದರುತ್ತವೋ ಹಾಗೇ ಅವು ನಮಗೂ ಮರೆಯಲಾಗದ ದರ್ಶನಗಳು. ಆದರೆ ಈ ಅನುಭವಗಳ ಅರ್ಥವನ್ನು ಕೆ.ಕೆ.ರಾ ಯೋಚಿಸುವಾಗ ಅವನಿಗೇ ಅನುಮಾನ– ಇವೆಲ್ಲಾ ತನ್ನ ಅಮೆರಿಕನ್ ಹೆಂಡತಿಯ ಪ್ರಭಾವದಿಂದ ತನ್ನಲ್ಲಿ ಮೂಡಿದ ಬೂರ್ಜ್ವಾ ಅನ್ನಿಸಿಕೆಗಳು ಅಂತ ಎ.ಕೆ.ರಾ ಎಲ್ಲಿ ತಮಾಷೆ ಮಾಡುತ್ತಾನೋ ಅಂತಂದುಕೊಳ್ಳುತ್ತಾನೆ.

ನಾನು ಯಾರು? ನನ್ನ ಬದುಕಿನ ಅರ್ಥವೇನು? ಎಂಬ ಸಾರ್ವಕಾಲಿಕ ಶೋಧನೆಗಳ ಚಿಂತನೆ ಎಲ್ಲೂ ಒಣ ವೇದಾಂತವಾಗಿ ವಾಚ್ಯವಾಗಿಲ್ಲ, ಜಿಗ್ಸಾಪಜ಼ಲ್‌ನ ತುಂಡುಗಳಂತೆ ಕಾದಂಬರಿಯುದ್ದಕ್ಕೂ ಹರಡಿವೆ. ಇವನ್ನು ನಾವೇ ಅಳವಡಿಸಿ, ಅಡಗಿದ ಚಿತ್ರವನ್ನು, ಚಿತ್ರಗಳನ್ನು ಹುಡುಕಬೇಕು. ನಿನ್ನೆ ರಾತ್ರಿ ಕಂಡ ಕನಸಿನ ಅರ್ಥವನ್ನು ಹಗಲಲ್ಲಿ ನಾವು ಹುಡುಕುವಂತೆ, ಈ ಕತೆಗಳು ಮತ್ತೆ ಮತ್ತೆ ಎದುರಾಗುತ್ತವೆ. ಕಥಾನಾಯಕನ ಮನದಲ್ಲಿ ಮರುಕಳಿಸುವ ನೆನಪುಗಳ ಮಂಥನದ ಮೂಲ ಪ್ರಜ್ಞೆಯಂತೂ ಕಾಂತಾ ಸಮ್ಮಿತಿಯ ಸ್ನೇಹದ ಶೈಲಿಯಲ್ಲಿ ಅರಳುತ್ತದೆ.

ತನ್ನಲ್ಲಿ ಮತ್ತೊಬ್ಬ ಎಷ್ಟಿದ್ದಾನೆ, ಮತ್ತೊಬ್ಬನಲ್ಲಿ ತಾನೆಷ್ಟಿದ್ದೇನೆ ಎಂಬ ದ್ವಂದ್ವ ನಾನಾ ರೀತಿಯಲ್ಲಿ ವ್ಯಕ್ತವಾಗುತ್ತದೆ. ಕತೆಗಾರ ಮತ್ತು ನಾಯಕನ ಹೆಸರಿನ ಸಮಾನತೆ ಒಂದು ಉದಾಹರಣೆಯಾದರೆ, ಹುಟ್ಟುವಾಗಲೇ ಸೊಂಟದ ಬಳಿ ಅಂಟಿಕೊಂಡು, ಸಾಯುವವರೆಗೂ ಪಕ್ಕದಲ್ಲೇ ಉಳಿದುಕೊಳ್ಳುವ ಗಂಗೆ-ಯಮುನೆ ಎಂಬ ಅವಳಿ-ಜವಳಿ ಸಹೋದರಿಯರ ('ಕನ್ಜಾಯಿಂಡ್ ಟ್ವಿನ್ಸ್') ಕತೆ ಮತ್ತೊಂದು ಉದಾಹರಣೆ. ಪರಸ್ಪರ ಅವಲಂಬನೆ ಭೌತಿಕ ಜಗತ್ತಿನಲ್ಲಿ ಮಾತ್ರವಲ್ಲ, ಮಾನಸಿಕ ಪ್ರಪಂಚಕ್ಕೂ ಕೂಡಾ. ಗಂಡ ಹೆಂಡತಿಯರು ತಮ್ಮ ಮಾನಸಿಕ ಬದುಕಿನ ಸ್ವಂತತೆಯನ್ನು ಉಳಿಸಿಕೊಳ್ಳುವ, ಸಮರ್ಥಿಸಿಕೊಳ್ಳುವ ಕಿತ್ತಾಟ ಮತ್ತು ಜಗಳ, ಅತ್ಯಂತ ನಾಟಕೀಯವಾಗಿ ಕೆ.ಕೆ.ರಾ ಮತ್ತು ಅವನ ಹೆಂಡತಿಯರ ಘರ್ಷಣೆಯಲ್ಲಿ ಪ್ರಕಟವಾಗುತ್ತದೆ. 'ಕ್ಯಾನಿಬಲ್ ನೆನಪು' ಎಂಬ ಅಧ್ಯಾಯದಲ್ಲಿ ಗಂಡಹೆಂಡತಿಯರು ಒಬ್ಬರನ್ನೊಬ್ಬರು ಅನುಕರಿಸಿ ಇಬ್ಬರೂ ಒಂದೇ ರೀತಿ ಕಂಡುಬಿಡುವ ಉದಾಹರಣೆ ಒಂದು. ಹಾಗೇ, 'ನನ್ನ ಮನಸ್ಸಿನ ಯೋಚನೆಯನ್ನು ನುಂಗಿಬಿಡುವ ಮನುಷ್ಯಾಹಾರಿ ಕ್ಯಾನಿಬಲ್ ನೀನು' ಎಂದು ಗಂಡ ಹೆಂಡಂದಿರು ಪರಸ್ಪರ ಟೀಕಿಸಿಕೊಂಡು ಜಗಳವಾಡುವ ಉದಾಹರಣೆ ಮತ್ತೊಂದು.

ಸ್ವಂತ ಮತ್ತು ಇನ್ನೊಬ್ಬನ ಅವಿಭಾಜ್ಯ ಸಂಬಂಧವನ್ನು ಸ್ಪಂದಿಸುವ ಅನೇಕ ಕತೆಗಳಿವೆ. ಹೆಸರಿನ ಬಗ್ಗೆಯೇ ಒಂದು ಅಧ್ಯಾಯ. ತನ್ನ ಹೆಸರಿನ ಇನ್ನೊಬ್ಬ ಸಂಬಂಧಿ ರಾಮಾನುಜನ್ ಎಂಬುವನ ಕತೆಯನ್ನು ಕೆ.ಕೆ.ರಾ, ಎ.ಕೆ.ರಾಗೆ ಕಳುಹಿಸುತ್ತಾನೆ. ಅದನ್ನು ಓದಿದ ಎ.ಕೆ.ರಾ ಕೊಡುವ ಉತ್ತರ ನೋಡಿ:

'ಹೆಸರು ಒಂದು ತರಹ ಮಂತ್ರ. ಅದಕ್ಕೇ ತಾತನ ಹೆಸರು ಮೊಮ್ಮಗನಿಗೆ, ಪುರಾತನರ ಹೆಸರು ಈಗ ಹುಟ್ಟಿದ ಮಕ್ಕಳಿಗೆ. ನಾಮಕರಣದ ದಿನ ಪುನರ್ಜನ್ಮ ಆದ ಹಾಗೆ. ಆಫ್ರಿಕಾದಲ್ಲಿ ಕೆಲವು ಕಡೆ ಮುಖ್ಯಸ್ಥ ಸತ್ತರೆ ಅವನೊಂದಿಗೆ ಅವನ ಹೆಸರು, ಅದಕ್ಕೆ ಸಂಬಂಧಪಟ್ಟ ವಸ್ತುಗಳ ಹೆಸರು, ಎಲ್ಲಾ ಸಾಯುತ್ತಂತೆ. ಹೀಗಾಗಿ ದೊಡ್ಡ ಸಾಂಕ್ರಾಮಿಕ ರೋಗ ಏನಾದರೂ ಬಂದು ಅನೇಕರನ್ನು ಸಾಯಿಸಿ ಗುಡಿಸಿಕೊಂಡು

ಹೋದಮೇಲೆ, ಅವರ ಭಾಷೆಯೇ ಬದಲಾಗುತ್ತಂತೆ. ನಮ್ಮ ಹಳಬರು ಆತ್ಮಕ್ಕೆ ಚರಿತ್ರೆಯಿಲ್ಲ, ಹೆಸರಿಲ್ಲ ಎನ್ನುತ್ತಾರೆ. ಆದರೆ, ಈ ಆಫ್ರಿಕನ್ ಜನಕ್ಕೆ ಹೆಸರೇ ಆತ್ಮ. ನನ್ನ ನಿಮ್ಮಂಥವರಿಗೂ ಹಾಗೆ.' (ಪುಟ ೫೫).

ಎ.ಕೆ.ರಾ, ಕೆ.ಕೆ.ರಾಗೆ ಮತ್ತೆ ಎಚ್ಚರ ಹೇಳುತ್ತಾನೆ. ತನ್ನನ್ನೇ ತಾನು ಮೋಹಿಸಿಕೊಂಡ ನಾರ್ಸಿಸಿಸ್‌ನ ಕತೆ ಹೇಳಿ, 'ಜೋಕೆ ರಾಮಾನುಜನ್! ನಾರ್ಸಿಸಿಸ್‌ನ ಅಂಶ ಇಲ್ಲದಿದ್ದರೆ ಈಗ ಆತ್ಮಕತೆ ಯಾಕೆ ಬರೀತಿದ್ದೀರಿ? ಆದರೂ ಜೋಪಾನ!' ಇಲ್ಲಿ, ಕತೆಗಾರ, ನಿರೂಪಣೆ ಮಾಡುತ್ತಿರುವ ಕಥಾನಾಯಕನನ್ನು ತಮಾಷೆ ಮಾಡುತ್ತಾ, ತಮ್ಮನ್ನೂ, ತಮ್ಮ ಹಾಗೇ 'ಸ್ವಂತದ' ಕತೆ ಬರೆಯುವ ಇತರ ಬರಹಗಾರರನ್ನೂ ತಮಾಷೆ ಮಾಡುತ್ತಿದ್ದಾರೆ ಎನಿಸುತ್ತದೆ. ಕತೆಗಾರ ಮತ್ತು ನಾಯಕನ ನಡುವಿನ ವ್ಯತ್ಯಾಸ ಮಾಯವಾದರೂ ಮಾಯವಾಗದ ಮೋಡಿ ಪ್ರಕಟವಾಗುವ ರೀತಿ, ಈ ಕಾದಂಬರಿಯುದ್ದಕ್ಕೂ ಮಿಂಚಿನಂತೆ ಹೊಳೆಯುತ್ತದೆ.

ನಾವೆಷ್ಟು ಪ್ರಯತ್ನಪಟ್ಟರೂ, ನಮ್ಮ ಮೈ, ಮನ ಮತ್ತು ಬದುಕು ರೂಪುಗೊಳ್ಳುವುದು ನಮ್ಮ ಪರಿಸರದ ಪ್ರಭಾವದಿಂದ. ಈ ತಾತ್ವಿಕ ಸಂಗತಿ, ಈಚೆಗಿನ ವೈಜ್ಞಾನಿಕ ಸಿದ್ಧಾಂತವೂ ಹೌದು. ಪರಿಸರದ ಪ್ರಭಾವದಿಂದ ನಮ್ಮ DNA ಮತ್ತು gene ಕೂಡಾ ಬದಲಾಗುತ್ತವೆ ಎಂದು ವಿಜ್ಞಾನಿಗಳು ಹೇಳುತ್ತಾರೆ. ಅದಕ್ಕೆ epigenetic ಎನ್ನುತ್ತೇವೆ. ಆ ಸಿದ್ಧಾಂತದ ಅಂಶವನ್ನು ಧ್ಯಾನದಂತೆ ಜಪಿಸುವ ಈ ಕೆಳಗಿನ ಸಾಲುಗಳನ್ನು ಓದಿದಾಗ ನನಗೆ ಅಸಂಗತ ಅನುಭವವಾಯಿತು:

'ತೇಪೆ, ಈ ಮೈಯಿ ಪುರಾತನ ಜೀವಗಳ ಬಯಲಾಜಿಕಲ್ ತೇಪೆ. ಮನಸ್ಸು, ಹಿಂದಿನವರ, ಹತ್ತಿರದವರ, ಓದಿ ಕೇಳಿದವರ ತೇಪೆ. ನಮ್ಮೊಳಗೆ ಯಾರ ಯಾರದೋ ಚರಿತ್ರೆ, ಚರ್ಯೆ. ...ಉದಾಹರಣೆಗೆ, ಬಿಡಿಸಿ ನೋಡಿದರೆ ನಾವು ನಾವೆಲ್ಲ ಯಾರು ಯಾರೋ ಅಂಕಡೊಂಕಸಂಕಪಾಲದ ಹಾಗೆ...' (ಪುಟ ೭೯).

ಕಾದಂಬರಿಯ ಕಡೆಯ ಅಧ್ಯಾಯ, 'ಒಂದೆರಡು ಖರ್ಜೂರ' ಎಂಬ ಶೀರ್ಷಿಕೆಯ ಎರಡು ಪುಟಗಳು. ಅತ್ತಿಂಬೇರು ಮಾವನ ಕಡೆಯ ದಿನದ ಕತೆ. ಇದರೊಂದಿಗೇ, ಕಾದಂಬರಿಯ ಹೊರ ಆವರಣದ ಕತೆಯೂ ಮುಗಿಯುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಆದಿನ ಯುವಕನಾಗಿದ್ದ ಕೆ.ಕೆ.ರಾ ಇದ್ದಕ್ಕಿದ್ದಂತೆಯೇ ತನ್ನ ಅಪ್ಪನ ಚಿಂತನೆಯ ಆಳವನ್ನೂ ತಿಳಿದುಕೊಳ್ಳುತ್ತಾನೆ. ಹಾಗೇ ಬೆಳೆಯುತ್ತಾನೆ ಎಂದು ನಮಗನಿಸುತ್ತದೆ. ನನ್ನ ಮಟ್ಟಿಗಂತೂ ಈ ಅಧ್ಯಾಯ ನಿರಂತರವಾಗಿ ಉರಿಯುವ ದೀಪ.

ಆ ಕಡೆಯ ದಿನ, ಕೆ.ಕೆ.ರಾನ ಅಪ್ಪನ ಹತ್ತಿರ ಡಾಕ್ಟರ್, ಅತ್ತಿಂಬೇರು ಮಾವನ ಖಾಯಿಲೆಯ ಬಗ್ಗೆ ಪ್ರೋಗ್ನೋಸಿಸ್ ಕೊಡುತ್ತಾರೆ: 'ಇನ್ನೆರಡು ದಿನ ತಡೆದೀತು. ಆ

ಹೊಟ್ಟೆ ಊದಿರುವುದು ಇನ್ನು ಇಳಿಯುವುದಿಲ್ಲ' ಎಂದು. ತೀರಿಕೊಳ್ಳುವ ಕೆಲವು ಗಂಟೆಗಳ ಮೊದಲು ಅತ್ತಿಂಬೇರು ಮಾವ ರಸ್ತೆಯಲ್ಲಿ ಖರ್ಜೂರ ಮಾರುವವನ ಕೂಗು ಕೇಳಿಸಿಕೊಳ್ಳುತ್ತಾರೆ. ಮುಂದೆ ಓದಿ:

'ಇಡೀ ತಿಂಗಳು ಸ್ವಲ್ಪ ಕೂಡಾ ಹಸಿವಿಲ್ಲದೆ ಇದ್ದ ಅತ್ತಿಂಬೇರು, ಇವತ್ತು ಬೀದಿಯಲ್ಲಿ ಲಬ್ಬೆ ಮಾರುತ್ತಿದ್ದ ಹಸಿ ಖರ್ಜೂರದ ಹಣ್ಣಿನ ಕೂಗು ಕೇಳಿ, ಬೇಕು, ಬೇಕು ಅಂತ ಕೈಸನ್ನೆ ಮಾಡಿದರಂತೆ. ...ಅತ್ತೆ, ಅತ್ತಿಂಬೇರನ್ನ ನೋಡಿ, 'ಖರ್ಜೂರ ಒಳ್ಳೆಯದಲ್ಲ ನಿಮಗೆ. ಅದು ನೋಡಿ ಜಿರಳೆ ಅಪ್ಪಚ್ಚಿ ಮಾಡಿದ ಹಾಗಿದೆ. ಮಗುವಿನ ಹಾಗೆ ನೋಡಿದ್ದೆಲ್ಲ ಬೇಕು ಬೇಕು ಅಂತ ಕೇಳಬಾರದು,' ಅಂತ ಗದರಿಸಿಕೊಂಡರು. ನಮ್ಮಪ್ಪ ಇದನ್ನು ನನಗೆ ಹೇಳಿದಾಗ, 'ನೀವು ಅತ್ತೆಗೆ ಒಂದು ಮಾತು ಹೇಳಿ ಕೊಂಡು ಕೊಡಬಹುದಾಗಿತ್ತಲ್ಲ' ಅಂದೆ. 'ಡಾಕ್ಟರು ನನಗೆ ಹೇಳಿದ್ದನ್ನು ಅವಳಿಗೆ ಹೇಳಿ, 'ಇನ್ನು ಅತ್ತಿಂಬೇರು ಉಳಿಯುವುದಿಲ್ಲ, ಕೇಳಿದ್ದು ಕೊಟ್ಟು ತೃಪ್ತಿಪಡಿಸು' ಅಂತ ಹೇಳುವ ಧೈರ್ಯ ಬರಲಿಲ್ಲ. ಹಾಗೆ ಹೇಳದೇ ಹೋದರೆ, ನಿಮ್ಮತ್ತೆ ಅದನ್ನ ಕೊಂಡುಕೊಡುತ್ತಿರಲಿಲ್ಲ. ಹೇಳಿದರೂ, ಇದು ಕಡೆಯೂಟ, ಇನ್ನು ಇದನ್ನು ತಿಂದು ಗಂಡ ಸಾಯುತ್ತಾನೆ, ಅಂತ ತಿಳಿದು ಖರ್ಜೂರ ತಿನ್ನಿಸುವುದಕ್ಕೆ ಅವಳಿಗೆ ಕಷ್ಟವಾಗಬಹುದು ಅನಿಸಿತು. ಸುಮ್ಮನಿದ್ದು ಬಿಟ್ಟೆ. ರಾತ್ರಿ ನಾವು ಊರಿಗೆ ಹೋಗಬೇಕು. ನನಗೆ ರಜವಿಲ್ಲ,' ಅಂದರು. ಒಂದೆರಡು ಖರ್ಜೂರದ ಬಗ್ಗೆ ನಮ್ಮಪ್ಪ ಇಷ್ಟೆಲ್ಲ ಜಟಿಲ ಯೋಚನೆ ಮಾಡುತ್ತಾರೆಂದು ಗೊತ್ತೇ ಇರಲಿಲ್ಲ.

ರಾತ್ರಿ ರೈಲಿನಲ್ಲಿ ಕೂತಾಗ, ಮತ್ತೆ ನೆನೆಸಿಕೊಂಡು ನಮ್ಮಪ್ಪ, 'ಫಾಸಿ ಶಿಕ್ಷೆ ವಹಿಸಿದವರಿಗೆ ಕಟ್ಟಕಡೆಯ ಆಸೆ, ನಾಲಗೆ ತೀಟೆ ಏನಿದ್ದರೂ ತೀರಿಸುತ್ತಾರೆ, ಭರ್ಜರಿ ಊಟ ಹಾಕುತ್ತಾರೆ. ಈ ಅತ್ತಿಂಬೇರಿಗೆ ಕಡೆಗಾಲದಲ್ಲಿ ಒಂದು ಖರ್ಜೂರ ದಕ್ಕಲಿಲ್ಲ,' ಅಂದರು.' (ಪುಟ ೧೨೭).

ಮಾಲಿ–ರಾಮಾನುಜನ್ ಮತ್ತು ನಾನು, 'ಮತ್ತೊಬ್ಬನ ಆತ್ಮ ಚರಿತ್ರೆ' ಕಾದಂಬರಿಯನ್ನು ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರಿಸಿದೆವು. 'Someone Else's Autobiography' ಅಂತ ಕರೆದೆವು. ಈ ಕಾದಂಬರಿಯನ್ನೂ ಮತ್ತು ಅವರು ಕನ್ನಡದಲ್ಲಿ ಬರೆದ ಮೂರು ಕವನ ಸಂಕಲನಗಳನ್ನೂ ಇಂಗಿಷ್‌ಗೆ ಭಾಷಾಂತರಿಸಿ, ಸಂಗ್ರಹಿಸಿ, Poems and a Novella by A. K. Ramanujan ಎಂಬ ಹೆಸರಿನಲ್ಲಿ ಪ್ರಕಟಿಸಿದೆವು. ಈ ಪುಸ್ತಕವನ್ನು ೨೦೦೭ರಲ್ಲಿ ಪ್ರಕಟಿಸಿದವರು, Oxford Univeristy Press. ಇದು ಭಾರತದ ಅನೇಕ ಪುಸ್ತಕದಂಗಡಿಗಳಲ್ಲಿ ಸಿಗುವುದಲ್ಲದೇ, 'Amazon.com' ಮತ್ತು 'Abebooks.com' ಮುಂತಾದ ಅಂತರ್ಜಾಲ ಪುಸ್ತಕದಂಗಡಿಗಳಲ್ಲಿ ದೊರೆಯುತ್ತದೆ.

ಆದರೆ, ಮೊದಲೇ ಹೇಳಿದಂತೆ, 'ಮತ್ತೊಬ್ಬನ ಆತ್ಮಚರಿತ್ರೆ'ಯ ಪ್ರತಿಗಳು ಮುಗಿದು ಹೋಗಿರಲಾಗಿ, ಅದು ಸುಲಭವಾಗಿ ಸಿಗುವುದಿಲ್ಲ. ಆದರೆ, ಇತ್ತೀಚೆಗೆ ನನಗೆ ತಿಳಿದು ಬಂದ ಸಂಗತಿ, ರಾಮಾನುಜನ್‌ರ ಸಮಸ್ತ ಕನ್ನಡ ಬರಹಗಳನ್ನೂ ಸಂಗ್ರಹಿಸಿ ಒಂದು ಸಂಕಲನವನ್ನು ಮನೋಹರ ಗ್ರಂಥಮಾಲೆಯ ಶ್ರೀ ರಾಮಜೋಷಿಯವರೇ ಪ್ರಕಟಿಸುತ್ತಾರೆ ಅಂತ. ಇದು ಖಂಡಿತ ಆಗಲೇಬೇಕಾದ ಕೆಲಸ.

೧೯೬೬ರಲ್ಲಿ, ಅಂದರೆ, 'ಮತ್ತೊಬ್ಬನ ಆತ್ಮಚರಿತ್ರೆ' ಬರೆಯುವ ಹನ್ನೊಂದು ವರ್ಷಗಳ ಮೊದಲೇ ಎ. ಕೆ. ರಾಮಾನುಜನ್, 'ದಿ ಸ್ಟ್ರೈಡರ್' ಎಂಬ ಇಂಗ್ಲಿಷು ಕವನಸಂಕಲನವನ್ನು ಪ್ರಕಟಿಸಿದ್ದರು. ಅದರಲ್ಲಿಯ ಒಂದು ಸಣ್ಣ ಕವನ, 'ಸೆಲ್ಫ್ ಪೋರ್ಟ್‌ರೇಟ್' ಅಂತ. ಇದು ಕವಿ ತನ್ನ ಮುಂದಿನ ಕಾದಂಬರಿಗೆ ಬರೆದ ನಾಂದಿ ಎನ್ನಿಸುತ್ತದೆ.

**Self-Portrait**

I resemble everyone but myself, and sometimes see in shop-windows, despite the well-known laws of optics, the portrait of a stranger, date unknown, often signed in a corner by my father.
(ಪುಟ ೨೩, ದಿ ಆಕ್ಸ್‌ಫರ್ಡ್ ಇಂಡಿಯಾ)

**ಕೃತಿ ವಿವರ:** ಮತ್ತೊಬ್ಬನ ಆತ್ಮಚರಿತ್ರೆ, ಎ. ಕೆ. ರಾಮಾನುಜನ್, ಮನೋಹರ ಗ್ರಂಥ ಮಾಲೆ, ಧಾರವಾಡ, ೧೯೭೮, ಪು. ೧೨೭

# ಮಾನವೀಯ 'ಮಾಯಾಲೋಕ' –
# ಅಸಮಾನ 'ಬದುಕು'

–ವಿಮಲಾ ರಾಜಗೋಪಾಲ್, ಮೀಡಿಯಾ, ಪೆನ್ಸಿಲ್ವೇಯಾ

ಬದುಕು ಮಾಯೆಯ ಮಾಟ
ಮಾತು ನೊರೆ ತೆರೆಯಾಟ
ಜೀವಮಾನದ ತುಂಬ ಗುಂಭ ಮುನ್ನೀರು
ಕರುಣೋದಯದ ಕೂಡ
ಅರುಣೋದಯವು ಇರಲು
ಎದೆಯ ತುಂಬುತ್ತಲಿದೆ ಹೊಚ್ಚ ಹೊನ್ನೀರು

**– ಬೇಂದ್ರೆ**

*

ಪೂರ್ಣಚಂದ್ರ ತೇಜಸ್ವಿಯವರ 'ಮಾಯಾಲೋಕ-೧ ಮತ್ತು ಗೀತಾ ನಾಗಭೂಷಣ ಅವರ 'ಬದುಕು'- ಈ ಎರಡೂ ಕಾದಂಬರಿಗಳಲ್ಲೂ ಮೂಲತಃ ಚಿತ್ರಿತವಾಗಿರುವುದು ಕೆಳವರ್ಗದ ಜನರ, ದಲಿತರ ನಿತ್ಯಜೀವನದ ಆಗುಹೋಗುಗಳು, ಕಷ್ಟನಿಷ್ಠುರಗಳು. ದಲಿತವರ್ಗದ ಜನರ ನಾನಾ ಕಷ್ಟಕೋಟಲೆಗಳನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುವ ಈ ಎರಡು ಕೃತಿಗಳು ಒಂದಕ್ಕೊಂದು ಪೂರಕವಾಗಿವೆ. ಮೇಲುವರ್ಗದವರಿಂದ ತುಳಿಯಲ್ಪಟ್ಟು ಸಾಮಾಜಿಕ ಅನ್ಯಾಯ ದೌರ್ಜನ್ಯಗಳಿಗೊಳಗಾಗಿರುವ ಅಮಾಯಕ ರೈತರ ಜೀವನ ಚಿತ್ರವನ್ನು 'ಮಾಯಾಲೋಕ'ದಲ್ಲಿ ಕಾಣುತ್ತೇವೆ (ಮಾತಿನ ಸೌಲಭ್ಯಕ್ಕಾಗಿ ಇಲ್ಲಿಂದ ಮುಂದೆ ಶೀರ್ಷಿಕೆಯಲ್ಲಿನ ಅಂಕೆಯನ್ನು ಬಿಡಲಾಗಿದೆ). 'ಬದುಕು'ವಿನಲ್ಲಿ ಸಾಮಾಜಿಕ, ಕೌಟುಂಬಿಕ ದೌರ್ಜನ್ಯಗಳಿಗೊಳಗಾದ ಮಧ್ಯಮವರ್ಗದ ಸಂಸಾರಿಗರು, ಲೈಂಗಿಕ ದೌರ್ಜನ್ಯಗಳಿಗೊಳಗಾಗಿ ದಾರುಣ ಕಷ್ಟಗಳಿಗೀಡಾಗುವ ಹಳ್ಳಿಯ ಅಸಹಾಯಕ ಹೆಣ್ಣುಗಳು- ಇವರುಗಳನ್ನು ಕಾಣುತ್ತೇವೆ.

ಆದರೆ, ಈ ಇಬ್ಬರು ಪ್ರತಿಭಾನ್ವಿತ ಲೇಖಕರು ಈ ಕ್ಲಿಷ್ಟ ಸಮಸ್ಯೆಗಳನ್ನು ನೋಡುವ, ನಿರೂಪಿಸುವ ಶೈಲಿ ತೀರ ವಿಭಿನ್ನವಾಗಿದೆ. ಇದನ್ನು ಕುರಿತು ಮುಂದೆ ಚರ್ಚಿಸಿದೆ.

**ಮಾಯಾಲೋಕ**

'ಮಾಯಾಲೋಕ'ದ ಕಥನ ಸನ್ನಿವೇಶಗಳಲ್ಲಿ ತೇಜಸ್ವಿಯವರು ಜಾತೀಯತೆಯ ಒಳಜಗಳಗಳನ್ನೂ, ತಪ್ಪು ತಿಳುವಳಿಕೆಗಳನ್ನೂ, ಕೆಳವರ್ಗದ ಜನರ ಅಸಹಾಯಕತೆ, ಅಜ್ಞಾನಗಳನ್ನೂ ಸ್ವಾರ್ಥಿ ಅಧಿಕಾರಿಗಳು ತಮ್ಮ ಸ್ವಂತಕ್ಕಾಗಿ ದುರುಪಯೋಗ ಪಡಿಸಿಕೊಳ್ಳುವ ನಿಷ್ಕಾರುಣ್ಯತೆಯನ್ನು ಅಲ್ಲಿನ ಹಳ್ಳಿಗರ ಮೂಲಕ ಆಳವಾಗಿ ಹೊಕ್ಕು ವಿವೇಚಿಸಿದ್ದಾರೆ. ಕಾಡಿನಲ್ಲಿ ಕಾಣುವ ಸೌಮ್ಯ ಮುಖದ 'ಚಿಟ್ಟು ಗಿಳಿ', ಜೌಗು ಪ್ರದೇಶದ 'ಹುಂಡು ಕೋಳಿಗಳು', ಸರ್ವಾಂತರ್ಯಾಮಿ ಜಗಳಗಂಟ ಅಣ್ಣಪ್ಪಣ್ಣ, ಲೋಕೋಪಕಾರಿ ಕರಾಟೆ ಮಂಜಣ್ಣ, ಬಂಡಾರಿ ಬಾಬು, ಮೀಸೆ ಉಗ್ರಪ್ಪ, ಕಷ್ಟದಲ್ಲಿ ಒಬ್ಬರಿಗೊಬ್ಬರು ನೆರವಾಗುವ ಸ್ನೇಹಿತೆಯರು, ಗಂಗವ್ವ, ಈರಿ, ರುಕ್ಮಿಣಿ, ಹಾಗೂ ಬಜ್ಜಿ ಫ್ಲಾತಿಮಾ, ಇಕ್ಬಾಲಣ್ಣ ಮತ್ತು ಜಲೀಲ್ ಸಾಬಿ- ಇವರನ್ನೆಲ್ಲ ತೇಜಸ್ವಿಯವರು ಸಣ್ಣಸಣ್ಣ ಘಟನೆಗಳ ಮೂಲಕ ಚಿತ್ರಿಸಿದ್ದಾರೆ. ಹಳ್ಳಿಯ ಜನರ ದೈನಂದಿನ ಕಿರಿಕಿರಿ, ಕಷ್ಟಕಾರ್ಪಣ್ಯಗಳನ್ನು ವಿವರಿಸುವಾಗ ಮಧ್ಯೆ ಮಧ್ಯೆ ನಗಿಸಿ ಹೃದಯ ಹಗುರಗೊಳಿಸುವ ಹಲವಾರು ಲಘು ಪ್ರಸಂಗಗಳನ್ನು 'ಮಾಯಾಲೋಕ'ದುದ್ದಕ್ಕೂ ಕಾಣುತ್ತೇವೆ.

'ಮಾಯಾಲೋಕ'ದ ಗೆಳೆಯರ ಗುಂಪಿಗೆ, ಮತ್ತಿತರರಿಗೆ ಏನೇ ಕಷ್ಟ ಬರಲಿ, ಅದನ್ನು ಪರಿಹರಿಸಿಕೊಳ್ಳುವ ಉಪಾಯ ತಮಗೆ ತೋರದಾದಾಗ ಅವರೆಲ್ಲ ಓಡಿ ಬರುವುದು 'ಸಾರ್' ಬಳಿಗೆ. ಈ ಸಾರ್ 'ಮಾಯಾಲೋಕ'ದ ಕಥಕ, ಸೂತ್ರಧಾರ. ಈತ, ಅಲ್ಲಿನ ಎಲ್ಲ ಘಟನೆಗಳನ್ನೂ, ಗೊಂದಲಗಳನ್ನೂ ನಿರ್ವೇದನೆಯಿಂದ, ಅನುಕಂಪ ವ್ಯಂಗ್ಯ ಲಘುಹಾಸ್ಯ ಬೆರೆತ ಶೈಲಿಯಲ್ಲಿ ಓದುಗರಿಗೆ ಶ್ರುತಪಡಿಸುತ್ತಾನೆ.

ಮಕ್ಕಿಗದ್ದೆ ಇಕ್ಬಾಲ್ ಸಾಬು ಕಡೆಯವರಿಗೂ ಅಣ್ಣಪ್ಪಣ್ಣನ ಕಡೆಯವರಿಗೂ ಗದ್ದೆ ಬಯಲಲ್ಲಿ ಹೊಡೆದಾಟ ಆದಾಗ ರೈತ ಸಂಘದ ವಾಟೇಹಳ್ಳಿ ಶೇಖರನೂ ಸೇರಿದ್ದ. ಈ ಜಗಳ ಬಿಡಿಸುವಂತೆ ಬಾಬು ಓಡಿಬಂದು ಕೇಳಿಕೊಂಡಾಗ 'ಮಾಯಾಲೋಕ'ದ ಲೇಖಕ-ಸೂತ್ರಧಾರ ತನಗಿದರಲ್ಲಿ ತಲೆಹಾಕಲು ಇಷ್ಟವಿಲ್ಲದ್ದಕ್ಕೆ ಹೇಳಿರುವ ಕಾರಣ ತಮಾಷೆಯಾಗಿದೆ. ಹಿಂದೊಮ್ಮೆ ಇದೇ ರೀತಿ ಊರಳ್ಳಿಯ ಅಣ್ಣಪ್ಪಣ್ಣ, ಜಗದೀಶ, ಸೂರಿ, ಮಂಜಣ್ಣ ಅವರುಗಳಿದ್ದ ಜಗಳ ಬಿಡಿಸಲು ಹೋಗಿ ಪೊಲೀಸರು ಲೇಖಕನನ್ನೂ ಒಳಗೊಂಡು ಹದಿನಾರು ಜನರ ಮೇಲೆ ದೊಂಬಿ ಕೇಸು ಹಾಕಿದ್ದರು. ಮೊಕದ್ದಮೆಯಲ್ಲಿ ಏನೂ ಹುರುಳಿಲ್ಲವೆಂದು ನ್ಯಾಯಾಧೀಶರು, ಪೊಲೀಸರು ತೀರ್ಮಾನಿಸಿ ಅದನ್ನು ರದ್ದು ಮಾಡಬೇಕೆಂದು ಎಷ್ಟು ಪ್ರಯತ್ನಿಸಿದರೂ, ಕೇಸಿಗೆ ಸಂಬಂಧಿಸಿದ ಹದಿನಾರು

ಜನರನ್ನೂ ಒಟ್ಟಿಗೆ ನ್ಯಾಯಾಲಯಕ್ಕೆ ಹಾಜರುಪಡಿಸುವುದು ಅಸಾಧ್ಯವಾಗಿ ಒಂದೂವರೆ ವರ್ಷದವರೆಗೆ ಈ ಕೇಸು ಸತತವಾಗಿ ಮುಂದೂಡಲ್ಪಡುತ್ತಾ ಹೋಯಿತು. ಪ್ರತಿ ಸಾರಿ 'ಹಿಯರಿಂಗ್' ಬಂದಾಗಲೂ ಯಾರಾದರೂ ಆಪಾದಿತರು ತಪ್ಪಿಸಿಕೊಳ್ಳುತ್ತಿದ್ದರು. ಕೊನೆಗೆ ಕರಾಟೆ ಮಂಜಣ್ಣ ಒಂದು ಉಪಾಯ ಕಂಡುಕೊಂಡ. ಗೊಂದಲಗೇರಿ ಜಾತ್ರೆ ಸಂದರ್ಭಕ್ಕೆ ಸರಿಯಾಗಿ 'ಹಿಯರಿಂಗ್' ಇಡಿಸಿ, ಅಷ್ಟು ಜನಕ್ಕೂ ಕಾಫಿ, ತಿಂಡಿ ಏರ್ಪಾಡು ಮಾಡಿದ. ಅವನ ಉಪಾಯ ಫಲಿಸಿತು. ಎಲ್ಲರೂ ಕೋರ್ಟಿಗೆ ಹಾಜರಾದರು. ಮೊಕದ್ದಮೆ ವಜಾ ಆಯಿತು.

ಪತ್ರಿಕಾ ಸಂಪಾದಕ ಪ್ರಕಾಶನೊಡನೆ ಮಾತಾಡುತ್ತಾ ಲೇಬರ್ ಲೀಡರ್ ಡೆಲ್ಫಿ ಆಡುವ ಮಾತುಗಳು ಗಮನಾರ್ಹವಾಗಿವೆ: 'ನಮ್ಮ ಲೀಡರುಗಳ ಭಾಷಣದ ಪ್ರಕಾರ ಕ್ರಾಂತಿ ಮಾಡುತ್ತೇನೆಂದು ಮ್ಯಾನೇಜ್‌ಮೆಂಟ್ ವಿರುದ್ಧ ಕತ್ತಿ ಮಸೆದರೆ, ನನ್ನ ಕತೆ ಏನಾಗಬಹುದೆಂದು ಯೋಚಿಸು. ಕಾರ್ಮಿಕರನ್ನೆಲ್ಲಾ ಕೆಲಸದಿಂದ ತೆಗೆದುಹಾಕಿದರೆ, ಅವರಿಗೆಲ್ಲಾ ಒಪ್ಪತ್ತು ಊಟ ಹಾಕುವಷ್ಟು ತ್ರಾಣ ನನಗಿರಲಿ, ನಮ್ಮ ಪಕ್ಷಕ್ಕೂ ಇಲ್ಲ. ಇವನ್ನೆಲ್ಲಾ ಪರಿಗಣಿಸಿ ನೀನು ಜೀವನದ ಚದುರಂಗದಾಟದಲ್ಲಿ ದಾಳ ನಡೆಸಬೇಕಾಗುತ್ತೆ. ಜೀವನ ಎನ್ನುವುದು ನೂರಾರು ನಾಟಕಗಳ ಸಂಮಿಶ್ರಣ. ನಿನ್ನ ನಿಲುವು, ದೃಷ್ಟಿ ಬದಲಾದ ಹಾಗೂ ಅಸಲಿ ಎಂದು ತಿಳಿದದ್ದು ವೇಷವಾಗುತ್ತದೆ. ವೇಷ ಅಸಲಿಯಾಗುತ್ತದೆ. ನೀನು ಪೇಪರ್ ನಿಲ್ಲಿಸುತ್ತೇನೆ ಎಂದು ಅಂದಿದ್ದಕ್ಕೆ ಈಗ ಅದೆಲ್ಲ ಪುರಾಣ ಬಂದಿದ್ದು. ಪೇಪರ್ ನಡೆಸುವುದು ಸಾಹಸದ ಕೆಲಸವೇ ಹೊರತು ನಿಲ್ಲಿಸುವುದಲ್ಲ...' ಇತ್ಯಾದಿ. ಪ್ರತಿ ಸಾರಿ ಪತ್ರಿಕೆ ನಿಲ್ಲಿಸಬೇಕೆಂದು ಪ್ರಕಾಶ ನಿರ್ಧರಿಸಿದಾಗಲೂ ಇದೇ ರೀತಿ ಏನೇನೋ ಬೋಧನೆ ಮಾಡಿ ಪೇಪರ್ ಮುಂದುವರೆಸುವಂತೆ ಅವನನ್ನು ಹುರಿದುಂಬಿಸುತ್ತಿದ್ದ.

ಡೆಲ್ಫಿ ಸಹ 'ಕಮ್ಯುನಿಸಂ ಹಬ್ಬುತ್ತದೆ, ಒಂದಲ್ಲಾ ಒಂದು ದಿನ ಕ್ರಾಂತಿ ಆಗುತ್ತದೆ' ಎಂದು ತಿಳಿದೇ ಕಮ್ಯುನಿಸ್ಟ್ ಪಾರ್ಟಿ ಸೇರಿದ್ದು. ಆದರೆ ಜಾಗತಿಕ ಕ್ರಾಂತಿ ನಂಬಿಕೊಂಡು ಕುಳಿತರೆ ಪ್ರಯೋಜನವಿಲ್ಲ. ಹೊಟ್ಟೆಪಾಡಿಗೆ ಏನಾದರೂ ಮಾಡಿಕೊಳ್ಳಬೇಕೆಂದು ಕಂಪೆನಿ ತೋಟಗಳಲ್ಲಿ ಕಾರ್ಮಿಕ ಸಂಘಟನೆ ಮಾಡತೊಡಗಿದ. ಸ್ಥಳೀಯ ರಾಜಕಾರಣದಲ್ಲಿ ನುರಿತ ಅವನನ್ನು ಕಂಡರೆ ಒಳಗೊಳಗೇ ತಿರಸ್ಕಾರ ಇದ್ದರೂ ಪ್ಲಾಂಟರುಗಳೆಲ್ಲಾ ಅವನನ್ನು ಕಂಡರೆ ಹೆದರುತ್ತಿದ್ದರು. ಆದರೆ ಅವರ ಭಯವನ್ನು ತನ್ನ ಅನುಕೂಲಕ್ಕೆ ಉಪಯೋಗಿಸಿಕೊಳ್ಳದೆ, ಯಾವುದೇ ಕಾರಣಕ್ಕೂ ಅವರ ಹಂಗಿಗೆ ಸಿಕ್ಕಿಕೊಳ್ಳದೆ ಗಂಭೀರವಾಗಿ ದೂರ ಇರುತ್ತಿದ್ದ ಅವನ ಬಗ್ಗೆ ಇತರ ಕಾರ್ಮಿಕ ಮುಖಂಡರೂ ಗೌರವದಿಂದ ನಡೆದುಕೊಳ್ಳುತ್ತಿದ್ದರು.

ಅವನೊಡನೆ ಮಾತನಾಡಿದ ಹೊಸ ಉತ್ಸಾಹದಲ್ಲಿ ಪ್ರಕಾಶ ಪೇಟೆ ಬೀದಿಗೆ ಬಂದಾಗ ಹಸಿರು ಟವಲ್ಲು ಕುತ್ತಿಗೆಗೆ ಸುತ್ತಿಕೊಂಡು ಎತ್ತಲೋ ಹೋಗುತ್ತಿರುವ ರೈತ ಸಂಘದ ಮಿತ್ರರ ಗುಂಪು ಅವನಿಗೆ ಎದುರಾಗುತ್ತಾರೆ. ಆ ಗುಂಪಿನವರೆಲ್ಲಾ ಪ್ರಕಾಶನ ಸ್ನೆಹಿತರೇ. ಅವರಲ್ಲಿ ಒಬ್ಬನಾದ ಶೇಖರ ವಿಚಿತ್ರ ಬೇಡಿಕೆಯೊಂದನ್ನು ಪ್ರಕಾಶನ ಮುಂದಿಡುತ್ತಾನೆ. ಪ್ರಕಾಶನ ಪೇಪರ್ ಆಫೀಸ್ ಮುಂದೆ ಅವರು ಆಯೋಜಿಸಿರುವ ಪ್ರತಿಭಟನೆ ಕಾರ್ಯಕ್ರಮದ ಮುಖ್ಯ ಅಂಗವಾಗಿ ನಾಲ್ಕು ಪತ್ರಿಕೆಗಳಿಗೆ ಬೆಂಕಿ ಹಚ್ಚುವ ಸಲುವಾಗಿ (ಕೊಳ್ಳಲು ಪತ್ರಿಕೆಗಳು ಸಿಕ್ಕಿಲ್ಲವಾದ್ದರಿಂದ) ಅರ್ಜಂಟಾಗಿ ಪತ್ರಿಕೆಗಳು ಬೇಕೆಂದೂ, ಇದುವರೆಗೂ ಅವು ಸಿಕ್ಕದ್ದರಿಂದ ಆ ಪ್ರತಿಭಟನಾ ಕಾರ್ಯಕ್ರಮ ರದ್ದು ಮಾಡಿ ಬೇರೆ ಕೆಲಸದ ಮೇಲೆ ತಹಶೀಲ್ದಾರರನ್ನು ನೋಡಲು ತಾಲೂಕ ಆಫೀಸ್ ಕಡೆ ಹೊರಟಿರುವುದಾಗಿಯೂ– ಇದೆಲ್ಲಾ ಅತಿ ಸಹಜವೆನ್ನುವಂತೆ ಹೇಳಿಬಿಡುತ್ತಾನೆ. ಈ ವಿಚಿತ್ರ ಬೇಡಿಕೆಗೆ ಪ್ರಕಾಶನ ಉತ್ತರ ಇನ್ನೂ ಸೋಜಿಗವಾದದ್ದು. ತನ್ನ ಪತ್ರಿಕೆಯನ್ನು, ಪತ್ರಿಕಾ ಕಚೇರಿ ಮುಂದೆಯೇ ಸುಡುವ ಪ್ರತಿಭಟನಾ ಕಾರ್ಯಕ್ರಮ ಇಟ್ಟುಕೊಂಡಿದ್ದ ಈ ಗೆಳೆಯರನ್ನು ಪ್ರತಿಭಟನೆ ರದ್ದುಮಾಡದೆ ಇಟ್ಟುಕೊಳ್ಳಲು ಕಳಕಳಿಯಿಂದ ಅವರನ್ನು ಉತ್ತೇಜಿಸುತ್ತಾನೆ. 'ಲೋ ಶೇಖರ, ಸುಟ್ಟು ಪ್ರತಿಭಟನೆ ಮಾಡೋದಾದ್ರೆ ನಾಕು ಪೇಪರ್ ಸಾಕೇನೋ! ನಿಮ್ಮ ಜನ್ಮದಲ್ಲಿ ಪೇಪರ್ ಕೊಂಡು ಓದಿಲ್ಲ. ಈ ನೆವದಲ್ಲಾದರೂ ಇಪ್ಪತ್ತೈದು ಪೇಪರ್ ಕೊಂಡುಕೊಳ್ಳಿ. ಸುಟ್ಟುಹಾಕೋದಕ್ಕೆ ಇವತ್ತಿಂದೇ ಆಗಬೇಕೆಂದೇನೂ ಇಲ್ವಲ್ಲಾ. ಆಫೀಸಿಗೆ ಬನ್ನಿ, ಹಳೆವೆಲ್ಲ ಒಂದಷ್ಟು ಇದಾವೆ! ತೂಕದ ಲೆಕ್ಕದಲ್ಲಿ ಕೊಡ್ತೀನಿ. ಪ್ರತಿಭಟನೆ ಮಾಡಿ, ನನಗೂ ಕಾಲಂ ತುಂಬ ಸುದ್ದಿ ಸಿಗ್ತದೆ. ರದ್ದಿ ಕಾಗ್ದಾನೂ ಖರ್ಚಾಗ್ತದೆ. ನಿಮ್ಮ ಕಾರ್ಯಕ್ರಮಾನೂ ಆದಂಗೆ ಆಯ್ತು. ಕಾರ್ಯಕ್ರಮ ಹಾಕಿದ್ದು ಯಾಕೆ ರದ್ದು ಮಾಡ್ತೀರಿ? ಮಾಡಬೇಡಿ!'

ಇಂಥ ವಿನೋದ ಪ್ರಸಂಗಗಳು ಕ್ಲಿಷ್ಟ ಗಂಭೀರ ವಾತಾವರಣವನ್ನು ತಿಳಿ ಮಾಡಿ ನಮ್ಮಲ್ಲಿ ನಗೆಯಲೆಗಳನ್ನುಕ್ಕಿಸುತ್ತವೆ. ಸ್ವಲ್ಪಮಟ್ಟಿಗೆ ಆರ್.ಕೆ. ನಾರಾಯಣ್ ಮತ್ತು ಗೊರೂರರ ಬರವಣಿಗೆಯ ತಿಳಿಹಾಸ್ಯ ಶೈಲಿಯನ್ನು ನೆನಪಿಸುತ್ತವೆ.

### ಅಪೂರ್ವ ಪ್ರಯೋಗ

ಕನ್ನಡ ಕಾದಂಬರಿ ಲೋಕದಲ್ಲಿ ಇದೊಂದು ಅಪೂರ್ವ ಪ್ರಯೊಗ. ತೇಜಸ್ವಿಯವರೇ ಹೇಳುವಂತೆ 'ಮಾಯಾಲೋಕ'ದ ಪ್ರತಿ ಪುಟದಲ್ಲೂ ಆಕರ್ಷಣೀಯವಾಗಿ ಮುದ್ರಿತವಾಗಿರುವ ಚಿತ್ರಗಳು ಇಲ್ಲಿ ಬರುವ ಕಥೆಗೆ ಸಾಂದರ್ಭಿಕವಾಗಿ ಬಂದಿರುವ ಚಿತ್ರಗಳಲ್ಲ. ಇದೊಂದು ಕೊಲಾಜ್ (collage) ಮಾದರಿಯ ಕಲಾಕೃತಿ. ಇಲ್ಲಿನ ಕಥಾಪ್ರತಿಮೆಗಳೂ, ದೃಶ್ಯಪ್ರತಿಮೆಗಳೂ ಅಪೂರ್ವವಾಗಿ ಒಂದರ ಮೇಲೊಂದು

ಸಂಯೋಜನೆಗೊಂಡು, ಓದುತ್ತಾ ಹೋದಂತೆ ಮಾಯಾಲೋಕವನ್ನು ಸೃಷ್ಟಿಸುತ್ತವೆ. ಪುಸ್ತಕ ಕೂಡ landscape ಆಕಾರದಲ್ಲಿ 'ಫೋಟೋ ಆಲ್ಬಮ್' ಮಾದರಿಯಲ್ಲಿ ಮುದ್ರಿತವಾಗಿದೆ. ಕಣ್ಣಿಗೆ ಕಟ್ಟುವ ವರ್ಣನೆಗಳೊಡನೆ ಸಮ್ಮಿಳನಗೊಂಡು ಜೊತೆಜೊತೆಯಾಗಿ ಕಂಡುಬರುವ ಈ ದೃಶ್ಯ ಮೆರವಣಿಗೆಯ ಶೈಲಿ ತೇಜಸ್ವಿಯವರ ಪರಿಸರ ಸಂಬಂಧದ 'ಕರ್ವಾಲೋ' ಮತ್ತಿತರ ಕೃತಿಗಳನ್ನು ಓದಿದವರಿಗೆ ಚಿರಪರಿಚಿತ.

ಮಲೆನಾಡಿನ ಗುಡ್ಡ ಕಣಿವೆಗಳ ದಟ್ಟಕಾಡಿನಿಂದ ಹರಿದು ಬರುವ ಝರಿ, ತೊರೆ ಇವುಗಳ ಪಕ್ಕದ ಭೂಮಿಯಲ್ಲಿ ತೋಟ, ಗದ್ದೆ ಮಾಡಿಕೊಂಡು ಶ್ರಮಜೀವನ ನಡೆಸುವ ಜನರ ವೈವಿಧ್ಯಮಯ ಪರಿಸರದ ಅಸದೃಶ ದೃಶ್ಯಾವಳಿಗಳನ್ನು ನೋಡನೋಡುತ್ತಾ, ಈ ಮಲೆನಾಡ ಬದುಕಿನ ಮಹಾಪೂರದ ಸುಳಿಗೆ, ಸೆಳವಿಗೆ ಸಿಕ್ಕಿ ಮುಳುಗಿ ಹೋಗದೆ ಕೈಕಾಲು ಬಡಿಯುತ್ತಾ ಹೆಣಗುತ್ತಾ ಈಜುತ್ತಾ ದಡ ಸೇರುವ ಅಸಂಖ್ಯಾತ ಅಸಾಧಾರಣ ವ್ಯಕ್ತಿಗಳನ್ನೂ, ಅವರ ದಿನದಿನದ ನಲಿವು ಗೆಲುವುಗಳನ್ನೂ ಕಂಡು ಬೆರಗಾಗುತ್ತೇವೆ.

ಊರಳ್ಳಿ, ಮಕ್ಕಿಗದ್ದೆ, ಗೊಂದಲಗೇರಿ, ಕೊಚ್ಚುಮಕ್ಕಿ– ಈ ಎಲ್ಲ ಪರಿಸರಗಳ ವೈವಿಧ್ಯಮಯ ನಿವಾಸಿಗಳಂತೆಯೇ ಜೌಗಿನ ಹುಂಡುಕೋಳಿ, ಕಾಡುಹಂದಿ, ಹಾವು, ಜೇಡರಹುಳು, ಕಂತ್ರಿನಾಯಿಗಳು, ಬಾತುಮರಿಗಳು– ಇವೆಲ್ಲ 'ಮಾಯಾಲೋಕ'ದಲ್ಲಿ ಪಯಣಿಸುವ ನಮ್ಮೊಡನೆ ಸಹಪ್ರಯಾಣಿಕರು. ಈ ಪರಿಸರದಲ್ಲಿ ಅನಿವಾರ್ಯವಾಗಿ ಪದೇ ಪದೇ ಏಳುವ ವೈಮನಸ್ಯ, ಮನಃಸ್ತಾಪಗಳನ್ನು ಕಾಣುತ್ತಾ ಆ ಸಮಸ್ಯೆಗಳನ್ನು ವಿಮರ್ಶಿಸಿ, ಅವಕ್ಕೆ ತಕ್ಕ ಪರಿಹಾರದ ಬಗ್ಗೆ ಯೋಚಿಸುವ 'ಮೂರನೆಯವರಾಗಿ' ನಿಲ್ಲದೆ ನಾವು–ಓದುಗರು ನಮಗರಿವಿಲ್ಲದಂತೆಯೇ ಎಲ್ಲರೊಡನೆ ಸ್ನೇಹಿತರಾಗಿ ಸಹನಿವಾಸಿಗಳಾಗಿ ಅವರ ಜೊತೆಗಾರರಾಗಿಬಿಡುತ್ತೇವೆ. ತೇಜಸ್ವಿಯವರ ಕಥನ ಶೈಲಿ ಅಷ್ಟು ಅಪೂರ್ವವಾದದ್ದು. ಇದೊಂದು ಅತ್ಯಂತ ಪರಿಣಾಮಕಾರಿ ಬರವಣಿಗೆ.

**ಕಥೆಯ ಜಾಡು**

ಸಹ್ಯಾದ್ರಿ ಪರ್ವತದ ತಪ್ಪಲಿನಲ್ಲಿರುವ ನಾಲ್ಕಾರು ಹಳ್ಳಿಗಳ ಪರಿಸರದಲ್ಲಿ ನಡೆಯುವ ಘಟನೆಗಳ ಸುತ್ತ ಹೆಣೆದಿರುವ ಈ ಕಾದಂಬರಿಯ ಕಥೆ ನಮ್ಮ ಮುಂದೆ ತೆರೆದುಕೊಳ್ಳುವ ರೀತಿ ತೀರ ಹೊಸ ಪರಿಯದು. ತನ್ನ ತೋಟದ ಸಂಬಂಧದಲ್ಲಿ ತಂಟೆ ತಕರಾರುಗಳೆದ್ದಾಗ ಹುರುಪಿನಿಂದ ಜಗಳವಾಡಲು ಸದಾ ಸಿದ್ಧನಿರುತ್ತಿದ್ದ ಅಣ್ಣಪ್ಪಣ್ಣ ಜಗಳಗಂಟನೆಂದೇ ಕುಖ್ಯಾತನಾಗಿದ್ದ. ಊರಳ್ಳಿಯ ಈ ಅಣ್ಣಪ್ಪಣ್ಣ ಐದೆಕರೆ ಗದ್ದೆ ಇಟ್ಟುಕೊಂಡೂ ಈ ಕಾದಂಬರಿಯ ಕಥಕನ ಬಳಿ ತೋಟದ ಕೆಲಸ ಕೇಳಿಕೊಂಡು ಬಂದದ್ದಕ್ಕೆ ಕಾರಣ ಕೇಳಿದಾಗ, 'ಬತ್ತದ ಸಸಿಗೆ ಅಗೇ ಹಾಕುವುದೇ ಕಷ್ಟವಾಗಿತ್ತು, ಹುಡಿ ಅಗೆ ಹಾಕಿದರೆ ಚೋರೆ ಹಕ್ಕಿಗಳ ಕಾಟ. ನೀರಿಗೆ ಹಾಕಿದರೆ ಹುಂಡುಕೋಳಿಗಳ ಕಾಟ. ಹಕ್ಕಿಪಿಕ್ಕಿಯವರು

ಇತ್ತಲಾಗೆ ಬಂದರೆ ಅವನ್ನೆಲ್ಲಾ ಓಡಿಸಿಹಾಕೋಣ ಎಂದು ಕಾಯುತ್ತಿದೀನಿ' ಎಂದು ಉತ್ತರ ಹೇಳುತ್ತಾನೆ. ಅಣ್ಣಪ್ಪಣ್ಣನ ಈ ಮಾತುಗಳ ಸರಿಯಾದ ಅರ್ಥ ಸಂಪೂರ್ಣವಾಗಿ ಪಟ್ಟಣವಾಸಿ ಓದುಗರಿಗೆ ಆಗಬೇಕಾದರೆ ಚೋರೆಪಕ್ಕಿಗಳು, ಜೌಗಿನ ಹುಂಡುಕೋಳಿಗಳು, ಕೊಕ್ಕರೆ, ಬೆಳ್ಳಕ್ಕಿಗಳ ವಿಚಾರವಾಗಿ ಪುಸ್ತಕದ ಮೊದಲ ಮೂರು ಅಧ್ಯಾಯಗಳಲ್ಲಿ ಸಿಗುವ ರಸಭರಿತ ವರ್ಣನೆಗಳನ್ನು ಓದಿಯೇ ತಿಳಿಯಬೇಕು.

ಈ ತೋಟದ ಮಾಲೀಕ, ಕಥಕ, 'ಮಾಯಾಲೋಕ'ದ ಕಥೆ ನಮಗೆ ಹೇಳುವ ಪ್ರಧಾನ ವ್ಯಕ್ತಿ. ಆತನೊಡನೆ ಅದೃಶ್ಯ ಸ್ನೇಹಿತರಾಗಿ 'ಮಾಯಾಲೋಕ'ದ ಮ್ಯಾಜಿಕ್ ಕಾರ್ಪೆಟ್ ಮೇಲೆ ನಾವು–ಓದುಗರು ಪಯಣಿಸುವ ಕಾಡುದಾರಿಗಳು, ಭೇಟಿಯಾಗುವ, ವೈವಿಧ್ಯಪೂರ್ಣ ವ್ಯಕ್ತಿಗಳು, ತೊಡಗುವ ಸಲ್ಲಾಪಗಳು, ನೋಡುವ ಜಗಳಗಳು, ಪಡುವ ಸಂತೋಷಗಳು, ಅನುಭವಿಸುವ ಕಿರಿಕಿರಿಗಳು–ಎಲ್ಲವನ್ನೂ ಓದುವುದೇ ಒಂದು ಖುಷಿ.

ದನದ ಕಾಟ ತಪ್ಪಿಸಲು ತೋಟದ ಸುತ್ತ ಬೇಲಿ ಹಾಕಿಸಿದಾನೆ ಕಥಕ. ತೋಟದ ವಿಸ್ತೀರ್ಣ ಹದಿನೆಂಟೇ ಎಕರೆ; ಆದರೂ ಅದು ಹಳ್ಳದ ಎಡಬಲದಲ್ಲಿ ಉದ್ದಕ್ಕೆ ಇದ್ದುದರಿಂದ ಬೇಲಿ ಒಂದು ಕಿಲೋಮೀಟರ್‌ವರೆಗೂ ಇತ್ತು. ಬೇಲಿಗೆ ಮುಳ್ಳುತಂತಿ ಹೊಡೆದಿದ್ದರೂ ನೋಡಲು ಅಂದವಾಗಿ ಕಾಣುತ್ತೆ ಎಂದು ನೆಟ್ಟಿದ್ದ ದುರಾಂಟ ಎಂಬ ಗಿಡ ದಟ್ಟವಾಗಿ ಗೋಡೆಯಂತೆ ಬೇಲಿಯುದ್ದಕ್ಕೂ ಬೆಳೆದಿತ್ತು. ಕಾಡುಪ್ರಾಣಿಗಳಾದ ಉಡ, ಮೊಲ, ಕಾಡುಕೋಳಿ, ಚಿಟ್ಟಿಕೋಳಿ, ಮುಂಗುಸಿ ಇತ್ಯಾದಿಗಳು ಆ ಬೇಲಿಯಲ್ಲಿ ಎಲ್ಲೆಂದರಲ್ಲಿ ನುಸುಳಲಾರದೆ ಅಲ್ಲಲ್ಲಿ ಸಣ್ಣ ಕಿಂಡಿ ಮಾಡಿಕೊಂಡು ಓಡಾಡಿ ನೆಲ ಸವೆಸಿ ಕಾಲು ದಾರಿ ಮಾಡಿಕೊಂಡಿದ್ದವು. ಹೀಗೆ ಸಾವಧಾನವಾಗಿ ಆರಂಭವಾದ 'ಮಾಯಾಲೋಕ'ದ ಕಥೆ ಅಲ್ಲಿ ಬರುವ ಹಳ್ಳದಂತೆಯೇ ಅಂಕುಡೊಂಕಾಗಿ, ಬರುಬರುತ್ತಾ ಕೋಲಾಹಲದಿಂದ ಮುಂದುವರೆಯುತ್ತದೆ.

ಜಾತೀಯತೆ, ಮೀಸಲಾತಿ ಕೆಲಸಗಳ ರಾಜಕೀಯ ಚರ್ಚೆಗಳಲ್ಲಿ ಹಣ್ಣಾಗುವ ರಾಜಕಾರಣಿಗಳು, ಲಂಚಗುಳಿ ಅಧಿಕಾರಿಗಳು, ತಪ್ಪೋ–ನೆಪ್ಪೋ ವರದಿ ರುಚಿಕರವಾಗಿದ್ದರೆ ಸರಿ ಎನ್ನುವ ಪತ್ರಿಕಾ ಸಂಪಾದಕ, ಬಿರು ಬೇಸಿಗೆಯ ನೀರಿನ ಅಭಾವದಿಂದ ಪರಿತಪಿಸುವ ಹಳ್ಳಿಗರು, ವಿದ್ಯುತ್ ಇಲಾಖೆ, ನೀರಿನ ಇಲಾಖೆ, ಒಂದೇ ಎರಡೇ– ಕಾದಂಬರಿಯ ಪ್ರತಿಯೊಂದು ಘಟ್ಟದಲ್ಲೂ ಈ ಬಗೆಯ ನಾನಾ ಚಿತ್ರಗಳು ಕಿಕ್ಕಿರಿದಿವೆ...

ತೋಟದ ಪಕ್ಕದಲ್ಲಿ ಹರಿಯುವ ಹಳ್ಳ, ಹೇಮಾವತಿ ನದಿಯ ದಿಕ್ಕಿನಲ್ಲೇ ಹರಿಯುತ್ತದೆ. ನದಿ ಪಾತ್ರದಲ್ಲಿ ಊರಳ್ಳಿ, ಮಕ್ಕಿಗದ್ದೆ ಊರುಗಳ ನಡುವೆ ಹಲವಾರು ಬಂಡೆಗಳಿರುವುದರಿಂದ, ಮಳೆಗಾಲದ ಪ್ರವಾಹದಲ್ಲಿ ನೀರು ಸುಳಿ ಸುತ್ತಿ ಹಲವಾರು ಆಳವಾದ ಗುಂಡಿಗಳಾಗಿವೆ. ಮಳೆಗಾಲದಲ್ಲಿ ಮೊಟ್ಟೆ ಇಡಲೆಂದು ಹೊಸ ನೀರಿನ

ಹಾದಿ ಹಿಡಿದು ಮೇಲೆ ಬರುವ ಹತ್ತುಮೀನುಗಳೆಲ್ಲಾ ಹಳ್ಳ ಬೇಸಿಗೆಯಲ್ಲಿ ಬತ್ತಿದಂತೆ ಎತ್ತಲೂ ಪರಾರಿಯಾಗಲಾರದೆ ಗುಂಡಿಗಳಲ್ಲಿ ಸಿಕ್ಕಿ ಬೀಳುತ್ತವೆ. ಅವನ್ನು ಹಿಡಿಯಲು ಕೊಕ್ಕರೆ, ಬೆಳ್ಳಕ್ಕಿ, ನೀರುಕಾಗೆ ಒಮ್ಮೊಮ್ಮೆ ನೀರುನಾಯಿಗಳೂ ಸಹ ಅಲ್ಲಿ ಬರುವುದುಂಟು. ಅಣ್ಣಪ್ಪಣ್ಣನ ಪ್ರಕಾರ, ಹಿಂದೆಲ್ಲಾ ಮೊಸಳೆಗಳೂ ಇರುತ್ತಿದ್ದುವಂತೆ. ಮೀನು ಹಿಡಿಯುವ ಹಕ್ಕು ತಮ್ಮದೆಂದು ಎರಡು ಹಳ್ಳಿಯವರೂ ಜಗಳವಾಡಿದ್ದರಿಂದ, ಈ ವಿವಾದ ಪರಿಹರಿಸಲು ಪಂಚಾಯ್ತಿಯವರು ಮೀನು ಹಿಡಿಯುವುದಿದ್ದರೆ ಎರಡು ಊರಿನವರೂ ಸೇರಿಯೇ ಹಿಡಿಯಬೇಕೆಂದು ಕಟ್ಟು ಮಾಡಿದ್ದರು.

ಎರಡು ಊರಿನವರಿಗೂ ಹೀಗೆ ಶುರುವಾದ ಈ ಜಗಳ ಇಬ್ಬರೂ ಹಂಚಿಕೊಳ್ಳಬೇಕಾದ ವಿದ್ಯುಚ್ಛಕ್ತಿಗೆ, ಕುಡಿಯುವ ನೀರು ಸರಬರಾಜಿಗೆ ಹಬ್ಬಿ ವೈವಿಧ್ಯಪೂರ್ಣ ಕಥೆಯಾಗಿ ನಾನಾ ಮಜಲುಗಳಲ್ಲಿ ಮುಂದುವರೆಯುತ್ತದೆ. ಕಥೆಯ 'ಹಳ್ಳ' ಅಸದೃಶ ತಬ್ಬಿಬ್ಬು ಘಟನೆಗಳಿಂದ ತುಂಬಿ ಕಾದಂಬರಿಯುದ್ದಕ್ಕೂ ಉನ್ಮತ್ತವಾಗಿ ಹರಿಯುತ್ತದೆ.

ಗುಡುಗು, ಮಿಂಚು, ಸಿಡಿಲುಗಳಿದ್ದಾಗ ವಿದ್ಯುತ್ ಸಂಪರ್ಕ ತೆಗೆದುಹಾಕುವುದು, ಫುಟ್‌ವಾಲ್ವ್‌ನಲ್ಲಿ ನೀರು ನಿಲ್ಲದಿದ್ದರೆ ಸಕ್ಷನ್ ಪೈಪಿಗೆ ನೀರು ತುಂಬಿ ಮೋಟರ್ ಚಾಲೂ ಮಾಡುವುದು– ಇದೆಲ್ಲಾ ಮಕ್ಕಿಗದ್ದೆ ಕಮ್ಮಾರನಾದ ಇಕ್ಬಾಲ್ ಸಾಬಿಯ ಕೆಲಸ.

ಇಕ್ಬಾಲ್ ಸಾಬಿ, ಕಮ್ಮಾರಶಾಲೆಯ ಪಕ್ಕದಲ್ಲೆ ಇದ್ದ ನಲ್ಲಿ ನೀರಲ್ಲಿ ಏನೋ ಅಡ್ಡವಾಸನೆ ಬಂದಂತೆ ಕಂಡದ್ದರಿಂದ, ಬಾವಿ ನೀರನ್ನು ಪರೀಕ್ಷಿಸಿ ಏನೂ ಕಾಣದೆ ಹಳ್ಳಿಯಿಂದ ಸಾಕಷ್ಟು ದೂರ ಇದ್ದ ಹಳ್ಳದ ತಡಿಗೆ ಬಂದಾಗ ಗುಂಡಿಗಳಲ್ಲಿ ಸತ್ತುಬಿದ್ದಿದ್ದ ಅಸಂಖ್ಯಾತ ಮೀನುಗಳನ್ನು ಕಂಡು ಆಘಾತವಾದಂತೆ ನಿಂತುಬಿಡುತ್ತಾನೆ. ಯಾರೋ ಗುಂಡಿಗಳಲ್ಲಿ ಕಾರೆಕಾಯಿ ಜಜ್ಜಿ ಕದಡಿ ಆ ಗುಂಡಿಯಲ್ಲಿದ್ದ ಮೀನುಗಳನ್ನೆಲ್ಲಾ ಹಿಡಿದುಹಾಕಿದ್ದಾರೆ! 'ಹತ್ತು ಹಳ್ಳಿಯವರು ತಿಂದು ಮಿಗುವಷ್ಟು ಮೀನು ಇತ್ತು, ಸೆಟ್ಟರೆ. ಸೇರಿ ಹಿಡಿದರೆ ಪಾಲು ಮಾಡಿಕೋಬೇಕಲ್ಲ ಅಂತ ಕದ್ದು ಹಿಡಿದಿದ್ದಾರೆ...' ಎಂದು ಕೆಟ್ಟ ಬೈಗಳ ಸಮೇತ ಹಲುಬುತ್ತಾನೆ ಇಕ್ಬಾಲ್ ಸಾಬಿ.

ಮೀನು ಸಿಕ್ಕಲಿಲ್ಲ ಎನ್ನುವುದಕ್ಕಿಂತ ಮೋಸ ಮಾಡಿದರಲ್ಲಾ ಎಂಬುದು ಹೊಟ್ಟೆಯೊಳಗೆ ಕಸಿವಿಸಿ ಉಂಟುಮಾಡಿತ್ತು. ಕಾರೇಕಾಯಿ ಘಾಟಿನಲ್ಲಿ ಸಿಕ್ಕಿ ಒದ್ದಾಡುವ ಮೀನಿನ ತರ ಮಿಸುಗಾಡುತ್ತ ಊರಿನ ಜನರನ್ನು ಕರೆದು ದೂರು ಕೊಡಲು ಹಳ್ಳದ ದಂಡೆಯಿಂದ ಹಳ್ಳಿಯತ್ತ ಕಾಲು ಹಾಕುತ್ತಾರೆ ಸಾಬಿ ಮತ್ತು ಸೆಟ್ಟರು.

ಊರಳ್ಳಿಗೂ ಹೇಮಾವತಿ ನದಿಗೂ ನಡುವೆ ಇರುವ ಹಳ್ಳಿ ಮಕ್ಕಿಗದ್ದೆ. ಸಹ್ಯಾದ್ರಿ ಪರ್ವತದ ತಪ್ಪಲಿನಲ್ಲಿದ್ದ ಯಾವುಯಾವುದೋ ಹಳ್ಳಿ ಕೊಂಪೆಗಳ ಮೂಲಕ ಬಸ್ಸು ಹೋಗುತ್ತಿದ್ದುದರಿಂದ ಬಸ್ಸಿಗನುಕೂಲವಾಗಲೆಂದು ಒಳ್ಳೆ ರಸ್ತೆ ಮಾಡಿದ್ದರು. ಒಳ್ಳೆ ರಸ್ತೆ, ಮನೆಮನೆಗೆ ನಲ್ಲಿ ನೀರಿನ ವ್ಯವಸ್ಥೆ, ಇತ್ಯಾದಿ ಆಧುನಿಕ ಸೌಕರ್ಯಗಳಿರುವ ಮಕ್ಕಿಗದ್ದೆಯವರ ಮೇಲೆ ಊರಳ್ಳಿಯವರಿಗೆ ಅಸಮಾಧಾನ. ಬಸ್ಸು ಓಡಾಡಲು ಒಳ್ಳೆ ರಸ್ತೆಗಳಿದ್ದುದರಿಂದ ಅಬ್ಕಾರಿ ಡಿಪಾರ್ಟ್‌ಮೆಂಟಿನ ರೈಡಿಂಗ್ ಸ್ಕ್ವಾಡುಗಳು ಮನೆ ಜಪ್ತಿ ಮಾಡಿ ಬಟ್ಟಿಶರಾಬು ಹಿಡಿಯಲು ಹೋಗುತ್ತಿದ್ದುದರಿಂದ ರಸ್ತೆ ಅನುಕೂಲಗಳಿಲ್ಲದ ಊರಳ್ಳಿಯವರಂತೆ ನಿರಾತಂಕವಾಗಿ ಕಳ್ಳಬಟ್ಟಿ ದಂಧೆ ನಡೆಸಲು ಸಾಧ್ಯವಾಗದೆ ಮಕ್ಕಿಗದ್ದೆಯವರಿಗೆ ಊರಳ್ಳಿಯವರನ್ನು ಕಂಡು ಸಣ್ಣ ಅಸಮಾಧಾನ!

*

ಒಂದು ಕಡೆ ಎರಡು ಮೂರು ವರ್ಷಗಳು ಮಳೆ ಇಲ್ಲದೆ ಸತತ ಬರ. ಇನ್ನೊಂದು ಕಡೆ ಬತ್ತುತ್ತಿರುವ ನೀರಿನ ಒರತೆಗಳು, ಬರಡಾಗುತ್ತಿರುವ ಜೀವನದಿಗಳು. ವ್ಯವಸಾಯಕ್ಕೆ ಮತ್ತು ಕುಡಿಯುವುದಕ್ಕೆ ನೀರಿಗಾಗಿ ಪರದಾಟ. ಈ ನಡುವೆ ವಿದ್ಯುತ್ ಇಲಾಖೆಯ ಯೆರ್ರಾಬಿರ್‍ರಿ ವ್ಯವಹಾರ! ಜನಕ್ಕೆ ವಿದ್ಯುತ್ ಇಲಾಖೆಯ ಮೇಲೆ, ವಿದ್ಯುತ್ ಇಲಾಖೆಗೆ ಜನರ ಮೇಲೆ ಸಿಟ್ಟು. ವಿದ್ಯುತ್ ಇಲಾಖೆಯ ಮೇಲೆ ದೂರು ತರುವವರನ್ನೆಲ್ಲ ತಾಂತ್ರಿಕ ವಿವರಗಳ ಗೋಜಲಿನಲ್ಲಿ ಸಿಕ್ಕಿಸಿ ಬಾಯಿ ಮುಚ್ಚಿಸುವುದು ಜೂನಿಯರ್ ಇಂಜಿನಿಯರ್ ಮಲ್ಲಿಕಾರ್ಜುನನ ಮಾಮೂಲಿ ತಂತ್ರ. ಟ್ರಾನ್ಸ್‌ಫಾರ್ಮರ್ ಮೇಲೆ ಲೋಡು ಹೆಚ್ಚಾಗುತ್ತಲೂ ಅದನ್ನು ತಗ್ಗಿಸಲು ರಾತ್ರಿ ಆಗಾಗ ಒಂದು ನಿಮಿಷ ಕರೆಂಟು ತೆಗೆದು ಮತ್ತೆ ಚಾರ್ಜು ಮಾಡಲು ಷುರುಮಾಡಿದ ಈ ಮಹಾನುಭಾವ ಮಲ್ಲಿಕಾರ್ಜುನ. ರೈತರ ಪಂಪು ಸೆಟ್ಟುಗಳಿಗೆಲ್ಲಾ ಸ್ಟಾರ್ಟರ್ ಸ್ವಿಚ್ಚುಗಳು ಅಳವಡಿಸಿದ್ದುದರಿಂದ ಮತ್ತೆ ಚಾರ್ಜ್ ಮಾಡಿದಾಗ ಪಂಪು ಸೆಟ್ಟುಗಳು ಚಾಲೂ ಆಗುತ್ತಿರಲಿಲ್ಲ. ಮಲಗಿದ್ದ ರೈತರು ಮತ್ತೆ ಎದ್ದು ಸ್ಟಾರ್ಟರ್ ಸ್ವಿಚ್ ಒತ್ತಿ ಪಂಪು ಚಾಲೂ ಮಾಡಬೇಕಿತ್ತು. ನಿದ್ರೆಯಲ್ಲಿದ್ದ ಬಹಳಷ್ಟು ರೈತರಿಗೆ ಪಂಪು ನಿಂತಿರುವುದು ಗೊತ್ತೇ ಆಗುತ್ತಿರಲಿಲ್ಲ. ಗೊತ್ತಾದರೂ ಇನ್ನು ಕೆಲವರು ಏಳಲು ಸೋಮಾರಿತನ ಮಾಡಿಕೊಂಡು ಮಲಗೇಬಿಡುತ್ತಿದ್ದರು.

ಈ ತಂತ್ರವನ್ನು ಮಲ್ಲಿಕಾರ್ಜುನ ಇಲಾಖೆಯ ಬೇರೆಯವರಿಗೂ ಹೇಳಿಕೊಟ್ಟ. ಇದರಿಂದ ವಾಟೆಹಳ್ಳಿ ಮೀಸೆ ಉಗ್ರಪ್ಪ ಸ್ಯರಣೆ ಕಳೆದುಕೊಂಡ. ಅವನ ಬಾವಿ ಪಂಪು ಸೆಟ್ಟು ಎರಡೂ ಮನೆ ಹತ್ತಿರದಲ್ಲೇ ಇತ್ತು. ತನ್ನ ಮೆಣಸಿನ ಗಿಡಗಳಿಗೆ ನೀರು ಕೊಡಲು ದೃಢ ನಿಶ್ಚಯ ಮಾಡಿದ್ದ ಉಗ್ರಪ್ಪ ಹೋದ ಕರೆಂಟ್ ಬರುತ್ತಲೂ ಎದ್ದುಹೋಗಿ ಸ್ವಿಚ್ ಆನ್ ಮಾಡಿ ಬರುತ್ತಿದ್ದ. ಆದರೆ ಅವನ ಪಂಪ್ ಸೆಟ್ಟಿನ ಫುಟ್ ವಾಲ್ವ್‌ನಲ್ಲಿ ನೀರು

ಸೋರಿಹೋಗುತ್ತಿದ್ದುದರಿಂದ ಪ್ರತಿ ಸಾರಿ ಪಂಪ್ ಚಾಲೂ ಮಾಡುವಾಗಲೂ ಅವನು ಹದಿನೆಂಟು ಕೊಡ ನೀರನ್ನು ಬಾವಿಯಿಂದ ಸೇದಿ ಸಕ್ಷನ್ ಪೈಪಿಗೆ ತುಂಬಿಸಿ ಸ್ವಿಚ್ ಆನ್ ಮಾಡಬೇಕಿತ್ತು. ಹೀಗೆ ರಾತ್ರಿಯೆಲ್ಲ ನಿದ್ದೆಗೆಟ್ಟು ನೀರು ಸೇದುತ್ತಾ ಮೀಸೆ ಉಗ್ರಪ್ಪ ಮೂರು ದಿನ ಕಾಲ ಹಾಕಿದ. ಕೊನೆಕೊನೆಗೆ ಇದು ಡಿಪಾರ್ಟ್‌ಮೆಂಟಿನವರು ಬೇಕೆಂದೇ ಉದ್ದೇಶಪೂರ್ವಕವಾಗಿ ಮಾಡುತ್ತಿರುವುದು ಎಂದು ಅರಿವಾದೊಡನೆ ಕಟಕಟ ಹಲ್ಲುಕಡಿಯುತ್ತಾ ರೈತ ಸಂಘದ ಐದಾರು ಮಿತ್ರರನ್ನು ಕರೆದು ಸಮಾಲೋಚನೆ ಮಾಡಿದ. ವಿದ್ಯುತ್ ಇಲಾಖೆಯ ಉಪಟಳದಿಂದ ಅವರೂ ರೋಸಿಹೋಗಿದ್ದರು. ತಮ್ಮ ರೈತ ಸಂಘಕ್ಕೆ ಬಹಳ ದಿನಗಳಿಂದ ಯಾವ ಕಾರ್ಯಕ್ರಮವೂ ಇಲ್ಲದೆ ಅವರೆಲ್ಲ ನಿರುದ್ಯೋಗಿಗಳಂತಾಗಿದ್ದರು. ಉಗ್ರಪ್ಪನ ಕಷ್ಟ ಕೇಳಿ ಅವರೆಲ್ಲ ಡಿಪಾರ್ಟ್‌ಮೆಂಟಿನ ಅಧಿಕಾರಿಗಳಿಗೆ ನಾಲ್ಕು ತಪರಾಕಿ ತಟ್ಟಿ ಬುದ್ಧಿ ಕಲಿಸುವುದೇ ಸೂಕ್ತ ಎಂದು ಹೇಳಿಬಿಟ್ಟರು.

ತಾಲೂಕಿನ ಆಡಳಿತವನ್ನೂ, ಕುಂದುಕೊರತೆಗಳನ್ನೂ ಪರಾಮರ್ಶೆ ಮಾಡಲು ಮಂತ್ರಿಗಳು ಬರಲಿದ್ದಾರೆಂದೂ, ಎಮ್ಮೆಲ್ಲೆ ಮಾರಪ್ಪನವರೂ, ಪಟ್ಟಣ ಪಂಚಾಯ್ತಿ ಚೇರ್ಮನ್ನೂ ಅವರೊಡನೆಯೇ ಟಿ.ಬಿ.ಯಲ್ಲಿ ಕಾಣಸಿಗುವರೆಂದೂ ತಿಳಿದ ಉಗ್ರಪ್ಪ ತನ್ನ ಮಿತ್ರರೊಡನೆ ಅಲ್ಲಿ ಹಾಜರಾದ.

ಅಲ್ಲಿ ನಡೆದ ಮಾತುಕತೆಗಳಲ್ಲಿ ದಲಿತ ವರ್ಗದ ಹಳ್ಳಿಗರ ದೈನಂದಿನ ಕಷ್ಟಕೋಟಲೆಗಳ ಮೂಲ ಕಾರಣಗಳೂ, ರಾಜಕಾರಣಿಗಳ ರಾಜಕೀಯ, ಸ್ವಾರ್ಥಿ ಅಧಿಕಾರಿಗಳ ಜಾತೀಯತಾ ಮನೋಭಾವ– ಇವೆಲ್ಲದರ ವಿಶ್ವರೂಪ ದರ್ಶನವಾಗುತ್ತದೆ!

**ಬದುಕು**

'ಬದುಕು' ಒಂದು ಅಸಾಮಾನ್ಯ ಕಾದಂಬರಿ. ಜಾತೀಯ ವರ್ಗೀಕರಣ, ಬಡತನ–ಸಿರಿತನ ಮುಂತಾದ ನಾನಾ ಮಾನವನಿರ್ಮಿತ ಅಸಮಾನತೆಗಳ ತಾಪದಲ್ಲಿ ನುಚ್ಚುನೂರಾಗುವ ದಲಿತ ಕುಟುಂಬಗಳು, ಆ ಕುಟುಂಬಗಳ ಅನಕ್ಷರಸ್ಥ, ಅಮಾಯಕ, ಮುಗ್ಧ ಹೆಣ್ಣುಗಳು ಒಳಗಾಗುವ ಅಮಾನುಷ ಲೈಂಗಿಕ ದೌರ್ಜನ್ಯಗಳು– ಇವೆಲ್ಲವನ್ನೂ ಇಲ್ಲಿ ಕಾಣುತ್ತೇವೆ.

ಅಪರಿಮಿತ ಕಷ್ಟಕ್ಕೊಳಗಾಗಿ, ಕೇವಲ ಮನುಷ್ಯನಿರ್ಮಿತ ಕ್ರೂರ ಕಟ್ಟುಪಾಡುಗಳಿಂದಾಗಿ ಮೇಲ್ತರಗತಿಯ ಸ್ವಾರ್ಥ ಜನರ ದೌರ್ಜನ್ಯಕ್ಕೊಳಗಾಗುವ ದಲಿತ ಹೆಂಗಸರ ಅಮಾಯಕತೆಯನ್ನೂ ಈ ಶೂದ್ರ ಮಹಿಳೆಯರ ಎದೆಯಲ್ಲಿ ಹೆಪ್ಪುಗಟ್ಟಿರುವ ಸಂಕಟವನ್ನೂ ದಾಖಲಿಸಿ ಜನತೆಯ ಮುಂದೆ ಇಡಬೇಕೆಂಬ ಛಲದಿಂದ ಬದುಕು ಕಾದಂಬರಿ ರೂಪುಗೊಂಡಿದೆ. ಈ ದೌರ್ಜನ್ಯಗಳಿಗೆ ಕಾರಣರಾಗಿರುವವರ ಕಚ್ಚೆಹರುಕುತನ, ಕ್ರೂರ ಅಸಭ್ಯ ನಡವಳಿಕೆ, ಹಲ್ಕಟ್‌ಗಿರಿಗಳನ್ನು ಬಯಲಿಗೆಳೆಯಬೇಕೆಂಬ ದೃಢ ನಿರ್ಧಾರದಿಂದ,

ಹಠದಿಂದ ಸೋದರಿ ಗೀತಾ ರಚಿಸಿರುವ ಕಾದಂಬರಿ ಇದು. ಹೀಗೆ ಒಂದೇ ನಿರ್ದಿಷ್ಟ ಗುರಿ ಹೊತ್ತು ಅದನ್ನು ಸಾಧಿಸುವ ಛಲದಿಂದ ಮಾತ್ರ ಬರೆದಂಥ ಕಾದಂಬರಿಗಳು ಸಾಧಾರಣವಾಗಿ ಉತ್ತಮ ಕಲಾಕೃತಿಗಳಾಗುವುದಿಲ್ಲ. ಆದರೆ ಈ ಕಾದಂಬರಿ ಒಂದು ಕಲಾಕೃತಿಯೂ ಆಗಿರುವುದು ಅದರ ವೈಶಿಷ್ಟ್ಯ. ಗೀತಾ ನಾಗಭೂಷಣರ ಈ ಅದ್ಭುತ ಕಲಾಸೃಷ್ಟಿ ಕನ್ನಡ ಸಾಹಿತ್ಯ ಪ್ರಪಂಚಕ್ಕೇ ಹೊಸ ಬದುಕನ್ನು ನೀಡಿದೆ. ಮಹಿಳಾ ಸಾಹಿತ್ಯಕ್ಕೆ ಮಾತ್ರವಲ್ಲದೆ ಸಮಗ್ರ ಕನ್ನಡ ಸಾಹಿತ್ಯಕ್ಕೆ ಇದೊಂದು ಮೈಲಿಗಲ್ಲಾಗಿದೆ.

'ಬದುಕು' ಒಂದು ಅದ್ಭುತ ಕಾವ್ಯ. ದಾರುಣ ಸನ್ನಿವೇಶಗಳು ದಟ್ಟೈಸಿದ್ದರೂ ಕಾರ್ಮೋಡದ ಮಧ್ಯದ ಮಿಂಚಿನಂತೆ ಅವಿಸ್ಮರಣೀಯ ಹೃದಯಸ್ಪರ್ಶಿ ವರ್ಣನೆಗಳಿವೆ. ಇದರಲ್ಲಿ ಬರುವ ನಿಸರ್ಗ ವರ್ಣನೆಗಳು, ವ್ಯಕ್ತಿಚಿತ್ರಗಳು ಮನಮೋಹಕ.

ಓದುತ್ತಿರುವ ನಾವು ಕಷ್ಟದ ಈ ಜನರ ಬದುಕಿನಲ್ಲಿ ಒಂದಾಗಿಹೋಗುತ್ತೇವೆ. ಈ ವ್ಯಕ್ತಿಗಳು ಪುಸ್ತಕದ ಒಳಗಿದ್ದಾರೆಂದು ಪೂರ್ತಿ ಮರೆಯುತ್ತೇವೆ. ಮಲ್ಲಯ್ಯ ಜಮೇದಾರನ ಹೆಂಡತಿ ಮಲ್ಲವ್ವ ಉಣಬಡಿಸುವ ಊಟವನ್ನು ಅವಳ ಅಡುಗೆ ಮನೆಯಲ್ಲಿ ಕೂತು ತಿಂದು ತೃಪ್ತಿಪಡುತ್ತೇವೆ. ಲಿಂಗರಾಜನೊಡನೆ ಸಲ್ಲಾಪದಲ್ಲಿ ಮುಳುಗಿ ಸುಂದರ ಬಾಳಿನ ಕನಸು ಕಾಣುವ ಕಾಶಮ್ಮ ನಮ್ಮ ಆತ್ಮಗೆಳತಿಯಾಗಿಬಿಡುತ್ತಾಳೆ. ಬೆಳ್ಳಿ, ಪತರು, ಹಾಲಪ್ಪ ಇವರೆಲ್ಲ ನಮಗೆ ಆಪ್ಯಾಯರಾಗುತ್ತಾರೆ. ಈ ಎಲ್ಲ ಬಂಧುಗಳೊಡನೆ ನಮ್ಮ ಒಡನಾಟದಲ್ಲಿ ಅದೆಷ್ಟು ಸಂತೃಪ್ತಿ ಆನಂದಗಳನ್ನು ಅನುಭವಿಸುತ್ತೇವೆ! ಇವರ ಕಷ್ಟ ನಮ್ಮದಾಗುತ್ತದೆ. ಅವರ ಕಣ್ಣೀರು ನಮ್ಮ ಕೆನ್ನೆಯನ್ನು ತೋಯಿಸುತ್ತದೆ. ಅವರ ಕಷ್ಟಸುಖ ನೋವು-ನಲಿವುಗಳಲ್ಲಿ ನಾವೆಷ್ಟು ಪೂರ್ಣಭಾಗಿಗಳೆಂದರೆ ಅವನ್ನು ಮತ್ತೆ ಮತ್ತೆ ಓದಿಕೊಂಡು, ಇತರರೊಂದಿಗೆ ಹಂಚಿಕೊಳ್ಳದೆ ಇರಲು ಸಾಧ್ಯವೇ ಇಲ್ಲ.

**ತಲೆಮಾರುಗಳ ಕಥೆ**

'ಬದುಕು' ಬಹಳ ವಿಸ್ತಾರವಾದ ಕಾದಂಬರಿ. ಕಥೆಯ ಹರಹು ಐದು ತಲೆಮಾರಿನಷ್ಟು ಹರಡಿದೆ. ಮಲ್ಲವ್ವ ಮತ್ತು ಅವಳ ಗಂಡ ಮಲ್ಲಪ್ಪ ಜಮೇದಾರರದು ಮಧ್ಯಮ ವರ್ಗದ ಅನುಕೂಲ ದಾಂಪತ್ಯ. ಮಲ್ಲಪ್ಪ ಕರೀಕರೀ ಕಗ್ಗಿನ ಕಲ್ಲಲ್ಲಿ ಭಾವುಕ ಶಿಲ್ಪಿ ನಿಧಾನವಾಗಿ ಕಡೆದಿಟ್ಟ ವಿಗ್ರಹದಂತಿದ್ದ. ಅವನ ಚೆಲುವು ಹೊಟ್ಟೆಕಿಚ್ಚು ಪಡುವಂಥಾದ್ದು. ಅವರ ಮೊದಲ ಮಗಳು ಶಾಣಮ್ಮ, ಎರಡನೆಯವಳು ಕಾಶಮ್ಮ. ಕಿರಿಯ ಮಗ ಕಲ್ಯಾಣಿ. ಇವರೆಲ್ಲರಿಗೂ ಅತಿ ಪ್ರೀತಿಯ ಪತರು ಮಾಮ, ಜಮೇದಾರ ಮಲ್ಲಯ್ಯನ ಸಾಕುಮಗ. ಆಳುಮಗಳು ಮುಸ್ಲಿಂ ಹೆಂಗಸು ಹಾವುಕಚ್ಚಿ ಸಾಯುವ ಮುನ್ನ ಮಲ್ಲಯ್ಯನ ಮಡಿಲಲ್ಲಿ ಹಾಕಿದ ಈ ಹುಡುಗ ಈಗ ಮನೆಯವನೇ ಆಗಿದ್ದಾನೆ. ಶಾಣಮ್ಮ ಕಲ್ಬುರ್ಗಿಯ ಗಿರಣಿಯಲ್ಲಿ ಕೆಲಸಮಾಡುವ ಹಾಲಪ್ಪನನ್ನು ಮದುವೆಯಾಗಿ ಅವನ ಪ್ರೇಮದ

ಪುಂಡುದಿಂಬಾಗಿ ಬಾಳುತ್ತಿದ್ದಾಳೆ. ಹಾಲಪ್ಪ ಗುಣದಲ್ಲಿ ಉದಾರಿ, ತೂಕದ ಮನುಷ್ಯ. ಈ ಶಾಣಮ್ಮ ಹಾಲಪ್ಪರ ಮುದ್ದಿನ ಮಗಳೇ ಬೆಳ್ಳಿ. ಅವಳ ತಮ್ಮ ಶಿವು.

ಎಳ್ಳಮಾಸೆಗೆ ಹದಿನೆಂಟು ತುಂಬಿ ಹತ್ತೊಂಬತ್ತರ ಹರೆಯಕ್ಕೆ ಕಾಲಿಟ್ಟ ಕಾಶಮ್ಮ ಮಲ್ಲಯ್ಯ ಜಮೇದಾರನ ಮರುಚಲು ಮಗಳು. ಮಾಟವಾದ ಗದ್ದದ ಈ ಚೆಂದುಳ್ಳೆ ಹೆಣ್ಣ ಮಾರಿಯಲ್ಲಿ ಫಳ್ ಅಂತ ಹೊಳೆಯುವ ಮುತ್ತಿನ ಸಾಲು ಹೆಣೆದಿದ್ದಂಥ ಹಲ್ಲುಗಳು. ನೆತ್ತಿ ತುಂಬ ದಟ್ಟೈಸಿ ನಿಂತ ರಾಶಿರಾಶಿ ಗುಂಗುರು ಕೂದಲು. ಆ ಕಪ್ಪು ಮಾರಿಯಲ್ಲಿ ಅದೇನು ಕಳೆ!

'ನೀ ಏನು ಕರ್‍ರಗೆ ಕಾಳಿ ಹಂಗಿದ್ರೂ ನನ ಕಣ್ಣಿಗೆ ನೀನು ಲಗಸಮ ಗೊಂಬಿ' ಎಂದು ಅಪ್ಪನಿಗೆ ಅವಳನ್ನು ಕಂಡರೆ ಬಲು ಅಭಿಮಾನ. 'ಹೆಣ್ಣು ಮಕ್ಕಳು ತಂದೆ ಹಾಗಿದ್ರೆ ಮನೆಗೆ ಶುಭ ಆಗುತ್ತೆ, ಹಾಲುಕ್ಕಿ ಹಳ್ಳ ಹರೀತದೋ ನಿನ್ನ ಮನೆಯಾಗ, ಜಮೇದಾರ' ಅಂತ ಜೋಯಿಸ ಜ್ಯೋತಿರಾಮ ಹೇಳಿದ್ದ. ಆದರೆ, ಮನೆಗೆ ಭಾಗ್ಯಲಕ್ಷ್ಮಿಯಂತಿದ್ದ ಈ ಕಾಶಮ್ಮನಿಂದಲೇ ಜಮೇದಾರನ ಮನೆಗೆ ಕಷ್ಟಪರಂಪರೆಗಳು ಒದಗಿಬಂದವು.

'ಜಗನ್ಮೋಹಿನಿ' ಸಿನಿಮಾದ ಹೀರೋ ಥರ ಬಿಳೀ ಬಟ್ಟೆಯುಟ್ಟ, ಬಿಳೀ ಕುದುರೆ ಏರಿ ಬರುವ ರಾಜಕುಮಾರನ ಕನಸು ಕಾಣುತ್ತಿದ್ದಳು ಕಾಶಮ್ಮ. ಒಂದು ಬೆಳದಿಂಗಳ ರಾತ್ರಿ ಅವಳು ತನ್ನ ಮುದ್ದು ಕುರಿಮರಿಯೊಂದಿಗೆ ಹಳ್ಳ ದಾಟುತ್ತಿದ್ದಾಗ ಸಾವುಕಾರ ಗುರ್ಲಿಂಗನ ಮಗ ಲಿಂಗರಾಜ ಅವಳ ಕನಸಿನ ರಾಜಕುಮಾರನ ರೂಪದಲ್ಲಿ ಅನಿರೀಕ್ಷಿತವಾಗಿ ಅವಳ ಮುಂದೆ ಅವತರಿಸಿದ. 'ಎಂದೋ, ಎಂದೋ, ನಿನ್ನ ದರುಸನ?' ಎಂದು ಹಂಬಲಿಸಿದ್ದಕ್ಕೂ, ಅವನಾಗಲೇ ಸಿಕ್ಕಿದ್ದಕ್ಕೂ ಸರಿ ಹೋಯಿತು. ಮೊದಲ ದೃಷ್ಟಿಯಲ್ಲೇ ಇಬ್ಬರಿಗೂ ಪ್ರೇಮಾಂಕುರವಾಯ್ತು. ಒಬ್ಬರಿಗೊಬ್ಬರು ಮೈಮನಗಳನ್ನು ಒಪ್ಪಿಸಿಕೊಂಡು ಪ್ರೇಮಿಗಳಾದರು. 'ಕಾಶೀ, ನಿನಗ ನಾ ಪಿರೀತಿ ಮಾಡ್ತೀನೇ, ನಿನ್ನ ಮದುವಿ ಆಗ್ತೀನೆ, ನನ್ನ ನಂಬು' ಅಂತ ಹೇಳಿ ಹಳ್ಳ ದಾಟಿ ಹೋದ ಅವನನ್ನು ನೋಡಿ ಕಾಶಿ ದಂಗಾದಳು. ಮೇಲ್ವರ್ಗದ ಸಾಹುಕಾರರ ಮಗ ಲಿಂಗರಾಜನ ಪ್ರೇಮಬಂಧನದಿಂದ ಅವಳು ಬಿಡಿಸಿಕೊಳ್ಳಲಾರದೆ ಹೋದಳು. ಲಿಂಗರಾಜನೂ ಅವಳನ್ನು ಬಿಟ್ಟಿರದಾದ.

ಇವರಿಬ್ಬರ ಈ ಗಾಢ ಪ್ರೇಮ ಜಮೇದಾರನ ಸಂಸಾರಕ್ಕೇ ಮುಳುವಾಯಿತು. ಲಿಂಗರಾಜನ ಅಪ್ಪ ಸಾಹುಕಾರ ಜಮೇದಾರ ಮಲ್ಲಪ್ಪನನ್ನ ಮನೆಗೆ ಕರೆಸಿ, ಚೆನ್ನಾಗಿ ಉಗುಳಿ, ಮಗಳನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುವಂತೆ ಎಚ್ಚರಿಸಿದ. ಮಲ್ಲಪ್ಪ ಕಾಶಮ್ಮನಿಗೆ

ಕಾರಣ ಹೇಳದೆ ಪತರು ಜೊತೆಮಾಡಿ ಅವಳನ್ನು ಅಕ್ಕನ ಮನೆಗೆ ಕಳಿಸಿಕೊಟ್ಟ. ಹಾಲಪ್ಪ-ಶಾಣಮ್ಮ ಅವಳನ್ನು ಮಾರ್ತಾಂಡನಿಗೆ ಮದುವೆ ಮಾಡಿ ಸೊಲ್ಲಾಪುರಕ್ಕೆ ಗುಟ್ಟಾಗಿ ಸಾಗಹಾಕಿದರು. ಮಾರ್ತಾಂಡ ಹಾಲಪ್ಪನಿಗೆ ತಿಳಿದವರು ಪರಿಚಯಿಸಿದ ಮಹಾಸಾಧುವಾದ ಹುಡುಗ. ಮೊದಲ ನೋಟದಲ್ಲೆ ಕಾಶಮ್ಮ ಅವನ ಆರಾಧ್ಯದೈವವಾದಳು. ಅವನಿಗೆ ಮನೆಯವರಾಗಿ ಬೇರಾರೂ ಇಲ್ಲ. ಇವರನ್ನೇ ಮನೆಯವರೆಂದು ತಿಳಿದು, ಕಾಶಮ್ಮನನ್ನು ಕಣ್ಣಿಗೊತ್ತಿಕೊಂಡು ಮದುವೆಯಾದ.

ಆದರೆ ಕಾಶಮ್ಮನದು ವಿಷಮ ದಾಂಪತ್ಯ. ತನ್ನ ಭಾವ ಹಾಲಪ್ಪನಂಥ ಗಂಡ ತನಗೂ ಸಿಗಲಿ ಎಂದು ಆಶಿಸಿದ್ದಳು. ಮಲ್ಲಯ್ಯ ಮಲ್ಲವ್ವರಿಗೂ ಚಿಂತೆಯಾಗಿತ್ತು. ಈ ಪೆಡಸಿನ ಹುಡುಗಿಗೆ ಗರೀಬ ಗಂಡ ಸಿಕ್ಕರೆ ಏನು ಗತಿ ಅಂತ. ಆದರೆ ಮಾರ್ತಾಂಡ ಸಿಕ್ಕಿ ತೌರಿನಲ್ಲಿ ತಾಯಿ–ತಂದೆಗಳ ಮಾನ ಉಳಿದಿತ್ತು. ಆದರೆ ಅವಳ ಮನಸ್ಸು ಇನ್ನೂ ಲಿಂಗರಾಜನಲ್ಲೇ ಇದೆ. ಮನಸ್ಸೊಂದು ಕಡೆ, ಮೈಯೊಂದು ಕಡೆ ಆಗಿದೆ ಅವಳ ಸ್ಥಿತಿ!

ಇತ್ತ ಜಮೇದಾರ ತನ್ನ ಮಗಳು ಕಾಶಮ್ಮನನ್ನು ಎಲ್ಲಿಗೋ ಕಳಿಸಿದ್ದಾನೆಂಬ ಸುದ್ದಿ ಕೇಳಿ ಲಿಂಗರಾಜ ಅವಳನ್ನು ಹುಡುಕಿಸಿದ. ಎಲ್ಲೂ ಸಿಕ್ಕದೆ ನಿರಾಶನಾಗಿ, ಕಡೆಗೆ ಅವಳಿಗೆ ಮದುವೆಯಾಯಿತೆಂದು ತಿಳಿದು, ಕಾಶಮ್ಮ ತನಗೆ ಮೋಸಮಾಡಿದಳೆಂದೇ ನಂಬಿ, ಖಾಯಿಲೆಯಲ್ಲಿ ನರಳುತ್ತಿದ್ದ ತಂದೆಯ ಮಾತು ನಡೆಸಲು, ಅಪ್ಪ ಹೇಳಿದ ಇನ್ನೊಂದು ಊರಿನ ಗೌಡನ ಮಗಳು ನೀಲವ್ವನನ್ನು ಮದುವೆಯಾದ. ಅವಳಿಂದ ಒಂದು ಮಗುವೂ ಆಯಿತು. ಆದರವನಿಗೆ ಅವಳಲ್ಲಿ ಮನಸ್ಸೇ ಇಲ್ಲ. ಹೀಗೆ ಇವರದೂ ವಿಷಮ ದಾಂಪತ್ಯವೇ ಆಯಿತು.

ಹಲವು ವರ್ಷ ಕಳೆಯಿತು. ಶಿವಳ್ಳಿಯಲ್ಲಿ 'ಮೋರಂ' ಬಂತು. ಮೋರಂ ಕುಣಿತದಲ್ಲಿ ಕಲ್ಯಾಣಿ (ಕಾಶಮ್ಮನ ತಮ್ಮ) ಪತರು ಜೊತೆ ಕುಣಿದಿದ್ದನ್ನು ನೋಡಿ ಬೆಳ್ಳಿಯ ಎದೆಯಲ್ಲಿ ಖುಷಿಯ ಪಾರಿವಾಳ ಗರಿಗೆದರಿ ಹಾರಾಡಿತು. ಕೆಲವು ದಿನಗಳಲ್ಲೇ ಬೆಳ್ಳಿ ಕಲ್ಯಾಣಿಯರ ಮದುವೆ ಆಯಿತು. ಆ ಹೊತ್ತಿಗೆ ತೌರುಮನೆಗೆ ಮದುವೆಗೆ ಬಂದ ಕಾಶಿ (ಕಾಶಮ್ಮ) ದೂರದಿಂದ ತನ್ನ ಪ್ರಿಯಕರ ಲಿಂಗರಾಜನನ್ನು ಕಂಡವಳೇ, ಅವನು ತನಗೆ ಮೋಸ ಮಾಡಿಲ್ಲ ಎನ್ನುವುದು ತಿಳಿದೊಡನೆ, ಗಂಡನನ್ನು ಬಿಟ್ಟು ಓಡಿಬರುತ್ತಾಳೆ. ಆಳು ಮಕ್ಕಳ ಸಹಾಯದಿಂದ ಪ್ರೇಮಿಗಳ ಪುನರ್ಮಿಲನ ತೋಟದಲ್ಲಿ ಆಗುತ್ತದೆ.

ಲಿಂಗರಾಜನಿಗೆ ಕಾಶಮ್ಮನಲ್ಲಿ ನೈಜ ಪ್ರೇಮ. ಅವಳಿಗೆ ತೋಟದಲ್ಲೇ ಒಂದು ಮನೆ ಮಾಡಿಕೊಡುತ್ತಾನೆ. ಇದನ್ನು ಪ್ರತಿಭಟಿಸಿದ ನೀಲವ್ವನನ್ನು ತನ್ನ ಸ್ವಂತ ವ್ಯವಹಾರದಲ್ಲಿ ಕೈಹಾಕಬಾರದೆಂದು ಎಚ್ಚರಿಸುತ್ತಾನೆ. ತೋಟದಲ್ಲಿ ಕಾಶಮ್ಮನೊಡನೆ ವಾಸವಾಗಿರುವ

ತನ್ನ ಇಚ್ಛೆಯನ್ನೂ ನಿರ್ಧಾರವಾಗಿ ತಿಳಿಸುತ್ತಾನೆ. ನೀಲವ್ವ ಇದಕ್ಕೆ ಎದುರಾಡುವಂತಿಲ್ಲ. ಆದರೆ ಮಲ್ಲಯ್ಯನನ್ನು ಕರೆಸಿ ಅವನನ್ನು ಆಕ್ಷೇಪಿಸಿದಳು. ಊರುಕೇರಿಯೆಲ್ಲ ಇದೇ ಮಾತಾಯಿತು.

ನೀಲವ್ವನ ಅಪ್ಪ ಬಂದು ಮಲ್ಲಪ್ಪ ಜಮೇದಾರನನ್ನು ಕುಲದ ಹಿರಿಯರೆದುರು ಬಹಳ ಕ್ರೂರವಾದ ಮಾತುಗಳಿಂದ ಅವಮಾನಿಸುತ್ತಾನೆ. ಈ ಎಲ್ಲ ಅವಮಾನಗಳನ್ನು ತಡೆಯಲಾರದೆ ಮರ್ಯಾದೆಗಾಗಿಯೇ ಬದುಕಿದ್ದ ಮಲ್ಲಯ್ಯ ಜಮೇದಾರ ತುಂಬು ಹೊಳೆಯಲ್ಲಿ ಬಿದ್ದು ಪ್ರಾಣ ನೀಗುತ್ತಾನೆ. ಮನೆಯಲ್ಲಿ ಶೋಕದ ಹೊಳೆಯೇ ಹರಿಯುತ್ತದೆ. ಊರಿಗೆ ಊರೇ ಬಂದು ಅವನ ಅಂತಿಮ ಯಾತ್ರೆಯಲ್ಲಿ ಭಾಗವಹಿಸಿದರೂ, ಕಾಶಮ್ಮನಿಗೆ ಅದರ ಲಭ್ಯವಿಲ್ಲ. ಮನೆಗಾದ ಅವಮಾನ ತಾಳಲಾರದೆ ಅಕ್ಕನ ಮೇಲೆ ಕ್ರೋಧಗೊಂಡ ಕಲ್ಯಾಣಿ ಅವಳನ್ನು ಸಂಪೂರ್ಣವಾಗಿ ಧಿಕ್ಕರಿಸುತ್ತಾನೆ.

ಮುಂದೊಂದು ದಿನ ಪತರು, ಕಲ್ಯಾಣಿ ಮತ್ತಿತರ ಗಂಡಸರು ಸಿಂದಿ ಬನದಲ್ಲಿ ಕುಡಿಯುತ್ತಾ ಕುಳಿತಿದ್ದಾಗ ಪೊಲೀಸರ ಮನೆಯ ಆಳುಮಗ ಮುಕುಡಪ್ಪನಿಗೂ ಕಲ್ಯಾಣಿಗೂ ಮಾತಿಗೆ ಮಾತು ಹತ್ತಿತು. ಮುಕುಡಪ್ಪನ ಹೆಂಡತಿಯೇ ಅವನನ್ನು ಬಿಟ್ಟು ಇನ್ನಾರ ಜೊತೆಗೋ ಹೋಗಿದ್ದರೂ, ಅವನು ಕಾಶಮ್ಮನ ವಿಚಾರ ನೆವ ಮಾಡಿಕೊಂಡು ಮಲ್ಲಯ್ಯ ಜಮೇದಾರನ ವಂಶವನ್ನೇ ಹೀಯಾಳಿಸತೊಡಗಿದ. ಕ್ರೋಧಾವಿಷ್ಟನಾದ ಕಲ್ಯಾಣಿ ಅವನಿಗೆ ಝಾಡಿಸಿ ಒದ್ದಾಗ ತಲೆ ಕಲ್ಲಿಗೆ ತಾಕಿ ಮುಕುಡಪ್ಪ ಕೈಕಾಲು ಬಡಿದು ಸತ್ತ.

ಇದು ದೊಡ್ಡ ಖೂನಿಖತಲ್ ಕೇಸ್ ಆಯಿತು. ಗಂಡನನ್ನು ಬಿಟ್ಟು ತೋಟದ ಮನೆ ಸೇರಿದ್ದ ಕಾಶಮ್ಮ ತಮ್ಮನನ್ನು ಬಿಡಿಸಿಕೊಳ್ಳಲು ಧನಸಹಾಯ ಮಾಡುತ್ತಾಳೆ. ಆದರೆ ಹತ್ತಾರು ಜನ ಕಲ್ಯಾಣಿ ಖೂನಿ ಮಾಡಿದ್ದನ್ನ ತಾವು ಕಣ್ಣಾರೆ ಕಂಡದ್ದಾಗಿ ಸಾಕ್ಷ್ಯ ನೀಡಿದ್ದರಿಂದ ಪೊಲೀಸರು ಕಲ್ಯಾಣಿಯನ್ನು ಒದ್ದು ಕಲ್ಬುರ್ಗಿಯ ಜೈಲಿಗೆ ಹದಿನಾಲ್ಕು ವರ್ಷದ ಸಜಾ ವಿಧಿಸಿ ತಳ್ಳಿದರು...

ಬೆಳ್ಳಿ ಅನಾಥೆಯಾದಳು, ಒಂಟಿಯಾದಳು. ಮನೆತನದ ಇಡೀ ಜವಾಬ್ದಾರಿ ಅವಳ ಮೇಲೆ ಬಿತ್ತು. ಮನೆ ಮರ್ಯಾದೆ ಕಾಯುವ ವ್ರತ ತೊಟ್ಟು ಹಗಲು ರಾತ್ರಿ ದುಡಿಯತೊಡಗಿದಳು. ಮೇಲ್ವರ್ಗದ ಗಂಡಸರ ಕಣ್ಣು ಹದ್ದಿನಂತೆ ಇವಳ ಮೇಲೆರಗುತ್ತದೆ. ಗೌಡ ಇವಳ ಚೆಲುವಿಕೆ ಕಂಡು ಅವಳನ್ನು ವಶಪಡಿಸಿಕೊಳ್ಳಲು ಹರಸಾಹಸ ಮಾಡಿದರೂ ಅದಾವುದಕ್ಕೂ ಮಣಿಯದೆ ಬೆಳ್ಳಿ ಗಂಡನಿಗಾಗಿ ಕಾದಳು.

ಹದಿನಾಲ್ಕು ವರ್ಷದ ನಂತರ ಜೈಲಿನಿಂದ ಬಂದ ಕಲ್ಯಾಣಿ ಪತ್ರು ಜೊತೆಯಲ್ಲಿ ಬಡುನಡಿಗೆಯಲ್ಲಿ ಮನೆ ಸೇರಿದ. ಅಗಲಿದ್ದ ಈ ಪ್ರೇಮಿಗಳ ಪ್ರೇಮದ, ಕಾಮದ, ಕಾವಿನ ಸಮಾಗಮವನ್ನು ಲೇಖಕಿ ಗೀತಾ ಹೃದಯಂಗಮವಾಗಿ ವರ್ಣಿಸಿದ್ದಾರೆ.

ಜೈಲಿನಿಂದ ಬಿಡುಗಡೆಯಾಗಿ ಬಂದ ಕಲ್ಯಾಣಿ ಮೊದಲಿನಂತೆ ಲವಲವಿಕೆಯಿಂದಿರಲಿಲ್ಲ. ತನ್ನ ಗಂಡ ಮೊದಲಿನಂತಾಗಲಿ ಎಂದು ಬೆಳ್ಳಿ ಹಲವು ದೇವರಿಗೆ ಹರಕೆ ಹೊತ್ತಳು. ಕಲ್ಯಾಣಿ ಜೈಲು ಸೇರಿದಾಗ ಬಸುರಿಯಾಗಿದ್ದ ಬೆಳ್ಳಿ ಹಡೆದ ಹುಡುಗ ಅಜ್ಜಿ ಶಾಣಮ್ಮನ ಮನೆಯಲ್ಲೆ ಬೆಳೆದು ತಂದೆ ಜೈಲಿಗೆ ಹೋಗಿಬಂದಿದ್ದನೆಂಬ ಹೀನಾಯದಿಂದ ಅವನಿಂದ ದೂರದೂರವೇ ಉಳಿದ. ಅವನ ಒಡಹುಟ್ಟಿದ ಇನ್ನೊಬ್ಬ ಸನ್ಯಾಸಿಯಾಗುತ್ತಾನೆ. ಕಿರಿಮಗಳು ಸುಕ್ಕವ್ವ ಮದುವೆಯಾಗಿ ತಂದೆತಾಯಿಯರ ಮನೆಯಲ್ಲೆ ಅವರಿಗೆ ಆಧಾರವಾಗಿರುತ್ತಾಳೆ. ಅವಳ ಮಗುವಿನ ಆಟಪಾಟ ನೋಡಿ, ತೊದಲು ನುಡಿ ಕೇಳಿ ಕಲ್ಯಾಣಿ ಎಲ್ಲ ಮರೆತು ಮದಲಿಂಗ ಹುಮ್ಮಸ ಪಟ್ಟುಕೊಳ್ಳುತ್ತಾನೆ. ಹೀಗಿರುವಲ್ಲಿ, ಒಂದು ದಿನ ಕಲ್ಯಾಣಿಗೆ ಅವನಪ್ಪ ಮಲ್ಲಯ್ಯ ಕನಸಿನಲ್ಲಿ ಕಾಣಿಸಿಕೊಂಡು ಕರೆದಂತಾಗುತ್ತದೆ. ಅದರಂತೆ ಅವನು ಹೆಂಡತಿ ಬೆಳ್ಳಿ ಮತ್ತು ಮೊಮ್ಮಗಳೊಡನೆ ಶ್ರೀಶೈಲಕ್ಕೆ ಯಾತ್ರೆ ಹೋಗುತ್ತಾನೆ. ಅಲ್ಲಿಂದ ಹಿಂತಿರುಗುವಾಗ ಬಸ್ಸಿನ ಅಪಘಾತಕ್ಕೆ ಈಡಾಗಿ ಮೂವರೂ ಮಲ್ಲಯ್ಯನ ಪಾದ ಸೇರುತ್ತಾರೆ.

ಪತರು ಮತ್ತು ಅವನ ಹೆಂಡತಿ ನಜಮಾರ ಸಜ್ಜನಿಕೆ ಮತ್ತು ದುಡಿತಗಳಿಂದಾಗಿ ಮಲ್ಲಯ್ಯ ಜಮೇದಾರನ ಮನೆತನ ಹಿಂದಿನ ವೈಭವದ ಸ್ಥಿತಿಗೆ ಬರತೊಡಗುತ್ತದೆ. ಅನ್ಯಜಾತೀಯನಾದರೂ ಮನೆಗೆ ಹಿರಿಯಣ್ಣನಂತಿದ್ದ, ಬೆಳ್ಳಿಯ ಪ್ರೀತಿಯ ಪತ್ರು ಮಾಮನಿಗೆ ಕಲ್ಯಾಣಿ ಕೃತಜ್ಞತೆಯಿಂದ ತಮ್ಮ ಆಸ್ತಿಯಲ್ಲಿ ಪಾಲು ಕೊಟ್ಟಿರುತ್ತಾನೆ. ಕಾಶಮ್ಮ ತನ್ನನ್ನು ತ್ಯಜಿಸಿ ಹೊರಟುಹೋದಮೇಲೆ ವಿರಕ್ತನಾಗಿ ಎಲ್ಲೆಲ್ಲೋ ಅಲೆಯುತ್ತಿದ್ದ ಮಾರ್ತಾಂಡ ಕಟ್ಟಕಡೆಗೆ ಪತರುವನ್ನು ಕಂಡಾಗ ಕಾಶಮ್ಮನನ್ನು ಕಡೇಬಾರಿಗೊಮ್ಮೆ ನೋಡಬಯಸುವ ಆಸೆಯನ್ನು ಹೇಳಿಕೊಳ್ಳುತ್ತಾನೆ. ಪತರು ಅವನನ್ನು ತೋಟದ ಮನೆಗೆ ಕೊಂಡೊಯ್ದು ಅವರಿಬ್ಬರನ್ನೂ ಭೇಟಿ ಮಾಡಿಸುತ್ತಾನೆ. ಬರಗಾಲದ ಭಾವಿಯಂತಿದ್ದ ಅವನ ಕಣ್ಣಲ್ಲಿ ಬೆಳಕು ಫಕ್ಕನೆ ಧಾವಿಸಿ ಬಂತು, ಸುಟ್ಟು ಕರಕಾಗಿದ್ದ ಅವನ ತುಟಿಗಳಲ್ಲಿ ಮುಗುಳುನಗೆ ಅರಳಿತು. ದುಃಖ ತಡೆಯಲಾರದೆ ಅವಳು ಭೋರ್ಗರೆದು ಅತ್ತಾಗ ಅವಳ ಮುಖ ಸವರಿ ಸಂತೈಸಿ ಮಾರ್ತಾಂಡ ಕಣ್ಮರೆಯಾಗುತ್ತಾನೆ.

**ಜೋಗಿಣಿಯ ಕಥೆ**

ಈ ಮೇಲೆ ಹೇಳಿದ ಕಥೆ ಮಲ್ಲಯ್ಯ ಜಮೇದಾರನ ಮತ್ತು ಅವನ ಸಂತತಿಯ ಕಥೆಯಾದರೆ, ಬದುಕು ಕಾದಂಬರಿಯಲ್ಲಿ ಆ ಸಮಾಜಕ್ಕೆ ಸಂಬಂಧಿಸಿದ ಹಲವಾರು

ಇತರ ಕಥೆಗಳು ಕಾದಂಬರಿಯ ಉದ್ದಕ್ಕೂ ಹಾಸುಹೊಕ್ಕಾಗಿ ಹೆಣೆದುಕೊಂಡಿವೆ. ಅವುಗಳಲ್ಲಿ ಜೋಗಿಣಿಯರ ಕಥೆಗಳು ಕರುಳು ಕರಗಿಸುವಂತಿವೆ (ಜೋಗಿಣಿ ಮಾಡುವುದು ಎನ್ನುವುದನ್ನು ಕರ್ನಾಟಕದ ಕೆಲವು ಕಡೆ ಬಸವಿ ಬಿಡುವುದು ಎನ್ನುತ್ತಾರೆ). ಹರುಕು ಮುರುಕು ಜೋಪಡಿಗಳಲ್ಲಿ ಶತಶತಮಾನಗಳಿಂದ ವಾಸಿಸುತ್ತಿರುವ ಕೆಳಜಾತಿಯ ದೀನದರಿದ್ರರ ತಲೆಮಾರುಗಳ ಕತೆಗಳು ಇವು. ದೀನಾತಿದೀನರ ಕತೆಗಳು ಮಾತ್ರವಲ್ಲ, ಬದುಕಿಯೂ ಸತ್ತಂತೆ ತಲೆಮಾರುಗಳಿಂದ ಬಂದ ರೂಢಿಯಂತೆ ಶ್ಯಾವು ಹೆಂಗಸಾಗಿ ಹುಟ್ಟಿದ ಮಾತ್ರಕ್ಕೇ ತಂದೆತಾಯಿಯರು ಹರಕೆಗೆ ಕಟ್ಟುಬಿದ್ದು ಮಾಪುರದೇವಿಯ ಹೆಸರಲ್ಲಿ ಜೋಗಿಣಿಯರಾಗಿ ಅಮಾನುಷವಾಗಿ ಸಾರ್ವಜನಿಕವಾಗಿ ಅವಮಾನಿತರಾಗುವ ಬಾಲೆಯರ ಕರುಣ ಕಥೆಗಳು ಇವು. ಇಂಥ ಅಮಾನುಷ ಪದ್ಧತಿಯಲ್ಲಿ ಸಿಕ್ಕಿಕೊಂಡು ತಮ್ಮ ಇಡೀ ಜೀವನವನ್ನು ಅದಕ್ಕೆ ಬಲಿಕೊಟ್ಟವರು ನೂರಾರು ಮಂದಿ. ಈಗಲೂ ಈ ಪದ್ಧತಿ ಪೂರ್ತಿಯಾಗಿ ಹೋಗಿಲ್ಲವೆಂದು ಕೇಳಿದ್ದೇನೆ. ಆದರೆ, ಅಂಥ ಪರಿಸ್ಥಿತಿಯಲ್ಲಿ ಸಿಲ್ಲುಕಿಯೂ ಅದರಿಂದ ಸಿಡಿದೆದ್ದು ಬಂದ ದಿಟ್ಟ ಹೆಣ್ಣು ತುಳಜಾಳ ಕಥೆ ಅತ್ಯಂತ ಮಾರ್ಮಿಕವಾಗಿದೆ.

ಚುಂಚೂರು ಹತ್ತಿರದ ಜಂಬಗಿ ಹಳ್ಳಿಯ ಹೊಲೆಮಾದಿಗರ ಕುಲದೇವತೆ ಚುಂಚೂರು ಮಾಪುರತಾಯಿ. ಆ ದೇವತೆ ಹೆಸರಲ್ಲಿ ಹೆತ್ತವರು ಮಾಡಿಕೊಂಡ ಹರಕೆಗೆ ಹರೆಯದ ಹೆಣ್ಣುಮಕ್ಕಳು ಬಲಿಯಾಗುತ್ತಿದ್ದರು. ದೇವಿಯ ಹೆಸರಲ್ಲಿ ಕಳಸಪ್ಪನ ಮಗಳು ತುಳಜ ಜೋಗಿಣಿಯಾದಳು. ಜಂಬಗಿಯ ಮುದಿ ಜೋಗಿಣಿ ನಿಂಬವ್ವಾಯಿ ತುಳಜಾಗೆ ಅತ್ತುಕೊಂಡು, ಜೋಗಿಣಿಯಾಗಕ್ಕಿಂತಾ ವಿಷತೊಗೊಂಡು ಸಾಯುವುದು ವಾಸಿ ಎಂದು ಹೇಳಿದಳು.

ಕಣ್ಣೀರು ಮಿಡಿದು, ನಿಮ್ಮಪ್ಪನ ಮಾತಿಗೆ ನೀನು ಜೋಗಿಣಿ ಆಗಬೇಡವ್ವಾ ಎಂದು ಮುದಿ ಜೋಗಿಣಿ ಎಚ್ಚರಿಸಿದಾಗ ಹದಿಹರೆಯದ ಮುಗ್ಧೆ ತುಳಜಾ 'ಹರಕೆ ತೀರಿಸಲಿಲ್ಲಾ ಅಂದರೆ ಮಾಪುರತಾಯಿ ಊರ ಮಂದಿ ಮೈಮೇಲೆಲ್ಲಾ ದೊಡ್ಡ ಬೇನೆ ತರಿಸಿ ಗಂಡಸರ ಗಂಡಸುತನ ಕಳೆದು ಮನೆಯಲ್ಲಿ ರಕ್ತದ ಹೊಳೇನೇ ಹರಿಸುತ್ತಾಳೆ' ಅಂತ ಕತೆ ಮಾಡಿ ಹೇಳ್ತಾರಲ್ಲವ್ವ ಎಂದು ಕೇಳಿದಳು. ಆಗ ಮುದಿ ಜೋಗಿಣಿ ಹಣೆಹಣೆ ಬಡಿದುಕೊಂಡು, 'ಅದೆಲ್ಲ ಸುಳ್ಳು ಕಣೆ ಪೋರಿ, ನಾ ಹ್ಯಾಂಗ ನಿನಗೆ ಬಿಡಿಸಿ ಹೇಳಲಿ, ನೀನೇ ವಿಚಾರ ಮಾಡು. ಚುಂಚೂರು ದೇವತೆ ಅದು ಹೆಣ್ಣು ದೇವತೆ, ಮದುವೆ ಮಾಡ್ಕೊಂಡು ಗಂಡ ಹೆಂಡತಿಯಾಗಿ ಬಾಳುವೆ ಮಾಡಬೇಡ ಅಂತ ಯಾವ ದೇವತೆ ಹೇಳುತ್ತೆ? ಮಾಪುರ ತಾಯಿಗೆ ಮಾತ್ತಾಡೂಕ್ಕೆ ಬಂದಿದ್ರೆ ಈ ಹಲ್ಕಟ್ ಗಂಡಸರ ಕಚ್ಚೆ ಕಳೆದು ಕುಂಡಿ ಮೇಲೆ ಒದ್ದು ಹೇಳ್ತಿತ್ತು, ಇದೆಲ್ಲ ನನ್ನ ಮಾತುಗಳಲ್ಲಾ ಕಣ್ರೋ... ನನ್ನ

ಮೇಲೇ ತಪ್ಪು ಹಾಕ್ತೀರೇನೋ ಬದ್ಮಾಸುಗಳ್ರಾ, ಎಂದು ಅವರ ಮುಖದ ಮೇಲೆ ಉಗುಳುತಿತ್ತು. ದೇವರಿಗೆ ಮಾತು ಬರೋಲ್ಲಾ ಅಂತ ಈ ಮೇಲ್ಜಾತಿ ಗಂಡಸರು ಅದರ ಗೈರುಫಾಯಿದಾ ತೊಗೋತಿದಾರವ್ವಾ' ಅಂತ ಹೇಳಿದ ಬುದ್ಧಿ ಮಾತು ತುಳಜಾ ಬದುಕಿನ ದಿಕ್ಕನ್ನೆ ಬದಲಾಯಿಸಿತು.

ತುಳಜವ್ವ ರಾತ್ರೋರಾತ್ರಿ ವಿಚಾರ ಮಾಡಿ ಕಡೆಗೊಂದು ನಿರ್ಧಾರಕ್ಕೆ ಬಂದು ಮುಂಜಾನೆ ಅಪ್ಪನ ಮುಂದೆ ನಿಂತು ತಾನು ಊರಸೂಳೆಯಾಗಿರುವುದಿಲ್ಲವೆಂದು ಅಳುತ್ತಾ ಬೇಡಿಕೊಂಡಳು. ಅಪ್ಪ ಅಮ್ಮನಿಗೂ ಅವಳನ್ನು ಜೋಗಿಣಿ ಮಾಡುವುದು ಇಷ್ಟವಿಲ್ಲ, ಆದರೆ ದೇವಿಗೆ ಮಾಡಿಕೊಂಡ ಹರಕೆಗೆ ಕುಲಸ್ಥರ ಶಾಸ್ತ್ರ ನೇಮ ರೀತಿರಿವಾಜಿಗೆ ಕಟ್ಟುಬಿದ್ದು ಜೋರು ಜಬರ್ದಸ್ತಿನಿಂದ ತುಳಜಾಳ ಗೋಳು ಕಿವಿಗೆ ಹಾಕಿಕೊಳ್ಳದೆ ಅವಳನ್ನು ಜೋಗಿಣಿ ಮಾಡಿಯೇಬಿಟ್ಟರು.

ಬ್ಯಾಡಾಬ್ಯಾಡಾ ಅಂತಾನೇ ಸಾವ್ಕಾರನ ಹಾಸಿಗೇಲಿ ಹದಿನಾರು ವರ್ಷದ ತನ್ನ ಮೈಯ ಮೀಸಲನ್ನು ಮುರಿಸಿಕೊಂಡ ತುಳಜಾಗೆ ಆರೆಂಟು ತಿಂಗಳಾದರೂ ಈ ಬದುಕು ಒಗ್ಗಲೇ ಇಲ್ಲ. ಅವಳ ಹಾಡಿನ ದನಿಗೆ ಮೈಮಾಟಕ್ಕೆ ಮಾರಿಯ ಚೆಲುವಿಕೆಗೆ ಮರುಳಾದ ಹುಸೇನಪ್ಪ ಅವಳನ್ನು ಒಂದು ರಾತ್ರಿ ಸೇವೆಗೆ ಕರೆದನು. ರಾತ್ರಿಯೆಲ್ಲ ಅವಳಿಂದ ದೂರ ಕುಳಿತು ಅವಳ ಬದುಕಿನ ಕತೆ ಕೇಳಿ 'ನೀನು ನನ್ನ ಹೆಂಡತಿಯಾಗು' ಎಂದು ಕೇಳುತ್ತಾನೆ. 'ನಿನ್ನ ಹೆಂಡತಿಯಾಗಲು ನಾನು ಲಾಯಕ್ ಆದವಳಲ್ಲ ನನಗಾ ಯೋಗ್ಯತೆಯೇ ಇಲ್ಲ' ಎಂದು ಅವಳು ಅವನ ಕಾಲಿಗೆ ಬಿದ್ದು ಅತ್ತಾಗ, 'ನಿನ್ನೊಳಗಿನ ಆತ್ಮ ಪವಿತ್ರ ಇದೆಯಲ್ಲ, ಅಷ್ಟು ಸಾಕು, ಬರಿ ಖಂಡ ಎಲುಬುಗಳ ಮೇಲೆ ತೊಗಲಿನ ಹೊದಿಕೆ ಅಷ್ಟೆ. ಈ ಮೈನಲ್ಲೇನಿದೆ, ಆಮೇಲದು ಮಣ್ಣು ಸೇರಿ ಕೊಳೆತುಹೋಗ್ತದೆ. ಇದರ ಪಾಪ ಪುಣ್ಯ ಕಟ್ಕೊಂಡು ನಮಗೇನಾಗ್ಬೇಕು, ನಾಳೆ ನಾವಿಬ್ಬರೂ ಬಂಬೈಗೆ ಹೋಗೋಣಾ' ಅಂತ ಅವಳನ್ನ ಒಪ್ಪಿಸಿ ಅವಳೊಡನೆ ಮುಂಬೈ ಸೇರಿದ. ಅಲ್ಲಿ ಅವರಿಬ್ಬರೂ ಮದುವೆಯಾಗುತ್ತಾರೆ.

ಮೂರು ವರ್ಷದ ಮೇಲೆ ಅವಳು ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಮತ್ತೆ ತನ್ನೂರಿಗೆ ತಾಯಿ-ತಂದೆಯರನ್ನು ನೋಡೋಕ್ಕೆ ಹುಸೇನನೊಂದಿಗೆ ಬಂದಳು. ಸಂಭ್ರಮದಿಂದ ಬಂದ ಅವರಿಗೆ ಸಿಕ್ಕಿದ್ದು ಸ್ವಾಗತವಲ್ಲ, ಮೇಲ್ಜಾತಿಯವರ ಆಗ್ರಹ, ಇವರ ಗುಡಿಸಲಿಗೆ ಅವರು ಹಚ್ಚಿಸಿದ ಬೆಂಕಿ!

ಜೋಗಿಣಿ ಕೊರಳಿಗೆ ತಾಳಿ ಕಟ್ಟಕ್ಕೆ ಅವನಿಗೆ ಬೇರೆ ಹೆಣ್ಣುಗಳು ಸಿಕ್ಕಲಿಲ್ಲೇನು' ಎಂದು 'ಬಿಕನಸಿಗಿ ತಂದು ನಡು ಮನೆಯಾಗಿಟ್ಟರಂತ, ಹಂಗಾಯ್ತು' ಅಂತ ಒಂದು ಗಾದೇನೂ ಹೇಳಿ 'ಹಳಸಿದ್ದಕ್ಕೆ ಹಸಿದಿದ್ದಕ್ಕೆ ಗಂಟು ಬಿದ್ದಿದ್ದಾನೆ' ಅಂತೆಲ್ಲ ಕೂಗಾಡಿ,

ಸಾವುಕಾರ ಪೂಜಾರಿಗೆ ಹೇಳಿಕಳಿಸಿದ. ಆಗ ಅವರ ನಡುವೆ ನಡೆದ ಸಂಭಾಷಣೆ ತಲೆತಲಾಂತರದಿಂದ ಅಲ್ಲಿ ನಡೆದು ಬಂದಿರುವ ಅನಾಚಾರದ ಮೇಲೆ ಬೆಳಕು ಚೆಲ್ಲುತ್ತದೆ. 'ನಿನ್ನ ಗುಡಿಯಲ್ಲಿನ ಮಾಪುರತಾಯಿ ಚೆಲುವಿನ ಪೋರಿಗಳಿಗೆ ಜೋಗಿಣಿ ಬಿಡು ಅಂತ ಕೇಳುತ್ತಾಳೇನೋ' ಎಂದು ಪ್ರಶ್ನಿಸಿದ ಗೌಡನಿಗೆ ಈ ಪೂಜಾರಿ ವ್ಯಂಗ್ಯನಗೆಯಿಂದ ಹೀಗಂತಾನೆ: 'ಪಾಪ, ಅದೇನೂ ಹೇಳೊಲ್ಲ. ಯಾವ ಹುಡುಗೀ ಮೇಲೆ ನಿಮ್ಮ ಮನಸ್ಸು ಬಿತ್ತೋ ಅದನ್ನು ನೀವೆ ನನ್ನ ಕರೆಸಿ ಹೇಳ್ತಿದ್ರಲ್ಲಾ, ಶುಕ್ರವಾರ ಸೇಂದಿ ಕುಡಿಸಿ, ದೇವಿ ಸವಾರಿ ಬಂದಾಳೆಂದು ಹೇಳಿ ನಿಮ್ಮ ಮಾತುಗಳನ್ನ ಆ ದೇವಿ ಹೇಳಿದಾಳೇಂತ ನಾ ಊರ ಮಂದೀಗೆ ಹೇಳ್ತೀನಿ. ಆ ಮಾತನ್ನ ಈ ಹುಂಬರು ನಂಬ್ತಾರೆ...' ಆಗ ಸಾವುಕಾರ 'ಈ ತುಳಜಾ ಅಂಥ ಪೋರಿಗಳು ದೇವರಿಗೆ ವಿರುದ್ಧ ನಿಂತು ನಮ್ಮ ರೀತಿ ರಿವಾಜು, ಶಾಸ್ತ್ರ ಸಂಪ್ರದಾಯ ಉಲ್ಲಂಘಿಸಿದರೆ ನಮ್ಮ ಕಿಮ್ಮತ್ತೇನು ಉಳಿಯುತ್ತೋ' ಅಂದ. ಜಂಬಗಿ ಹಳ್ಳಿ ಹೊಲಗೇರೀಲಿ ಸಂಜೆ ಡಂಗುರ ಸಾರಿಸಿ ಗುಡಿಯ ಪಂಚಾಯ್ತಿ ಸೇರಿಸಿ, ಪರಪ್ಪ ಮತ್ತು ಅವನ ಹೆಂಡತಿಯನ್ನು ವಿಚಾರಣೆಗೆ ಗುರಿಪಡಿಸಿ, ನಿನ್ನ ಮಗಳು ಗರತಿ ಗಂಗಮ್ಮನ ಹಾಗೆ ಸಂಸಾರ ಮಾಡೋದು ತಪ್ಪು, ಆ ದೇವಿಗೆ ಕೋಪ ಬಂದಿದ್ದರಿಂದಲೇ ನಿನ್ನ ಗುಡಿಸಲು ಸುಟ್ಟಿತು, ಈಗಲಾದರೂ ನಿನ್ನ ಮಗಳು ಜೋಗಿಣಿಧರ್ಮವನ್ನು ಪಾಲಿಸಬೇಕು, ಇಲ್ಲದಿದ್ದರೆ ಊರುಬಿಟ್ಟು ಹೋಗಬೇಕು ಎಂದಾಗ, ತುಳಜಾ ಸೆಟೆದು ನಿಂತು ಎಲ್ಲರನ್ನೂ ವಿರೋಧಿಸಿ ಅವಳ ಅಪ್ಪ ಅಮ್ಮನನ್ನೂ ಕರೆದುಕೊಂಡು ಊರು ಬಿಟ್ಟು ಹೊರಟುಹೋಗುತ್ತಾಳೆ.

**ಅವಲೋಕನ**

'ಮಾಯಾಲೋಕ' ಮತ್ತು 'ಬದುಕು' ಕನ್ನಡದ ಎರಡು ವಿಶಿಷ್ಟ ಕಾದಂಬರಿಗಳು. ಇವೆರಡನ್ನೂ ಒಟ್ಟಿಗೆ ಸಮೀಕ್ಷಿಸುವ ಸಂದರ್ಭ ಒದಗಿ ಬಂತು. ಅವರೆಡನ್ನೂ ತುಲನಾತ್ಮಕವಾಗಿ ನೋಡಿದಾಗ ಕಾಣುವ ಸಾದೃಶ್ಯ-ವೈದೃಶ್ಯಗಳು ತುಂಬ ಸ್ವಾರಸ್ಯಕರವಾಗಿವೆ. ಅಲ್ಲಿ ಕಾಣುವ ವೈದೃಶ್ಯಗಳ ಪರಿಣಾಮವಾಗಿ ಇದನ್ನು ಒಂದು study in contrasts ಎಂದೂ ಅನ್ನಬಹುದು. ಈ ಎರಡು ಕಾದಂಬರಿಗಳಲ್ಲೂ ಕಂಡುಬರುವುದು ಸಮಾಜದ, ಪರಿಸರದ, ವಿವಿಧ ಮುಖಗಳು. 'ಮಾಯಾಲೋಕ' ನಿತ್ಯಜೀವನದ ವಾಸ್ತವತೆಯ ಮೇಲೆ ಮಾಯೆಯ ಮುಸುಕು ಹೊದಿಸಿದರೆ, 'ಬದುಕು' ನಿತ್ಯಜೀವನದ ಮೇಲಿನ ಮುಸುಕನ್ನು ಕಿತ್ತೊಗೆದು ಅದನ್ನು ಬತ್ತಲಾಗಿ ತೋರಿಸುತ್ತದೆ.

ನಾಲ್ಕು ದಶಕಗಳ ಹಿಂದಿನಿಂದ ಹಳ್ಳಿಯಲ್ಲಿ ನೆಲಸಿ ಅಲ್ಲಿನ ಜನರ ದಿನನಿತ್ಯದ ಬದುಕಿನಲ್ಲಿ ಒಂದಾಗಿ, ಸ್ಥಳೀಯ ಜನರ ಕಷ್ಟಕೋಟಲೆಗಳನ್ನು ಹತ್ತಿರದಿಂದ ಗಮನಿಸಿ, ವಿಮರ್ಶಿಸಿ, ಅವರ ಬಗ್ಗೆ ಬರೆಯುತ್ತಿದ್ದ ತೇಜಸ್ವಿಯವರು ದಲಿತ ವರ್ಗ, ಕೆಳವರ್ಗ, ರೈತವರ್ಗ- ಈ ಎಲ್ಲ ಗುಂಪುಗಳ ಮಧ್ಯದಲ್ಲಿನ ಜಾತಿಭೇದ, ಪರಸ್ಪರ ಕೋಪ-

ತಾತ್ಸಾರಗಳು, ಪ್ರೀತಿ–ವೈಮನಸ್ಯಗಳು ಎಲ್ಲದರ ಬಗ್ಗೆ ಅಂತಃಕರಣಪೂರ್ವಕವಾಗಿ, ತಮ್ಮ ಅನನ್ಯ ಹಾಸ್ಯಮಿಶ್ರಿತ ಶೈಲಿಯಲ್ಲಿ ಬರೆದಿದ್ದಾರೆ. ಪರಿಸರವಾದಿಯಾದ ಅವರು ಬರೆದ 'ಪರಿಸರದ ಕತೆ' ಮತ್ತು 'ಕರ್ವಾಲೋ' ಎರಡರಲ್ಲೂ ನಿಸರ್ಗ ಸೌಂದರ್ಯದ ತೊಟ್ಟಿಲಾದ ಪಶ್ಚಿಮ ಘಟ್ಟಗಳ ಪರಿಸರದಲ್ಲಿನ ಕಾಡಿನ ನಿಶ್ಶಬ್ದ, ಕಾಡುಪ್ರಾಣಿಗಳ ಗೌಪ್ಯತೆ, ಅವುಗಳ ನಿಗೂಢತೆ ಇವುಗಳನ್ನು ಕುರಿತು ಬರೆದಿದ್ದಾರೆ. ಈ 'ಮಾಯಾಲೋಕ'ದ ಪರಿಸರವೂ ಅದೇ ಸಹ್ಯಾದ್ರಿಯ ತಪ್ಪಲಿನಲ್ಲಿರುವ ನಾಲ್ಕು ಹಳ್ಳಿಗಳದ್ದೇ ಆಗಿದ್ದರೂ ಇಲ್ಲಿ ದಟ್ಟೈಸಿರುವುದು ಒಂದು ಪೇಟೆಬೀದಿಯ, ರಾಜಕೀಯದ, ಗೊಂದಲದ ವ್ಯವಹಾರ. ಇಲ್ಲಿ ನಾವು ಕಾಣುವುದು ಜಾತೀಯತೆ, ಮೀಸಲಾತಿ, ರಾಜಕೀಯ ಪುಢಾರಿತನ; ಮೇಲ್ವರ್ಗದವರಿಂದ ಕೆಳವರ್ಗದವರು ಅನುಭವಿಸುವ ಶೋಷಣೆ, ಆಡಳಿತದ ಮೇಲ್ವರ್ಗದವರ ಲಂಚಗುಳಿತನ–ಇತ್ಯಾದಿ. ಈ ದೃಷ್ಟಿಯಿಂದ ಇದೊಂದು ರಾಜಕೀಯ ವಿಡಂಬನೆ ಕೂಡ. ಇಲ್ಲಿ ನಾವು ಕಾಣುವುದು ಒಂದು ಪ್ರವಾಹದ ಮೇಲಿನ ತೆರೆಗಳು, ಸುಳಿಗಳು ಇದ್ದಂತೆ. ಆದರೆ 'ಬದುಕು' ಒಂದು ಜ್ವಾಲಾಮುಖಿ. ತಲೆತಲಾಂತರದಿಂದ ಸಮಾಜದ ಅತಿ ಕೆಳವರ್ಗದ ಜನರಲ್ಲಿ ಹುದುಗಿದ್ದ ಸಂಕಟ ಬೇನೆಗಳು ಇಲ್ಲಿ ಸ್ಫೋಟಗೊಂಡಿವೆ.

ಈ ಇಬ್ಬರೂ ಪ್ರತಿಭಾನ್ವಿತ ಲೇಖಕರು ಬಳಸುವ ಭಾಷಾಶೈಲಿ ತೀರ ವಿನೂತನವಾದದ್ದು, ವಿಭಿನ್ನವಾದದ್ದು. ತೇಜಸ್ವಿಯವರ ಪ್ರಕೃತಿ ವರ್ಣನೆಗಳು ಶಿಷ್ಟಭಾಷೆಯಲ್ಲಿದ್ದರೂ, 'ಮಾಯಾಲೋಕ'ದ ನಿವಾಸಿಗಳು ಆಡುವ ಮಾತುಗಳು ಅವರವರ ಆಡುಮಾತಿನಲ್ಲೇ ಇವೆ. ಕೆಲವು ಕಡೆ ವಸ್ತು ಬರಡಾಗಿದ್ದರೂ, ಇವರ ಭಾಷೆಯ ಶಕ್ತಿ ನಮ್ಮನ್ನು ಮುಂದೊಯ್ಯುತ್ತದೆ, ಕತೆಯನ್ನು ಓದಿಸಿಕೊಂಡು ಹೋಗುತ್ತದೆ. 'ಬದುಕು'ನಲ್ಲಿ ಮಾನವಪ್ರಕೃತಿಯ ಸಹಜ ಕಾಮನೆಗಳನ್ನು ಕುರಿತು ನಾಗವ್ವಾಯಿಯಂಥ ಹಿರಿಯಳು ಆಡುವ ಚಾಟೂಕ್ತಿಗಳು, ರಚಿಸುವ ಆಶುಕವಿತೆಗಳು, ಅವುಗಳ ಬಿಚ್ಚುಮಾತಿನ ಧೈರ್ಯದಿಂದ ಎದ್ದು ಕಾಣುತ್ತವೆ. ಒಟ್ಟಿನಲ್ಲಿ ಇಡೀ ಕಾದಂಬರಿಯಲ್ಲಿ ಬಳಸಿರುವ ಪ್ರಾದೇಶಿಕ ಉರ್ದು ಮಿಶ್ರಿತ ಕನ್ನಡ ಈ ಕಾದಂಬರಿಗೆ ಒಂದು ವಿನೂತನ ಶಕ್ತಿಯನ್ನೂ ಅನನ್ಯತೆಯನ್ನೂ ಕೊಟ್ಟಿದೆ.

'ಮಾಯಾಲೋಕ'ದ ನಿವಾಸಿಗಳು ಬೇರೆ ಬೇರೆ ವೃತ್ತಿಯವರಾದರೂ ಮೂಲತಃ ಬೇಸಾಯಗಾರರು. ಬರಬಿಸಿಲಿನ ಬೇಸಿಗೆಯಲ್ಲಿ ಬವಣೆ ಪಡುತ್ತಿದ್ದಾಗ ಒಬ್ಬರೊಡನೊಬ್ಬರು ಜಟಾಪಟಿಗಿಳಿಯುತ್ತಾರೆ. ಈ ಪರಿಸ್ಥಿತಿಯನ್ನು ಮೇಲ್ವರ್ಗದ ಅಧಿಕಾರಿಗಳು ತಮ್ಮ ಸ್ವಂತ ಲಾಭಕ್ಕೆ ಉಪಯೋಗಿಸಿಕೊಳ್ಳುತ್ತಾರೆ. ಕುಶಲ ಛಾಯಾಗ್ರಾಹಿ ತೇಜಸ್ವಿ ತಮ್ಮ ಮನಸ್ಸಿನ ಕ್ಯಾಮೆರದಲ್ಲೂ ಭುಜಕ್ಕೆ ನೇತುಹಾಕಿಕೊಂಡ ಕ್ಯಾಮೆರದಲ್ಲೂ ಅವನ್ನು ಕ್ಲಿಕ್ಕಿಸಿ ಒಂದು ಕೊಲಾಜ್ ಮಾದರಿಯಲ್ಲಿ ನಮ್ಮ ಮುಂದಿಟ್ಟಿದ್ದಾರೆ. ನಮ್ಮ ನಿಮ್ಮ ಜೀವನವೇ

ಒಂದು ಕೊಲಾಜ್. ಅದರಲ್ಲಿ ಬಿಡಿಬಿಡಿಯಾಗಿ ಕಾಣುವ ನಮ್ಮ ಈ ಲೋಕದ ವ್ಯವಹಾರಗಳನ್ನೆಲ್ಲ ಪೋಣಿಸುವ ಎಳೆ ಒಂದಿದೆಯೇ, ಇವೆಲ್ಲ ನಮ್ಮನ್ನು ಕಡೆಗೆ ಎಲ್ಲಿಗೆ ಒಯ್ಯುತ್ತವೆ ಎಂಬ ತಾತ್ವಿಕ ಪ್ರಶ್ನೆಯನ್ನು ತುಂಬ ಸೂಕ್ಷ್ಮವಾಗಿ ಪ್ರಕೃತಿಯ ಪ್ರತಿಮೆಗಳ ಮೂಲಕ ಕಾದಂಬರಿಯ ಕಡೆಯಲ್ಲಿ ಸೂಚಿಸಿದ್ದಾರೆ. ಮೂರು ವರ್ಷ ಮಳೆಯೇ ಇಲ್ಲದೆ ಬರಡಾಗಿದ್ದ ನೆಲಕ್ಕೆ ಈಗ ಮಳೆ ಅಪ್ಪಳಿಸುತ್ತಿದೆ. ಅದಕ್ಕೆ ಮುನ್ನ ಕವಿದ ಮೋಡಗಳು, ಹೊರಗೆ ಏನಾಗುತ್ತಿದೆ ಎಂದು ನೋಡಲು ಬಾಗಿಲು ತೆರೆದಾಗ ಮನೆಯೊಳಕ್ಕೇ ನುಗ್ಗಿದ ಕಾವಳ, ತುಂಬಿ ಉನ್ಮತ್ತವಾಗಿ ಹರಿಯುತ್ತಿರುವ ಹಳ್ಳ, ಈ ಹಳ್ಳ ಹೇಮಾವತಿಗೆ ಎಲ್ಲಿ ಸೇರುತ್ತದೆ ಎಂದು ಮುಖಕ್ಕೆ ರಾಚಿ ಹೊಡೆಯುತ್ತಿರುವ ಮಳೆಯಲ್ಲೇ ಅದನ್ನು ಅರಸುತ್ತ ಹೋಗಿ ಅದು ಕಾಣದೆ ಮನೆಗೆ ಮರಳಿ ಬಂದ ಗೆಳೆಯರು– ಈ ಎಲ್ಲ ಅಸಂಬದ್ಧತೆಗಳು ಬಾಳನ್ನು ಒಂದು ಅನಿಶ್ಚಿತ, ಅನಿರ್ದಿಷ್ಟ ಕಲಸುಮೇಲೋಗರದ 'ಮಾಯಾಲೋಕ'ವನ್ನಾಗಿಸುವ ಅರಿವನ್ನು ಮೂಡಿಸುತ್ತವೆ.

'ಮಾಯಾಲೋಕ' ಮುಖ್ಯವಾಗಿ ಗಂಡಸರ ಲೋಕ. ಅಲ್ಲಿ ಬರುವುದು ಕೆಲವೇ ಹೆಣ್ಣು ಪಾತ್ರಗಳು. ಅವೆಲ್ಲವೂ ಮುಖ್ಯವಾದವೂ ಅಲ್ಲ. ಒಂದಿಬ್ಬರು– ಬ್ರಾಯ್ತಮ್ಮ ಮತ್ತು ಕತ್ತಿ ಹಿಡಿದು ಬಂದಂಥ ಈರಿ– ತಮ್ಮ ಗಟ್ಟಿತನ ತೋರಿಸುತ್ತಾರೆ. ಆದರೆ ಹೆಣ್ಣಿನ ಶೋಷಣೆಯನ್ನು ಪ್ರಧಾನವಾಗುಳ್ಳ 'ಬದುಕು'ನಲ್ಲಿ ಹಾಗಲ್ಲ. ಗೀತಾರವರು ಹೆಣ್ಣು ಗಂಡು ಇಬ್ಬರ ಪಾತ್ರಗಳನ್ನೂ ಅತ್ಯಂತ ಸಜೀವವಾಗಿ ಸೃಷ್ಟಿಸಿದ್ದಾರೆ.

'ಬದುಕು' ಒಂದು ಬೃಹತ್ ಕಾದಂಬರಿ ಅಷ್ಟೇ ಅಲ್ಲ, ಕನ್ನಡ ಲೇಖಕಿಯರು ಇನ್ನಾರೂ ಇದುವರೆಗೆ ಬರೆದಿಲ್ಲದಂಥ ಕೃತಿ. 'ಹ್ಯಾಂಗ ಹೇಳಲಿ ನಾನು...' ಎಂದು ತಮ್ಮ ಮೊದಲ ಮಾತಿನಲ್ಲಿ ಹೇಳುತ್ತಾ 'ನನ್ನ ಮತ್ತು ನನ್ನಂಥವರು ಹುಟ್ಟಿ ಬೆಳೆದ, ಅನುಭವಿಸಿದ, ಬದುಕಿನ ಹಲವು ಹದಿನೆಂಟು ಮುಖವಾಡಗಳನ್ನು ಕಿತ್ತೆಸೆದು ಅವುಗಳ ಹಿಂದಿರುವ, ಮೇಕಪ್ಪಿಲ್ಲದ ಮೋರೆಗಳಿಗೆ ಭೂತಗನ್ನಡಿ ಹಿಡಿಯುವ ಸಾಚಾ ಕಳಕಳಿಯ, ಪ್ರಾಮಾಣಿಕ ಪ್ರಯತ್ನವೇ ಈ ಕಾದಂಬರಿ. ಶೋಷಣೆಗೊಳಗಾದ ಮಂದಿಯ ಸುಖದುಃಖ, ಸಂಕಟಸಮಸ್ಯೆ, ರೀತಿರಿವಾಜು, ರೂಢಿನಂಬಿಕೆ, ಶಾಸ್ತ್ರಸಂಪ್ರದಾಯ, ಬಾಜನೇಮ, ಆಚರಣೆಗಳೆಲ್ಲ ಯಾವುದೇ ನಕಲಿ ಬಟ್ಟೆಯ ಮುಸುಕಿನ ಹಂಗಿಲ್ಲದೆ ಬೆತ್ತಲಾಗಿ ನಿಂತಿದೆ. ಶಿಷ್ಟಸಂಸ್ಕೃತಿಯ ಹೋಳಿಗೆ, ಪಾಯಸ, ತಿಂದೂ ತಿಂದೂ ಜಿಡ್ಡುಗಟ್ಟಿ ಸ್ವಾದ ಕಳೆದುಕೊಂಡಿರುವ ನಾಲಿಗೆಗಳಿಗೆ ಜನಪದ ಸಂಸ್ಕೃತಿಯ ಸಜ್ಜಿರೊಟ್ಟಿ, ಬಜ್ಜಿಪಲ್ಯ ಉಣ್ಣಿಸಿ ಖುಶಿಪಡಿಸುವ ಹುನ್ನಾರು ನನ್ನದು... ಸುತ್ತಮುತ್ತ ನಡೆದಿರುವ ಘಟನೆಗಳ ಚಿಂದಿಯನ್ನು ಆಯ್ದುಕೊಂಡು ತ್ಯಾಪಿಹಾಕುತ್ತಾ... ಈ 'ಬದುಕು' ಕೌದಿ ಹೊಲೆದಿದ್ದೇನೆ' ಎಂದಿದ್ದಾರೆ ಗೀತಾರವರು. ಇದಕ್ಕೆ ಪೂರಕವಾಗಿ ಅವರು 'ಎಲ್ಲಾ ಮುಚ್ಚಿಟ್ಟು ತಿಪ್ಪೆ

ಸಾರಿಸಿದಂತೆ ಬರೆದರೆ' ತಮ್ಮ ಬರವಣಿಗೆಯ ಉದ್ದೇಶ ವಿಫಲವಾಗುತ್ತದೆಂಬ ನಿಲುವನ್ನು ಲೇಖಿ-ಲೋಕ ೪ (ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೨೦೦೩)ರಲ್ಲಿ ಬರೆದ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಚಿಕ್ಕಂದಿನಲ್ಲಿ ನಾನು ಆನಂದರ 'ನಾನು ಕೊಂದ ಹುಡುಗಿ' ಓದಿ ಕಣ್ಣೀರಿಟ್ಟಿದ್ದೆ. ಗೌಡರ ಮಗಳು ಬಸವಿ ಬಿಟ್ಟ ಚೆನ್ನಮ್ಮ ಬಾವಿಯಲ್ಲಿ ಬಿದ್ದು ಸತ್ತಳು. ಚಿತ್ತಾಲರ 'ಅಬೋಲಿನಾ'ದಲ್ಲಿ 'ಹೂವಿನಂಥ ಹೆಣ್ಣು ಜೀವವೊಂದು ಅರಳುವ ಮೊದಲೇ' ಮಣ್ಣುಗೂಡಿತು. ಈ ಹೆಣ್ಣುಗಳ ಜೀವನ ದುರಂತದಲ್ಲಿ ಕೊನೆಗೊಂಡಿದ್ದು ಅವರು ಪಾಪಪ್ರಜ್ಞೆಯ ದ್ವಂದ್ವದಲ್ಲಿ ಸಿಕ್ಕಿಕೊಂಡದ್ದರಿಂದ. 'ಬದುಕು' ಕಾದಂಬರಿಯಲ್ಲಿ ಈ ಬಗೆಯ ತೊಳಲಾಟ ಅನೇಕರಿಗಿದ್ದರೂ, ಒಬ್ಬಳಾದರೂ ಅದರಿಂದ ಹೊರಬರುವ ಸ್ಥೈರ್ಯ ತೋರಿದ್ದಾಳೆ.

ಸುಮಾರು ನಾಲ್ಕು ದಶಕಗಳ ಹಿಂದೆ ನಾನು ಆಂಧ್ರದ ತೆಲಂಗಾಣ ಪ್ರದೇಶದಲ್ಲಿ ಹಲವಾರು ವರ್ಷ ಕಳೆದಿದ್ದೆ. ಅಲ್ಲಿನ ಹಳೆಯ ನಿಝಾಮ್ ಸರ್ಕಾರದ ಊಳಿಗಮಾನ್ಯ ಪದ್ಧತಿಯಲ್ಲಿ (feudal system) ತೀರ ಅಧೋಪಾತಾಳಕ್ಕೆ ತುಳಿಯಲ್ಪಟ್ಟಿದ್ದ ದಲಿತವರ್ಗದ ಮಹಿಳೆಯರನ್ನು ಪ್ರತ್ಯಕ್ಷವಾಗಿ ನೋಡಿದ್ದೆ. ಬೆಂಗಳೂರು ಪಟ್ಟಣದ ನಾಗರಿಕ ಸಂಸ್ಕೃತಿಯಲ್ಲಿ ಹುಟ್ಟಿಬೆಳೆದಿದ್ದ ನನಗೆ ಈ ಪರಿಸ್ಥಿತಿಯನ್ನು ಕಂಡಾಗ-ಯಾವುದೋ ಕಾಲಕ್ಕೆ ಹಿಂದೆ ಹಿಂದೆ ಸರಿದಂತಾಗಿತ್ತು. ಅಲ್ಲಿನ ಜೀವನದಲ್ಲಿ ಕಂಡುಬರುತ್ತಿದ್ದ ವರ್ಗೀಕರಣ, ದೀನದಲಿತರ ಕುಟುಂಬಗಳು, ಅವರಲ್ಲಿ ತುಂಬಿದ್ದ, ಅಜ್ಞಾನ, ದಾಸ್ಯ ಮನೋಭಾವ, ದೈನ್ಯ- ಇವೆಲ್ಲ ಮನಸ್ಸನ್ನು ತೀವ್ರವಾಗಿ ಕಲಕಿತ್ತು. ಆದರೆ ಅಲ್ಲಿ ನಲಿವು ಗೆಲುವುಗಳು ಇರಲಿಲ್ಲವೆಂದಲ್ಲ. ಮನೆಯ ಹಿಂದಿದ್ದ ಝೋಪಡಿಗಳಲ್ಲಿ ವಾಸಿಸುತ್ತಿದ್ದ ಲಂಬಾಣಿ ಸಂಸಾರಗಳು, ಅವರ ಹೆಣ್ಣುಮಕ್ಕಳ ಮದುವೆಗಳು ಮತ್ತು ಅವರೆಲ್ಲರ ಒಡನಾಟ ಇಂದಿಗೂ ನನ್ನೆದೆಯಲ್ಲಿ ಬೆಚ್ಚಗಿವೆ. ಕನ್ನಡ ಜಾನಪದ ಸಾಹಿತ್ಯ, ಗಾಯನದಲ್ಲಿ ಅನುಭವವುಳ್ಳ ನನಗೆ 'ಉತ್ತರದೇವಿಯ ಹಾಡು' ಹೇಳುವಂಥ ಹೆಣ್ಣಿನ ಅನ್ಯಾಯಗಳ ಕತೆಗಳ ಪರಿಚಯವೂ ಉಂಟು. ಇವಲ್ಲದೆ ದಲಿತ ವರ್ಗದಲ್ಲಿ ಹುಟ್ಟಿ ಬೆಳೆದು ಈಗ ಪುಣೆ ವಿಶ್ವವಿದ್ಯಾಲಯದ ಉಪಕುಲಪತಿ ಆಗಿರುವ ಡಾ. ನರೇಂದ್ರ ಜಾಧವ್ ಅವರು ಬರೆದ ತಮ್ಮ ವಂಶವೃತ್ತಾಂತ The Untouchables ಗ್ರಂಥವನ್ನು ಓದಿದ್ದೇನೆ. ಮೊನ್ನೆಮೊನ್ನೆ ಅವರು University of Pennsylvania ಅಧ್ವರ್ಯದಲ್ಲಿ ನಡೆದ ದಲಿತ ಸಮ್ಮೇಳನಕ್ಕೆ ಮುಖ್ಯ ಅತಿಥಿಯಾಗಿ ಬಂದಿದ್ದಾಗ ಅವರ ಭಾಷಣ ಕೇಳಿದ್ದು, ಅವರೊಡನೆ ಮಾತನಾಡಿದ್ದು, ಇಂದಿನ ಭಾರತದ ದಲಿತ ಸಮಸ್ಯೆಯ ಬಗ್ಗೆ ನನ್ನ ತಿಳುವಳಿಕೆಯನ್ನು ವಿಸ್ತೃತಗೊಳಿಸಿತು. ಈ ಹಿನ್ನೆಲೆಯಲ್ಲಿ 'ಬದುಕು' ಕಾದಂಬರಿಯ ಝೋಪಡಪಟ್ಟಿಯ ದಲಿತ ಹೆಂಗಸರ ಚಿತ್ರಣ

ಸಹಜವಾಗಿಯೂ, ಪ್ರಾಮಾಣಿಕವಾಗಿಯೂ ಇದೆಯೆಂದು ರುಜುವಾತಾಯಿತಲ್ಲದೆ ಅವರ ಬದುಕಿನ ಸಮಗ್ರ ಚಿತ್ರಣದ ಅರಿವಾಯಿತು.

'ಬದುಕು' ಕಾದಂಬರಿಯಲ್ಲಿ ಕಾಣುವಂಥ ಅಸಹಾಯಕರ ಮೇಲಿನ ದೌರ್ಜನ್ಯ ಕರಾಳತೆಗಳು ಪ್ರಪಂಚದ ಇತರ ಸಮಾಜಗಳಲ್ಲೂ ಉಂಟು. ಅಮೆರಿಕದ ಬಿಳಿಯ ಜನ ಕಪ್ಪು ಜನರ ಮೇಲೆ ನಡೆಸಿದ ಅನ್ಯಾಯಗಳು, ಅವರ ಮೂಲಭೂತ ಸಂಸಾರ ವ್ಯವಸ್ಥೆಯನ್ನೇ ನಿರ್ದಯವಾಗಿ ನಾಶಮಾಡಿದ ರೀತಿ, ಮೂಲನಿವಾಸಿಗಳ ಮೇಲೆ ನಡೆಸಿರುವ ಅನ್ಯಾಯಗಳು, ಯೆಹೂದ್ಯರ ಮೇಲೆ ಹಿಟ್ಲರ್ ನಡೆಸಿದ ಪಾತಕಗಳು, ಆಫ್ರಿಕಾದಲ್ಲಿ ಇಂದಿಗೂ ನಡೆಯುತ್ತಿರುವ ಘೋರ ಅತ್ಯಾಚಾರಗಳು– ಇವೆಲ್ಲ ನಮ್ಮ ಮನಸ್ಸಿನಿಂದ ಎಂದೂ ಅಳಿಸಿಹೋಗಲಾರವು. ಅಮೆರಿಕದ ಕಪ್ಪು ಜನರು ಅನುಭವಿಸಿದ ದಾರುಣತೆಯನ್ನು ಟೋನಿ ಮಾರಿಸನ್ (ನೊಬೆಲ್ ಪ್ರಶಸ್ತಿ ಪಡೆದ ಲೇಖಕಿ), ಅಲಿಸ್ ವಾಕರ್ ಮೊದಲಾದ ಲೇಖಕಿಯರು ತಮ್ಮ ಕಾದಂಬರಿಗಳಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ. 'ಬದುಕು' ಕಾದಂಬರಿಯೂ ಈ ಸಾಲಿಗೆ ಸೇರುವಂಥದ್ದು. ಈ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (೨೦೦೪), ಕರ್ನಾಟಕ ಸರ್ಕಾರದ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ (೨೦೦೩) ಮುಂತಾದ ಹಲವಾರು ಸನ್ಮಾನಗಳು ದೊರೆತಿವೆ. ಕನ್ನಡದ ಶ್ರೇಷ್ಠ ವಿಮರ್ಶಕರು, ವಿದ್ವಾಂಸರು ಅದನ್ನು ಮೆಚ್ಚಿ ಮಾತನಾಡಿದ್ದಾರೆ. ಇಂಥ ಮಹತ್ವದ ಕೃತಿಯನ್ನು ರಚಿಸಿದ ಸೋದರಿ ಗೀತಾ ಅವರಿಗೆ ನನ್ನ ಅಂತಃಕರಣಪೂರ್ವಕ ಅಭಿನಂದನೆಗಳು.

**ಕೃತಜ್ಞತೆ:**

'ಬದುಕು' ಬಗ್ಗೆ ನನ್ನ ಚಿಂತನೆಗಳನ್ನು ಕೇಳಿಸಿಕೊಂಡು ಅವನ್ನು ನನ್ನೊಂದಿಗೆ ಚರ್ಚಿಸಿದ ನನ್ನ ತಂಗಿ ಶ್ರೀಮತಿ ಕಮಲಾ ಎಂ.ಎಸ್. ಬಾಲುಗೆ ನನ್ನ ಪ್ರೀತಿಯ ಕೃತಜ್ಞತೆ ಸಲ್ಲುತ್ತದೆ.

**ಕೃತಿ ವಿವರ:** 'ಮಾಯಾಲೋಕ', ಕೆ.ಪಿ ಪೂರ್ಣಚಂದ್ರ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು, ೨೦೦೬ (೩ನೇ ಮುದ್ರಣ ೨೦೦೮), ಪು. ೨೪೬

'ಬದುಕು' ಗೀತಾ ನಾಗಭೂಷಣ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೧ (೩ನೇ ಮುದ್ರಣ ೨೦೦೭), ಪು. ೪೯೬

## ನೇಮಿಚಂದ್ರರ 'ಯಾದ್ ವಶೇಮ್'

–ಶಶಿಕಲಾ ಚಂದ್ರಶೇಖರ್, ಬಾಯ್ಡ್ಸ್, ಮೇರಿಲ್ಯಾಂಡ್

Every day is a day of grace
Every moment is a moment of truth
Life is not made of years; life is made of moments
At the end, the weight of these moments will determine
worth of life was a worthy one.

೨೦೦೭ 'ಅಮೆರಿಕನ್ ಅಸೋಸಿಯೇಷನ್ ಆಫ್ ಹೋಮ್ಸ್ ಅಂಡ್ ಸರ್ವಿಸಸ್ ಫಾರ್ ಏಜಿಂಗ್' ವಾರ್ಷಿಕ ಸಮ್ಮೇಳನದಲ್ಲಿ ಡಾ. ಎಲ್ಲಿ ವೈಸೆಲ್ (ಶಾಂತಿ ನೋಬೆಲ್ ಪಾರಿತೋಷಕ ವಿಜೇತ) ೨೦೦೦ ಜನರನ್ನು ಉದ್ದೇಶಿಸಿ ಮಾತನಾಡುತ್ತಿದ್ದಾಗ ಮೊದಲ ಸಾಲಿನಲ್ಲಿ ಕುಳಿತ ನಾನು ಬಿಕ್ಕಳಿಸುತ್ತಿದ್ದೆ. ಡಾ. ವೈಸೆಲ್ ವೇದಿಕೆಗೆ ಬರುವ ಮುನ್ನ ವೇದಿಕೆಯ ಹಿಂದೆ ಅವರನ್ನು ಕಂಡು ಮಾತನಾಡಿಸುವ ಅಪೂರ್ವ ಅವಕಾಶ ನನ್ನ ಪಾಲಿನದಾಗಿತ್ತು. ಅದೊಂದು ಅದ್ವಿತೀಯ ಅತೀಂದ್ರಿಯ ಅನುಭವ. ೨೦ನೆಯ ಶತಮಾನ ನಾಝಿ ಮಾರಣಹೋಮ (ಹೊಲೋಕಾಸ್ಟ್)ದ ಕ್ರೌರ್ಯಕ್ಕೆ ಬೆಚ್ಚಿಬಿದ್ದ ಶತಮಾನ. ಇಂದಿಗೂ ಆ ಕ್ರೌರ್ಯಕ್ಕೆ ಕಾರಣಗಳನ್ನು ಪೂರ್ಣ ಅರಿಯದಾದರೂ ಅರಿತಂತಾಗಿ ಸಂಪೂರ್ಣ ಅರಿಯದ ಬೆರಗಿಗೆ ಸಾಕ್ಷಿಯಾದ ಶತಮಾನವದು. ಆ ಶತಮಾನದಲ್ಲಿ ಹುಟ್ಟಿ ಹತ್ತಿರ ಸುಳಿದ ಸಾವಿನ ಮಗ್ಗುಲನ್ನು ಹಾಯ್ದು ಬದುಕುಳಿದು ಬಂದ ಅಪರೂಪದ 'ಶಾಂತಿದೂತನ' ಎದುರು ನಿಂತು ಮಾತನಾಡುವ ಸನ್ನಿವೇಶ ನನ್ನ ಕಲ್ಪನೆಗೂ ಕನಸಿಗೂ ಅತೀತವಾಗಿತ್ತು. ವೇದಿಕೆಯ ಹಿಂದಿನ ಮೇಕಪ್ ರೂಮ್ ಕದ ದೂಡಿ ಒಳ ಅಡಿ ಇಡುವ ಮುನ್ನ ನನ್ನ ಕಣ್ಣೆದುರು ಮೂಡಿದ್ದು ೬ ಮಿಲಿಯನ್ ಯಹೂದಿಗಳ ಸಾವು, ಕಿವಿಯಲ್ಲಿ ತುಂಬಿದ್ದು ಬದುಕಿ ಉಳಿದವರ ದಾರುಣ ಕಥೆ. ಆ ಕ್ಷಣ ಹೃದಯ ಅಮುಕಿದಂತಾಗಿ ಆ ಎಲ್ಲಾ ಸಾವುಗಳ ಸೂತಕ ದೇಹವನ್ನು ಮುಡಿಯಿಂದ ಅಡಿಯವರೆಗೆ

ನಿಧಾನ ಗತಿಯಲ್ಲಿ ತಣ್ಣಗಾಗಿಸಿತ್ತು. ಸಾವರಿಸಿಕೊಂಡು, ಲೋರನ್ ಜೊತೆಗೂಡಿ ಒಳಗೆ ಅಡಿ ಇಟ್ಟಿದ್ದೆ. ಲೋರನ್ ಕೂಡಾ ನನ್ನಷ್ಟೇ ಭಾವುಕಳಾಗಿದ್ದಳು. ಅವಳ ಮಾವ ನಾಝಿ ಮಾರಣಹೋಮದಲ್ಲಿ ಬದುಕುಳಿಯದೇ ಹೋದ ೬ ಮಿಲಿಯನ್ ಜನರಲ್ಲಿ ಒಬ್ಬರು.

ನಾನಿರುವ ಊರಿಗೆ ಬಂದ ಹಲವಾರು ಆಪ್ತರನ್ನು-ಅತಿಥಿಗಳನ್ನು, ಪ್ರಸಿದ್ಧರನ್ನು-ಸಿದ್ಧರನ್ನು, ಜನಪ್ರಿಯರನ್ನು-ಪ್ರಿಯರನ್ನು, ಕವಿಗಳನ್ನು-ಕಥೆಗಾರರನ್ನು, ತಾರೆಗಳನ್ನು-ನಕ್ಷತ್ರಿಕರನ್ನು 'ಯುನೈಟೆಡ್ ಸ್ಟೇಟ್ಸ್ ಹಾಲೋಕಾಸ್ಟ್ ಮೆಮೋರಿಯಲ್ ಮ್ಯೂಸಿಯಮ್'ಗೆ ಲೆಕ್ಕವಿಲ್ಲದಷ್ಟು ಸಲ ಕರೆದೊಯ್ದಿದ್ದೇನೆ. ನಾಝಿ ಮಾರಣಹೋಮದಿಂದ ಬದುಕುಳಿದು ಬಂದ (ಹಾಲೋಕಾಸ್ಟ್ ಸರ್ವೈವರ್ಸ್) ಬಹಳಷ್ಟು ಜನರ ಕಥೆಯನ್ನು ಅವರ ಆಡುಮಾತಿನ ಧ್ವನಿಮುದ್ರಿಕೆಯಲ್ಲಿ ಕೇಳಿದ್ದೇನೆ. ಪಿ.ಬಿ.ಎಸ್. ದೂರದರ್ಶನದಲ್ಲಿ ಅಂತಹ ಹತ್ತಾರು ಜನರನ್ನು ನೋಡಿದ್ದರೂ, ಅವರೆಲ್ಲರ ಬಾಯಿಂದ ಅವರ ದುರದೃಷ್ಟಕರ ಘಟನೆಗಳನ್ನು ಕೇಳಿದ್ದರೂ, ಅದೇ ಮೊದಲ ಬಾರಿಗೆ, ನಾಝಿ ಮಾರಣಹೋಮದಿಂದ ಬದುಕುಳಿದು ಬಂದ ಜೀವಂತ ವ್ಯಕ್ತಿಯನ್ನು ನೋಡಿ ಮಾತನಾಡಿದ್ದೆ. ಅದರಿಂದಾಗಿಯೇ ಭಾವಪರವಶಳಾಗಿದ್ದೆ! ವೇದಿಕೆ ಎದುರು ಕುಳಿತು ಭಾಷಣ ಕೇಳುತ್ತಿದ್ದರೂ, ನಾಝಿ ಮಾರಣಹೋಮ ವಲಯದ ವೃತ್ತದಿಂದ ನನ್ನ ಭಾವುಕ ಮನ ಆಚೆ ಬಂದಿರಲೇ ಇಲ್ಲ. ಡಾ. ಎಲ್ಲಿ ವೈಸೆಲ್ ಅವರು ಭಾಷಣ ಮುಂದುವರೆಸಿದ್ದರು: 'ನಾನು ಹಿಂಸೆಗೆ-ಹತ್ಯೆಗೆ-ಶೋಷಣೆಗೆ ಗುರಿಯಾದವರನ್ನು, ಬ್ಯಾರಾಕ್‌ನಿಂದ ಬ್ಯಾರಾಕಿಗೆ, ಕ್ಯಾಂಪಿನಿಂದ ಕ್ಯಾಂಪಿಗೆ ಹೋಗಿ ಭೇಟಿ ಮಾಡಿದ್ದೇನೆ. ಅವರ ಕಥೆ ಕೇಳಿದ್ದೇನೆ. ಇದುವರೆಗೆ ವ್ಯಥೆಗೆ ಗುರಿಯಾದ ಯಾರೊಬ್ಬರೂ ಕಣ್ಣೀರಿನ ಬಿಕ್ಕುಗಳ ನಡುವೆ ತಮ್ಮ ಕಥೆಯನ್ನು ಹೇಳಿ ಮುಗಿಸಿದ್ದೇ ಇಲ್ಲ. ನಾನು ಆ ಕಣ್ಣೀರನ್ನು ಸಂಗ್ರಹಿಸುತ್ತೇನೆ, ಅವರು ಮುಗಿಸದೇ ಹೋದ ಮಾತುಗಳನ್ನು ಸಂಗ್ರಹಿಸುತ್ತೇನೆ. ಅವರ ಭಾವನೆಗಳನ್ನು ಸಂಗ್ರಹಿಸುತ್ತೇನೆ. ನನ್ನ ಕಾರ್ಯಭಾರವೇನೆಂದರೆ ಆ ಸಂಗ್ರಹವನ್ನು ಕಥೆಗಳ ರೂಪದಲ್ಲಿ ತೆರೆದಿಡುವುದು.' ನೇಮಿಚಂದ್ರರ 'ಯಾದ್ ವಶೇಮ್'ನ ಪ್ರಯತ್ನವೂ ಇದೇ. 'Literature must be an act of correcting injustice' ಎನ್ನುವುದು ಡಾ. ಎಲ್ಲಿ ವೈಸೆಲ್ ಅವರ ನಿಲುವು. ಅವರು ಮುಂದುವರೆಸುತ್ತಾ ಹೇಳಿದ್ದು, ಸಾಮಾನ್ಯವಾಗಿ ನನ್ನ ಕಾದಂಬರಿಯಲ್ಲಿ ೩ ಪಾತ್ರಗಳಿರುತ್ತವೆ–a child, an old man/woman and a mad man. ಸಾಮಾನ್ಯವಾಗಿ ಈ ಮೂರು ವರ್ಗದ ಜನರೇ ಹೊರಹಾಕಲ್ಪಡುವವರು/ ಪೆಡೆಗೆ ತಳ್ಳಲ್ಪಡುವವರು/ ದೈಹಿಕ ಹಿಂಸೆಗೆ ಒಳಗಾಗುವವರು. ಶತ್ರುಗಳ ದೃಷ್ಟಿಯಲ್ಲಿ ಈ ಮೂರು ವರ್ಗದ ಜನ ಅಪ್ರಯೋಜಕರು. ಅದಕ್ಕಾಗಿಯೇ ಅವರ ಸಾವು ಶತ್ರುಗಳಿಗೆ ಅನಿವಾರ್ಯ. So I try to correct the injustice done to them by giving them a roof, an

identity, a home, a destiny.' 'ಯಾದ್ ವಶೇಮ್'ನ ಪ್ರಯತ್ನವೂ ಇದೇ.

ನನ್ನಾಯ್ಕೆಯ 'ಯಾದ್ ವಶೇಮ್' ಬಗ್ಗೆ ಬರೆಯುವ ಮುನ್ನ ನೇಮಿಚಂದ್ರರ ಬಗ್ಗೆ ಬರೆಯುವುದು ಅಗತ್ಯ. ನೇಮಿಚಂದ್ರ ವೃತ್ತಿಯಿಂದ ಎಂಜಿನಿಯರ್. 'ಹಿಂದೂಸ್ತಾನ್ ಏರೋನಾಟಿಕಲ್ ಲಿಮಿಟೆಡ್' ಕಾರ್ಖಾನೆಯ 'ಹೆಲಿಕಾಪ್ಟರ್ ಸಂಶೋಧನೆ ಮತ್ತು ವಿನ್ಯಾಸ'ದ ವಿಭಾಗದಲ್ಲಿ ಡೆಪ್ಯುಟಿ ಜನರಲ್ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸಣ್ಣ ಕಥೆ, ಜೀವನ ಚಿತ್ರ, ವೈಜ್ಞಾನಿಕ ಬರಹಗಳು, ಪ್ರವಾಸ ಕಥನ, ಅಂಕಣ ಬರಹ, ಮಹಿಳಾ ಅಧ್ಯಯನ... ಹೀಗೆ ವಿವಿಧ ಪ್ರಕಾರದ ಸಾಹಿತ್ಯ ರಚನೆ ನೇಮಿಚಂದ್ರರ ಬರವಣಿಗೆಗೆ ಯಶಸ್ವಿಯಾಗಿ ದಕ್ಕಿವೆ. ಅವರೇ ಹೇಳುವಂತೆ 'ಕೃತಿ ಬೇರೆ, ಕೃತಿಕಾರಳೇ ಬೇರೆ ಎಂಬ ದ್ವಂದ್ವವು ನನಗಷ್ಟು ಅರ್ಥವಾಗುವುದಿಲ್ಲ. ಒಂದು ಕೃತಿ ಕೃತಿಕಾರಳ ಜೀವನ ದರ್ಶನ, ಧೋರಣೆ, ಚಿಂತನೆಗಳನ್ನು ಪ್ರತಿಬಿಂಬಿಸಬೇಕು...' (ಕರ್ನಾಟಕ ಲೇಖಕಿಯರ ಸಂಘ ಪ್ರಕಟಿತ 'ಲೇಖ-ಲೋಕ' ಕೃತಿಯಿಂದ ಆಯ್ದ ಭಾಗ). ಈ ಮಾತಿಗೆ ಅವರ ಬರಹ ಬದ್ಧವಾಗಿದೆ.

ಇದಕ್ಕೆ ಸಾಕ್ಷಿಯಾಗಿ 'ಯಾದ್ ವಶೇಮ್'ನಲ್ಲಿ ಬರುವ ಸಾಲುಗಳನ್ನು ಗಮನಿಸಿ:

– 'ಹೌದು ಯುದ್ಧಗಳಿವೆ ಎಲ್ಲಾ ಧರ್ಮಗ್ರಂಥಗಳಲ್ಲಿ, ಬೈಬಲ್‌ನಲ್ಲಿಯೂ, ತಾಲ್ಮಡ್‌ನಲ್ಲಿಯೂ, ರಾಮಾಯಣದಲ್ಲಿ, ಮಹಾಭಾರತದಲ್ಲಿ, ಕುರಾನ್‌ನಲ್ಲಿಯೂ– ಧರ್ಮ ಯುದ್ಧಗಳು. ಸಾವಿರ ಸಾವಿರ ವರ್ಷಗಳ ಹಿಂದೆ ಹರಿದ ರಕ್ತವನ್ನೇ ಹೀರಿಕೊಳ್ಳಲಾರದೆ ಭೂಮಿ ಕೆಂಪಾಗಿರುವಾಗ – ಇಂದು ನಾವು ಅವೇ ಉದಾಹರಣೆಗಳನ್ನು ಅನುಕರಿಸಬೇಕೆ?'

– 'ನನಗೆ ಈ ನೆಲ ಮುಖ್ಯವಾಗುತ್ತಿಲ್ಲ. ನೆಮ್ಮದಿಯ ನಾಳೆಗಳ ಹಿಂಗದ ಬಯಕೆ ನನ್ನದು. ಮನುಷ್ಯ ಮನುಷ್ಯನ ನಡುವೆ ದ್ವೇಷವಿಲ್ಲದ, ಗೋಡೆ ಇಲ್ಲದ, ಗುಮಾನಿ ಇಲ್ಲದ ಪೂರ್ಣ ವಿಶ್ವಾಸದ ಒಂದು ಸುಂದರ ಸಂಬಂಧದ ಸೇತುಬಂಧದ ಕನಸು ನನ್ನದು.'

– '...ನಮ್ಮ ಯುದ್ಧದಲ್ಲಿ ಸತ್ತವರೆಲ್ಲ ನಂತರ ಹುತಾತ್ಮರಾಗುತ್ತಾರೆ, ವೀರಸ್ವರ್ಗ ಸೇರುತ್ತಾರೆ. ಅವರ ಕಡೆ ಸತ್ತವರೆಲ್ಲ ರೌರವ ನರಕದಲ್ಲಿ ನರಳುತ್ತಾರೆ.' ಯಾರಿಗೆ ಕತೆ ಹೇಳುತ್ತಿದ್ದೇವೆ? ಎಲ್ಲ ಧರ್ಮಗಳೂ ಹೇಳುವ ಈ ಕತೆಯನ್ನು ಇನ್ನೆಷ್ಟು ಕಾಲ ಹೇಳುತ್ತಾ ಮುಂದುವರೆಸುವುದು?'

ನೇಮಿಚಂದ್ರರ ಪ್ರಥಮ ಕಥಾಸಂಕಲನ 'ನಮ್ಮ ಕನಸುಗಳಲ್ಲಿ ನೀವಿದ್ದಿರಿ' ಕುರಿತು ಡಾ. ಜಿ.ಎಸ್. ಆಮೂರ ಅವರು ಈ ರೀತಿ ಬರೆದಿದ್ದಾರೆ: 'ಹಗುರವಾದ ಕನಸುಗಾರಿಕೆ ಅಥವಾ ತೀವ್ರವಾದ ಪುರುಷದ್ವೇಷ ಇಂಥ ವೈಪರೀತ್ಯಗಳಿಂದ ಮುಕ್ತರಾಗಿ ಕೇವಲ

ಅನುಭವದ ಸಾಚಾತನವನ್ನೇ ನಂಬಿ ಸಾಹಿತ್ಯ ರಚನೆಗೆ ಕೈಹಾಕಿರುವ ನೇಮಿಚಂದ್ರರ ಮೊದಲ ಕಥಾಸಂಕಲನ ಒಂದು ಮಹತ್ವದ ಕೃತಿ. ಈ ಕಥೆಗಳಲ್ಲಿ ಸ್ತ್ರೀಮುಕ್ತಿ ಒಂದು ಘೋಷಣೆಯಾಗಿ ವಿಜೃಂಭಿಸದೆ ವಾಸ್ತವದ ಒರೆಗೆ ಹಚ್ಚಿದ ಮಾನವೀಯ ಸಾಧ್ಯತೆಯಾಗಿ ಬರುತ್ತದೆನ್ನುವುದು ಅವುಗಳ ವೈಶಿಷ್ಟ್ಯವಾಗಿದೆ.'

'ನೇಮಿಚಂದ್ರರ ಕತೆಗಳಲ್ಲಿ ಪುರುಷ ಖಳನಾಯಕನಾಗದೆ ಸ್ತ್ರೀ ಅನಗತ್ಯ ವಿಜೃಂಭಣೆಯಾಗದೆ ಮೂಡಿಬರುತ್ತಾರೆ. ...ಇವರಿಬ್ಬರೂ ಒಟ್ಟಿಗೇ ಪ್ರಜ್ವಲಿಸುವ ಘಳಿಗೆಗಳಿಗಾಗಿ ಲೇಖಕಿ ಶೋಧಿಸುತ್ತಿದ್ದಾರೆ. ಗಂಡು-ಹೆಣ್ಣಿನ ನಡುವಣ ಗೋಡೆಗಳು ಕರಗಿ ಅವರಿಬ್ಬರೂ ಪ್ರಬುದ್ಧವಾದ, ಸಮಾನಸ್ತರ ಬದುಕು ನಡೆಸಬೇಕಾದ ಕ್ಷಣಗಳಿಗಾಗಿ ಅವರು ಹುಡುಕುತ್ತಿದ್ದಾರೆ. ಈ ಸೃಜನಶೀಲ ಹುಡುಕಾಟವೇ ನೇಮಿಚಂದ್ರ ಅವರ ಬರವಣಿಗೆಯನ್ನು ಪ್ರಭಾವಿಸಿದೆ' ಎಂದಿದ್ದಾರೆ, ಟಿ.ಪಿ. ಅಶೋಕ ಅವರು. ನೇಮಿಚಂದ್ರರ ಸಣ್ಣ ಕಥೆಗಳನ್ನು ಓದಿರುವ ಎಲ್ಲರೂ ಒಪ್ಪುವ ಮಾತುಗಳಿವು. ನೇಮಿಚಂದ್ರರ ವಿಭಿನ್ನ ಶೈಲಿಯ ಬರವಣಿಗೆಯ ಅಂದ-ಚಂದಗಳು, ಅವರ ಬರಹಗಳು ಓದುಗರ ಒಂದು ದೊಡ್ಡ ಸಮೂಹವನ್ನೇ ಸೃಷ್ಟಿಸಿದೆ.

ನೇಮಿಚಂದ್ರರ ನಿಲುವನ್ನು ಅರಿತುಕೊಳ್ಳಲು ಈ ಮುಂದಿನ ಸಾಲುಗಳು ಸಹಾಯಕವಾಗುತ್ತವೆ. 'ನನ್ನ ಬರಹದ ಮೇಲೆ ತೀವ್ರವಾದ ಪ್ರಭಾವ ಬೀರಿರುವ ಅಂಶ ಸ್ತ್ರೀವಾದ. ಸ್ತ್ರೀವಾದ ಎಂದರೇನು ಎಂದು ತಿಳಿಯುವ ಮೊದಲೇ ನಾ ಸ್ತ್ರೀವಾದಿಯಾಗಿದ್ದೆ. ಕಾರಣ, ಲಿಂಗಾಧಾರಿತ ಅಸಮಾನತೆಗಳು ನನ್ನಲ್ಲಿ ಅಸಹನೆ-ಆಕ್ರೋಶ ಹುಟ್ಟಿಸಿದ ಪ್ರಸಂಗಳು ಒಂದಲ್ಲ ಎರಡಲ್ಲ. ನನ್ನ ಸ್ತ್ರೀವಾದದ ಮೂಲ ನೆಲೆಗಳನ್ನು ಹಲವು ಬಾರಿ ಶೋಧಿಸಿದ್ದೇನೆ... ಸ್ತ್ರೀವಾದಿ ಚಿಂತನೆ ನನ್ನಲ್ಲಿ ಯಾವಾಗ ಇಣುಕಿತು ಎಂದು ಬೊಟ್ಟು ಮಾಡಿ ಹೇಳಲು ನನಗೇ ಸ್ಯಾಧ್ಯವಿಲ್ಲ... ನನ್ನ ಅರಿವು ಮೂಡಿದಾಗಿನಿಂದ, ನಾನು ವಿವಾಹಕ್ಕಿಂತ, ವಿದ್ಯೆಗೆ, ಆರ್ಥಿಕ ಸ್ವಾವಲಂಬನೆಗೆ ಹೆಚ್ಚು ಮಹತ್ವ ಕೊಟ್ಟಿದ್ದರೆ, ನನ್ನ ವ್ಯಕ್ತಿತ್ವವನ್ನು ಪ್ರತಿಪಾದಿಸಲು ಪದೇ ಪದೇ ಪ್ರಯತ್ನಿಸಿದ್ದರೆ, ನನ್ನಂತೆ ಬದುಕಲು ಬಯಸಿದ್ದರೆ, ಅದಕ್ಕೆ ಅಲ್ಲೆಲ್ಲೋ ನಾನು ಹುಟ್ಟಿ-ಬೆಳೆದ ಪರಿಸರ ಕಾರಣವಿದ್ದಿರಬೇಕು ಎನ್ನಿಸುತ್ತದೆ. ಬಯಲು ಸೀಮೆಯ ಹಳ್ಳಿಗಾಡಿನ ಅಪ್ಪಟ ಅನಕ್ಷರಸ್ಥೆ ನನ್ನ ಅಮ್ಮ, ಓದಲೆಂದು ಹಳ್ಳಿಯಿಂದ ಓಡಿಬಂದು, ವಾರಾನ್ನ ಉಂಡು, ಆಲಮ್ಮ ಛತ್ರದಲ್ಲಿ ಉಳಿದು, ಮುಂದೆ ಸರ್ಕಾರಿ ಕಾಲೇಜಿನ ಪ್ರೊಫೆಸರ್, ಪ್ರಿನ್ಸಿಪಾಲರಾದ ಅಪ್ಪ. ಈ ತಂದೆ ತಾಯಿಯ ದಾಂಪತ್ಯದ ಸೋಲು-ಗೆಲುವು, ಯಶಸ್ಸನ್ನು ನಿರ್ಧರಿಸುವ ಉದ್ಧಟತನಕ್ಕೆ ನಾನು ಹೋಗದಿದ್ದರೂ, ಅಲ್ಲೇನೋ 'ಮಿಸ್ಸಿಂಗ್' ಇತ್ತು. ಪತಿ-ಪತ್ನಿಯರ ನಡುವಿನ ಪ್ರೀತಿ-ಗೌರವ, ಸರಸ ...ಮತ್ತೇನೇನೋ. ಅವರ ನಡುವೆ ಅಗಾಧ ಅಸಮಾನತೆ ಇತ್ತು. ಅದನ್ನು ಬೌದ್ಧಿಕ ಅಸಮಾನತೆ ಎನ್ನಲಾರೆ. ಅಮ್ಮನ ಬುದ್ಧಿಮತ್ತೆ, ವಿದ್ಯೆಯ

ಗಂಧವಿಲ್ಲದಿದ್ದರೂ ಚುರುಕಿತ್ತು. ಯೋಚಿಸಬಲ್ಲಾಕೆ. ಆದರೂ 'ಅವಿದ್ಯಾವಂತಳು, ಎದೆ ಸೀಳಿದರೆ ಮೂರಕ್ಷರ ಇಲ್ಲ. ನಿನಗೇನು ಅರ್ಥವಾಗುತ್ತೆ ಸುಮ್ಮನಿರು' ಎಂಬ ಅಸಡ್ಡೆಯ ಮಾತುಗಳನ್ನು ಕೇಳುತ್ತಾ ಬೆಳೆವಾಗ, ಗಂಡು-ಹೆಣ್ಣಿನ ಸಂಬಂಧದಲ್ಲಿ, ಸಮಾನತೆಗೆ ವಿದ್ಯೆ, ಆರ್ಥಿಕ ಸ್ವಾತಂತ್ರ್ಯ ಅತಿ ಮುಖ್ಯವೆಂದೇನೋ ನನ್ನ ಎಳೆ ಮನಸ್ಸಿಗೆ-ಮಿದುಳಿಗೆ ಅನಿಸಿರಬೇಕು. ಅಮ್ಮನ ಪ್ರಕಾರ 'ಹೊಲಗದ್ದೆ ಗೇಯ್ದುಕೊಂಡು ಉಳಿದ ಅಕ್ಕ-ತಂಗಿಯರ ನಡುವೆ ಓದಿದೋರ ಕೈ ಹಿಡಿದ ತಾನು ಪುಣ್ಯವಂತೆ' ಅನ್ನಿಸಿದ್ದರೂ, ಈ ಅಮ್ಮನ ಸ್ಥಿತಿಗೆ ಎಲ್ಲಿಯೋ ನಾ ಅನುಕಂಪಿಸಿದ್ದೆ. ಆಕೆಯ ಅನಕ್ಷರತೆ, ಆರ್ಥಿಕ ಅವಲಂಬನೆ, ಆಕೆಯಿಂದ 'ಬದುಕಿನ ನಿರ್ಧಾರಗಳನ್ನು ನಿರ್ಣಯಗಳನ್ನು ತೆಗೆದುಕೊಳ್ಳಬಲ್ಲ ಹಕ್ಕನ್ನೇ ಕಿತ್ತುಕೊಂಡಿದೆ ಎಂದು ನನ್ನ ಹೊರಮನಸ್ಸಿಗೆ ತಿಳಿಯುವ ಮೊದಲೇ, ಒಳ ಮನಸ್ಸಿಗೆ ಅರಿವಾಗಿತ್ತು... ಈ ಎಲ್ಲಾ ನನ್ನ ವೈಯುಕ್ತಿಕ ಇತಿಹಾಸವನ್ನು ಬಿಚ್ಚಿಡಲು ಕಾರಣ, ನನ್ನ ಕತೆಗಳ ಸ್ತ್ರೀವಾದಿ ಚಿಂತನೆ ಆಕಸ್ಮಿಕವಲ್ಲ, ತಟ್ಟನೆ ಉದ್ಭವಿಸಿದ್ದಲ್ಲ ಎಂದು ತಿಳಿಸಲು. ಸ್ತ್ರೀವಾದ ನನ್ನ ವ್ಯಕ್ತಿತ್ವದ ಒಂದು ಮುಖ್ಯ ಭಾಗ- ಬಹುಮುಖ್ಯ ಭಾಗ. ನನ್ನ ಬದುಕಿನ, ಬದುಕುವ ಪರಿ ಇದಾಗಿದೆ.' ('ಲೇಖಿ-ಲೋಕ'ದಿಂದ ಆಯ್ದ ಭಾಗ) ನೇಮಿಚಂದ್ರರ ಸ್ತ್ರೀವಾದದ ಈ ನಿಲುವನ್ನು 'ಯಾದ್ ವಶೇಮ್'ನ ಪುಟಗಳಲ್ಲೂ ಕಾಣುತ್ತೇವೆ.

ಉದಾಹರಣೆಗೆ:- ...ಎಲ್ಲ ಯುದ್ಧಗಳಲ್ಲೂ ಬೆಲೆ ತೆತ್ತವರು, ಬಲಿಯಾದವರು ಹೆಂಗಸರು.

– ಆ ಯುದ್ಧ ಖೈಬರ್ ಯುದ್ಧ, ಯಹೂದಿಗಳು ಸೋತಿದ್ದರು. ಸತ್ತಿದ್ದರು ಆಕೆಯ ತಂದೆ, ಗಂಡ, ಸೋದರ, ಸಂಬಂಧಿಗಳೆಲ್ಲ. ಅದೇ ರಾತ್ರಿ ಆ ಯಹೂದಿ ಬಾಲೆ ಹದಿನೇಳರ ಚೆಲುವೆ ಸಫೈನಾಳನ್ನು ಪೈಗಂಬರರು ಮಡದಿಯಾಗಿಸಿಕೊಂಡರು. ಹೇಗಿತ್ತು ಅವಳ ಮನಸ್ಸು ಆ ರಕ್ತರಾತ್ರಿ, ಬಂಧು ಬಾಂಧವರನ್ನೆಲ್ಲ ಕಳೆದುಕೊಂಡ ಕಪ್ಪು ರಾತ್ರಿ. ಅವಳೆದೆಯಲ್ಲಿ ಏನಿತ್ತು? ಇತಿಹಾಸದ ಮೌನಗಳನ್ನು ಓದಲು ಸಾಧ್ಯವೆ? ಯುದ್ಧಗಳು, ಅಂದು ಸಾವಿರ ವರ್ಷಗಳ ಹಿಂದೆ ಮರಳುಗಾಡಿನಲ್ಲಿ ಕಾದಾಡಿದ ಯುದ್ಧಗಳು, ಸೆಳೆದೊಯ್ದ ಸೋತವರ ಹೆಣ್ಣುಮಕ್ಕಳು- ಸಾವಿರ ಸಾವಿರ ವರ್ಷಗಳ ನಂತರವೂ, ಅವೇ ಯುದ್ಧಗಳು. ಈಗಲೂ ಪುರುಷರು ಗೆಲ್ಲುತಾರೆ, ಸೋಲುತಾರೆ ಹೆಣ್ಣುಮಕ್ಕಳು...

– ಇತಿಹಾಸದಲ್ಲಿ ಎಷ್ಟೊಂದು 'ಹೆಣ್ಣು ಮೌನಗಳು'. ಹಿಂದೊಮ್ಮೆ ಎದೆ ನಡುಗಿತ್ತು. ಅಮ್ಮ ಹೇಳಿಲ್ಲದ ಮಹಾಭಾರತದ ಕಥೆಗಳನ್ನು ಬಿಡಿಸಿ ಓದುವಾಗ, ಅಲ್ಲಿದ್ದಳು ಮಾಧವಿಯಂತಹ ದಾನವಾದ ಹೆಣ್ಣು. ಯಯಾತಿಯ ಮಾತ್ತು ತಪ್ಪದ ಹಿರಿತನವನ್ನು,

ಗುರುದಕ್ಷಿಣೆ ಕೊಟ್ಟೇ ತೀರುವ ಗಾಲವನ ಹಟವನ್ನು ವೈಭವೀಕರಿಸಿದ ಪುರಾಣ ಪುಣ್ಯಕಥೆಗಳು. ಮಾಧವಿಯ ಹೆಣ್ಣುತನ ಹರಿದು ಹಂಚಿದ ಬಗೆಗೆ ಇತಿಹಾಸ ಮೌನವಿತ್ತು. ಒಬ್ಬ ಪುರುಷನ ಮಾತು ಉಳಿಸಲು, ಮತ್ತೊಬ್ಬ ಪುರುಷನ ಅಹಂಕಾರವನ್ನು ತೀರಿಸಲು, ನಾಲ್ವರು ರಾಜರೊಡನೆ ಒಲ್ಲದೆಯೇ ಕೂಡಿ, ಎದೆಹಾಲು ಚಿಲ್ಲೆನ್ನುವ ಹೊತ್ತಲ್ಲಿ, ಹೆತ್ತ ಕೂಸುಗಳನ್ನು ತೊರೆದು ನಡೆದ ಮಾಧವಿ. ಹೆಣ್ಣು ಬರೀ ದೇಹವಾದಳೆ, ದಾಹವಾದಳೆ, ತನುವ ದಾಟದ ಪುರುಷರಾಟಕೆ ಬರೀ ಮೋಹವಾದಳೆ- ಎಲ್ಲ ಧರ್ಮಗಳೂ ಏಕೆ ಮೌನವಾದವು ಅವಳ ಅಂತರಂಗದ ಕೂಗಿಗೆ?'

– 'ನಾವು ಹೆಣ್ಣುಗಳು. ಯಾರದೋ ಕಾಳಗದಿ ಜೀವ ತೆತ್ತವರು ನಾವು, ಯಾರದೋ ಕಲಹಕ್ಕೆ ತಲೆಯ ಕೊಟ್ಟವರು. ಧರ್ಮಕರ್ಮದ ಕತೆಯ ಹೇಳಿ ಸಮರಕ್ಕೆ ಸದಾ ಸಿದ್ಧರಾದ ಪುರುಷರು. ಯುಗಯುಗದ ಕಥೆಗಳಿವು. ಯುದ್ಧದಲ್ಲಿ, ಕ್ರಾಂತಿಯಲ್ಲಿ, ಗಲಭೆಯಲ್ಲಿ, ಶಾಂತಿಯಲ್ಲಿ, ನೊಂದವರು, ಬೆಂದವರು ನಾವು ಹೆಣ್ಣುಗಳು.'

'ಇಂದು ನಾನು ಬರೆಯಬೇಕೆಂದಿರುವುದು ನಿಜಕ್ಕೂ ಸಾವಿರವಿದೆ. ಹೇಳಬೇಕೆಂಬ ಒಳ ಒತ್ತಡವಿದೆ. ಅಪ್ಪನಂತೆ ಬದುಕಿನ ಕೊನೆಯ ದಿನಗಳವರೆಗೂ ನಾ ಬರಹಗಾರ್ತಿಯಾಗಿಯೇ ಉಳಿಯಬಯಸುತ್ತೇನೆ' (ಲೇಖ-ಲೋಕದಿಂದ ಆಯ್ದ ಭಾಗ). ಹೇಳಬೇಕೆಂಬ ಒಳಒತ್ತಡದ ಫಲವೇ 'ಯಾದ್ ವಶೇಮ್' ಕೃತಿ. ತಾನು ಕಂಡದ್ದೆಲ್ಲವನ್ನೂ ಆಕರ್ಷಕವಾಗಿ ಹೇಳುವ ಅಭಿಲಾಷೆ ನೇಮಿಚಂದ್ರರದು. ಡಾ. ಈಡಾಳ ಜೀವನಚರಿತ್ರೆಯೆ ಆಗಿರಲಿ, ಫ್ಲೇವಿಯಾಳ ಕಥೆಯಾಗಲೀ, ಮೇರಿ ಕ್ಯೂರಿಯ ಚರಿತ್ರೆಯಾಗಲಿ ಅಥವಾ ಅವರ ಪ್ರವಾಸ ಕಥನವಾಗಿರಲಿ ನಮ್ಮ ಮುಂದೆ ಮಂಡಿಸುವಾಗ ಅದೇ ಭಾಷೆಯ ಓಘ, ಅದೇ ರಂಜಿತ ಪದಗುಚ್ಛ, ಅದೇ ಆಕರ್ಷಕ ವಾಕ್ಯ ರಚನೆ. 'ನನಗೆ ಸ್ಫೂರ್ತಿ ನೀಡಿದ ಕತೆಗಳನ್ನು ಓದುಗರೊಡನೆ ಹಂಚಿಕೊಳ್ಳುತ್ತೇನೆ' ಎನ್ನುವ ನೇಮಿಚಂದ್ರರ ಮಾತು ನಿಜ. ಅವರ ಪ್ರಕಟಿತ ಕೃತಿಗಳ ಪಟ್ಟಿ ಇದನ್ನು ಸೂಚಿಸುತ್ತದೆ.

'ಯಾದ್ ವಶೇಮ್' ಕಾದಂಬರಿಯ ಕಥಾಭಾಗವನ್ನು ಗಮನಿಸೋಣ. ೧೯೪೩ರಲ್ಲಿ ಹ್ಯಾನಾ ಮತ್ತು ಅವಳ ತಂದೆ ನಾಝಿ ಹಿಡಿತದ ಜರ್ಮನಿಯಿಂದ ಜೀವ ರಕ್ಷಣೆಗಾಗಿ ಬೆಂಗಳೂರಿಗೆ ವಲಸೆ ಬಂದವರು. ದಾರುಣ ಸಂಗತಿ ಎಂದರೆ ಹ್ಯಾನಾಳ ಅಕ್ಕ, ಅಮ್ಮ ಮತ್ತು ಪುಟ್ಟ ತಮ್ಮ ತಪ್ಪಿಸಿಕೊಳ್ಳಲಾರದೆ ಸಿಕ್ಕಿಬಿದ್ದ ದುರ್ದೈವಿಗಳು. '...ನನಗೊಂದು ಉತ್ತರ ಬೇಕು. ಈ ಹೋರಾಟದ ಕೊನೆ ದುರಂತವಿರಲಿ ಸುಖಾಂತವಿರಲಿ ನನಗಿದಕ್ಕೊಂದು ಮುಕ್ತಾಯ ಬೇಕು...' ಎನ್ನುವ ಹ್ಯಾನಾಳ ಹುಡುಕಾಟದ ಪಯಣವೇ ಇಡೀ ಕಥೆಯ ಸಾರಾಂಶ. ಬಂದ ಕೆಲ ಸಮಯದಲ್ಲಿ ಅಪ್ಪನನ್ನು ಕಳೆದುಕೊಂಡ

ಹ್ಯಾನಾ ನೆರೆ ಮನೆಯ ಹೊರೆಯಾಗದೆ ಅವರೊಳಗೆ ಒಬ್ಬಳಾಗಿ ಆ ಮನೆಯ ಮಗ ವಿವೇಕನನ್ನು ಮದುವೆಯಾಗಿ ಈ ಸಂಸ್ಕೃತಿಗೆ ಒಗ್ಗಿ ಹೋಗುತ್ತಾಳೆ. ಹ್ಯಾನಾ ಬಂದಂದಿನಿಂದ ಅವಳ ಮಗ ದೊಡ್ಡವನಾಗುವವರೆಗಿನ ಅಧ್ಯಾಯವನ್ನು ವ್ಯಕ್ತಿ ಚಿತ್ರ ಎಂದು ನೋಡಬಹುದು. ಕಾರಣ ೧೯೪೩ರಿಂದ ೧೯೫೭+ ವರೆಗೆ ನಡೆಯುವ ಕೃತಿಯ ನಡೆಯಲ್ಲಿ ಸುಮಾರು ೬೦ರ ಒಳಗಿರುವ ಪುಟಗಳಲ್ಲಿ ಕಂಗೊಳಿಸುವುದು ಹ್ಯಾನಾಳನ್ನು 'ಅನಿತಾ' ಎಂದು ಹೆಸರಿಸಿ ತನ್ನವಳನ್ನಾಗಿ ಮಾಡಿಕೊಂಡ ಅಮ್ಮನ ವ್ಯಕ್ತಿಚಿತ್ರ. ಅದಕ್ಕೆ ಹಿನ್ನೆಲೆಯಾಗಿ ಬೆಂಗಳೂರಿನ ಇತಿಹಾಸ, ಬೆಳವಣಿಗೆ, ಜಾತಿ-ಪಂಗಡ, ಅವುಗಳ ಆಚರಣೆ, ದೇಶದ ಪರಿಸ್ಥಿತಿ ವಿವರವೆಲ್ಲಾ ಇದೆ. ಮನೆತನದ ಕಥೆಯ ಮೂಲಕ ಜೀವನದರ್ಶನ ಮಾಡಿಸುವ ಅಮ್ಮ ತುಂಬಾ ಆತ್ಮೀಯಳಾಗುತ್ತಾಳೆ. ಸರ್ವ ಧರ್ಮ ಸಮನ್ವಯಿಯಾಗಿ ಅವಳಾಡುವ ನುಡಿ, ಅವಳ ನಡೆ ಆಪ್ಯಾಯಮಾನ ಎನಿಸುವುದಲ್ಲದೇ, ಅವಳು ಯಾವ ಅಕ್ಷರಸ್ಥರಿಗೂ ಕಮ್ಮಿಯಲ್ಲದ ಬುದ್ಧಿವಂತೆ ಎನ್ನಿಸುತ್ತದೆ. ಹ್ಯಾನಾ ಭಾರತಕ್ಕೆ ಬಂದಿಳಿದ ದಿನದಿಂದ ವಿವೇಕನನ್ನು ಮದುವೆಯಾಗಿ ವಿಶಾಲ್ ಹುಟ್ಟುವವರೆಗೆ ಬದುಕುಳಿದ ಅಮ್ಮ ಸೌಹಾರ್ದತೆ, ಮಮಕಾರದ ಪ್ರತೀಕವಾಗಿ ನಿಲ್ಲುತ್ತಾಳೆ. 'ಗಿಡ ಮರ ಪ್ರಾಣಿ ಪಕ್ಷಿ ಎಲ್ಲವೂ ದೇವರ ಅಂಶ' ಎನ್ನುವ ಅಮ್ಮ, 'ಅಮ್ಮ, ಅಂತೂ ಕೊನೆಗೆ ಪಾಂಡವರು ಗೆದ್ದರಲ್ಲ?' ಎನ್ನುವ ಪ್ರಶ್ನೆಗೆ 'ಯುದ್ಧದಲ್ಲಿ ಯಾರಾದ್ರೂ ಗೆದ್ದವರುಂಟಾ ಮಗಾ? ಪಾಂಡವ್ರು ಏನಾ ಗೆದ್ರು ವಿಧವೆರೂ, ಅನಾಥ ಮಕ್ಳೂ ತುಂಬಿ ಹೋದ ರಾಜ್ಯದಾಗ, ತಮ್ಮೆಲ್ಲ ನಂಟ್ರು ಇಷ್ಟ್ರು ಮಕ್ಕಳನ್ನು ಕಳಕೊಂಡು ಯಾವ ಸುಖ ಸುರಕೊಂಡ್ರು?' ಎಂದು ಉತ್ತರಿಸುತ್ತಾಳೆ.

ಕಳೆದು ಹೋದ ಅಮ್ಮ, ಅಕ್ಕ ಮತ್ತು ತಮ್ಮನನ್ನು ಹುಡುಕಹೊರಟ ವಿವೇಕ ಮತ್ತು ಹ್ಯಾನಾಳ ಪಯಣ ಓದುಗರಿಗೆ ನಾಝಿ ಮಾರಣಹೋಮದ ವಿವರಗಳನ್ನು, ಸ್ಮಾರಕ, ಮ್ಯೂಸಿಯಮ್, ನಾಝಿ ಕ್ಯಾಂಪ್, ಚರ್ಚ್, ಜರುಸುಲೇಂನ ಎಲ್ಲ ತಾಣ, ಗೋಳು ಗೋಡೆ ಇದೆಲ್ಲದರ ಪರಿಚಯ ಮಾಡಿಸುತ್ತದೆ. ನಾಝಿ ಮಾರಣಹೋಮದ ಹೃದಯವಿದ್ರಾವಕ ವಿವರಗಳ ಪುಟಗಳು ತೆರೆದುಕೊಳ್ಳುತ್ತವೆ. ನೈಜ ಘಟನೆಗಳ ಸಂಗ್ರಹಗಳಿಂದಾಯ್ದು ಹೆಣೆದ ಘಟನೆಗಳು ಓದುಗರೆದುರು ಬಿಚ್ಚಿಕೊಳ್ಳುತ್ತವೆ. ಈ ಭಾಗ ಡ್ಯಾಕ್ಯುಮೆಂಟರಿ/ ಪ್ರವಾಸ ಕಥನದ ಶೈಲಿಯಲ್ಲಿ ವಿಷದವಾಗಿ ವರ್ಣಿಸಲ್ಪಟ್ಟಿದೆ. ಅಕ್ಕನ ಭೇಟಿಯ ನಂತರದ ಪುಟಗಳು ಜಗತ್ತಿನ ಬಹಳಷ್ಟು ಜಟಿಲವಾದ, ಕ್ಲಿಷ್ಟ ಎನಿಸಿದ ಇಸ್ರೇಲ್-ಪ್ಯಾಲಸ್ಟೈನ್ ಸಮಸ್ಯೆ ಕಡೆ ತಿರುಗಿ ನಿಜವಾಗಿಯೂ ಓದುಗರನ್ನು ಆಳವಾದ ಚಿಂತನೆಗೆ ಒಡ್ಡುತ್ತದೆ. ಲೇಖಕಿಯು ಮೂರೂ ಧರ್ಮಗಳ ಬಗೆಗೆ ನಡೆಸಿರುವ ಅಭ್ಯಾಸ, ಸಂಶೋಧನೆ, ಅವುಗಳ ಹಿಂದಿರುವ ಐತಿಹ್ಯ, ರಾಜಕೀಯ ಇತಿಹಾಸ ವಿಶ್ಲೇಷಣೆ ನಿಜಕ್ಕೂ ಮೆಚ್ಚುವಂತಹದು. ಹಾಗೆಯೇ 'ಅವರ ಜಿಹಾದ್, ಇವರ ಕ್ರೂಸೇಡ್,

ಅಂದಿನ 'ಅಂತಿಮ ಪರಿಹಾರ', ಗಾಝಾದಲ್ಲಿ ಇಂದಿನ ನಮ್ಮ ಯುದ್ಧ- ಎಲ್ಲಿ ವ್ಯತ್ಯಾಸವಿದೆ? ಕಣ್ಣಲ್ಲಿ ಹರಿದ ರಕ್ತದ ಕೆಂಪಿದೆ, ಕಿವಿಯಲ್ಲಿ ಅನಾಥ ಮಕ್ಕಳ ಆಕ್ರಂದನವಿದೆ.' ಎಂದು ಹ್ಯಾನಾಳ ಮಾತಿನಲ್ಲಿ ಹೇಳಿಸಿರುವ ವಾಕ್ಯಗಳಲ್ಲಿ ಸತ್ಯವಿದೆ. ಈ ಪುಟಗಳಲ್ಲಿ ಇಸ್ರೇಲ್ ಮತ್ತು ಪ್ಯಾಲಸ್ಟೇನರ ಆಗುಹೋಗು, ಇಬ್ಬರ ನಡುವಿನ ಹಿಂಸಾಚಾರ, ಅದಕ್ಕೆ ಕಾರಣ, ಅದರ ಮೂಲ, ಪರಿಣಾಮದ ಬಗ್ಗೆ ಕೂಲಂಕಷವಾದ ವಿವರಗಳಿವೆ. ಈ ಪಯಣ ಮುಗಿಸಿದ ಹ್ಯಾನಾ 'ತನ್ನ ನಾಡಿಗೆ'- ಭಾರತಕ್ಕೆ ಮರಳುತ್ತಾಳೆ. ಜಗತ್ತು ಹೊತ್ತಿ ಉರಿಯುವುದನ್ನು ನೋಡದೆ, ಅನ್ಯಾಯಗಳ ವಿರುದ್ಧ ನಿಲ್ಲುವ ಒಂದು ಧ್ವನಿಯಾಗುತ್ತಾಳೆ.

ದಬ್ಬಾಳಿಕೆ, ದೌರ್ಜನ್ಯ, ಶೋಷಣೆ, ಕ್ರೌರ್ಯ, ಹಿಂಸೆ, ಕೊಲೆ ಯಾವುದೇ ವ್ಯಕ್ತಿಯ ವಿರುದ್ಧವಾಗಲಿ, ಸಮುದಾಯದ ಮೇಲಾಗಲೀ, ಯಾವುದೇ ನೆಲದಲ್ಲಾಗಲಿ, ಯಾವುದೇ ಕಾಲದಲ್ಲಾಗಲಿ ಯಾರು ನಡೆಸಿದರೂ ಅದು ಅಕ್ಷಮ್ಯ. ಆ ಅಕ್ಷಮ್ಯ ಅಪರಾಧಗಳು ಕಾಲ ಚಕ್ರ ಉರುಳಿದಂತೆ ಇತಿಹಾಸದ ಗರ್ಭದಲ್ಲಿ ಹೂತುಹೋದದ್ದೆಷ್ಟು? ನಮ್ಮ ನೆಲ ಕಂಡಿಲ್ಲವೇನು ದೌರ್ಜನ್ಯದ ಪರಮಾವಧಿಯನ್ನು? ಅಲೆಗ್ಸಾಂಡರನಾದಿಯಾಗಿ, ಗೋರಿ ಮಹಮದ್, ಗಝ್ನಿ ಮಹಮದ್, ಮೊಘಲ್, ಫ್ರೆಂಚ್, ಡಚ್, ಪೋರ್ಚುಗೀಸ್, ಬ್ರಿಟೀಷರು ನಡೆಸಿದ ದೌರ್ಜನ್ಯ ಕಮ್ಮಿ ಏನು? ಚಿತ್ರಕಾರರ, ಶಿಲ್ಪಿಗಳ ನೇಕಾರರ ಕೈಗಳನ್ನು ಕತ್ತರಿಸಿದ ಹಂತಕರ ಬಗ್ಗೆ ದಾಖಲೆ ಎಲ್ಲಿದೆ? ಜನರಲ್ ಡಯರ್ ನೆನಪಿನಿಂದ ಮಾಸುತ್ತಿದ್ದಾನೆಯೆ? ಈ ದೌರ್ಜನ್ಯದ ವಿರುದ್ಧ ಆಕ್ರೋಶವಿರುವುದು ಬೇಡ, ನಿಜ; ಆದರೆ ಆ ಘಟನೆಗಳ ಪುನರಾವರ್ತನೆಯಾಗದಂತೆ ಜಾಗ್ರತೆ ಬೇಕಷ್ಟೆ? ಹಿಟ್ಲರನ ಕಾಲದಲ್ಲಿ ಯಹೂದಿ ಜನಾಂಗದ ವಿರುದ್ಧ ನಡೆದ ದೌರ್ಜನ್ಯವನ್ನು ಸಿನಿ ಪ್ರಪಂಚ ಚಲನಚಿತ್ರಗಳಾಗಿ, ಸಾಹಿತ್ಯಲೋಕ- ಕಾದಂಬರಿಗಳಾಗಿ/ ಜೀವನಚರಿತ್ರೆಯಾಗಿ/ ವ್ಯಕ್ತಿಚಿತ್ರವಾಗಿ, ಇತಿಹಾಸ ತಜ್ಞರ ಲೋಕ- ಸಂಶೋಧನಾ ಕೃತಿಗಳಾಗಿ/ ಪ್ರಬಂಧಗಳಾಗಿ, ವರದಿಗಾರರ ಸಮೂಹ- ವರದಿಗಳಾಗಿ/ಸಂದರ್ಶನಗಳಾಗಿ, ನಾಟಕರಂಗ- ನಾಟಕ ಪ್ರದರ್ಶನಗಳಾಗಿ, ಸೈಬರ್ ಜಗತ್ತು- ಮಾಹಿತಿ ಪುಟಗಳಾಗಿ, ಇಂದಿಗೂ ಜೀವಂತವಾಗಿಟ್ಟಿವೆ. ಮ್ಯೂಸಿಯಂಗಳು, ಸ್ಮಾರಕಗಳು ಜಗತ್ತಿನ ಸ್ಮೃತಿಪಟಲದ ಮೇಲೆ ಈ ದಾರುಣ ಚಿತ್ರದ ಛಾಯೆ ಮಸುಕದಂತೆ ನಿಂತಿದೆ. 'ಎಲ್ಲಿ ಎಸೆದರೂ ಬೇರಿಳಿಸಿ ಚಿಗುರಬಲ್ಲ ತಾಕತ್ತು...' ಇರುವ ಯಹೂದಿ ಸಮುದಾಯ, ಜಗತ್ತು ನಾಝಿ ಮಾರಣಹೋಮವನ್ನು ಮರೆಯಲು ಬಿಟ್ಟಿಲ್ಲ, ಎಂದೆಂದೂ ಜೀವಂತವಾಗಿಟ್ಟಿರುತ್ತದೆ.

ಈ ಭೂಭಾಗದಲ್ಲಿರುವ ನಮಗೆಲ್ಲಾ 'ಯಾದ್ ವಶೇಮ್'ನ ವಸ್ತು ಹೊಸದಲ್ಲ. 'ಶಿಂಡ್ಲರ್ಸ್ ಲಿಸ್ಟ್', 'ಒಡೆಸ್ಸಾ ಫೈಲ್', 'ಸೌಂಡ್ ಆಫ್ ಮ್ಯೂಸಿಕ್', 'ಫಿಡ್ಲರ್ ಆನ್ ದಿ ರೂಫ್', 'ಇಟ್ಸ್ ಎ ಬ್ಯೂಟಿಫುಲ್ ಲೈಫ್', 'ಪಿಯನಿಸ್ಟ್', 'ದಿ ಕೌಂಟರ್ ಫಿಟರ್', 'ದಿ ಬಾಯ್ ಇನ್ ಸ್ಟ್ರೈಪ್ಡ್ ಪೈಜಾಮಾಸ್' ಚಲನ ಚಿತ್ರಗಳನ್ನು ನೋಡಿದ್ದೇವೆ (ಕಾದಂಬರಿ

ಆಧಾರಿತ). ಇದಕ್ಕೂ ಮೀರಿ ಪ್ರಕಟವಾಗಿರುವ ಸಾವಿರಾರು ಪುಸ್ತಕಗಳಿವೆ ('ಫ್ರೆಡ್ರಿಕ್'- ಫ್ಯಾನ್ಸ್ ಪೀಟರ್ ರಿಕ್ಟರ್, 'ಇಫ್ ದಿಸ್ ಈಸ್ ಎ ಮ್ಯಾನ್'- ಪ್ರಿಮೋ ಲೆವಿ, 'ಎ ಮೊಡೆಲ್ ಚೈಲ್ಡ್ ಹುಡ್'- ಕ್ರಿಸ್ಟಿನಾ ವುಲ್ಫ್, 'ದಿ ಡೈರಿ ಆಫ್ ಆ್ಯನ್ ಫ್ರಾಂಕ್'- ಆ್ಯನ್ ಫ್ರಾಂಕ್, 'ನಂಬರ್ ದಿ ಸ್ಟಾರ್ಸ್'- ಲೂಯಿಸ್ ಲೌರಿ, 'ನೈಟ್'- ಡಾ. ಎಲ್ಲಿ ವೈಸಲ್...). ಸಣ್ಣ ವಯೋವರ್ಗದ ಮಕ್ಕಳಿಗಾಗಿ ನೂರಾರು ಪುಸ್ತಕಗಳಿವೆ. ಆದರೆ ಕನ್ನಡ ಸಾಹಿತ್ಯ ಲೋಕಕ್ಕೆ 'ಯಾದ್ ವಶೇಮ್' ಒಂದು ವಿಶಿಷ್ಟ ಸೇರ್ಪಡೆ. ನನ್ನ ದೃಷ್ಟಿಯಲ್ಲಿ ಗಮನಾರ್ಹವಾದ ಅಂಶವೆಂದರೆ 'ಪರದೇಶಿ' ಹ್ಯಾನಾಳನ್ನು 'ಸ್ವದೇಶಿ'ಯನ್ನಾಗಿಸಿ ಓದುಗರೊಟ್ಟಿಗೆ ಒಂದು ಆತ್ಮೀಯ ಬಂಧುತ್ವದ ಬುನಾದಿಯನ್ನು ಸೃಷ್ಟಿಸಿರುವುದು. ಈ ಕಾರಣಕ್ಕಾಗಿಯೇ ಪರಕೀಯವಾಗಿ ಉಳಿದುಹೋಗಿದ್ದ ಚರಿತ್ರೆಯ ಪುಟಗಳಲ್ಲಿನ ಹಿಟ್ಲರನ ಚರಿತೆ, ಮಹಾಯುದ್ಧದ ಬರಹಗಳು, ಓದುಗರ ಅಂತಃಕರಣಕ್ಕೆ ಇಳಿದು ಮನ ಕರಗಿಸುವ ಸ್ವಂತದ ಭಾವನೆಗಳಾಗಿ ಬಿಡುವುದು. ಈ ಸಂದರ್ಭದಲ್ಲಿ ನಾನು ನೋಡಿದ ಒಂದು ಚಲನಚಿತ್ರ ಹಾಗೂ ಕಿರು ಕಾದಂಬರಿಯ ಬಗ್ಗೆ ಸಂಕ್ಷಿಪ್ತವಾಗಿ ಹೇಳದಿದ್ದಲ್ಲಿ ನನ್ನ ಮನ ಹಗುರಾಗದು.

'ದಿ ಬಾಯ್ ಇನ್ ಸ್ಟ್ರೈಪ್ಡ್ ಪೈಜಾಮಾಸ್' (ಕಾದಂಬರಿ ಆಧಾರಿತ. ಲೇಖಕ ಜಾನ್ ಬೊಯನ್): ದೊಡ್ಡದೊಂದು ಮುಳ್ಳಿನ ಬೇಲಿ. ಮುಳ್ಳಿನ ಬೇಲಿಯಾಚೆ ಕಾನ್ಸೆಂಟ್ರೇಷನ್ ಕ್ಯಾಂಪ್‌ನಲ್ಲಿರುವ ಶ್ಮೂಲ್ ಜ್ಯೂಯಿಶ್ ಹುಡುಗ. ಈಚೆ ಇರುವವನು ಕ್ಯಾಂಪಿನ ಕಮಾಂಡರ್ ಮಗ ಬ್ರೂನೊ. ತನ್ನ ರೂಮಿನ ಕಿಟಕಿಯಿಂದ ಕಾಣುವ ಫ಼ಾರ್ಮ್ ಬಗ್ಗೆ ಅವನಿಗೆ ಯಾರೂ ಸರಿಯಾಗಿ ಹೇಳುವವರಿಲ್ಲ. ಅಲ್ಲದೆ ಅಲ್ಲಿಗೆ ಹೋಗದಿರುವಂತೆ ಕಟ್ಟುಪಾಡು. ಹಿರಿಯರಿಗೆ ತಿಳಿಯದಂತೆ ಇಬ್ಬರ ಸ್ನೇಹ ಬೆಳೆಯುತ್ತದೆ. ಒಮ್ಮೆ ಬ್ರೂನೊ ಬಂಗಲೆಗೆ ಕೆಲಸಕ್ಕಾಗಿ ನಿಯಮಿಸಲ್ಪಟ್ಟ ಶ್ಮೂಲ್, ಬ್ರೂನೊ ಕೊಟ್ಟ ಕೇಕ್ ತಿನ್ನುವಾಗ ಎಸ್.ಎಸ್. ಅಧಿಕಾರಿ ಕೈಗೆ ಸಿಕ್ಕಿ ಬೀಳುತ್ತಾನೆ. ಎದೆಗಾರಿಕೆ ಇಲ್ಲದ ಬ್ರೂನೊ ಶ್ಮೂಲ್‌ನನ್ನು ರಕ್ಷಿಸದೆ ಅವನು ಯಾರೋ ನನಗೆ ಗೊತ್ತೇ ಇಲ್ಲ ಎಂದು ಬಿಡುತ್ತಾನೆ. ಆಫ಼ೀಸರ್ ಶ್ಮೂಲ್‌ನನ್ನು ನಿಷ್ಕರುಣೆಯಿಂದ ಎಳೆದುಕೊಂಡು ಹೋಗುತ್ತಾನೆ. ಬ್ರೂನೋ ಕೆಲಬಾರಿ ಬೇಲಿಯ ಬಳಿ ಬಂದು ತನ್ನ ಗೆಳೆಯನನ್ನು ಕಾಣದೆ ಹಿಂತಿರುಗುತ್ತಾನೆ. ಕೆಲ ದಿನಗಳ ನಂತರ, ಭೀಕರವಾಗಿ ದೈಹಿಕ ಹಲ್ಲೆಗೊಳಗಾಗಿದ್ದ ಶ್ಮೂಲ್ ಸಿಗುತ್ತಾನೆ. ಕ್ಷಮೆ ಬೇಡಿದ ಬ್ರೂನೋನನ್ನು ಕ್ಷಮಿಸಿ ಬಿಡುತ್ತಾನೆ. ತನ್ನ ತಪ್ಪಿಗೆ ಪ್ರಾಯಶ್ಚಿತ್ತ ಎಂಬಂತೆ ಬ್ರೂನೊ, ಮೂರು ದಿನದಿಂದ ನಾಪತ್ತೆಯಾದ ಶ್ಮೂಲ್ ಅಪ್ಪನನ್ನು ಹುಡುಕಲು ಸಹಾಯ ಮಾಡಲು ಒಪ್ಪುತ್ತಾನೆ. ಶವಲ್‌ನಿಂದ ಮುಳ್ಳುಬೇಲಿಯ ಕೆಳಗೆ ದೊಗರನ್ನು ಕೊರೆದು ಬ್ರೂನೋ ಬೇಲಿಯಾಚಿನ ಜಗತ್ತನ್ನು ಪ್ರವೇಶಿಸುತ್ತಾನೆ.

ಗೆಳೆಯ ಮುಚ್ಚಿ ತಂದ 'ಸ್ಟ್ರೈಪ್ಡ್ ಪೈಜಾಮ' ಹಾಕಿಕೊಂಡ ಬ್ರೂನೊ, ಅವನೊಟ್ಟಿಗೆ ಕ್ಯಾಂಪಿನ ಗೂಡಿನಿಂದ ಗೂಡಿಗೆ ತಿರುಗುತ್ತಾ ಶ್ಮೂಲ್ ಅಪ್ಪನಿಗಾಗಿ ಹುಡುಕಾಟ ಶುರುಮಾಡುತ್ತಾನೆ. ಬೇಲಿಯಾಚೆ ಅದೇ ವೇಳೆಗೆ ಬ್ರೂನೊಗಾಗಿ ತೀವ್ರ ಹುಡುಕಾಟ ನಡೆದಿರುತ್ತದೆ. ಇದೇ ಸಮಯದಲ್ಲಿ ಎಸ್.ಎಸ್. ಆಫೀಸರ್‌ಗಳು ಕ್ಯಾಂಪಿನ ಜನರನ್ನು ಒಟ್ಟುಗೂಡಿಸಿ ಗ್ಯಾಸ್ ಚೇಂಬರ್ ಕಡೆಗೆ ದಬ್ಬ ತೊಡಗುತ್ತಾರೆ. ಏನಾಗುತ್ತಿದೆ ಎಂದು ತಿಳಿಯುವ ಮುನ್ನ ಗುಂಪಿನಲ್ಲಿ ಸಿಕ್ಕಿಬಿದ್ದ ಎಳೆಯರಿಬ್ಬರಿಗೂ ಹೊರಗೆ ಬರಲು ಅವಕಾಶವೇ ಇಲ್ಲದಂತಾಗುತ್ತದೆ. ಅಪ್ಪ ಬೇಲಿಯ ಒಳಗೆ ಕಾಲಿಡುವಷ್ಟರಲ್ಲಿ ಬ್ರೂನೋ, ಶ್ಮೂಲ್ ಮತ್ತು ನೂರಾರು ಮುಗ್ಧರ ಜೀವದ ಬಾಗಿಲೂ ಮುಚ್ಚಿರುತ್ತದೆ. ಬ್ರೂನೋ ಅಮ್ಮನ ಬಿಕ್ಕು, ಅಪ್ಪನ 'ಬ್ರೂನೋ' ಎಂಬ ತಾರಕ ಸ್ವರದ ಕೂಗು ೬ ಮಿಲಿಯನ್ ಜನರ ಸಾವನ್ನು ಪ್ರತಿಧ್ವನಿಸುತ್ತದೆ. ದಾರುಣ ಚಿತ್ರಗಳಿಲ್ಲ, ಹೊಟ್ಟೆ ತೊಳಸುವ ದೃಶ್ಯಗಳೂ ಇಲ್ಲಿಲ್ಲ (ಪ್ರತಿಮೆಯಾಗಿ ಬರುವುದು ಮುಳ್ಳುತಂತಿ ಬೇಲಿ, ಎತ್ತರದ ಚಿಮಣಿ, ನತದೃಷ್ಟ ಜನ ಧರಿಸಿದ ಪಟಾಪಟಿ ಪೈಜಾಮ). ಆದರೆ ಅಷ್ಟೇ ಪರಿಣಾಮಕಾರಿಯಾಗಿ ನಾಝಿ ಮಾರಣಹೋಮದ ನೋವನ್ನು ನಮ್ಮೆದೆಯಲ್ಲಿ ನೆಟ್ಟುವ ಸ್ತಬ್ಧ ಚಿತ್ರವಾಗಿ ನಿಂತುಬಿಡುತ್ತದೆ.

'ಫ್ರೆಡ್ರಿಕ್' (ಜರ್ಮನ್ ಲೇಖಕ: ಹ್ಯಾನ್ಸ್ ಪೀಟರ್ ರಿಕ್ಟರ್, ಇಂಗ್ಲಿಷಿಗೆ ಭಾಷಾಂತರ: ಎಡಿಟ್ ಕ್ರೋಲ್): ಒಂದು ನೇರ ಹಾಗು ಸರಳವಾದ ಪರಿಣಾಮಕಾರಿ ಕಾದಂಬರಿ. ಹಿಟ್ಲರನ ಕರಿನೆರಳಲ್ಲಿ ನಡೆದ ಯಹೂದಿ ಕುಟುಂಬವೊಂದರ ಅಧಃಪತನದ ಕಥೆ. ಫ್ರೆಡ್ರಿಕ್ ಗೆಳೆಯ ನಿರೂಪಕನಾಗಿ ಹೇಳುವ ಕಥೆ ಹಿಟ್ಲರನ 'ಉನ್ನತಿ' ಅಂಗುಲ ಅಂಗುಲವಾಗಿ ಇಡೀ ಯಹೂದಿ ಜನಾಂಗದ 'ಅವನತಿಯತ್ತ' ಕೊಂಡೊಯ್ದದ್ದನ್ನು ನಿರೂಪಿಸುತ್ತದೆ. ಯಹೂದಿ ಜನರ ವಿರುದ್ಧ, ದಿನಕ್ಕೊಂದರಂತೆ ಬಂದ ಕಾನೂನುಗಳ ಫಲವಾಗಿ ಫ್ರೆಡ್ರಿಕ್ ಶಾಲೆಯಿಂದ ಹೊರಹಾಕಲ್ಪಡುತ್ತಾನೆ, ಅವನ ಅಪ್ಪನನ್ನು ಕೆಲಸದಿಂದ ತೆಗೆದುಹಾಕುತ್ತಾರೆ, ಅವರ ಮನೆಯ ಮೇಲೆ ಹಲ್ಲೆ ನಡೆದು, ಮನೆಯಲ್ಲಿ ಇದ್ದುದೆಲ್ಲವೂ ದೋಚಲ್ಪಡುತ್ತದೆ, ತಾಯಿ ಸಾಯುತ್ತಾಳೆ. ಅಪ್ಪ ಕ್ಯಾಂಪಿಗೆ ಕಳಿಸಲ್ಪಡುತ್ತಾನೆ. ಅನಾಥನಾದ ಫ್ರೆಡ್ರಿಕ್‌ನ ಸಾವಿನೊಂದಿಗೆ ಕಥೆ ಮುಗಿಯುತ್ತದೆ. ಪುಸ್ತಕದ ಕೊನೆಯಲ್ಲಿ ೧೯೩೩ರಿಂದ ೧೯೪೫ರವರೆಗೆ ನಡೆದ ಘಟನೆಗಳು, ಯಹೂದಿ ಜನರ ವಿರುದ್ಧ ತರಲಾದ ಕಾನೂನುಗಳ ಮಾಹಿತಿ, ಆ ಅವಧಿಯ ಎಲ್ಲಾ ಕಾರ್ಯಗಳ ಸಾಕ್ಷಿಯಾಗಿ ನಿಲ್ಲುತ್ತವೆ. ಹಂತಹಂತವಾಗಿ ಅವರನ್ನು ಮಟ್ಟಹಾಕಿದ ಪರಿ ನಿಜಕ್ಕೂ ಅಚ್ಚರಿಯನ್ನೂ ನೋವನ್ನೂ ಒಟ್ಟಿಗೆ ತರುತ್ತವೆ. ಈ ಸ್ಯೂಚಂಕ ಕಾದಂಬರಿಗೆ ಪೂರಕವಾಗಿ ಬಂದಿದೆಯೆ ಹೊರತು ಕಾದಂಬರಿಯ ಅನುಭವಕ್ಕೆ ಯಾವ ಒಡ್ಡೂ ತರುವುದಿಲ್ಲ.

ಈ ಎರಡೂ ಸನ್ನಿವೇಶಗಳಲ್ಲಿ ವಿವರಗಳು ವಾಚ್ಯವಾಗಿಯೇ ಇಲ್ಲ. ಇವುಗಳಲ್ಲಿ ಕಥೆಯ ಕೇಂದ್ರ ಬಿಂದು, ಪಾತ್ರಗಳ ಮಾನವೀಯ ಸನ್ನಿವೇಶದ ಒಂದು ಮುಖಕ್ಕೆ ಒತ್ತುಕೊಟ್ಟು ವಿಸ್ತಾರವಾದ ನಕ್ಷೆಯನ್ನೊಳಗೊಂಡ ನಾಝಿ ಮಾರಣಹೋಮದ ಮರಣಾಂತಿಕ ನೋವನ್ನು ಎದೆಯಾಳದಲ್ಲಿ ಸ್ಫೋಟಿಸುವುದು.

ಒಂದು ಚಾರಿತ್ರಿಕ/ಐತಿಹಾಸಿಕ ಘಟನೆಯನ್ನು ಆಧಾರವಾಗಿಟ್ಟುಕೊಂಡು ಬರೆದ ಕನ್ನಡದ ಎರಡು ಮೇರು ಕಾದಂಬರಿಗಳನ್ನು ಇಲ್ಲಿ ಉಲ್ಲೇಖಿಸಿದರೆ ತಪ್ಪಾಗಲಾರದು ಎಂದುಕೊಂಡಿದ್ದೇನೆ. ೧) ಈಜಿಪ್ಟ್‌ನ ಬಲಿಷ್ಠ ಫೆರೋ ಅಧಿಕಾರದ ವಿರುದ್ಧ ದಂಗೆಯೆದ್ದ ನೀರಾನೆ ಪ್ರಾಂತ್ಯದ ಜನಸಾಮಾನ್ಯರ ಅಸಾಮಾನ್ಯ ಕಥೆಯನ್ನು ಹೇಳುವ ನಿರಂಜನರ 'ಮೃತ್ಯುಂಜಯ;' ಮತ್ತು ೨) ಹಲವು ಹೊತ್ತಿಗೆಗಳಿಂದ ಕೂಡಿದ ವಿಶಿಷ್ಟ ಕೃತಿ ಬಿ. ಪುಟ್ಟಸ್ವಾಮಯ್ಯನವರ ಬೃಹತ್ ಕಾದಂಬರಿ 'ಶರಣ ಚಳುವಳಿ' ('ಉದಯ ರವಿ', 'ರಾಜ್ಯ ಪಾಲ', 'ಕಲ್ಯಾಣೇಶ್ವರ', 'ನಾಗ ಬಂಧ', 'ಮುಗಿಯದ ಕನಸು', ಹಾಗೂ 'ಕ್ರಾಂತಿ ಕಲ್ಯಾಣ' ಹೊತ್ತಿಗೆಗಳು). ಇವುಗಳನ್ನು ಓದುವಾಗ ಆ ಶತಮಾನಕ್ಕೆ ಹೋಗಿ ಆ ಕಾಲದ ರಾಜಕೀಯ, ರಾಜತಾಂತ್ರಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಮುಖಗಳ ಅನುಭವವನ್ನು ಸ್ವತಃ ಅನುಭವಿಸುವಂತೆ ಭಾಸವಾಗುತ್ತದೆ. ಪುಟ್ಟಸ್ವಾಮಯ್ಯನವರು ಈ ರಚನೆಗಳಿಗಾಗಿ ಒಂದು ಸಾವಿರ ಶಾಸನಗಳನ್ನು ಓದಿದ್ದರೆಂದು ತಿಳಿದು ಬಂದಿದೆ. ನಿರಂಜನರು ಕೂಡ ಹತ್ತಾರು ವರ್ಷಗಳ ಸತತ ಸಂಶೋಧನೆ ನಡೆಸಿದ್ದರೆಂದು ಓದಿದ ನೆನಪು.

ಮೇಲೆ ಹೇಳಿದ ಕಾದಂಬರಿಗಳನ್ನು ಓದುವಾಗ ಆಗುವ ಅನುಭವಕ್ಕಿಂತ 'ಯಾದ್ ವಶೇಮ್' ಓದುವಾಗ ಆಗುವ ಅನುಭವ ವಿಭಿನ್ನ. ಕಾರಣ ನನ್ನ ಮಿತಿ ಇರಬೇಕು. ಕೆಲ ವಿಚಾರಗಳನ್ನು ಪಟ್ಟಿಮಾಡುತ್ತೇನೆ. 'ಯಾದ್ ವಶೇಮ್' ಓದಿದವರು, ಓದಲಿರುವವರು ಈ ವಿಚಾರಗಳನ್ನು ಅವರವರ ಭಾವಕ್ಕೆ ತಕ್ಕಂತೆ ಅರ್ಥೈಸಿಕೊಳ್ಳಬಹುದು. 'ಯಾದ್ ವಶೇಮ್'– ವ್ಯಕ್ತಿ ಚಿತ್ರ, ಡಾಕ್ಯುಮೆಂಟರಿ, ಪ್ರವಾಸ ಕಥನ, ವೈಚಾರಿಕ ಪ್ರಬಂಧದ ಮಿಶ್ರಣ ಅನಿಸುವುದು. ಅದರಲ್ಲಿ ಬರುವ ದಾಖಲೆಗಳು,.ಮಾಹಿತಿಗಳು, ವಿವರಗಳು ಸೂಚ್ಯವಾಗಿರದೆ ವಾಚ್ಯವಾಗಿವೆ. ನನ್ನ ಅನಿಸಿಕೆಗೆ ಕೃತಿಯ ಪುಟಗಳಲ್ಲಿ ಪ್ರವಾಸ ಕಥನದಂತೆ ಕಂಡುಬರುವ ಲೈವ್ ಫೋಟೋಗಳು ಕಾರಣವಿರಬಹುದು. ಪುಸ್ತಕದ ಹಿಂಬದಿಯಲ್ಲಿ 'ಕಥೆಯ ಬೆನ್ನು ಹತ್ತಿ...' ಬರಹದ ಕಾರಣದಿಂದಾಗಿ, ಹ್ಯಾನಾ ಮೈದಳೆಯುವ ಬದಲು ನೇಮಿಚಂದ್ರರೇ ಕೃತಿಯ ಉದ್ದಕ್ಕೂ ನಮ್ಮ ಜೊತೆಗಿದ್ದುಬಿಡುತ್ತಾರೆ. ಮತ್ತೊಂದು ಅಂಶ ಕಾದಂಬರಿಯ ಕಡೆಯವರೆಗೂ ಮಗ ವಿಶಾಲನಿಗೆ ತಾಯಿಯ ಹಿನ್ನೆಲೆ ಗೊತ್ತಿರಲಿಲ್ಲ ಎನ್ನುವುದು ಸಹಜವೆನಿಸಲಿಲ್ಲ. ನಿಮ್ಮ ಗಮನಕ್ಕೆ ತರಬೇಕೆನಿಸಿದ ಮತ್ತೊಂದು ವಿಷಯವೆಂದರೆ: ಬೇಳೂರು ಸುದರ್ಶನ ಅವರು ಈ ಕೃತಿ ಹಾಗೂ ಕನ್ನಡದ

ಮತ್ತೊಂದು ಜನಪ್ರಿಯ ಕೃತಿಯನ್ನು 'ಡಾಕ್ಯುಂಬರಿ' ಎಂದು ಕರೆದಿರುವುದು.

ಡಾರ್‌ಫ್ಲೋರ್, ಬಾಸ್ನಿಯಾ, ರುವಾಂಡ, ಸೊಮಾಲಿಯ, ಸೆಂಟ್ರಲ್ ಅಮೆರಿಕನ್ ರಿಪಬ್ಲಿಕ್, ಡೆಮೊಕ್ರಾಟಿಕ್ ರಿಪಬ್ಲಿಕ್ ಆಫ್ ಕಾಂಗೊ- ಎಲ್ಲಾ ಕಡೆಗಳಲ್ಲಿ ನಡೆದ, ನಡೆಯುತ್ತಿರುವ ಹತ್ಯೆ, ಹಿಂಸಾಚಾರ, ಹಲ್ಲೆಯನ್ನು ನಾಗರಿಕ ಸಮಾಜ ಅರ್ಥೈಸುವುದಾದರೂ ಹೇಗೆ? ೨೦ನೆಯ ಶತಮಾನವನ್ನು ಹೌಹಾರಿಸಿದ ಘಟನೆಗಳು ೨೧ನೆಯ ಶತಮಾನದಲ್ಲೂ ಮುಂದುವರೆಯಲು ಅವಕಾಶ ಮಾಡಿಕೊಡುತ್ತಿರುವ ಜಗತ್ತಿನಲ್ಲಿ ಶಾಂತಿಯೊಂದು ಕಲ್ಪನೆ ಹಾಗೂ ಭ್ರಮೆ ಏನು? ಸಿಯಾರಾ ಲಿಯೋನ್ ನಿವಾಸಿಯಾದ ತಾಯಿಯೊಬ್ಬಳು ತನ್ನ ೭ ವರ್ಷದ ಮಗಳನ್ನು, ಒಳ್ಳೆಯ ಶಾಲೆಗೆ ಹೋಗಲಿ, ಉತ್ತಮ ಬದುಕು ಅವಳದಾಗಲಿ ಎನ್ನುವ ಆಶಯದಿಂದ, ನ್ಯೂಯಾರ್ಕಿನಲ್ಲಿದ್ದ ತಂಗಿಯ ಮನೆಗೆ ಕಳುಹಿಸಿದ್ದಳಂತೆ. ಆ ಪುಟ್ಟ ಹುಡುಗಿ ತನ್ನ ಚಿಕ್ಕಮ್ಮ ಮತ್ತು ಅವಳ ಗೆಳೆಯ ಕೊಟ್ಟ ಚಿತ್ರಹಿಂಸೆಯಿಂದಾಗಿ ಬದುಕುಳಿಯದೇ ಹೋದಳು. ಇದು ಸಿ.ಬಿ.ಎಸ್. ನ್ಯೂಸ್ ಚೀಫ್ ಫಾರಿನ್ ಅಫೇರ್ ಕರೆಸ್ಪಾಂಡೆಂಟ್ ಲೋರಾ ಲೋಗನ್ 'ಅಮೆರಿಕನ್ ವುಮೆನ್ ಇನ್ ರೇಡಿಯೋ ಅಂಡ್ ಟೆಲಿವಿಜ಼ನ್' ಸೀರೀಸ್‌ನಲ್ಲಿ ಮಾತನಾಡುತ್ತಾ ತಾನು ವರದಿ ಮಾಡಿದ ಈ ಒಂದು ಘಟನೆಯನ್ನು ಉದ್ಧರಿಸಿದಳು. ರಕ್ಷಣೆಗೆ ಬಂದ ಒಂದು ಜೀವವನ್ನು ತೆಗೆದ ಬರ್ಬರತೆಗೂ ೬ ಮಿಲಿಯನ್ ಜನರ ಜೀವ ಬಲಿ ತೆಗೆಯಲು ಕಾರಣನಾದ ಹಿಟ್ಲರ್, ಅದಕ್ಕೆ ಸಹಾಯಕರಾದ ಅವನ ಹಿಂಬಾಲಕರ ಬರ್ಬರತೆಗೂ ವ್ಯತ್ಯಾಸ ಇದೆ ಏನು? 'ಒಂದು ಸುಸಂಸ್ಕೃತ ನಾಗರಿಕ ಸಮಾಜವನ್ನು ಅಳೆಯುವ ಮಾನದಂಡವೆಂದರೆ ಆ ಸಮಾಜ ಹಿರಿಯರ, ಮಕ್ಕಳ ಮತ್ತು ದೀನರ ಬಗ್ಗೆ ತೋರುವ ನಡವಳಿಕೆ ಮತ್ತು ಅವರ ಸ್ಥಿತಿಗೆ ಸ್ಪಂದಿಸುವ ಪರಿ' (ಡಾ. ಎಲ್ಲಿ ವೈಸಲ್ ಅವರ ಭಾಷಣದ ತುಣುಕು).

ಒಟ್ಟಾರೆ 'ಯಾದ್ ವಶೇಮ್' ಕನ್ನಡ ಸಾಹಿತ್ಯ ಲೋಕಕ್ಕೆ ಒಂದು ಅತ್ಯುತ್ತಮ ಸೇರ್ಪಡೆ ಎನ್ನುವುದಂತೂ ನಿಜ. ಇಸ್ರೇಲ್-ಪ್ಯಾಲಸ್ಟೇನ್‌ನಂತಹ ಜಟಿಲ ಹಾಗು ಕ್ಲಿಷ್ಟ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಯತ್ನಿಸಿ, ಓದುಗರಿಗೆ ಪರಿಚಯಿಸಿದ ನೇಮಿಚಂದ್ರರ ಹಲವಾರು ವರ್ಷಗಳ ಸುದೀರ್ಘ ಸಂಶೋಧನೆಯ ಪರಿಶ್ರಮ ನಿಜಕ್ಕೂ ಶ್ಲಾಘನೀಯ. ಸಮಸ್ಯೆಗಳು ಜಾಗತಿಕವಾಗಿ ಒಂದಕ್ಕೊಂದು ಹೆಣೆದುಕೊಂಡು ಪ್ರಪಂಚದಲ್ಲಿ ಎಲ್ಲರ ಬದುಕನ್ನು ಕ್ಲಿಷ್ಟ ಮತ್ತು ಜಟಿಲ ಮಾಡಿವೆ. ಈ ಸಂದರ್ಭದಲ್ಲಿ ಜಗದ ವಿವಿಧ ಭಾಗದ ಸಮಸ್ಯೆಗಳಿಗೆ ಪರಿಹಾರ ಹುಡುಕುವುದು, ಆ ಜಟಿಲ ಸಮಸ್ಯೆಯ ಬಗ್ಗೆ ಯೋಚಿಸುವುದು ಭೂಭಾಗದ ಎಲ್ಲರ ಕರ್ತವ್ಯ. ನೆರೆಮನೆಯ ಕಿಚ್ಚು ನಮ್ಮ ಮನೆ ಸುಡುವುದಕ್ಕೆ ಎಷ್ಟು ಹೊತ್ತು? 'ಯಾದ್ ವಶೇಮ್' ಈ ನಿಟ್ಟಿನಲ್ಲಿ ಓದುಗರ ಗಮನ ಸೆಳೆಯುತ್ತದೆ. 'ಅಂದು ನಿಂತು ನೋಡಿತ್ತು ಜಗತ್ತು.' ಆದರೆ ಇಂದು ನಿಂತು ನೋಡದೇ ಜಗತ್ತು ಪ್ರತಿಕ್ರಿಯಿಸಬೇಕು

ಎಂಬ ಧ್ವನಿಯನ್ನೆತ್ತುತ್ತದೆ. ಶೈಲಿ, ವಿಷಯ ಸಂಗ್ರಹಣೆ, ನಿರೂಪಣೆ, ವಸ್ತು, ಸಾಮಾಜಿಕ ಕಳಕಳಿ– ಈ ಎಲ್ಲಾ ದೃಷ್ಟಿಯಿಂದಾಗಿ 'ಯಾದ್ ವಶೇಮ್' ಒಂದು ಗಮನಾರ್ಹ ಕೃತಿಯಾಗಿ ಕನ್ನಡ ಸಾಹಿತ್ಯ ಲೋಕಕ್ಕೆ ಸೇರ್ಪಡೆಯಾಗಿದೆ. ಇದು ಸ್ವಾಗತಾರ್ಹ ಸಂಗತಿ.

**ಕೃತಿ ವಿವರ:** ಯಾದ್ ವಶೇಮ್, ನೇಮಿಚಂದ್ರ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೨೦೦೭, ಪು. ೨೮೮

*

# ಜೋಗಿಯವರ 'ಯಾಮಿನಿ'ಯೊಂದಿಗೆ ಮುಖಾಮುಖಿ

**–ಶಾಂತಲಾ ಭಂಡಿ, ಕುಪರ್ಟಿನೊ, ಕ್ಯಾಲಿಫೋರ್ನಿಯಾ**

ಖ್ಯಾತ ಪತ್ರಕರ್ತ ಹಾಗೂ ಸಾಹಿತಿ ಜೋಗಿಯವರ ಈ ಕಾದಂಬರಿಯನ್ನು ಅಂಕಿತ ಪುಸ್ತಕದ ೨೭೩ನೆಯ ಪ್ರಕಟಣೆಯಾಗಿ ಪ್ರಕಾಶ್ ಕಂಬತ್ತಳ್ಳಿಯವರು ಆಸ್ಥೆಯಿಂದ ೨೦೦೮ರಲ್ಲಿ ಹೊರತಂದಿದ್ದಾರೆ. ಉದಯ ಮರಕಿಣಿಯವರ ಮುನ್ನುಡಿ, ಲೇಖಕರ ಸ್ವಗತ ಹೊಂದಿದ ಈ ಕಿರು ಕಾದಂಬರಿ ಜೋಗಿಯವರ ಬರಹ ಶಕ್ತಿಗೊಂದು ಸಾಕ್ಷಿ.

**ಕೃತಿ ಮತ್ತು ಕರ್ತೃ:**

'ಓದುಗನಾಗಲು ಹೊರಟವನು ಕಥೆ ಬರೆದೆ. ಮೆಚ್ಚಿಕೊಂಡರು. ಮತ್ತೊಂದಿಷ್ಟು ಕಥೆಗಳನ್ನು ಬರೆದು ಪ್ರಕಟಿಸಿದೆ. ಮದುವೆಯಾಯಿತು. ಕತೆಯೊಂದು ಸಿನೇಮಾ ಆಯ್ತು. ರಾಜ್ಯಪ್ರಶಸ್ತಿಯೂ ಬಂತು. ಸೀರಿಯಲ್ಲು ಸಿನೆಮಾಗಳಿಗೆ ಸಂಭಾಷಣೆ ಬರೆದೆ. ಮನೆಯಾಯಿತು. ಖುಷಿಕೊಡುವುದು ಕನ್ನಡಪ್ರಭ ಪುರವಣಿ ವಿಭಾಗದ ಹುದ್ದೆ. 'ಬರೆಯುವುದಿಲ್ಲ' ಎಂದು ಕುಳಿತಾಗೆಲ್ಲ ಕತೆಗಳು ಹುಡುಕಿಕೊಂಡು ಬಂದು ಕಾಡಿವೆ. ಅಂಥ ಬೇಡಿಕೆಯ ಫಲ: ಜಾನಕಿ ಕಾಲಂ, ಜೋಗಿ ಮನೆಯ ಹಿತ್ತಲಹಾಡು, ರವಿ ಕಾಣದ್ದು, ಜೋಗಿ ಕತೆಗಳು, ಹಿಟ್ ವಿಕೆಟ್, ನದಿಯ ನೆನಪಿನ ಹಂಗು, ಸೀಳು ನಾಲಗೆ.' ಹೀಗೆ ಕವಿ, ಕಥೆಗಾರ, ಕಾದಂಬರಿಕಾರರಾದ ಜೋಗಿಯವರು ಕಿರುವಳೆಯಲ್ಲಿ ತಮ್ಮ ಪರಿಚಯ ಮಾಡಿಕೊಡುತ್ತಾರೆ. 'ನಲವತ್ತು ದಾಟಿದ್ದೇ ಸುಮ್ ಸುಮ್ನೆ ಕಣ್ಣೀರು' ಎಂಬುದಾಗಿ ಯಾಮಿನಿಯ ಆರಂಭಕ್ಕೆ ಮೊದಲು ಕಣ್ತುಂಬಿ ನುಡಿಯುತ್ತಾರೆ.

ಇವಿಷ್ಟು ಜೋಗಿಯವರ ತೆರೆದಿಟ್ಟ ಮನಸಾದರೆ, ಅವರಿವರಿಂದ ಕೇಳಿ, ಓದಿ ಜೋಗಿಯವರ ಬಗ್ಗೆ ನನಗೆ ತಿಳಿದದ್ದಿನ್ನಷ್ಟು. 'ಶಿಕಾರಿ', 'ಶಕ್ತಿ', 'ಜೀವನ', 'ಬೆಳ್ಳಿತೆರೆ' ಮುಂತಾದ ದೂರದರ್ಶನ ಧಾರವಾಹಿಗಳಿಗೆ ಸಂಭಾಷಣೆ ಹಾಗೂ 'ಶರಪಂಜರ', 'ಕಲ್ಯಾಣಿ', 'ಗುಪ್ತಗಾಮಿನಿ', 'ಪ್ರೀತಿ ಇಲ್ಲದ ಮೇಲೆ', 'ಬಂದೇ ಬರತಾವ ಕಾಲ' ಧಾರವಾಹಿಗಳಿಗೆ ಕಥೆ, ಚಿತ್ರಕಥೆ, ಸಂಭಾಷಣೆ ಒದಗಿಸಿದ ಗೌರವ ಜೋಗಿಯವರಿಗೆ

ಸಲ್ಲುತ್ತದೆ. ಜೋಗಿಯುವರಿಂದ ಲಿಖಿತವಾದ 'ಜೋಗಿ ಕತೆಗಳು' ಕಥಾಸಂಕಲನವು 'ವಿಶ್ವೇಶ್ವರಯ್ಯ ಪ್ರಶಸ್ತಿ', ಮತ್ತು 'ಜಾನಕಿ ಕಾಲಂ' 'ಹಾ. ಮಾ. ನಾಯಕ ಪ್ರಶಸ್ತಿ'ಯನ್ನೂ ಅವರಿಗೆ ಗಳಿಸಿಕೊಟ್ಟಿವೆ. 'ಕಾಡಬೆಳದಿಂಗಳು' ಚಲನಚಿತ್ರಕ್ಕೆ ಕಥೆ, ಚಿತ್ರಕಥೆ, ಸಂಭಾಷಣೆಗಳನ್ನು ಜೋಗಿಯವರೇ ನೀಡಿದ್ದು, ಈ ಚಲನಚಿತ್ರವು 'ಕರ್ನಾಟಕ ರಾಜ್ಯ ಪ್ರಶಸ್ತಿ'ಯನ್ನು ಪಡೆದಿರುತ್ತದೆ. 'ಮೌನಿ' ಚಿತ್ರಕ್ಕೆ ಹಾಗೂ 'ಕೇರ್ ಆಫ್ ಫುಟ್ ಪಾಥ್' ಚಲನಚಿತ್ರಕ್ಕೆ ಚಿತ್ರಕಥೆ ಒದಗಿಸಿರುವ ಜೋಗಿಯವರಿಂದ 'ರಾಯಭಾಗದ ರಹಸ್ಯ ರಾತ್ರಿ' 'ಯಾಮಿನಿ'ಯ ಜೊತೆಯಾಗಿ ಬಂದ ಹೊಸ ಕಥಾಸಂಕಲನ. ಜೋಗಿಯುವರನ್ನು ಕಥೆ, ಕಾದಂಬರಿಕಾರರಾಗಿ ಈ ಪರಿಯಾಗಿ ಪರಿಚಯಿಸಿ ಕೊಳ್ಳಬಹುದು.

ಆರಂಭದ ಪುಟವನ್ನೋದಿ ಪುಟ ಹೊರಳಿಸಿದರೆ ದಪ್ಪಕ್ಷರಗಳಲ್ಲಿ ಎದುರಾಗಿ ನಿಲ್ಲುತ್ತಾಳೆ 'ಯಾಮಿನಿ'. ನಂತರದ ಪುಟಪರದೆಯ ಮೇಲೆ ಕಾಣುವ ಉದಯ ಮರಕಿಣಿಯವರ ಮನಃಸ್ಪರ್ಶಿ ಮಾತುಗಳು 'ಯಾಮಿನಿ'ಯ ಬಗ್ಗೆ. ಜೊತೆ ಜೊತೆಗೆ ಜೋಗಿಯವರ ಬಗ್ಗೆಯೂ. ಜೋಗಿ ಮತ್ತು 'ಯಾಮಿನಿ'ಯ ಬಗೆಗಿನ ಉದಯ ಮರಕಿಣಿಯವರ ಮಾತುಗಳು ಅಂತ್ಯವಾಗುತ್ತಿದ್ದಂತೆ ಪರದೆಯ ಮೇಲೆದ್ದು ಬಂದಂತೆ ಜೋಗಿ ಕಾಣಿಸಿಕೊಂಡು ಈ ತೆರನಾಗಿ ನುಡಿಯುತ್ತಾರೆ: 'ಸಿನಿಮಾಕ್ಕೊಂದು ಕಥೆ ಕೊಡಿ ಎಂದು ಗೆಳೆಯ ಲಿಂಗದೇವರು ಕೇಳಿದಾಗ ಹೊಳೆದದ್ದು ಈ ಕಾದಂಬರಿ. ಯಾಮಿನಿ, ಚಿರಾಯು ಇಬ್ಬರೂ ನನಗಿಷ್ಟ; ಅವರು ಕೇಳಿಕೊಳ್ಳುವ ಪ್ರಶ್ನೆಗಳು ಕೂಡ. ಉತ್ತರ ಇನ್ನೂ ಸಿಕ್ಕಿಲ್ಲ ಎನ್ನುವುದಷ್ಟೇ ಖುಷಿ.' (ಪುಟ-೭) ಎಂಬ ಅವರ ನುಡಿ ಕಾದಂಬರಿ ಓದಲು ನಮ್ಮನ್ನು ಇನ್ನಷ್ಟು ಪ್ರೇರೇಪಿಸುತ್ತದೆ. ಚಿರಾಯು ಹಾಗೂ ಯಾಮಿನಿ ಪರಸ್ಪರ ಕೇಳಿಕೊಳ್ಳುವ ಪ್ರಶ್ನೆಗಳ ದಿಕ್ಕಿನೆಡೆ ಕುತೂಹಲ ಹೆಚ್ಚುತ್ತಿದ್ದಂತೆ ಕೈ ತಾನಾಗಿಯೇ ಸರಕ್ಕನೆ ಆ ಪುಟ ಮಗುಚಿದರೆ ಕಾದಂಬರಿ ಓದಲು ಮನ ಅಣಿಯಾಗುತ್ತದೆ.

**ಕಥೆಯ ಪರಿಚಯಾತ್ಮಕ ವಿಶ್ಲೇಷಣೆ:**

ಉತ್ಸಾಹದಲ್ಲಿ ಪುಟ ತಿರುವಿದಾಗ ಓದಲು ಸಿಗುವ ಮೊದಲ ವಾಕ್ಯವೇ ಕೊಂಚ ಇರುಸು ಮುರುಸಿನೊಂದಿಗೆ ಸಾಗುತ್ತದೆ. 'ಈ ವಾಕ್ಯವೇ ಕಾದಂಬರಿಯ ಆದಿಯಾಗುವ ಅನಿವಾರ್ಯತೆಯಾದರೂ ಏನಿತ್ತು?' ಎಂದುಕೊಳ್ಳುತ್ತ ಓದುತ್ತ ಹೋದಂತೆ ಕಾದಂಬರಿಯ ಕಥಾನಾಯಕ ಒಬ್ಬ ಕಾದಂಬರಿಕಾರನಾಗಿದ್ದು ಜೋಗಿ ಬರೆಯುವ ಯಾಮಿನಿಯ ಆರಂಭದ ಸಾಲುಗಳನ್ನು ಕಥಾನಾಯಕನಾದ ಚಿರಾಯುವೇ ಬರೆಯುತ್ತಾನೆನ್ನುವುದು ಕಾದಂಬರಿಯ ಆರಂಭದ ವಿಶೇಷತೆಗಳಲ್ಲೊಂದಾಗಿ ಕಾಣುತ್ತದೆ. ಹಾಗೆಯೇ ಆರಂಭದ ಈ ಸಾಲುಗಳ ಬಗೆಗೆ ತಮಗಿದ್ದ ಮುಜುಗರವನ್ನು ಸ್ವತಃ ಜೋಗಿಯವರು 'ಇಷ್ಟು ಶೃಂಗಾರಮಯವಾಗಿಯೋ ಲಜ್ಜೆಗೇಡಿಯಂತೆಯೋ ಬರೆಯುವುದು ನವ್ಯದ

ಶೈಲಿಯಾಯಿತಲ್ಲವೆ? ಈಗ ತೀರ ಹೊಸತೆನಿಸುವಂತೆ ಬರೆಯಲು ಹೊರಟವನನ್ನು ನವ್ಯದ ಅದೇ ಹಳೆಯ ಗುಂಗು ಯಾಕೆ ಕಾಡಬೇಕು? ವಿಮರ್ಶಕರು ಇದನ್ನು ಒಪ್ಪುತ್ತಾರಾ? ಓದುಗರಿಗೆ ಅದರಲ್ಲಿ ಆಸಕ್ತಿ ಹುಟ್ಟಲು ಸಾಧ್ಯವಾ?' (ಪುಟ-೯) ಎಂಬಂತಹ ಮಾತುಗಳನ್ನು ಚಿರಾಯುವಿನ ಮನದ ಪ್ರಶ್ನಾಲಹರಿಗಳನ್ನಾಗಿಸಿ ಬಿಂಬಿಸುತ್ತ ಚಿರಾಯುವಿನ ಪಾತ್ರವನ್ನು ಇನ್ನಷ್ಟು ಒಗಟಾಗಿಸುವಲ್ಲಿ ಜೋಗಿ ಸಫಲರಾಗುತ್ತಾರೆ. ಅಲ್ಲದೆ, ಆರಂಭಿಕ ಸಾಲುಗಳನ್ನು ಚಿರಾಯುವಿನಿಂದ ಬರೆಸಿ ತಾವು ಆ ಸಾಲುಗಳಿಂದ ಜಾರಿಕೊಂಡು ಕಾದಂಬರಿಯ ಆರಂಭದ ಬಗೆಗಿನ ತಮ್ಮ ಮುಜುಗರವನ್ನಿಷ್ಟು ಕಡಿಮೆ ಮಾಡಿಕೊಂಡಂತೆನಿಸುತ್ತದೆ.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಒಂದು ಕಾದಂಬರಿ ಚರ್ಚೆಗೆ ನಿಲ್ಲಬೇಕಾದರೆ ಕಾದಂಬರಿಯೊಂದು ಹೇಗಿರಬೇಕೆಂಬುದರ ಬಗೆಗಿನ ತಮ್ಮ ನಿಲುವನ್ನು ಲೇಖಕರು ಶ್ರದ್ಧಾ ಎಂಬ ಸ್ತ್ರೀ ಪಾತ್ರದ ಮೂಲಕ ಹೊರಗಿಡುತ್ತಾರೆ. ಹಾಗೆಯೇ ಹೆಣ್ಣೊಬ್ಬಳು ಸಮಾಜದಲ್ಲಿ ಎಷ್ಟೇ ಉನ್ನತ ಹುದ್ದೆಯಲ್ಲಿದ್ದರೂ, ಎಷ್ಟೇ ಜಾಣೆಯಾಗಿದ್ದರೂ ಅವಳ ಸಲಹೆಯನ್ನು ಎಲ್ಲ ಸಂದರ್ಭಗಳಲ್ಲಿಯೂ ಒಪ್ಪಿಕೊಳ್ಳಲಾರದಂತಹ ಗಂಡಿನ ಸಹಜ ಈಗೋ ಬಗ್ಗೆಯೂ ಸೂಕ್ಷ್ಮವಾದ ಹೇಳಿಕೆಗಳು ಸೂಕ್ಷ್ಮಸತ್ಯವನ್ನು ಬಯಲಿಗಿಟ್ಟು ಖುಷಿಕೊಡುತ್ತವೆ ಮತ್ತು ಓದಿದಾಗ ಮನಸ್ಸು ಆ ಸತ್ಯವನ್ನು ಒಪ್ಪಿಕೊಳ್ಳುತ್ತದೆ. ಮುಂದೆ 'ಗಂಡು ತನ್ನ ಅಹಂಕಾರವನ್ನು ಮರೆತು ಒಂದು ಹೆಣ್ಣಿನ ಜೊತೆ ಮಾತ್ರ ಬೆರೆಯಬಲ್ಲ' (ಪುಟ-೨೯)ಎಂಬ ಹೇಳಿಕೆ ಈ ಹಿಂದಿನ ಚಿರಾಯುವಿನ ಯೋಚನೆಗೆ ತದ್ವಿರುದ್ಧವಾಗಿದ್ದರೂ ಸಂದರ್ಭೋಚಿತವಾಗಿ ಸರಿಯೆನಿಸುತ್ತದೆ.

'ಸತ್ತ ಶಾನುಭೋಗರ ದಪ್ಪನೆಯ ಹೆಂಡತಿ ಮರ ಹತ್ತಿ ನೇಣು ಹಾಕಿಕೊಂಡ ದ್ದಾದರೂ ಹೇಗೆ?' (ಪುಟ-೯) ಅಂತೆಲ್ಲ ನಮ್ಮಂತೆಯೇ ಸಾಮಾನ್ಯವಾಗಿ ಯೋಚಿಸುವ, ಹಳೆಯ ದಿನಗಳನ್ನ ನೆನಪಿಸಿಕೊಳ್ಳುವ ಚಿರಾಯು ಅತೀ ಸಾಮಾನ್ಯ ವ್ಯಕ್ತಿಯಾಗಿ ಆರಂಭದಲ್ಲಿಯೇ ಇಷ್ಟವಾಗಿಬಿಡುತ್ತಾನೆ. ಹಾಗೆಯೇ ಅದೇ ಮುಂದಿನ ಸಾಲುಗಳಲ್ಲಿ ಅಂತಾರಾಷ್ಟ್ರೀಯ ಸಂಸ್ಥೆಯೊಂದರ ಇಪ್ಪತ್ತೆಂಟು ಲಕ್ಷ ರೂಪಾಯಿಗಳಿಗೆ ಒಂದು ಕಾದಂಬರಿ ಬರೆಯುವ ಒಪ್ಪಂದಕ್ಕೆ ಅಂಟಿಕೊಂಡು ಆರುಲಕ್ಷ ರೂಪಾಯಿಗಳಷ್ಟು ಹಣವನ್ನು ಮುಂಗಡ ಪಡೆದುಕೊಂಡ ಚಿರಾಯು ಬೇರೆಯದೇ ವ್ಯಕ್ತಿಯಾಗಿ- ಅಪ್ಪಟ ವ್ಯಾವಹಾರಿಕ ಸಾಹಿತಿಯಂತೆ- ಭಾಸವಾಗುತ್ತಾನಲ್ಲದೆ ಮನಸ್ಸು ಚಿರಾಯುವಿನ ಪಾತ್ರಕ್ಕೆ ಜುಬ್ಬಾ ಧರಿಸಿ ಗಡ್ಡಧಾರಿಯಾದ ಮಹಾನ್ ಸಾಹಿತಿಯೊಬ್ಬನ ಚಿತ್ರವೊಂದನ್ನು ಕಟ್ಟಿಕೊಳ್ಳುತ್ತದೆ.

ತನಗೆ ಬೇಸರವಾದಾಗ, ಬರೆಯುವ ಮನಸ್ಸಿಲ್ಲದೇ ಖಾಲಿ ಕುಳಿತಿದ್ದಾಗ ಚಿರಾಯುವಿಗೆ ಯಾಮಿನಿಯ ನೆನಪು ಕಾಡುತ್ತದೆ. ಅಂತಹ ಸಂದರ್ಭದಲ್ಲಿ ಅವಳನ್ನು ಬರಹೇಳಬೇಕು ಎಂದುಕೊಳ್ಳುವ ಚಿರಾಯು ಸ್ವಾರ್ಥಿಯಾಗಿ ಕಾಣಿಸಿದರೆ ಅದು ಚಿರಾಯುವಿನಂತಹ ಪಾತ್ರದ ತಪ್ಪು. ಹಾಗೆ ಯಾಮಿನಿಯನ್ನು ಬರಹೇಳಿದಾಗ ಯಾಮಿನಿ 'ಬರುವುದಿಲ್ಲ' ಎಂದು ಹೇಳಿ, ಕರೆ ಮಾಡುವ ಮುನ್ನ ಎಸ್ಸೆಮ್ಮೆಸ್ಸು ಕಳಿಸಿ ಚಿರಾಯುವಿನ ಮನಸ್ಸನ್ನು ಆ ಸುದ್ದಿಗೆ ಸಿದ್ಧಗೊಳಿಸುವಂಥ ಸಣ್ಣ ಎಳೆಗಳು ಪುಟ್ಟ ಕೆಲಸಕ್ಕೂ ಬೇಕಾಗಿರುವ ಪೂರ್ವಸಿದ್ಧತೆಯ ಬಗ್ಗೆ ಹೇಳುತ್ತವೆ.

'ವ್ಯಕ್ತಿತ್ವ ಇಲ್ಲದೇ ಇರುವವರು ಮಾತ್ರ ನಮ್ಮ ಅಹಂಕಾರಕ್ಕೆ ಹತ್ತಿರವಾಗಬಲ್ಲರು.' (ಪುಟ-೧೨) ಎಂಬಂತಹ ಸಾಲುಗಳು ಒಮ್ಮೆ ಕಾದಂಬರಿ ಓದುವುದನ್ನು ಬಿಟ್ಟು ನಮಗೆ ಹತ್ತಿರವಾಗಿರುವವರ ಕುರಿತು ಯೋಚಿಸುವಂತೆ ಮಾಡುತ್ತವೆ. ನಮ್ಮ ಹತ್ತಿರದ ವ್ಯಕ್ತಿಗಳಿಗೇ ವ್ಯಕ್ತಿತ್ವವಿಲ್ಲವೋ ಅಥವಾ ನಮಗೇ ಅಹಂಕಾರವಿಲ್ಲವೋ ಎಂದೆಲ್ಲ ಒಮ್ಮೆ ನಾವು ಯೋಚಿಸಿದಾಗ ಆ ಸಾಲು ಇಷ್ಟವಾಗುತ್ತದೆ. ಇದೇ ಯೋಚನೆಯನ್ನು ತಿರುವುಮುರುವಾಗಿಸಿಕೊಂಡು ನಮಗೆ ವ್ಯಕ್ತಿತ್ವವಿಲ್ಲದ್ದಕ್ಕೆ ನಮ್ಮ ಹತ್ತಿರದವರ ಅಹಂಕಾರಕ್ಕೆ ನಾವು ಸಾಥಿಗಳಾಗಿದ್ದೀವೇನೋ ಎನಿಸಿ ನಗು ಬರುತ್ತದೆ. ಇಷ್ಟೆಲ್ಲ ಯೋಚಿಸಿದ ಮೇಲೂ ಆ ಸಾಲು ಸಾಂದರ್ಭಿಕವಾಗಿ ಕಾದಂಬರಿಗೆ ಉಚಿತವೆನಿಸುತ್ತದೆಯಲ್ಲದೇ ನೆನಪಿನಲ್ಲುಳಿಯಬಹುದಾದ ಸಾಲುಗಳಲ್ಲಿ ಒಂದಾಗಿಬಿಡುತ್ತದೆ.

ಬೆಳದಿಂಗಳನ್ನು ಕಮ್ಯುನಿಸಮ್ಮಿಗೆ ಹೋಲಿಸಿ ಚಿರಾಯು ನಗುವಾಗ ನಮ್ಮೊಳಗೂ ಒಂದು ಪುಟ್ಟ ನಗು ಹಾದುಹೋಗುತ್ತದೆಯಾದರೂ ಎಂತಹ ನವಿರನ್ನೂ ತೀಕ್ಷ್ಣ ವಿಚಾರಕ್ಕೆ ಹೋಲಿಸಿದಾಗ ನವೀನ ರೀತಿಯ ಹೋಲಿಕೆ ಹೊಸಯೋಚನೆಗಳಿಗೆ ನಾಂದಿಹಾಡುತ್ತದೆಯೆಂಬುದೂ ಸಹ ಅಷ್ಟೇ ಸತ್ಯದ ಮಾತಾಗುತ್ತದೆ. 'ಬದುಕುವ ಮೂಲಕ ಬದುಕಿನಿಂದ ಬಿಡುಗಡೆ ಪಡೆಯುವ ಹಾಗೆ ಓದುವ ಮೂಲಕ ಬರೆದದ್ದರಿಂದ ಮುಕ್ತಿ ಹೊಂದಲು ಸಾಧ್ಯವಾ?' (ಪುಟ-೧೯) ಎಂಬಂತಹ ಚಿರಾಯುವಿನ ಯೋಚನೆಗಳು, ಪ್ರಶ್ನೆಗಳನ್ನು ಓದುಗನ ಮುಂದಿಡುವ ಮೂಲಕ ಓದುಗನ ಪ್ರಶ್ನೆಗಳಿಗೆ ಉತ್ತರಿಸುತ್ತವೆ. ಮರಳಿ 'ಚಿರಾಯು' ಎಂಬ ಪಾತ್ರವನ್ನು ಮರೆಯಾಗದಂತೆ ತಡೆಯುತ್ತವೆ. 'ನಿಮಿಷಕ್ಕೆ ನಲವತ್ತು ಪದ ಟೈಪ್ ಮಾಡಬಲ್ಲವನು ಗಂಟೆಗೆ ಎರಡು ಸಾವಿರ ಪದ ಟೈಪ್ ಮಾಡುತ್ತಾನೆ. ದಿನಕ್ಕೆ ನಾಲ್ಕು ಗಂಟೆ ಬರೆದರೂ ಸುಮಾರು ಹತ್ತು ಸಾವಿರ ಪದಗಳಾಗುತ್ತವೆ, ಒಂದು ಕಾದಂಬರಿಗೆ ಹೆಚ್ಚೆಂದರೆ ಅರವತ್ತು ಸಾವಿರ ಪದಗಳಿದ್ದರೆ ಸಾಕು, ಯೋಚಿಸಿ ಬರೆದರೂ ಇಪ್ಪತ್ತು ದಿನಗಳಲ್ಲಿ ಕಾದಂಬರಿ ಮುಗಿಯಬೇಕು' (ಪುಟ-೧೬). ಈ ತೆರನಾಗಿರುವ ಪ್ರೊಫೆಷನಲ್ ವಿಚಾರಧಾರೆಗಳಿಂದಾಗಿ ಒದಗುವಂತಹ ಪಡಿಪಾಟಲುಗಳು, ಪ್ರೊಫೆಷನಲ್ ಬರಹಗಾರನೊಬ್ಬನ ಕಷ್ಟಕಾರ್ಪಣ್ಯಗಳನ್ನು, ತಲ್ಲಣಗಳನ್ನು ಪರೋಕ್ಷವಾಗಿ ಲೆಕ್ಕಾಚಾರಸಹಿತ ನಮ್ಮೆದುರು ತೆರೆದಿಡುತ್ತವೆ.

'ಕಥೆಗಾರ ಮುಗ್ಧನಾಗಿರಬೇಕು. ಅಜ್ಞಾನಿಯಾಗಿರಬೇಕು. ತರ್ಕಬದ್ಧವಾಗಿ ಯೋಚಿಸಬಲ್ಲ ಸಾಮರ್ಥ್ಯ ಅವನಿಗೆ ಇರಕೂಡದು, ಹುಂಬನೂ ತನಗೆ ಅನಿಸಿದ್ದನ್ನು ಬರೆಯಬಲ್ಲವನೂ ಆಗಿರಬೇಕು' (ಪುಟ-೨೩)- ಈ ಪರಿಯಾಗಿ ತನ್ನ ಯೋಚನೆಗಳನ್ನು ತಿದ್ದುತ್ತಾ ಹೋಗುವ ಚಿರಾಯುವಿನ ಆಲೋಚನೆಗಳು ಒಮ್ಮೆ ಅಲ್ಲವೆನ್ನಿಸಿದರೆ, ಇನ್ನೊಮ್ಮೆ ಹೌದೆನ್ನಿಸುವಂತೆ ಸಾಗುತ್ತವೆ. ಅಂದರೆ ಲೇಖಕ 'ಲೆಸ್ ಇನ್ಫೋರ್ಮ್ಡ್' ಆಗಿರಬೇಕು ಎನ್ನುವ ನೆಲೆಗೆ ನಿಲ್ಲುವ ಯೋಚನೆಯ ತಿರುಳನ್ನು ಒಂದು ಪಕ್ಷ ಓದುವ ಯಾವುದೋ ಒಂದು ಮನಸ್ಸು ಒಪ್ಪಿಕೊಳ್ಳದಿದ್ದರೂ, ಬರೆಯುವ ಮನಸ್ಸು ಒಪ್ಪಿಕೊಳ್ಳುತ್ತದೆ. ಹಾಗೂ ಸಾಗುವ ಸಾಲುಗಳು ಲೇಖಕನಿಗೆ ಅಹಂಕಾರವಿರಕೂಡದೆಂಬುದನ್ನು ಅರಿತವರಿಗೂ ಸಹ, ಲೇಖಕನಲ್ಲಿರುವ ಯಾವ ರೀತಿಯ ಅಹಂಕಾರವು ಹೇಗೆ ಸ್ವಭರವಸೆಯಿತ್ತು ಅವನನ್ನು ಮುನ್ನಡೆಸಬಲ್ಲುದು ಎಂಬುದನ್ನು ಹೇಳುತ್ತವೆ.

ಈ ಕಾದಂಬರಿಯ ಪಾತ್ರವಾಗಿರದೆ, ಚಿರಾಯುವಿನ ಯಾವುದೋ ಕಾದಂಬರಿಯ ಪಾತ್ರವಾಗಿ ಈ ಕಾದಂಬರಿಯಲ್ಲಿ ಬರುವ ಸರಸ್ವತಿಯ ಪಾತ್ರ ತಣ್ಣಗೆ ಇಷ್ಟವಾಗುತ್ತದೆ. ತುಂಬ ತೀವ್ರವಾಗಿ ಬದುಕಿರದ, ಯಾವುದನ್ನೂ ಒಪ್ಪಿಕೊಳ್ಳದ, ಯಾವುದಕ್ಕೂ ಪ್ರತಿಕ್ರಿಯಿಸದ, ಯಾರನ್ನೂ ಅಷ್ಟು ಸುಲಭವಾಗಿ ತನ್ನೊಳಗೆ ಕರೆದುಕೊಳ್ಳದ ಹೆಣ್ಣಾಗಿ ಯಾವುದೋ ಕಾದಂಬರಿಯಲ್ಲಿ ಚಿತ್ರಿತವಾಗಿದ್ದ ಸರಸ್ವತಿಯದು ಇಲ್ಲಿ ಚಿರಾಯುವಿನೊಳಗಣ ನೆನಪಾಗಿ ಬರುವ ಪಾತ್ರವಾದರೂ, ಕೇವಲ ಮೂರೇವಾಕ್ಯಗಳಲ್ಲಿ ಆ ಪಾತ್ರ ಮುಗಿದೇ ಹೋದರೂ ಯಾಮಿನಿಗಿಂತಲೂ ಕೊಂಚ ಹೊತ್ತುನಿಲ್ಲುವ ಪಾತ್ರವಾಗಿ ಕಾಡುತ್ತಾಳೆ. ಯಾರೂ ಗಮನಿಸದ ಪಾತ್ರಗಳನ್ನು ಗುರುತಿಸಿದಾಗಲೇ ಪಾತ್ರಕ್ಕೂ ಹಾಗೂ ಪಾತ್ರದ ರಚನೆಕಾರನಿಗೂ ಹೆಚ್ಚು ಮಹತ್ವ ಸಿಗುವುದು ಸುಳ್ಳಲ್ಲವೆಂಬಂಥದೊಂದು ಹೇಳಿಕೆಯನ್ನು ಚಿರಾಯುವಿನ ಮನಸ್ಸಿನೊಳವಾಗಿ ಈ ಕಾದಂಬರಿಯಲ್ಲಿ ಕಾಣಬಹುದು.

ಅತ್ಯಂತ ಚಿಕ್ಕವಯಸ್ಸಿನಲ್ಲಿ 'ಜ್ಞಾನಪೀಠ' ಪ್ರಶಸ್ತಿ ಗಳಿಸುವ ಚಿರಾಯು ಸುತ್ತಮುತ್ತ ಹೊಗಳುತ್ತಿದ್ದವರಿಂದಲೇ ಆಕ್ಷೇಪಗಳನ್ನು ಕೇಳಬೇಕಾಗುತ್ತದೆ. ಇಂದಿನ ಸಾಹಿತ್ಯದ ಒಂದು ಭಾಗವಾಗಿರುವ ರಾಜಕೀಯ ನಡೆಯುವ ದಾರಿಯೆಡೆಗಿನ ಎಳೆಗಳನ್ನು ಕಿರಿದಾಗಿ ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಬರಹಗಳು, ಅವುಗಳ ಗುಣಮಟ್ಟ, ಅವು ತಂದುಕೊಡುವ ಪ್ರಶಸ್ತಿ, ಪುರಸ್ಕಾರಗಳೇ ಕೆಲವೊಮ್ಮೆ ಬರಹಗಾರನ ವೈಯಕ್ತಿಕ ಬದುಕನ್ನ ಬಯಲಿಗಿಡುವ ಹಾದಿಯೂ ಸಹ ಬರಹಗಾರನನ್ನು ವಿರೋಧಿಸುವ ಒಂದು ಮಾರ್ಗವಾಗಿರುವುದರ ಬಗ್ಗೆ ಸೂಕ್ಷ್ಮ ಎಳೆಗಳಿವೆ. ಚಿರಾಯು ಜ್ಞಾನಪೀಠ ಗಳಿಸಿದ ನಂತರ ಹೆಚ್ಚುವ ಪ್ರವಾಸಗಳು, ಭಾಷಣಗಳು ಅವನ ಸಮಯ ಹಾಗೂ ಇಚ್ಛೆಗೆ ಅವಲಂಬಿತವಾಗಿರದೇ ಅನಿವಾರ್ಯವಾಗುತ್ತವೆ. ವ್ಯಕ್ತಿಯು ಉನ್ನತಮಟ್ಟಕ್ಕೆ ಏರಿದಂತೆ ಅವನ ವೈಯಕ್ತಿಕ ಬದುಕಿನ ಇಚ್ಛೆಗಳು ಹಲವು ಬಾರಿ ಅವನವಾಗಿರದೆ

ಸಮಾಜದೊಳಗಿನ ಸುತ್ತುಗಳಾಗಿ ಕುತ್ತುಗಳಾಗುತ್ತವೆ ಎಂಬುದು ಹೊಸ ವಿಚಾರವಲ್ಲದೆಯೂ ಸಹ ಪ್ರತಿಯೊಬ್ಬನ ಬದುಕು ಹಾಗೂ ವೃತ್ತಿ ವಿಭಿನ್ನವಾಗಿರುವಂತೆ ಸಮಸ್ಯೆಗಳ ಹುಟ್ಟು ಸಹ ವಿಭಿನ್ನವಾಗಿರುವುದನ್ನಿಲ್ಲಿ ಕಾಣಬಹುದು.

ಉನ್ನತ ಸ್ಥಾನಮಾನಗಳು ವ್ಯಕ್ತಿಯನ್ನು ಸಮಾಜದ ಸುತ್ತೊಳಗೆ ಕಟ್ಟಿಟ್ಟೂ ಸಹ ಸಮಾಜದ ಜನರಿಂದ ವ್ಯಕ್ತಿ ಹೊರತಾಗಲ್ಪಡುತ್ತಾನೆ. ವ್ಯಕ್ತಿ ತನ್ನ ಸ್ಥಾನಮಾನ, ಘನತೆಗಳನ್ನು ಕಳಚಿಟ್ಟಾಗ ಸಾಮಾನ್ಯ ಜನರೊಂದಿಗೆ ಸಾಮಾನ್ಯನಾಗಿರಲು, ಎಲ್ಲರೂ ತನ್ನನ್ನು ಸಹಜವಾಗಿ ನೋಡಲಿ ಎಂಬುದಾಗಿ ಬಯಸಿದರೂ ತಾನೆಣಿಸಿಕೊಂಡಂತಿರ ಲಾಗದ ಮನಃಸ್ಥಿತಿಯೊಂದು ಕಾದಂಬರಿಯಲ್ಲಿ ನಮಗೆ ಗೋಚರವಾಗುತ್ತದೆ. 'ವಿರೋಧಿಗಳನ್ನು ಎದುರಿಸುವುದೇನೂ ಕಷ್ಟದ ಕೆಲಸ ಆಗಿರಲಿಲ್ಲ ಚಿರಾಯುವಿಗೆ. ಮೇಲ್ನೋಟಕ್ಕೆ ಅವನು ಹೇಗೇ ಪ್ರತಿಕ್ರಿಯಿಸಿದರೂ ಒಳಗೊಳಗೇ ಅವನಿಗೊಂದು ಆತ್ಮಶಕ್ತಿಯಿತ್ತು; ಯಾವ ಟೀಕೆಯೂ ಯಾವ ಮೆಚ್ಚುಗೆಯೂ ಅವನನ್ನು ಕಂಗಾಲು ಮಾಡುತ್ತಿರಲಿಲ್ಲ. ತನ್ನ ಸಂತೋಷ, ಬೇಸರ, ಕೋಪ, ಸಂಕೋಚ, ವಿನಯ ಎಲ್ಲವೂ ನಟನೆಯೆಂಬುದು ಚಿರಾಯುವಿಗೆ ಗೊತ್ತಿತ್ತು' (ಪುಟ–೩೬). ಈ ಸಾಲುಗಳಲ್ಲಿ ಎಲ್ಲವನ್ನೂ ಸಮಾನವಾಗಿ ಕಾಣುವ ಚಿರಾಯುವಿನ ಮನಸ್ಸು ಇಷ್ಟವಾಗುತ್ತದೆ. ಈ ಸಾಲುಗಳನ್ನು ಓದುತ್ತಲೇ ಹೊಗಳಿಕೆ ತೆಗಳಿಕೆಗಳನ್ನೆಲ್ಲ ನಿರ್ಲಕ್ಷಿಸಿದರೆ ಮನುಷ್ಯನಿಗೆ ಮನಃಶಾಂತಿ ಕೊಂಚ ಲಭ್ಯವಾಗಬಹುದೇ ಎಂಬೆಲ್ಲ ಯೋಚನೆಗಳು ಹುಟ್ಟಿಕೊಳ್ಳುತ್ತವೆ. ಅಂತೆಯೇ ಸಾಗುವ ಸಾಲುಗಳಲ್ಲಿ ವೈಯಕ್ತಿಕ ಬದುಕಿನಲ್ಲಿ ಮಾಧ್ಯಮಗಳು ತಲೆಹಾಕುವುದನ್ನು ಚಿರಾಯು ವಿರೋಧಿಸುವ ವಿಚಾರವೊಂದು ಮೂಡಿ ಚಿರಾಯುವಿನ ಪಾತ್ರದ ಆತ್ಮಶಕ್ತಿಯನ್ನು ವಿವರಿಸುತ್ತದೆ.

'ಆವತ್ತು ಹಾಗಿದ್ದೆ, ನನ್ನ ಯೌವನದಲ್ಲಿ ಹುಲಿಬೇಟೆ ಆಡಿದ್ದೆ, ಒಂದು ಕಾಲದಲ್ಲಿ ಹಾಗೆ ಮಾಡುತ್ತಿದ್ದೆ, ಅಂತ ಹೇಳಿಕೊಳ್ಳುವುದು ಸದ್ಯದ ಅಸಹಾಯಕತೆಯನ್ನು ತೋರಿಸುತ್ತದೆ. ವರ್ತಮಾನದಲ್ಲಿ ನಿರ್ಬಲನೂ, ನಿಷ್ಕ್ರಿಯನೂ ಆದ ಮನುಷ್ಯ, ಭೂತಕಾಲಕ್ಕೆ ಕನ್ನಡಿ ಹಿಡಿಯುವ ಮೂಲಕ ತನ್ನ ಶಕ್ತಿ, ಸೃಜನಶೀಲತೆ ಮತ್ತು ಸಾಮರ್ಥ್ಯವನ್ನು ಊರ್ಜಿತಗೊಳಿಸುವ ರೀತಿ ಅವನನ್ನು ತಲ್ಲಣಗೊಳಿಸುತ್ತಿತ್ತು' (ಪುಟ–೩೮). ಈ ಸಾಲುಗಳು ಬಹಳವೇ ಇಷ್ಟವಾಗುತ್ತವೆ. ಇಂದು ಮಾಡಲಾಗದೆ ಇದ್ದಪಕ್ಷ ನಾವು ಹಿಂದೆ ಮಾಡಿದ್ದನ್ನು ನೆನೆದು ಕೊರಗುತ್ತೇವೆ, ಇನ್ನೊಬ್ಬರ ಮುಂದೆ ಹೇಳಿಕೊಳ್ಳುವ ಅನಿವಾರ್ಯತೆಯೂ ಆಗಿಬಿಡುತ್ತದೆ; ಸುಳ್ಳಲ್ಲ ಅನ್ನಿಸುತ್ತದೆ.

ಚಿರಾಯು ಬರಹಗಾರನಾಗಿ ಪ್ರಸಿದ್ಧನಾಗುವುದಕ್ಕೂ ಮೊದಲು ಶರತ್ ಕುಮಾರ್ ಎಂಬ ಪ್ರಸಿದ್ಧ ನಟನೊಬ್ಬನನ್ನು ಕಾಣುವ ತವಕ ಹೊಂದಿರುವುದು, ಆ ನಟನನ್ನು ಸಂಧಿಸಿ ಅವನೊಡನೆಯೇ ನಾಲ್ಕು ದಿನ ಕಳೆಯಬೇಕಾಗಿ ಬಂದಾಗ ಅಷ್ಟೆಲ್ಲ ಪ್ರಸಿದ್ಧಿ

ಪಡೆದಿದ್ದ ಶರತ್ ಕುಮಾರ್ ಅಂತರಂಗದಲ್ಲಿ ಎಲ್ಲರಂತಿದ್ದ ಎನ್ನುವ ವಿಚಾರ ಚಿರಾಯುವಿಗೆ ಒಪ್ಪಿಕೊಳ್ಳಲಾಗದೇ ಇರುವಂತಹುದು, ನಟನೊಬ್ಬನು ಕಾಣಿಸುವ ನಟನೆ, ಬರಹಗಾರನೊಬ್ಬನು ಬರೆದ ಬರಹಗಳಲ್ಲಿನ ಭಾವಗಳನ್ನು ಇತರರು ಎಲ್ಲ ಸಂದರ್ಭಗಳಲ್ಲಿಯೂ ಬಾಲಿಶವಾಗಿ ಆ ವ್ಯಕ್ತಿಯೊಳಗೆ ಹುಡುಕಿ ನಿರಾಶರಾಗುವ ರೀತಿಯನ್ನಿಲ್ಲಿ ಪರೋಕ್ಷವಾಗಿ ಕಾಣಬಹುದು. ವೃದ್ಧಾಪ್ಯದಲ್ಲಿ ಮಾತಿಗೆ ಹಾತೊರೆಯುತ್ತಲಿದ್ದರೂ, ಏಕಾಕಿಯಾಗಿದ್ದರೂ ತನ್ನ ಸದ್ಯದ ಸ್ಥಿತಿಯಿಂದ ಹೊಮ್ಮುವ ಅನುಕಂಪ, ಒಂದು ಕಾಲದಲ್ಲಿ ತಾನು ಇಡೀ ನಾಡನ್ನೇ ತನ್ನೆಡೆಗೆ ಸೆಳೆದುಕೊಂಡಿದ್ದೆ ಎನ್ನುವ ಸತ್ಯದಿಂದ ಹೊಮ್ಮುವ ಅಹಂಕಾರ, ಎರಡೂ ಬೇಡವೆಂಬಂತೆ ಬದುಕುತ್ತಿರುವ ನಟ ಶರತ್ ಕುಮಾರ್ ಪಾತ್ರ ನಮ್ಮನ್ನು ಒಂದೆಡೆ ಹಿಡಿದಿಡುತ್ತದೆ. ಸಮಾಜದಲ್ಲಿ ಪ್ರಸಿದ್ಧಿ ಪಡೆದವರ ಪಾಡಿಗೆ ಶರತ್ ಕುಮಾರ್ ಪಾತ್ರ ಮತ್ತೊಂದು ಉದಾಹರಣೆಯಾಗುತ್ತದೆ. 'ದೊಡ್ಡ ಬರಹಗಾರ ಎಂಬ ಹೆಸರಿನಲ್ಲೇ ಲೇಖಕನ ಸಾಮರ್ಥ್ಯ ಸೋರಿಹೋಗುತ್ತದೆ. ತನ್ನ ಮುಂದೆ ನಿಂತು ಯುದ್ಧ ಮಾಡುವವನ ಅರ್ಧ ಶಕ್ತಿಯನ್ನು ಹೀರಿಕೊಳ್ಳುವಂಥ ಹಾರವೊಂದು ವಾಲಿಯ ಬಳಿ ಇತ್ತಂತೆ. ಹೊಗಳುಭಟರೂ ಹಾಗೇ, ಅರ್ಧ ಸೃಜನಶೀಲತೆಯನ್ನು ಕಸಿದುಕೊಂಡು ತನ್ನನ್ನು ಅದೇ ಪಂಜರದೊಳಗೆ ಬಂಧಿಯಾಗಿಸುತ್ತಾರೆ' (ಪುಟ-೫೩) ಎಂಬಂತಹ ಹೇಳಿಕೆಗಳು ಮೇಲಿನ ಸಂದರ್ಭಕ್ಕೆ ಪೂರಕವಾಗಿ ಮುಂದಿನ ಪುಟಗಳಲ್ಲಿ ಕಾಣಸಿಗುತ್ತವೆ.

ಚಿರಾಯುವಿಗೆ 'ಜ್ಞಾನಪೀಠ' ತಂದುಕೊಟ್ಟ ಕಾದಂಬರಿ ಯಾವುದಾಗಿರಬಹುದು ಎಂಬ ವಿಚಾರ ಕಥೆಯ ಅರ್ಧದತನಕ ನಮ್ಮನ್ನು ಕಾಡಿದರೂ ನಂತರ ಉತ್ತರ ಸಿಗುತ್ತದೆ. ಅದು 'ಮೇಘ ಮಲ್ಹಾರ'. 'ಮೇಘ ಮಲ್ಹಾರ' ಹೆಣ್ಣೊಬ್ಬಳ ವಿಷಾದವನ್ನು ಮಳೆಗೆ ಹೋಲಿಸಿ ಬರೆದ ಕಾದಂಬರಿಯೆನ್ನುವುದರ ಜೊತೆಗೆ ಆ ಕಥೆ ಅಲ್ಲಿಂದ ಬಿಚ್ಚಿಕೊಳ್ಳುತ್ತದೆ. ಒಂದು ಪಾತ್ರಕ್ಕೊಂದು ರೂಪಕವಾಗಲೀ, ಉಪಮೆಯಾಗಲೀ ಸೃಷ್ಟಿಯಾಗುವಾಗ, ಉಪಮೆ ರೂಪಕಗಳೇ ಇನ್ನೊಂದು ಪಾತ್ರವಾಗಿ ಕಥೆ ಕವಲೊಡೆದುಬಿಡುವಂತಹ ಸಮಸ್ಯೆ ಚಿರಾಯುವನ್ನು ಕಾಡುತ್ತದೆ. ಇದು ಓದುವಾಗ ನಮಗೆ ಅಂಥ ಸಮಸ್ಯೆಯಾಗಿ ಕಾಣಬರದಿದ್ದರೂ ಬರಹಗಾರನಿಗಿದು ಸಮಸ್ಯೆಯೇ. ಎಣಿಸಿಕೊಂಡ ರೀತಿಯಲ್ಲಿ ಕಥೆಯನ್ನು ಅಂತ್ಯಗೊಳಿಸಲಾಗದ ಸಂದಿಗ್ಧ ಸ್ಥಿತಿಯಲ್ಲಿ ಕಥೆಗಾರ ಗೆದ್ದರೂ ಸೋಲುತ್ತಾನೆ. ಇನ್ನು ಕೆಲವೊಮ್ಮೆ ಕಥೆ ಕವಲೊಡೆದಾಗ ಅಂತ್ಯ ಹೇಗೋ ಮುಗಿದುಹೋಗಿ ಗೋಜಲಾಗಿ ನಿಜವಾಗಿಯೂ ಕಥೆಗಾರ ಸೋಲುವ ಸಾಧ್ಯತೆಯೂ ಇದೆ ಎಂಬ ವಿಚಾರವನ್ನು ಕಾದಂಬರಿಯೊಳಗೆ ಚಿರಾಯುವೇ ಯೋಚಿಸುವ ಸಮಸ್ಯೆಯಾಗಿ ಕಾಣಬಹುದಾಗಿದೆ.

ಕಾದಂಬರಿಯಲ್ಲಿ ಬರುವ ನಿರ್ಮಲೆಯ ಅನೈತಿಕ ಸಂಬಂಧದ ಬಗ್ಗೆ ಹಿಂದಿನಿಂದ ಆಡಿಕೊಳ್ಳುವವರ ನಡುವೆಯೇ ಇದ್ದೂ ಚಿರಾಯು ಆ ಬಗ್ಗೆ ತಲೆಕೆಡಿಸಿಕೊಳ್ಳದೇ,

ಎಲ್ಲರಂತೆ ಏನೇನೋ ಯೋಚಿಸದೆ ಮೌನವಾಗಿದ್ದುಬಿಡುವ ರೀತಿ ಇಷ್ಟವಾಗುತ್ತದೆ. ಅಂದರೆ ಕಂಡವರ ಬಗ್ಗೆ ಅನಾವಶ್ಯಕ ಆಡಿಕೊಳ್ಳದವರನ್ನು ನೋಡಿದಾಗ ಸಹಜ ಖುಷಿಯಾಗುವಂತೆ ಚಿರಾಯುವಿನ ಪಾತ್ರವೂ ಹಿಡಿಸುತ್ತದೆ. ಆದರೆ ಅದೇ ನಿರ್ಮಲೆಯೊಂದಿಗೆ ಮುಂದೆ ಚಿರಾಯು ಸಹ ಸಂಬಂಧ ಬೆಳೆಸುತ್ತಾನೆ. ಚಿರಾಯು ಅನಾರೋಗ್ಯದಲ್ಲಿದ್ದಾಗ ಸೇವೆ ಮಾಡುವ ನಿರ್ಮಲೆಯಲ್ಲಿ ಚಿರಾಯು ಒಂದಾಗುತ್ತಾನೆ.

'ತನ್ನ ಪಾಲಿಗೆ ಮತ್ತೆ ಚಿಗುರಲಾರದಷ್ಟು ಗೊಡ್ಡಾಗಿರುವ ಮರ, ಹೊರನೋಟಕ್ಕೆ ಹಸಿರು ತುಂಬಿಕೊಂಡಂತೆ ಕಾಣಿಸುತ್ತದೆ. ಆದರೆ ಆ ಮರದಲ್ಲಿ ಗೂಡುಕಟ್ಟಿರುವ ಹಕ್ಕಿಗಳಿಗೆ ಈ ಮರದ ಆಯಸ್ಸು ಮುಗಿಯುತ್ತಾ ಬಂದಿದೆ ಎಂದು ಮೊದಲೇ ಗೊತ್ತಾಗಿಬಿಡುತ್ತದೆ. ಅಂಥ ಮರಗಳಲ್ಲಿ ಹಕ್ಕಿಗಳು ಗೂಡುಕಟ್ಟುವುದಿಲ್ಲ. ಪ್ರತಿವರ್ಷ ಗೂಡು ಕಟ್ಟುತ್ತಿದ್ದ ಗೀಜಗವೋ ಗಿಳಿಯೋ ಗೊರವಂಕವೋ ಅಲ್ಲಿ ಗೂಡುಕಟ್ಟಿಲ್ಲ ಅಂದರೆ ಅದರ ಆಯಸ್ಸು ಮುಗಿಯಿತು ಅಂತಲೇ ಅರ್ಥ' (ಪುಟ-೫೩) ಎಂಬಂತಹ ಸಾಲುಗಳಲ್ಲಿ ಕಾದಂಬರಿ ಕರ್ತೃ ಜೋಗಿ ಕಾಣಿಸಿಕೊಳ್ಳುತ್ತಾರೆ. ಹಾಗೆಯೇ ಮುಂದುವರೆಯುತ್ತಾ 'ತಿಳುವಳಿಕೆಗೆ, ಅರಿವಿಗೆ ಕಾಲದ ಮಿತಿಯಿಲ್ಲ. ಆದರೆ, ಮಾಹಿತಿ ಕಾಲಕಾಲಕ್ಕೆ ಬದಲಾಗುತ್ತಾ ಹೋಗುತ್ತದೆ' (ಪುಟ-೫೫) ಎನ್ನುತ್ತಾರೆ ಜೋಗಿ. ಇಂತಹವುಗಳೆಲ್ಲ ಜೋಗಿಯವರಿಂದಲೇ ಉದ್ಭವಿಸಿದ ಹೊಸ ಯೋಚನೆಗಳಲ್ಲವಾದರೂ, ತಮ್ಮೊಳಗಿನ ಇಂತಹ ಅನೇಕ ಸಿದ್ಧಾಂತಗಳನ್ನು ಅಲ್ಲಲ್ಲಿ ಮಂಡಿಸುತ್ತಾ, ಹೀಗೆ ಬರಹದ ರೂಪದಲ್ಲಿ ಅವುಗಳನ್ನು ಉಳಿಸಿಕೊಳ್ಳುತ್ತಾ ಹೋಗುತ್ತಾರೆ ಜೋಗಿಯವರು.

ಬೆಂಗಳೂರಿನಲ್ಲಿ ಕುಳಿತು ಬರೆಯುವುದಕ್ಕೆ ಸಾಧ್ಯವೇ ಇಲ್ಲ ಎನ್ನಿಸಿದಾಗ, ಚಿರಾಯು ಏಕಾಂತ ಅರಸಿ ಜನನಿಬಿಡವಾದ ನೆಟ್ವರ್ಕ್ ಸಿಗದ ತಾಣಕ್ಕೆ ಬಂದಿದ್ದಾಗಲೂ ತನಗೆ ಬರೆಯುವುದು ಸಾಧ್ಯವೇ ಇಲ್ಲವೆನಿಸಿ 'ಪೆಂಗ್ವಿನ್' ಸಂಸ್ಥೆಯ ಆರು ಲಕ್ಷ ರೂಪಾಯಿಗಳ ಚೆಕ್ಕನ್ನು ಪೆಂಗ್ವಿನ್ ಸಂಸ್ಥೆಗೇ ಮರಳಿಸಿಬಿಡಬೇಕೆಂದು ಯೋಚಿಸುವ ಚಿರಾಯು, ಹಾಗೆಯೇ ಮಾಡುತ್ತಾನೆ.

**ಕಥೆಯೊಳಗೆದುರಾಗುವ ಪಾತ್ರಗಳು:**

ಇಲ್ಲಿಯತನಕವೂ ಶೇಷು ಮತ್ತು ಚಿರಾಯು ಇಬ್ಬರೇ ನೇರವಾಗಿ ನಮ್ಮೆದುರು ಕಾಣಿಸಿಕೊಳ್ಳುವ ಪಾತ್ರಗಳಾಗಿರುತ್ತವೆ. ಚಿರಾಯುವಿನ ನೆನಪಾಗಿಯೋ, ಯೋಚನೆಗಳಾಗಿಯೋ ಅಥವಾ ಅವನ ಯಾವುದೋ ಕಥೆಗಳ ಪಾತ್ರಗಳಾಗಿಯೋ ಬರುವ ಜಯದೇವ, ವಿಜಯಲಕ್ಷ್ಮಿ, ಜಾಹ್ನವಿ, ಸತ್ತ ಶಾನುಬೋಗರ ಹೆಂಡತಿ, ಶ್ರದ್ಧಾ, ಮಾಲವಿಕಾ, ಭಾಗೀರಥಿ ಚಿಕ್ಕಮ್ಮ, ಶಶಿಧರ, ಅರ್ಚಕರಾಗಿದ್ದ ಚಿರಾಯುವಿನ ಅಪ್ಪ, ಅಮ್ಮ, ಶಾಮಣ್ಣ ಮೇಷ್ಟ್ರು, ಅಕ್ಕ ಸರಸ್ವತಿ, ಸುಶೀಲ್ ಸಹಾನಿ, ಊರ್ಮಿಳಾ ದೇಸಾಯಿ, ಸರಸ್ವತಿ

(ಸುಶೀಲೆ), ಸುಶೀಲೆಯ ಮಾವ, ಸುಶೀಲೆಯ ಗಂಡ ದೇವರಾಯ, ಸಂದರ್ಶಕಿ ವಂದನಾ ರಾವ್, ಸುಪರ್ಣಾ ದಾಸ್ ಗುಪ್ತಾ, ಸುಚಿತ್ರಾ ನಾಯಕ್; ಪತ್ರಕರ್ತ ರಂಜನ್, ಸುರೇಂದ್ರ ಬಸು, ನಳಿನಿ ಹೆಗಡೆ, ಕೊಂಡಜ್ಜಿ ನಾಗರಾಜ, ನಟ ಶರತ್ ಕುಮಾರ್, ಸುಬ್ಬಣ್ಣ, ತುಂಗಮ್ಮ, ಮೊಕ್ತೇಸರ ಶಂಕರನಾರಾಯಣ ನಾವಡ, ಭಾಗ್ಯಲಕ್ಷ್ಮಿ, ಬಾಬಣ್ಣ, ವಿಕ್ಟರ್‌ನ ಅಪ್ಪ ಜರ್ಮಿ, ಅನ್ನಪೂರ್ಣೆ, ನಿರ್ಮಲ, ವಾಸುದೇವ ಕಿಣಿ, ಶಿರೀಷ್, ಶಶಾಂಕ್ ಶರ್ಮ, ಮುಂತಾದ ಮೂವತ್ತೆಂಟಕ್ಕೂ ಹೆಚ್ಚು ಪಾತ್ರಗಳಲ್ಲಿ ಕೆಲ ಪಾತ್ರಗಳು ನೇರವಾಗಿ ಕಾಣಿಸಿಕೊಳ್ಳತೊಡಗಿ ಕಥೆಗೊಂದು ತಿರುವು ಬರುತ್ತದೆ. ಚಾಲನೆ ಸಿಗುತ್ತದೆ.

ಕಥೆಯ ಮಧ್ಯಂತರದಿಂದಾಚೆ ನೇರವಾಗಿಯೋ, ನೇರಪಾತ್ರಗಳ ನೆನಪಾಗಿಯೋ, ಯೋಚನೆಗಳಲ್ಲಿಯೋ ಸಿಗುವ ಪಾತ್ರಗಳಾಗಿ ರೋಹಿಣಿ ಟೀಚರ್, ವಿಕ್ಟರ್ ಡಿಸೋಜ, ಉಂಗುರ ಬೆರಳಿನ ಹೆಡ್ಮಾಸ್ಟರು, ವಿಕ್ಟರನ ಅಪ್ಪ, ರೋಹಿಣಿ ಟೀಚರ್ ಗಂಡ, ಕೃಷ್ಣಪ್ರಸಾದ, ಸಾಂಬ, ಸತ್ಯನಾರಾಯಣ ಮೇಷ್ಟ್ರು, ವಿಮಲಾ ಟೀಚರ್, ಶಾಲಿನಿ, ಸುಚಿತ್ರಾಳ ಗಂಡ ಸದಾಶಿವ ಫಣಿಕ್ಕರ್, ಸ್ಮಿತಾ, ಷಣ್ಮುಖ, ಚಿರಾಯುವಿನ ಮಾವ ನರಸಿಂಹಯ್ಯ, ನಾಗಪ್ಪಯ್ಯ, ಪುಸ್ತಕದಂಗಡಿಯ ಪಡುಕೋಣೆ, ಚೇತನ ತೀರ್ಥ, ವಿನಾಯಕ, ಚಿರಾಯುವಿನ ಅತ್ತೆ ಮಂಗಳಾ, ಮಾವ ವೇದವ್ಯಾಸ, ಮಣಿಯಾಣಿ, ಸ್ವಾಮೀಜಿಗಳು, ಸದಾನಂದಯ್ಯ, ನಾಗೇಶ ಐತಾಳ, ಶ್ರೀಪತಿ, ಸ್ಮಿತಾಳ ಅಮ್ಮ, ನಿತ್ಯಾನಂದ, ಭುವನೇಂದ್ರ, ಸಾಜೀದಾ, ಜಾಯ್ಸ್, ಫ್ರಾನ್ಸಿಸ್, ಪುರಂದರ, ಲಕ್ಷ್ಮಿ, ಸ್ವಾಮಿ, ಮುಂತಾದವರು ಕಂಡುಬರುತ್ತಾರೆ.

**ಮಧ್ಯಂತರದಿಂದಾಚೆಯ ಕಥೆಯ ಪರಿಚಯಾತ್ಮಕ ವಿಶ್ಲೇಷಣೆ:**

'ಪೆಂಗ್ವಿನ್' ಸಂಸ್ಥೆಯ ಚೆಕ್ಕನ್ನು ಮರಳಿಸಿದ ಚಿರಾಯು ಎಲ್ಲಿದ್ದಾನೆ ಎಂಬುದನ್ನು ಹುಡುಕುವುದೇ ಆ ಸಂಸ್ಥೆಯ ಕಾರ್ಯಕರ್ತರಿಗೆ ಸಮಸ್ಯೆಯಾಗುತ್ತದೆ, ದಿಗಿಲು ಹುಟ್ಟಿಸುತ್ತದೆ. ಏಕೆಂದರೆ ಬೆಂಗಳೂರಿನಲ್ಲಿ ಕುಳಿತು ಬರೆಯುವುದಕ್ಕೆ ಸಾಧ್ಯವೇ ಇಲ್ಲವೆಂದುಕೊಂಡ ಚಿರಾಯು ಏಕಾಂತವನ್ನರಸಿ ಹೋದದ್ದೆಲ್ಲಿಗೆ ಎಂಬುದರ ಸುಳಿವು ಯಾರಿಗೂ ಇರುವುದಿಲ್ಲ. ಉಳಿದರ್ಧ ಕಾದಂಬರಿಯ ತುಂಬೆಲ್ಲ ಕಥೆಗಾರ ಚಿರಾಯುವಿನ ಹುಡುಕಾಟವೇ ನಡೆಯುತ್ತದೆ.

ಈ ಮಧ್ಯೆ ಕಥೆ ಬರೆಯುವುದಿಲ್ಲವೆಂದು ನಿರ್ಧರಿಸಿ ಒಂಟಿಯಾಗಿ ಕುಳಿತ ಚಿರಾಯು, ಶೇಷು ತಂದಿಟ್ಟ ತನ್ನ ಹಳೆಯ ಕಾದಂಬರಿಗಳಲ್ಲಿ ಮೊದಲನೆಯದನ್ನು ಓದುವುದಕ್ಕಾಗಿ ಎತ್ತಿಕೊಳ್ಳುತ್ತಾನೆ. ಆ ಕಾದಂಬರಿಯ ಕಥೆಯೊಳಗಿನ ಯೋಚನೆಗಳು ಸುಳಿಯಾಗಿ ಸುಳಿಯಲಾರಂಭಿಸುತ್ತವೆ. ಆ ಸಂದರ್ಭದಲ್ಲಿ ಚಿರಾಯುವಿನ ಯೋಚನೆಯೊಂದು ಹೀಗೆ ಹೇಳಿಕೆಯಾಗಿ ಮೂಡುತ್ತದೆ, 'ಎಲ್ಲರ ಕಥೆಯೂ ಒಂದೇ. ಎಲ್ಲರ

ಬದುಕಿನ ಗತಿಯೂ ಒಂದೇ. ಅದು ಬರೆಯುವವನ ಮನಃಸ್ಥಿತಿಗೆ ತಕ್ಕಂತೆ ಬೇರೆ ಬೇರೆಯಾಗುತ್ತಾ ಹೋಗುತ್ತದೆ. ಹೀಗಾಗಿ ಕಥೆಗಾರನೇ ನಿಜವಾದ ಅರ್ಥದಲ್ಲಿ ಸೃಷ್ಟಿಕರ್ತ. ಅವನು ಭಾವನೆಗಳನ್ನು ರೂಪಿಸುತ್ತಾ ಹೋಗುತ್ತಾನೆ. ಯಾವಾಗ ಅಳಬೇಕು, ಯಾವಾಗ ಸಂತೋಷ ಪಡಬೇಕು, ಯಾವ ಭಾವವನ್ನು ಆರಾಧಿಸಬೇಕು; ಸೌಂದರ್ಯ, ಸಜ್ಜನಿಕೆ, ವಿನಯವಂತಿಕೆ, ಆದರ್ಶ ಎಲ್ಲವೂ ಅವನೇ ಸೃಷ್ಟಿಸಿ ಅದನ್ನು ಮುಂದಿನ ಜನಾಂಗಕ್ಕೆ ದಾಟಿಸುತ್ತಾ ಹೋಗುತ್ತಾನೆ.' ತಕ್ಷಣದ ಮುಂದಿನ ಸಾಲು ಹೀಗಿದೆ 'ಕ್ರಮೇಣ ಮನುಷ್ಯ ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಾ ಹೋಗುತ್ತಾನೆ. ಅಳುವುದಕ್ಕೆ, ನಗುವುದಕ್ಕೆ, ಸಂಘಜೀವನಕ್ಕೆ, ಕಾಮುಕತೆಗೆ, ವೈರಾಗ್ಯಕ್ಕೆ ಹೊಸ ಹೊಸ ನೆಪಗಳು ಸೃಷ್ಟಿಯಾಗುತ್ತಾ ಹೋಗುತ್ತವೆ' (ಪುಟ-೭೦).

ಚಿರಾಯುವನ್ನು ಹುಡುಗಿಯರ ಹಿಂದೆ ಬೀಳದಂತೆ ಕಾಯ್ದುಕೊಳ್ಳುವ ಸಲುವಾಗಿ ಚಿರಾಯುವಿನ ಪತ್ನಿ ಸ್ಮಿತಾ ಶೇಷು ಎಂಬ ಹುಡುಗನನ್ನು ನೇಮಕ ಮಾಡುತ್ತಾಳೆ. ಆದರೆ ಶೇಷು ಸ್ಮಿತಾಳಿಗಿಂತ ಹೆಚ್ಚಾಗಿ ಚಿರಾಯುವಿಗೇ ನಿಷ್ಠನಾಗಿರುತ್ತಾನೆ. ಕಾದಂಬರಿಯ ಆದಿಯಿಂದ ಅಂತ್ಯದ ಕ್ಷಣಗಳವರೆಗೂ ಕಾಣಿಸಿಕೊಳ್ಳುವ ಶೇಷುವಿನ ಪಾತ್ರ ಆಪ್ತವಾಗುತ್ತದೆ. ಚಿರಾಯುವಿನ ಜೊತೆಯಲ್ಲಿಯೇ ಇದ್ದು ಅವನ ಬೇಕು ಬೇಡಗಳನ್ನೆಲ್ಲ ನಿಷ್ಠೆಯಿಂದ ಗಮನಿಸಿ ಪೂರೈಸುವ ಶೇಷುವಿನ ಪಾತ್ರಕ್ಕೆ ಮೌನವಾಗಿದ್ದುಕೊಂಡೇ ಎಲ್ಲರ ಮನಗೆಲ್ಲುವ ಸಾಮರ್ಥ್ಯವಿದೆ. ಕಾದಂಬರಿಯಲ್ಲಿ ಯಾಮಿನಿಗಿಂತಲೂ ಶೇಷು ಹೆಚ್ಚು ಇಷ್ಟವಾಗುತ್ತಾನೆ. ಈ ನಡುವೆ ಸ್ಮಿತಾ ಯಾಮಿನಿಯೊಡನಾಡುವ ಮಾತುಗಳು 'ವಿಮಾನದಲ್ಲಿ ಬರುವಾಗ ನನಗೆ ಇಷ್ಟ ಆಗದೆ ಇರೋರು ಪಕ್ಕದ ಸೀಟಲ್ಲಿ ಕೂತಿದ್ರೆ ನಲವತ್ತು ನಿಮಿಷ ಅಂಥವರನ್ನು ಸಹಿಸೋಕ್ಕಾಗಲ್ಲ ನನ್ನ ಕೈಲಿ. ಇನ್ನು ನಲವತ್ತು ವರ್ಷ ಹೇಗೆ ಸಹಿಸಿಕೊಳ್ಳಲಿ. ನೀವಿಬ್ಬರೂ ಜೊತೆಗಿರಿ, ನನ್ನ ಕಣ್ಣೆದುರು ನಿನ್ನ ಚಿರಾಯು ಇರಬೇಕಾಗಿಲ್ಲ' (ಪುಟ-೭೯). ಈ ಮಾತುಗಳು ಇಷ್ಟವಾಗದೇ ಇರುವುದಿಲ್ಲ.

ಧರ್ಮಪತ್ನಿಯಿಂದ ಯಾವತ್ತೋ ದೂರಾಗಿದ್ದ ಚಿರಾಯುವನ್ನು ಯಾಮಿನಿಯೂ ಬಿಟ್ಟು ಹೋದಾಗ ಬರುವ ಸಾಲುಗಳು ಇಂತಿವೆ: 'ಬಾಳೆಯೆಲೆ ಹರಿದಿತ್ತು, ಅದನ್ನಿನ್ನು ಒಣಗಿಸಿದರೂ ಅಷ್ಟೇ, ಬಾಡಿಸಿದರೂ ಅಷ್ಟೇ, ಹಾಗೇ ಬಿಟ್ಟರೂ ಅಷ್ಟೇ' (ಪುಟ-೭೯). ಕಾದಂಬರಿಯಲ್ಲಿ ಸಿಗುವ ಅವರವರ ಭಾವಕ್ಕೆ ಬಿಡುವ ಇಂತಹ ಸಾಲುಗಳು ಇಷ್ಟವಾಗುತ್ತವೆ. ಬದುಕಿನಲ್ಲಿ ಗಂಡಹೆಂಡಿರ ನಡುವೆ ಬರುವ ಗೆಳತಿಯೊಬ್ಬಳಿಂದ ಬದುಕು ಬೇರೆಯದೇ ತಿರುವು ಕಾಣುತ್ತದೆಯೆಂಬ ಕಥೆ ತೀರಾ ಸಾಮಾನ್ಯವಾದುದಾದರೂ ಬರಹಗಾರನ ಬದುಕಿನಲ್ಲಿ ಅದೊಂದು ಅವಶ್ಯಕತೆ ಯೆಂಬುದಾಗಿ ಇಲ್ಲಿ ಮೂಡಿರುವ ರೀತಿ ಸ್ವಲ್ಪ

ಹೊಸದೆನಿಸುತ್ತದೆ. ಸರಿ ತಪ್ಪುಗಳನ್ನು ಯೋಚಿಸುತ್ತ ಓದುವವರಿಗೆ ಯೋಚನೆಗೊಂದು ಘನವಿಷಯ ಸಿಕ್ಕಂತಾಗುತ್ತದೆ. ಕಥೆಯೊಂದನ್ನು ಬರಿಯ ಕಥೆಯಾಗಿ ಮಾತ್ರ ಓದುವ ನನ್ನಂಥವರಿಗೆ ಕಥೆ ಇಷ್ಟವಾಗಲೂಬಹುದು.

ಗಂಭೀರವಾಗಿ ಸಾಗುವ ಕಥೆಯ ಮಧ್ಯೆ ನಾಗಪ್ಪಯ್ಯನವರ ಪಾತ್ರ ಗಾಂಭೀರ್ಯವನ್ನು ತುಸು ಸಡಿಲಿಸುತ್ತದೆ. ಅಲ್ಲಿ ನವಿರು ಹಾಸ್ಯವನ್ನು ಸಹ ಕಾಣಬಹುದಾಗಿದೆ. ಕಾದಂಬರಿ ಸಿನಿಮಾ ಆದರೆ ಹೇಗಿರುತ್ತದೆ? ಎಂಬುದಾಗಿ ಕಲ್ಪಿಸಿಕೊಳ್ಳುತ್ತಾ ಓದಿದಾಗ ಈ ಸನ್ನಿವೇಶ ಸ್ವಲ್ಪ ಹೆಚ್ಚೇ ನಗುವನ್ನು ತರಿಸುತ್ತದೆ. ಯೇಟ್ಸ್, ಮ್ಯಾಡ್ ಜೇನ್ ಮತ್ತು ವಾನ್ ಗೋ ಬಗ್ಗೆಯೂ ಒಂದು ಸಂಭಾಷಣೆಯಲ್ಲಿ (೯೮-೯೯ನೆಯ ಪುಟಗಳು) ಪ್ರಸ್ತಾಪವಿದ್ದು, ಈ ಪ್ರಸ್ತಾಪಗಳು ಕಥೆಯ ಪಾತ್ರಗಳಿಗೆ ಹೊಳಪು ಕೊಡುತ್ತವೆ. 'ಭಾವನಾತ್ಮಕ ಸಂಬಂಧವನ್ನು ಮೀರಿದ್ದು ಸೃಷ್ಟಿಸುವ, ಪ್ರದರ್ಶಿಸಿಕೊಳ್ಳುವ, ಮೀರುವ, ಮೆರೆಯುವ ಅಭಿಲಾಷೆ. ಅದು ಪರಸ್ಪರ ಪೂರಕವಾಗಿದ್ದಾಗಷ್ಟೇ ಸಮಬಂಧ ಶಾಶ್ವತವಾಗುತ್ತದೆ. ಪ್ರೀತಿಯಿಂದಾಗಿ ಕ್ರಿಯಾಶೀಲನಾಗುವ ಮನುಷ್ಯ, ದ್ವೇಷದಿಂದಲೂ ಅಷ್ಟೇ ಕ್ರಿಯಾಶೀಲ ಆಗಬಲ್ಲ.' (ಪುಟ-೧೦೦) ಎಂಬಂತಹ ಸೈದ್ಧಾಂತಿಕ ಸಾಲುಗಳು 'ಕಾದಂಬರಿ ಚೆನ್ನಾಗಿಲ್ಲ, ಇಷ್ಟವಾಗಲಿಲ್ಲ' ಎಂದು ಸಲೀಸಾಗಿ ಹೇಳಿಬಿಡಬಲ್ಲವರ ಮಾತುಗಳನ್ನು ಕಟ್ಟಿಹಾಕುತ್ತವೆ.

'ಎಲ್ಲಿಗೆ ಎಂದು ಹೊರಟಾಗಲೂ ಗೊತ್ತಿರಬಾರದು, ತಲುಪಿದ ಮೇಲೆ ಹೊರಟ ಜಾಗ ನೆನಪಿರಬಾರದು, ಅಂಥ ಸ್ಥಿತಿಯಲ್ಲೇ ನಿಜವಾದ ಸಂತೋಷ ಸಿಗೋದಕ್ಕೆ ಸಾಧ್ಯ.' (ಪುಟ-೧೧೦) ಅಂದುಕೊಳ್ಳುತ್ತಾ ಚಿರಾಯು ಎಲ್ಲದರಿಂದಲೂ, ಎಲ್ಲವುಗಳಿಂದಲೂ ಮುಕ್ತವಾಗುತ್ತಾ ಯಾಮಿನಿಯೊಂದಿಗೆ ಹೊರಟುಹೋಗುತ್ತಾನೆ. ಕಾದಂಬರಿಯ ಅಂತ್ಯದತನಕವೂ ಕಾಣಿಸಿಕೊಳ್ಳುವವನೆಂದರೆ ಆರಂಭದಿಂದಲೂ ಇರುವ ಶೇಷು. ಚಿರಾಯು ವಹಿಸಿದ ಕೆಲಸವನ್ನು ಮುಗಿಸಿದ ಶೇಷು ಕೊನೆಯ ಪುಟದಲ್ಲಿ ಯಾ ಸಿನೇಮಾ ಪರದೆಯಲ್ಲಿ ದಟ್ಟ ಕಾಡಿನ ನಡುವಿನಲ್ಲಿ ಹರಿದ ಹಾದಿಯಲ್ಲಿ ಡ್ರೈವ್ ಮಾಡಿಕೊಂಡು ಮರೆಯಾಗುತ್ತಾನಾದರೂ ಓದಿದವರ ಮನಸ್ಸಿನಿಂದ ಮರೆಯಾಗುವುದಿಲ್ಲ. ಓದುಗರ ಮನಸ್ಸಿನಲ್ಲಿ ಶೇಷು ಚಿರಾಯುವಾಗಿಬಿಡುತ್ತಾನೆ.

**ಮುಗಿಸುತ್ತಾ:**

ಸಿನೇಮಾಕ್ಕಾಗಿಯೇ ಬರೆದ ಕಾದಂಬರಿಯೆಂದ ಮೇಲೆ ಸಿನೇಮಾ ಆದಲ್ಲಿ ಒಳ್ಳೆಯ ಸಿನೇಮಾವೇ ಆಗುವಲ್ಲಿ ಸಂದೇಹವಿಲ್ಲ. ಮಧ್ಯಂತರದ ತನಕ ತಣ್ಣಗೆ ಸಾಗುವ ಕಥೆ ಆ ನಂತರ ಭರದಲ್ಲಿ ಸಾಗುವುದರಿಂದ ಚಾಲಾಕು ಜನರಿಗೂ ಇಷ್ಟವಾಗಬಹುದು. ಸಾಹಿತಿಗಳನ್ನಲ್ಲದೇ, ಪತ್ರಿಕೆಯವರನ್ನಲ್ಲದೇ ಎಲ್ಲಾ ರೀತಿಯ ಜನರನ್ನೂ ಆಕರ್ಷಿಸಬಲ್ಲ ಪುಟ್ಟ ಪುಟ್ಟ ಕಥೆಗಳು ಈ ಕಾದಂಬರಿಯಲ್ಲಿವೆ ಎಂಬುದು ಒಂದು ಅಭಿಪ್ರಾಯ.

ಕಾದಂಬರಿಗಿಂತಲೂ. ತೆರೆಯ ಮೇಲೆ ಚಿರಾಯುವಿನ ಪಾತ್ರ ಇನ್ನಷ್ಟು ಕಾಡಬಹುದಾದ ಪಾತ್ರವಾಗಬಹುದು ಎನ್ನಿಸುತ್ತದೆ. ಹಾಗೆಯೇ ಅಭಿನಯ ಮತ್ತು ಚಿತ್ರಕಥೆಯೊಳಗಿನಿಂದ ಪೂರ್ಣಗೊಂಡಾಗಲೇ ಪ್ರತೀ ಪಾತ್ರಗಳೂ ಇನ್ನಷ್ಟು ಕಳೆಕಟ್ಟಿಕೊಳ್ಳಬಲ್ಲ ಸಾಮರ್ಥ್ಯ ಹೊಂದಿವೆಯೇನೋ ಅನ್ನಿಸುತ್ತದೆ.

**ಕೃತಿ ವಿವರ:** ಯಾಮಿನಿ, ಗಿರೀಶ್ ರಾವ್ (ಜೋಗಿ), ಅಂಕಿತ ಪುಸ್ತಕ, ಬೆಂಗಳೂರು, ೨೦೦೮, ಪು. ೧೨೦

# ಇತಿಹಾಸಕ್ಕೆ ಹಿಡಿದ ಜಾನಪದ ಕನ್ನಡಿ–'ಶಿಖರಸೂರ್ಯ'

–ನಳಿನಿ ಮೈಯ, ಡೇರಿಯನ್, ಇಲಿನಾಯ್

'ಕಾರ್ಯಕಾರಣಗಳಿಲ್ಲದೆ ಇತಿಹಾಸ ಸ್ವತಂತ್ರವಾಗಿ ಚಲಿಸುವುದೇ ಇಲ್ಲ. ಯಾವುದೋ ಕಾರಣ ನೆಪವಾಗಿ ಕ್ರಿಯೆ ಜರುಗುತ್ತದೆ. ಅದರ ಪರಿಣಾಮ ಬೆಂಬತ್ತಿ ಬರುತ್ತದೆ. ಒಂದು ಕಾರಣ ಮರಿ ಹಾಕಿ ಇನ್ನೊಂದು ಕಾರಣ ಹುಟ್ಟುತ್ತದೆ. ಹೀಗೇ ಕಾರಣಗಳು ಹುಟ್ಟುತ್ತವೆ. ಹಿಂದಿನಿಂದ ಪರಿಣಾಮಗಳು... ...ಹೀಗೆ ತಾನೇ ನೇಯ್ದ ಜಾಲದಿಂದ ಇತಿಹಾಸಕ್ಕೆ ಮುಕ್ತಿಯೇ ಇಲ್ಲ. ಅದಕ್ಕೇ ಪುನರಾವರ್ತಿಸುತ್ತ ಮುಂದುವರಿಯುತ್ತದೆ. ಇದನ್ನು ಪ್ರಗತಿ ಎಂದು ಕರೆದು ಬೆಲೆಗಟ್ಟಲಿಕ್ಕೂ ಅದು ನಾಚುವುದಿಲ್ಲ. ಬಡವರ ಗುಡಿಸಲುಗಳನ್ನು ಕೆಡವಿ ಆ ಸ್ಥಳದಲ್ಲೊಂದು ದೊಡ್ಡ ಅರಮನೆ ಕಟ್ಟಿ ಅದನ್ನು ಪ್ರಗತಿ ಎಂದು ಕರೆಯುವಷ್ಟು ಹೊಣೆಗೇಡಿತನ ಇತಿಹಾಸವನ್ನು ಬಿಟ್ಟು ಮತ್ತೆಲ್ಲಿ ಸಿಕ್ಕೀತು?'

ಈ ಸಾಲುಗಳನ್ನು ಓದುತ್ತಿದ್ದಂತೆ ನಮ್ಮ ಕಣ್ಣಿನಲ್ಲಿ ಕಟ್ಟುವ ಚಿತ್ರ 'ಜಾಗತೀಕರಣ!' ಪ್ರಗತಿಯ ಹೆಸರಿನಲ್ಲಿ ಸಮಾಜದಲ್ಲಿ ಉಂಟಾಗುತ್ತಿರುವ ಅನ್ಯಾಯ, ಬಡವರು-ಸ್ಥಿತಿವಂತರ ಮಧ್ಯೆ ಅಗಲವಾಗಿ ತೆರೆದುಕೊಳ್ಳುತ್ತಿರುವ ಆರ್ಥಿಕ ಹಾಗೂ ಮಾನವೀಯ ಸಂಬಂಧಗಳ ಕಂದರ... ಇತ್ಯಾದಿ, ಇತ್ಯಾದಿ. ವಿಶ್ವದಾದ್ಯಂತ ಕಾರ್ಪೊರೇಟ್ ಜಗತ್ತು ತನ್ನ ಬಲವಾದ ಕಾಲುಗಳನ್ನು ಆಳವಾಗಿ ಊರಿನಿಂತು ಸಣ್ಣ ಪುಟ್ಟ ಕಂಪೆನಿಗಳನ್ನು ನುಂಗಿ ನೀರು ಕುಡಿದದ್ದೇ ಕಾರಣವಾಗಿ ಪ್ರತಿಯೊಬ್ಬನೂ ಈ ಕಾರ್ಪೊರೇಟ್ ಜಗತ್ತಿಗೆ ಒಂದಲ್ಲ ಒಂದು ವಿಧದಲ್ಲಿ ಲಾಭ ತಂದುಕೊಡುವ ಸಾಧನ ಮಾತ್ರವಾಗಿ ಇಡೀ ಸಮಾಜವೇ ತನ್ನ ಮಾನವೀಯತೆಯನ್ನು ಕಳೆದುಕೊಳ್ಳುತ್ತಿರುವ ಪರಿಣಾಮವನ್ನು ನಾವೆಲ್ಲ ನೋಡುತ್ತಲೇ ಇದ್ದೇವೆ. ಕಾಸ್ ಅಂಡ್ ಎಫೆಕ್ಟ್... ಮೊದಲು ಕ್ರಿಯೆ ಹಿಂದೆಯೇ ಅದರ ಪರಿಣಾಮ ಹೀಗೇ ಇತಿಹಾಸದ ಚಕ್ರಗಳು ಚಲಿಸುತ್ತಲೇ ಇವೆ.

ಆದರೆ ಈ ಸಾಲುಗಳು ಕಂಡುಬರುವುದು ಡಾ. ಚಂದ್ರಶೇಖರ ಕಂಬಾರರು ಬರೆದ 'ಶಿಖರಸೂರ್ಯ' ಎಂಬ ಒಂದು ಜಾನಪದ ಕಾದಂಬರಿಯಲ್ಲಿ! ನಿರ್ದಿಷ್ಟವಾದ

ಒಂದು ಕಾಲ, ದೇಶದಲ್ಲಿ ಉಂಟಾದ ಕಥೆಯಾಗುತ್ತಲೇ ಎಲ್ಲ ಕಾಲಕ್ಕೂ ಸಲ್ಲುವ ಸಾರ್ವಕಾಲಿಕವಾದ ಸತ್ಯವೊಂದನ್ನು ನಿರೂಪಿಸುವ ಕಥೆ ಇದು. ಕಾದಂಬರಿಯಾದ್ದರಿಂದ ಗದ್ಯ ರೂಪದಲ್ಲಿದ್ದರೂ ಉದ್ದಕ್ಕೂ ಕಾವ್ಯಾತ್ಮಕತೆಯನ್ನು ಮೈಗೂಡಿಸಿಕೊಂಡಿರುವ ಒಂದು ವಿಶಿಷ್ಟ ಕೃತಿ ಇದು. ವಿದ್ಯೆಯ ಮೂಲಕ ಅಧಿಕಾರವನ್ನು ಬಯಸಿ ಹಲವಾರು ಅನೈತಿಕ ಯುಕ್ತಿಗಳ ಮೂಲಕ ಅದನ್ನು ಪಡೆದು ಮಿತಿಮೀರಿದ ದುರಾಸೆ ಕೊಟ್ಟಕೊನೆಯ ಒಂದು ಹಂತ ತಲುಪಿದಾಗ ಇದುವರೆಗೆ ಸಾಧಿಸಿದ ಎಲ್ಲ ವೈಭವ ಕುಸಿದುಬಿದ್ದ ಅವಸಾನದ ಕಥೆ. ಆದರೆ ಆ ಅವಸಾನದ ಬೂದಿಯಲ್ಲೇ ನಿಧಾನವಾಗಿ ಮಸಣದಲ್ಲಿ ಹೂವು ಅರಳಿದಂತೆ ಹೊಸ ಮೌಲ್ಯಗಳನ್ನು ಹೊಂದಿದ ಒಂದು ಹೊಸ ಹುಟ್ಟು ಪ್ರಕೃತಿ ಸಹಜವಾಗಿ ಅರಳುವ ಸೋಜಿಗವನ್ನು ತೆರೆದಿಡುವ ಕಥೆ. 'ಸ್ಥಾವರಕ್ಕಳಿವುಂಟಲ್ಲದೆ ಜಂಗಮಕ್ಕುಂಟೆ?' ಎಂಬ ಸತ್ಯವನ್ನು ಪ್ರತಿಪಾದಿಸುವ ಕಥೆ.

ಕಂಬಾರರೇ ತಮ್ಮ 'ಲೇಖಕನ ಮಾತು' ವಿಭಾಗದಲ್ಲಿ ಹೇಳುವಂತೆ ಈ ಕಾದಂಬರಿ ಈ ಮುಂಚೆ ಪ್ರಕಟವಾದ ಅವರ 'ಚಕೋರಿ' ಕಾದಂಬರಿಯ ಎರಡನೆಯ ಭಾಗ ಎಂದಾದರೂ ಓದಬಹುದು. ಆದರೆ ಸ್ವತಂತ್ರ ಕಾದಂಬರಿಯಾಗಿಯೂ ನಿಲ್ಲಬಹುದು. ಈ ಕಥೆಯ ಹಂದರ ಸ್ಥೂಲವಾಗಿ ಹೀಗಿದೆ.

ಕಾದಂಬರಿಯ ನಾಯಕ ಚೆನ್ನಮುತ್ತ ಎಂಬಾತ ಆತ್ಮಹತ್ಯೆ ಮಾಡಿಕೊಳ್ಳಲೆಂದು ಕಾಡಿನ ಕಮರಿಗೆ ಹಾರಿ ಪ್ರಜ್ಞೆತಪ್ಪಿ ಬಿದ್ದಿದ್ದಾಗ ಜಟ್ಟಿಗ ಅವನನ್ನು ಹೊತ್ತು ಮನೆಗೆ ತಂದು ಉಪಚರಿಸುತ್ತಾನೆ. ಜಟ್ಟಿಗ ಇರುವುದು ಶಿವಾಪುರ ಎಂಬ ಊರಿನಲ್ಲಿ. ಈ ಊರು ನಡೆಯುವುದೇ ಅಲ್ಲಿರುವ ಬೆಟ್ಟದ ಅಮ್ಮನವರ ಅನುಗ್ರಹದಿಂದ, ಅವಳ ಪ್ರತಿನಿಧಿಯಾದ ಶಿವಪಾದರ ಆಣತಿಯಂತೆ. ಇಲ್ಲಿ ಕಪಟ, ಕುತಂತ್ರಗಳ ನೆರಳೂ ಸುಳಿಯುವುದಿಲ್ಲ. ಪಾಪವೆಂಬ ಕಲ್ಮಶವನ್ನು ಹೃದಯದಲ್ಲಿ ತುಂಬಿಕೊಂಡ ಚೆನ್ನಮುತ್ತನಿಗೆ ಹೇಳಿಸಿದ ಊರಲ್ಲ ಅದು. ಹೀಗಾಗಿ ತನ್ನ ಹೆಸರು ಜಯಸೂರ್ಯ ಎಂದು ಸುಳ್ಳು ಹೇಳುತ್ತಾನೆ. ಜಟ್ಟಿಗನ ಮಡದಿ ಬೆಳ್ಳಿಯನ್ನು ಮೋಹಿಸಿ ಜಟ್ಟಿಗನನ್ನು ಕೊಂದು ಕಡೆಗೆ ಬೆಳ್ಳಿಯೂ ದಕ್ಕದೆ ಕನಕಪುರಿ ಎಂಬ ಊರಿಗೆ ಹೋಗುತ್ತಾನೆ. ಅಲ್ಲಿ ಶಿಖರ ಸೂರ್ಯ ಎಂಬ ಹೆಸರಿನಿಂದ ರಾಜವೈದ್ಯನಾಗಿ ಮುಂದೆ ಹಲವು ಕುತಂತ್ರ ವಂಚನೆಗಳ ಮೂಲಕ ಆ ಊರಿಗೆ ರಾಜನಾಗುತ್ತಾನೆ. ಶಿಖರಸೂರ್ಯನ ಮಗಳು ಗೌರಿ ತಂದೆಯ ಮೌಲ್ಯಗಳನ್ನು ಧಿಕ್ಕರಿಸಿ ಶಿವಾಪುರಕ್ಕೆ ಹೋಗುತ್ತಾಳೆ. ಮಗ ರವಿಕೀರ್ತಿ ಪ್ರೀತಿಸಿದ ಹೆಣ್ಣು ಶಿಖರಸೂರ್ಯನ ವಂಚನೆಯಿಂದ ಕೊಲೆಯಾಗಿ ಮಗ ಹುಚ್ಚು ಹಿಡಿದು ಸಾಯುತ್ತಾನೆ. ಧಾನ್ಯದಿಂದ ಚಿನ್ನ ಮಾಡುವ ಮತ್ತು ದನಗಳು ಮೇಯುವ ಹುಲ್ಲಿನಿಂದ ಸೈನ್ಯ ಮಾಡುವ ಕಲೆಯನ್ನು ಕರಗತ ಮಾಡಿಕೊಂಡ ಶಿಖರಸೂರ್ಯನ ಅಹಂಕಾರ, ಕೊಬ್ಬು ಮಿತಿಮೀರಿ ಕೊನೆಗೊಮ್ಮೆ ತನ್ನನ್ನು ಪೊರೆದ ಶಿವಾಪುರದ ಮೇಲೆ ಧಾಳಿಗೆ ಹೋಗುತ್ತಾನೆ. ಅಲ್ಲಿಗೆ

ಅವನ ಪಾಪದ ಕೊಡ ತುಂಬಿಬಂದು ಎಲ್ಲವನ್ನೂ ಕಳೆದುಕೊಂಡು ನಿರ್ವಿಣ್ಣನಾಗುತ್ತಾನೆ. ಕನಕಪುರಿ ಊರಿಗೆ ಊರೇ ನಾಶವಾಗಿ ಎಲ್ಲೆಡೆಯಲ್ಲೂ ಹೆಣಗಳು ಉರುಳುತ್ತವೆ. ಹೀಗೆ ನಿರ್ಗತಿಕವಾದ ಕನಕಪುರಿಯನ್ನು ಮತ್ತೆ ಶುಶ್ರೂಷೆ ಮಾಡಲು ಶಿಖರಸೂರ್ಯನ ಅಳಿಯ, ಶಿವಾಪುರದ ಈಗಿನ ಶಿವಪಾದರಾದ 'ನಿನ್ನಡಿ'ಯೇ ಬರಬೇಕಾಗುತ್ತದೆ.

ಇಡೀ ಕಾದಂಬರಿಯನ್ನು ಇತಿಹಾಸಕಾರರು ನಿರೂಪಿಸಿದಂತೆ ಮಾಡಿರುವುದು ಈ ಕಾದಂಬರಿಯ ಇನ್ನೊಂದು ವಿಶೇಷ. 'ಹೇಳುವವರು ಇತಿಹಾಸಕಾರರಾದ್ದರಿಂದ ನಿರೂಪಣೆಯ ಭಾಷೆಯನ್ನು ನಿರ್ಭಾವುಕ ಹಾಗೂ ನಿರ್ಲಿಪ್ತವಾಗಿಸುವ ಕಡೆಗೆ ಗಮನ ಕೊಟ್ಟಿದ್ದೇನೆ.' ಎಂದು ಕಂಬಾರರು ಹೇಳಿದ್ದಾರೆ. ಆದರೆ ಇಲ್ಲಿಯ ಘಟನಾವಳಿಗಳೇ ಓದುಗನ ಮನದಲ್ಲಿ ಭಾವನೆಗಳನ್ನು ಹೊಡೆದೆಬ್ಬಿಸುತ್ತವೆ.

'ಈ ಕಾದಂಬರಿಯ ಕಾಲವನ್ನು ಆಧುನಿಕವಲ್ಲದ ಹಿಂದಿನ ಯಾವುದಾದರೂ ಕಾಲಮಾನದಲ್ಲಿ ನಡೆದದ್ದೆಂದು ಭಾವಿಸಬೇಕು.' ಎಂದು ಕಂಬಾರರು ಇದನ್ನು ಇತಿಹಾಸದ ವರ್ಗಕ್ಕೆ ಸೇರಿಸಿದ್ದಾರಾದರೂ ಇದರಲ್ಲಿ ಬರುವ ಕೆಲವು ಅಲೌಕಿಕ ಘಟನೆಗಳು ಈ ಕಥೆಯನ್ನು ಜಾನಪದ ವರ್ಗಕ್ಕೆ ಸೇರಿಸಿದ್ದಾವೆ ಎಂದು ನನ್ನ ಭಾವನೆ. ಹಾಗೆ ಇತಿಹಾಸಕ್ಕೂ ಜಾನಪದಕ್ಕೂ ಹೆಚ್ಚಿನ ಅಂತರವಿಲ್ಲ ಎನ್ನುತ್ತಾ ಕಾದಂಬರಿಯ ಒಂದೆಡೆಯಲ್ಲಿ ಕಂಬಾರರು ಹೀಗೆ ಹೇಳುತ್ತಾರೆ: 'ಇದೇನಿದು ಚರಿತ್ರೆಯೆಂದು ಶುರುವಾದದ್ದು ಜನಪದ ಕಥೆಯಾಗಿ ಮುಗಿಯಿತಲ್ಲ ಎಂದು ನಿಮಗೆ ಆಶ್ಚರ್ಯವಾಗಬಹುದಲ್ಲವೆ? ಚರಿತ್ರೆಯೂ ಒಂದು ಕಥಾನಕವೆಂದು, ಜನಪದ ಕಥೆ ಕೂಡ ಚರಿತ್ರೆಯನ್ನು ಬಚ್ಚಿಟ್ಟ ರೂಪಕವೆಂದು ನಿಮಗೆ ತಿಳಿದಿರಲಿ... ...ಧಾನ್ಯದಿಂದ ಚಿನ್ನ ಮಾಡಿ ಶೋಷಿಸುವವರಿರೋತನಕ ನಮ್ಮ ಕಥಾನಕ ಪ್ರಸ್ತುತವೇ ಎಂದು ಜಾನಪದ ಶಾಸ್ತ್ರಿಗಳು ಹೇಳುತ್ತಾರೆ. ಅವರಿವರ ಮಾತು ವಾದಗಳಿರಲಿ, ಇಂಥವರನ್ನು ನಾವೇ ಪ್ರತ್ಯಕ್ಷವಾಗಿ ಕಾಣುತ್ತಿದ್ದೇವಲ್ಲ!'

ಧಾನ್ಯ ಬೆಳೆಯುವ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಪರಿಸ್ಥಿತಿ ಒಂದೆಡೆಯಾದರೆ, ಐಟಿ ಕಂಪೆನಿಗಳು ಮಿಲಿಯಗಟ್ಟಲೆ ದುಡ್ಡು ಮಾಡಿ ರಾಶಿ ಹಾಕುತ್ತಿರುವ ಪರಿಸ್ಥಿತಿಯನ್ನು ಇನ್ನೊಂದೆಡೆಯಲ್ಲಿ ಇಂದು ನಾವು ನೋಡುತ್ತಿದ್ದೇವೆ. ಕಥೆಯಲ್ಲಿ ಬೆಳ್ಳಿ ಒಮ್ಮೆ ಧಾನ್ಯದಿಂದ ಚಿನ್ನ ಮಾಡುವ ವಿದ್ಯೆಯನ್ನು ಕಲಿತಿದ್ದ ಮಗನಿಗೆ, 'ಮಗಾ, ತಿನ್ನೋ ಅನ್ನ, ದನಿನ ಮೇವು ಹಾಳು ಮಾಡಬಾರದು, ನನ್ನಪ್ಪಾ. ಈ ವಿದ್ಯೆ ನಿನಗಲ್ಲ.' ಎಂದು ಬುದ್ಧಿವಾದ ಹೇಳುತ್ತಾಳೆ. ಧಾನ್ಯದ ನಿಜವಾದ ಬೆಲೆಯನ್ನು ಕಡೆಗಣಿಸಿ ಅದರಿಂದ ಚಿನ್ನ ಮಾಡಿದ ಕಥಾನಾಯಕ ಕಡೆಗೂ ಪತನಹೊಂದಿದ ಈ ಕಥೆ ಪ್ರತಿಮಾತ್ಮಕವಾಗಿ ಇಂದಿನ ಸಮಾಜಕ್ಕೆ ಹಿಡಿದ ಕನ್ನಡಿಯಂತಿದೆ. ಇಂದಿನ ಜಾಗತೀಕರಣದ ಯುಗದಲ್ಲಿ ಜನಜೀವನದ ಮೂಲ ಮಂತ್ರವಾದ 'ಉಂಡಷ್ಟೂ ಹಸಿವು, ಕುಡಿದಷ್ಟೂ

ದಾವರ, ಪಡೆದಷ್ಟೂ ಬಡತನ' ಶಿಖರಸೂರ್ಯನ ಜೀವನದ ಮೂಲಮಂತ್ರವೂ ಆಗಿದೆ.

ಹೀಗೆ ಇಂದು ನಡೆಯುವ ಎಲ್ಲ ಲೌಕಿಕ ವ್ಯವಹಾರಗಳನ್ನು ಪ್ರತಿನಿಧಿಸುವ ಕಾರಣಕ್ಕಾಗಿ ಈ ಕಾದಂಬರಿ ನಮಗೆ ಆಪ್ತವಾಗುತ್ತದೆಯಾದರೂ ಇನ್ನೂ ಒಂದು ಕಾರಣದಿಂದ ಈ ಕಥೆ ನಮ್ಮನ್ನು ಒಂದು ಬಗೆಯ ವಿಸ್ಮಯದಲ್ಲಿ ಮುಳುಗಿಸುತ್ತದೆ. ಅದೆಂದರೆ ಇಲ್ಲಿರುವ ದಾರ್ಶನಿಕ ನಿಲುವು. ಮಾಧವ ಕುಲಕರ್ಣಿ ಅವರು 'ದಾರ್ಶನಿಕ ನಿಲುವೆಂದರೇನೆಂದು ಅರಿಯಲು ಉತ್ಸುಕರಾಗಿರುವವರು ಈ ಕಾದಂಬರಿಯನ್ನೊಮ್ಮೆ ಓದಬೇಕು.' ಎಂದು ಹೇಳಿದ್ದಾರೆ. 'ಶಿಖರಸೂರ್ಯದಲ್ಲಿ ಹಾಸುಹೊಕ್ಕಾಗಿ, ಅಲ್ಲಿನ ಎಲ್ಲವನ್ನೂ ಈಕ್ಷಿಸುವ ತಾಯಿಧರ್ಮದ ನೋಟ ಲೋಕಮುಖಿಯಾಗಿ ಇಹ-ಪರ, ಕೇಡು-ಒಳಿತು, ಕತ್ತಲು-ಬೆಳಕು ಇವೇ ಮುಂತಾದ ಎಲ್ಲ ದಂದುಗಗಳನ್ನೂ ದ್ವಂದ್ವಗಳನ್ನೂ ಹೆತ್ತು ಹೊತ್ತು ಪೊರೆಯುವಂಥದು.' ಎಂದು ಎಚ್. ಎಸ್. ಶಿವಪ್ರಕಾಶ್ ಅವರು ಮುನ್ನುಡಿಯಲ್ಲಿ ಹೇಳುತ್ತಾರೆ. 'ಶಿಷ್ಟ ರಕ್ಷಕ ದುಷ್ಟ ಜನ ಸಂಹಾರ' ಎಂಬ ಸರಳೀಕೃತ ದೇವರ ಕಲ್ಪನೆಯನ್ನು ದಾಟಿ ಮುಂದೆ ಹೋಗಿ ಈ ಕಾದಂಬರಿಯಲ್ಲಿ ಮಾತೃ ಭಾವವನ್ನು ಬಿಂಬಿಸುವ ದೈವೀಶಕ್ತಿಯ ಚಿತ್ರಣವಿದೆ. ಇಲ್ಲಿಯ ಅಮ್ಮನವರು ಯಾರನ್ನೂ ಶಿಕ್ಷಿಸುವುದಿಲ್ಲ. ಯಾರನ್ನೂ ದೂರ ಮಾಡುವುದಿಲ್ಲ. ತಾಯಿಗೆ ಹೇಗೆ-ಗುಣಾವಗುಣಗಳನ್ನು ಲೆಕ್ಕಿಸದೆ-ಎಲ್ಲ ಮಕ್ಕಳೂ ಪ್ರೀತಿಪಾತ್ರರೋ ಹಾಗೇ. ಆದರೆ ಮಕ್ಕಳೇ ತಮ್ಮ ಸ್ವತಃ ಇಚ್ಛಾಶಕ್ತಿಯಿಂದ ಆಯ್ದುಕೊಂಡ ದಾರಿ ಅವರನ್ನು ಅಭ್ಯುದಯಕ್ಕೆ ಕೊಂಡೊಯ್ಯಬಹುದು ಅಥವಾ ಅವನತಿಯ ಪ್ರಪಾತಕ್ಕೆ ನೂಕಬಹುದು. ಎಲ್ಲವನ್ನೂ ಸಾಕ್ಷಿರೂಪವಾಗಿ ನಿಂತು ನೋಡುತ್ತಾಳೆ ಆ ಮಹಾತಾಯಿ. ಕಥಾನಾಯಕ ಶಿಖರಸೂರ್ಯ ಎಂಥವನು ಎಂದು ಗೊತ್ತಿದ್ದರೂ ಅವನಿಗೆ ಆಶ್ರಯ ಕೊಡಬಾರದು ಎಂದಾಗಲಿ, ವಿದ್ಯಾದಾನ ಮಾಡಬಾರದು ಎಂದಾಗಲಿ ಅಮ್ಮನವರು ತಾಕೀತು ಮಾಡುವುದಿಲ್ಲ. ಚೆನ್ನಮುತ್ತನನ್ನು ಕಮರಿಯಿಂದ ರಕ್ಷಿಸಿ ಮನೆಗೆ ತಂದ ಸುದ್ದಿಯನ್ನು ಜಟ್ಟಿಗ ತಿಳಿಸಿದಾಗ ಶಿವಪಾದರು ಧ್ಯಾನಸ್ಥರಾಗಿ ತಾಯಿಯಿಂದ ಸಂದೇಶ ಪಡೆದ ಮೇಲೆ 'ಲಲಾಟಲಿಖಿತವ ಪಲ್ಲಟ ಮಾಡಲುಂಟೆ ಮಗನೆ? ಒಳ್ಳೆಯ ಕೆಲಸ ಮಾಡಿದ್ದೀಯಾ. ನೆನೆಯಬೇಕಾದವನು ಅವನು. ನೆನೆಯದಿದ್ದರೆ ಅದು ಅವನ ಕರ್ಮ' ಎಂದಷ್ಟೇ ಹೇಳುತ್ತಾರೆ. ಆದದ್ದೆಲ್ಲ ಅವರವರ ಕ್ರಿಯೆಯೇ ಕಾರಣರೂಪವಾಗಿ ಅದರಿಂದ ಉಂಟಾದ ಪರಿಣಾಮಗಳು.

ಕಥೆಯು ಉತ್ತರಾರ್ಧದಲ್ಲಿ ಗೌರಿ ಶಿವಾಪುರಕ್ಕೆ ಹೋಗುತ್ತಿರುವಾಗ ಸಹಪ್ರಯಾಣಿಕಳಾದ ಗುಣದಮ್ಮ ಅವಳಿಗೆ ಹೇಳುವ ಒಂದೊಂದು ಕಥೆಯೂ ಅಧ್ಯಾತ್ಮದ ಒಂದೊಂದು ಗಟ್ಟಿ ಹರಳು. ಇಲ್ಲೊಂದು ಉದಾಹರಣೆ. ಒಮ್ಮೆ ಶಿವಾಪುರದ ಜಾತ್ರೆಯಲ್ಲಿ ಬಳೆಗಾರ ಚನ್ನಯ್ಯ ಅಂತ ಒಬ್ಬ ಬರುತ್ತಾನೆ. ಕೈಯಲ್ಲಿ ದುಡ್ಡಿಲ್ಲದ್ದರಿಂದ ಯಾವ

ಹೆಂಗಸರೂ ಅವನ ಹತ್ತಿರ ಬಳೆ ಕೊಳ್ಳುವುದಿಲ್ಲ. ಇಷ್ಟರಲ್ಲಿ ಗವಿಯೊಳಗಿಂದ ಒಂದು ಮುದುಕಿ ಬಂದು ಬಳೆ ಇಡಿಸಿಕೊಳ್ಳುತ್ತಾಳೆ. ಅವಳ ಮಗ ಶಿವಪಾದ ದುಡ್ಡು ಕೊಡುತ್ತಾನೆ. ಆಮೇಲೆ ನೋಡಿದರೆ ಬಳೆಗಾರನ ಬುಟ್ಟಿಯಲ್ಲಿ ಎಲ್ಲ ಬಳೆಗಳೂ ಖಾಲಿಯಾಗಿದ್ದವು! ಆಶ್ಚರ್ಯದಿಂದ ಅವನು ಸುತ್ತಮುತ್ತ ನೋಡಿದರೆ ಎಲ್ಲ ಹೆಂಗಸರ ಕೈಯಲ್ಲೂ ಹೊಸ ಬಳೆಗಳಿದ್ದವು! ತನ್ನ ಕೈಯಲ್ಲಿ ಬಳೆ ಇಡಿಸಿಕೊಂಡಿದ್ದು ಅಮ್ಮನವರೇ ಎಂದು ಗೊತ್ತಾಗಿ ಅವನು ಅವಳನ್ನೇ 'ಇದೇನಿದು ತಾಯಿ?' ಎಂದು ಕೇಳುತ್ತಾನೆ. 'ಹೆತ್ತವರೆಲ್ಲ ತಾಯಂದಿರು. ಹೆರುವವರೆಲ್ಲ ತಾಯಂದಿರು. ಎಲ್ಲ ತಾಯಂದಿರಲ್ಲಿ ಇರುವ ನಿನ್ನ ತಾಯಿಯನ್ನು ಆರಾಧಿಸು.' ಎಂಬ ಸಂದೇಶ ಅವನಿಗೆ ಸಿಕ್ಕುತ್ತದೆ.

ಪರಮಹಂಸ ಯೋಗಾನಂದ ಅವರು ಬರೆದ 'ಆಟೊಬಯಾಗ್ರಫಿ ಆಫ್ ಎ ಯೋಗಿ' ಪುಸ್ತಕದಲ್ಲೂ ಇಂತಹದೇ ಒಂದು ಸಂದೇಶವಿದೆ! ಪರಮಹಂಸ ಯೋಗಾನಂದರ ಪೂರ್ವಾಶ್ರಮದ ಹೆಸರು ಮುಕುಂದ ಎಂದು. ಈ ಮುಕುಂದನಿಗೆ ಹನ್ನೊಂದು ವರ್ಷದ ಎಳೆಯ ವಯಸ್ಸಿನಲ್ಲೇ ಮಾತೃವಿಯೋಗವಾಗುತ್ತದೆ. ತಾಯಿಯನ್ನು ಕಳೆದುಕೊಂಡ ಮುಕುಂದ ಅವಳ ಪ್ರೀತಿ ಸೂಸುವ ಕಪ್ಪು ಕಣ್ಣುಗಳನ್ನು ನೆನೆನೆನೆದು ದುಃಖಿಸುತ್ತಾ ದೇವರಲ್ಲಿ ಮೊರೆ ಇಡುತ್ತಾನೆ. ಕೆಲವು ಕಾಲದ ನಂತರ ಲೋಕಮಾತೆಯಿಂದ ಈ ಸಂದೇಶ ಅವನ ಅಂತರಂಗದಲ್ಲಿ ಮೂಡುತ್ತದೆ– 'It is I who have watched over thee, life after life, in the tenderness of many mothers! See in My gaze the two black eyes, the lost beautiful eyes, thou seekest!' (ಜನ್ಮ ಜನ್ಮಾಂತರಗಳಲ್ಲಿ ಹಲವು ತಾಯಂದಿರ ವಾತ್ಸಲ್ಯದಲ್ಲಿ ನಿನ್ನ ಪಾಲನೆ ಮಾಡಿದವಳು ನಾನೇ. ನನ್ನ ಈ ನೇತ್ರಗಳಲ್ಲಿ ನೀನು ಅರಸುತ್ತಿರುವ ನಿನ್ನ ಗತಿಸಿದ ತಾಯಿಯ ಸುಂದರ ಕಣ್ಣುಗಳನ್ನು ಕಾಣು.)

ಸಂಕೇತಗಳು ಈ ಕಾದಂಬರಿಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಕನಕಪುರಿ ಮತ್ತು ಶಿವಾಪುರ ಎಂಬ ಊರ ಹೆಸರುಗಳೇ ಆಯಾ ಊರಿನ ಜನರ ಸ್ವಭಾವ, ಮನೋಧರ್ಮಗಳನ್ನು ಪ್ರತಿನಿಧಿಸುವಂತಿದೆ. ಶುರುವಿನಲ್ಲೇ ಚಿನ್ನಮುತ್ತನಿಗೆ ಒಂದು ಕನಸು ಬೀಳುತ್ತದೆ. ಕನಸಿನಲ್ಲಿ ಒಬ್ಬ ಬಾಲಕ ನಗುನಗುತ್ತಾ ಅವನ ಕೈ ಹಿಡಿದುಕೊಂಡು ಓಡುತ್ತಾನೆ. ಓಡುತ್ತಾ ಓಡುತ್ತಾ ಆ ಬಾಲಕನ ತಲೆಯ ಮೇಲೆ ಕಿರೀಟ ಬರುತ್ತದೆ. ಆದರೆ ಅವನ ಮೈ ಮಾತ್ರ ಕಪ್ಪಾಗಿಹೋಗುತ್ತದೆ. 'ನಿನ್ನ ಹೆಸರೇನು?' ಎಂದು ಪ್ರಶ್ನಿಸಿದಾಗ ಆ ಹುಡುಗ 'ಚಿನ್ನಮುತ್ತ' ಎಂದು ಹೇಳುತ್ತಾನೆ. ಈ ಕನಸು ಮುಂದೆ ನಡೆಯುವ ಎಲ್ಲ ಘಟನೆಗಳ ಓಘವನ್ನು ಸಂಕೇತ ರೂಪದಲ್ಲಿ ಓದುಗರಿಗೆ ತೋರಿಸುತ್ತದೆ.

ಜೋಡಿಯಾಗಿ ಬೆಳೆದ ಎರಡು ಗಿಡಗಳ ಪೈಕಿ ಒಂದನ್ನು ಜಯಸೂರ್ಯ

ಕಿತ್ತಾಗ ಬೆಳ್ಳಿ ಎರಡು ಗಿಡಗಳಿಗೂ ಮದುವೆಯಾಗಿತ್ತು, ಅವನ್ನು ಪ್ರತ್ಯೇಕಿಸಿ ಒಂದನ್ನು ಕೀಳಬಾರದಿತ್ತು ಎಂದು ಬುದ್ಧಿವಾದ ಹೇಳುತ್ತಾಳೆ. ಹಾಗೂ ಅವನು ಕಿತ್ತ ಗಿಡ ಜಟ್ಟಿಗ ನೆಟ್ಟದ್ದೆಂದೂ ಇನ್ನೊಂದನ್ನು ತಾನು ನೆಟ್ಟದ್ದೆಂದೂ ಹೇಳುತ್ತಾಳೆ. ಈ ಪ್ರಕರಣವೂ ಮುಂದೆ ಆಗಲಿರುವ ಜಟ್ಟಿಗನ ಕೊಲೆಗೆ ಸೂಚನೆ ನೀಡುತ್ತದೆ.

ಗೌರಿ ಶಿವಾಪುರದ ನಿನ್ನಡಿಯನ್ನು ಪ್ರೇಮಿಸಿ ಅವನಿಂದ ದೂರಾಗಿರುವಾಗ ಅವಳಿಗೆ ಬೀಳುವ ಎಲ್ಲ ಕನಸುಗಳೂ ಒಬ್ಬ ಜಂಗಮನಿಗಿರುವ ದೈವ ಸಾನ್ನಿಧ್ಯವನ್ನು, ದೈವೀ ಶಕ್ತಿಯನ್ನು ಬಿಂಬಿಸುತ್ತವೆ. ಈ ಕೆಳಗಿನ ಉದಾಹರಣೆಯನ್ನು ನೋಡಿ–

(ಈ ಕೆಳಗಿನ ಕವನದಲ್ಲಿ ಜಂಗಮ ಎಂದರೆ ನಿನ್ನಡಿ ಎಂದು ಅರ್ಥೈಸಬೇಕು ಎಂದು ಸೂಚಿಸಿದ್ದಾರೆ ಕಂಬಾರರು)

'ಅಗೋ ಆ ಎದುರಿಗಿನ ಮರದಾಚೆ
ಯಾರೋ ಕಂದೀಲು ಹಿಡಿದು ನಿಂತಿದ್ದ,
ಗಾಬರಿಯಾದೆ
ಬಾಗಿಲು ಬಡಿಯದೆ ನೇರ
ಕೋಣೆಯೊಳಗೇ ಬಂದ.
ಆಗಲೇ ಗೊತ್ತಾಯಿತು;
ಬಂದವನು ಚಂದ್ರಮ
ಅಲ್ಲಲ್ಲ ಜಂಗಮ!
ಹಿಗ್ಗಿನ ಬಾಗಿಲು ತೆರೆದು
ಒಳನುಗ್ಗಿದವು ನೋಡು ಚುಕ್ಕಿಗಳು
ಒಂದೊಂದೇ ಕೋಲು ಬೆಳಕಾಗಿ
ಕೆಳಕ್ಕೇ
ನನ್ನ ಮನೆಯೊಳಕ್ಕೇ ಇಳಿದು
ಬೆರಳಿಗೆ ಬೆರಳು ಹೆಣೆದು ಕುಣಿದಾಡಿದವು
ಶಬ್ದಗಳ ಚೆಲ್ಲಾಡಿ!
ಶಬ್ದಗಳೆಲ್ಲಾ ನಿಶ್ಶಬ್ದಗಳಾಗಿ
ಮನೆಯೆಲ್ಲ ಬೆಳಕಿನ ಬಯಲಾದಾಗ
ನೀನೆಲ್ಲಿದ್ದೆ ಜಂಗಮ?'

ಇಂತಹ ಕೆಲವು ಕವನಗಳು ಇಲ್ಲಿವೆ. ಉಮರ ಖಯಾಮನ ಪದ್ಯಗಳನ್ನು

ನೆನಪಿಗೆ ತರುತ್ತವೆ. ಡಿ.ವಿ.ಜಿ ಅವರ 'ಉಮರನ ಒಸಗೆ'ಯಲ್ಲಿ ಬರುವ ಈ ಪದ್ಯವನ್ನು ಗಮನಿಸಿ:

ಈಶ ಕಲೆ ಪರಿಯುತಿದೆ ಸೃಷ್ಟಿಯಂಗಾಂಗದಲಿ
ನಮ್ಮ ಹಿಡಿಗೊದವದೆಯೆ ಪಾದರಸದಂತೆ
ಮೀನಿಂದಲ್ ಇಂದುವರಂ ಅಮಿತ ರೂಪಕನವನು
ರೂಪಂಗಳಳಿದಾವು; ನಿಚ್ಚಮಿರುವನವನ್

ಕಾವ್ಯ, ನಾಟಕ, ಜಾನಪದ ಎಲ್ಲದರಲ್ಲೂ ಕೈಯಾಡಿಸಿ 'ಸೈ' ಎನ್ನಿಸಿಕೊಂಡ ಕಂಬಾರರ ಎಲ್ಲ ಪ್ರತಿಭೆಯ ಒಟ್ಟು ರಸಪಾಕವಾಗಿ ಈ ಕೃತಿ ರೂಪುಗೊಂಡಿದೆ.

ಈ ಕಾದಂಬರಿಯಲ್ಲಿ ಎರಡು ಪ್ರತ್ಯೇಕ ಜೀವನ ವಿಧಾನಗಳ ಚಿತ್ರಣವಿದೆ– ಒಂದು ಶಿವಾಪುರದ್ದು, ಇನ್ನೊಂದು ಕನಕ ಪುರಿಯದ್ದು. ಕಾಲವನ್ನು ಕನಕಪುರಿಯವರು ಭೂತ, ವರ್ತಮಾನ, ಭವಿಷ್ಯತ್ ಎಂದು ವಿಭಜಿಸುತ್ತಾರೆ. ಅಲ್ಲಿ ಕಾಲ ಸರಳ ರೇಖೆಯಂತೆ ಮುಂದೆ ಹೋಗುತ್ತದೆ. ಆದರೆ ಶಿವಾಪುರದಲ್ಲಿ ಹಾಗಲ್ಲ. ಅಲ್ಲಿ ಕಾಲವನ್ನು ಅಖಂಡ, ಅವಿಚ್ಛಿನ್ನ ಎಂಬಂತೆ ನೋಡುತ್ತಾರೆ. ರಾಮಾಯಣದ ಹನುಮಂತ ಮಹಾಭಾರತ ದಲ್ಲಿಯೂ ಬಂದಂತೆ. ನಮ್ಮ ದೇಶದ ಹಳ್ಳಿ ಹಳ್ಳಿಗಳಲ್ಲೂ ದೇವಸ್ಥಾನದ ಎದುರು ಹರಿಯುವ ಹೊಳೆಯಲ್ಲಿ ಸೀತೆ ಸ್ನಾನ ಮಾಡಿದ್ದಳು ಎಂದೋ, ಬಂಡೆಯ ಮೇಲೆ ರಾಮ ಪಾದ ಊರಿ ಬಿದ್ದ ಗುಳಿ ಇದೆ ಎಂದೋ ಜನ ಹೇಳಿಕೊಳ್ಳುವಂತೆ. 'ಸಂಭವಾಮಿ ಯುಗೇ ಯುಗೇ' ಎಂಬ ಮಂತ್ರವನ್ನೇ ಜೀವನದ ಉಸಿರಾಗಿ ಮಾಡಿಕೊಂಡು ಮತ್ತೆ ಬರಲಿರುವ ಭಗವಂತನಿಗಾಗಿ ನಿರಂತರ ಕಾಯುವ ಭಕ್ತನಂತೆ. ಯಾವುದೂ ಆಗಿಯೇಹೋಯಿತು ಅಂತಿಲ್ಲ. ಹಿಂದೆ ನಡೆದದ್ದೆಲ್ಲವೂ ಇಂದಿಗೂ ಪ್ರಸ್ತುತ. ಒಂದು 'ಸರ್ವಂ ಸರ್ವಾಂತರ್ಗತಂ' ಎಂದು ನಂಬುವ ಚಕ್ರೀಯ ಮೌಲ್ಯಗಳ ಅಭಿವ್ಯಕ್ತಿ: ಇನ್ನೊಂದು ಸರ್ವಭಕ್ಷಕವಾದ ಸರಳ ರೇಖಾತ್ಮಕ ಪ್ರಗತಿಯ ಮೌಲ್ಯ ಎಂದಿದ್ದಾರೆ ಶಿವಪ್ರಕಾಶ್ ಅವರು. ಇನ್ನೊಂದು ವಿಧದಲ್ಲಿ ಹೇಳಬಹುದಾದರೆ ಒಂದು ಭಾರತದಲ್ಲಿ ಮತ್ತು ಇತರ ಪೌರ್ವಾತ್ಯ ದೇಶಗಳಲ್ಲಿರುವ (ಅಥವಾ ಮುಂಚೆ ಇದ್ದ) ಪರಂಪರಾಗತ ಮೌಲ್ಯವಾದರೆ ಇನ್ನೊಂದು ಪಾಶ್ಚಿಮಾತ್ಯ ದೇಶಗಳ 'ಪ್ರಗತಿಪರ' ಮೌಲ್ಯ. ಶಿವಾಪುರದ ಜನರಿಗೆ ತಾವೆಲ್ಲರೂ ದೇವರು ಆಡುತ್ತಿರುವ ಪಗಡೆಯಾಟದಲ್ಲಿ ಒಂದೊಂದು ದಾಳಗಳು ಎಂಬ ಪರಿಕಲ್ಪನೆ ಇದೆ. ಅದರಲ್ಲೇ ಒಂದು ಬಗೆಯ ಕೃತಾರ್ಥತೆಯನ್ನು ಕಾಣುವವರು ಅವರು. ಕನಕಪುರಿಯಲ್ಲಿ ಹಾಗಲ್ಲ. ಈ ಜೀವನದಲ್ಲಿ ಯುಕ್ತಿಯಿಂದಲೋ ಕುಯುಕ್ತಿಯಿಂದಲೋ ನನಗೆ ಬೇಕಾದ್ದನ್ನೆಲ್ಲ ಪಡೆದುಕೊಂಡು ಸುಖಿಸುವುದಕ್ಕಿಂತ ಹೆಚ್ಚಿನ ಗುರಿ ಇನ್ನೊಂದಿಲ್ಲ ಎಂಬ ಮನೋಭಾವ. ಆದರೆ ಎಂದಿಗೂ ಅವರು ತಮಗೆ

ಬೇಕಾದ್ದನ್ನೆಲ್ಲ ಪಡೆದಾಯಿತು ಎಂಬ ತೃಪ್ತಿಯನ್ನು ಅನುಭವಿಸಿದವರಲ್ಲ. ಪಡೆದಷ್ಟೂ ಇನ್ನೂ ಬೇಕೆಂಬ ಹುಚ್ಚು ಹಸಿವು!

ಪಾತ್ರ ವೈವಿಧ್ಯದಲ್ಲೂ ಈ ಕಾದಂಬರಿ ಬೆರಗು ಹುಟ್ಟಿಸುವಂತಿದೆ. ದುರುಳತನದ ಪರಮಾವಧಿಯನ್ನು ತಲುಪಿದ ಶಿಖರಸೂರ್ಯ ಮತ್ತು ಕುತಂತ್ರದಿಂದ ಮಹಾರಾಣಿಯ ಪಟ್ಟಕ್ಕೇರಿದ ರಾಜನ ವೇಶ್ಯೆ, ಸಾತ್ವಿಕತೆಯ ಪರಾಕಾಷ್ಠೆ ಎಂಬಂತಿರುವ ನಿನ್ನಡಿ ಮತ್ತು ಗೌರಿ, ಪುಣ್ಯಕೋಟಿಯಂತಹ ಸಾಧ್ವಿಯಾದ ನಿಜವಾಗಿಯೂ ಮಹಾರಾಣಿಯಾಗಬೇಕಿದ್ದ ಚಿಕ್ಕಮ್ಮಣ್ಣಿ, ಭೋಳೇ ಸ್ವಭಾವದ ವಿಷಯ ಲಂಪಟ ಮಹಾರಾಜ, ಇನ್ನಿತರ ಪಾತ್ರಗಳು ಮನುಷ್ಯ ಸ್ವಭಾವದ ವಿವಿಧ ಆಯಾಮಗಳನ್ನು, ವಿಧ ವಿಧವಾದ ವ್ಯಕ್ತಿತ್ವಗಳನ್ನು ಸೆರೆ ಹಿಡಿದಿವೆ! ದೈವ ಸೃಷ್ಟಿಯ ವಿಪುಲತೆಯೇ ಇಲ್ಲಿ ಪ್ರತಿಬಿಂಬಿಸಿದೆ.

ಈ ಕಾದಂಬರಿಯಲ್ಲಿ ನನಗೆ ಕಂಡ ಒಂದೇ ಒಂದು ಕಪ್ಪು ಚುಕ್ಕೆ ಎಂದರೆ ಕೊನೆಯಲ್ಲಿ ಶಿಖರಸೂರ್ಯ ಶಿವಾಪುರದ ಬೆಟ್ಟದ ಮೇಲೆಯೇ ಸಿಡಿಮದ್ದು ಸಿಡಿಸಲು ಪ್ರಯತ್ನಿಸುವ ಸನ್ನಿವೇಶ. ಇಡೀ ಕಾದಂಬರಿ ಒಂದು ಜಾನಪದ ಕಥೆಯಂತೆ ಹರಿದು ಬಂದಿರುವಾಗ ಈ ಸಿಡಿಮದ್ದಿನ ಕಲ್ಪನೆಯೇ ಒಂದು ಬಗೆಯ ವಿರೋಧಾಭಾಸವಾಗಿ ಕಂಡುಬರುತ್ತದೆ. ಹೋಗಲಿ. ಇದು ಇತಿಹಾಸದ ಕಥೆ ಎಂದೇ ಪರಿಭಾವಿಸಿದರೂ ಕಾಲಾಳು, ಕುದುರೆ ಸೈನ್ಯ, ಈಟಿ, ಭರ್ಜಿಯಲ್ಲಿ ಜನ ಹೊಡೆದಾಡುತ್ತಿದ್ದ ಬಹಳ ಹಳೆಯ ಕಾಲದಲ್ಲಿ ನಡೆದ ಕಥೆ ಇದು. ಯಂತ್ರ ಯುಗದ ಕೂಸಾದ ಸಿಡಿಮದ್ದಿಗೆ ಅಲ್ಲಿ ಸ್ಥಾನವೇ ಇಲ್ಲ. ಕಥೆಯ ಕಾಲ, ಪರಿಸರದಿಂದ, ಜನಜೀವನದಿಂದ ದೂರಾಗಿ ಸಿಡಿದು ನಿಲ್ಲುತ್ತದೆ ಈ ಸಿಡಿಮದ್ದಿನ ಪ್ರಸಂಗ.

ಈ ಕಾದಂಬರಿಯ ಸಾರ್ಥಕತೆ, ಯಶಸ್ಸಿನ ಒಳಗುಟ್ಟು ಅಡಗಿರುವುದು ಅದನ್ನು ಓದಿ ಮುಗಿಸಿದ ಮೇಲೂ 'ಇದು ಎಂದೆಂದೂ ಮುಗಿಯದ ಕಥೆ' ಎಂಬ ಭಾವನೆಯನ್ನು ನಮ್ಮಲ್ಲಿ ಉಳಿಸಿಬಿಡುವ ಕಾರಣದಿಂದ– ಇತಿಹಾಸ, ಅಷ್ಟೇ ಏಕೆ ಇಡೀ ಸೃಷ್ಟಿ, ಮತ್ತೆ ಮತ್ತೆ ಪುನರಾವರ್ತಿಸುತ್ತಾ ಹೋಗುತ್ತದೆ ಎಂಬ ಸತ್ಯವನ್ನು ತೆರೆದಿಡುವುದರಲ್ಲಿ. ಇಲ್ಲಿ ಶಿಖರಸೂರ್ಯನ ಅಂತ್ಯ, ಕಥೆಯ ಮುಕ್ತಾಯವಲ್ಲ. ಕನಕಪುರಿಯ ವಿನಾಶದಲ್ಲಿ ಉಂಟಾದ ಅವ್ಯವಸ್ಥೆಯೇ ಒಂದು ವ್ಯವಸ್ಥೆಯನ್ನು ಕೈ ಮಾಡಿ ಕರೆಯುತ್ತಿದೆ. ಅಲ್ಲಿಗೆ ನಿನ್ನಡಿ ಬಂದು ಹೊಸ ಮೌಲ್ಯಗಳ ಹೊಸ ಬಾಳಿನ ಉದಯಕ್ಕೆ ನಾಂದಿ ಹಾಡುತ್ತಾನೆ. ಆದರೆ ಅದೂ ಸಹ ಶಾಶ್ವತವಲ್ಲ ಎಂಬ ಸಂದೇಶವೇ ಈ ಕಥೆಯ ಒಳತಿರುಳು. ಇತಿಹಾಸದ ಪ್ರಪಾತದಲ್ಲಿ ಅದೆಷ್ಟು ಶಿಖರಸೂರ್ಯರು ಎಷ್ಟು ನಿನ್ನಡಿಗಳು ಮಲಗಿದ್ದಾರೋ ಅಷ್ಟೇ ಜನ ಭವಿಷ್ಯತ್ತಿನ ಗರ್ಭದಲ್ಲೂ ಅಡಗಿದ್ದಾರೆ. ಅದೆಲ್ಲಾ ಯಾಕೆ? ನಮ್ಮ ಭಾರತದ ಇತ್ತೀಚಿನ ಇತಿಹಾಸವನ್ನೇ ನೋಡಿ. ಸ್ವಾತಂತ್ರ್ಯ ಸಮರದ ಕಾಲದಲ್ಲಿ ನೈತಿಕ

ಮಹೋನ್ನತಿಯನ್ನು ಸಾಧಿಸಿ ಗಾಂಧೀಜಿಯವರ ಮಾರ್ಗದರ್ಶಿತ್ವದಲ್ಲಿ ಇಡೀ ವಿಶ್ವಕ್ಕೆ ಅಹಿಂಸಾತ್ಮಕ ಪ್ರತಿಭಟನೆಯ ಮೇಲ್ಪಂಕ್ತಿಯನ್ನು ಹಾಕಿಕೊಟ್ಟ ಜನತೆ ಇಂದು ನೈತಿಕವಾಗಿ ಯಾವ ಮಟ್ಟಕ್ಕೆ ಇಳಿದಿದೆ! ಒಂದು ಜೀವಮಾನದ ಕಾಲಾವಧಿಯಲ್ಲೇ ಎಂತಹ ದೊಡ್ಡ ಬದಲಾವಣೆ! ಆದರೆ ಇದೂ ಕೂಡ ಶಾಶ್ವತವಲ್ಲ. ಮುಂದೆ ಬಂದಾನು ಮತ್ತೊಬ್ಬ ಗಾಂಧಿ, ತಂದಾನು ಮತ್ತೊಂದು ಹೊಸ ಮೌಲ್ಯಗಳ ಹೊಸ ಬಾಳನ್ನು. ಹೀಗೆ ದೈವ ಸೃಷ್ಟಿಯ ನಿರಂತರವಾದ ಚಲನಶೀಲತೆಯನ್ನು ಮನದಟ್ಟು ಮಾಡಿಸುವುದರಲ್ಲಿ ಈ ಕಾದಂಬರಿಯ ಹೆಗ್ಗಳಿಕೆ ಇದೆ. ಗದ್ಯ ರೂಪದಲ್ಲಿದ್ದರೂ ಸಹ ಒಂದು ಬಗೆಯ ಅಂತರ್ಯಾಮಿ ಪ್ರಜ್ಞೆ, ಅತೀತ ಪ್ರಜ್ಞೆಯನ್ನು ಒಳಗೊಂಡ ಈ ಕಾದಂಬರಿ ಮಹಾ ಕಾವ್ಯಗಳ ಸಾಲಿನಲ್ಲಿ ನಿಲ್ಲಬಹುದಾದ ಒಂದು ಅದ್ಭುತ ಕೃತಿ.

**ಕೃತಿ ವಿವರ:** ಶಿಖರ ಸೂರ್ಯ, ಡಾ. ಚಂದ್ರಶೇಖರ ಕಂಬಾರ, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೬ (೨ನೇ ಮುದ್ರಣ), ಪು. ೪೬೦

## ‘ಹಳ್ಳ ಬಂತು ಹಳ್ಳ’ – ನನ್ನ ಅನಿಸಿಕೆಗಳು

–ಮವಾಸು (ವಲ್ಲೀಶ ಶಾಸ್ತ್ರಿ); ಚಿನೋಹಿಲ್ಸ್, ಕ್ಯಾಲಿಫೋರ್ನಿಯಾ

೨೦೦೮ ಬೇಸಿಗೆ ರಜೆಗೆ ಬೆಂಗಳೂರಿಗೆ ಹೋಗಿದ್ದ ಸಮಯ. ಅದೊಂದು ಪುಸ್ತಕ ಬಿಡುಗಡೆ ಸಮಾರಂಭ. ಮುಖ್ಯ ಅತಿಥಿ ಭಾಷಣ. ಹಾಸ್ಯದ ಹೊನಲು ಭಾಷಣದುದ್ದಕ್ಕೂ ಹರಿಯುತ್ತಿತ್ತು. ಆಗ ಪುಸ್ತಕ ಬಿಡುಗಡೆ ಸಮಾರಂಭದ ಆಹ್ವಾನ ಪತ್ರಿಕೆ ತೆಗೆದು ನೋಡಿದೆ. ಮುಖ್ಯ ಅತಿಥಿ ‘ಡಾ. ಶ್ರೀನಿವಾಸ ವೈದ್ಯ’ ಎಂದಿತ್ತು. ಅಷ್ಟಾಗಿ ಕೇಳಿದ ನೆನಪಿರಲಿಲ್ಲ. ಆದರೂ ಎಲ್ಲೋ ಕೇಳಿದ ಅಥವಾ ಓದಿದ ನೆನಪು. ಭಾಷಣದಲ್ಲಿ ಧಾರವಾಡದ ಅಟ್ಟದ ಬಗ್ಗೆ ಮಾತನಾಡಿದಾಗ ಅಂದುಕೊಂಡೆ: ಎಲ್ಲೋ ಧಾರವಾಡದಲ್ಲೇ ನೋಡಿರಬೇಕೆಂದು. ಕಾರ್ಯಕ್ರಮದ ನಂತರ ಅವರನ್ನು ಭೇಟಿ ಮಾಡಿ ನನ್ನ ಪರಿಚಯ ಹೇಳಿಕೊಂಡೆ. ಹಾಗೆ ಅಟ್ಟದ ಬಗ್ಗೆ ಮಾತನಾಡಿದೆ. ರಜೆ ಮುಗಿಸಿ ಅಮೆರಿಕೆಗೆ ಬಂದ ಮೇಲೂ ನನ್ನ ತಲೆಯಲ್ಲಿ ಕೊರೆಯುತ್ತಿತ್ತು, ಅವರ ಹೆಸರನ್ನು ಎಲ್ಲೋ ಓದಿದ ನೆನಪು. ಹಾಗೆ ಒಂದು ದಿವಸ ನನ್ನ ಕನ್ನಡ ಪುಸ್ತಕಗಳ ಮೇಲೆ ಕಣ್ಣು ಹಾಯಿಸುತ್ತಿದ್ದಾಗ ಕಂಡಿದ್ದು ಇವರ ಹೆಸರು, ಬರೆದ ಪುಸ್ತಕದ ಹೆಸರು– ‘ಹಳ್ಳ ಬಂತು ಹಳ್ಳ’. ಮನೋಹರ ಗ್ರಂಥಮಾಲೆಯ ಪ್ರಕಟಣೆ. ಡಾ. ವೈದ್ಯ ಅವರು ತಮ್ಮ ಭಾಷಣದಲ್ಲಿ ಹರಿಸಿದ್ದ ಹಾಸ್ಯವನ್ನು ನೆನೆಸಿಕೊಂಡು, ಈ ಪುಸ್ತಕವೂ ಹಾಸ್ಯಭರಿತವಾಗಿರುತ್ತದೆ ಎಂದುಕೊಂಡೇ ಓದಲುಪ್ರಾರಂಭಿಸಿದೆ. ಆದರೆ ಆದದ್ದೇ ಬೇರೆ.

೧೯ನೆಯ ಶತಮಾನದ ಉತ್ತರಾರ್ಧವೂ ಹಾಗೂ ೨೦ನೆಯ ಶತಮಾನದ ಪ್ರಥಮಾರ್ಧವೂ ನಮ್ಮ ರಾಷ್ಟ್ರಜೀವನದಲ್ಲಿ ವಿಶಿಷ್ಟವಾದ ಅವಧಿ. ಸ್ವಾತಂತ್ಯ ಸಂಗ್ರಾಮಕ್ಕೆ ಕಾವೇರಿದ ದಿನಗಳು ಹಾಗೂ ಸ್ವಾತಂತ್ರ್ಯ ತಂದ ದಿನಗಳು. ಈ ವೇಳೆಯಲ್ಲಿ ನಡೆದ ಸಣ್ಣ ಪುಟ್ಟ ದಂಗೆಗಳು ಅಪಾರ. ಅಂತಹ ಒಂದು ನರಗುಂದ ದಂಗೆಯ ಕಾಲದಲ್ಲಿ ಸೃಷ್ಟಿಯಾಗುವ ಡಾ. ಶ್ರೀನಿವಾಸ ವೈದ್ಯ ಅವರ ‘ಹಳ್ಳ ಬಂತು ಹಳ್ಳ’ ಸಾಮಾಜಿಕ ಕಾದಂಬರಿ ಮುಗಿಯುವುದೂ ಸ್ವಾತಂತ್ರ್ಯದ ನಂತರ ಗಾಂಧಿಯ ಕೊಲೆಯ ಸಮಯಕ್ಕೆ. ಡಾ. ಶ್ರೀನಿವಾಸ ವೈದ್ಯ ವಯಸ್ಸಿನಲ್ಲಿ ಹಿರಿಯರಾದರೂ, ಸಾಹಿತ್ಯಿಕ ಬದುಕಿಗೆ ಬಂದಿದ್ದು

ಅವರ ಬ್ಯಾಂಕ್ ವೃತ್ತಿ ಜೀವನದ ನಿವೃತ್ತಿಯ ನಂತರ. ಇವರ ಕೃತಿಯ ಮೇಲೆ ನಾನು ಆಕರ್ಷಿತನಾಗಲು ಎರಡು ಕಾರಣಗಳು. ಒಂದು ಬೆಂಗಳೂರಿನಲ್ಲಿ ಒಂದು ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಕೇಳಿದ ಭಾಷಣ. ಎರಡನೆಯದು ಅಂದು ಬೆಂಗಳೂರಿನ ಪುಸ್ತಕ ಬಿಡುಗಡೆ ಸಮಾರಂಭದ ಭಾಷಣದಲ್ಲಿ ಅವರಾಡಿದ ಧಾರವಾಡದ ಅಟ್ಟದ ಬಗೆಗಿನ ಮಾತುಗಳು.

ಧಾರವಾಡ ಅಟ್ಟದ ಬಗ್ಗೆ ಎರಡು ಮಾತುಗಳು. ಇದು ಇರುವುದು ಧಾರವಾಡದ ಸುಭಾಸ ರಸ್ತೆಯಲ್ಲಿ. ಯಾರನ್ನು ಕೇಳಿದರೂ ತೋರಿಸುವ ಒಂದು ಹೆಗ್ಗುರುತು. ಈ ಅಟ್ಟ ಸಾಹಿತ್ಯ ಕ್ಷೇತ್ರದಲ್ಲಿ ಬಹಳ ಪ್ರಸಿದ್ಧಿ. ಬಹುತೇಕ ಎಲ್ಲಾ ಸಾಹಿತ್ಯ ದಿಗ್ಗಜರು ಒಮ್ಮೆಯಾದರೂ ಈ ಅಟ್ಟಕ್ಕೆ ಕಾಲಿಟ್ಟಿದ್ದಾರೆ. ಈ ಅಟ್ಟ, ಜಿ. ಬಿ. ಜೋಷಿಯವರು ಕಟ್ಟಿ ಬೆಳೆಸಿದ ಮನೋಹರ ಗ್ರಂಥಮಾಲಾದ ಕಚೇರಿಯಾದರೂ, ಶ್ರೀನಿವಾಸ ವೈದ್ಯರೇ ಹೇಳಿದಂತೆ ಇದೊಂದು ನಿರಂತರ ಕಮ್ಮಟ. ನಾನು ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಒಂದು ವರ್ಷ ಕೆಲಸದಲ್ಲಿದ್ದಾಗ ಈ ಅಟ್ಟಕ್ಕೆ ಪ್ರತಿನಿತ್ಯವೂ ಸಂಜೆ ಭೇಟಿಮಾಡಿ ಹರಟುತ್ತಿದ್ದ ಹರಟೆ ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಆದ್ದರಿಂದ ಯಾವಾಗ ಅವರು ಅಟ್ಟದ ಬಗ್ಗೆ ಮಾತನಾಡಿದರೋ ಆಗಲೇ ನಾನು ಇವರ ಕೃತಿಯ ಬಗ್ಗೆ ಆಕರ್ಷಿತನಾದೆ. ನಾನು ಈ ಕಾದಂಬರಿ ಓದಿ ಮುಗಿಸುವ ಹೊತ್ತಿಗೆ ಇನ್ನೊಂದು ಸುದ್ದಿಯನ್ನು ಓದಿ ಬಹಳ ಸಂತೋಷವನ್ನೂ ಪಟ್ಟೆ ಹಾಗೂ ಸ್ವಲ್ಪ ಹೆದರಿಯೂಕೊಂಡೆ. ಇದಕ್ಕೆ ೨೦೦೮ನೆಯ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದ್ದು ಸಂತೋಷದ ಸುದ್ದಿಯಾದರೆ, ಹೆದರಿಕೊಂಡಿದ್ದು ಇಂತಹ ಮಹಾನ್ ಕೃತಿಯನ್ನು ಹೇಗೆ ನಾನು 'ವಿಮರ್ಶೆ' ಮಾಡುವುದೆಂದು. ವಿಮರ್ಶೆ ಸಾಧ್ಯವೇ ಇಲ್ಲ. ಇದು ನನ್ನ ಅನಿಸಿಕೆಗಳು.

**ಕಥೆಯ ಸಾರಾಂಶ**

'ಹಳ್ಳ ಬಂತು ಹಳ್ಳ' ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ನರಗುಂದ–ನವಲಗುಂದ ತಾಲ್ಲೂಕಿನ ಬ್ರಾಹ್ಮಣ ಕುಟುಂಬಗಳ ನೋವು–ನಲಿವು ತಲ್ಲಣಗಳನ್ನು ಒಳಗೊಂಡ ಒಂದು ಸಾಮಾಜಿಕ ಕಾದಂಬರಿ, ಸ್ವಾತಂತ್ರ್ಯೋತ್ತರ ಕಾಲದಲ್ಲಿನ ಬ್ರಾಹ್ಮಣ ಕುಟುಂಬದ ನೋವು ನಲಿವಿನ ಚಿತ್ರಣಕ್ಕೇ ಸೀಮಿತಗೊಂಡಿದೆ. ಕಥೆ ಪ್ರಾರಂಭವಾಗುವುದೇ ನರಗುಂದದ ಸ್ವಾತಂತ್ರ್ಯ ಸಂಗ್ರಾಮದಿಂದ. ಕಥೆ ನವಲಗುಂದದ ಒಂದು ಬ್ರಾಹ್ಮಣ ಕುಟುಂಬದ ಸುತ್ತ ಹೆಣೆದುಕೊಂಡಿದೆ. ಕಾಶಿಯಿಂದ ನಾನಾಸಾಹೇಬನೆಂಬ ಪೇಶ್ವೆ ಬ್ರಿಟಿಷ್ ಸರ್ಕಾರದ ವಿರುದ್ಧ ದಂಗೆ ಏಳಲು ದಕ್ಷಿಣದ ನರಗುಂದದ ಬಾಬಾಸಾಹೇಬನ ಸಹಾಯ ಯಾಚಿಸಲು ಕಳುಹಿಸಿದ ಸಂದೇಶ ತಲಪಿಸಲು ಬಂದ ಇಬ್ಬರು ಬ್ರಾಹ್ಮಣ ಸೇವಕರು ಅಕಸ್ಮಾತ್ ಆಗಿ ನವಲಗುಂದದ ಧಣಿ ಸರದಾರ ಅಪ್ಪಾಸಾಹೇಬ ದೇಸಾಯರ ಕೈಗೆ

ಸಿಕ್ಕಿಹಾಕಿಕೊಳ್ಳುತ್ತಾರೆ. ಉತ್ತರದಲ್ಲಿ ದಂಗೆಯಲ್ಲಿ ಸೋತ ನಾನಾಸಾಹೇಬನ ಜೊತೆಗೆ ದಕ್ಷಿಣದ ನರಗುಂದದ ಬಾಬಾಸಾಹೇಬ ಸೋತುಹೋಗುತ್ತಾನೆ. ಪದ್ಮನಾಭ ಪಲಾಯನವಾಗಿ, ಅಪ್ಪಾಸಾಹೇಬರ ಆಶ್ರಯದಲ್ಲಿ ಉಳಿದ ಇನ್ನೊಬ್ಬ ಬ್ರಾಹ್ಮಣನೇ ಕಮಲಾಪಂತ್. ತನ್ನ ವೈದ್ಯ ವಿದ್ಯೆಯಿಂದ ಅಪ್ಪಾಸಾಹೇಬರ ಮೆಚ್ಚುಗೆ ಪಡೆದು, 'ಉತ್ತರದ ಕಾಶಿಯಿಂದ ಒಂದು ಪುಂಕೇಸರ ಹಾರಿ ಬಂದು ದಕ್ಷಿಣ ನವಲಗುಂದದ ಸವಳು ಮಣ್ಣಿನಲ್ಲಿ ಗಟ್ಟಿಯಾಗಿ ಸಿಕ್ಕಿತು.'

ನವಲಗುಂದದಲ್ಲಿ ಸಿಕ್ಕಿಹಾಕಿಕೊಂಡ ಕಮಲನಾಭಪಂತನಿಗೆ, ಗುರುನಾಥ ಪಂಥರ ಕೃಪಾಕಟಾಕ್ಷದಿಂದ, ಸಾವಿತ್ರಿಬಾಯಿಯೊಡನೆ ಲಗ್ನವಾಗುತ್ತದೆ. ಈ ವೈದ್ಯ ಕಮಲಾಪಂತನ ಮಗನೇ ವಾಸಣ್ಣ. ಕಿರಿಯ ವಯಸ್ಸಿನಲ್ಲೇ ಅಪ್ಪ ಅಮ್ಮನನ್ನು ಕಳೆದುಕೊಂಡ ವಾಸಣ್ಣನೇ ಕಥೆಯ ಕೇಂದ್ರ ಬಿಂದು. ವಾಸಣ್ಣ ಒಬ್ಬನೇ ತನ್ನ ತಂದೆಯ ವೈದ್ಯ ವೃತ್ತಿಯನ್ನು ಮುಂದುವರಿಸಿಕೊಂಡು ಬಂದು ಸಂಸಾರದ ಹೊಣೆಯನ್ನು ಹೊತ್ತು ನಡೆಸುತ್ತಾನೆ. ಪ್ಲೇಗ್‌ನಿಂದ ಸಾವನ್ನಪ್ಪುವ ವೆಂಕಣ್ಣನ ಮಕ್ಕಳ ಜವಾಬ್ದಾರಿಯೂ ಸಹ ವಾಸಣ್ಣನ ಮೇಲೇ ಬೀಳುತ್ತದೆ. ತನ್ನ ಮಕ್ಕಳಲ್ಲದೇ, ತನ್ನ ತಮ್ಮನ ಮಕ್ಕಳನ್ನೂ ವಿದ್ಯಾಭ್ಯಾಸಕ್ಕೋಸ್ಕರ ಧಾರವಾಡಕ್ಕೆ ಕಳುಹಿಸುತ್ತಾನೆ. ಹಾಗೆ ಧಾರವಾಡಕ್ಕೆ ಬಂದ ವೆಂಕಣ್ಣನ ಮಗ ರಾಮು ಕಾಂಗ್ರೆಸ್ ಸೇರಿ ಸ್ವಾತಂತ್ರ್ಯ ಹೋರಾಟಕ್ಕೆ ಇಳಿಯುತ್ತಾನೆ. ಈಗ ನಾವು ಸ್ವಾತಂತ್ರ್ಯ ಹೋರಾಟದ ಬಗ್ಗೆ ತುಂಬ ಮಾತನಾಡುತ್ತೇವೆ. ಸ್ವಾತಂತ್ರ್ಯದ ಕಥೆಗಳನ್ನು ಕೇಳುತ್ತಿದ್ದಾಗ ನಾವು ಆ ಕಾಲದಲ್ಲಿದ್ದಿದ್ದರೆ ನಾವೂ ಹೋರಾಡುತ್ತಿದ್ದೇವೇನೋ ಅನ್ನಿಸುತ್ತದೆ. ಆದರೆ ರಾಮು ಸ್ವಾತಂತ್ರ್ಯ ಹೋರಾಟಕ್ಕೆ ಇಳಿದಾಗ ವಾಸುದೇವಾಚಾರ್‌ರ ವಿರೋಧ ನೋಡಿದಾಗ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವುದೂ ಎಷ್ಟು ಕಷ್ಟವಿತ್ತೆಂದು ತಿಳಿಯುತ್ತದೆ.

ಹಂತ ಹಂತವಾಗಿ ಗಿಡಮೂಲಿಕೆಗಳ ವೈದ್ಯ ವಾಸಣ್ಣ ತನ್ನ ಮೇಲೆ ಬಂದಿರುವ ಹೊಣೆಯಿಂದಾಗಿ ಕುಟುಂಬದ ಸೂತ್ರವನ್ನು ಹಿಡಿಯಬೇಕಾದ ಸ್ಥಿತಿ ಒದಗಿ ಬಂದು ವಾಸುದೇವಾಚಾರ್ ಆಗಿ ಬೆಳೆಯುವ ರೀತಿ ಬಹಳ ಚೆನ್ನಾಗಿ ಮೂಡಿಬಂದಿದೆ. ದುರ್ಬಲ ಸಹೋದರ ವೆಂಕಣ್ಣ, ಚಿಕ್ಕ ವಯಸ್ಸಿನಲ್ಲೇ ವಿಧವೆಯಾದ ಅಂಬಕ್ಕ ಹಾಗೂ ವರ್ಷಕ್ಕೊಂದರಂತೆ ೧೧ ಮಕ್ಕಳನ್ನು ಹಡೆಯುವ ತಿಪ್ಪಕ್ಕಳ ನಡುವೆ ನಿಧಾನವಾಗಿ ಕಥಾನಾಯಕ ವಾಸಣ್ಣ ಹೊಸ ವ್ಯಕ್ತಿತ್ವವನ್ನು ಪಡೆಯುತ್ತಾನೆ. ವಾಸಣ್ಣನ ಜೊತೆಗೆ ನವಲಗುಂದವೂ ಹಂತಹಂತವಾಗಿ ಬೆಳೆಯುತ್ತದೆ. ಊರಿಗೆ ಬಸ್ ಬರುವುದು, ಪೊಲೀಸ್ ಸ್ಟೇಷನ್, ತಾಲೂಕು ಕಚೇರಿ... ಹೀಗೆ ನವಲಗುಂದ ಹಳ್ಳಿಯಿಂದ ಪಟ್ಟಣವಾಗುತ್ತಾ ಬರುತ್ತದೆ. ಹಾಗೆಯೇ ವಾಸುದೇವಾಚಾರ್‌ರ ಗೌರವ ಹಳ್ಳಿಯಲ್ಲಿ ಹಂತಹಂತವಾಗಿ ಕುಂಠಿತವಾಗುವುದು, ಕಿರಾಣಿ ಅಂಗಡಿ ಅದೋನಿ ಕೃಷ್ಟ್ಯಾನ ಪಾತ್ರದ

ಮೂಲಕ ಪ್ರಕಟಗೊಳ್ಳುತ್ತದೆ. ದುಡ್ಡಿದ್ದವನೇ ದೊಡ್ಡವ ಎನ್ನುವಂತೆ ಅಂಗಡಿ ವ್ಯಾಪಾರದಲ್ಲಿ ಸಾಹುಕಾರನಾಗುವ ಅದೇ ಕೃಷ್ಟ್ಯಾ ಕೃಷ್ಣಪ್ಪನಾಗುವ ಪಾತ್ರದಲ್ಲಿ ತೋರಿಸಿದ್ದಾರೆ. ಹೀಗೆ ನರಗುಂದದ ದಂಗೆಯಲ್ಲಿ ಭಾಗಿಯಾಗಲು ಬಂದು, ನವಲುಗುಂದದಲ್ಲಿ ನೆಲೆಸಿದ ಪಂಥರ ಕುಟುಂಬದ ಮೂರು ತಲೆಮಾರಿನ ಪಾತ್ರಗಳು ಈ ಕಥೆಯಲ್ಲಿ ಚಿತ್ರಿತವಾಗಿವೆ.

**ಹೋಲಿಕೆ**

ನನ್ನ ಜೀವನದ ಬಹಳಷ್ಟು ಘಟನೆಗಳು, ಪಾತ್ರಗಳು ಈ ಕಥೆಯಲ್ಲಿ ಬರುವ ಪಾತ್ರಗಳಿಗೆ ಹೋಲುತ್ತವೆ. ಇದರಲ್ಲಿ ಬರುವ ವಾಸಣ್ಣನ ಪಾತ್ರ ಸ್ವಲ್ಪ ನಮ್ಮ ಅಪ್ಪನನ್ನು ಹೋಲುತ್ತದೆ. ನಮ್ಮಪ್ಪನೂ ಹಳ್ಳಿಯಲ್ಲಿ ದೊಡ್ಡ ಬ್ರಾಹ್ಮಣ ಸಂಸಾರದಲ್ಲಿ ಬೆಳೆದು ಊರಿನಲ್ಲಿ ಗೌರವಾನ್ವಿತ ವ್ಯಕ್ತಿಯಾಗಿದ್ದರು. ಅವರ ಹೆಸರೂ ವಾಸುವೆಂದೇ ಇತ್ತು. ಅವರೂ ಈ ಕಥೆಯ ಪಾತ್ರದಲ್ಲಿ ಬರುವ ವಾಸಣ್ಣನ ರೀತಿ ಸಂಸಾರದ ಹೊಣೆಯನ್ನು ಹೊತ್ತವರು, ಊರಿಗೇ ಹಿರಿಯರು, ಮಕ್ಕಳನ್ನು ಓದಿಸಲೆಂದು ಪಟ್ಟಣಕ್ಕೆ ಕಳುಹಿಸಿದವರು. ಒಂದು ಪ್ರಸಂಗವಂತೂ ನಮ್ಮ ಅಪ್ಪ ಹೇಳಿದ ಜಮೀನು ಪತ್ರದ ಕಥೆಯನ್ನೇ ಬಹಳಷ್ಟು ಹೊಂದುತ್ತದೆ. ಕಥೆಯಲ್ಲಿ ವಾಸಣ್ಣ ನವಲಗುಂದದ ದೇಸಾಯಿಯಿಂದ ಬಳುವಳಿಯಾಗಿ ಪಡೆದ ಜಮೀನಿನ ಪತ್ರ ಮಾಡಿಸಲು ಎಷ್ಟು ಕಷ್ಟಪಡುತ್ತಾರೋ ಅದೇ ರೀತಿ ನಮ್ಮ ತಾತಂದಿರಿಗೆ ಮೈಸೂರು ಮಹಾರಾಜರಿಂದ ಬಳುವಳಿಯಾಗಿ ಬಂದ ಜಮೀನಿನ ಪತ್ರ ಮಾಡಿಸುವಾಗಲೂ ಅಷ್ಟೇ ಕಷ್ಟಪಟ್ಟಿದ್ದರು. ಕಥೆ ಓದುವಾಗ ಅದೇ ನೆನಪು ಬರುತ್ತಿತ್ತು. ಜಮೀನಿನ ಪತ್ರ ತೆಗಿಸಲು ಪಡುವ ಶ್ರಮ ಹಾಗೂ ಲಂಚ ಕೊಟ್ಟು ಕೆಲಸ ಮಾಡಿಸಿಕೊಳ್ಳುವುದು, ಬ್ರಿಟಿಷ್ ದಫ್ತರಶಾಹಿ ಸರಕಾರದ ಪದ್ಧತಿಯನ್ನು ಎತ್ತಿ ತೋರಿಸುತ್ತದೆ.

ಮಠದ ಸ್ವಾಮಿಗಳು ಮನೆಗೆ ಬಂದು ಬಲವಂತ ಪೂಜೆ ಮಾಡಿಸುವ ಪದ್ಧತಿಯ ಅನುಭವ ನನಗೂ ಆಗಿತ್ತು. ಉಡುಪಿ ಮಠದ ಸ್ವಾಮಿಗಳು ಕರ್ನಾಟಕದಲ್ಲಿ ಮನೆಗೆ ಬಂದು ಕೃಷ್ಣನ ಪೂಜೆ ಮಾಡುವುದೆಂದರೆ ಮಾಧ್ವರ ಮನೆಯಲ್ಲೇ. ಸ್ಮಾರ್ತರ ಮನೆಗೆ ಬಂದು ಪೂಜೆ ಮಾಡಿದ್ದನ್ನು ಎಲ್ಲೂ ಕೇಳಿಲ್ಲ. ಆದರೆ ನಾನು ನ್ಯೂಜೆರ್ಸಿಯಲ್ಲಿದ್ದಾಗ, ಮಾಧ್ವರ ಅಭಾವದಿಂದಲೋ ಏನೋ, ನನ್ನೊಬ್ಬ ಸ್ಮಾರ್ತ ಬ್ರಾಹ್ಮಣ ಗೆಳೆಯನ ಮನೆಯಲ್ಲಿ ಉಡುಪಿಮಠದ ಸ್ವಾಮಿಗಳ ಪಾದಪೂಜೆ ನಡೆದಿತ್ತು. ನನ್ನನ್ನೂ ಕರೆದಿದ್ದ. ಅದರ ಅನುಭವವನ್ನೇ ಒಂದು ಸಣ್ಣ ಕಥೆಯಾಗಿ ಬರೆಯಬಹುದು. ಮನೆಯ ಹಾಲ್, ಅಡುಗೆ ಮನೆ, ಸ್ವಾಮಿಗಳು ಇಳಿದುಕೊಳ್ಳುವ ಒಂದು ಕೊಠಡಿ ಇವೆಲ್ಲಕ್ಕೂ ಪೊಲೀಸ್‌ನವರು ಅಪಘಾತವಾದ ಸ್ಥಳದಲ್ಲಿ ಟೇಪ್ ಸುತ್ತಿ ನಿರ್ಬಂಧವನ್ನು ಹಾಕುವ ರೀತಿ ನಿರ್ಬಂಧ ಹೇರಿದ್ದರು. ಹಿಂದಿನ ದಿವಸವೇ ಬಂದು ಅಡುಗೆ ಮನೆ, ಹಾಲ್ ಎಲ್ಲವನ್ನೂ ಆಕ್ರಮಿಸಿಕೊಂಡಿದ್ದರು. ಮಠದವರನ್ನು ಬಿಟ್ಟು ಯಾರಿಗೂ ಅಲ್ಲಿಗೆ

ಪ್ರವೇಶವಿರಲಿಲ್ಲ. ಅವರೇ ಅಡುಗೆ ಸಿದ್ಧತೆ ಮಾಡಿದ್ದರು. ಪೂಜೆಗೂ ಅವರೇ ಸಿದ್ಧತೆ ಮಾಡಿದ್ದರು (ಅಡುಗೆ ಸಾಮಾನುಗಳಿಗೆ ಮಾತ್ರ ನನ್ನ ಸ್ನೇಹಿತನೇ ದುಡ್ಡು ಕೊಟ್ಟಿದ್ದ). ಪೂಜೆ ಆಗುವವರೆಗೆ ಅಲ್ಲಿಗೆ ಯಾರಿಗೂ ಪ್ರವೇಶವಿರಲಿಲ್ಲ. ಮನೆಯ ಅಂಚು ಅಂಚಿನಲ್ಲೂ ಮಡಿ ತುಳುಕಾಡುತ್ತಿತ್ತು. ಈ ಕಥೆಯಲ್ಲಿ ಸ್ವಾಮಿಗಳ ಪೂಜಾ ಪ್ರಸಂಗವನ್ನು ಪೂರ್ಣ ಸತ್ಯಾಸತ್ಯತೆಯಲ್ಲಿ ವಿವರಿಸಿದ್ದಾರೆ. ಹಣಕಾಸಿನ ತೊಂದರೆಯಲ್ಲಿದ್ದ ವಾಸುದೇವಾಚಾರ್‌ಗೆ ಮಠದ ಈ ಪೂಜೆ ಮಾಡುವ ಸ್ಥಿತಿಯಲ್ಲಿಲ್ಲದಿದ್ದರೂ, ಮನೆಯ ಹೆಂಗಸರ ಒತ್ತಡಕ್ಕೆ ಬಲಿಯಾಗಿ ಪೂಜೆಗೆ ಒಪ್ಪಿಗೆ ಕೊಡುತ್ತಾರೆ. ಮನೆಯನ್ನು ಖಾಲಿ ಮಾಡಿಕೊಡುವುದು, ಮಠದವರು ಮನೆಯನ್ನು ಆಕ್ರಮಿಸಿ ಮಡಿಯಲ್ಲಿಡುವುದು, ಒಂದು ವಾರ ಬಿಡಾರ ಹಾಕುವುದು, ಇವನ್ನೆಲ್ಲಾ ಓದುವಾಗ ಮಠದ ಮಡಿ ಅನುಭವವಾಗುವ ರೀತಿ ವಿವರಿಸಿದ್ದಾರೆ.

**ಕಥೆ ಹೇಳುವ ರೀತಿ**

ಕಥೆ, ಓದುಗ ನಿರೀಕ್ಷಿಸುವ ರೀತಿ ಹರಿಯುವುದಿಲ್ಲ. ಉದಾಹರಣೆಗೆ– ಹೆಂಡತಿಯನ್ನು ಕಳೆದುಕೊಂಡ ವೆಂಕಣ್ಣ ನವಲಗುಂದದ ಸಮೀಪದ ಹಳ್ಳಿಯ ಮುಸಲ್ಮಾನ ಹುಡುಗಿ ಸಂಬಂಧದ ಮಾತುಗಳು ಬಂದಾಗ ಸ್ವಾಭಾವಿಕವಾಗಿ ಕಥೆ ಎಲ್ಲೋ ಹಿಂದು ಮುಸ್ಲಿಮ್ ಕತೆಯಾಗೇ ಹೋಗುತ್ತದೇನೋ ಎನಿಸುತ್ತದೆ. ಇನ್ನೊಂದೆಡೆ ವಾಸುದೇವಾಚಾರ್‌ರ ಮನೆಯಲ್ಲೇ ಬೆಳೆದ ನಾರಾಯಣ, ನಾಟಕದ ಕಂಪನಿಯ ಹುಡುಗಿಯೊಡನೆ ಮದುವೆಯಾಗುವುದರ ದೆಸೆಯಿಂದ ಮಠದಿಂದ ಪಂಥರ ಮನೆಗೇ ಬಹಿಷ್ಕಾರ ಹಾಕುವ ಸಂದರ್ಭ ಬಂದಾಗ ಬಹಿಷ್ಕಾರ ಆಗಿ ಒಂದು ಬಂಡಾಯ ಸಂಸಾರವಾಗಿ ಬೆಳೆಯುತ್ತದೆ ಎನಿಸುತ್ತದೆ. ಮತ್ತೊಂದೆಡೆ ವಾಸುದೇವಾಚಾರ್‌ರ ಮನೆಯಲ್ಲೇ ಚಿಕ್ಕಂದಿನಿಂದಲೂ ಬೆಳೆದು ಮನೆಯವಳೇ ಆಗಿದ್ದ ರುಕುಮಾ ಮೇಲೆ ವಾಸಣ್ಣನಿಗೆ ಬರುವ ಒಂದು ಕ್ಷಣದ ಒಲವು ಒಂದು ಪ್ರೇಮಕಥೆಯಾಗುತ್ತದೇನೋ ಎನ್ನುವ ಊಹೆ ಬರುತ್ತದೆ. ಆದರೆ ಈ ಎಲ್ಲ ಸಂದರ್ಭಗಳಲ್ಲಿ ಕಥೆ ಹೊಸ ತಿರುವನ್ನೇ ಪಡೆಯುತ್ತದೆ. ಕಥೆಗಾರ ಓದುಗನನ್ನು ಮುಂದೆ ಏನಾಗುತ್ತದೋ ಎನ್ನುವುದನ್ನು ಊಹಿಸುವ ಹಾಗೆ ಮಾಡಿ, ಪ್ರಾಯಶಃ ಹೀಗಾಗುತ್ತದೇನೋ ಎನ್ನುವ ವೇಳೆಗೆ ಅನಿರೀಕ್ಷಿತ ಸ್ಥಿತಿಯನ್ನು ತಂದಿಡುವುದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಪ್ರಾರಂಭದಲ್ಲಿ ಓದುಗನನ್ನು ಹಿಡಿದಿರಿಸುವ ಕಥೆ ಮಧ್ಯೆ ಸ್ವಲ್ಪ ಭಾಗ ಮಂದಗತಿಯಿಂದ ಸಾಗುತ್ತದೆ. ವೆಂಕಣ್ಣನ ಹೆಂಡತಿ ಲಕ್ಷ್ಮಿಬಾಯಿಯ ಸಾವಿನಿಂದ ವಾಸಣ್ಣನ ಮಗಳು ಸೋನಿ ಸಾವಿನವರೆಗೆ ಕಥೆ ಸ್ವಲ್ಪ ಎಳೆದಂತಿದೆ. ಮನೆಯಲ್ಲಿ ಮದುವೆಯಾಗದೇ ಇರುವ, ಮದುವೆ ವಯಸ್ಸಿಗೆ ಬಂದಿರುವ ಹೆಣ್ಣು ಇದ್ದು, ಅದೇ ಮನೆಯಲ್ಲಿ ಮದುವೆಗೆ ಬಂದ ಗಂಡಿದ್ದರೆ ಅವರಿಬ್ಬರ ಸಂಬಂಧ ಕಟ್ಟುವುದು ಸ್ವಾಭಾವಿಕ. ಹಾಗೆಯೇ ಯೌವನವನ್ನು ಕಳೆದುಕೊಂಡು ಅವಿವಾಹಿತ ಮಹಿಳೆಯೊಬ್ಬಳು ಮನೆಯಲ್ಲಿದ್ದರೆ, ಹೆಂಡತಿಯನ್ನು

ಕಳೆದುಕೊಂಡ ಮಧ್ಯವಯಸ್ಸಿನ ಗಂಡಸಿದ್ದರೆ ಅವರಿಬ್ಬರ ಸಂಬಂಧ ಕಟ್ಟುವುದೂ ಸಹಜ. ಕಥೆಯಲ್ಲೂ ಮದುವೆಯ ವಯಸ್ಸನ್ನು ಕಳೆದುಕೊಂಡ ರುಕುಮಾ ಹಾಗೂ ಹೆಂಡತಿಯನ್ನು ಕಳೆದುಕೊಂಡ ವಾಸಣ್ಣನಿಗೂ ಸಂಬಂಧ ಕಟ್ಟುವುದು ಸಹಜ. ಆದರೆ ವಾಸಣ್ಣನ ಈ ಪ್ರಯತ್ನ ವಿಫಲವಾಗುತ್ತದೆ.

ಓದುಗನ ಮನಸ್ಸಿನಲ್ಲಿ ಈ ದಂಗೆಯ ಬಗ್ಗೆ ಹೆಚ್ಚಿನ ವಿವರ ತಿಳಿದುಕೊಳ್ಳಬೇಕು ಎನ್ನುವಷ್ಟು ಆಸೆಯನ್ನು ಹುಟ್ಟಿಸುತ್ತದೆ. ಹಳೆಯ ಕಾಲದ ಕುದುರೆ ಸವಾರಿ ಪ್ರಯಾಣ, ಸಹ್ಯಾದ್ರಿಯ ದಟ್ಟ ಕಾಡಂಚಿನ ಚಿತ್ರಣ ಬಹಳ ಸೊಗಸಾಗಿ ಮೂಡಿಬಂದಿದೆ. ದಂಗೆಯ ವೇಳೆಯಲ್ಲಿ ನಡೆಯುವ ಪೊಲೀಸರ ಕ್ರೌರ್ಯಗಳು, ದಂಗೆಗಾರರಿಗೆ ಕೊಡುವ ಶಿಕ್ಷೆ ಚಿಕ್ಕದಾಗಿ ಚೊಕ್ಕವಾಗಿ ವಿವರಿಸಲಾಗಿದೆ. ಕಥೆಯುದ್ದಕ್ಕೂ ಯಾವುದೇ ಪಾತ್ರಗಳೂ ಅನವಶ್ಯಕವಾಗಿ ಇದ್ದಂತೆ ಆಗಲಿ ಅಥವಾ ಅಪಥ್ಯವಾಗಿ ಸೇರಿದ ಪಾತ್ರವಾಗಿ ಕಾಣುವುದಿಲ್ಲ. ಕೆಲವು ಉಪಕಥೆಗಳು ಅನವಶ್ಯಕವೆನಿಸುತ್ತವೆ. ಉದಾಹರಣೆಗೆ- ಮಠದ ಸ್ವಾಮಿಗಳ ಪೂಜೆಯ ನಂತರ ಬರುವ ಖಂಡೋಪನ ತುಂಡುಕಥೆ ಬೇಕಿರಲಿಲ್ಲವೇನೋ ಎನಿಸುತ್ತದೆ. ಈ ಕಾದಂಬರಿ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಬ್ರಾಹ್ಮಣರ ಕುಟುಂಬದ ನೋವು ನಲಿವುಗಳ ಚಿತ್ರಣವನ್ನೇ ಕೇಂದ್ರಪ್ರಜ್ಞೆಯಾಗಿಟ್ಟುಕೊಂಡರೂ ಸಹ ಯಾವುದೇ ಅಂಶವನ್ನು ಕಡೆಗಣಿಸದೆ, ಕೇಂದ್ರಪ್ರಜ್ಞೆಗೆ ಧಕ್ಕೆ ಬರದಂತೆ ಎಲ್ಲ ವಿಷಯಗಳನ್ನೂ ಕೂಲಂಕಷವಾಗಿ ಚಿತ್ರಿಸಿದ್ದಾರೆ.

ಕಥೆಯಲ್ಲಿ ಕುಟುಂಬದಲ್ಲಿನ ಪಾತ್ರಗಳನ್ನು ಬಹಳ ಮುತುವರ್ಜಿ ವಹಿಸಿ ಒಂದು ಹಳೆಯ ಕಾಲದ ಸಾಂಕೇತಿಕ ಬ್ರಾಹ್ಮಣ ಕುಟುಂಬವನ್ನು ಬೆಳೆಸಿದ್ದಾರೆ. ಹಳ್ಳಿಯ ಹಳೆಯ ಬ್ರಾಹ್ಮಣ ಸಂಸಾರಗಳಲ್ಲಿ ಬರುವ ಒಂದು ವಿಧವೆ, ಒಬ್ಬ ಮದುವೆಯಾಗದೇ ಮನೆಯಲ್ಲಿ ಕುಳಿತ ಹೆಂಗಸು, ಮನೆಹಾಳು ಮಾಡುವ ಒಂದೆರಡು ಮಕ್ಕಳು, ಮನೆಯ ಗೌರವವನ್ನು ಎತ್ತಿ ಹಿಡಿಯುವ ಒಂದೆರಡು ಮಕ್ಕಳು, ಸಂಸಾರದ ಹೊಣೆಯನ್ನೆಲ್ಲಾ ತಲೆಯ ಮೇಲೆ ಹಾಕಿಕೊಳ್ಳುವ ಮನೆಯ ಹಿರಿಯ. ಹೀಗೆ ಕಥೆ ಓದುತ್ತಿದ್ದಾಗ ಪಂಥರ ಕುಟುಂಬದಲ್ಲೂ ಒಂದು ಆದರ್ಶಭೂತ ಬ್ರಾಹ್ಮಣ ಸಂಸಾರ ಕಣ್ಣ ಮುಂದೆ ಬರುತ್ತದೆ.

ಅಂಬಕ್ಕನ ಪಾತ್ರ ನೋಡಿದಾಗ ಹೆಣ್ಣಿಗೆ ಎಷ್ಟು ಅನ್ಯಾಯವಾಗುತ್ತಿತ್ತು ಎನಿಸುತ್ತದೆ. ಚಿಕ್ಕ ವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡ ಅಂಬಕ್ಕಳಿಗೆ ಒಂದು ನೆಲೆಯೇ ಇಲ್ಲದಂತಾಗುತ್ತದೆ. ಅವಳ ಮಾತಿಗೆ ಬೆಲೆಯೇ ಇಲ್ಲದಂತಾಗಿ ಹುಚ್ಚಿಯಂತೆ ಎಲ್ಲರೂ ಅವಳನ್ನು ನೋಡುತ್ತಾರೆ.

## ಭಾಷೆ

ಕಥೆಯ ಭಾಷೆ ಉತ್ತರಕರ್ನಾಟಕದ, ಅದರಲ್ಲೂ ಹಳ್ಳಿಯ ಭಾಷೆ. ಧಾರವಾಡದ ಭಾಷೆ ಪರಿಚಯ ಇಲ್ಲದೇ ಇದ್ದವರಿಗೆ ಅರ್ಥವಾಗುವುದು ಸ್ವಲ್ಪ ಕಷ್ಟವಾಗಬಹುದು. ಪುಸ್ತಕದ ಕಡೆಯಲ್ಲಿ ಪ್ರಾದೇಶಿಕ ಪದಗಳ ಅರ್ಥವನ್ನೂ ಕೊಟ್ಟಿದ್ದರೂ ಇನ್ನೂ ಕೆಲವು ಪದಗಳು ಕ್ಲಿಷ್ಟವಾಗೇ ಇವೆ. 'ಹಲಗಿ ಬಾರಿಸತಾನಂತ', 'ಮುಲಕಿ ಪರೀಕ್ಷಾ' ಮುಂತಾದ ಪದಗಳು. ಇಂತಹ ಪದಗಳಿಗೆ ಪ್ರತಿಪುಟಗಳ ಕೆಳಗೆ ಸಣ್ಣಕ್ಷರಗಳಲ್ಲಿ ಅರ್ಥವನ್ನು ಕೊಟ್ಟಿದ್ದಿದ್ದರೆ ನನ್ನಂಥ ಓದುಗರಿಗೆ ಸ್ವಲ್ಪ ಸಹಾಯವಾಗುತ್ತಿತ್ತೇನೋ ಎನಿಸುತ್ತದೆ.

## ಘಟನೆಗಳು

ಕೆಲವು ಘಟನೆಗಳು ಓದುಗನ ಕಣ್ಮುಂದೆ ನಿಲ್ಲುತ್ತವೆ.

- ಪ್ಲೇಗ್ ಬಗ್ಗೆ ಕೇಳಿದ್ದೇವೆ, ಓದಿದ್ದೇವೆ. ಹಳ್ಳಿ ಹಳ್ಳಿಗಳನ್ನೇ ಖಾಲಿ ಮಾಡಿಸುವುದು, ಇಲಿ ಸಾಯುವುದು, ಜನಸಾಯುವುದು ಹೀಗೆ ಹಲವಾರು ಪ್ರಸಂಗಗಳನ್ನು ಓದಿಯೋ, ಹಿರಿಯರಿಂದ ಕೇಳೋ ತಿಳಿದುಕೊಂಡಿದ್ದೇವೆ. ಅದೇ ಪ್ಲೇಗ್ ಪ್ರಕರಣ ನವಲುಗುಂದಕ್ಕೂ ಬಡಿಯುವ ಹಾಗೂ ಸಾವು ನೋವುಗಳ ಚಿತ್ರಣ ಚೆನ್ನಾಗಿ ಮೂಡಿಬಂದಿದೆ.
- ವಾಸಣ್ಣರ ಮನೆಯಲ್ಲಿ ನಡೆಯುವ ಮಠದ ಪೂಜೆ ಸಮಯದಲ್ಲಿ ಮಠದ ದಿವಾಣರ ದಬ್ಬಾಳಿಕೆಯನ್ನು ಪರಿಚಯಿಸುವುದನ್ನು ಮರೆತಿಲ್ಲ. ದಿವಾಣರ ಮಗನ ಉದ್ಧಟತನ ಚೆನ್ನಾಗಿ ಚಿತ್ರಿತವಾಗಿದೆ.
- ಸಾಂಪ್ರದಾಯಿಕ ಮಾಧ್ವ ಬ್ರಾಹ್ಮಣರ ಸಂಸಾರ ಮೂರನೆಯ ತಲೆಮಾರಿಗೆ ಅಂತರ್ಜಾತಿ ವಿವಾಹಗಳಾಗಿ ಆಧುನಿಕತೆಯ ಸಂಸಾರವಾಗಿ ಬೆಳೆಯುವ ರೀತಿ ಕಣ್ಮುಂದೆ ನಿಲ್ಲುತ್ತದೆ.

## ನ್ಯೂನತೆಗಳು

- ತಿಪ್ಪಕ್ಕನ ವರ್ಷಕ್ಕೊಂದು ಬಾಣಂತನದಿಂದ ಬೇಸತ್ತಿದ್ದ ವಾಸುದೇವಾಚಾರ್‌ರಿಗೆ, ಕಾಂಡೊಮ್‌ಗಳಂತಹ ಯಾವುದೇ ಸಂತಾನ ನಿರೋಧಕಗಳು ಇಲ್ಲದ ಕಾಲದಲ್ಲಿ, ಭ್ರೂಣ ಹತ್ಯೆ ಪ್ರಾಣ ಹತ್ಯೆ ಮಾಡಿದಷ್ಟೇ ಪಾಪವೆಂದು ತಿಳಿದೋ ಏನೋ, ಹಾಸಿಗೆ ಪಥ್ಯದ ಬಗ್ಗೆ ಉಲ್ಲೇಖಿಸಿರುವ ಲೇಖಕರು, ಗಿಡಮೂಲಿಕೆಗಳ ಬಗ್ಗೆ ಪ್ರಸ್ತಾಪಿಸದಿರುವುದು, ವೈದ್ಯಗಿರಿಯನ್ನೇ ಮರೆತಂತಿದೆ.
- ವಾಸುದೇವಾಚಾರ್ ಪಿತ್ರಾರ್ಜಿತವಾಗಿ ಬಂದ ವೈದ್ಯಗಿರಿಯನ್ನು ಮುಂದಿನ ಪೀಳಿಗೆಗೆ ತಲಪಿಸುವತ್ತ ಏನೂ ಕೆಲಸ ಮಾಡುವುದೇ ಇಲ್ಲ.
- ರುಕುಮಾಳ ಸಂಬಂಧಿಕರನ್ನು ಹುಡುಕುವುದರಲ್ಲಿ ಪ್ರಯತ್ನ ಪಡುವ ವಾಸಣ್ಣ

ರುಕುಮಾಳ ಲಗ್ನದ ಬಗ್ಗೆ ಕೈಮೀರಿ ಪ್ರಯತ್ನ ಮಾಡದಿರುವುದು, ರುಕುಮಾ ಮೇಲಿದ್ದ ಒಲವೇ ಕಾರಣವೇನೋ ಎಂಬ ಅನುಮಾನ ತರಿಸುತ್ತದೆ.

- ಹಳ್ಳಿಯ ಕಡೆ ನಡೆಯುವ ಮೂರು ನಾಲ್ಕು ಮದುವೆಗಳ ಬಗ್ಗೆ ಓದಿದಾಗ ಯುವ ಓದುಗರಿಗೆ ಊಹಿಸಲೂ ಕಷ್ಟವಾಗಬಹುದು. ವಾಸಣ್ಣನ ಮನೆಯಲ್ಲಿ ಎರಡು ದಿನಗಳಲ್ಲಿ ನಡೆದ ಬೋಧ, ರಾಘು, ಹಣಮು ಹಾಗೂ ಸೋನಿ ಅವರ ನಾಲ್ಕು ಮದುವೆಗಳೂ ಸಹ ಅಚ್ಚರಿತರಬಹುದು. ಮದುವೆ ಸಮಾರಂಭ ಅಷ್ಟು ಸವಿಸ್ತಾರವಾಗಿ ನಿರೂಪಣೆಯಾಗದೇ, ಕಣ್ಮುಂದೆ ನಿಲ್ಲುವುದಿಲ್ಲ.
- ವಾಸುದೇವಾಚಾರ್ ರಾಮುವಿನ ವಿಚಾರದಲ್ಲಿ ಪೊಲೀಸ್ ಸ್ಟೇಷನ್‌ಗೆ ಹೋಗಬೇಕಾಗುವ ಸಂದರ್ಭ ಬಂದಾಗ ಇಷ್ಟು ವರ್ಷ ಬಾರದೇ ಇದ್ದ ಇಂಗ್ಲಿಷ್ ಅಧಿಕಾರಿ ಬಂದು ಇವನನ್ನು ಬಿಡಿಸುವುದು ನಾಟಕೀಯವಾಗಿದೆ.
- ಕಾದಂಬರಿಯ ಹೆಸರು ಅಷ್ಟು ಇಷ್ಟವಾಗಲಿಲ್ಲ. ಪ್ರಕಾಶಕರೇ ಹೇಳಿದಂತೆ 'ಹರಿವ ನೀರು' ಎಂಬ ಹೆಸರನ್ನಿಟ್ಟುಕೊಂಡು ಪ್ರಾರಂಭವಾದ ಕಾದಂಬರಿ 'ಹಳ್ಳ ಬಂತು ಹಳ್ಳ' ಎಂದು ಪ್ರಕಟಗೊಳ್ಳುತ್ತದೆ. ಒಂದು ತಲೆಮಾರಿನಿಂದ ಮೂರು ತಲೆಮಾರಿನವರೆಗೆ ಬೆಳೆವ ಪಂಥ ಸಂಸಾರ ಇನ್ನೂ ಬೆಳೆಯುತ್ತದೆ ಎಂದು ತೋರುವ 'ಹರಿವ ನೀರು' ಹೆಸರೇ ಸೂಕ್ತವಾಗಿತ್ತೇನೋ ಎನ್ನಿಸುತ್ತದೆ.

**ಕೊನೆಯ ಮಾತು**

ಸ್ವಾತಂತ್ರ್ಯಪೂರ್ವದ ಬ್ರಾಹ್ಮಣ ಸಮಾಜದಲ್ಲಿ ನೋವು ನಲಿವುಗಳ ಚಿತ್ರೀಕರಣದ ಜೊತೆಗೆ ಸಹಜ ರೀತಿಯಲ್ಲಿನ ನವಲಗುಂದದ ಸ್ವಾತಂತ್ರ್ಯ ಹೋರಾಟದ ಜೀವನ ಚಿತ್ರಣ, ಬ್ರಾಹ್ಮಣರು ವಿದ್ಯೆಗೆ ಕೊಡುತ್ತಿದ್ದ ಆದ್ಯತೆ ಇವೆಲ್ಲದರ ವಿವರಣೆಯಿಂದ ಈ ಕೃತಿ ಒಂದು ಮಹತ್ತರ ಕೃತಿಯಾಗಿದೆ. ಕಾದಂಬರಿಯಲ್ಲಿ ಜಗಳ, ಪ್ಲೇಗ್‌ನಿಂದ ಸಾವುಗಳು, ಬ್ರಿಟಿಷ್ ದಬ್ಬಾಳಿಕೆ, ಸ್ವಾತಂತ್ರ್ಯ ಹೋರಾಟ, ಚುನಾವಣೆ, ಇಂಗ್ಲಿಷ್ ವ್ಯಾಮೋಹ ತೋರಿಸುವ ಘಟನೆಗಳಿದ್ದರೂ, ಯಾವುದನ್ನೂ ಅವ್ಯಾವಹಾರಿಕವಾಗಿ ಬೆಳೆಸದೆ ನಿರ್ವಹಿಸಿರುವ ರೀತಿ, ತೋರಿರುವ ಸಂಯಮ ಕೃತಿಯ ಮಹತ್ವವನ್ನು ಹೆಚ್ಚಿಸಿದೆ. ಎಲ್ಲ ಪಾತ್ರಗಳ ಅಂತರಂಗವನ್ನು ತೆರೆದಿಡುವುದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಈ ಕಾದಂಬರಿಯ ಮುಖ್ಯ ಅಂಶ ಭಾಷೆ.

**ಕೃತಜ್ಞತೆ:** ನನ್ನ ಅನಿಸಿಕೆಗಳನ್ನು ಬರೆಯುವಾಗ ಸೂಕ್ತ ಸಲಹೆಗಳನ್ನು ಕೊಟ್ಟ ಎಚ್. ವೈ. ರಾಜಗೋಪಾಲರಿಗೆ ಚಿರಋಣಿ.

**ಕೃತಿ ವಿವರ:** ಹಳ್ಳ ಬಂತು ಹಳ್ಳ, ಶ್ರೀನಿವಾಸ ವೈದ್ಯ, ಮನೋಹರ ಗ್ರಂಥ ಮಾಲಾ, ಧಾರವಾಡ, ೨೦೦೪, ಪು. ೨೯೬

ಅನುಬಂಧ ೧

ಲೇಖಕರ ಪರಿಚಯ

**ಗುರುಪ್ರಸಾದ್ ಕಾಗಿನೆಲೆ**

ಹುಟ್ಟಿದ್ದು ಶಿವಮೊಗ್ಗ. ಬೆಳೆದದ್ದು ಮೈಸೂರು ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ. ಬಳ್ಳಾರಿಯ ಸರಕಾರಿ ವೈದ್ಯಕೀಯ ವಿದ್ಯಾಲಯದಲ್ಲಿ ಎಂ ಬಿ ಬಿ ಎಸ್ ಮತ್ತು ಎಂ ಡಿ ಪದವಿ ಪಡೆದು ತುಮಕೂರಿನ ಸಿದ್ಧಾರ್ಥ ವೈದ್ಯಕೀಯ ವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಕೆಲಸ. ಆನಂತರ ದೆಹಲಿಯ ಭತ್ರ ಆಸ್ಪತ್ರೆಯ ನೆಫ್ರಾಲಜಿ ವಿಭಾಗದಲ್ಲಿ ಸೀನಿಯರ್ ರೆಸಿಡೆನ್ಸಿ. ೧೯೯೫ರಲ್ಲಿ ಅಮೆರಿಕೆಗೆ ವಲಸೆ. ಡೆಟ್ರಾಯ್ಟ್‌ನ ವೇಯ್ನ್ ಸ್ಟೇಟ್ ವಿಶ್ವವಿದ್ಯಾನಿಲಯ ಹಾಗೂ ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯಗಳಲ್ಲಿ ತರಬೇತಿ. ಸದ್ಯಕ್ಕೆ ಮಿನೆಸೊಟಾ ರಾಜ್ಯದ ರಾಚೆಸ್ಟರ್‌ನಲ್ಲಿ ಪತ್ನಿ ಪದ್ಮ ಮತ್ತು ಮಕ್ಕಳಾದ ಪ್ರಣಿತ ಮತ್ತು ಪ್ರಭವರೊಂದಿಗೆ ವಾಸ. ನಾರ್ತ್ ಮೆಮೊರಿಯಲ್ ಆಸ್ಪತ್ರೆಯ ಎಮರ್ಜೆನ್ಸಿ ಮೆಡಿಸಿನ್ ವಿಭಾಗದಲ್ಲಿ ಎಮರ್ಜೆನ್ಸಿ ವೈದ್ಯನಾಗಿ ಕೆಲಸ. ಸಣ್ಣಕತೆ ಮತ್ತು ಪ್ರಬಂಧಗಳು ಕನ್ನಡದ ಅನೇಕ ನಿಯತಕಾಲಿಕೆಗಳಲ್ಲಿ, ಸಾಪ್ತಾಹಿಕಗಳಲ್ಲಿ, ದೀಪಾವಳಿ ಮತ್ತು ಯುಗಾದಿ ವಿಶೇಷಾಂಕಗಳಲ್ಲಿ, ಮತ್ತು ಅಂತರ್ಜಾಲ ಪೋರ್ಟಲ್‌ಗಳಲ್ಲಿ ಪ್ರಕಟವಾಗಿವೆ. ಕೆಲವು ಸಣ್ಣಕತೆಗಳು ಯುಗಾದಿ ಕಥಾಸ್ಪರ್ಧೆಯಲ್ಲಿ ಬಹುಮಾನಿತವಾಗಿವೆ. ಪ್ರಕಟಿತ ಕೃತಿಗಳು: 'ನಿರ್ಗುಣ'(೨೦೦೩), 'ಶಕುಂತಳಾ' (೨೦೦೭) – ಕಥಾಸಂಕಲನಗಳು; 'ವೈದ್ಯ, ಮತ್ತೊಬ್ಬ' – ಲೇಖನ ಸಂಗ್ರಹ. 'ಆಚೀಚೆಯ ಕತೆಗಳು'– ಸಂಪಾದಿತ ಕಥಾಸಂಕಲನ; 'ಬಿಳಿಯ ಚಾದರ'(೨೦೦೭) – ಕಾದಂಬರಿ. 'ವೈದ್ಯ, ಮತ್ತೊಬ್ಬ' ಕೃತಿಗೆ ೨೦೦೫ರ ಡಾ. ಪಿ ಎಸ್. ಶಂಕರ್ ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ.

ಸಂಪರ್ಕ: 6044 Granite Dr NW, Rochester, MN 55901. USA. Email: gkaginele@hotmail.com

### ಮಧು ಕೃಷ್ಣಮೂರ್ತಿ

ಮೂಲತಃ ಬೆಂಗಳೂರಿನವರಾದ ಮಧು ಕೃಷ್ಣಮೂರ್ತಿ ಎಲೆಕ್ಟ್ರಾನಿಕ್ ತಂತ್ರಜ್ಞಾನದಲ್ಲಿ ಬಿ.ಇ. ಪದವಿಯನ್ನು ಹಾಗೂ ಕಂಪ್ಯೂಟರ್ ವಿಜ್ಞಾನದಲ್ಲಿ ಎಂ. ಎಸ್. ಪದವಿಯನ್ನು ಮತ್ತು ಮಾರ್ಕೆಟಿಂಗ್‌ನಲ್ಲಿ ಎಂ.ಬಿ.ಎ ಪದವಿ ಪಡೆದಿದ್ದಾರೆ. ಸಿಲಿಕಾನ್ ಕಣಿವೆಯಲ್ಲಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿ ಕೆಲಸ ಮಾಡುತ್ತಿರುವ ಇವರು ಅಲ್ಲಿನ ಕನ್ನಡ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಇವರ ಅನೇಕ ಹಾಸ್ಯ ಲೇಖನಗಳು ಮತ್ತು ಕಥೆಗಳು ಅಂತರ್ಜಾಲ ಪತ್ರಿಕೆಗಳಲ್ಲಿ ಮತ್ತು ಕನ್ನಡಕೂಟದ ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಹಲವಾರು ಕನ್ನಡ ನಾಟಕಗಳನ್ನು ಮತ್ತು ಪ್ರಹಸನಗಳನ್ನು ರಚಿಸಿ ಹಾಗು ನಿರ್ದೇಶಿಸಿ ರಂಗದ ಮೇಲೆ ಪ್ರದರ್ಶನ ಮಾಡಿದ್ದಾರೆ. ಅಭಿನಯ ಹಾಗು ರಂಗ ಕಲೆಗಳಲ್ಲಿ ತರಬೇತಿ ಹೊಂದಿರುವ ಇವರು ಅನೇಕ ನಾಟಕಗಳಲ್ಲಿ ನಟಿಸಿದ್ದಾರೆ. ಕಳೆದ ಎರಡು ವರುಷಗಳಿಂದ ಸಿಲಿಕಾನ್ ಕಣಿವೆಯಲ್ಲಿ ಕನ್ನಡ ರೇಡಿಯೊ ಕಾರ್ಯಕ್ರಮ ನಡೆಸಿಕೊಂಡು ಬಂದಿದ್ದಾರೆ. ಕನ್ನಡದಲ್ಲಿ ಸ್ಟ್ಯಾಂಡ್‌ಅಪ್ ಕಾಮಿಡಿ ಮಾಡುವುದು, ಕನ್ನಡ ಮತ್ತು ಆಂಗ್ಲ ಸಾಹಿತ್ಯ ಓದುವುದು ಹಾಗು ಅವುಗಳ ಬಗ್ಗೆ ಉಪನ್ಯಾಸ ನೀಡುವುದು ಇವರ ಇತರ ಹವ್ಯಾಸಗಳು.

**ಸಂಪರ್ಕ:** 5022 Miramar Avenue, San Jose, CA 95129, USA. Email: madhukanthk@yahoo.com

### ಶ್ರೀಕಾಂತ ಬಾಬು

ನ್ಯೂಜೆರ್ಸಿಯಲ್ಲಿ ಸುಮಾರು ೨೦ ವರ್ಷಗಳಿಂದ ನೆಲೆಸಿದ್ದಾರೆ. ನ್ಯೂಯಾರ್ಕ್‌ನ Credit Suisse Bank ನಲ್ಲಿ IT Manager ಆಗಿ ಕೆಲಸ ಮಾಡುತ್ತಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಹಾಗೂ ಭಾರತೀಯ ಸಂಗೀತದಲ್ಲಿ ತುಂಬಾ ಆಸಕ್ತಿ ಆದರೆ 'ಸಾಹಿತ್ಯ ರಚನೆ ತಮ್ಮ ಹವ್ಯಾಸವಲ್ಲ' ಎನ್ನುತ್ತಾರೆ.

**ಸಂಪರ್ಕ:** 39 Lavender Drive, Edison NJ 08820, USA. Email: venkatesha@hotmail.com

### ತ್ರಿವೇಣಿ ಎಸ್ ರಾವ್

ಹುಟ್ಟೂರು ಚಿಕ್ಕಮಗಳೂರು ಜಿಲ್ಲೆಯ ಕಡೂರು. ಪ್ರಾರಂಭದ ಕವನಗಳು ಬೆಳಕು ಕಂಡಿದ್ದು 'ಲಂಕೇಶ್ ಪತ್ರಿಕೆ'ಯಲ್ಲಿ. ಕನ್ನಡದ ಪ್ರಮುಖ ಮಾಸಿಕಗಳಾದ

ತುಷಾರ, ಮಯೂರಗಳಲ್ಲಿ ಅನೇಕ ಸಣ್ಣಕಥೆಗಳು ಬೆಳಕು ಕಂಡಿವೆ. 'ದಯಾಮರಣ' ಎಂಬ ಸಣ್ಣಕಥೆಯೊಂದು ಅದೇ ಹೆಸರಿನ ಕಿರುಚಿತ್ರವಾಗಿ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗಿದೆ. ಆಕಾಶವಾಣಿಯಲ್ಲಿಯೂ ಅನೇಕ ಬಾರಿ ಸ್ವರಚಿತ ಕವನ, ಕಥೆಗಳನ್ನು ವಾಚಿಸುವ ಅವಕಾಶ ದೊರಕಿದೆ. ಕನ್ನಡದ ಪ್ರಮುಖ ಅಂತರ್ಜಾಲ ಪತ್ರಿಕೆಯಾದ 'ದಟ್ಸ್ ಕನ್ನಡ.ಕಾಂ'ನಲ್ಲಿ ಪ್ರಕಟವಾದ ಲೇಖನಗಳು 'ತುಳಸೀವನ' ಪ್ರಬಂಧ ಸಂಕಲನವಾಗಿ ಪ್ರಕಟವಾಗಿದೆ. 'ತುಳಸೀವನ' ೨೦೦೭ರಲ್ಲಿ ಅಮೆರಿಕದಲ್ಲಿಯೂ, ೨೦೦೮ರಲ್ಲಿ ಬೆಂಗಳೂರಿನಲ್ಲಿಯೂ ಬಿಡುಗಡೆಯಾಗಿದೆ. ಅಮೆರಿಕದಲ್ಲಿಯೇ ಮುದ್ರಣಗೊಂಡು, ಅಮೆರಿಕದಲ್ಲೇ ಬಿಡುಗಡೆಯಾದ ಮೊದಲ ಪುಸ್ತಕವೆಂಬ ಹೆಗ್ಗಳಿಗೆ 'ತುಳಸೀವನ'ದ್ದು. ಎರಡು ವರ್ಷಗಳ ಕಾಲ ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ' ಸಂಚಿಕೆಯ ಸಂಪಾದಕತ್ವ ನಿರ್ವಹಣೆ. ಲಲಿತ ಪ್ರಬಂಧ, ವೈಚಾರಿಕ ಲೇಖನ, ಅಭಿನಯದಲ್ಲಿ ಆಸಕ್ತಿ. ಪ್ರಸ್ತುತ, ಪತಿ ಶ್ರೀನಿವಾಸರಾವ್ ಮತ್ತು ಮಕ್ಕಳು ಸುರಭಿ, ಸುವ್ರತ ಇವರೊಡನೆ ಅಮೆರಿಕದ ಇಲಿನಾಯ್ ರಾಜ್ಯದ ಹ್ಯಾನೋವರ್ ಪಾರ್ಕ್ ಬಡಾವಣೆಯಲ್ಲಿ ನೆಲೆಸಿದ್ದಾರೆ.

**ಸಂಪರ್ಕ:** 1762 Saint Ann Drive, Hanover Park, IL 60133,USA. Email: sritri@gmail.com

**ಗುಂಡೂ ಶಂಕರ್**

ಶೈಲಜ ಮತ್ತು ಗುಂಡೂ ಶಂಕರ್, ಫ್ರೀಹೋಲ್ಡ್, ನ್ಯೂ ಜೆರ್ಸಿಯಲ್ಲಿ ತಮ್ಮ ಎರಡು ಮಕ್ಕಳೊಂದಿಗೆ ವಾಸ ಮಾಡುತ್ತಿದ್ದಾರೆ. ಶೈಲಜ ಕನ್ನಡ ಭಾಷೆಯಲ್ಲಿ ಮಾಸ್ಟರ್ ಡಿಗ್ರಿ (ಬೆಂಗಳೂರು ವಿಶ್ವವಿದ್ಯಾಲಯ) ಪಡೆದು, ನಂತರ ಆಕ್ಯುಪೇಶ್‌ನಲ್ ಥೆರಪಿಯಲ್ಲಿ ಮಾಸ್ಟರ್ ಡಿಗ್ರಿ (ಕೇನ್ ಯುನಿವರ್ಸಿಟಿ, ನ್ಯೂ ಜೆರ್ಸಿ) ಮುಗಿಸಿ, ನ್ಯೂ ಜೆರ್ಸಿಯಲ್ಲಿ ಥೆರಪಿಸ್ಟ್ ಆಗಿ ಕೆಲಸ ಮಾಡುತ್ತಿದ್ದಾರೆ. ಗುಂಡೂ B. Tech. ಡಿಗ್ರಿ Indian Institute of Science, Bangalore ಮತ್ತು Indian Institue of Management, Calcutta ನಿಂದ M.B.A ಡಿಗ್ರಿ ಪಡೆದರು. ಈಗ management consultant ಆಗಿ ಕೆಲಸ ಮಾಡುತ್ತಿದ್ದಾರೆ. ಇಬ್ಬರಿಗೂ ಸಾಹಿತ್ಯ ಮತ್ತು ಕಲೆಯಲ್ಲಿ ಆಸಕ್ತಿ ಇದೆ. ಕನ್ನಡ ಸಾಹಿತ್ಯ ರಂಗ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ.

**ಎಂ. ಆರ್. ದತ್ತಾತ್ರಿ**

ಎಂ.ಆರ್. ದತ್ತಾತ್ರಿಯವರು ಚಿಕ್ಕಮಗಳೂರಿನವರು. ಈಗ ಸದ್ಯಕ್ಕೆ ಲಾಸ್ ಏಂಜಲಿಸ್‌ನಲ್ಲಿ ನೆಲಸಿದ್ದಾರೆ. ಒಎಸ್‌ಐ ಕನ್‌ಸಲ್ಟಿಂಗ್ ಸಂಸ್ಥೆಯಲ್ಲಿ ಪ್ರಾಜೆಕ್ಟ್ ಮ್ಯಾನೆಜರ್

ಆಗಿ ಕೆಲಸ ಮಾಡುತ್ತಿದ್ದಾರೆ. ಪ್ರಕಟಿತ ಪುಸ್ತಕಗಳು – ಅಲೆಮಾರಿ ಕನಸುಗಳು (ಕವನ ಸಂಕಲನ), ಪೂರ್ವ ಪಶ್ಚಿಮ (ಅಂಕಣ ಬರಹ ಸಂಗ್ರಹ – ೨೦೦೬ರ ಡಾ. ಹಾ.ಮಾ. ನಾಯಕ ಪ್ರಶಸ್ತಿ ಪುರಸ್ಕೃತ).

**ವಿಶ್ವನಾಥ ಹುಲಿಕಲ್**

ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ. ಪದವಿಯನ್ನು, ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದಿಂದ ಬಿ.ಇ. ಪದವಿಯನ್ನು ಮತ್ತು ಖರಗಪುರದ ಭಾರತೀಯ ತಂತ್ರಜ್ಞಾನ ಸಂಸ್ಥೆಯಿಂದ ಎಂ.ಟೆಕ್. ಪದವಿಯನ್ನು ಗಳಿಸಿದ್ದಾರೆ. ವೃತ್ತಿಯಿಂದ ಸಾಫ್ಟ್‌ವೇರ್ ಇಂಜಿನಿಯರ್ ಆದರೂ, ಪ್ರವೃತ್ತಿಯಿಂದ ಕನ್ನಡ ಸಣ್ಣ ಕಥೆಗಾರರು, ಅನುವಾದಕರು, ವಿಮರ್ಶಕರು ಮತ್ತು ಸಾಹಿತ್ಯ ಸಂಘಟಕರು. ಇದುವರೆವಿಗೆ ಎಂಟು ಕೃತಿಗಳನ್ನು ರಚಿಸಿದ್ದಾರೆ: 'ಹೃದಯ' (ಸಣ್ಣಕಥೆಗಳ ಸಂಕಲನ), 'ಸೌರಭ' (ಸಣ್ಣಕಥೆಗಳ ಸಂಕಲನ) 'ಮಂಥನ' (ಅನುವಾದ) ಮತ್ತು 'ಅಮೇರಿಕ ಮತ್ತು ಅಮೇರಿಕನ್ನರು' (ಅನುವಾದ), 'ವಿಷು' (ಸಂಪಾದನೆ) ಮತ್ತು 'Dots and Lines' (ಸಂಪಾದನೆ), 'ನಾಗರೀಕತೆಯ ಕಥೆ' (ಸಂಪುಟ ३, ಅನುವಾದ) ಮತ್ತು 'ಆತ ಮಂಗಳ ಲೋಕದಿಂದ, ಈಕೆ ಶುಕ್ರ ಲೋಕದಿಂದ' (ಅನುವಾದ, ಪ್ರಕಟಣೆಯಲ್ಲಿದೆ). ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿ ಗಳಿಸಿದ ಜನಪ್ರಿಯ ಚಲನಚಿತ್ರ 'ಅಮೆರಿಕ ಅಮೆರಿಕ'ಕ್ಕೆ ಕಥೆ ಬರೆದವರಲ್ಲಿ ಇವರೂ ಒಬ್ಬರು. ಸಾಹಿತ್ಯಾಸಕ್ತರಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಸದಭಿರುಚಿಯನ್ನು ಪೋಷಿಸಿ, ವೃದ್ಧಿಸುವ ದೃಷ್ಟಿಯಿಂದ 'ಸಾಹಿತ್ಯ ಗೋಷ್ಠಿ' ಯನ್ನು ಉತ್ತರ ಕ್ಯಾಲಿಫೋರ್ನಿಯದಲ್ಲಿ ಸ್ಥಾಪಿಸಿ, ಕಳೆದ ಏಳು ವರ್ಷಗಳಿಂದ ಸಾಹಿತ್ಯದ ವಿವಿಧ ಪ್ರಕಾರಗಳ ಮೇಲೆ ತಿಂಗಳಿಗೆರಡರಂತೆ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ. ಅಮೆರಿಕಾದಲ್ಲಿನ ಅನೇಕ ಸಂಸ್ಥೆಗಳು ಇವರನ್ನು ಸನ್ಮಾನಿಸಿವೆ: ಕರ್ನಾಟಕ ಸಾಂಸ್ಕೃತಿಕ ಸಂಘ, ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟ ಮತ್ತು ಅಮೆರಿಕಾ ಕನ್ನಡ ಕೂಟಗಳ ಆಗರ. ಉದಯ ಟಿವಿ ತನ್ನ 'ಪರಿಚಯ' ಕಾರ್ಯಕ್ರಮದಲ್ಲಿ ವಿಶ್ವನಾಥ್ ಅವರನ್ನು ಸಂದರ್ಶಿಸಿದೆ. ಕರ್ನಾಟಕ ಜನತಾ ಸೇನಾದಳದವರು ಪ್ರದಾನ ಮಾಡಿದ 'ಸುವರ್ಣ ಕರ್ನಾಟಕ' ಎಂಬ ರಾಜ್ಯ ಪ್ರಶಸ್ತಿಗೆ ಸಹ ವಿಶ್ವನಾಥ್ ಭಾಜನರಾಗಿದ್ದಾರೆ.

**ಸಂಪರ್ಕ:** Email: vhulikal@yahoo.com

**ರಾಜಶೇಖರ ಟಿ ಎನ್**

ಹುಟ್ಟಿ ಬೆಳೆದದ್ದು ಬೆಂಗಳೂರು ಸಮೀಪದ ಆನೇಕಲ್ಲಿನಲ್ಲಿ. ಆನೇಕಲ್, ಬೆಂಗಳೂರು, ಮತ್ತು ತಿರುವನಂತಪುರಗಳಲ್ಲಿ ವಿದ್ಯಾಭ್ಯಾಸ ಮಾಡಿ, ಬೆಂಗಳೂರಿನ ಭಾರತೀಯ

ವಿಜ್ಞಾನ ಮಂದಿರದಿಂದ ಪಿಎಚ್‌ಡಿ ಪದವಿ ಗಳಿಸಿದರು. ಹಾಸನ, ಬೆಂಗಳೂರು, ಮತ್ತು ದಕ್ಷಿಣ ಅಮೆರಿಕದ ಸುರಿನಾಮಿನಲ್ಲಿ ವೃತ್ತಿಯಲ್ಲಿದ್ದು, ಈಗ ಸುಮಾರು ೨೫ ವರ್ಷಗಳಿಂದ ಅಮೆರಿಕದಲ್ಲಿ ವೃತ್ತಿ ಜೀವನ ನಡೆಸುತ್ತಿದ್ದಾರೆ. ಕಳೆದ ಹತ್ತು ವರ್ಷಗಳಿಂದ ನ್ಯೂ ಜೆರ್ಸಿಯಲ್ಲಿ ವಾಸಿಸುತ್ತಿದ್ದು, ಇಲ್ಲಿನ ಕನ್ನಡ ಸಂಘ ತ್ರಿವೇಣಿ ಕಾರ್ಯಕಾರಿ ಸಮಿತಿಯ ಉಪಾಧ್ಯಕ್ಷರಾಗಿಯೂ, ಖಜಾಂಚಿಯಾಗಿಯೂ ಕೆಲಸ ಮಾಡಿ, ಈ ಸಂಘದ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ೨೦೦೬ರಲ್ಲಿ ತ್ರಿವೇಣಿ ಪ್ರಕಟಿಸಿದ ಕರ್ನಾಟಕ ಸುವರ್ಣ ಮಹೋತ್ಸವದ ವಿಶೇಷ ಸಂಚಿಕೆ ಹೇಮವಾಹಿನಿಯ ಪ್ರಧಾನ ಸಂಪಾದಕರಾಗಿದ್ದರು. ೨೦೦೨ರಲ್ಲಿ ಪ್ರಾರಂಭವಾದ ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಖಜಾಂಚಿಯಾಗಿ ಸೇವೆ ಸಲ್ಲಿಸಿದ್ದಾರೆ. ನ್ಯೂಜೆರ್ಸಿ ಮತ್ತು ಸುತ್ತಮುತ್ತಲಿನ ಸಾಹಿತ್ಯಾಸಕ್ತರ ಬಳಗ 'ಪ್ರಸ್ತಾಪ'ದ ಕಾರ್ಯಕ್ರಮಗಳಲ್ಲಿಯೂ ಉತ್ಸಾಹದಿಂದ ಭಾಗವಹಿಸುತ್ತಾರೆ. ವೈಚಾರಿಕ ಪ್ರಬಂಧಗಳು ಮತ್ತು ಜೀವನ ಚರಿತ್ರೆ ಪುಸ್ತಕಗಳನ್ನು ಓದುವುದರಲ್ಲಿ ಇವರಿಗೆ ವಿಶೇಷ ಆಸಕ್ತಿ. ಇವರ ಎಲ್ಲ ಚಟುವಟಿಕೆಗಳ ನಿಜವಾದ ಸ್ಫೂರ್ತಿ, ಇವರ ಸಹಧರ್ಮಿಣಿ ಶಂಕರಿ ಅವರ ಸಹಕಾರ, ಬೆಂಬಲ, ಮತ್ತು ಉತ್ತೇಜನ!

**ಸಂಪರ್ಕ:** 801 West Park Avenue, Apt. 28D, Lindenwold, NJ 08021, USA. Email: tnraja@hotmail.com

### ಅಲಮೇಲು ಅಯ್ಯಂಗಾರ್

ತಮ್ಮ ಪ್ರಹಸನಗಳು, ನಗೆನಾಟಕಗಳು, ನೃತ್ಯ-ರೂಪಕ ನಿರ್ದೇಶನ ಮತ್ತು ಇತರ ಸಾಂಸ್ಕೃತಿಕ ಚಟುವಟಿಕೆಗಳಿಂದ ಅಮೆರಿಕನ್ನಡಿಗರಲ್ಲಿ ಮನೆಮಾತಾಗಿರುವ ಅಲಮೇಲು ಅಯ್ಯಂಗಾರ್ ಅವರು ಅಮೆರಿಕನ್ನಡಿಗರಲ್ಲಿ ಸುಪ್ರಸಿದ್ಧರು. ಮೈಸೂರಿನ ಮಾನಸಗಂಗೋತ್ರಿಯ ಕನ್ನಡ ಸ್ನಾತಕೋತ್ತರ ಪದವೀಧರೆಯಾದ ಇವರು ಅಮೇರಿಕದ ನೆಲದಲ್ಲಿ ಅನೇಕ ಕನ್ನಡ ಚಟುವಟಿಕೆಗಳ ಅಧ್ವರ್ಯು. ನಾಟಕ, ನಟನೆಗಷ್ಟೇ ಸೀಮಿತವಲ್ಲದ ಅಲಮೇಲು ಅವರ ಸೃಜನಶಕ್ತಿಯ ಹರವು ಕಥೆ, ಕವನ, ವಿಮರ್ಶೆ ಮತ್ತು ಸಂಶೋಧನಾತ್ಮಕ ಪ್ರಬಂಧಗಳ ಬರವಣಿಗೆಯನ್ನೂ ಒಳಗೊಂಡಿದೆ. ಜೊತೆಗೇ ಚಲನಚಿತ್ರ ಸಂಭಾಷಣೆಯ ನೇಯ್ಗೆಗೂ ಹಬ್ಬಿದೆ. 'ಹೈಟೆಕ್ ಹಯವದನಾಚಾರ್ ಮತ್ತು ಇತರ ನಾಟಕಗಳು' ಎಂಬ ಅವರ ನಾಲ್ಕು ನಾಟಕಗಳ ಸಂಕಲನ ಬಹಳ ಜನಪ್ರಿಯವಾಗಿದೆ. ವಿದೇಶೀ ನೆಲದ ದೇಶೀ ಬದುಕಿನ ಸಂದಿಗ್ಧಗಳನ್ನು, ವಿಪರ್ಯಾಸಗಳನ್ನೂ ಚಾಕಚಕ್ಯತೆಯಿಂದ ವಿಡಂಬನೆಗೆ ಗುರಿಮಾಡುವುದರಲ್ಲಿ ಅಲಮೇಲು ಸಿದ್ಧಹಸ್ತರೆಂಬುದನ್ನು ಧೃಢಪಡಿಸುತ್ತವೆ. ಈ ಎಲ್ಲ ಪ್ರತಿಭೆ ಮತ್ತು ಸೇವೆಗೆ ಭಾರತ ಮತ್ತು ಅಮೇರಿಕದಾದ್ಯಂತ ಮನ್ನಣೆ ದೊರಕಿದೆ.

ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟವು ಅವರಿಗೆ 'ನಾಟಕ ಕಲಾವಸಂತ' ಎಂಬ ಬಿರುದನ್ನು ಪ್ರದಾನ ಮಾಡಿ ಸನ್ಮಾನಿಸಿದೆ.

**ಎಚ್. ವೈ. ರಾಜಗೋಪಾಲ್**

೧೯೬೦ರ ದಶಕದಲ್ಲೇ ಈ ದೇಶಕ್ಕೆ ಬಂದ ರಾಜಗೋಪಾಲ್, ಇಲ್ಲಿನ ಕನ್ನಡ ಸಮುದಾಯದೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ. ಅಲ್ಲದೆ ಅನೇಕ ಭಾರತೀಯ ಮತ್ತಿತರ ಸಂಸ್ಥೆಗಳ ಸ್ಥಾಪಕರೂ, ಕಾರ್ಯಮಂಡಲಿಯ ಸದಸ್ಯರೂ ಆಗಿ ಕೆಲಸ ಮಾಡಿದ್ದಾರೆ. ಕನ್ನಡ ಸಾಹಿತ್ಯಕ್ಕೇ ಮೀಸಲಾದ ಅಮೆರಿಕದ ಏಕೈಕ ರಾಷ್ಟ್ರೀಯ ಸಂಸ್ಥೆಯಾದ ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಸದಸ್ಯರಲ್ಲೊಬ್ಬರೂ ಅದರ ಅಧ್ಯಕ್ಷರೂ ಆಗಿದ್ದಾರೆ. ಇವರ ಲೇಖನಗಳು ಇಲ್ಲಿನ ಹಾಗೂ ಕರ್ನಾಟಕದ ಹಲವಾರು ಸಂಕಲನಗಳಲ್ಲಿ ಪ್ರಕಟಗೊಂಡಿವೆ. ಇವರು ಸಹಸಂಪಾದಕರಾಗಿ ಹೊರತಂದ ಕೃತಿ 'ನಗೆಗನ್ನಡಂ ಗೆಲ್ಗೆ!' ಅನೇಕ ಓದುಗರ, ವಿದ್ವಾಂಸರ ಮೆಚ್ಚುಗೆ ಗಳಿಸಿದೆ. ಹೊರನಾಡ ಕನ್ನಡಿಗರಾಗಿ ಕನ್ನಡಕ್ಕೆ ಅವರು ಸಲ್ಲಿಸಿರುವ ಸೇವೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಸರ್ಕಾರ ೨೦೦೭ರಲ್ಲಿ ಅವರಿಗೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯನ್ನಿತ್ತು ಸನ್ಮಾನಿಸಿದೆ. ಮೈಸೂರಿನ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್, ಬೆಂಗಳೂರಿನ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್, ಮತ್ತು ಪೆನ್ಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿಗಳಲ್ಲಿ ಇಂಜಿನಿಯರಿಂಗ್ ವಿಭಾಗದಲ್ಲಿ ಕ್ರಮವಾಗಿ B.E.,M.E., Ph.D. ಪದವಿಗಳನ್ನು ಪಡೆದು Raytheon Engineers & Constructors ಕಂಪೆನಿಯಲ್ಲಿ Consulting Engineer ಆಗಿಯೂ, ವಿಲನೋವಾ ವಿಶ್ವವಿದ್ಯಾಲಯದಲ್ಲಿ Adjunct Professor ಆಗಿಯೂ ಕೆಲಸ ಮಾಡಿದ್ದಾರೆ. ಕನ್ನಡ ಲೇಖಕಿ, ಜಾನಪದ ಗಾಯಕಿ ಎಂದು ಹೆಸರು ಪಡೆದಿರುವ ಅವರ ಪತ್ನಿ ವಿಮಲಾ ರಾಜಗೋಪಾಲರೊಂದಿಗೆ ಮೀಡಿಯಾ, ಪೆನ್ಸಿಲ್ವೇನಿಯಾದಲ್ಲಿ ವಾಸವಾಗಿದ್ದಾರೆ.

**ಸಂಪರ್ಕ:** 604 Autumn Lane, Media, PA 19063, USA. Email: hyr1195@aol.com

**ಜ್ಯೋತಿ ಮಹಾದೇವ್**

ಮಗಳಾಗಿ, ಮಡದಿಯಾಗಿ, ಮಾತೆಯಾಗಿ, ಇವುಗಳೊಂದಿಗಿನ ಇನ್ನೆಲ್ಲಾ ಪಾತ್ರಗಳಾಗಿ, ಕಥೆಗಳಿಗಿಂತಲೂ ಕವನಗಳನ್ನು ಬರೆಯುವ ಹುಚ್ಚನ್ನು ಹಚ್ಚಿಕೊಂಡವಳು.

ಓದು, ಚರ್ಚೆ, ವಿಮರ್ಶೆ, ಸ್ನೇಹ, ನಗು, ಪ್ರಕೃತಿ ವೀಕ್ಷಣೆ– ಇತರ ಹವ್ಯಾಸಗಳು. 'ಭಾವಲಹರಿ' (೧೯೯೭), 'ಭಾವಗಾನ' (೨೦೦೩), 'ಭಾವಬಿಂಬ' (೨೦೦೮)– ಕವನ ಸಂಕಲನಗಳು. 'ಹೇಳು ಮನಸೇ' (೨೦೦೩) ಭಾವಗೀತ ಧ್ವನಿಮುದ್ರಿಕೆ. ಹಿಪ್ನೋಥೆರಪಿ ಮತ್ತು ಫಿಟ್ನೆಸ್ ಟ್ರೈನಿಂಗ್ ತರಬೇತಿ; ಮನಶ್ಶಾಸ್ತ್ರದಲ್ಲಿ ಎಂ.ಎ., ಕನ್ನಡದಲ್ಲಿ ಎಂ.ಎ., ಜೀವವಿಜ್ಞಾನದಲ್ಲಿ ಬಿ.ಎಸ್ಸಿ. ಪದವಿಗಳು. ಹೃದಯವಾಹಿನಿ ಪತ್ರಿಕೆ ಏರ್ಪಡಿಸಿದ್ದ 'ವಿಶ್ವ ಮಟ್ಟದ ಕಥಾ ಸ್ಪರ್ಧೆ' (೨೦೦೨, ಫೆಬ್ರವರಿ)ಯಲ್ಲಿ, ಸಪ್ನ ಬುಕ್ ಹೌಸ್ ಸಹಯೋಗದಲ್ಲಿ ದಟ್ಸ್‌ಕನ್ನಡ ಏರ್ಪಡಿಸಿದ್ದ 'ಜಾಗತಿಕ ದೀಪಾವಳಿ ಕವನ ಸ್ಪರ್ಧೆ' (೨೦೦೨, ನವೆಂಬರ್)ಯಲ್ಲಿ ಪ್ರಥಮ ಬಹುಮಾನಗಳು. ಅಮೆರಿಕದ ಕೆಲವು ಕನ್ನಡ ಕೂಟಗಳ ಸಾಹಿತ್ಯ ಸಂಚಿಕೆಗಳಿಗೆ, ವಿಶ್ವ ಕನ್ನಡ ಸಮ್ಮೇಳನಗಳ ಸ್ಮರಣ ಸಂಚಿಕೆಗಳಿಗೆ ಬರವಣಿಗೆ. ೧೯೯೬ರಲ್ಲಿ, ೨೦೦೨ರಲ್ಲಿ ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟದ ವಾರ್ಷಿಕ ಸಂಚಿಕೆಯ ಸಂಪಾದಕ ಸಮಿತಿ ಸದಸ್ಯೆ.

**ಬ್ಲಾಗುಗಳು:** http://suptadeepti.blogspot.com ಮತ್ತು http://harivalahari.blogspot.com

**ಸಂಪರ್ಕ:** 1260, AYALA Dr, Apt # 107, Sunnyvale, CA, 94086. Email: jyothimahadev@gmail.com

**ಪ್ರತಿಭಾ ಭಾಗವತ್**

ಹುಟ್ಟಿದ್ದು ಹಾಗೂ ಬಾಲ್ಯ ಕರ್ನಾಟಕದ ಕಾಶ್ಮೀರವೆನಿಸಿದ ಕೊಡಗು ಜಿಲ್ಲೆಯಲ್ಲಿ. ಬೆಳೆದಿದ್ದು ಕರ್ನಾಟಕ ಅತಿ ಸುಂದರ ಜಿಲ್ಲೆ, ಉತ್ತರಕನ್ನಡದ ಕರಾವಳಿ ಹಾಗೂ ಪಶ್ಚಿಮ ಘಟ್ಟಗಳಲ್ಲಿ. ಓದಿದ್ದು ಬೆಳಗಾವಿಯ ಗೋಗಟೆ ತಾಂತ್ರಿಕ ವಿದ್ಯಾಲಯದಲ್ಲಿ ಸಿವಿಲ್ ಇಂಜಿನಿಯರಿಂಗ್. ಸದ್ಯ ಕೆಲಸ ಮಾಡುತ್ತಿರುವುದು ಎಈಕೋಂ ಸಂಸ್ಥೆಯ ಕೊಳಚೆ ನೀರಿನ ಶುದ್ಧೀಕರಣ ಮತ್ತು ಅದರ ಪುನರುಪಯೋಗದ ವಿಭಾಗದಲ್ಲಿ. ದಕ್ಷಿಣ ಕ್ಯಾಲಿಫೋರ್ನಿಯಾದ ಲೇಕ್ ಫೋರೆಸ್ಟಿನಲ್ಲಿ ಪತಿ ಹಾಗೂ ಇಬ್ಬರು ಮಕ್ಕಳೊಂದಿಗೆ ಹದಿನೆಂಟು ವರ್ಷಗಳ ವಾಸ.

**ಸಂಪರ್ಕ:** bhagwats@cox.net

**ಆಹಿತಾನಲ/ನಾಗ ಐತಾಳ**

ಕರ್ನಾಟಕದ ಕರಾವಳಿಯ ಕೋಟ ಹುಟ್ಟೂರು. ವಿದ್ಯಾಭ್ಯಾಸ ಕೋಟ, ಬೆಂಗಳೂರು, ಬನಾರಸ್ ಗಳಲ್ಲಿ. ಬೆಂಗಳೂರಿನ Indian Institute of Science ನಲ್ಲಿ M.Sc.,

ಮತ್ತು Ph.D. ಪದವಿ ಪಡೆದು, ಅಮೆರಿಕದಲ್ಲಿ ಉದ್ಯೋಗ, ೧೯೬೯ರಿಂದ. ಮೊದಲಿಗೆ, USC School of Medicine, Los Angelesನಲ್ಲಿ ಸಂಶೋಧಕ ವಿಜ್ಞಾನಿಯಾಗಿ ಕೆಲಸ. ನಂತರ ಮೂರು ವರ್ಷಗಳ ಕಾಲ ಕೆನಡಾದಲ್ಲಿ University of Western Ontario, London ಮತ್ತು University of Guelph, Guelphನಲ್ಲಿ ಕೆಲಸ ಮಾಡಿದ ಮೇಲೆ, ಶಿಕಾಗೋ ಯುನಿವರ್ಸಿಟಿಯಲ್ಲಿ ೨೫ ವರ್ಷಕ್ಕೂ ಮೀರಿ ಸೀನಿಯರ್ ಸಂಶೋಧಕ ವಿಜ್ಞಾನಿಯಾಗಿ ಕೆಲಸ ಮಾಡಿ, ೨೦೦೨ರಲ್ಲಿ ನಿವೃತ್ತಿ. ಜೀವನ ಸಂಗಾತಿ ಲಕ್ಷ್ಮಿಯ ಜೊತೆ, ಕ್ಯಾಲಿಫೋರ್ನಿಯದ ಆರ್ಕೇಡಿಯದಲ್ಲಿರುವ ಮಗಳು ಅನುರಾಧಳ ಮನೆಯಲ್ಲೂ, ನ್ಯೂಜರ್ಸಿಯಲ್ಲಿರುವ ಮಗ ಅರವಿಂದ, ಸೊಸೆ, ಸೆಪಿಡೆಯರ ಮನೆಯಲ್ಲೂ, ಅಷ್ಟಿಷ್ಟು ಕಾಲ ಇದ್ದು, ನಿವೃತ್ತಿ ಜೀವನವನ್ನು ಕಳೆಯುತ್ತಿದ್ದಾರೆ. 'ಕಾರಂತ ಚಿಂತನ', 'ಕುವೆಂಪು ಸಾಹಿತ್ಯ ಸಮೀಕ್ಷೆ', 'ಯದುಗಿರಿಯ ಬೆಳಕು',' ಕನ್ನಡದಮರ ಚೇತನ' ಮತ್ತು 'ಗೆಲುವಿನ ಚಿಲುಮೆ – ರಾಜರತ್ನಂ' – ಇವು ಇವರ ಸಂಪಾದಿತ ಗ್ರಂಥಗಳು. ಅಲ್ಲದೆ, 'ಅಮೆರಿಕನ್ನಡಿಗನೊಬ್ಬನ ದಿನಚರಿಯಿಂದ', 'ಒಂದಾನೊಂದು ಕಾಲದಲ್ಲಿ', 'ಕಾದೇ ಇರುವಳು ರಾಧೆ' ಮತ್ತು 'ಕಲಬೆರಕೆ' – ಎಂಬ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಸದಸ್ಯರಲ್ಲಿ ಇವರೊಬ್ಬರು.

**ಸಂಪರ್ಕ:** 816, Othello Street, Arcadia, CA 91006,USA.
Email : nagaaithal@yahoo.com

**ಮೀರಾ ಪಿ. ಆರ್.**

ಭಾಷಾವಿಜ್ಞಾನದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿ ಪಡೆದಿರುವ ಮೀರಾ, ಮೈಸೂರು, ಬೆಂಗಳೂರು ಆಕಾಶವಾಣಿಯಲ್ಲಿ ಹಲವು ವರ್ಷ ಅರೆಕಾಲಿಕ ಉದ್ಘೋಷಕಿಯಾಗಿ ಕೆಲಸ ಮಾಡಿದ್ದಾರೆ. ದಟ್ಸ್‌ಕನ್ನಡ ಮತ್ತು ಕೆಂಡಸಂಪಿಗೆ ವೆಬ್ ಪೋರ್ಟಲ್‌ಗಳಲ್ಲೂ 'ವಿಕ್ರಾಂತ ಕರ್ನಾಟಕ' ನಿಯತಕಾಲಿಕೆಯಲ್ಲೂ ಇವರ ಹಲವು ಬರಹಗಳು, ಕಥೆ, ಕವಿತೆಗಳೂ ಪ್ರಕಟವಾಗಿವೆ. ಸಧ್ಯಕ್ಕೆ ಕೆಂಡಸಂಪಿಗೆಯಲ್ಲಿ ಅಂಕಣ ಬರಹ ಬರೆಯುತ್ತಿರುವ ಮೀರಾ, ತಮ್ಮ ಮನೆಯಲ್ಲಿ ಕರ್ನಾಟಕ ಶಾಸ್ತ್ರೀಯ ಮತ್ತು ಲಘು ಸಂಗೀತದ ತರಗತಿಗಳನ್ನು ನಡೆಸುತ್ತಿದ್ದಾರೆ. ಸಾಹಿತ್ಯ, ಸಂಗೀತ, ಚಿತ್ರಕಲೆ, ಸಿನಿಮಾ, ವೆಬ್‌ಡಿಸೈನಿಂಗ್ ಎಲ್ಲವೂ ಇವರ ಹತ್ತು ಹಲವು ಆಸಕ್ತಿಗಳಲ್ಲಿ ಸೇರಿವೆ. ಭಾರತದಿಂದ ಉತ್ತರ ಅಮೆರಿಕಾಗೆ ವರ್ಷ ೨೦೦೦ರಲ್ಲಿ ಬಂದ ಇವರು, ಸಧ್ಯಕ್ಕೆ ನ್ಯೂ ಜೆರ್ಸಿಯ ವುಡ್‌ಬ್ರಿಡ್ಜ್ ಎಂಬಲ್ಲಿ ತಮ್ಮ ಪತಿ ಹಾಗು ಮಗುವಿನ ಜೊತೆ ನೆಲೆಸಿದ್ದಾರೆ.

**ಡಾ. ಮೈ. ಶ್ರೀ. ನಟರಾಜ**

ಅಮೆರಿಕೆಯ ಪ್ರಸಿದ್ಧ ಕನ್ನಡ ಬರಹಗಾರರಲ್ಲಿ ಒಬ್ಬರಾದ ಮೈ.ಶ್ರೀ. ನಟರಾಜ ಅವರು ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಬೆಂಗಳೂರು ವಿವಿ, ಮುಂಬಯಿ ಐಐಟಿ, ಮತ್ತು ಪಿಟ್ಸ್‌ಬರ್ಗ್ ವಿವಿಗಳಿಂದ ಪದವಿಗಳನ್ನು ಪಡೆದವರು. ಅಮೆರಿಕದ ಅಣುಶಕ್ತಿ ನಿಯಂತ್ರಣ ಸಂಸ್ಥೆಯಲ್ಲಿ ತಾಂತ್ರಿಕ ನಿಪುಣರು. ಏಳು ನಾಟಕಗಳು ಎರಡು ಕವನ ಸಂಕಲನಗಳು ಮತ್ತು ಒಂದು ಅಂಕಣ ಸಂಕಲನವನ್ನೂ ಪ್ರಕಟಿಸಿದ್ದಾರೆ. ಇವರ ಕವನ ಸಂಕಲನ 'ಮಧುಚಂದ್ರ-ಸಿರಿಕೇಂದ್ರ'ಕ್ಕೆ ೨೦೦೩ರಲ್ಲಿ ಗೊರೂರು ಪ್ರಶಸ್ತಿ ದೊರಕಿದೆ. thatskannada.com ಎಂಬ ಅಂತರ್ಜಾಲ ಪತ್ರಿಕೆಯಲ್ಲಿ 'ಜಾಲತರಂಗ' ಎಂಬ ಜನಪ್ರಿಯ ಅಂಕಣವನ್ನು ಆರು ವರ್ಷಗಳಿಂದ ಬರೆಯುತ್ತಿದ್ದಾರೆ. ೧೯೮೩ರಲ್ಲಿ 'ಕಾವೇರಿ' ಕನ್ನಡ ಸಂಘದ ಅಧ್ಯಕ್ಷ. ಅಮೆರಿಕದಲ್ಲಿ ಕನ್ನಡ ನಾಟಕಗಳನ್ನು ರಂಗದಮೇಲೆ ತಂದವರಲ್ಲಿ ಮೊದಲಿಗ. ಇವರನ್ನು ಗೌರವಿಸಿದ ಸಂಸ್ಥೆಗಳು ಅನೇಕ- 'ತ್ರಿವೇಣಿ' (೧೯೮೪), ಮಂಗಳೂರಿನ ಹೃದಯವಾಹಿನಿ (೧೯೯೭), 'ಹ್ಯೂಸ್ಟನ್ ಕನ್ನಡ ವೃಂದ' (೨೦೦೩), 'ಕಾವೇರಿ' (೨೦೦೩ ಮತ್ತು ೨೦೦೪), 'ಅಕ್ಕ' (೨೦೦೬), 'ಕೌನ್ಸಿಲ್ ಆಫ್ ಇಂಡಿಯನ್ ಅಸೋಸಿಯೇಷನ್ಸ್ ಆಫ್ ವಾಷಿಂಗ್‌ಟನ್ ಡಿಸಿ' (೨೦೦೭)-- ಇವೇ ಮುಂತಾದವು. ಸಂಸ್ಕೃತ ಭಾಷೆಯಲ್ಲಿ ಇವರು ರಚಿಸಿದ 'ನವರತ್ನಮಾಲಿಕಾ' (ಶಾಸ್ತ್ರೀಯ ಸಂಗೀತದ ಧ್ವನಿಸುರುಳಿ), ಕನ್ನಡದಲ್ಲಿ ರಚಿಸಿರುವ 'ಸುಂದರಕಾಂಡ' (ಧ್ವನಿಸಂಪುಟ), ಇವು ನಟರಾಜರ ಬಹುಮುಖ ಪ್ರತಿಭೆಗೆ ಉದಾಹರಣೆಗಳು. 'ಕನ್ನಡ ಸಾಹಿತ್ಯ ರಂಗ'ದ ಸಂಸ್ಥಾಪಕ ಸದಸ್ಯ ಮತ್ತು ಹಾಲೀ ಉಪಾಧ್ಯಕ್ಷ. 'ರಂಗ' ಹೊರತಂದಿರುವ ಮೂರು ಸಾಹಿತ್ಯ-ಸಂಪುಟಗಳ ಸಂಪಾದಕವರ್ಗದಲ್ಲಿ ಪ್ರಧಾನಪಾತ್ರ, ೨೦೦೯ರ ಸಮ್ಮೇಳನದ ವ್ಯವಸ್ಥಾಪಕ ಮತ್ತು ಪುಸ್ತಕ ಪ್ರಕಟಣೆಗೆ ಪ್ರಧಾನ ಸಂಪಾದಕ. ೨೦೦೬ರ 'ಅಕ್ಕ' ಸಮ್ಮೇಳನದ ಸಮಸ್ತ ಸಾಹಿತ್ಯಕ ಚಟುವಟಿಕೆಗಳಿಗೂ ಸೂತ್ರಧಾರ ಮತ್ತು 'ಸುವರ್ಣವಾಹಿನಿ' ಸಂಪುಟಗಳ ಪ್ರಕಟಣೆಯ ಸಾರಥಿ. ಮೂರು ಮಕ್ಕಳ ತಂದೆ, ಮೈ.ಶ್ರೀ. ನಟರಾಜರು ಮೇರೀಲ್ಯಾಂಡ್ ಸಂಸ್ಥಾನದ ಪೊಟೋಮೆಕ್‌ನಲ್ಲಿ ಪತ್ನಿ ಗೀತಾ ಅವರೊಡನೆ ವಾಸ.

**ಸಂಪರ್ಕ:** 10510, Beechknoll Lane, Potomac, MD, 20854, USA.
e-mail: mysreena@aol.com

**ಮಾಲಾ ರಾವ್**

ಸಣ್ಣಕಥೆ, ಲೇಖನಗಳು ಮತ್ತು ಹಾಸ್ಯಬರಹ ಬರೆಯುವುದರಲ್ಲಿ ಆಸಕ್ತಿ. ಕೆಲವು ಕವನಗಳನ್ನೂ, ಸುನೀತಗಳನ್ನು ಬರೆದದ್ದೂ ಉಂಟು. ನಾಡಿನ ಹೆಸರಾಂತ ಪತ್ರಿಕೆಗಳಾದ

ತರಂಗ, ತುಷಾರ ಮುಂತಾದುವುಗಳಲ್ಲದೇ ದಟ್ಸ್‌ಕನ್ನಡ, ಕನ್ನಡಧ್ವನಿ, ಕೆಂಡಸಂಪಿಗೆಗಳಲ್ಲಿ ಕಥೆಗಳು ಲೇಖನಗಳು ಪ್ರಕಟಗೊಂಡಿವೆ. ಕಥಾಕಾನನ ಮತ್ತು ಚಿತ್ರದುರ್ಗ ಬ್ಲಾಗ್‌ಗಳು. ಹುಟ್ಟಿದ್ದು ಮೈಸೂರಿನಲ್ಲಿ. ಬೆಳೆದಿದ್ದು ಚಿತ್ರದುರ್ಗ, ತುಮಕೂರು ಸೇರಿಸಿ ಕರ್ನಾಟಕದ ಹಲವು ಊರುಗಳಲ್ಲಿ. ಪಡೆದದ್ದು ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ. ಸದ್ಯಕ್ಕೆ ಕ್ಯಾಲಿಫೋರ್ನಿಯಾದ ಸನ್ನಿವೇಲ್‌ನಲ್ಲಿ ಪತಿ ಅರವಿಂದ್ ಮತ್ತು ಮಗ ಅಮರ್ತ್ಯನೊಡನೆ ವಾಸ. ಫೋಟೋಗ್ರಫಿ, ಅಪರೂಪದ ಹೂಗಿಡಗಳನ್ನು ಬೆಳೆಸುವುದು, ಕ್ವಿಲ್ಟ್ ಹೊಲಿಯುವುದು, ಪ್ರವಾಸ ಇನ್ನಿತರ ಆಸಕ್ತಿಗಳು.

**ಸಂಪರ್ಕ:** 1063 Morse Ave 6 #104, Sunnyvale,CA 94089,USA.
Email: mala.rao@gmail.com

**ಎಚ್. ವಿ. ರಂಗಾಚಾರ್**

ವೃತ್ತಿಯಿಂದ ಎಲೆಕ್ಟ್ರಾನಿಕ್ ಎಂಜಿನಿಯರ್. ಬೆಂಗಳೂರು ಎಂಜಿನಿಯರಿಂಗ್ ಕಾಲೇಜಿನಿಂದ ಬಿ.ಇ ಪದವಿ ಪಡೆದು, ನಂತರ ಅಮೆರಿಕದಲ್ಲಿ ಎಂ.ಎಸ್ ಮತ್ತು ಪಿಎಚ್‌ಡಿ ಪದವಿಗಳನ್ನು ಗಳಿಸಿ RCA ಮತ್ತು Bell Laboratorieನಲ್ಲಿ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ಇವರು ಅಮೆರಿಕದ ಕನ್ನಡ ಬರಹಗಾರರಲ್ಲಿ ಮೊದಲಿಗರು. ಪ್ರಬಂಧ, ಕವನ ಮತ್ತು ಭಾಷಾಂತರಗಳು ಇವರ ಕ್ಷೇತ್ರ. 'ನೆಲದ ಕರೆ' (ಕವನ ಸಂಕಲನ), 'ಹೇರೋದೂತನ ಸಮರ ಕಥೆಗಳು' (ಕಥಾಸಂಗ್ರಹ), 'Hill Temple' (ಪು.ತಿ.ನ ಅವರ 'ಮಲೆದೇಗುಲ'ದ ಆಂಗ್ಲಾನುವಾದ) ಮತ್ತು 'ತರಗೆಲೆಯ ಹಾರಾಟ' (ಪ್ರಬಂಧ ಸಂಕಲನ) ಇವರ ಪ್ರಕಟಿತ ಕೃತಿಗಳು.

**ಸಂಪರ್ಕ:** 6 Somer Court, English Town, NJ 07726,USA.
Email: Padmaranga3@aol.com

**ಕೃಷ್ಣರಾಜು ತೋನ್ಸೆ**

ವಾಷಿಂಗ್‌ಟನ್ ನಗರದ ಹತ್ತಿರದಲ್ಲಿರುವ National Institutes of Health ನಲ್ಲಿ ಮೆಡಿಕಲ್ ಆಫೀಸರ್. ವೃತ್ತಿ, ಬಾಲ ವೈದ್ಯ ಶಾಸ್ತ್ರ; ಹುಟ್ಟಿದ್ದು, ಉಡುಪಿಯ ಹತ್ತಿರದ ಕೊಡವೂರಿನಲ್ಲಿ; ವಿದ್ಯಾಭಾಸ, ಪಿರಿಯಾಪಟ್ಟಣ; ಯುವರಾಜ ಕಾಲೇಜು; ಮೈಸೂರು ಮೆಡಿಕಲ್ ಕಾಲೇಜು (ಎಂ.ಬಿ.ಬಿಎಸ್.) ಮತ್ತು ಮುಂಬಯಿಯಲ್ಲಿ (ಎಂ.ಡಿ). ೧೯೭೨ ರಿಂದ ೨೦೦೨ ರ ವರೆಗೆ ಯೂನಿವರ್ಸಿಟಿ ಆಫ್ ಇಲಿನಾಯ್‌ನಲ್ಲಿ ವೃತ್ತಿ.

ಇವರ ಮೊದಲ ಮುಖ್ಯ ಬರಹ, 'ಶನಿ ಹಿಡಿದದ್ದು' ಎಂಬ ಕತೆ, ೧೯೬೭ರ ಪ್ರಜಾವಾಣಿಯ ದೀಪಾವಳಿ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆಯಿತು. ಆನಂತರ ಕನ್ನಡದಲ್ಲಿ ಹಲವಾರು ಸಣ್ಣಕತೆಗಳು, ಪ್ರಬಂಧ, ಅನುವಾದ ಮತ್ತು ಒಂದು ಕಿರು ಕಾದಂಬರಿಯನ್ನು ಬರೆದರು. ಇಂಗ್ಲೀಷ್‌ನಲ್ಲಿ ವೈದ್ಯಕೀಯ ವಿಜ್ಞಾನದ ಇತಿಹಾಸದ ಬಗ್ಗೆ ಬಹಳಷ್ಟು ಬರೆದಿದ್ದಾರೆ.

**ಪ್ರಕಟಿಸಿದ ಪುಸ್ತಕಗಳು–**

೧. 'ಬೇತಾಳರಾಯ ಮತ್ತು ಇತರ ಕತೆಗಳು.' ಸಾಕ್ಷಿ ಪ್ರಕಾಶನ, ೧೯೮೦, ಬೆಂಗಳೂರು.

೨. 'ಉತ್ತರಾಯಣ.' ಕಾದಂಬರಿ, ಮನೋಹರ ಗ್ರಂಥಮಾಲೆ, ೧೯೮೧;

೩. Poems and a Novella by A. K. Ramanujan, Oxford University Press, 2007, translated by. T. N. Krishnaraju and Molly-Daniels Ramanujan

4. Nobel Chronicles: Brief Biographies of Nobel Prize Winners in Medicine. Author House Publishers, Indiana, 2003.

5. Don't Stand in Front of a Palace or Behind a Horse: English Translations of Kannada Proverbs. Author House Publishers, Indiana. 2003.

**ವಿಮಲಾ ರಾಜಗೋಪಾಲ್**

ಕನ್ನಡದ ಸುಪ್ರಸಿದ್ಧ ಸಾಹಿತಿ ಶ್ರೀ ಎಲ್. ಗುಂಡಪ್ಪನವರ ಮಗಳು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಿಂದ ಇಂಗ್ಲಿಷ್ ಸಾಹಿತ್ಯದಲ್ಲಿ B.A. (Hons.) ಪದವಿ ಗಳಿಸಿದರು. ಮುಂದೆ ಹಲವಾರು ವರ್ಷ ಆಕಾಶವಾಣಿಯಲ್ಲಿ ಕೆಲಸ. ಕನ್ನಡ ಜಾನಪದ ಸಂಗೀತದಲ್ಲಿ ಇವರೂ ಇವರ ಸೋದರಿಯರಾದ ಡಾ. ಎಲ್.ಜಿ. ಸುಮಿತ್ರ ಮತ್ತು ಕಮಲ ಎಂ.ಎಸ್. ಬಾಲುರವರೂ ಎಲ್.ಜಿ. ಸೋದರಿಯರೆಂದು ತಮ್ಮ ಶಾಲಾಕಾಲೇಜು ದಿನಗಳಿಂದಲೂ ಪ್ರಸಿದ್ಧಿ ಪಡೆದವರು. ಉತ್ತರದೇವಿಯ ಹಾಡು ಮತ್ತು ಇತರ ಜಾನಪದ ಗೀತೆಗಳು ಎಂಬ ಧ್ವನಿಮುದ್ರಿಕೆ (CD) ಹೊರತಂದಿದ್ದಾರೆ. ಪುತಿನ ಅವರ ಗೋಕುಲ ನಿರ್ಗಮನದ ಹಾಡುಗಳನ್ನು ಸ್ವತಃ ಅವರಿಂದಲೇ ಕಲಿತು ಜನಪ್ರಿಯಗೊಳಿಸಿದರು. ರೇಡಿಯೋ ಮತ್ತು ಇತರ ವೇದಿಕೆಗಳ ಮೇಲೆ ಅಸಂಖ್ಯಾತ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ. ಕಳೆದ ನಾಲ್ಕು ದಶಕಗಳಿಂದ ಫಿಲಡೆಲ್ಫಿಯ ಬಳಿ ವಾಸಿಸುತ್ತಿರುವ ಇವರು Peace Corps ನಲ್ಲಿ ಕನ್ನಡ ಕಲಿಸಿದ್ದಾರೆ, ಇಲ್ಲಿನ ಅನೇಕ

ಪ್ರತಿಷ್ಠಿತ ಸಂಸ್ಥೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿದ್ದಾರೆ; ಕಳೆದ ಹತ್ತು ವರ್ಷಗಳಿಂದ University of Pennsylvania South Asia Studies Departmentನಲ್ಲಿ ಕನ್ನಡ ಕಲಿಸುತ್ತಿದ್ದಾರೆ. ಅಂತರ್ಜಾಲದ ಮೂಲಕ ಕನ್ನಡ ಕಲಿಸುವ ಎರಡು ಯೋಜನೆ ಕೈಗೊಂಡಿದ್ದಾರೆ. ಒಂದು ಕನ್ನಡ ದನಿ – Kannada through Songs ಕಾರ್ಯಕ್ರಮ. ಇನ್ನೊಂದು ಕನ್ನಡ ಪರಿಚಯ – ಶಿಕ್ಷಣ ಕಾರ್ಯಕ್ರಮ. ಎಲ್ವಿನ್ ಎಂಬ ಖ್ಯಾತ ಸಂಸ್ಥೆಯಲ್ಲಿ Music and Recreation Therapist ಆಗಿ ೨೦ ವರ್ಷ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ವಿಮಲಾ ರಾಜಗೋಪಾಲ್ ಬರೆದ ಲೇಖನಗಳು, ಕತೆಗಳು ಹಲವಾರು ಕಡೆ ಪ್ರಕಟವಾಗಿವೆ. ಶಾಲಾ ದಿನಗಳಲ್ಲೇ ಅವರ ಕತೆ ಲೇಖನಗಳು ಪ್ರಜಾವಾಣಿ ಮುಂತಾದ ಕಡೆ ಪ್ರಕಟವಾಗಿದ್ದವು. 'ತುಂಟರ ತೇರು' ತಮ್ಮ ಬಾಲ್ಯದ ಅನುಭವಗಳನ್ನು ಕುರಿತು ಬರೆದ ಮಕ್ಕಳ ಪುಸ್ತಕ. ಕನ್ನಡ ಸಾಹಿತ್ಯ ರಂಗದ ಪ್ರಕಟಣೆಗಳಲ್ಲೆಲ್ಲ ಅವರ ಲೇಖನಗಳು ಪ್ರಕಟಗೊಂಡಿವೆ. ಸಾಹಿತ್ಯಾಂಜಲಿಯ 'ಕನ್ನಡದಮರ ಚೇತನ'ದಲ್ಲಿ ಮಾಸ್ತಿ ಬಗ್ಗೆ ಅವರು ಬರೆದ ಲೇಖನ ಬಹಳ ಜನರ ಮನಸ್ಸು ಸೆಳೆದಿದೆ.

ಸಂಪರ್ಕ: 604 Autumn Lane, Media, PA 19063. Email: hyr1195@aol.com

**ಶಶಿಕಲಾ ಚಂದ್ರಶೇಖರ್**

ವಾಷಿಂಗ್ಟನ್ ಡಿ.ಸಿ ಹತ್ತಿರದ ಸುತ್ತಳತೆಯಲ್ಲಿರುವ ಬಾಯ್ಡ್ಸ್ ಎಂಬ ನಗರದಲ್ಲಿ ವಾಸಿಸುತ್ತಿರುವ ಶಶಿಕಲಾ ಚಂದ್ರಶೇಖರ್ ಹವ್ಯಾಸಿ ಕವಿಯತ್ರಿ/ಕಥೆಗಾರ್ತಿ. ೨೦೦೪ರಲ್ಲಿ ಬಿಡುಗಡೆಯಾದ ಆವರ ಸಣ್ಣಕಥಾ ಸಂಕಲನ 'ದೀಪವು ನಿನ್ನದೆ ಗಾಳಿಯು ನಿನ್ನದೆ', ಕನ್ನಡ ಸಾಹಿತ್ಯ ಪರಿಷತ್ತಿನ 'ರೇವಣ್ಣ ದತ್ತಿ' ಪ್ರಶಸ್ತಿಯನ್ನು ಪಡೆದಿದೆ. ಕನ್ನಡ ನಾಡು, ನುಡಿ ಹಾಗೂ ಪರಂಪರೆಯ ಬಗ್ಗೆ ಇವರಿಗೆ ಇರುವ ಅಭಿಮಾನ, ಸ್ಥಳೀಯ ಸಂಘ ಸಂಸ್ಥೆಯ ಚಟುವಟಿಕೆಯಲ್ಲಿ ಸ್ವಯಂಸೇವಕಿಯಾಗಿ ಸೇವೆ ಸಲ್ಲಿಸಲು ಪ್ರೇರಣೆಯಾಗಿದೆ.

**ಶಾಂತಲಾ ಭಂಡಿ**

ಊರು: ಭಂಡಿಮನೆ, ಮೆಣ್ಸೆಕೇರಿ. ಹುಟ್ಟೂರು: ಬೆಂಗಳೆ, ಬನವಾಸಿ, ಶಿರಸಿ. ಪ್ರಸ್ತುತ ವಾಸ: ಕುಪರ್ಟಿನೊ, ಕ್ಯಾಲಿಫೋರ್ನಿಯ.

### ನಳಿನಿ ಮೈಯ

ಚಿಕಾಗೋ ನಗರದ ಉಪನಗರ ಡೇರಿಯನ್‌ನಲ್ಲಿ ಪತಿ ಸುಬ್ರಾಯ ಮೈಯ ಅವರೊಡನೆ ವಾಸವಾಗಿದ್ದಾರೆ. ಇವರ ಕಥೆ, ಲೇಖನಗಳು ಅಮೆರಿಕನ್ನಡ, ಕನ್ನಡ ಪ್ರಭ, ಉದಯವಾಣಿ, ಪ್ರಜಾವಾಣಿ ಮತ್ತು ದಟ್ಸ್‌ಕನ್ನಡ ಡಾಟ್ ಕಾಮ್ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'ಮರೀಚಿಕೆ ಮತ್ತು ಇತರ ಕಥೆಗಳು' ಇವರ ಪ್ರಕಟಿತ ಕಥಾಸಂಕಲನ. 'ಕಾರಂತ ಚಿಂತನ', 'ಕುವೆಂಪು ಸಾಹಿತ್ಯ ಸಮೀಕ್ಷೆ' ಮತ್ತು 'ಆಚೀಚೆಯ ಕಥೆಗಳು' ಗ್ರಂಥಗಳ ಸಹಸಂಪಾದಕಿಯಾಗಿ ಕೆಲಸ ಮಾಡಿದ್ದಾರೆ. 'ಕನ್ನಡ ಸಾಹಿತ್ಯ ರಂಗ'ದ ಆಡಳಿತ ಮಂಡಳಿಯ ಅಧ್ಯಕ್ಷಿಣಿಯಾಗಿಯೂ ದುಡಿದಿದ್ದಾರೆ.

ಸಂಪರ್ಕ : 18W, 194 Holly Ave, Darien,IL 60561, USA.
Email : nmaiya@gmail.com

### ವಲ್ಲೀಶ ಶಾಸ್ತ್ರಿ

ಹಳ್ಳಿಯಲ್ಲಿ ಬೆಳೆದು ಕಾಲೇಜು ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿಗೆ ಬಂದು ನಂತರ ಕಾರ್ಯನಿಮಿತ್ತ ಪ್ರಪಂಚದ ನಾನಾಕಡೆ ತಿರುಗಿ ಬಂದು ಕಡೆಗೆ ಅಮೆರಿಕೆಯ ಕ್ಯಾಲಿಫೋರ್ನಿಯಾದಲ್ಲಿ ನೆಲೆಸಿದ್ದರೂ ಕನ್ನಡದ ಕಂಪನ್ನು ಮರೆಯದೆ ಕನ್ನಡ ಸೇವೆ ಮಾಡುತ್ತಿರುವ ಲೇಖಕರು ವಲ್ಲೀಶ ಶಾಸ್ತ್ರಿ. ಕನ್ನಡ ಸಂಘಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದಲ್ಲದೇ ಕನ್ನಡ ಸಾಹಿತ್ಯರಂಗ (ಯುಎಸ್‌ಎ)ದ ಉಪಾಧ್ಯಕ್ಷರೂ ಆಗಿದ್ದಾರೆ. ಬಿಡುವಿನ ವೇಳೆಯಲ್ಲಿ ಸಣ್ಣಕಥೆ ಹಾಗೂ ನಾಟಕಗಳನ್ನು ಬರೆಯುತ್ತಾರೆ. ಆಗಾಗ್ಗೆ ಅಮೆರಿಕೆಯ ಆಗುಹೋಗಿನ ಬಗ್ಗೆ ಕೆಲವು ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದಾರೆ. ಹಲವಾರು ನಾಟಕಗಳನ್ನು ನಿರ್ದೇಶಿಸಿ ನಟಿಸಿ, ಅಮೆರಿಕೆಯ ಹಲವು ಕಡೆಗಳಲ್ಲಿ ಪ್ರದರ್ಶಿಸಿದ್ದಾರೆ. ಇವರ ಕನ್ನಡ ನಾಟಕರಂಗದ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಇವರನ್ನು ಪುರಸ್ಕರಿಸಿದೆ. ಇವರು ಒಳ್ಳೆಯ ಸಂಘಟಕರೂ ಹೌದು.

## ಅನುಬಂಧ ೨
## ಕನ್ನಡ ಸಾಹಿತ್ಯ ರಂಗ

ನಮ್ಮ ಕನ್ನಡ ಸಾಹಿತ್ಯ ರಂಗದ ಮೂಲ ಉದ್ದೇಶ ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರ ಸಾಹಿತ್ಯಾಸಕ್ತಿಯನ್ನು ಪೋಷಿಸುವುದು, ಬೆಳೆಸುವುದು; ಅದರ ಸಾಧನೆಗಾಗಿ ಬೇಕಾದ ಎಲ್ಲ ಕಾರ್ಯಕ್ರಮಗಳನ್ನೂ ಕೈಗೊಳ್ಳುವುದು. ಇಂಥ ಒಂದು ಸಂಸ್ಥೆ ಏಕೆ ಬೇಕು, ಈಗಾಗಲೆ ಬೇಕಾದಷ್ಟು ಕನ್ನಡ ಸಂಘಗಳೂ, ಕೂಟಗಳೂ ಇಲ್ಲವೆ ಎಂದು ನೀವು ಕೇಳಬಹುದು. ನಿಜ, ಅಮೆರಿಕದಲ್ಲಿ ಕನ್ನಡಿಗರ ಜನಸಂಖ್ಯೆ ಹೆಚ್ಚಿದಂತೆಲ್ಲ ಕನ್ನಡ ಕೂಟಗಳ ಸಂಖ್ಯೆಯೂ ಹೆಚ್ಚುತ್ತಿದೆ. ಅಮೆರಿಕಾದ್ಯಂತ ಮೂವತ್ತಕ್ಕೂ ಮೇಲ್ಪಟ್ಟು ಕನ್ನಡ ಸಂಘಗಳಿವೆ. ಆದರೆ ಅವೆಲ್ಲ ಬಹುಮಟ್ಟಿಗೆ ಸಾಂಸ್ಕೃತಿಕ ಸಂಘಗಳು. ಸಂಕ್ರಾಂತಿಯಿಂದ ದೀಪಾವಳಿಯವರೆಗೆ ನಾನಾ ಹಬ್ಬಗಳನ್ನಾಚರಿಸಿ ಕನ್ನಡಿಗರ ಮನ ತಣಿಸುತ್ತವೆ, ಬಿಸಿಬೇಳೆ ಹುಳಿಯನ್ನದಿಂದ ಅವರ ಹೊಟ್ಟೆ ತುಂಬಿಸುತ್ತವೆ. ಅದೊಂದು ಸಂಭ್ರಮದ ವಾತಾವರಣ. ಅದು ಎಲ್ಲರಿಗೂ ಬೇಕು. ಇನ್ನು ಎರಡು ವರ್ಷಕ್ಕೊಮ್ಮೆ ಅಮೆರಿಕದ ವಿವಿಧ ಮುಖ್ಯ ಪಟ್ಟಣಗಳಲ್ಲಿ ನಡೆಯುವ 'ಅಕ್ಕ' ವಿಶ್ವ ಸಮ್ಮೇಳನಗಳ ಅದ್ಧೂರಿಯನ್ನು ನೀವು ನೋಡೇ ಅರಿಯಬೇಕು. ಹೊರದೇಶವೊಂದರಲ್ಲಿ ಆರೇಳು ಸಾವಿರ ಕನ್ನಡಿಗರನ್ನು ಒಂದೇ ಚಾವಣಿಯ ಕೆಳಗೆ ನೋಡುವ ಸೌಭಾಗ್ಯ ಯಾರಿಗೆ ಬೇಡ? ಅದೆಲ್ಲ ನಿಜವೆ ಸರಿ, ಆದರೆ ಅಂಥ ಹಬ್ಬದ ಸಂಭ್ರಮದಲ್ಲಿ ಸಾಹಿತ್ಯ ಚಿಂತನೆಯಂಥ ಗಂಭೀರ ಮನೋವ್ಯಾಪಾರಕ್ಕೆ ತಾವೆಲ್ಲಿ? – ಎಂಬ ಯೋಚನೆಯೂ ಸಾಹಿತ್ಯಾಸಕ್ತರಿಗೆ ಬಾರದೆ ಇರದು. ಅದರಿಂದಲೇ ಕನ್ನಡ ಸಾಹಿತ್ಯ ರಂಗದಂಥ ಸಂಸ್ಥೆಯೊಂದು ಹಲವರಿಗೆ ಬೇಕೆನಿಸಿತು; ಆ ಸಂಸ್ಥೆ ೨೦೦೪ರಲ್ಲಿ ಉದ್ಭವವಾಗಿ ತನ್ನ ಮೊದಲ ಕನ್ನಡ ವಸಂತ ಸಾಹಿತ್ಯೋತ್ಸವವನ್ನು ಅತ್ಯಂತ ಶ್ರದ್ಧೆಯಿಂದ ನೆರವೇರಿಸಿತು.

ಅಂದಿನಿಂದ ಮೊದಲುಗೊಂಡು ಈ ಸಂಸ್ಥೆ ಹಲವಾರು ಉತ್ತಮ ಕಾರ್ಯಕ್ರಮಗಳನ್ನು ಕೈಗೂಡಿಸಿದೆ. ಮೂರು ಕನ್ನಡ ವಸಂತ ಸಾಹಿತ್ಯೋತ್ಸವಗಳನ್ನು ನಡೆಸಿ ಈಗ ನಾಲ್ಕನೆಯದಕ್ಕೆ ಸಿದ್ಧಗೊಳ್ಳುತ್ತಿದೆ: ಮೊದಲ ಸಮ್ಮೇಳನ ಪೆನ್ಸಿಲ್ವೇನಿಯಾದ

ವಿಲನೋವಾ ವಿಶ್ವವಿದ್ಯಾಲಯದಲ್ಲೂ, ಎರಡನೆಯದು ಕ್ಯಾಲಿಫೋರ್ನಿಯಾದ ಲಾಸ್ ಏಂಜಲಿಸ್ ನಗರದ ಬಳಿಯಲ್ಲೂ, ಮೂರನೆಯದು ಚಿಕಾಗೋ ನಗರದ ಬಳಿಯಲ್ಲೂ ನಡೆಯಿತು. ಈ ವರ್ಷ ಬಾಲ್ಟಿಮೋರ್-ವಾಷಿಂಗ್ಟನ್ ಬಳಿಯ ಮೇರಿಲೇಂಡ್ ವಿಶ್ವವಿದ್ಯಾಲಯದಲ್ಲಿ ನಡೆಯಲಿದೆ. ಅಲ್ಲದೆ, ಪ್ರತಿ ಸಮ್ಮೇಳನದ ಅಂಗವಾಗಿ ಒಂದೊಂದು ಗ್ರಂಥವನ್ನು ಹೊರತಂದಿದೆ. ಮೊದಲ ಸಲ (೨೦೦೪) ಕುವೆಂಪು ಜನ್ಮಶತಾಬ್ದಿಯ ನೆನಪಿನಲ್ಲಿ 'ಕುವೆಂಪು ಸಾಹಿತ್ಯ ಸಮೀಕ್ಷೆ', ಎರಡನೆಯ ಸಲ (೨೦೦೫) 'ಆಚೀಚೆಯ ಕತೆಗಳು', ಮೂರನೆಯ ಬಾರಿ (೨೦೦೭) 'ನಗೆಗನ್ನಡಂ ಗೆಲ್ಗೆ!' ಎಂಬ ಗ್ರಂಥಗಳನ್ನು ಹೊರತಂದಿದೆ. ಈ ವರ್ಷದ ಸಮ್ಮೇಳನದ ಸಂದರ್ಭದಲ್ಲಿ ರಂಗ ಈ ಕಳೆದ ಮೂರು ದಶಕಗಳಲ್ಲಿ ಪ್ರಕಟವಾದ ಕೆಲವು ಉತ್ತಮ ಕನ್ನಡ ಕಾದಂಬರಿಗಳನ್ನು ಕುರಿತ ಒಂದು ಅಧ್ಯಯನ ಗ್ರಂಥವನ್ನು ಹೊರತರುತ್ತಿದೆ. ಕ್ಯಾಲಿಫೋರ್ನಿಯಾದ ಸಾಹಿತ್ಯಾಂಜಲಿ ಹೊರತಂದ 'ಮಾಸ್ತಿ ಕನ್ನಡದಮರ ಚೇತನ' ಪುಸ್ತಕದ ಪ್ರಕಾಶನಕ್ಕೂ, ಪೆನ್ಸಿಲ್ವೇನಿಯ, ನ್ಯೂ ಜೆರ್ಸಿ ಮತ್ತು ಡೆಲವೇರ್ ತ್ರಿರಾಜ್ಯಗಳ ಕನ್ನಡ ಸಂಸ್ಥೆ ತ್ರಿವೇಣಿ ೨೦೦೫ರಲ್ಲಿ ನಡೆಸಿದ ಪುತಿನ ಜನ್ಮ ಶತಮಾನೋತ್ಸವಕ್ಕೂ ಧನಸಹಾಯ ಮಾಡಿದೆ.

ನಮ್ಮ ಪ್ರಕಟಣೆಗಳ ಒಂದು ವೈಶಿಷ್ಟ್ಯವೆಂದರೆ ಸಾಧ್ಯವಾದ ಮಟ್ಟಿಗೂ ಎಲ್ಲ ಲೇಖನಗಳನ್ನೂ (ಮುನ್ನುಡಿ, ಇತ್ಯಾದಿ ಬಿಟ್ಟು) ಇಲ್ಲಿ ನೆಲೆಸಿರುವ ಕನ್ನಡಿಗರಿಂದಲೇ ಬರೆಸಿರುವುದು. ಈ ಮೂಲಕ ನಮ್ಮಲ್ಲಿರುವ ಸಾಹಿತ್ಯಾಸಕ್ತಿಯನ್ನು ಹೆಚ್ಚು ಕೃಷಿ ಮಾಡಿದಂತಾಗುತ್ತದೆ ಎಂಬುದು ನಮ್ಮ ಮೂಲ ನಂಬಿಕೆ.

ಕನ್ನಡ ಸಾಹಿತ್ಯ ರಂಗ ಕೈಗೊಂಡ ಒಂದು ವಿಶಿಷ್ಟ ಕೆಲಸವೆಂದರೆ ೨೦೦೬ರಲ್ಲಿ ಅಮೆರಿಕಾದ್ಯಂತ ಒಂಬತ್ತು ಕಡೆ ಕನ್ನಡ ಸಾಹಿತ್ಯ ಶಿಬಿರವನ್ನು ನಡೆಸಿದ್ದು. ಶಿಲಾಶಾಸನಗಳಿಂದ ಹಿಡಿದು ನವೋದಯದ ವರೆಗೂ ನಮ್ಮ ಕನ್ನಡ ಸಾಹಿತ್ಯ ಬೆಳೆದು ಬಂದ ದಾರಿಯಲ್ಲಿ ಮುಖ್ಯ ಮೈಲಿಗಲ್ಲುಗಳನ್ನು ಗುರುತಿಸಿ ಅವುಗಳನ್ನು ಪರಿಚಯಿಸುವ ಕಾರ್ಯಕ್ರಮವನ್ನು ಹೆಸರಾಂತ ಕವಿ ಮತ್ತು ಉಪನ್ಯಾಸಕಾರ ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರಿಂದ ಏರ್ಪಡಿಸಿತ್ತು. ಎರಡು ದಿನದ ಈ ಶಿಬಿರದಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಮಂದಿ ಭಾಗವಹಿಸಿದರು. ಅಮೆರಿಕದಲ್ಲಿ ಇಂಥ ಒಂದು ಶಿಬಿರ ಈ ಪ್ರಮಾಣದಲ್ಲಿ ನಡೆದದ್ದು ಅದೇ ಮೊದಲು.

ನಮ್ಮ ಸಮ್ಮೇಳನಗಳಲ್ಲಿ ಕರ್ನಾಟಕದಿಂದ ಹಲವಾರು ಉತ್ತಮ ಸಾಹಿತಿಗಳು ಆಹ್ವಾನಿತರಾಗಿ ಬಂದು ಭಾಗವಹಿಸಿದ್ದಾರೆ, ಭಾಷಣಗಳನ್ನು ನೀಡಿದ್ದಾರೆ. ಡಾ. ಪ್ರಭುಶಂಕರರ 'ಕನ್ನಡ ಸಾಹಿತ್ಯ: ಒಂದು ಮಿಂಚು ನೋಟ' (೨೦೦೪), ಪ್ರೊ. ಬರಗೂರು ರಾಮಚಂದ್ರಪ್ಪನವರ 'ಕನ್ನಡ ಸಾಹಿತ್ಯ ಮತ್ತು ಸೃಜನಶೀಲ ಸ್ವಾತಂತ್ರ್ಯ'

(೨೦೦೫), ಮತ್ತು ಪ್ರೊ. ಅ.ರಾ. ಮಿತ್ರ ಅವರ 'ಕನ್ನಡ ಸಾಹಿತ್ಯದಲ್ಲಿ ಹಾಸ್ಯಶೀಲತೆ' (೨೦೦೭) – ಇವನ್ನು ರಂಗ ಪ್ರತ್ಯೇಕವಾಗಿ ತನ್ನ ಭಾಷಣಮಾಲೆಯಲ್ಲಿ ಮುದ್ರಿಸಿದೆ. ಇಲ್ಲಿ ನೆಲೆಸಿರುವ ಕನ್ನಡಿಗರ ಸಾಹಿತ್ಯಾಭಿಲಾಷೆ ಮತ್ತು ಅದರ ಅಭಿವ್ಯಕ್ತಿಯನ್ನು ಕುರಿತು ೨೦೦೭ರ ಸಮ್ಮೇಳನಕ್ಕೆ ವಿಶೇಷ ಅತಿಥಿಯಾಗಿ ಬಂದಿದ್ದ ಡಾ. ಎಚ್.ಎಸ್. ರಾಘವೇಂದ್ರ ರಾವ್ ಉಪನ್ಯಾಸ ಮಾಡಿದರು. ಈ ವರ್ಷ ನಡೆಯುತ್ತಿರುವ ಸಮ್ಮೇಳನಕ್ಕೆ ಕನ್ನಡದ ಪ್ರಖ್ಯಾತ ಲೇಖಕಿಯರಾದ ಡಾ. ವೀಣಾ ಶಾಂತೇಶ್ವರ ಮತ್ತು ಶ್ರೀಮತಿ ವೈದೇಹಿ ಅವರು ಬರುತ್ತಿರುವುದು ಒಂದು ವಿಶೇಷ.

ಸಮ್ಮೇಳನದ ಅಂಗವಾಗಿ ನಾವು ನಡೆಸುವ ಎಲ್ಲ ಕಾರ್ಯಕ್ರಮಗಳಲ್ಲೂ ಇಲ್ಲಿನ ಕನ್ನಡಿಗರ ಸಾಹಿತ್ಯಾಸಕ್ತಿಯನ್ನು ಪ್ರಚೋದಿಸುವ, ಅವರ ಸಾಹಿತ್ಯ ಸಾಧನೆಗಳನ್ನು ಎತ್ತಿ ಹಿಡಿಯುವ ಆಶಯವಿರುತ್ತದೆ. ಈ ದಿಕ್ಕಿನಲ್ಲಿ, ಇಲ್ಲಿನ ಬರಹಗಾರರನ್ನೂ, ಅವರ ಕೃತಿಗಳನ್ನೂ ಜನರ ಮುಂದಿಡುವ 'ನಮ್ಮ ಬರಹಗಾರರು' ಕಾರ್ಯಕ್ರಮ, ಕವಿಗೋಷ್ಠಿ, ಕನ್ನಡ ಕಲಿಯಲು ಮನೆಯಿಂದ ಹಿಡಿದು ಕಾಲೇಜಿನ ಮಟ್ಟದವರೆಗೂ ಇರುವ ಅವಕಾಶಗಳು, ಹಿರಿಯ ಸಾಹಿತಿಗಳ ಸ್ಮರಣೆ, ಇಲ್ಲಿನ ಬರಹಗಾರರ ಪುಸ್ತಕಗಳನ್ನು ಕೊಳ್ಳಲು ಅನುಕೂಲವಾದ ಒಂದು ಪುಸ್ತಕ ಭಂಡಾರ, ಇಲ್ಲಿನ ಕಲಾವಿದರಿಂದಲೇ ತಯಾರಾದ ಉತ್ತಮ ನಾಟಕ, ಭಾವಗೀತೆ ಮುಂತಾದ ಮನರಂಜನೆಯ ಕಾರ್ಯಕ್ರಮಗಳು– ನಮ್ಮ ಜನರಿಗೆ ಪ್ರಿಯವಾಗಿವೆ. ನಮ್ಮ ಪುಸ್ತಕಗಳಲ್ಲಿ ಬರೆಯುವ ಎಷ್ಟೋ ಮಂದಿ ಇಲ್ಲಿನ ಲೇಖಕರು ಇದೇ ತಮ್ಮ ಮೊಟ್ಟಮೊದಲ ಲೇಖನ ಎಂದು ಹಿಗ್ಗಿದ್ದಾರೆ. ರಂಗಕ್ಕೆ ಅದೊಂದು ತೃಪ್ತಿ.

ಕನ್ನಡ ಸಾಹಿತ್ಯ ರಂಗ ಒಂದು ವಿಶಿಷ್ಟ ಸಂಸ್ಥೆ. ಅದಕ್ಕೆ ಒಂದು ನಿರ್ದಿಷ್ಟವಾದ ಗುರಿಯಿದೆ, ಕಾರ್ಯಕ್ಷೇತ್ರವಿದೆ. ಸಾಹಿತ್ಯಿಕ ಮೌಲ್ಯವಿಲ್ಲದ ಕಾರ್ಯಕ್ರಮಗಳಲ್ಲಿ ಅದಕ್ಕೆ ಆಸಕ್ತಿಯಿಲ್ಲ. ಅದರ ಕಾರ್ಯಸಾಧನೆಗೆ ಸಾಹಿತ್ಯದಲ್ಲಿ ಒಲವುಳ್ಳ ಕನ್ನಡಿಗರೆಲ್ಲರ ಬೆಂಬಲ, ಪ್ರೋತ್ಸಾಹ, ಸಹಾಯ ಅಗತ್ಯ. ಅದು ಇದುವರೆಗೆ ಮಾಡಿರುವ ಕೆಲಸ ಅದರ ಬಗ್ಗೆ ನಿಮ್ಮಲ್ಲಿ ಭರವಸೆ ಮೂಡಿಸುವುದೆಂದು ನಂಬಿದ್ದೇವೆ. ಅದು ಒಂದು ಲಾಭೋದ್ದೇಶವಿಲ್ಲದ ಸಂಸ್ಥೆ (Non-profit organization). ನಮ್ಮಲ್ಲಿ ವಿಶ್ವಾಸ ತೋರಿ ನಮ್ಮ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಧನ ಸಹಾಯ ಮಾಡಿ ನಮ್ಮನ್ನು ಪ್ರೋತ್ಸಾಹಿಸಿರುವ ಎಲ್ಲ ಸಹೃದಯರಿಗೂ ರಂಗದ ಅನಂತ ವಂದನೆಗಳು.

ನಮ್ಮ ಸಮ್ಮೇಳನಗಳನ್ನು ನಡೆಸುವಲ್ಲಿ ಹಲವಾರು ಸ್ಥಳೀಯ ಕನ್ನಡ ಕೂಟಗಳು ನಮ್ಮೊಂದಿಗೆ ಸಹಕರಿಸಿವೆ, ನಮ್ಮ ಸಹಪ್ರಾಯೋಜಕರಾಗಿ ನೆರವಿತ್ತಿವೆ. ತ್ರಿವೇಣಿ, ದಕ್ಷಿಣ ಕ್ಯಾಲಿಫೋರ್ನಿಯಾದ ಕನ್ನಡ ಸಾಂಸ್ಕೃತಿಕ ಸಂಘ, ಅಂಜಲಿ, ಸಾನ್ ಡಿಯೇಗೋದ

ಕಸ್ತೂರಿ, ಇಲಿನಾಯ್ ರಾಜ್ಯದ ವಿದ್ಯಾರಣ್ಯ– ಈ ಎಲ್ಲ ಸಂಸ್ಥೆಗಳಿಗೂ ನಮ್ಮ ಧನ್ಯವಾದಗಳು. ಈಗ ನಾಲ್ಕನೆಯ ಸಮ್ಮೇಳನ ಅಮೆರಿಕದ ರಾಜಧಾನಿ ವಾಷಿಂಗ್ಟನ್ ಪ್ರದೇಶದ ಕಾವೇರಿಯ ಸಹಯೋಗದಲ್ಲಿ ನಡೆಯುತ್ತಿರುವುದು ಒಂದು ಸಂತಸದ ಸಂಗತಿ.

ನಮ್ಮ ಪುಸ್ತಕ ಪ್ರಕಟಣೆಯ ಕಾರ್ಯದಲ್ಲಿ ಅತ್ಯಂತ ವಿಶ್ವಾಸದಿಂದ ಮುತುವರ್ಜಿಯಿಂದ ನಮ್ಮೊಂದಿಗೆ ಸಹಕರಿಸಿರುವ ಬೆಂಗಳೂರಿನ ಅಭಿನವ ಸಂಸ್ಥೆಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮ ಎರಡನೆಯ ಪುಸ್ತಕ 'ಆಚೀಚೆಯ ಕತೆಗಳು' ಪ್ರಕಟಣೆಯಿಂದ ಮೊದಲಾದ ನಮ್ಮ ಸಹೋದ್ಯಮ ಹೀಗೆಯೇ ಬಹು ಕಾಲ ಸಾರ್ಥಕವಾಗಿ ಮುಂದುವರೆಯಲೆಂದು ಹಾರೈಸುತ್ತೇವೆ.

ನಮ್ಮ ರಂಗದ ಯೋಜನೆಗಳನ್ನು ಕನ್ನಡ ಜನಕ್ಕೆ ತಿಳಿಸುವುದರಲ್ಲಿ ನಮಗೆ thatskannada.com ಅಂತರ್ಜಾಲ ತಾಣದ ಎಸ್. ಕೆ. ಶ್ಯಾಮಸುಂದರ ಬಹು ಕಾಲದಿಂದಲೂ ಬೆಂಬಲ ನೀಡಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ನಮ್ಮ ಹಿಂದಿನ ಪುಸ್ತಕಗಳಂತೆಯೇ ಇದೂ ಕನ್ನಡಿಗರ ಪ್ರೀತಿ ಗಳಿಸುವುದೆಂದು ನಂಬಿದ್ದೇವೆ.

**– ಎಚ್. ವೈ. ರಾಜಗೋಪಾಲ್, ಕಾರ್ಯಕಾರಿ ಸಮಿತಿಯ ಅಧ್ಯಕ್ಷ**

**– ಎಚ್. ಕೆ. ಚಂದ್ರಶೇಖರ್, ಆಡಳಿತ ಮಂಡಲಿಯ ಅಧ್ಯಕ್ಷ**

## ಅನುಬಂಧ – ೩
## ಕನ್ನಡ ಸಾಹಿತ್ಯ ರಂಗದ ಪ್ರಕಟಣೆಗಳ ಬಗ್ಗೆ ಕೆಲವು ಅಭಿಪ್ರಾಯಗಳು

### ೧. ನಗೆಗನ್ನಡಂ ಗೆಲ್ಗೆ! (೨೦೦೭)

**ಸಂಪಾದಕರು: ಎಚ್. ಕೆ ನಂಜಂಡಸ್ವಾಮಿ ಮತ್ತು ಎಚ್. ವೈ. ರಾಜಗೋಪಾಲ್**

ಈ ನಾಲ್ಕು ದಿನಗಳೂ...'ನಗೆಗನ್ನಡಂ ಗೆಲ್ಗೆ!' ಓದುವುದರಲ್ಲೇ ಕಳೆದುಹೋಯಿತು. ಅನೇಕ ಮುಖ್ಯವಾಗಿದ್ದ ಕೆಲಸಗಳೆಲ್ಲ ಹಾಳಾಗಿ ಹೋದವು. ನಿಮಗೆ ನಾನು ಕೃತಜ್ಞನಾಗಿರಬೇಕೊ ಬೇಡವೋ ಎಂಬ ಸ್ಥಿತಿಗೆ ನಾನು ಬಂದಿದ್ದೇನೆ....ಒಟ್ಟಿನಲ್ಲಿ ಒಂದು ಸಾಹಿತ್ಯಕ ಚರಿತ್ರೆ ಮತ್ತು ಸಾಹಿತ್ಯದ ಹಾಸ್ಯ ಸಂಕಲನ ಎರಡೂ ಒಂದೆಡೆ ಸೇರಿ ಒಂದು ರಮ್ಯ ಲೋಕವನ್ನು ಪ್ರಕಟಿಸಿಬಿಟ್ಟಿದ್ದೀರಿ. ಇದರಲ್ಲಿ ಲೇಖಕರ ಸಾಹಿತ್ಯದ ರಸಪ್ರಜ್ಞೆ ನಿರಂತರವಾಗಿ ಪ್ರಕಟಗೊಂಡಿದೆ. ನನಗೆ ಎಪ್ಪತ್ತು ವರ್ಷದ ಹಿಂದಿನ ಮೈಸೂರು ನಗರ ಮತ್ತು ಮಹಾರಾಜ ಕಾಲೇಜು ನೆನಪಿಗೆ ಬಂದವು. ಜನರು ಮರೆತಿದ್ದ ಕೇಫನ ಬಗೆಗೆ ತೋರಿಸುವ ಪ್ರೇಮ ಅಪೂರ್ವವಾದುದು. ರಾಶಿ, ನಾಕ, ಜಿಪಿ, ಬೀಚಿ, ಗೊರೂರು, ನಾಡಿಗೇರ, ವೈಯೆನ್ಕೆ, ಅರಾಸೆ, ಶ್ರೀರಂಗ ಇಂಥವರಲ್ಲದೆ ರಂಗಮಂಚದ ಮೇಲೆ ಮಿರುಗಿದ ಹಲವಾರು ಹಾಸ್ಯಗಾರರು ಇದ್ದಾರೆ...ಈ ಬೃಹತ್ ಸಂಕಲನ ಕನ್ನಡ ಸಾಹಿತ್ಯದಲ್ಲಿ ಒಂದು ಪ್ರಮುಖ ರೆಕಾರ್ಡ್ ಆಗಿರುತ್ತದೆ ಸದಾಕಾಲ. ಇದನ್ನು ಸಂಪಾದಿಸಿದ ನನ್ನ ಯುವ ಮಿತ್ರರಿಗೆ ನನ್ನ ಅನಂತ ನಮಸ್ಕಾರಗಳನ್ನು ತಿಳಿಸಿ. ಅಭಿನವಕ್ಕೂ ನನ್ನ ಅಭಿನಂದನೆಗಳು.

**–ಪ್ರೊ. ಜಿ. ವೆಂಕಟಸುಬ್ಬಯ್ಯ,**
ಕನ್ನಡದ ಹಿರಿಯ ಸಾಹಿತಿ
('ಅಭಿನವ'ದ ಶ್ರೀ ರವಿಕುಮಾರ್ ಅವರಿಗೆ ಬರೆದ ಪತ್ರದಿಂದ)

ಕತೆ, ಕವಿತೆ ಮತ್ತು ಕಾದಂಬರಿಗಳಿಗೆ ಅತಿಯಾದ ಮಹತ್ವಕೊಟ್ಟು, ಉಳಿದ ಪ್ರಕಾರಗಳನ್ನು ನಿರ್ಲಕ್ಷಿಸಿರುವ ಕರ್ನಾಟಕದ ನಮಗೆ ಬುದ್ಧಿಕಲಿಸುವಂತೆ, ಈ ಕೃತಿಯು ಪ್ರಕಟವಾಗಿದೆ....ಕನ್ನಡದ ಹಾಸ್ಯ ಸಾಹಿತ್ಯವನ್ನು ಬೆಳೆಸಿದ ಮಹನೀಯರ ಸಾಧನೆಗಳನ್ನು

ಬಹುಮಟ್ಟಿಗೆ ಮೆಚ್ಚಿಗೆಯಿಂದ ಅಪರೂಪಕ್ಕೆ ವಿಮರ್ಶಾತ್ಮಕವಾಗಿ ನೋಡಿರುವ ಲೇಖನಗಳು ಈ ಪುಸ್ತಕದ ಮಹತ್ವವನ್ನು ಹೆಚ್ಚಿಸಿವೆ. ಕೈಲಾಸಂ, ರಾಜರತ್ನಂ, ರಾಶಿ, ಬೀ.ಜಿ.ಎಲ್.ಸ್ವಾಮಿ, ಅ.ರಾ.ಸೇ. ಅವರಂತಹ ಹಿರಿಯರಿಂದ ಮೊದಲಾಗಿ ದುಂಡಿರಾಜ್ ಅವರವರೆಗೆ ಈ ಲೇಖನಗಳ ಹರಹಿದೆ. ಕರಾವಳಿ, ಉತ್ತರ ಕರ್ನಾಟಕ, ಜಾನಪದ ಮುಂತಾದವಕ್ಕೆ ವಿಶಿಷ್ಟವಾದ ಹಾಸ್ಯ–ವಿನೋದಗಳ ಸಮೀಕ್ಷೆಯೂ ಇಲ್ಲಿ ನಡೆದಿದೆ. ಇದು ಉಪಯುಕ್ತವಾದ, ಸಂತೋಷ ಕೊಡುವ ಸಂಪುಟ. ನಗೆಗನ್ನಡವು ಇಲ್ಲಿ ಗೆದ್ದಿದೆ.

**–ಪ್ರೊ. ಎಚ್.ಎಸ್. ರಾಘವೇಂದ್ರ ರಾವ್**
ಸಾಹಿತಿ ಮತ್ತು ವಿಮರ್ಶಕರು
('ನಗೆಗನ್ನಡಂ ಗೆಲ್ಗೆ!'ಯ ಬೆನ್ನುಡಿಯಿಂದ)

...ಈ ಕೃತಿಯಲ್ಲಿ ನಗೆಗನ್ನಡ ನಲಿದಿದೆ, ವಿಜೃಂಭಿಸಿದೆ. ಕನ್ನಡದ ಹಾಸ್ಯಾಸಕ್ತರೆಲ್ಲರೂ ಅಭಿಮಾನದಿಂದ ತಮ್ಮ ಮೆಚ್ಚಿನ ಹಿರಿ ಕಿರಿಯ ಹಾಸ್ಯಸಾಹಿತಿಗಳನ್ನು ಓದಿ ಅವರ ಕುರಿತು ಪ್ರಬುದ್ಧ ಪರಿಚಯವನ್ನು ಮಾಡಿಕೊಂಡು ಕೃತಾರ್ಥ ಭಾವ ತಾಳುವಂತೆ ಪುಸ್ತಕ ಹೊರಬಂದಿದೆ... ಹೊರನಾಡ ಬಂಧುಗಳ ಕನ್ನಡ ಪ್ರೇಮ ಅನುಕರಣೀಯ ವಾದುದು

**–ಭುವನೇಶ್ವರಿ ಹೆಗಡೆ**
ಹೆಸರಾಂತ ಹಾಸ್ಯ ಲೇಖಕಿ
(ವಾರ್ತಾ ಭಾರತಿ ಪತ್ರಿಕೆಯ ಅಂಕಣದಲ್ಲಿ)

...ಮುಂದಿನ ಬರಹಗಾರರು ಈ ಪುಸ್ತಕವನ್ನು ಒಂದು ಆಕರ ಗ್ರಂಥವಾಗಿ ಉಪಯೋಗಿಸುವುದರಲ್ಲಿ ಆಶ್ಚರ್ಯವೇನಿಲ್ಲ...ಇಷ್ಟುದೂರದಲ್ಲಿದ್ದರೂ ತಮ್ಮ ಕನ್ನಡ ಪ್ರೇಮವನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದಿರುವುದಕ್ಕಾಗಿ, ಅಪರಂಜಿ ಇಲ್ಲಿನ ಅನೇಕ ಲೇಖಕರನ್ನು ಅಭಿನಂದಿಸುತ್ತಾಳೆ.

**–ಶಿವು**
ಅಪರಂಜಿ ಮಾಸಪತ್ರಿಕೆಯ ಸಂಪಾದಕರು

'ನಗೆಗನ್ನಡಂ ಗೆಲ್ಗೆ!' ಹತ್ತಿರ ಹತ್ತಿರ ಐದುನೂರು ಪುಟಗಳ ಬೃಹತ್ ಗ್ರಂಥ. ಆಧುನಿಕ ಕನ್ನಡದಲ್ಲಿನ ವಿನೋದ ಸಾಹಿತ್ಯವನ್ನು ಕುರಿತು ಇಷ್ಟೊಂದು ಸಮಗ್ರತೆಯನ್ನು ಎಟುಕಿಸಿಕೊಂಡ ಇನ್ನೊಂದು ಪುಸ್ತಕ ಕನ್ನಡದಲ್ಲಿ ಈವರೆಗೆ ಬಂದೇ ಇಲ್ಲ. 'ನಗೆನಾಡ ಸಿರಿವಂತರು' ಹಾಗೂ 'ಹೊರನಾಡ ನಗೆಹೊನಲು' ಎಂಬ ಎರಡು ಭಾಗಗಳಲ್ಲಿ ಇಲ್ಲಿನ ಲೇಖನಗಳು ಸಂಕಲಿತವಾಗಿವೆ. ಮೊದಲ ಭಾಗ ಅಧುನಿಕ ಕನ್ನಡದ

ನಗೆಬರಹಗಾರರಾದ ಕೈಲಾಸಂ, ರಾಶಿ, ಕಸ್ತೂರಿ, ರಾಜರತ್ನಂ – ಹೀಗೆ ಸುಮಾರು ಇಪ್ಪತ್ತೊಂದು ಮಂದಿ ಲೇಖಕರನ್ನೂ ಅವರ ಕೃತಿಗಳನ್ನೂ ಸಾಕಷ್ಟು ವಿವರವಾಗಿ ಪರಿಚಯಿಸುತ್ತದೆ. ದೂರದ ಅಮೆರಿಕೆಯಲ್ಲಿದ್ದುಕೊಂಡು ಕರ್ನಾಟಕದ ಲೇಖಕರನ್ನೂ ಅವರ ಕೃತಿಗಳನ್ನೂ ಸಮಗ್ರವಾಗಿ ಪರಿಚಯಿಸುವುದು ಸುಲಭದ ಮಾತೇನಲ್ಲ. ಆದಾಗ್ಯೂ, ಎಲ್ಲ ಮಿತಿಗಳ ನಡುವೆ ಇಲ್ಲಿನ ಲೇಖನಗಳು ತಕ್ಕಷ್ಟು ಸಮಗ್ರವಾಗಿರುವಂತೆ ನೋಡಿಕೊಂಡಿರುವುದು ಎದ್ದುಕಾಣುವಂತಿದೆ. ತಮ್ಮ ಅನ್ನಿಸಿಕೆ ಅಭಿಪ್ರಾಯಗಳಿಗೆ ಸೂಕ್ತ ಆಧಾರಗಳನ್ನು ಒದಗಿಸಿ, ಲೇಖನಗಳಿಗೆ ಅಧಿಕೃತತೆ ಪ್ರಾಪ್ತವಾಗುವಂತೆಯೂ ಪ್ರಯತ್ನಿಸಲಾಗಿದೆ. ಇಷ್ಟಾದರೂ ಇಲ್ಲಿನ ಬರಹಗಳು ಕೇವಲ ಒಣ ಮಾಹಿತಿಗಳ ಸಂಗ್ರಹವಾಗಿರದೆ, ಸ್ವಾರಸ್ಯಪೂರ್ಣವಾಗಿದ್ದು ಅತ್ಯಂತ ವಾಚನೀಯವಾಗಿವೆ. ಮೊದಲ ಭಾಗದಲ್ಲಿರುವ ಲೇಖನಗಳಿಂದಾಗಿ ಈ ಗ್ರಂಥಕ್ಕೆ ಒಂದು ಆಕರ ಗ್ರಂಥದ ಮೌಲ್ಯ ಪ್ರಾಪ್ತವಾಗಿದೆ – ಎನ್ನಿಸಿದರೆ ಅತ್ಯುಕ್ತಿಯಲ್ಲ.

**–ಎಸ್. ಶ್ರೀನಿವಾಸ ಉಡುಪ**
ನಿವೃತ್ತ ಇಂಗ್ಲಿಷ್ ಪ್ರಾಧ್ಯಾಪಕರು

'ನಗೆಗನ್ನಡಂ ಗೆಲ್ಗೆ!'ಯನ್ನು ಓದಿದಾಗ, ಇದು ಎಷ್ಟು ಒಳ್ಳೆಯ ಸಾರ್ಥಕ ಶ್ರಮ ಎನಿಸಿತು. ನಗೆ ಬಳ್ಳಿಯ ಬೇರಿನಿಂದ ಹಿಡಿದು ಹಣ್ಣಿನ ತನಕ ನಮಗೆಲ್ಲಾ ಕನ್ನಡ ಹಾಸ್ಯದ ರುಚಿ ಉಣಬಡಿಸಿಬಿಟ್ಟಿರುವಿರಿ. ನಾವು ನಮ್ಮದೇ ಮಣ್ಣಿನಲ್ಲಿ ಬಿತ್ತದೇ ಹೋದದ್ದನ್ನು ನೀವು ಪರನಾಡಿನಲ್ಲಿ ನೆಟ್ಟು ಪೋಷಿಸಿದ್ದೀರಿ. ನಿಮಗೂ ನಗೆಗನ್ನಡಂ ಗೆಲ್ಗೆಯಲ್ಲಿ ಪಾಲ್ಗೊಂಡವರೆಲ್ಲರಿಗೂ ನಮ್ಮ ಧನ್ಯವಾದಗಳು.

**–ನೀಳಾದೇವಿ**
ಹೆಸರಾಂತ ಕನ್ನಡದ ಲೇಖಕಿ

...ಇದು ಉತ್ಕೃಷ್ಟವಾದ ಸಂಪುಟ. ಕರ್ನಾಟಕದಲ್ಲೇ ನಡೆಯದ ಕೆಲಸವನ್ನು ಅಮೆರಿಕದ ಸಾಹಿತ್ಯರಂಗದ ಗೆಳೆಯರು ಸಾಧಿಸಿದ್ದಾರೆ.

**–ಎಂ.ವಿ.ವಿ.ಮೂರ್ತಿ**
ವಿ.ಸೀ. ಸಂಪದ

...ಇವುಗಳೆಲ್ಲದರ ತಲೆಗೂ ಗರಿಮೂಡಿಸುವಂತಿದೆ ಯು.ಎಸ್.ಎ. ಯ ಕನ್ನಡ

ಸಾಹಿತ್ಯ ರಂಗದವರು ಬೆಂಗಳೂರಿನ ಅಭಿನವ ಪ್ರಕಾಶನದೊಂದಿಗೆ ಹೊರತಂದಿರುವ 'ನಗೆಗನ್ನಡಂ ಗೆಲ್ಗೆ!' ಬೃಹದ್‌ಗ್ರಂಥ. ಇದುವರೆಗೆ ಕರ್ನಾಟಕದಲ್ಲೇ ನಡೆಯದ ಒಂದು ಮಹತ್ತರ ಕೆಲಸವನ್ನು ಎಚ್.ಕೆ. ನಂಜುಂಡಸ್ವಾಮಿ ಮತ್ತು ಎಚ್.ವೈ. ರಾಜಗೋಪಾಲ್ ಇವರು ತಮ್ಮ ಗೆಳೆಯರ ಜೊತೆ ಸೇರಿ ಸಾಧಿಸಿ ತೋರಿಸಿದ್ದಾರೆ.

**–ಎಚ್.ಎಸ್.ಪಾರ್ವತಿ**

ಹೆಸರಾಂತ ಕನ್ನಡ ಲೇಖಕಿ

ಕೊನೆಯಲ್ಲಿ ಮತ್ತೊಮ್ಮೆ ನಾನು ಈವರೆಗೆ ಹೇಳಿದಂತಹ ಎಲ್ಲಾ ಅಂಶಗಳನ್ನು ಸ್ಪಷ್ಟಪಡಿಸುತ್ತಿದ್ದೇನೆ. ಈ 'ನಗೆಗನ್ನಡಂ ಗೆಲ್ಗೆ!' ಪುಸ್ತಕ, ಕನ್ನಡ ಹಾಸ್ಯ ಸಾಹಿತ್ಯದ ಆಕರ ಗ್ರಂಥ. ಕೇವಲ ಆಕರ ಗ್ರಂಥ ಮಾತ್ರವಲ್ಲ. ಈ ರೀತಿಯ ಕೃತಿ ಮೊಟ್ಟ ಮೊದಲನೆಯದಾಗಿರುವುದರಿಂದ, ಇದು ಆದ್ಯ ಆಕರ ಗ್ರಂಥ. ಇಂಥ ಮೌಲ್ಯಾತ್ಮಕ ಕೃತಿಯನ್ನು ಕೊಟ್ಟಂತಹ ಸಂಬಂಧಿಸಿದ ಎಲ್ಲರನ್ನು ನಾನು ಅಭಿನಂದಿಸುತ್ತೇನೆ.

**–ದೇಶಪಾಂಡೆ ಸುಬ್ಬರಾವ್**

ಸಾಹಿತಿ–ರಂಗಕರ್ಮಿ

...I did get the wonderful book four days ago... Many thanks and my congratulations. I have already read most of the book and my wife started reading it with much enthusiasm...

**-T.S. Satyan**

Renowned photo-journalist

The very expanse of the articles assures the discerning reader to have the most rewarding material to digest and enjoy and thus develop that pride which is his/her heritage that is almost defunct at the place of its birth...

**-Prof. S. Raghavendra Bhatta**

Professor of Kannada (Rtd.),

Sarada Vilas College, Mysore

## ೨. ಆಚೀಚೆಯ ಕಥೆಗಳು

## (ಕಡಲಾಚೆಯ ಕನ್ನಡ ಕಥಾಸಂಕಲನ)

ಪ್ರಧಾನ ಸಂಪಾದಕ: **ಗುರುಪ್ರಸಾದ್ ಕಾಗಿನೆಲೆ**

(ಪ್ರ) ಕನ್ನಡ ಸಾಹಿತ್ಯ ರಂಗ ಮತ್ತು ಅಭಿನವ, ೨೦೦೫, ೩೦೦ ಪುಟಗಳು

'ಆಚೀಚೆಯ ಕತೆಗಳು' ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ ಪ್ರಯೋಗವಾಗಿದೆ. ತಾಯಿ ನೆಲದಿಂದ ದೂರವಾದ–ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ– ಜಾಗದಲ್ಲಿ ಕುಳಿತು, ಕೇವಲ ತಮ್ಮ ಮಾತೃಭಾಷೆಯ ಪ್ರೀತಿಗಾಗಿ–'ಎಂದೆಂದಿಗೂ ಕನ್ನಡವಾಗಿರುವ' ಹಟದಲ್ಲಿ–ರಚಿಸಿದ ಈ ಕತೆಗಳು ಕನ್ನಡ ಕಥಾಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿವೆ...

**–ಯಶವಂತ ಚಿತ್ತಾಲ** (ಬೆನ್ನುಡಿಯಿಂದ)

ಈ ಕೃತಿಯ ಮಾಲೆಯಲ್ಲಿ ಸೇರಿರುವ ಇಪ್ಪತ್ತೆರಡು ಹೊಚ್ಚಹೊಸ ಕತೆಗಳಲ್ಲಿ ಪ್ರತಿಯೊಂದು ಹೂವೂ ಬೇರೆ–ಬೇರೆ ರೀತಿಯ ಬರವಣಿಗೆಯನ್ನು ಹೊಂದಿವೆ. ಓದಿ ಮುಗಿಸಿದ ಮೇಲೆ ಇಪ್ಪತ್ತೆರಡು ವಿವಿಧ ಮನಸ್ಸಿನೊಂದಿಗೆ ಒಡನಾಡಿದ, ಅಲ್ಲಿಯ ಪಾತ್ರಗಳೊಂದಿಗೆ ಮೌನ ಸಂವಾದ ನಡೆಸಿದ ಖುಷಿಯ ಅನುಭವವಾಗುತ್ತದೆ...

ತುಂಬಾ ವಿಸ್ತಾರವಾದ ಬದುಕಿನ ಕ್ರಮ, ಸಂಸ್ಕೃತಿಯ ಸಂಘರ್ಷ, ಆಸೆ, ನಿರಾಸೆ, ಪ್ರೇಮ, ಕಾಮ, ದುಃಖ, ಸಂಕಷ್ಟ, ಸುಖಭೋಗ, ಹೊಂದಾಣಿಕೆ ಇವುಗಳೆಲ್ಲ ಜೀವಿಯೊಬ್ಬನ ಮನಸ್ಥಿತಿಯನ್ನು ಹೇಗೆ ರೂಢಿಸುತ್ತವೆ ಹಾಗೂ ನಮ್ಮಲ್ಲಿ ಬೇರೆ ಬೇರೆ ದೃಷ್ಟಿಕೋನಗಳು ನಿರ್ಮಾಣಗೊಳ್ಳುವ ಹಂತದಲ್ಲಿ ಈ ಕತೆಗಳು ತನ್ನದೇ ಆದ ಒಂದು ಪ್ರಾಮಾಣಿಕ ಹಸಿತನ ಮತ್ತು ಬಿಗಿಯಲ್ಲಿ ಓದುಗನ ಮನಸ್ಸನ್ನು ಹೇಗೆ ಪಕ್ವಗೊಳ್ಳುತ್ತಾ ಸಾಗುತ್ತವೆ ಎಂಬ ಬಗ್ಗೆ ಅಚ್ಚರಿ ಎನಿಸುತ್ತದೆ. ಆ ನಿಟ್ಟಿನಲ್ಲಿ ಇಲ್ಲಿಯ ಪ್ರತಿ ಕತೆಯೂ ಒಂದಿಲ್ಲೊಂದು ಕಾರಣದಿಂದ ಮಹತ್ವದ್ದೇ...

**–ಸುನಂದಾ ಪ್ರಕಾಶ ಕಡಮೆ,** 'ಗಾಂಧಿ ಬಜಾರ್' ಪತ್ರಿಕೆ.. ಜೂನ್ ೨೦೦೬

..ಇಲ್ಲಿನ ಕಥೆಗಳಲ್ಲಿ ಸುಮಾರು ಹತ್ತಕ್ಕೂ ಮೀರಿ ಒಳ್ಳೆಯ ಕಥೆಗಳಿವೆ ಎಂಬ ಅಂಶವೇ ಒಂದು ಆಪ್ತತೆಯನ್ನು ಸಂಕಲನದಮಟ್ಟಿಗೆ ಒದಗಿಸುವಂತದು. ಬಿಟ್ಟುಬಂದ ದೇಶದ ಅನುಭವಗಳ ಒಟ್ಟೊಟ್ಟಿಗೆ ಸೇರಿದ ದೇಶದಲ್ಲಿ ಸೌಭಾಗ್ಯವಾಗಿ ಬಂದ ಅನುಭವಗಳ

ಹಿನ್ನೆಲೆಯಲ್ಲಿ ಕಥೆಗಳೆಲ್ಲ ಬಹುತೇಕ ಅನನ್ಯತೆ ಪಡೆಯುತ್ತವೆ.

**–ಮಹಾಬಲಮೂರ್ತಿ ಕೂಡ್ಲೆಕೆರೆ.** ವಿಜಯ ಕರ್ನಾಟಕ, ಆಗಸ್ಟ್ ೨೦, ೨೦೦೬

ಸಂಸ್ಕೃತಿಯ ಪಲ್ಲಟಗಳು, ವಲಸೆಗಾರರ ದ್ವಂದ್ವಗಳು, ಆಧುನಿಕ ಬದುಕಿನ ವೈಪರೀತ್ಯಗಳು, ಜಾಗತಿಕ ಪರಿಸರದಲ್ಲಿ ನೆಲೆಸಿ ಕನ್ನಡತನ ಉಳಿಸಿಕೊಳ್ಳುವ ಹಂಬಲ– ಇವೆಲ್ಲ ಕಥೆಗಳಾಗಿವೆ...

**–ರಘುನಾಥ ಚ.ಹ.**, ಸುಧಾ..

**೩. ಕುವೆಂಪು ಸಾಹಿತ್ಯ ಸಮೀಕ್ಷೆ**

**ಪ್ರಧಾನ ಸಂಪಾದಕ: ಆಹಿತಾನಲ**

ಪ್ರ: ವಸಂತ ಪ್ರಕಾಶನ, ಬೆಂಗಳೂರು. ೨೦೦೪, ೩೫೩ ಪುಟಗಳು

'....ಕುವೆಂಪು ಸಾಹಿತ್ಯ ಸಮೀಕ್ಷೆ' ಕುವೆಂಪು ಸಾಹಿತ್ಯದ ಹಲವು ಮುಖಗಳನ್ನು ಕುರಿತು ಕಡಲಾಚೆಯ ಕನ್ನಡಿಗರು ಬರೆದ ಲೇಖನಗಳ ಒಂದು ಸಂಪುಟ.... ಅಮೆರಿಕದಲ್ಲಿದ್ದೂ, ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅವರಿಗೆ ಅಗತ್ಯವಾಗಿದೆ.... ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಹೀಗೆ... ತಮ್ಮ ಕನ್ನಡತನವನ್ನು ...ಉಳಿಸಿಕೊಂಡಿದ್ದರ ಸಂಕೇತವೇ ಈ 'ಕುವೆಂಪು ಸಾಹಿತ್ಯ ಸಮೀಕ್ಷೆ' ... ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತು ಒಂದು ಒಳ್ಳೆಯ ಸಮೀಕ್ಷೆ ಇದು....

**–ಜಿ.ಎಸ್. ಶಿವರುದ್ರಪ್ಪ**

....ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ. ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಮ್ಮಿಯಿಲ್ಲದ ಲೇಖನಗಳು ಇಲ್ಲಿ ಹೊರಬಂದಿದೆ ಎನ್ನಲು ಹೆಮ್ಮೆಯಾಗುತ್ತದೆ.

**–ಪ್ರಭುಶಂಕರ**

....'ಕುವೆಂಪು ಸಾಹಿತ್ಯ ಸಮೀಕ್ಷೆ'ಯಲ್ಲಿ ಅಧ್ಯಯನಪೂರ್ಣ ಲೇಖನಗಳನ್ನು ಬರೆದಿರುವ ಅಮೆರಿಕದ ಲೇಖಕರ ಬಗ್ಗೆ ಕರ್ನಾಟಕದ ಕನ್ನಡಿಗರೂ ಅಭಿಮಾನ ಪಡಬೇಕು. ಕುವೆಂಪು ಸಾಹಿತ್ಯದ ವಿವಿಧ ಮುಖಗಳನ್ನು ಆಸಕ್ತಿಯಿಂದ ಚರ್ಚಿಸಿದ ಎಲ್ಲ ಲೇಖಕ ಲೇಖಕಿಯರೂ ತಾವು ಆರಿಸಿಕೊಂಡ ವಸ್ತುವಿನ ಬಗ್ಗೆ ಸಮರ್ಥವೆನಿಸುವ ಗ್ರಹಿಕೆಯನ್ನು ವ್ಯಕ್ತಪಡಿಸಿದ್ದಾರೆ....

**– ವ್ಯಾಸರಾಯ ಬಲ್ಲಾಳ**

....'ಕುವೆಂಪು ಸಾಹಿತ್ಯ ಸಮೀಕ್ಷೆ' ಕೃತಿಯು ಸುಂದರವಾಗಿ ರೂಪುಗೊಂಡಿದೆ. ಕನ್ನಡದ ಹಿರಿಯ ಕವಿಗೆ ಸಾಗರದಾಚೆಯ ಕನ್ನಡಿಗರಯೋಗ್ಯ ಉಡುಗೊರೆ ಇದು. ಅದಕ್ಕಾಗಿ ಸಂಪಾದಕ ಮಂಡಳಿ ಮತ್ತು ಲೇಖಕರಿಗೆ ಹಾರ್ದಿಕ ಅಭಿನಂದನೆಗಳು

**–ಟಿ. ವಸಂತಕುಮಾರ(ಮುಂಬಯಿ ವಿ.ವಿ.ದ ಕನ್ನಡ ವಿಭಾಗದ ಮುಖ್ಯಸ್ಥರು)**

ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರು ಕಳೆದ ಮೂರ್ನಾಲ್ಕು ದಶಕಗಳಲ್ಲಿ ಅನೇಕ ಕನ್ನಡ ಕೂಟಗಳನ್ನು ಸ್ಥಾಪಿಸಿಕೊಂಡಿದ್ದಾರೆ....ಆದರೆ, ಕನ್ನಡ ಸಾಹಿತ್ಯಕ್ಕೆಂದೇ ಮೀಸಲಾದ ಸಂಘಟನೆ–ಕನ್ನಡ ಸಾಹಿತ್ಯ ರಂಗ...ಅಮೆರಿಕದಲ್ಲಿ ಮನೆಮಾಡಿ, ಇಂಗ್ಲಿಷ್ ಪರಿಸರದಲ್ಲಿ ಕನ್ನಡವನ್ನು ನೆನಪು ಮಾಡಿಕೊಳ್ಳುವುದೇ ದೊಡ್ಡ ಸಂಗತಿ. ಅದರಲ್ಲೂ ಕುವೆಂಪು ಕುರಿತು ೩೫೪ ಪುಟಗಳ ಬೃಹತ್ ಗ್ರಂಥ ಹೊರತರುವುದಿದೆಯಲ್ಲ ಅದು ನಿಜಕ್ಕೂ ಅಭಿನಂದನಾ ವಿಷಯ. ಈ ಪುಸ್ತಕದಿಂದ ನಾವು ಕಲಿಯುವಂಥದು ಸಾಕಷ್ಟಿದೆ. ಅಮೆರಿಕನ್ನಡಿಗರ ಪ್ರೀತಿಗೆ ಸಲಾಮು

**–ವಿಶ್ವೇಶ್ವರ ಭಟ್(ವಿಜಯ ಕರ್ನಾಟಕ ಸಂಪಾದಕೀಯ)**

ಕರ್ನಾಟದ ವಿವಿಧ ಭಾಗಗಳಿಂದ ಕನ್ನಡಿಗರು ಉದ್ಯೋಗಾರ್ಥಿಗಳಾಗಿ ವಿದೇಶಕ್ಕೆ ಹೋಗಿದ್ದಾರೆ. ಅದನ್ನು ಪ್ರತಿಭಾ ಪಲಾಯನ, ಡಾಲರ್ ಪೌಂಡ್ ಗಳಿಕೆಯ ಆಸೆ ಅಂತ ಟೀಕಿಸುವವರಿದ್ದಾರೆ. ಭಾಷೆಗಳ ಅಭಿಮಾನದಿಂದ ವಿಮುಖರಾಗಿದ್ದಾರೆಂದು ದೂರುವವರಿದ್ದಾರೆ! ಈ ಅನಿಸಿಕೆ ಸರಿಯಲ್ಲವೆಂದು ಕುವೆಂಪು ಜನ್ಮಶತಾಬ್ದಿ ಸಂದರ್ಭದಲ್ಲಿ ಅಮೆರಿಕನ್ನಡಿಗರ 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಪುಸ್ತಕ ಸೂಚಿಸುತ್ತದೆ. ಅಮೆರಿಕನ್ನಡಿಗರ ಈ ಕಾರ್ಯ ಸ್ತುತ್ಯರ್ಹ. ನಮ್ಮ ಸಂಸ್ಕೃತಿ, ನಡೆ–ನುಡಿಗಳೆಲ್ಲವೂ ದೂರಾಯಿತೇನೋ ಅನ್ನುವಾಗಲೇ ಪರದೇಶದ ಪರಿಸರದಲ್ಲೂ'ಇಲ್ಲೂ ಇದೆ ತುಡಿಯುವ ಎದೆ– ಕನ್ನಡ ನಾಡಿಗೆ ನುಡಿಗೆ' ಎಂಬ ಮಾತನ್ನು ಸಫಲಗೊಳಿಸಿದ್ದಾರೆ.... ಆದರೆ ಇಂಥ ಸಂಗ್ರಹಯೋಗ್ಯ ಮೌಲಿಕವಾದ ಗ್ರಂಥಕ್ಕೆ ಕನ್ನಡ ನಾಡಿನಲ್ಲಿ ಪ್ರಚಾರ ಸಿಗದಿರುವುದು ಖೇದಕರ

**–ಎಚ್.ಜಿ.ಸೋಮಶೇಖರ ರಾವ್(ಪ್ರಜಾವಾಣಿ)**

....ಕುವೆಂಪು ಅವರನ್ನು ಕೇಳಿ, ಓದಿ ಮೆಚ್ಚಿಕೊಂಡು ಇರುವವರ ಹತ್ತಿರ ಕುವೆಂಪು ಬಗ್ಗೆ ನಾಲ್ಕು ಸಾಲು ಬರೆದುಕೊಡಿ ಅಂತ ಕೇಳಿದರೆ ಅವರು ಥಟ್ಟನೆ ಹುಷಾರಾಗುತ್ತಾರೆ ....ಅವರವರು ಕಂಡ ಕುವೆಂಪು ಆ ಲೇಖನಗಳಲ್ಲಿ ಹಣಕಿ ಹಾಕುತ್ತಾರೆ. ಹಾಗಾಗಿಲ್ಲ ಎನ್ನುವುದು 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಸಂಕಲನ  ಹೆಗ್ಗಳಿಕೆ.

**–ಜಾನಕಿ(ದಟ್ಸ್‌ಕನ್ನಡಅಂತರ್ಜಾಲ ಪತ್ರಿಕೆ)**

'...ಎಲ್ಲಿದ್ದರೆ ಏನ್, ಎಂತಿದ್ದರೆ ಏನ್, ನೀ ಮೆಟ್ಟಿದ ನೆಲ ಅದೆ ಕರ್ನಾಟಕ'–ಎಂಬ ಕುವೆಂಪು ಕವನದ ಸಾಲಿನ ಜೇನುನುಡಿಯನ್ನು ಸಾರ್ಥಕಗೊಳಿಸಿಕೊಂಡು, ತಾವಿದ್ದೂರನ್ನೇ ಕರ್ನಾಟಕವಾಗಿಸಿಕೊಂಡು, ಕನ್ನಡವನ್ನು ಉಸಿರಾಗಿಸಿಕೊಂಡು ಅಮೆರಿಕದಲ್ಲಿ ಅನಿವಾಸಿ ಕನ್ನಡಿಗರು ಜೀವನ ನಡೆಸುತ್ತಿದ್ದಾರೆ. ಕುವೆಂಪುರವರು ಕೈಗೊಂಡ ಸಾಹಿತ್ಯ ಕೃಷಿಯನ್ನು ಅವಲೋಕಿಸಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ, 'ಕುವೆಂಪು ಸಾಹಿತ್ಯ ಸಮೀಕ್ಷೆ ' ಎಂಬ ಒಂದು ಉತ್ತಮ ಗ್ರಂಥವನ್ನು ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ...

**–ಮೂಗಲು ಮಲ್ಲಿಕಾರ್ಜುನ ದಟ್ಸ್‌ಕನ್ನಡ ಅಂತರ್ಜಾಲ ಪತ್ರಿಕೆ**



೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ. ಬೆಂಗಳೂರು-೪೦

# ನಮ್ಮ ಪ್ರಕಟಣೆಗಳು

| | | |
|---|---|---|
| ಜಾಲತರಂಗಿಣಿ (ಅಂಕಣ ಬರಹ) ಮೈ.ಶ್ರೀ. ನಟರಾಜ | | 175/- |
| ಕನ್ನಡ ಕಾದಂಬರಿ ಲೋಕದಲ್ಲಿ... ಹೀಗೆ ಹಲವು ಮೈ.ಶ್ರೀ. ನಟರಾಜ | | 250/- |
| ಆಗಾಗ (ಪರಿಚಾರಿಕೆಯ ನಡುವಿನ ಮಾತು-ಬರಹ) ಚಿ.ಶ್ರೀನಿವಾಸರಾಜು | | 300/- |
| ನಾನು ಒಲಿದಂತೆ ಹಾಡುವೆ (ಪ್ರಬಂಧಗಳು) | ಚಂದ್ರಶೇಖರ ಆಲೂರು | 75/- |
| ಬರುವ ನಾಳೆಗಳಿಗೆ ರಾತ್ರಿಗಳೇ ಇರುವುದಿಲ್ಲ | ಸಿದ್ದು ದೇವರಮನಿ | 50/- |
| ಒಂದು ಮುಷ್ಠಿ ನಕ್ಷತ್ರ (ಕಥೆಗಳು) | ಕೋಡಿಬೆಟ್ಟು ರಾಜಲಕ್ಷ್ಮಿ | 50/- |
| ಸಾಹಿತಿಗಳ ಸ್ಮೃತಿ (ನೆನಪುಗಳು) | ಬೆಳಗೆರೆ ಕೃಷ್ಣಶಾಸ್ತ್ರಿ | 100/- |
| ಪ್ರತಿ ಸಂಸ್ಕೃತಿ (ವಿಮರ್ಶೆ) | ರಹಮತ್ ತರೀಕೆರೆ | 100/- |
| ಆ ಕ್ಷಣದ ಸತ್ಯ (ಪ್ರಬಂಧಗಳು) | ಚಂದ್ರಶೇಖರ ಆಲೂರು | 75/- |
| ನನ್ನ ರಸಯಾತ್ರೆ(ಆತ್ಮಕಥೆ) | ಮಲ್ಲಿಕಾರ್ಜುನ ಮನ್ಸೂರ್ | 50/- |
| ಮಬ್ಬಿನಹಾಗೆ ಕಣಿವೆಯಾಸಿ | ಎಚ್.ಎಸ್.ಶಿವಪ್ರಕಾಶ | 50/- |
| ಶತಮಾನದ ಕವಿ ಯೇಟ್ಸ್ | ಯು. ಆರ್. ಅನಂತಮೂರ್ತಿ | 75/- |
| ಯುವ ಕವಿಗೆ ಬರೆದ ಪತ್ರಗಳು (ರಿಲ್ಕೆ) | ಅನು: ಓ.ಎಲ್. ನಾಗಭೂಷಣಸ್ವಾಮಿ | 35/- |
| ಕರೆಯಿತೋ ಕಡಲತೀರ (ಕೇರಳಕಥನ) | ಜಿ. ಪಿ. ಬಸವರಾಜು | 75/- |
| ಗೆಲುವಿನ ಚಿಲುಮೆ ರಾಜರತ್ನಂ | ಸಂ: ಆಹಿತಾನಲ | 150/- |
| ಬೇಂದ್ರೆ ಕಾವ್ಯ (ವಿಮರ್ಶೆ) | ರಂ. ಶ್ರೀ. ಮುಗಳಿ | 75/- |
| ಬಟವಾಡೆಯಾಗದ ರಸೀತಿ | ಲಕ್ಕೂರು ಆನಂದ | 40/- |
| ಅಗ್ನಿದಿವ್ಯ (ಕಾವ್ಯ) | ಸಂಧ್ಯಾದೇವಿ | 30/- |
| ಕೊಸಿಮೊ (ಕಾದಂಬರಿ) ಇಟಾಲೊ ಕಾಲ್ವಿನೊ. | ಅನು: ಕೆ. ಪಿ. ಸುರೇಶ | 100/- |
| ಹೈದರಾಲಿ (ನಾಟಕ) | ಡಿ. ಎ. ಶಂಕರ್ | 40/- |
| ಬೆಳ್ಳೇಕೆರೆ ಹಳ್ಳಿಥೇಟರ್ (ಗ್ರಾಮೀಣ ರಂಗಭೂಮಿಯ ಆತ್ಮಕಥೆ) ಪ್ರಸಾದ್ ರಕ್ಷಿದಿ | | 100/- |
| ಸೋಮನಾಥಪುರ-ಷ ಶೆಟ್ಟರ್ (ಇಂಗ್ಲಿಷ್/ಕನ್ನಡ ಭಾಷೆಗಳಲ್ಲಿ) | 450/- ಸಾದಾ | 100/- |
| ಗಿರಿಜಾಕಲ್ಯಾಣ- (ನಾಟಕ) | ಬಿ ಸುರೇಶ | 50/- |
| ನನಗೆ ದೇವರ ಗೊಡವೆ ಕೂಡ ಬೇಡ (ಮಿರ್ಜಾ ಗಾಲಿಬ್ ಜೀವನ- ಕೃತಿಗಳು) | | 50/- |
| ನಿಮ್ಮ ಸಿಮ್ಮ3 (ಅಂಕಣ ಬರಹ) | ಸಿ.ಆರ್. ಸಿಂಹ | 100/- |
| ಕನ್ನಡದ ಗರಡಿಯಾಳು (ಜಿ.ಪಿ.ರಾಜರತ್ನಂಕುರಿತ ನೆನಪುಗಳು) ವಿವಿಧ ಲೇಖಕರು | | 100/- |
| ನಲ್ನುಡಿ ನಿಘಂಟು (ಕನ್ನಡ-ಕನ್ನಡ) | ಎಚ್. ಅಲ್ಲಿಸಾಬ್ | 175/- |
| ಮಾಲ್ಟಲೌರಿಡ್ಸ್‌ಬ್ರಿಗ್ಗನ ಟಿಪ್ಪಣಿ ಪುಸ್ತಕ-ರಿಲ್ಕೆ | (ಅನು:ಕಾದಂಬರಿ -ಕೆ. ವಿ.ತಿರುಮಲೇಶ್) | 100/- |
| ಮದುವೆಯ ಆಟಗಳು (ನಾಟಕ) | ಎಚ್.ಎಸ್.ಶಿವಪ್ರಕಾಶ್ | 75/- |
| ಕರುಳಬಳ್ಳಿಯ ಸೊಲ್ಲು (ಬೇಂದ್ರೆ ಕಾವ್ಯ ವಿಮರ್ಶೆ) ರಾಜೇಂದ್ರ ಚೆನ್ನಿ | | 50/- |
| ಆಧುನಿಕ ಕನ್ನಡ ಮಹಾಕಾವ್ಯಗಳು (ರಾಮಾಯಣದ ವಿಷಯಕ್ಕೆ ಸಂಬಂಧಿಸಿದಂತೆ) | ಶ್ರೀಧರ ಹೆಗಡೆ ಭದ್ರನ್ | 200/- |
| ಒಂದಾನೊಂದು ಕಾಲದಲ್ಲಿ(ಕಟ್ಟು ಕಥೆಗಳು) | ಸಂ. ಆಹಿತಾನಲ (ನಾಗಐತಾಳ) | 150/- |
| ಕಾದೇ ಇರುವಳು ರಾಧೆ (ಕಾದಂಬರಿ) | ಆಹಿತಾನಲ (ನಾಗಐತಾಳ) | 50/- |

| | | |
|---|---|---|
| ಶೂನ್ಯಸಂಪಾದನೆಯ ಪರಾಮರ್ಶೆ | ಸಂ.ಶಿ. ಭೂಸನೂರಮಠ | 610/- |
| ಬಲ್ಲವರು ಬಹಳಿಲ್ಲ (ಆಯ್ದ ಲೇಖನಗಳು) | ಎಚ್.ವೈ. ಶಾರದಾಪ್ರಸಾದ್ | 75/- |
| ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ (ಆರಂಭ ಕಾಲದ ದ್ರಾವಿಡ ಸಂಬಂಧದ ಚಿಂತನೆ) | ಪ್ರೊ ಷ. ಶೆಟ್ಟರ್ | 150/- |
| ಕುಸುಮಬಾಲೆ- ದೇವನೂರ ಮಹಾದೇವ (ಲಯಾಕಾರ ವಿನ್ಯಾಸ: ಎಲ್. ಬಸವರಾಜು) | | 75/- |
| ಹಿಂಸೆಯ ಎಡ-ಬಲ | ಯು.ಆರ್. ಅನಂತಮೂರ್ತಿ | 10/- |
| ಮಳೆ ತೊಳೆದ ಕಲ್ಲುಗಳು (ಕವಿತೆ) | ಡಿ.ಆರ್. ಚಂದ್ರ ಮಾಗಡಿ | 35/- |
| ಜೀವಾಳ (ಕಥೆಗಳು) | ಬಸವರಾಜು ಕುಕ್ಕರಹಳ್ಳಿ | 50/- |
| ಈಡಿಪಸ್ ಕಾಂಪ್ಲೆಕ್ಸ್ (ಮನೋವೈಜ್ಞಾನಿಕ ಲೇಖನಗಳು) | ಎಂ ಬಸವಣ್ಣ | 100/- |
| ಪೊರೆ ಕಳಚಿದ ಮೇಲೆ (ಕವನ) | ಸಿಬಂತಿ ಪದ್ಮನಾಭ | 40/- |
| ಎಲ್ಲಿಹಳು ನನ್ನ ಛಾಯಾ? (ಕವನ) | ಆರತಿ ಪಟ್ರಮೆ | 35/- |
| ಮಾತು ಸೋತ ಭಾರತ (ವಿಮರ್ಶೆ) | ಯು. ಆರ್. ಅನಂತಮೂರ್ತಿ | 150/- |
| ಪ್ರಶ್ನೆಗಳಿರುವುದು ಶೇಕ್ಸ್‌ಪಿಯರನಿಗೆ | ಜಿ.ಎನ್. ಮೋಹನ್ | 50/- |
| ಉಲ್ಲೇಖ (ವಿಮರ್ಶೆ) | ಕೆ.ವಿ. ತಿರುಮಲೇಶ್ | 100/- |
| ಕನ್ನಡ ಕಾವ್ಯಾಲಂಕಾರ | ಕೆ. ಕೃಷ್ಣಮೂರ್ತಿ | 100/- |
| ಕನ್ನಡ ಧ್ವನ್ಯಾಲೋಕ | ಕೆ. ಕೃಷ್ಣಮೂರ್ತಿ | 150/- |
| ಕಾಳಿದಾಸ (ವಿಮರ್ಶೆ) | ಶ್ರೀರಂಗ | 100/- |
| ಸಪ್ತಪದಿ (ಕವನ) | ಬಿ.ಸಿ.ರಾಮಚಂದ್ರಶರ್ಮ | 40/- |
| ಬಕುಲದ ಹೂವುಗಳು (ಕವನ) | ಸು. ರಂ.ಎಕ್ಕುಂಡಿ | 75/- |
| ದೇಸಿ ನಗು (ಲೇಖನಗಳು) | ಎಂ.ಎಸ್. ಮೂರ್ತಿ | 75/- |
| ಬಾಗಿಲು-ಈತನಕದ ತಮಿಳು ಕತೆಗಳು | ಜಯಲಲಿತ | 75/- |
| ಹೀಗೆ ಹಾಳೆಯ ಮೇಲೆ ಹಾಡು(ಕವನ) | ಮಮತಾ ಜಿ. ಸಾಗರ | 25/- |
| ನಿಮ್ಮ2ಸಿಮ್ಮ (ಅಂಕಣ ಬರಹ) | ಸಿ. ಆರ್. ಸಿಂಹ | 100/- |
| ಮೌನ (ಗಜಲ್‌ಗಳು) | ಚಿದಾನಂದ ಸಾಲಿ | 35/- |
| ಪ್ರಶ್ನೆ ಮತ್ತು ದೇವರು (ಕವನ) | ಚೀಮನಹಳ್ಳಿ ರಮೇಶಬಾಬು | 50/- |
| ನಗೆಗನ್ನಡಂ ಗೆಲ್ಗೆ!-ಸಂ.ಎಚ್. ಕೆ. ನಂಜುಂಡಸ್ವಾಮಿ, ಎಚ್.ವೈ.ರಾಜಗೋಪಾಲ್ | | 250/- |
| ಅರ್ಥಶಾಸ್ತ್ರ ಪರಿಭಾಷೆ | ಸಿ. ಕೆ. ರೇಣುಕಾರ್ಯ | 75/- |
| ಜೀವ ಸಂಪಿಗೆ (ಕವನ) | ದು.ಸರಸ್ವತಿ | 45/- |
| ಬಾಪು ಕುಟೀ (ಗಾಂಧಿ ನಂತರದ ಗಾಂಧೀ ಚಿಂತನೆಗಳು) | ರಜನಿಭಕ್ಷೀ ಅನು:ವೆಂಕಟರಾಜು | 150/- |
| ಕನ್ನಡದಮರಚೇತನ (ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಾಹಿತ್ಯ ಸಮೀಕ್ಷೆ) | ಸಂ.ಆಹಿತಾನಲ | 175/- |
| ವಾಲ್ಮೀಕಿಯನೆವದಲ್ಲಿ (ಸಂಸ್ಕೃತಿ ಚಿಂತನೆ) | ಯು.ಆರ್.ಅನಂತಮೂರ್ತಿ | 160/- |
| ಕತ್ತಿಯಂಚಿನದಾರಿ (ಸಾಹಿತ್ಯ-ಸಂಸ್ಕೃತಿ ಚಿಂತನೆ) | ರಹಮತ್ ತರೀಕೆರೆ | 150/- |
| ನಾಗಾರ್ಜುನನ ಮೂಲಮಾಧ್ಯಮಕಕಾರಿಕಾ | ನಟರಾಜ ಬೂದಾಳು | 150/- |
| ಆರದ ದೀಪ (ಜಿ.ಪಿ. ರಾಜರತ್ನಂ ಜೀವನ ಚಿತ್ರ) | ನೀಲತ್ತಹಳ್ಳಿ ಕಸ್ತೂರಿ | 60/- |
| ಕಸೂತಿ (ಕಾದಂಬರಿ) | ಸ. ಉಷಾ | 100/- |
| ಅಂಗದಧರೆ (ಕಾದಂಬರಿ) | ಕೇಶವ ಮಳಗಿ | 50/- |
| ಚಾರುಚರಿತ (ಕಾದಂಬರಿ) | ಕೇಶವಶರ್ಮ.ಕೆ | 110/- |
| ಚೂರುಪಾರುರೇಷಿಮೆ (ಕವನ) | ಕಮಲಾಕರ ಕಡವೆ | 75/- |
| ನಿಲ್ಲಿಸಬೇಡ ಕಾಯುವುದನ್ನು (ಕವನ) | ಭಾರತೀದೇವಿ | 40/- |
| ಕನಸು ಕನ್ನಡಿ (ಕವನ) | ಸರಸ್ವತಿ ಗಂಗೊಳ್ಳಿ | 40/- |

| | | |
|---|---|---|
| ಇದರ ಹೆಸರು (ಕವನ) | ಅಂಕುರ್ ಬೆಟಗೇರಿ | 75/- |
| ಗುಬ್ಬಿಯ ಸ್ವರ್ಗ(ಮಕ್ಕಳ ಪದ್ಯಗಳು) | ಭಾಗೀರಥಿ ಹೆಗಡೆ | 30/- |
| ಪಚ್ಚೆತೇರು (ಮಕ್ಕಳಿಗಾಗಿ) | ಆರ್. ನಿರ್ಮಲಾ | 40/- |
| ಹೂ ಅಂದ್ರ ಹೂ (ಪುಟಾಣಿಗಳಿಗಾಗಿ ಪುಟಾಣಿ ಪದ್ಯಗಳು) | ಆನಂದ ಪಾಟೀಲ | 40/- |
| ಕನ್ನಡ-ಇಂಗ್ಲಿಷ್ ನಿಘಂಟು | ಪ್ರಭುಶಂಕರ ಮತ್ತು ಬಾ.ವೇ. ಶ್ರೀಧರ | 250/- |
| ಜೀವಜಾಲ(ಪರಿಸರ ವಿಜ್ಞಾನ) | ಕೆ. ಪುಟ್ಟಸ್ವಾಮಿ, ಕೃಪಾಕರ-ಸೇನಾನಿ | 100/- |
| ನಮಸ್ಕಾರ(ಸಾಹಿತ್ಯ ವಿಮರ್ಶೆ) | ಎಚ್.ಎಸ್. ರಾಘವೇಂದ್ರರಾವ್ | 150/- |
| ಎಲ್ಲಬಲ್ಲವರಿಲ್ಲ(ಆಯ್ದ ಲೇಖನಗಳು) | ಎಚ್.ವೈ. ಶಾರದಾಪ್ರಸಾದ್ | 75/- |
| ಆಕಾಶದಗಲ ನಗುವಿನ ಅವಧೂತ | (ಬೆಳಗೆರೆ ಕೃಷ್ಣಶಾಸ್ತ್ರೀ ಅವರನ್ನು ಕುರಿತು) | 50/- |
| ನೆಲಕ್ಕೆ ಬಿದ್ದ ನಕ್ಷತ್ರಗಳು (ಹೂ ಕುರಿತು) | ಸಂ. ರವಿಕುಮಾರ | 75/- |
| ಟಿಬೆಟ್ (ಜಗತ್ತು ಕೇಳಿಸಿಕೊಳ್ಳಬೇಕಾದ ಆರ್ತಮೊರೆ) | ಮಂಗ್ಳೂರ ವಿಜಯ | 375/- |
| ಡಂಡಂ ಊರಿಗೆ ಡಿಂಡಿಂ ಗಾಡಿ (ಮಕ್ಕಳಿಗಾಗಿ) | ಆನಂದ ಪಾಟೀಲ | 20/- |
| ವೈದ್ಯರ ಶಿಕಾರಿ (ಶಿಕಾರಿಯಲ್ಲದ ಶಿಕಾರಿಅನುಭವಗಳು) | ಟಿ.ಎಸ್.ರಮಾನಂದ್) | 70/- |
| ಈ ತನಕದ ಕಥೆಗಳು | ಅಬ್ದುಲ್ ರಷೀದ್ | 150/- |
| ನಮ್ಮ ಕನ್ನಡ(ಕನ್ನಡ ಚಿಂತನೆ) | ಕೆ.ವಿ.ತಿರುಮಲೇಶ್ | 60/- |
| ಆಚೀಚೆಯ ಕಥೆಗಳು(ಕಥಾ ಸಂಕಲನ) | ಸಂ.ಗುರುಪ್ರಸಾದ್ ಕಾಗಿನೆಲೆ | 150/- |
| ನೀರತೇರು(ಕವನ) | ಕವಿತಾ ರೈ | 60/-* |
| ಅಬ್ದುಲ್ಲನ ಕೈಲಾಸ(ಕವಿತೆ) | ಸುದೇಶ್ ಮಹಾನ್ | 50/-* |
| ನಿಮ್ಮ ಸಿಮ್ಮ (ಅಂಕಣ ಬರಹ) | ಸಿ.ಆರ್.ಸಿಂಹ | 125/-* |
| ನಿನ್ನ ನೆನಪಿಗೊಂದು ನವಿಲುಗರಿ(ಕವನ ಸಂಕಲನ) | ಆನಂದ ಋಗ್ವೇದಿ | 50/-* |
| ಪಂಜರಿಯರವ (ಜಾನಪದ ಅಧ್ಯಯನ) | ಎನ್.ಪಿ. ಶಂಕರ ನಾರಾಯಣರಾವ್ | 150/-* |
| ಹವಳ ಹಾರಿದ ಹೊತ್ತು (ಕವನ ಸಂಕಲನ) | ಸ.ಉಷಾ | 50/-* |
| ಪುಗಳೇಂದಿ ಪ್ರಹಸನ (ನಾಟಕ) | ರಾಮನಾಥ | 60/-* |
| ಬೆಂಕಿಯ ನೆನಪು(ಪರ್ಯಾಯಚರಿತ್ರೆ) | ಎಡುವರ್ಡೊ ಗೆಲಿಯಾನೊ/ಕೆ.ಪಿ. ಸುರೇಶ | 75/-* |
| ಹಿಡಿದ ಉಸಿರು (ಕವನ ಸಂಕಲನ) | ಅಂಕುರ್ ಬೆಟಗೇರಿ | 40/-* |
| ಯದುಗಿರಿಯ ಬೆಳಕು (ಪು.ತಿ.ನ ಸಾಹಿತ್ಯ ಕುರಿತು) | ಸಂ. ಆಹಿತಾನಲ | 150/-* |
| ಮರೆಯಲಾದೀತೆ? (ನೆನಪುಗಳು) | ಬೆಳಗೆರೆ ಕೃಷ್ಣಶಾಸ್ತ್ರಿ | 250/- |
| ಎಲೆಮರೆಯ ಅಲರು(ಉಳಿದ ನೆನಪುಗಳು) | ಬೆಳಗೆರೆ ಕೃಷ್ಣಶಾಸ್ತ್ರೀ | 45/- |
| ಹೇ ರಾಮ್ (ಭಾರತದ ಆತ್ಮಚ್ಛೇದ ಕಥನ) | ಸಂ. ನ. ರವಿಕುಮಾರ | 275/- |
| ಭಾರತೀಯತತ್ವಶಾಸ್ತ್ರದ ರೂಪುರೇಖೆಗಳು | ಮೂಲ:ಎಂ.ಹಿರಿಯಣ್ಣ/ಪ್ರಭುಶಂಕರ | 275/- |
| ಅಮೆರಿಕಾಯಣ | ವೈ.ಆರ್. ಮೋಹನ್ | 650/- |
| ಅಮೂರ್ತತೆ ಮತ್ತು ಪರಿಸರ (ವಿಮರ್ಶೆ) | ರಾಜೇಂದ್ರ ಚೆನ್ನಿ | 180/- |
| ಫಾದರ್ 55 (ಕವನ ಸಂಕಲನ) | ವಿ.ಎಂ.ಮಂಜುನಾಥ್ | 50/-* |
| ಮಂದಹಾಸ ಮೀಮಾಂಸೆ(ಸಮಗ್ರಲಲಿತ | ಪ್ರಬಂಧ)ಪ್ರಭುಶಂಕರ | 150/- |
| ಖಲೀಲ್ ಗಿಬ್ರಾನ್ (ಜೀವನ ದರ್ಶನ) | ಪ್ರಭುಶಂಕರ | 60/- |
| ಆಂಟೋನಿಯೊ ಗ್ರಾಮ್ಷಿ (ಶತಮಾನ ಚಿಂತನೆ) | ಕೆ. ಫಣಿರಾಜ್ | 50/-* |
| ಹಳೆಯಕಾಲದ ಹೊಸಕತೆ(ಕಥಾ ಸಂಕಲನ) | ಕೆ.ಸತ್ಯನಾರಾಯಣ | 125/- |
| ಮನುಕುಲದ ಮಾತುಗಾರ (ಚಾಮ್‌ಸ್ಕಿ ಚಿಂತನೆ/ದರ್ಶನ) | ವಿವಿಧ ಲೇಖಕರು | 150/- |
| ಮಾಯಾಪಾತಾಳ (ಕವಿತೆ) | ರಾಮಲಿಂಗಪ್ಪ ಟಿ.ಬೇಗೂರು | 50/- |
| ಯುಗಪಲ್ಲಟ (ಸಂಸ್ಕೃತಿ ಚಿಂತನೆ) | ಯು.ಆರ್.ಅನಂತಮೂರ್ತಿ | 80/- |

| | | |
|---|---|---|
| ಗೌರವ (ಜಿ.ಎಸ್.ಎಸ್. 75) | ಸಂ.ಚಿ. ಶ್ರೀನಿವಾಸರಾಜು | 250/- |
| ಹಕ್ಕಿ ಪುಟಾಣಿ (ಮಕ್ಕಳ ಕವಿತೆ) | ಆನಂದ ವಿ. ಪಾಟೀಲ | 50/- |
| ಅರಹಂತ (ನಾಟಕ) | ರಾಮನಾಥ | 75/- |
| ಪ್ರೀತಿಸುವುದೆಂದರೆ (ಆರ್ಟ್ ಆಫ್ ಲವಿಂಗ್) | ಮೂಲ : ಎರಿಕ್ ಫ್ರಾಂ<br>ಅನು : ಕೆ.ವಿ.ನಾರಾಯಣ, ಎಚ್.ಎಸ್. ರಾಘವೇಂದ್ರರಾವ್ | 75/- |
| ಯೇಗ್ದಾಗೆಲ್ಲಾ ಐತೆ | ಬೆಳಗೆರೆ ಕೃಷ್ಣಶಾಸ್ತ್ರಿ | 50/- |
| ಗೊಂದಲಪುರ (ಹಿಂಸೆ ಕುರಿತು*) | ಸಂ.ನ.ರವಿಕುಮಾರ, ಡಿ.ಆರ್.ಚಂದ್ರಮಾಗಡಿ | 175/- |
| ಫಾದರ್ (ಸ್ಟ್ರಿಂಡ್‌ಬರ್ಗ್ ನಾಟಕ) | ಅನು : ಸಿ. ನಾಗಣ್ಣ | 40/- |
| ಬೆಳದಿಂಗಳು(ಮಕ್ಕಳ ಕಾದಂಬರಿ*) | ಆನಂದ ವಿ. ಪಾಟೀಲ | 15/- |
| ರಚನೆ-ನಿರಚನೆ (ವಿಮರ್ಶೆ*) | ಕೇಶವಶರ್ಮ. ಕೆ | 80/- |
| ಯಾರಜಪ್ತಿಗೂಸಿಗದನವಿಲುಗಳು(ದೇವನೂರಮಹಾದೇವಸಾಹಿತ್ಯ ಕುರಿತು) | ಪಿ.ಚಂದ್ರಿಕಾ | 120/- |
| ನೀಲಿತತ್ತಿ (ಕವನ ಸಂಕಲನ*) | ಲಕ್ಷ್ಮೀಪತಿ ಕೋಲಾರ | 50/- |
| ಜನ್ನ ಮತ್ತು ಅನೂಹ್ಯ ಸಾಧ್ಯತೆ(ಕಥಾ ಸಂಕಲನ*) | ಆನಂದ ಋಗ್ವೇದಿ | 50/- |
| ವಿರೋಧ ವಿಲಾಸ(ವಕ್ರೋಕ್ತಿ ವರಸೆಗಳು) | ಎಮ್.ಎಸ್.ಕೆ. ಪ್ರಭು | 30/- |
| ದೇಶೀ ದರ್ಶನಗಳು* | ವಿವಿಧ ಲೇಖಕರು | 60/- |
| ನಮ್ಮ ತವಕ ತಲ್ಲಣಗಳು (ಲೇಖನಗಳು*) | ಕೆ.ವಿ. ಸುಬ್ಬಣ್ಣ | 60/- |
| ಮಾಗಿ ಮೂವ್ವತ್ತೈದು (ಕಥೆಗಳು) | ಕೇಶವ ಮಳಗಿ | 65/- |
| ಪಾತಿದೋಣಿ (ಕಥೆಗಳು*) | ಉಮಾ ಹೆಗಡೆ | 45/- |
| ಶಬ್ದರೇಖೆ (ವಿಮರ್ಶೆ) | ಕೇಶವಶರ್ಮ ಕೆ. | 50/- |
| ಅನಾಹತನಾದ (ಸಂಗೀತ ಕುರಿತು*) | ವಿವಿಧ ಲೇಖಕರು | 35/- |
| ಕದಳೀವನ ಕರ್ಪೂರ (ಪರಿಸರ ಚಿಂತನೆ*) | ವಿವಿಧ ಲೇಖಕರು | 50/- |
| ಯದುಗಿರಿಯ ಅಂಗಳದಿಂದ (ಪು.ತಿ.ನ. ಸಾಹಿತ್ಯ ಕುರಿತು*) | ವಿವಿಧ ಲೇಖಕರು | 45/- |
| ಕ್ಯಾಪ್ಸೂಲಗಿತ್ತಿ (ಅಂಕಣ ಬರಹ) | ನಾಗೇಶ ಹೆಗಡೆ | 30/- |
| ಚಲ್ ಮೇರಿ ಲೂನಾ (ಪ್ರಬಂಧಗಳು*) | ಆರ್. ನಿರ್ಮಲಾ | 50/- |
| ಪಾ.ವೆಂ. ಹೇಳಿದ ಕಥೆ (ಕಥೆಗಳು) | ರವಿ ಬೆಳಗೆರೆ | 100/ |
| ಧಾಂಪತ್ಯಕ್ಕೊಂದು ಶೀಲ (ಪ್ರಬಂಧಗಳು) | ಕೆ. ಸತ್ಯ ನಾರಾಯಣ | 30/ |
| ಒಂದು ಅನುರಾಗಕ್ಕಾಗಿ ಎಷ್ಟೆಲ್ಲಾ (ಕವನ*) | ಕೆ.ಪಿ. ಮೃತ್ಯುಂಜಯ | 20/ |
| ಆಶಯ ಆಕೃತಿ (ವಿಮರ್ಶೆ*) | ಸಿ. ಎನ್. ರಾಮಚಂದ್ರನ್ | 120/ |
| ಖಾಸ್‌ಬಾತ್ 97 (ಅಂಕಣ ಬರಹ*) | ರವಿ ಬೆಳಗೆರೆ | 100/ |
| ಕಂಪ್ಯೂಟರ್‌ಗೊಂದು ಕನ್ನಡಿ* | ಸಿ.ಪಿ.ರವಿಕುಮಾರ್ | 27/ |
| ನೋಟಪಲ್ಲಟ(ದೃಶ್ಯ ಸಂಸ್ಕೃತಿ ಕುರಿತು) | ಎಚ್.ಎ. ಅನಿಲ್‌ಕುಮಾರ್ | 35/ |
| ಇಚ್ಛಾಶಕ್ತಿಯ ನಿರೂಪ(ವೋಲೆ ಷೋಯಿಂಕಾ ಸಾಹಿತ್ಯ ಕುರಿತು*) | ವಿವಿಧ ಲೇಖಕರು | 35/ |
| ಅಂಧ ಮಕ್ಕಳ ಅರಿವಿನಂಗಣ (ಮಹಾ ಪ್ರಬಂಧ) | ಎಮ್.ಆರ್. ಮಂದಾರವಲ್ಲಿ | 25/ |
| ಮೊದಲ ಕಟ್ಟಿನ ಗದ್ಯ (ಲೇಖನಗಳು) | ಎಚ್.ಎಸ್. ಶಿವಪ್ರಕಾಶ್ | 70/ |
| ಆಟ-ಮಾಟ (ಸೃಜನಶೀಲತೆ ಕುರಿತು) | ಕೆ.ಜಿ.ಸುಬ್ರಹ್ಮಣ್ಯನ್/ಶ್ರೀನಿವಾಸಮೂರ್ತಿ | 100/ |
| ನಮನ(ಅನುಭಾವಿ ಕಥನ) | ಆನಂದ ಪಾಟೀಲ | 50/- |
| ಕಲ್ಲರಳಿ ಹೂವ್ವಂತೆ (ಕೆ.ಟಿ.ಶಿವಪ್ರಸಾದ್ ಕುರಿತು) | ಸಂ.ಕೆ. ಪುಟ್ಟಸ್ವಾಮಿ | 150/- |
| ಮಕ್ಕಳ ಸಾಹಿತ್ಯ ಶತಮಾನ (ಮಕ್ಕಳ ಸಾಹಿತ್ಯ ಸಮೀಕ್ಷೆ) | ಸಂ: ಆನಂದ ಪಾಟೀಲ, ನ. ರವಿಕುಮಾರ | 75/ |

* ಪ್ರತಿಗಳು ಮುಗಿದಿವೆ

## ಕನ್ನಡ ಸಾಹಿತ್ಯ ರಂಗ ಪುಸ್ತಕ ಮಾಲೆ ೪

ತವರು ಮನೆಯಿಂದ ದೂರ ಹೋದ ಮಕ್ಕಳು ಮನೆಯನ್ನು ತಾಯಿಯನ್ನು ನೆನೆವ ಬಗೆ ಹಲವಾರು. ಈ ಕೃತಿಯಲ್ಲಿ ಕಾಣುವುದೂ ಇದುವೇ. ಅಮೆರಿಕದಲ್ಲಿನ ಕನ್ನಡ ಸಾಹಿತ್ಯ ರಂಗ ಅಲ್ಲಿ ನೆಲೆಸಿರುವ ಇಪ್ಪತ್ತಕ್ಕೂ ಮಿಕ್ಕಿದ ಹಿರಿಕಿರಿಯ, ಪಳಗಿದ ಹಾಗೂ ಉದಯೋನ್ಮುಖ ಬರಹಗಾರರು, ಹವ್ಯಾಸಿಗರು ಮತ್ತು ಹರಿತ ಓದುಗರ ಮೂಲಕ ಕನ್ನಡದ ಕೆಲ ಮುಖ್ಯ ಕಾದಂಬರಿಗಳ ಕುರಿತು ಇಲ್ಲಿ ಅವಲೋಕನ ನಡೆಸಿದೆ. ಒಮ್ಮೆಗೇ ಒಟ್ಟಿಗೇ ತೆರೆದುಕೊಂಡ ಈ ರೀತಿಯ ಕಾದಂಬರೀ ಅವಲೋಕನವೂ ಚರ್ಚೆಯೂ ಕನ್ನಡ ಸಾಹಿತ್ಯದ ಮಟ್ಟಿಗೆ ಪ್ರಾಯಶಃ ಪ್ರಪ್ರಥಮ ಎನಿಸುತ್ತಿದೆ. ತಮಗೆ ಕನ್ನಡದ ಮೂಲಕ ಒಡಲು ಸೇರಿದ ಸಾಹಿತ್ಯಾನುಭವವನ್ನು ತಮಗೂ ಇತರರಿಗೂ ಅನು-ಭವಿಸುವಂತೆ ಮಾಡುವ ಸ್ತುತ್ಯ ಪ್ರಯತ್ನವಿದು. ದೂರದೇಶದ ವಾಸವೆಂಬುದು ಬಿಟ್ಟು ಬಂದ ನೆಲವನ್ನು ವ್ಯಕ್ತಿಗಳನ್ನು ಭಾಷೆಯನ್ನು ಎಷ್ಟು ಗಾಢವಾಗಿ ನೆನೆಯುವಂತೆ ಮಾಡುತ್ತದೆ. ಒಂದು ರೀತಿಯಲ್ಲಿ ಇದು ಗೋಲದ ಇನ್ನೊಂದು ಬದಿಯಲ್ಲಿ ನಡೆಯುತ್ತಿರುವ ಕನ್ನಡದ ಉಸಿರಾಟ. ಕನ್ನಡದ ಪ್ರಾಣಾಯಾಮವೆಂದರೂ ಸರಿಯೆ. 'ಕನ್ನಡತನು'ವನ್ನು ಮನವನ್ನು ಕಾಪಾಡಿಕೊಳ್ಳುವ, ದೂರವಿದ್ದೂ ಸನಿಹವಿರುವ, ಸಹ-ವಾಸಿಸುವ ಒಂದು ಕ್ರಮವೂ ಇದಾಗಿರಬಹುದು. ಒಟ್ಟಿನಲ್ಲಿ ಈ ಮುಖಾಂತರ ಕನ್ನಡ ಸಾಹಿತ್ಯದ ವಿಮರ್ಶಾ ಕ್ಷೇತ್ರಕ್ಕೆ ಹೆಚ್ಚಿನ ವ್ಯಾಪ್ತಿ ದೊರೆತಂತಾಗಿದೆ.

'ಸಹೃದಯ ವಿಮರ್ಶೆ' ಎಂಬುದಕ್ಕೆ ಈ ಹೊತ್ತಗೆ ಒಂದು ಉತ್ತಮ ಮಾದರಿಯೆನ್ನಬಹುದು. ಇಂಥ ನೂತನ ಸಾರ್ಥಕ ಹೊಳವಿಗಾಗಿ ಅಮೆರಿಕದ ಕನ್ನಡ ಸಾಹಿತ್ಯ ರಂಗಕ್ಕೆ, ಅದರ ರೂವಾರಿಗಳಿಗೆ ನಮ್ಮೆಲ್ಲರ ಅಭಿನಂದನೆ ಜೊತೆಗೆ ಕೃತಜ್ಞತೆಯೂ ಸಲ್ಲಲೇ ಬೇಕು.

**– ವೈದೇಹಿ**

**ಕನ್ನಡ ಸಾಹಿತ್ಯ ರಂಗ ಅಮೆರಿಕ**

